ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೮ ಸಂಚಿಕೆ-೬ ಜನವರಿ ೨೦೦೨



# ಸಂಪಾದಕೀಯ

'**ಹೊ**ಸತು' ಪತ್ರಿಕೆಯು ಎಂಟನೆಯ ವರ್ಷದಲ್ಲಿ ಮುನ್ನಡೆಯುತ್ತಿರುವಾಗ ಏಳನೆಯ ವಿಶೇಷ ಸಂಚಿಕೆಯನ್ನು ಓದುಗರ ಕೈಯಲ್ಲಿಡುತ್ತಿದೆ. ಪತ್ರಿಕೆಯನ್ನು ಅರ್ಥವತ್ತಾಗಿ ಹೊರತರಲು ಸಹಕಾರ ನೀಡುತ್ತಿರುವ ಎಲ್ಲ ಓದುಗರಿಗೆ, ಲೇಖಕರಿಗೆ ಮತ್ತು ಜಾಹಿರಾತುದಾರರಿಗೆ 'ಹೊಸತು' ತನ್ನ ಕೃತಜ್ಞತೆ ಸಲ್ಲಿಸುತ್ತದೆ. ಅಂತೆಯೇ ಪತ್ರಿಕೆಯನ್ನು ಸಿದ್ಧಪಡಿಸಲು ಶ್ರಮಿಸುವ ನವಕರ್ನಾಟಕ ಪ್ರಕಾಶನದ ಎಲ್ಲ ಸಿಬ್ಬಂದಿ ಸ್ನೇಹಿತರಿಗೂ ತನ್ನ ವಂದನೆಗಳನ್ನು ಸಲ್ಲಿಸುತ್ತದೆ. ಎಲ್ಲರಿಗೂ ೨೦೦೨ ಫಲಪ್ರದವಾದ ವರ್ಷವಾಗಲೆಂದು ಆಶಿಸೋಣ.

ಓದುಗರೊಬ್ಬರು ಬಿಜಾಪುರದಿಂದ ಪತ್ರ ಬರೆದು ಪತ್ರಿಕೆಯ ನಿಲುವುಗಳನ್ನು ಹೇಗೆ ಸ್ವೀಕರಿಸಬೇಕೆಂಬ ಸಂಶಯವನ್ನು ವ್ಯಕ್ತಪಡಿಸಿದ್ದಾರೆ. ಹತ್ತಾರು ವಿಷಯಗಳನ್ನು ಪ್ರಸ್ತಾಪಿಸುವಾಗ ಪತ್ರಿಕೆಯು ತನ್ನ ಟೀಕೆಗಳ ಮುಖೇನ ನೇತ್ಯಾತ್ಮಕ ದೃಷ್ಟಿಯನ್ನು ಪ್ರಕಟಿಸುತ್ತದೆಂದು ಗ್ರಹಿಸಿರುವ ಅವರು, ಹೀಗಾದರೆ ಯಾವುದನ್ನೂ ಸ್ವಾಗತಿಸುವಂತಹ ಸಾಧ್ಯತೆಯೇ ಇರುವುದಿಲ್ಲವಲ್ಲಾ ಎಂಬ ಆತಂಕ ಅನುಭವಿಸಿರುವಂತೆ ತೋರುತ್ತದೆ. ಎಂಟು ವರ್ಷಗಳಿಂದಲೂ ನಾವು ಪರ್ಯಾಯದತ್ತ ಬೊಟ್ಟು ಮಾಡುತ್ತಲೇ ಬಂದಿದ್ದೇವೆಂಬುದನ್ನು ಓದುಗರು ಒಪ್ಪುತ್ತಾರೆಂಬ ಭರವಸೆ ನಮ್ಮದು. ಜನವಿರೋಧಿ ನೀತಿಗಳನ್ನು ಟೀಕಿಸುವುದಷ್ಟೇ ಅಲ್ಲ, ಖಂಡಿಸುವುದು ಸಹ ಸಮರ್ಥನೀಯ ಮತ್ತು ಅವಶ್ಯಕ ಎಂಬುದು ನಮ್ಮ ನಿಲುವು. ಅಂತಹ ನೀತಿಗಳು ಕೇಂದ್ರ ಸರ್ಕಾರದ್ದಿರಬಹುದು, ರಾಜ್ಯ ಸರ್ಕಾರಗಳದ್ದಿರಬಹುದು, ಅಥವಾ ಬೇರೆ ಸ್ವಾಯತ್ತ ಸಂಘಟನೆಗಳದ್ದೂ ಇರಬಹುದು. ನಾಗರಿಕ ಸಮಾಜದ ಜವಾಬ್ದಾರಿಯು ಅವನ್ನು ವಿಮರ್ಶಿಸಿ ಬಾಯಿಚಪಲ ತೀರಿಸಿಕೊಳ್ಳುವುದಕ್ಕೆ ಸೀಮಿತವಾಗಿಲ್ಲ ಮತ್ತು ಇರಕೂಡದು. ವಿಮರ್ಶೆಯಿಂದ ಕ್ರಿಯೆಯತ್ತ ಹೊರಳುವುದು, ಅಪೇಕ್ಷಿತ ವ್ಯವಸ್ಥೆಯ ನಿರ್ಮಾಣಕ್ಕೆ ಅಡಿಗಲ್ಲುಗಳ ಮೇಲೆ ಸುಭದ್ರ ಗೋಡೆಗಳನ್ನೆಬ್ಬಿಸುವುದು, ಮತ್ತು ತನ್ಮೂಲಕ ಭವ್ಯ ಕನಸುಗಳನ್ನು ನನಸಾಗಿಸಿಕೊಳ್ಳುವುದು ಚಾರಿತ್ರಿಕವಾಗಿ ನಡೆದುಬಂದಿರುವ ಕ್ರಮ. ಆ ದಿಕ್ಕಿನಲ್ಲಿ 'ಹೊಸತು' ಸಹ ತನ್ನ ಅಲ್ಪಕಾಣಿಕೆಯನ್ನು ಸಲ್ಲಿಸಲು ಯತ್ನಿಸುತ್ತಿದೆ. ಅದು ವ್ಯರ್ಥವಾದ ಯತ್ನವಲ್ಲವೆಂಬುದನ್ನು ನಮ್ಮ ಓದುಗರು ಮತ್ತು ಲೇಖಕರು ಕಂಡುಕೊಂಡಿರುವುದರಿಂದ ನಾವು ಜೊತೆಯಾಗಿ ಮುನ್ನಡೆಯಲು ಸಾಧ್ಯವಾಗುತ್ತಿದೆ.

* * *

ದೋಹಾದಲ್ಲಿ ನಡೆದ ಏಷ್ಯನ್ ಕ್ರೀಡಾಕೂಟದಲ್ಲಿ ತಮಿಳುನಾಡಿನ ಶಾಂತಿ ಎಂಟುನೂರು ಮೀಟರುಗಳ ಓಟದಲ್ಲಿ ಬೆಳ್ಳಿಪದಕ ಗಳಿಸಿದ್ದು ನಮ್ಮ ದೇಶದ ಪ್ರಗತಿ ಹೇಗೆ ಸಾಗಬೇಕೆಂಬುದಕ್ಕೆ ಒಂದು ನಿದರ್ಶನವಾಗಿದೆ. ಆಕೆಯ ಮನೆಯಲ್ಲಿ ಟೆಲಿವಿಷನ್ ಇಲ್ಲ, ಆಕೆ ಜಾಹಿರಾತುಗಳಲ್ಲಿ ಕಾಣಿಸಿಕೊಳ್ಳುವ ಸುಂದರಿಯಲ್ಲ, ಮತ್ತು ಯಾವಾವುದೋ ವಿಷಪದಾರ್ಥಗಳನ್ನು ಕೊಳ್ಳಬೇಕೆಂದು ಗ್ರಾಹಕರಿಗೆ ತಿಳಿಯಹೇಳಿ ಹಣ ಮಾಡಿಕೊಳ್ಳುವವಳಲ್ಲ. ಗಂಜಿ ಕುಡಿದುಕೊಂಡೇ ಓಟದಲ್ಲಿ ನಿಷ್ಣಾತಳಾಗಿ ಇದ್ದಾಳೆ. ಜನಸಾಮಾನ್ಯರ ಅದಮ್ಯ ಶಕ್ತಿಯನ್ನು ಗುರುತಿಸಿ ಅವರನ್ನು ಕಣ್ಣಿಕ್ಕಿಳಿಸಿದರೆ ನಮ್ಮ ದೇಶದ ಬೌದ್ಧಿಕ ಮತ್ತು ಆರ್ಥಿಕ ಸಾಮರ್ಥ್ಯವು ಎಷ್ಟು ಸುಂದರವಾಗಿ ಹಿಗ್ಗಬಲ್ಲುದು ಎಂಬುದಕ್ಕೆ ಇದು ಸಾಕ್ಷಿ. ಯೋಜನಾ ಆಯೋಗದ ಅಧ್ಯಕ್ಷರಿಗೆ ಇದು ತಿಳಿಯಬೇಕು, ಅಷ್ಟೆ. ಮಾಧ್ಯಮಗಳಲ್ಲಿ ಪ್ರಾಶಸ್ತ್ಯ ಸಿಗುವುದು ಲಕ್ಷಗಟ್ಟಲೆ ಹಣ 'ಸಂಪಾದಿಸುವ' ಕ್ರೀಡಾಪಟುಗಳಿಗೆ; ಆದ್ದರಿಂದ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಿಶೇಷ ಸಂಚಿಕೆ | ರೂ. ೩೦/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಶಾಂತಿಯನ್ನು ಯಾವುದೋ ಅಂತರರಾಷ್ಟ್ರೀಯ ಜಾಲವು ಒಂದು ಹಳ್ಳಕ್ಕೆ ಕೆಡವಿದರೆ ನಮ್ಮ ಮಾಧ್ಯಮಗಳೆಲ್ಲಾ ಕಲ್ಲು ಎಸೆಯಲು ತಯಾರಾಗಿ ನಿಲ್ಲುವುದು ಶೋಚನೀಯ. ಶಾಂತಿಯು ಗಂಡೋ ಹೆಣ್ಣೋ ಎಂಬುದು ಆಕೆ ಪದಕ ಪಡೆದ ನಂತರ ತೀರ್ಮಾನವಾಗಬೇಕಾದ ಪ್ರಶ್ನೆಯಲ್ಲ. ತಾನು ಗಳಿಸಿದ ಪದಕವನ್ನು ಅವಳಿಂದ ಹಿಂದಕ್ಕೆ ಪಡೆದು, ಆಮೇಲೆ ಅವಳು ಎಂದೂ ಸ್ಪರ್ಧೆಗೆ ಇಳಿಯದಂತೆ ಮಾಡುವ ಹುನ್ನಾರವು ಸ್ಪಷ್ಟವಾಗಿದೆ. ಹಿಂದುಳಿದ ವರ್ಗಗಳ ಏಳಿಗೆಯನ್ನು ಸಹಿಸದವರು ನಮ್ಮ ದೇಶದಲ್ಲಿ ನಡೆಸುವ ಪುಂಡಾಟಿಕೆ ಮತ್ತು ಕ್ಷುಲ್ಲಕ ರಾಜಕೀಯದ ಪರಿಚಯ ಇರುವವರಿಗೆ ಶಾಂತಿಯ ವಿರುದ್ಧದ ಗುಲ್ಲು ಎಂಥದೆಂಬುದು ಸುಲಭವಾಗಿ ಅರ್ಥವಾಗುತ್ತದೆ. ಪ್ರತಿಷ್ಠಿತರಷ್ಟೇ ಬೆಳಕಿನಲ್ಲಿ ಉಳಿಯಬೇಕೆಂಬ ತತ್ತ್ವವು ನಮ್ಮ ಅಭಿವೃದ್ಧಿ ಮಾದರಿಯಲ್ಲಿ ಹಲವು ವರ್ಷಗಳಿಂದ ಚಾಲ್ತಿಯಲ್ಲಿದೆ. ಅದನ್ನು ನಿರಾಕರಿಸಿ ಜನಸಾಮಾನ್ಯರ ಅಭಿವೃದ್ಧಿಯ ಯುಗದತ್ತ ಚಲಿಸಬೇಕೆಂಬ ಸಂದೇಶವನ್ನು ಶಾಂತಿ ಪ್ರಕರಣವು ನೀಡುತ್ತಿದೆ. ಅವಳನ್ನು ಅಳಿಸಿಹಾಕುವ ಕುತಂತ್ರಕ್ಕೆ ನಮ್ಮ ಕ್ರೀಡಾ ಸಂಸ್ಥೆಗಳು ಮಣಿಯಕೂಡದು. ಕೇಂದ್ರ ಸರ್ಕಾರದ ಕ್ರೀಡಾ ಸಚಿವರು ಇದೆಲ್ಲಾ ತನಗೆ ಸಂಬಂಧಿಸಿಲ್ಲವೆಂಬಂತೆ ನಡೆದುಕೊಳ್ಳುವುದು ಅಕ್ಷಮ್ಯವಾಗುತ್ತದೆ.

* * *

ನಮ್ಮ ದೇಶದ ಸಂಸ್ಕೃತಿ ಎಷ್ಟು ನಗೆಪಾಟಲಿಗೆ ಈಡಾಗುತ್ತಿದೆಯೆಂಬುದನ್ನು ಕಂಡು ನಾವಿನ್ನೂ ಆತ್ಮವಿಮರ್ಶೆಗೆ ಸಾಕಷ್ಟು ಗಂಭೀರವಾಗಿ ತೊಡಗುತ್ತಿಲ್ಲದಿರುವುದು ದುರದೃಷ್ಟಕರ. ಒರಿಸ್ಸಾದ ಕೇಂದ್ರಪಾರಾ ಜಿಲ್ಲೆಯ ಒಂದು ಊರಿನಲ್ಲಿರುವ ಜಗನ್ನಾಥನ ಮಂದಿರದೊಳಕ್ಕೆ ದಲಿತರು ಪ್ರವೇಶಿಸಿ ಅದನ್ನು ಅಪವಿತ್ರಗೊಳಿಸಿದರೆಂದು ಊರಿನ ಸುತ್ತಮುತ್ತಣ ''ಉಚ್ಚ ವರ್ಣ''ದ ಪ್ರತಿಭಾವಂತರು ಪ್ರತಿಭಟಿಸಿದ್ದಾರೆ. ಜಗನ್ನಾಥನು ಅವರನ್ನು ಒಳಕ್ಕೆ ಬಿಟ್ಟುಕೊಂಡದ್ದರಿಂದ ಅವನ ಮೇಲೆ ಮುನಿಸಿಕೊಂಡು ಮೂರು-ನಾಲ್ಕು ದಿನ ಭಕ್ತರು ದೇವಸ್ಥಾನಕ್ಕೆ ಹೋಗಲಿಲ್ಲವೆಂದು ವರದಿಯಾಗಿದೆ! ಸರ್ಕಾರವು ಮಧ್ಯಪ್ರವೇಶ ಮಾಡಿ ಭಕ್ತರನ್ನು ಮತ್ತೆ ಜಗನ್ನಾಥನ ಪಾದಗಳ ಮೇಲೆ ದೂಡಬೇಕಾಗಿ ಬಂತು. ಈ ಭಕ್ತರ ಮನಸ್ಸು ಇಷ್ಟೊಂದು ಕಲ್ಮಶದಿಂದ ತುಂಬಿಕೊಳ್ಳಲು ನಮ್ಮ ಇತಿಹಾಸ ಮತ್ತು ಸಂಸ್ಕೃತಿ ಸಹಾಯ ಮಾಡಿತೇ? ಅಥವಾ, ಇತಿಹಾಸದ ಪ್ರಜ್ಞೆಯಾಗಲಿ, ಸಂಸ್ಕೃತಿಯ ಗಂಧವಾಗಲಿ ಇಲ್ಲವಾದ್ದರಿಂದ ಭಕ್ತರು ಮೂಢರಾಗಿ ಮತ್ತು ಜನವಿರೋಧಿಗಳಾಗಿ ನಡೆದುಕೊಂಡರೆ? ಹೀಗೆ ಪ್ರತಿಭಟಿಸಿದ ಜನರ ಮಧ್ಯದಿಂದ ನಮ್ಮ ಬಹುತೇಕ ಆಡಳಿತಾಧಿಕಾರಿಗಳು ಬಂದಿರುತ್ತಾರೆ. ಅವರಿಂದ ಎಂತಹ ಪ್ರಗತಿಯನ್ನು ನಿರೀಕ್ಷಿಸಬಹುದು? ಸ್ವಾತಂತ್ರ್ಯ ಪಡೆದ ಅರವತ್ತು ವರ್ಷಗಳ ನಂತರವೂ ಈ ಸನ್ನಿವೇಶವಿರಬೇಕೆ?

ಇದಕ್ಕೆ ಸಂವಾದಿಯಾಗಿ ಇನ್ನೊಂದು ಘಟನೆ ಜರುಗಿದೆ: ಬೆಂಗಳೂರಿನ ಹೊರವಲಯದ ಒಂದು ಜನಸಮುದಾಯವು ತಮ್ಮ ಬಡಾವಣೆಗೆ ''ಸೆಂಟ್ ಮೇರಿ ಬಡಾವಣೆ'' ಎಂಬ ಹೆಸರನ್ನು ಅಧಿಕೃತವಾಗಿ ಇಟ್ಟುಕೊಂಡಾಗ ''ಭಾರತೀಯ ಭವ್ಯ ಸಂಸ್ಕೃತಿ''ಯ ಸ್ವಯಂಘೋಷಿತ ಸಂರಕ್ಷಕರು ದಾಂಧಲೆ ನಡೆಸಿದ್ದಾರೆ, ಹಿಂಸಾಚಾರದಲ್ಲಿ ತೊಡಗಿದ್ದಾರೆ, ಒಂದು ಚರ್ಚಿನಲ್ಲಿ ಯೇಸುವಿನ ಮೂರ್ತಿಯನ್ನು ಭಗ್ನಗೊಳಿಸಿದ್ದಾರೆ ಮತ್ತು ಪೀಠೋಪಕರಣಗಳನ್ನು ಧ್ವಂಸಮಾಡಿದ್ದಾರೆ. ಭಾರತದ ಸತ್ಸಂಪ್ರದಾಯವನ್ನು ಉಳಿಸಿ ಬೆಳೆಸುವ ಪ್ರಕ್ರಿಯೆ ಇದಾದರೆ ನಮ್ಮ ದೇಶದ ಸಾಂಸ್ಕೃತಿಕ ಭವಿಷ್ಯದ ಬಗ್ಗೆ ಅನುಮಾನಗಳು ಅನಿವಾರ್ಯ. ಇನ್ನು ಬಮಿಯಾನ್ ಬುದ್ಧನನ್ನು ನುಚ್ಚುನೂರು ಮಾಡಿದ ಆಫ್ಘಾನಿಸ್ತಾನದ ತಾಲಿಬಾನ್‌ಗಳನ್ನು ದಂಡಿಸಲು ಏನು ಉಳಿದಿದೆ? ಕರ್ನಾಟಕವನ್ನು ಗುಜರಾತ್ ಮಾಡುವುದಾಗಿ ಹೇಳಿರುವ ಬಜರಂಗ ದಳದ ವೀರರು ಪ್ರಾಮಾಣಿಕವಾಗಿ ತಮ್ಮ ಕೆಲಸ ಆರಂಭಿಸಿದ್ದಾರೆಂದು ಇದರರ್ಥ. ಅವರ ಜೊತೆ ಸಖ್ಯ ಬೆಳೆಸಿರುವ ಎಚ್. ಡಿ. ದೇವೇಗೌಡರ ಪಕ್ಷಕ್ಕೆ ಇಂದ್ರನಿಗಿರುವಂತೆ ಸಾವಿರ ಕಣ್ಣುಗಳು ಬೇಡ, ಮನುಷ್ಯಮಾತ್ರರಿಗಿರುವಂತೆ ಎರಡು ಕಣ್ಣುಗಳಾದರೂ ಬೇಡವೇ?

* * *

ಶಿವಮೊಗ್ಗೆಯಲ್ಲಿ ನಡೆದ ಈ ಬಾರಿಯ ಕನ್ನಡ ಸಾಹಿತ್ಯ ಸಮ್ಮೇಳನವು ಭಾರತೀಯ ಜನತಾ ಪಕ್ಷ ಮತ್ತು ಅದರ ಕಾರ್ಯಪಡೆಯ ಪ್ರದರ್ಶನಕ್ಕಾಗಿಯೇ ಏರ್ಪಡಿಸಲಾಗಿದ್ದಿತೋ ಎಂಬ ವ್ಯಥೆಯನ್ನುಂಟುಮಾಡುವಂತೆ ನಡೆದದ್ದು ದುಃಖಕರ ಸಂಗತಿ. ಮಾನ್ಯ ಯಡಿಯೂರಪ್ಪನವರ ಮುಖಭಂಗ ಮಾಡಲು ಅವರ ಪಕ್ಷದ ಬಾಲಂಗೋಚಿಗಳು ವ್ಯವಸ್ಥಿತವಾಗಿ ಗಲಾಟೆ ಎಬ್ಬಿಸಿದರೆಂಬ ಒಂದು ಊಹೆ ಇದೆ; ಆದರೆ ಅದು ಕೇವಲ ಊಹೆ. ನಿಜವಾಗಿ ನಡೆದದ್ದು ಆ ಪಕ್ಷದ ಚುನಾವಣಾ ಪ್ರಚಾರದ ಮೊದಲ ಗೊಂದಲದ ಸಭೆ ಎನ್ನಬಹುದು. ಸಾಹಿತ್ಯದೊಡನೆ ಅಷ್ಟಾಗಿ ಸಂಪರ್ಕ ಬೆಳೆಸಿಕೊಳ್ಳದ, ಸಾಹಿತ್ಯದ ಬಗ್ಗೆ ಅತೀವ ಗೌರವವನ್ನೇನೂ ಹೊಂದಿರದ ಬಜರಂಗದಳದ ಮುಂದಾಳುಗಳು ಸಮ್ಮೇಳನದ ಗೋಷ್ಠಿಗಳು ನಡೆಯದಂತೆ ಮಾಡಿದ್ದು ಯಾರ ವರ್ಚಸ್ಸನ್ನು ಹಿಗ್ಗಿಸುತ್ತದೋ ತಿಳಿಯದು. ಹಿಂದೆಲ್ಲಾ ಕೆಲವು ಪುಸ್ತಕಗಳನ್ನು ಸುಡುವುದರಲ್ಲಿ ಪ್ರಾವೀಣ್ಯವನ್ನು ಮೆರೆದಿದ್ದ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನ ಕೆಲವು ಕಾರ್ಯಕರ್ತರು ಸಹ ಶಿವಮೊಗ್ಗೆಯಲ್ಲಿ ಹಿಂಸೆಯನ್ನು ಪ್ರಚೋದಿಸಿದರೆಂದು ವರದಿಯಾಗಿದೆ. ಸಮ್ಮೇಳನದ ಗೋಷ್ಠಿಗಳಲ್ಲಿ ಯಾರು ಭಾಗವಹಿಸಬೇಕೆಂಬುದನ್ನು ನಿರ್ಧರಿಸುವ ಸ್ವಾತಂತ್ರ್ಯವನ್ನು ಇವರು ಹೇಗೆ ಪಡೆದರೆಂಬುದು ವಿಚಾರಣೀಯ. ಮುಂದುವರಿದು ನಾಳೆ ಸಾಹಿತ್ಯ ಪರಿಷತ್ತು ಯಾವ ಪುಸ್ತಕಗಳನ್ನು ಪ್ರಕಟಿಸಬೇಕು ಹಾಗೂ ಯಾವ ಲೇಖಕರಿಗೆ ಪುರಸ್ಕಾರ ನೀಡಬೇಕೆಂಬುದನ್ನೂ ಶ್ರೀ ಡಿ. ಎಚ್. ಶಂಕರಮೂರ್ತಿಯವರ ನೇತೃತ್ವದಲ್ಲಿ ಇವರೇ ನಿರ್ಧರಿಸುವಂತಾಗಬಹುದು. ಅದಕ್ಕೆ ಪೂರ್ವಭಾವಿಯಾಗಿ ಯಡಿಯೂರಪ್ಪನವರ ಪಕ್ಷವು ದೊಡ್ಡ







ಪ್ರಮಾಣದಲ್ಲಿ ಸಾಹಿತ್ಯ ಸಮ್ಮೇಳನಕ್ಕೆ ನುಗ್ಗಿದೆ. ಹಿಂದೆಯೂ ಎಲ್ಲರಿಗೂ ಒಪ್ಪಿತವಲ್ಲದವರನ್ನು ಸಮ್ಮೇಳನಗಳಲ್ಲಿ ಉಪನ್ಯಾಸ ನೀಡಲು ಆಹ್ವಾನಿಸಿದ್ದುದುಂಟು. ಆದರೆ ಅಲ್ಲಿ ಯಾರೂ ದಾಂಧಲೆ ನಡೆಸಲಿಲ್ಲ, ಬಿಸಿ ಬಿಸಿ ಚರ್ಚೆ ನಡೆಸಿದರು. ಮೂಡಬಿದರೆ ಸಮ್ಮೇಳನದ ಒಂದು ಗೋಷ್ಠಿಯಲ್ಲಿ ಅಂತಹ ಕಾವೇರಿದ ವಾತಾವರಣವೇರ್ಪಟ್ಟಿತ್ತು. ಉಪನ್ಯಾಸಕರನ್ನು ಮಾತನಾಡಲು ಬಿಡದಿರುವ ಪ್ರಸಂಗ ಯಡಿಯೂರಪ್ಪನವರ ಸಮ್ಮುಖದಲ್ಲಿ ನಡೆದರೂ ಅವರು ಸುಮ್ಮನಿದ್ದರೇಕೆ ? ಬಜರಂಗದಳ ಇದ್ದೆಡೆ ಸ್ವಾತಂತ್ರ್ಯಹರಣವಿರಬೇಕೆಂಬುದು ಒಂದು ನಿಯಮವಾಗುತ್ತಿದೆ. ದೇವೇಗೌಡರು ಬೆಳೆಸುತ್ತಿರುವುದು ಇಂತಹ ಪಕ್ಷದ ಕಾರ್ಯಕರ್ತರನ್ನು ಎಂಬುದು ರಾಜ್ಯದ ಜನತೆಗೆ ತಿಳಿದಿದೆ. ಏನೇ ಇರಲಿ, ಸಾಹಿತ್ಯ ಸಮ್ಮೇಳನದ ಸ್ವರೂಪವು ಬದಲಾಗಿದೆ. ಇನ್ನು ಮುಂದೆ ಅದು ಬೌದ್ಧಿಕ ಚರ್ಚೆಗಿಂತಲೂ ಮಾಂಸಖಂಡಗಳ ಕಸರತ್ತಿಗೆ ಹೆಚ್ಚು ಹತ್ತಿರವಾಗುವ ಎಲ್ಲ ಸೂಚನೆಗಳೂ ಇವೆ. ಸಾಹಿತ್ಯ ಪರಿಷತ್ತಿನ ಸದಸ್ಯರು ಇದಕ್ಕೆ ಹೇಗೆ ಪ್ರತಿಕ್ರಿಯಿಸುತ್ತಾರೆಂಬುದು ಕುತೂಹಲದ ಸಂಗತಿ.

ಸಾಹಿತ್ಯ ಸಮ್ಮೇಳನದ ಉದ್ಘಾಟನೆಗೆ ರಾಜ್ಯದ ಮುಖ್ಯಮಂತ್ರಿಯನ್ನೇ ಕರೆಯಬೇಕೆಂಬ ಅಲಿಖಿತ ನಿಯಮವನ್ನು ಹಲವು ವರ್ಷಗಳ ನಂತರ ತೆಗೆದುಹಾಕಿದ್ದು ಈಗಿನ ಅಧ್ಯಕ್ಷ ಪ್ರೊ॥ ಚಂದ್ರಶೇಖರ ಪಾಟೀಲರ ಒಂದು ಸಾಧನೆಯೆಂದೇ ಹೇಳಬೇಕು. ರಾಜ್ಯದಲ್ಲಿ ಸಾಂಸ್ಕೃತಿಕ ಫ್ಯಾಸಿಸಂಅನ್ನು ಸಾಹಿತ್ಯ ಪರಿಷತ್ತು ಸಂಪೂರ್ಣವಾಗಿ ವಿರೋಧಿಸುತ್ತದೆಂಬ ಅವರ ಗಟ್ಟಿ ನಿಲುವು ಸಹ ಅಭಿನಂದನಾರ್ಹವಾದ್ದು. ಈ ವಿಷಯದಲ್ಲಿ ಸಾಹಿತ್ಯ ವಲಯವು ಅಡ್ಡಗೋಡೆಯ ಮೇಲೆ ಕುಳಿತುಕೊಳ್ಳಕೂಡದು. ಚರ್ಚೆಗಳಿಗೆ ಬಜರಂಗದಳವು ಹಾಕುವ ಕಡಿವಾಣಗಳನ್ನು ಕಿತ್ತೆಸೆಯಬೇಕಾದ್ದು ನೈಜ ಸಾಹಿತಿಗಳೆಲ್ಲರ ಕರ್ತವ್ಯ. ಈ ವರ್ಷದ ಸಮ್ಮೇಳನಾಧ್ಯಕ್ಷರು ಸಹ ಈ ಬಗ್ಗೆ ಸ್ಪಷ್ಟವಾದ ಮಾರ್ಗದರ್ಶನ ನೀಡಬೇಕು.

* * *

ಶಿಕ್ಷಕರ ನೇಮಕಾತಿ ಮತ್ತು ವರ್ಗಾವಣೆಯಲ್ಲಿ ಪ್ರಭಾವ ಬೀರಲು ಯತ್ನಿಸಿದವರಿಗೆ ದಂಡ ಹಾಗೂ ಸಜೆ ವಿಧಿಸುವ ಸುಗ್ರೀವಾಜ್ಞೆಯನ್ನು ಹೊರಡಿಸಿರುವ ಕರ್ನಾಟಕ ಸರ್ಕಾರವು ಪೊಲೀಸ್ ಇಲಾಖೆ ಮುಂತಾದುವನ್ನು ಇಂತಹ ನಿರ್ಬಂಧಕ್ಕೆ ಹೊರತುಪಡಿಸಿರುವುದು ಗಮನಾರ್ಹ ವಾಗಿದೆ. ಗ್ರಾಮೀಣ ಪ್ರದೇಶಗಳ ಶಾಲೆಗಳಿಗೆ ಉಪಾಧ್ಯಾಯರ ಕೊರತೆಯನ್ನು ನೀಗಿಸುವುದಕ್ಕೆ ಆದ್ಯತೆ ನೀಡುವುದು ಸ್ವಾಗತಾರ್ಹ. ಆದರೆ ಅದಕ್ಕೆ ಸುಗ್ರೀವಾಜ್ಞೆ ಹೊರಡಿಸುವ ಅಗತ್ಯವಿರಲಿಲ್ಲ. ಶಾಸನಸಭೆಯನ್ನು ನಡೆಸುವುದನ್ನು ಮುಂದೂಡುತ್ತಿರುವ ಸರ್ಕಾರಕ್ಕೆ ಅದು ಅನಿವಾರ್ಯವಾಯಿತು !

ಆಡಳಿತಾತ್ಮಕವಾಗಿ ಭ್ರಷ್ಟಾಚಾರವನ್ನು ತಡೆಗಟ್ಟಲು ಸರ್ವಥಾ ತಾವು ಅಸಮರ್ಥರೆಂದು ಶಿಕ್ಷಣ ಸಚಿವರು ಒಪ್ಪಿಕೊಂಡಂತಾಗಿದೆ. ಶಿಫಾರಸು ಮಾಡುವವರು ಒತ್ತಡ ತಂದರೆ ಅದನ್ನು ಎದುರಿಸಲು ಶಿಕ್ಷಕರಿಗೆ ಐದುಸಾವಿರ ರೂಪಾಯಿ ದಂಡ ಮತ್ತು ಒಂದು ತಿಂಗಳ ಸಜೆ ವಿಧಿಸುವ ಬೆದರಿಕೆಯೂ ಮೃಗೀಯ ಶಾಸನದಂತೆ ತೋರುತ್ತದೆ. ಸಜೆಯಾದ ಉಪಾಧ್ಯಾಯರು ಕಾನೂನುರೀತ್ಯಾ ಕೆಲಸ ಕಳೆದುಕೊಳ್ಳುತ್ತಾರೆ. ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ಭ್ರಷ್ಟಾಚಾರದಲ್ಲಿ ತೊಡಗಿದ್ದಕ್ಕೆ ಶಿಕ್ಷಿಸಲು ಶಿಕ್ಷಣ ಸಚಿವರು ಸಿದ್ಧರಿಲ್ಲ. ಗುಬ್ಬಿಯ ಮೇಲಾದರೆ ಬ್ರಹ್ಮಾಸ್ತ್ರ ಬಿಡುತ್ತಾರೆ, ಆದರೆ ಹದ್ದನ್ನು ಹೂಂಕರಿಸಿ ಓಡಿಸಲು ಸಹ ಅವರಿಗೆ ಚೈತನ್ಯವಿಲ್ಲ. ಜೊತೆಗೆ, ಉಪಾಧ್ಯಾಯರನ್ನು ಹೇಗೆ ಬೇಕಾದರೂ ನಡೆಸಿಕೊಳ್ಳಬಹುದೆಂಬ ಹಮ್ಮು ಮತ್ತು ತಾತ್ಸಾರ ಈ ಸುಗ್ರೀವಾಜ್ಞೆಯ ಹಿಂದೆ ಅಡಗಿದೆ. ಅಧ್ಯಾಪನದ ಜೊತೆಗೆ ನೂರಾರು ಕೆಲಸಗಳನ್ನು ಹಚ್ಚುವಾಗ ಅಧ್ಯಾಪಕರ ಜವಾಬ್ದಾರಿಯ ಬಗ್ಗೆ ಶಿಕ್ಷಣ ಸಚಿವರಿಗೆ ಏನೂ ಅನ್ನಿಸುವುದಿಲ್ಲ; ಆದರೆ ವರ್ಗಾವಣೆಯನ್ನು ಅವರು ಅಪೇಕ್ಷಿಸಿದರೆ ಕೆಂಡದಂತಹ ಕೋಪ. ಇದು ತೀರಾ ಅತಾರ್ಕಿಕವಾದ್ದು.

ನೇಮಕಾತಿ ಮತ್ತು ವರ್ಗಾವಣೆಗೆ ಖಚಿತವಾದ ನಿಯಮಗಳನ್ನು ರೂಪಿಸಿ ಅವನ್ನು ಅನುಷ್ಠಾನಕ್ಕೆ ತರಬೇಕಾದ್ದು ಸರ್ಕಾರ. ಯಾವುದೇ ಒತ್ತಡಕ್ಕೆ ಅಥವಾ ಲಂಚದ ಆಮಿಷಕ್ಕೆ ಮಣಿಯದಿದ್ದರೆ ಸಾಕು, ನಿಯಮಗಳನ್ನು ಯಥಾವತ್ತಾಗಿ ಪಾಲನೆಗೆ ತರಬಹುದು. ಲಂಚ ಪಡೆಯುವ ಅಧಿಕಾರಿಯನ್ನು ರಕ್ಷಿಸಿ, ಕೌಟುಂಬಿಕ ಕಾರಣಗಳಿಗಾಗಿ ವರ್ಗಾವಣೆಯನ್ನು ಬಯಸಬಹುದಾದ ಅಧ್ಯಾಪಕರಿಗೆ ಬರೆ ಹಾಕುವ ಕರಾಳ ಪ್ರಸಂಗವನ್ನು ಪ್ರಸ್ತುತ ಸುಗ್ರೀವಾಜ್ಞೆ ನಮ್ಮ ಮುಂದೆ ತಂದಿದೆ. ಮುಂದೆಯೂ ಲಿಖಿತ ರೂಪದಲ್ಲಿ ಪ್ರಭಾವ ಬೀರದೆ, ಶಿಕ್ಷಣ ಇಲಾಖೆಯ ಅಧಿಕಾರಿಗಳ ಭ್ರಷ್ಟಾಚಾರವನ್ನು ಪೋಷಿಸಲು ಸಾಕಷ್ಟು ಅವಕಾಶವಿರುತ್ತದೆ. ಗ್ರಾಮೀಣ ಪ್ರದೇಶದ ಶಾಲೆಗೆ ಹೋಗದವರನ್ನು ನೇಮಿಸದಿರಲು ಅಥವಾ ವರ್ಗಾವಣೆ ಮಾಡಿದಾಗ ಹೋಗದವರನ್ನು ಕೆಲಸದಿಂದ ತೆಗೆದುಹಾಕಲು ಅವಕಾಶವಿರುವಾಗ ಈ ರಾವಣ ಸಂಹಿತೆಯ ಸ್ವರೂಪದ ಸುಗ್ರೀವಾಜ್ಞೆ ಏಕೆ ಬೇಕಾಗಿತ್ತು ? ಸಮರ್ಥವಾಗಿ ಆಡಳಿತ ನಡೆಸಲು ತಮ್ಮಿಂದ ಸಾಧ್ಯವಿಲ್ಲವೆಂದು ಒಪ್ಪುತ್ತಾ ಶಿಕ್ಷಕರನ್ನು ಹಂಗಿಸುವಂತಹ ಸುಗ್ರೀವಾಜ್ಞೆಗೆ ಧಿಕ್ಕಾರ.

* * *

ರಾಜ್ಯದ ಪ್ರಾಥಮಿಕ ಶಿಕ್ಷಣವನ್ನು ಹೇಗೆ ಯೋಜಿಸಬೇಕೆಂದು ನಿರ್ದೇಶಿಸುವ ಒಂದು ಮಾದರಿ ಶಾಸನವನ್ನು ಕೇಂದ್ರ ಸರ್ಕಾರವು ಪ್ರಚುರಪಡಿಸಿದೆ. ಅದನ್ನು ಕರ್ನಾಟಕ ಸರ್ಕಾರವು ಈವರೆಗೆ ಬಹಿರಂಗವಾಗಿ ಚರ್ಚಿಸಿಲ್ಲ, ಸಾರ್ವಜನಿಕರ ಗಮನಕ್ಕೆ ತಂದಿಲ್ಲ. ಅದನ್ನು ಕೇಂದ್ರದಿಂದ ಪಡೆದುಕೊಂಡು ಅದರ ವಿವರಗಳನ್ನು ತಿಳಿದುಕೊಳ್ಳುವ ಸನ್ನಿವೇಶ ನಮ್ಮದಾಗಿದೆ. ಬೇರೆ ರಾಜ್ಯಗಳಲ್ಲಿ ಈ ಮಾದರಿ ಶಾಸನವನ್ನು ಸಾರ್ವಜನಿಕರ ಮುಂದಿಟ್ಟು ಚರ್ಚೆಗೆ ಆಹ್ವಾನ ನೀಡಲಾಗಿದೆ. ಕೇಂದ್ರವು ಸಂಪೂರ್ಣವಾಗಿ ಪ್ರಾಥಮಿಕ ಶಿಕ್ಷಣದ ಜವಾಬ್ದಾರಿಯಿಂದ ಕಳಚಿಕೊಳ್ಳಲು ರೂಪಿಸಲಾಗಿರುವ ಶಾಸನ ಇದು. ಹದಿನಾಲ್ಕನೆಯ ವಯಸ್ಸಿನವರೆಗೆ ಎಲ್ಲ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕೆಂಬ ಸಂವಿಧಾನದ ನಿರ್ದೇಶನವನ್ನು ಹುಸಿ ಮಾಡುವಂತಹ ಮಾದರಿ ಶಾಸನವು ಜನವಿರೋಧಿ ಶಾಸನಕ್ಕೆ ಮಾತ್ರವೇ ಮಾದರಿಯಾಗಿದೆ. ಎಲ್ಲ ರಾಜ್ಯಗಳೂ ಆ ಮಾದರಿ ಶಾಸನವನ್ನು ತಮ್ಮ ತಮ್ಮ ಶಾಸನಸಭೆಗಳಲ್ಲಿ ಚರ್ಚಿಸಿ ಕಾಯಿದೆ ಮಾಡಿಕೊಳ್ಳಬೇಕೆಂಬ ಸೂಚನೆಯೂ ಕೇಂದ್ರದಿಂದ ಬಂದಿದೆ. ಹಾಗೆ ಮಾಡಿಕೊಂಡರೆ ಕೇಂದ್ರವು ಪ್ರಾಥಮಿಕ ಶಿಕ್ಷಣಕ್ಕಾಗಿ ರಾಜ್ಯಗಳಿಗೆ ಹಣದ ನೆರವು ನೀಡುತ್ತದೆ; ಮಾಡಿಕೊಳ್ಳದಿದ್ದರೆ ನೆರವನ್ನು ಕಡಿತಗೊಳಿಸುವ ಬೆದರಿಕೆಯನ್ನು ಒಡ್ಡಲಾಗಿದೆ. ಸಮಾನ ಶಿಕ್ಷಣಕ್ಕೆ ಒತ್ತುಕೊಡುವ ಬದಲು ಪ್ರಾಥಮಿಕ ಶಿಕ್ಷಣದಲ್ಲೂ ತಾರತಮ್ಯ ಉಂಟುಮಾಡುವ ಶಾಸನ ಇದು. ಸಾರ್ವಜನಿಕರು ಈ ಮಾದರಿ ಶಾಸನವನ್ನು ವಿಶ್ಲೇಷಣೆ ಮಾಡಿಕೊಂಡು, ಸಮಾನ ಶಿಕ್ಷಣಕ್ಕಾಗಿ ಒತ್ತಾಯಿಸುವ ಪ್ರಜಾಪ್ರಭುತ್ವವಾದಿ ಚಳುವಳಿಯನ್ನು ಹಮ್ಮಿಕೊಳ್ಳುವ ಅಗತ್ಯವಿದೆ.

* * *

ಇಂದಿರಾ ಗಾಂಧಿಯವರ ಹೆಸರಿನಲ್ಲಿ ನೀಡಲಾಗುವ ಒಂದು ಅಂತರರಾಷ್ಟ್ರೀಯ ಶಾಂತಿ ಪುರಸ್ಕಾರವನ್ನು ಈ ಬಾರಿ ಆಫ್ಘಾನಿಸ್ತಾನದ ಕರ್ಜೈಗೆ ನೀಡಲಾಗಿರುವುದು ಆಶ್ಚರ್ಯಕರ ಸಂಗತಿ. ತನ್ನ ದೇಶದ ರಾಜಧಾನಿಯಿಂದ ಮೂವತ್ತು ಕಿಲೋಮೀಟರ್ ಆಚೆಗೆ ಸಹ ಹೋಗಲು ಅಶಕ್ತನಾದ ರಾಜಕಾರಣಿಗೆ ಈ ಪ್ರಶಸ್ತಿ ಲಭಿಸಿರುವುದು ಆತನ ವರ್ಚಸ್ಸಿನ ಫಲವಾಗಿ ಅಲ್ಲ; ಭಾರತವು ಅಮೇರಿಕಾ ಮತ್ತು ಆಫ್ಘಾನಿಸ್ತಾನಗಳನ್ನು ಏಕಕಾಲದಲ್ಲಿ ಓಲೈಸುವ ಸಲುವಾಗಿ. ಈತ ಅಮೇರಿಕಾದಲ್ಲಿ ನೆಲೆಸಿದ್ದವನು. ಅಮೇರಿಕಾ ಸರ್ಕಾರವು ಆತನಿಗೆ ಪ್ರಧಾನಿ ಪಟ್ಟ ಹೇರಿದ್ದು ಸಾಲದೆಂಬಂತೆ ನಮ್ಮ

೧೨ನೇ ಪುಟಕ್ಕೆ















# ಪರಿವಿಡಿ

# ಪರಿವಿಡಿ




















---

**ಮುಖಚಿತ್ರ** : ಹೂಜಿ ಮತ್ತು ನಾಯಿಮರಿ ಸಹಿತ ಹಳ್ಳಿಯ ಹುಡುಗಿ

**ಚಿತ್ರ** : ಥಾಮಸ್ ಗೇಯನ್ಸ್‌ಬರೋ


**ವಿನ್ಯಾಸ** : ನವಕರ್ನಾಟಕ ವಿನ್ಯಾಸ

**ಈ ಸಂಚಿಕೆಯ ಚಿತ್ರಗಾರರು** : ಸೃಜನ್, ಮೋನಪ್ಪ, ಶ್ರೀಹರಿ, ರವೀಂದ್ರ, ಕೆದಿಲಾಯ, ರಾಂಚಂದ್ರ ಕೊಪ್ಪಲು ವಿವೇಕಾನಂದ, ಬಿ. ವಿಲ್ಸನ್, ಕೆ. ಕೆ. ಮಕಾಳಿ ಎನ್. ಆರ್. ಬೊಮ್ಮಳ್ಳಿ, ಜಿ. ಎಂ. ಬೊಮ್ಮಳ್ಳಿ

**ಕಚೇರಿ ಸಹಕಾರ** : ಜಿ. ವಿ. ತೇಜೋವತಿ




## ಇಂಡೋ-ಚೀಣಾ ಗಡಿ ವಿವಾದಗಳು

ಭಾರತ-ಚೀಣಾದೊಳಗಿನ ಸಂಬಂಧಗಳ ಇತಿಹಾಸವು ಪುರಾತನವಾದುದು. ಬಹಳ ಹಿಂದಿನ ಕಾಲದಿಂದಲೇ ಭಾರತ ಚೀಣಾಗಳೊಳಗೆ ನೆಲ, ಜಲ ಮಾರ್ಗವಾಗಿ ವ್ಯಾಪಾರ ವಹಿವಾಟುಗಳು ನಡೆಯುತ್ತಿದ್ದವು. ಇದರಿಂದಾಗಿ ಅಭಿಪ್ರಾಯಗಳೂ ಸರಕು ಸಾಮಾನುಗಳೂ ವಿನಿಮಯ ವಾಗುತ್ತಿದ್ದವು. ಹೀಗೆಯೇ ಅನೇಕ ಚೀಣೀ ಯಾತ್ರಿಕರು ಭಾರತಕ್ಕೆ ಬರುತ್ತಿದ್ದರು. ಇವರಲ್ಲಿ ಫಾಹಿಯಾನ್, ಹ್ಯೂಯನ್-ತ್ಸಾಂಗ್, ಇಟ್ಸಿಂಗ್‌ರವರುಗಳು ಸುಪ್ರಸಿದ್ಧರು.

೧೯೫೪ರ ಏಪ್ರಿಲ್ ೨೯ರ ಒಪ್ಪಂದದ ಪ್ರಕಾರ ಟಿಬೆಟ್ ಚೀಣಾದ ಪ್ರದೇಶವೆಂದು ಭಾರತವು ಮಾನ್ಯ ಮಾಡಿತು. ಎಂಟು ವರ್ಷಗಳ ಕಾಲ ಜಾರಿಯಲ್ಲಿರತಕ್ಕ ಒಂದು ವಾಣಿಜ್ಯ ಒಪ್ಪಂದ ವಾಣಿಜ್ಯ ಸಂಸ್ಥೆಗಳನ್ನು ಮಾರುಕಟ್ಟೆಗಳನ್ನು ಯಾತ್ರಿಕರ ರಸ್ತೆಗಳನ್ನು ನಿರ್ದಿಷ್ಟ ಗೊಳಿಸಿತು. ಸಾಮಾನ್ಯ ಗಡಿಯಲ್ಲಿ ವ್ಯಾಪಾರ ಮತ್ತು ಸಂಪರ್ಕಗಳ ನಿಯಮಗಳನ್ನು ನಿರೂಪಿಸಿತು. ಈ ಒಪ್ಪಂದದ ಪೀಠಿಕೆಯಲ್ಲಿ ಉಭಯ ದೇಶಗಳೂ 'ಪಂಚಶೀಲ ತತ್ವ'ಗಳ ಪ್ರಕಾರ ನಡೆಯಬೇಕೆಂದು ದೃಢೀಕರಿಸಲಾಗಿತ್ತು.

(ಅ) ಪರಸ್ಪರ ಪ್ರಾದೇಶಿಕ ಸಮಗ್ರತೆ ಮತ್ತು ಸ್ವಾತಂತ್ರ್ಯದ ಬಗ್ಗೆ ಗೌರವ
(ಆ) ಅನ್ಯೋನ್ಯ ಅನಾಕ್ರಮಣ
(ಇ) ಪರಸ್ಪರ ಆಂತರಿಕ ವಿಷಯಗಳಲ್ಲಿ ತಲೆ ಹಾಕದಿರುವುದು
(ಈ) ಶಾಂತಿಯುತ ಸಹಬಾಳ್ವೆ, ಇವೇ ಪಂಚಶೀಲ ತತ್ವಗಳಾಗಿದ್ದವು.

ಹೀಗಾಗಿ ಭಾರತ - ಚೀಣಾಗಳೊಳಗಿನ ಸ್ನೇಹ ಸೌಹಾರ್ದತೆಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ ದಾರಿ ಸುಗಮವಾಯಿತು. ಆದಕಾರಣ ೧೯೫೪ರ ಜೂನ್‌ನಲ್ಲಿ ಭಾರತ ಸರ್ಕಾರದ ಆಮಂತ್ರಣ ಪ್ರಕಾರ ಚೀಣಾದ ಪ್ರಧಾನಿಗಳಾಗಿದ್ದ ದಿ॥ ಚೌ ಎನ್ ಲಾಯ್‌ರವರು ದೆಹಲಿಗೆ ಭೇಟಿ ಇತ್ತಾಗ ಚೀಣೀ - ಹಿಂದೂ ಭಾಯಿ ಭಾಯಿ ಎಂಬ ಘೋಷಣೆಗಳೊಡನೆ ಸಂಭ್ರಮದ ಸ್ವಾಗತವನ್ನು ನೀಡಲಾಗಿತ್ತು. ಉಭಯ ದೇಶಗಳ ಪ್ರಧಾನಿಗಳು ತಮ್ಮ ಮಾತುಕತೆಗಳ ಕೊನೆಯಲ್ಲಿ ಜಂಟೀ ಹೇಳಿಕೆಯಲ್ಲಿ ಪಂಚಶೀಲ ತತ್ವಗಳನ್ನು ಸಾಮಾನ್ಯವಾಗಿ ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಅನ್ವಯಿಸಿದರೆ ಇವು ಶಾಂತಿ ಭದ್ರತೆಗಳಿಗೆ ದೃಢವಾದ ಬುನಾದಿಯನ್ನು ರಚಿಸುವುದಲ್ಲದೆ ಇಂದಿರುವ ಭೇದ ಸಂಶಯಗಳ ಸ್ಥಾನದಲ್ಲಿ ಆತ್ಮವಿಶ್ವಾಸದ ಭಾವನೆಯನ್ನು ಬೆಳೆಸ ಬೇಕೆಂದು ಸಾರಲಾಗಿತ್ತು. ಪ್ರಪಂಚದ ಶಾಂತಿಗೆ ಹಾಗೂ ತಮ್ಮ ತಮ್ಮ ದೇಶಗಳ ಹಾಗೂ ಏಷ್ಯಾದ ಇತರ ದೇಶಗಳ ಏಳಿಗೆಗೆ ಕಾರಣವಾಗಿರುವ ಭಾರತ ಹಾಗೂ ಚೀಣಾ ಗಳೊಳಗಿನ ಮೈತ್ರಿಯಲ್ಲಿ ತಮ್ಮ ವಿಶ್ವಾಸವನ್ನು ಪ್ರಕಟಿಸಿ ದ್ದೇವೆಂದು ಜವಾಹರ್‌ಲಾಲ್ ನೆಹರು ಹೇಳಿಕೆ ಇತ್ತರು.

**ಗಡಿ ಕುರಿತಾದ ನೈಜಸ್ಥಿತಿಗಳು :** ಭಾರತ ಚೀಣಾ ಗಳೊಳಗಿನ ಗಡಿಯು ೨೬೪೦ ಮೈಲಿಗಳಾಗಿವೆ. ಇದರಲ್ಲಿ ಭಾರತದೊಡನೆ ವಿಶೇಷ ಒಪ್ಪಂದಗಳಿಂದ ಸೇರಿ ಕೊಂಡಿರುವ ಸಿಕ್ಕಿಂ ಮತ್ತು ಭೂತಾನ್‌ಗಳ ಗಡಿಗಳೂ ಸೇರಿಕೊಂಡಿವೆ. ಇದೀಗ ಸಿಕ್ಕಿಂ ಭಾರತದ ಅವಿಭಾಜ್ಯ ಭಾಗವಾಗಿದೆ. ಈ ಗಡಿನಾಡು ಪ್ರದೇಶದ ಹವಾಮಾನವು ಅತಿ ಕಠಿಣವಾಗಿದ್ದುದರ ಕಾರಣ ಜನಸಂಖ್ಯೆಯು ಅತಿ ವಿರಳವಾಗಿದೆ. ಕೆಲವೆಡೆಗಳು ನಿರ್ಜನ ಪ್ರದೇಶಗಳಾಗಿವೆ. ಇಲ್ಲಿಯ ಜನರಲ್ಲಿ ಅನೇಕರು ಅದರಲ್ಲೂ ಗಡಿನಾಡಿನಲ್ಲಿ ಇರುವವರು ಗಿರಿಜನರಾಗಿದ್ದಾರೆ.




ಪಶ್ಚಿಮ ವಿಭಾಗದಲ್ಲಿ ಭಾರತ, ಚೀಣಾ, ಆಫ್ಘನಿಸ್ತಾನ್ ಗಡಿಗಳು ಬರುತ್ತವೆ. ಇದು ಸಿಂಕಿಯಾಂಗ್ ಮತ್ತು ಟಿಬೆಟ್‌ನಿಂದ ಭಾರತದ ಜಮ್ಮು ಮತ್ತು ಕಾಶ್ಮೀರ್ ರಾಜ್ಯ ಗಳನ್ನು ವಿಂಗಡಿಸುತ್ತದೆ. ಈ ವಿಭಾಗದಲ್ಲಿ ಮೂರನೇ ಎರಡರಷ್ಟು ಗಡಿನಾಡು ಟಿಬೆಟ್ ಮತ್ತು ಕಾಶ್ಮೀರದ ಲಡಾಖ್ ಪ್ರದೇಶಗಳ ನಡುವೆ ಇದೆ. ಮೆಕ್‌ಮೋಹನ ಗಡಿರೇಖೆಯು ಭೂತಾನ್‌ದಿಂದ ಪೂರ್ವಕ್ಕೆ ಸಾಗುತ್ತದೆ. ಇದು ಒಂದೆಡೆ ಚೀಣಾದ ಗಡಿಯನ್ನೂ ಇನ್ನೊಂದೆಡೆ ಭಾರತ ಭೂತಾನ್‌ಗಳ ಗಡಿಯನ್ನೂ ಸ್ಪಷ್ಟಗೊಳಿಸುತ್ತದೆ. ದೊಡ್ಡ ನಕ್ಷೆಯಲ್ಲಿ ಸೂಚಿಸಿದ ಗಡಿರೇಖೆಯನ್ನು ಬ್ರಿಟಿಷ್ ಭಾರತದ ಪ್ರತಿನಿಧಿಯ ಹೆಸರಿನಲ್ಲಿ 'ಮೆಕ್‌ಮೋಹನ್ ರೇಖೆ'ಯೆಂದು ಕರೆಯಲಾಗಿದೆ. ಈ ಗಡಿಯು ಉನ್ನತವಾದ ಹಿಮಾಲಯ ಪರ್ವತ ಶ್ರೇಣಿಯ ಶಿಖರದ ಉದ್ದಕ್ಕೂ ಸಾಗುತ್ತದೆ.

ಹಳೆ ರೆವಿನ್ಯೂ ದಾಖಲೆ ನಕ್ಷೆಗಳಿಂದ ಚೀಣೀಯರು ಉತ್ತರಪ್ರದೇಶ ರಾಜ್ಯದ ಭಾಗಗಳಾದ ಬಡಾಹೋಟಿ, ಲಲೀಂಗ್, ಶಿಪ್ಕ್ಯ, ಲಾಪ್‌ಥಾಲ್, ಸಾಂಗೈಮಲ್ಲ, ಅಕ್ಸಾಯ್‌ಚಿನ್, ಪೂಂಗ್ ಕಾಜಾಂಗ್, ಚೆನ್ಮೋ, ಸಿಂಕಿಯಾಂಗ್, ಈಶಾನ್ಯ ಗಡಿನಾಡು ಭಾಗಗಳಾದ ಲೋಹಿತ್, ಸುಬನ್ ಸಿರಿ, ಕಾಮೆಂಗ್ ಕಣಿವೆಗಳಲ್ಲಿ ಚೀಣೀಯರು ಮಿಲಿಟರಿ ಠಾಣೆಗಳನ್ನು ಸ್ಥಾಪಿಸಿ ಗಸ್ತು ತಿರುಗಿದಾಗ ಎರಡೂ ರಾಷ್ಟ್ರಗಳ ನಡುವೆ ಭೀಕರ ಯುದ್ಧವು ದಿನಾಂಕ ೨೦-೧೨-೧೯೬೨ರಂದು ಸಂಭವಿಸಿತು.

ಚೀಣಾ ಯುದ್ಧದಿಂದಾಗಿ ಭಾರತದಲ್ಲಿ ನಿರಾಶ್ರಿತರ ಸಂಖ್ಯೆಯು ಹೆಚ್ಚಾಯಿತು. ಆರ್ಥಿಕ ಬಿಕ್ಕಟ್ಟು ಉಲ್ಬಣ ಗೊಂಡಿತು. ರಾಷ್ಟ್ರದಲ್ಲಿ ತುರ್ತುಪರಿಸ್ಥಿತಿ ಘೋಷಿಸ ಲಾಯಿತು. ವಿವಿಧ ಸಾಂಸ್ಕೃತಿಕ ಸಂಘ ಸಂಸ್ಥೆಗಳೂ ಹಾಗೂ ಹೊರ ರಾಷ್ಟ್ರಗಳು ಆರ್ಥಿಕ ನೆರವನ್ನು ಭಾರತಕ್ಕೆ ಒದಗಿಸಿದವು. ಭಾರತದ ಪಂಚವಾರ್ಷಿಕ ಯೋಜನೆ ಗಳನ್ನು ರೂಪಿಸುವಾಗ ರಕ್ಷಣೆಗೆ ಹೆಚ್ಚಿನ ಮಹತ್ವ ಕೊಡಲಾಯಿತು.

ಸಾಮ್ರಾಜ್ಯವಾದವು ಎಲ್ಲಾ ದೇಶಗಳಲ್ಲಿ ಬಲ ಪ್ರಯೋಗಗಳಿಂದ ಮಿಲಿಟರಿ ನೆಲೆಗಳನ್ನು ಸ್ಥಾಪಿಸಿದೆ. ಇದೀಗ ಅಮೆರಿಕಾವು ವಿದೇಶಗಳಲ್ಲಿ ಮುನ್ನೂರು ನಲವತ್ತಕ್ಕಿಂತಲೂ ಹೆಚ್ಚಾಗಿ ಭೂದಳ, ವಾಯುದಳ, ನೌಕಾದಳದಲ್ಲಿ ಮಿಲಿಟರಿ ನೆಲೆಗಳನ್ನು ಇಟ್ಟಿದೆ. ಅದು ಯುದ್ಧದ ಮೂಲಕ ಶಾಂತಿಗೆ ಭಂಗ ತರುವುದಾಗಿ ಬೆದರಿಸುತ್ತಿದೆ. ಲ್ಯಾಟಿನ್ ಅಮೆರಿಕಾ, ಆಫ್ರಿಕಾ ಮತ್ತು ಏಷ್ಯಾದ ರಾಷ್ಟ್ರಗಳಲ್ಲಿ ಕೈಗೊಂಬೆ ಸರ್ಕಾರಗಳನ್ನು ಸ್ಥಾಪಿಸಲು ವಿಚ್ಛಿದ್ರಕಾರರಿಗೆ, ಭಯೋತ್ಪಾದಕರಿಗೆ ಹಾಗೂ ಮತೀಯ ಶಕ್ತಿಗಳಿಗೆ ಅದು ಪ್ರೋತ್ಸಾಹಿಸುತ್ತಿದೆ. ಹೀಗಾಗಿ ಜಗತ್ತಿನಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ಹದಗೆಟ್ಟಿದೆ. ಇಡೀ ವಿಶ್ವದಲ್ಲಿ ಇರುವ ಜನರೆಲ್ಲ ಮೂರನೇ ಮಹಾಯುದ್ಧದ ಸಾಧ್ಯತೆಯ ಬಗ್ಗೆ ಚರ್ಚಿಸುತ್ತಿದ್ದಾರೆ. ಆದ್ದರಿಂದ ಸಾಮ್ರಾಜ್ಯ ಶಕ್ತಿ, ರಾಷ್ಟ್ರಗಳ ವಿರುದ್ಧ ಏಷ್ಯಾದ ಬಲಿಷ್ಠ ರಾಷ್ಟ್ರಗಳಾದ ಭಾರತ ಚೀಣಾ ಒಂದಾಗದಿದ್ದರೆ ಪ್ರಪಂಚವು ಉಳಿಯದು !

೨೦೦೬ರ ನವೆಂಬರ್ ತಿಂಗಳ ಅಂತ್ಯದ ದಿನಗಳಲ್ಲಿ ಭಾರತಕ್ಕೆ ಆಗಮಿಸಿದ್ದ ಚೀಣಾದ ಅಧ್ಯಕ್ಷರಾದ ಹು ಜೆಂಟಾವೊ ಹಾಗೂ ಭಾರತದ ಪ್ರಧಾನಮಂತ್ರಿ ಗಳಾದ ಮನಮೋಹನ್ ಸಿಂಗ್‌ರವರೊಡನೆ ಆಗಿರುವ ಐತಿಹಾಸಿಕ ಒಪ್ಪಂದಗಳು ಉಭಯ ರಾಷ್ಟ್ರಗಳ ಐಕ್ಯತೆಗೆ ದಾರಿ ಸುಗಮವಾಗಿಸಬಹುದೇ ?

ತುಮಕೂರು **ಆರ್. ರವೀಂದ್ರ ನಾಯಕ್**

೨೦೦೬ರ ಡಿಸೆಂಬರ್ ಸಂಚಿಕೆ ಬಹಳ ಸುಂದರ ವಾಗಿತ್ತು. 'ಸಜನಾ – ಸಾಮಾನ್ಯನ ನೆನಪು' ನಿಜಕ್ಕೂ ಸ್ಮರಣೀಯ. ಬಸವರಾಜ ಹೂಗಾರರ 'ಸುವರ್ಣ ಕರ್ನಾಟಕದ ಹೆಬ್ಬಾಗಿಲಲ್ಲಿ ಕನ್ನಡಿಗ' ವಾಸ್ತವಾಂಶದಿಂದ ಕೂಡಿದೆ. 'ಕುವೆಂಪು ಸೃಜನಶೀಲ ವೈಚಾರಿಕತೆ ಚಿಂತನ', ಮಂಥನಶೀಲ ಲೇಖನವಾಗಿತ್ತು.

ವಿವೇಚನಕ್ಕೆ, ವೈಚಾರಿಕತೆಗೆ, ಸಾಮರಸ್ಯಕ್ಕೆ, ಪರಿವರ್ತನೆಗೆ ಇನ್ನೊಂದು ಹೆಸರು 'ಹೊಸತು'.

ಲಕ್ಷ್ಮೇಶ್ವರ **ಬಸವರಾಜ ಶಿ. ಬಾಳೇಶ್ವರಮಠ**

### ಕಾನ್ಷಿರಾಂ

ಹೋರಾಟದ ನೆಲೆಗಳು ಎರಡು. ಒಂದು ಇದ್ದ ವ್ಯವಸ್ಥೆಯ ಅಂಗವಾಗಿ ಅದರ ಆಂತರಿಕ ಬಿಕ್ಕಟ್ಟಿಗೆ ತನ್ನನ್ನು ತಾನು ಒಡ್ಡಿ ಅದರ ವಿರುದ್ಧವಾಗಿ ಸೆಣಸಾಡುವುದು ; ಇನ್ನೊಂದು ಮುಖ್ಯ ವ್ಯವಸ್ಥೆಯ ಒಳಗೆ ಪ್ರವೇಶಿಸದೇನೇ, ಹೊರಗೆ ಇದ್ದುಕೊಂಡು ಅದರ ಅಬಾಧಿತ ಕೇಂದ್ರೀಕೃತ ಕಾರ್ಯ ಚಟುವಟಿಕೆ ಗಳನ್ನು ವಿರೋಧಿಸುವುದು.

ಇವೆರಡರಲ್ಲಿ ನನ್ನ ಅನಿಸಿಕೆಯ ಮಟ್ಟಿಗೆ

ಮೊದಲನೆಯ ಹೋರಾಟವೇ ನಿಜವಾದ ಹೋರಾಟ. ಇಲ್ಲಿ ವ್ಯಕ್ತಿಯ ವ್ಯಕ್ತಿತ್ವಕ್ಕೆ ಪರೀಕ್ಷೆಯ ಕಾಲ. ಯಾವ ತರಹದ ಆಮಿಷಕ್ಕೆ ಒಳಗಾಗದೆ, ಜನಪರ ಕಾಳಜಿಗಳನ್ನು ಮೈಗೂಡಿಸಿಕೊಂಡು ಸಮಾಜ ಪೂರಕವಾದ ವ್ಯವಸ್ಥೆಯನ್ನು ಕಟ್ಟುವುದು, ತಮ್ಮ ನಡೆವಳಿಗಳನ್ನು ಎರಕ ಹುಯ್ಯುವುದು ನಿಜವಾದ ಹೋರಾಟ. ಇಂದಿನ ಎಲ್ಲ ಮೂಲಗಳ ಚಳುವಳಿಗಳು, ಪಕ್ಷಗಳು, ಸಮಾಜ, ಸಮುದಾಯಗಳು ಇಂತಹ ಪ್ರಜ್ಞಾಪೂರ್ವಕ ಕಾಳಜಿಗಳನ್ನು ಬೆಳೆಸಿಕೊಳ್ಳುವ ಅವಶ್ಯಕತೆ ಇದೆ. ದಲಿತಪರ ಕಾಳಜಿಗಳು, ಮಹಿಳಾಪರ ಚಿಂತನೆಗಳು, ಅಲ್ಪಸಂಖ್ಯಾತ ಸಂವೇದನೆಗಳು ಇಂದು ವ್ಯವಸ್ಥೆಯ ಅಂಗವಾಗುವ, ಸಮಾಜದಲ್ಲಿ ಕಾರ್ಯರೂಪದಲ್ಲಿ ಮೈದಳೆಯುವ ಅನಿವಾರ್ಯತೆ ಇದೆ. ಹೊರಗೆ ಉಳಿಯುವುದಾಗಿ ಅಲ್ಲ.

ದತ್ತಾತ್ರಯ ಇಕ್ಕಳಕಿಯವರು 'ಕಾನ್ಷಿರಾಂ' ಅವರ ನೆಪದಲ್ಲಿ ಇಂದಿನ ಅಂಬೇಡ್ಕರ್‌ವಾದದ ಎಲ್ಲ ಮೂಲದ ಹೋರಾಟದ ನೆಲೆಗಳನ್ನು ಅತ್ಯಂತ ಕಾಳಜಿ ಪೂರ್ವಕವಾಗಿ ಹಾಗೂ ಕಳಕಳಿಯಿಂದ ಪರಿಶೀಲಿಸಿದ್ದು ಅವರ ಇಂದಿನ ವಾಸ್ತವಿಕ ಮುಖವನ್ನು ತಮ್ಮ ಲೇಖನದಲ್ಲಿ ತೋರಿಸಿದ್ದು ನಿಜವಾಗಿಯೂ ಮೆಚ್ಚುವಂಥದ್ದು.

ಗುಲ್ಬರ್ಗಾ **ಡಾ|| ಪರಿಮಳಾ ಅಂಬೇಕರ್**

### ದಲಿತರ ಪ್ರತಿಭೆ

ಶ್ರೀ ವಿಜಯ ಆರ್. ಕಾಂಬಳೆ ಅವರ 'ಉದ್ಯೋಗಾವಕಾಶಗಳು ಮತ್ತು ಹಿಂದುಳಿದ ವರ್ಗಗಳು' ಎಂಬ ಲೇಖನದಲ್ಲಿ ಈ ಹೊತ್ತಿನ ಜಾಗತೀಕರಣದ ಭರಾಟೆಯಲ್ಲಿ ದಲಿತ, ಹಿಂದುಳಿದ ಶೋಷಿತ ವರ್ಗಗಳಿಗೆ ಉದ್ಯೋಗಾವಕಾಶಗಳು ಸರಿಯಾಗಿ ದೊರಕುತ್ತಿಲ್ಲ, ಅಲ್ಲದೆ ಸರಕಾರಿ ಸಂಘ-ಸಂಸ್ಥೆಗಳಲ್ಲಿ ಖಾಲಿ ಇರುವ ಹುದ್ದೆಗಳು ಕೇವಲ ಉಳ್ಳವರಿಗೆ ದೊರೆತು ಇತರರು ಅದರಿಂದ ವಂಚಿತರಾಗುತ್ತಿದ್ದಾರೆ ಎಂಬ ಆತಂಕದ ಜೊತೆಗೆ ಅಲಕ್ಷಿತ ಸಮುದಾಯಗಳು ಸಮಾನ ಅವಕಾಶಗಳನ್ನು ಪಡೆಯುವ ಬಗೆಗೂ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ. ಆದರೆ ''ವಿದ್ಯಾವಂತರಾದ ದಲಿತ ಹಿಂದುಳಿದ ಶೋಷಿತ ವರ್ಗಗಳಿಗೆ/ವರ್ಗಕ್ಕೆ ಚಾತುರ್ಯವಿಲ್ಲ. ಯಾಕೆಂದರೆ ಯಾವುದೇ ಮಾರುಕಟ್ಟೆ ಮುಖ್ಯವಾಗಿ ಊರ್ಜಿತವಾಗುವುದು ಸಾಮಾಜಿಕ ಸಂಪರ್ಕಗಳ ಮುಖೇನ. ಹೀಗಾಗಿ ಅವಕಾಶಗಳನ್ನು ದಕ್ಕಿಸಿಕೊಳ್ಳುವ ಹಾಗೂ ದಕ್ಕಿದ ಅವಕಾಶಗಳನ್ನು ಉಳಿಸಿಕೊಳ್ಳುವ ಸಾಮರ್ಥ್ಯ ಸಮಾಜದ ಕೆಳವರ್ಗಕ್ಕೆ ಇರುವುದಿಲ್ಲ'' ಎಂಬ ಮಾತುಗಳನ್ನು ಒಪ್ಪಲಾಗುವುದಿಲ್ಲ. ಕಾರಣ ಪ್ರಾಚೀನ ಕಾಲದಿಂದಲೂ ಅಲಕ್ಷಿತ ಸಮುದಾಯಗಳ ಪ್ರತಿಭೆ, ಪಾಂಡಿತ್ಯ, ಚಾತುರ್ಯ, ಸಾಮರ್ಥ್ಯಗಳನ್ನು ಪ್ರತಿಷ್ಠಿತ ಸಮುದಾಯಗಳು ಹೇಗೆ ಹತ್ತಿಕ್ಕಿವೆ ಎಂಬ ಚರಿತ್ರೆಯೇ ನಮ್ಮ ಮುಂದಿದೆ ಎಂಬುದನ್ನು ಗಮನಿಸಬೇಕು. ಅಲ್ಲದೆ ಮೇಲುವರ್ಗ/ಅಧಿಕಾರ ಹೊಂದಿರುವ ವರ್ಗದೊಂದಿಗೆ ಈ ಕೆಳ ಸಮುದಾಯಗಳು ಹೇಗೆ ಮುಖಾಮುಖಿಯಾಗಬೇಕು, ತಂತ್ರ-ಪ್ರತಿತಂತ್ರಗಳನ್ನು ಹೇಗೆ ಹೆಣೆಯಬೇಕು ಎಂಬುದರ ಕಡೆಗೆ ಲೇಖಕರು ಗಮನಹರಿಸಬೇಕಾಗಿತ್ತು.

ರಾಮದುರ್ಗ, ಬೆಳಗಾವಿ **ಡಾ|| ಎಸ್ಸಾರ್ ರಾಮರಥ**

### ಸಾಮ್ಯ

'ಕುವೆಂಪು - ಸೃಜನಶೀಲ ವೈಚಾರಿಕತೆ' ('ತಿಳಿವು') ಲೇಖನದ ಕಡೆಯಲ್ಲಿರುವ ''ಕುವೆಂಪು ಅವರ 'ಕವಿ ದರ್ಶನ' ವೈಚಾರಿಕತೆ'' ಎಂಬ ಮಾತು ನನಗೆ ತುಸು ಅಚ್ಚರಿ ತಂದಿತು: ಮೂರು ದಶಕಗಳಿಗೂ ಹಿಂದೆ ನಾನೊಂದು ಕಡೆ ಹೀಗೇ ಬರೆದಿದ್ದೆ: ''ಕುವೆಂಪು ಅವರದು ಕೇವಲ ವೈಚಾರಿಕತೆಯಲ್ಲ; ದಾರ್ಶನಿಕ ವೈಚಾರಿಕತೆ''. ಆದರೆ ನನಗೆ ಗೊತ್ತು, ನನ್ನ ಬರಹವನ್ನು ಅಣತಿಯವರು ಖಂಡಿತ ನೋಡಿರಲಿಕ್ಕಿಲ್ಲ.

ಮೈಸೂರು **ಸಿಪಿಕೆ**

### ಸಜನಾ – ಕೆಲವು ನೆನಪುಗಳು

ಡಾ|| ಸ.ಜ. ನಾಗಲೋಟಿಮಠರೆಂಬ ಸಂಸ್ಥೆ ಈ ಕನ್ನಡ ನೆಲದಲ್ಲಿ ಶ್ರೇಷ್ಠ ಮಾನವರಾಗಿ ಬಾಳಿ ನಮ್ಮಿಂದ ದೂರವಾದ ಸಮಯದಲ್ಲಿ 'ಹೊಸತು' ಅತ್ಯಂತ ಸರಳ ಶ್ರದ್ಧಾಂಜಲಿಯನ್ನು ಮನಮುಟ್ಟುವಂತೆ ಸಲ್ಲಿಸಿದೆ. ಸತ್ಯ ಹಾಗೂ ಕಲ್ಪನೆಗಳಿಗಿಂತ ವಿಲಕ್ಷಣವಾದ ಬದುಕನ್ನು ಕಂಡ ಸಜನಾ ಮಾನವರ ಜೀವನಕ್ಕೆ ಮಾದರಿಯಾದ ಕ್ಷೇತ್ರ ಯಾವುದೆಂಬ ವಿಷಯವನ್ನು ತಿಳಿಯುವುದೇ ಸಂಶೋಧನೆಯ ವಸ್ತುವಾಗಬಲ್ಲದು. ಸಣ್ಣ ಮನಸ್ಸಿನ ಸಮಾಜದ ನಡುವೆ ಕಮಲದಂತೆ ಬದುಕನ್ನು ರೂಪಿಸಿಕೊಂಡು ಮಾನವ ಸಮುದಾಯದ ಏಳಿಗೆ, ಬೆಳವಣಿಗೆ ಹಾಗೂ ಆರೋಗ್ಯಕ್ಕಾಗಿ ನಿರಂತರವಾಗಿ ತಮ್ಮನ್ನು ಮುಡುಪಾಗಿರಿಸಿದ ಈ ವ್ಯಕ್ತಿ ಜನರಿಗೆ ಹೆಚ್ಚು ಪರಿಚಯವಿಲ್ಲದವರಾಗಿದ್ದಾರೆ. ವೈದ್ಯಕೀಯ ಕ್ಷೇತ್ರದಲ್ಲಿ ಅಪೂರ್ವ ಸಾಧನೆಗಳನ್ನು ಮಾಡಿ ಅವುಗಳು ಸಾಮಾನ್ಯ ಜನರನ್ನು ಮುಟ್ಟಲು ಆದರ್ಶ ಶಿಕ್ಷಕರಾಗಿ ದುಡಿದು, ಲೇಖನಗಳನ್ನು ಬರೆದು, ಪತ್ರಿಕೆಯ ಸಂಪಾದಕರಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಆರಾಮವಾಗಿರಲು ತನ್ನನ್ನು ತೊಡಗಿಸಿಕೊಂಡ ರೀತಿ ಅನನ್ಯವಾದುದು.

ಬೆಂಗಳೂರು **ನರೇಂದ್ರ ಸಿರಕಜೆ**

'ಕೊನೆಯ ಕೊಠಡಿಯ ಹುಡುಗಿ' ಕನ್ನಡಕ್ಕೆ ರೂಪಾಂತರಿಸಿದ 'ಓ. ಹೆನ್ರಿ'ಯ ಈ ಕತೆಯ ನಿರೂಪಣೆ ಸ್ಥಳೀಯ ಹಿನ್ನೆಲೆಯಲ್ಲಿ ಚೆನ್ನಾಗಿ ಮೂಡಿಬಂದಿದೆ. ಕಥಾವಸ್ತು ಪ್ರಜ್ಞಾವಂತರ ವಿವೇಚನೆಗೆ ಗ್ರಾಸವಾಗಿದೆ.

ನಮ್ಮ ಸಾಮಾಜಿಕ ವ್ಯವಸ್ಥೆಯಿಂದಾಗಿ, ಎಲ್ಲೆಡೆ ಕೊಳಕು ವೃತ್ತಿ ಹಿಂದುಳಿದ ವರ್ಗಗಳಿಗೆ ಮೀಸಲಾಗಿದೆ ಎಂಬ ನಗ್ನಸತ್ಯವನ್ನು ಕತೆಯು ಸಾಂದರ್ಭಿಕವಾಗಿ ಬಯಲುಮಾಡುತ್ತಿದೆ. ರೇಷ್ಮೆ, ಹಾಲು ಮತ್ತು ಚಿನ್ನದ ನಾಡು ಎಂಬ ಹೆಗ್ಗಳಿಕೆಯನ್ನು ಪಡೆದ ಕೋಲಾರ ಜಿಲ್ಲೆ ಇದಕ್ಕೊಂದು ಅಪವಾದವಲ್ಲ.

ಹಿಂದುಳಿದ ಜಾತಿಗೆ ಸೇರಿದ ವ್ಯಕ್ತಿಯೊಬ್ಬನು ಮುಸಲ್ಮಾನನಾಗಿ ಮತಾಂತರಗೊಂಡವನಿರಲಿ ಅಥವಾ ಕ್ರಿಸ್ತನಾಗಿ ಇರಲಿ ತನ್ನ ಜೀವನೋಪಾಯಕ್ಕಾಗಿ ಅನುಸರಿಸುತ್ತಿದ್ದ ವೃತ್ತಿ ಅವನ ಬೆನ್ನು ಬಿಡದು. ಮತಾಂತರ ಅವನನ್ನು ಆ ಕೊಳಕು ವೃತ್ತಿಯಿಂದ ಮುಕ್ತಗೊಳಿಸಲಾರದು. ಮತಾಂತರಗೊಳ್ಳುವುದು ಸಮಾಜದಲ್ಲಿ ಸ್ಥಾನಮಾನ, ಸ್ವಾಭಿಮಾನದ ಬದುಕಿಗಾಗಿ. ಅದೇ ಅವನಿಗಿರುವ ಮುಖ್ಯ ಆಕರ್ಷಣೆ. ಹಾಗೆಂದು,




ಮತಾಂತರ ಹೊಂದಿದ ಕಾರಣಕ್ಕಾಗಿ ಅವನಿಗೆ ಸರಕಾರದಿಂದ ದೊರಕುತ್ತಿದ್ದ ಮೀಸಲಾತಿಯ ಸವಲತ್ತುಗಳಿಂದ ವಂಚಿತವಾಗಬಾರದು. ಆ ಸವಲತ್ತುಗಳು ಮುಂದುವರಿಯಬೇಕೆಂಬ ದಲಿತ ಮುಸಲ್ಮಾನರ ಮತ್ತು ಕ್ರಿಶ್ಚಿಯನ್ನರ ಬೇಡಿಕೆ ಸಮರ್ಥನೀಯವೆಂದೆನಿಸುತ್ತದೆ.

ಮಂಗಳೂರು **ಟಿ. ಸಿ. ಶ್ರೀಯಾನ್**

### ಡಾ|| ಜಿ. ಎಸ್. ಎಸ್.

ಸುವರ್ಣ ಕರ್ನಾಟಕ ರಾಜ್ಯೋತ್ಸವ ಸಂಭ್ರಮವನ್ನು ರಾಷ್ಟ್ರಕವಿ ಪ್ರಶಸ್ತಿ ವಿಜೃಂಭಿಸಿದೆ. ಮೂರನೇ ಕವಿಯಾಗಿ ಡಾ|| ಜಿ.ಎಸ್.ಎಸ್.ರವರಿಗೆ ಇದು ಅತ್ಯಂತ ಶೋಭಾಯಮಾನ ತರುವಂಥದ್ದು. ಇದನ್ನು ಕುರಿತಾದ ಸಂಪಾದಕೀಯ ಅತ್ಯಂತ ಸೂಕ್ತ ರೀತಿಯಲ್ಲಿ ಪ್ರಸ್ತುತಿಗೊಂಡಿದೆ.

''ಸುವರ್ಣ ಕರ್ನಾಟಕದ ಹೆಬ್ಬಾಗಿಲಲ್ಲಿ ಕನ್ನಡಿಗ'' ಬಸವರಾಜ ಹೂಗಾರರ ಲೇಖನಿಯಿಂದ ವಾಸ್ತವಿಕ ಪ್ರಸ್ತಾವನೆಯಾಗಿ ಹೊರಹೊಮ್ಮಿದೆ. ''ಕನ್ನಡ ಕೇವಲ ಭಾಷಾಸೂಚಕವಲ್ಲ, ದೇಶವಾಚಕ'' ಎಂದು ಹೆಮ್ಮೆಯಿಂದ ಬೀಗುತ್ತಿದ್ದರೂ 'ಜಾಗತೀಕರಣ'ದ ಜೇಡರಬಲೆಯಲ್ಲಿ ಸಿಲುಕಿ ನಲುಗಿಹೋಗುತ್ತಿರುವ ಪರಿಯನ್ನು ನಾಜೂಕಾಗಿ ವಿವರಿಸಿದ್ದಾರೆ ಲೇಖಕರು.

'ತಿಳಿವು' ಅಂಕಣದಡಿಯಲ್ಲಿ ಸತ್ಯನಾರಾಯಣ ರಾವ್ ಅಣತಿಯವರು 'ಕುವೆಂಪು - ಸೃಜನಶೀಲ ವೈಚಾರಿಕತೆ'ಯ ಮೂಲಕ ಬಹಳ ಸೊಗಸಾಗಿ ವಿಚಾರಧಾರೆಯನ್ನೇ ಪ್ರವಹಿಸಿದ್ದಾರೆ.

ಬೆಂಗಳೂರು **ನೆ. ಲ. ರಾಮಮೂರ್ತಿ**

### ಹನಿಗವನಗಳಿಗೆ ಆಹ್ವಾನ

ಕನ್ನಡ ನಾಡು, ನುಡಿ ಬಗ್ಗೆ ಹನಿಗವನ ಸಂಕಲನವನ್ನು ಸಹಕಾರಿ ತತ್ವದ ಆಧಾರದ ಮೇಲೆ ಹೊರತರಲು ಉದ್ದೇಶಿಸಿದೆ. ಒಬ್ಬರು ಎಷ್ಟು ಬೇಕಾದರೂ ಹನಿಗವನಗಳನ್ನು ಕಳುಹಿಸಬಹುದು. ಆಸಕ್ತಿಯುಳ್ಳವರು ಕನ್ನಡ ನಾಡು, ನುಡಿ, ಇತಿಹಾಸ, ಸಾಹಿತ್ಯ, ಸಂಸ್ಕೃತಿ, ಕಲೆ, ಪ್ರಕೃತಿ ಸೌಂದರ್ಯ, ಶೌರ್ಯ ಸಾಹಸಗಳನ್ನೊಳಗೊಂಡ ಎಂಟು ಸಾಲಿನ ಹನಿಗವನಗಳನ್ನು ದಿನಾಂಕ : ೨೮-೦೨-೨೦೦೭ ರೊಳಗೆ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಲು ಕೋರಲಾಗಿದೆ.

**ಕೋ. ಲ. ರಂಗನಾಥರಾವ್**
**ಗುರುರಾಜ ಪ್ರಕಾಶನ**
ನಂ, ೨೩೬, ಹನ್ನೊಂದನೇ ಮುಖ್ಯರಸ್ತೆ
ಏಜೀಸ್ ಕಾಲೋನಿ, ಅರೇಹಳ್ಳಿ
ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧



## ಮುಖಚಿತ್ರ ಕಲಾವಿದ ಥಾಮಸ್ ಗೇಯನ್ಸ್‌ಬರೊ

ಥಾಮಸ್ ಗೇಯನ್ಸ್‌ಬರೊ ಬ್ರಿಟಿಷ್ ಭಾವಚಿತ್ರಕಾರರಲ್ಲಿ ಅತ್ಯಂತ ಜನಪ್ರಿಯರಾದವರು. ೧೭೨೭ರಲ್ಲಿ ಹುಟ್ಟಿ ೧೭೮೮ರವರೆಗೂ ಬಾಳಿದ ಅವರು ಭಾವಚಿತ್ರ ರಚನೆಗಿಂತಲೂ ಪ್ರಕೃತಿಯ ಸೊಬಗನ್ನು ಚಿತ್ರಿಸಲು ಹೆಚ್ಚು ಇಷ್ಟಪಡುತ್ತಿದ್ದರು. ಅವರ ಚಿತ್ರಗಳು ಹದಿನೆಂಟನೆಯ ಶತಮಾನದ ವೈಭವವನ್ನು ಬಿಂಬಿಸುವ ಅಪೂರ್ವ ದಾಖಲೆಗಳಾಗಿವೆ.

'Fancy Pictures' ಎಂಬ ಶೀರ್ಷಿಕೆಯಲ್ಲಿ ಅವರು ರಚಿಸಿದ ಕಲಾಕೃತಿಗಳು ಅವರ ಜೀವಿತಾವಧಿಯಲ್ಲಿ ಬೆಳಕಿಗೆ ಬರದೆ ಉಳಿದವು. 'ಹೊಸತು' ವಿಶೇಷ ಸಂಚಿಕೆಯ ಮುಖಪುಟದಲ್ಲಿರುವ 'The Cottage Girl with Dog and Pitcher' ಈ ಕಲಾಕೃತಿಗಳಲ್ಲಿ ಸುಪ್ರಸಿದ್ಧವಾದದ್ದು. ಈ ವರ್ಷಕ್ಕೆ ಅವರು ಜನಿಸಿ ನೂರ ಎಂಬತ್ತು ವರ್ಷಗಳಾಗುತ್ತವೆ.

*(ಮುಖಚಿತ್ರದ ಆಯ್ಕೆ : ಸಹನ)*




*೭ನೇ ಪುಟದಿಂದ (ಸಂಪಾದಕೀಯ)*

ದೇಶವು ಆತನಿಗೆ ಶಾಂತಿ ಪುರಸ್ಕಾರ ನೀಡುತ್ತಿದೆ. ಅಶಾಂತಿಯ ಹೆಚ್ಚಳಕ್ಕೆ ಕರ್ಜೈ ಹಾಗೂ ಅಮೆರಿಕಾ ಬೇಕಾದಷ್ಟು ಕಾಣಿಕೆ ಸಲ್ಲಿಸಿದ್ದಾರೆ. ಅಂತಹ ನಾಯಕನಿಗೆ ಇಂದಿರಾ ಗಾಂಧಿ ಶಾಂತಿ ಪುರಸ್ಕಾರ! ಎಷ್ಟೋ ಪ್ರಶಸ್ತಿಗಳು ತಮ್ಮ ಗೌರವವನ್ನು ಕಳೆದುಕೊಳ್ಳುವುದು ಇಂತಹ ಆಯ್ಕೆಗಳಿಂದಾಗಿಯೇ.

* * *

ಅಮೆರಿಕಾದಲ್ಲಿ ರಿಪಬ್ಲಿಕನ್ ಪಕ್ಷದ ಸೋಲಿನಿಂದಾಗಿ ಮಹತ್ತರವಾದ ಬದಲಾವಣೆಗಳು ಶತಸ್ಸಿದ್ಧವೆಂದು ತಪ್ಪಾಗಿ ಭಾವಿಸಿದ್ದವರಿಗೆ ವಸ್ತುಸ್ಥಿತಿ ಈಗೀಗ ತಿಳಿಯುತ್ತಿದೆ. ಬುಷ್ ನೇತೃತ್ವದಲ್ಲಿ ಇರಾಕಿನಲ್ಲಿ ಜನಮರ್ದನ ಮುಂದುವರಿಯುತ್ತಿದೆ. ಪ್ರತಿದಿನವೂ ಆ ದೇಶದಿಂದ ಸುಮಾರು ಮೂರು ಸಾವಿರ ನಾಗರಿಕರು ನೆರೆರಾಜ್ಯಗಳಿಗೆ ಓಡಿಹೋಗುತ್ತಿದ್ದಾರೆ. ದಿನಂಪ್ರತಿ ಹತರಾಗುತ್ತಿರುವವರ ಸಂಖ್ಯೆಯೂ ಹೆಚ್ಚುತ್ತಿದೆ. ಅಮೆರಿಕಾ ಮತ್ತು ಬ್ರಿಟನ್ ಇರಾಕಿಗೆ ನೀಡಿರುವ ಪ್ರಜಾಪ್ರಭುತ್ವದ ಸ್ವರೂಪ ಇದರಿಂದ ಬಯಲಾಗುತ್ತಿದೆ. ಹಿಂದಿನ ರಕ್ಷಣಾ ಸಚಿವ ರಮ್ಸ್‌ಫೆಲ್ಡ್‌ನ ಜಾಗಕ್ಕೆ ಬಂದಿರುವ ಗೇಟ್ಸ್ ಎಂಬಾತ ತನ್ನ ಹಿಂದಿನ ಸಚಿವನಷ್ಟೇ ಮೂರ್ಖತನ ಮತ್ತು ಅಹಂಕಾರಗಳನ್ನು ಪ್ರದರ್ಶಿಸಿ ಇರಾಕಿನ ಉದ್ವಿಗ್ನತೆಯನ್ನು ಇನ್ನೂ ಹೆಚ್ಚಿಸುವ ದಿಕ್ಕಿನಲ್ಲಿ ಹೆಜ್ಜೆ ಹಾಕುತ್ತಿದ್ದಾನೆ. ವಿಶ್ವದ ನಾಗರಿಕ ಸಮಾಜ ಇನ್ನೂ ಗಟ್ಟಿಯಾಗಿ ಅಮೆರಿಕಾದ ಪಾತಕಗಳನ್ನು ಖಂಡಿಸಬೇಕಾಗಿದೆ. ಕೋಫಿ ಅನ್ನನ್ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿಯ ಸ್ಥಾನದಿಂದ ನಿರ್ಗಮಿಸುವಾಗ ಅಮೆರಿಕಾವನ್ನು ಟೀಕಿಸಿದಂತೆ, ಕಾಲ ಮಿಂಚಿದ ಮೇಲೆ ವಿಶ್ವವು ಎಚ್ಚೆತ್ತುಕೊಂಡರೆ ಪ್ರಯೋಜನವಾಗುವುದಿಲ್ಲ. ಅಮೆರಿಕಾವು ಇರಾಕಿನ ಆಕ್ರಮಣಕ್ಕೆ ಮುಂದಾದಾಗ ಅನ್ನನ್ ಚಕಾರವೆತ್ತಲಿಲ್ಲ, ರಾಜಿನಾಮೆ ನೀಡಲಿಲ್ಲ. ವಿಶ್ವವು ಹಾಗೆ ಮಾಡಬಾರದೆಂಬುದನ್ನು ವಿಶ್ವಸಂಸ್ಥೆಯ ನೂತನ ಕಾರ್ಯದರ್ಶಿಯಾಗಿ ಬರುವ ದಕ್ಷಿಣ ಕೊರಿಯಾದ ವಿದೇಶಾಂಗ ಸಚಿವರಾದರೂ ತಿಳಿದು ಅದರಂತೆ ನಡೆಯುತ್ತಾರೆಯೇ ಎಂಬುದನ್ನು ಕಾದುನೋಡಬೇಕಾಗಿದೆ.

* * *

೨೦೦೬ನೇ ವರ್ಷವು ಅಂತ್ಯಗೊಳ್ಳುವ ಕೆಲವೇ ವಾರಗಳ ಮುನ್ನ ನಮ್ಮ ರಾಜ್ಯದಲ್ಲಿ ಶಾಸನಸಭೆಗೆ ಒಂದು ಉಪಚುನಾವಣೆ ನಡೆದು ಕೋಲಾಹಲವನ್ನುಂಟು ಮಾಡಿತು. ಸುಮಾರು ನೂರೈವತ್ತು ಕೋಟಿ ರೂಪಾಯಿಗಳನ್ನು ರಾಜ್ಯದ ಮುಖ್ಯಮಂತ್ರಿಯವರ ಪಕ್ಷವು ಉಪಚುನಾವಣೆಗೆ ಖರ್ಚು ಮಾಡಿತೆಂದು ಅಂದಾಜು ಮಾಡಲಾಗಿದೆ. ಯಾವ ಮೌಲ್ಯಕ್ಕೂ ಬೆಲೆಯಿಲ್ಲವೆಂಬುದನ್ನು ಸ್ವತಃ ಮಾಜಿ ಪ್ರಧಾನಿ ದೇವೇಗೌಡರೇ ಎತ್ತಿ ಆಡಿದ್ದಾರೆ. ಮೌಲ್ಯವೂ ಇಲ್ಲ, ರಾಜಕೀಯ ಸಿದ್ಧಾಂತವೂ ಇಲ್ಲ, ಜನರ ಅಭಿವೃದ್ಧಿಗಾಗಿ ಕಾರ್ಯಕ್ರಮಗಳೂ ಇಲ್ಲ, ಇರುವುದೆಲ್ಲಾ ಕುಟುಂಬದ ಪೋಷಣೆ ಮತ್ತು ಉದರ ಪೋಷಣೆ. ಅಷ್ಟು ಹಣ ಸುರಿದು ಸಹ ದೇವೇಗೌಡರು ಒಂದು ಉಪಚುನಾವಣೆಯನ್ನು ಗೆಲ್ಲಲಾರದೆ ಹೋದದ್ದು ಅವರ ಅಗಾಧ ಜನಪ್ರಿಯತೆಗೆ ಸಾಕ್ಷಿ ಎನ್ನಬಹುದೆ? ಹಣದ ಮದದಿಂದ ಮಾತ್ರವೇ ಮತದಾರರ ಮನವೊಲಿಸಲು ಸಾಧ್ಯವಿಲ್ಲವೆಂದು ಸಾಬೀತುಮಾಡಿದ ಮತದಾರರು ನಿಜಕ್ಕೂ ಅಭಿನಂದನಾರ್ಹರು. ಚಾಮುಂಡೇಶ್ವರಿ ಕ್ಷೇತ್ರದ ಮತದಾರರು ನೇರವಾಗಿ ಉತ್ತರ ನೀಡಿದ್ದಾರೆ: ಕುಟುಂಬದ ಸದಸ್ಯರಿಗೆ ಬಡ್ತಿ ನೀಡುವ ಕ್ಷುದ್ರ ರಾಜಕೀಯ ಬೇಡ, ಮತೀಯ ಪಕ್ಷದೊಡನೆ ಶಾಮೀಲಾಗುವ ಠಕ್ಕು ಜಾತ್ಯತೀತ ಪಕ್ಷದ ರಾಜಕೀಯ ಬೇಡ; ಬೇಕಾಗಿರುವುದು ಹಿಂದುಳಿದ ಜನರ ಏಳಿಗೆಗೆ ಅನುವಾಗುವ ಸಾಮಾಜಿಕ-ಆರ್ಥಿಕ ನೀತಿಗಳು ಮತ್ತು ವಿಶಾಲ ತಳಹದಿಯ ಮೇಲೆ ಒಟ್ಟಾಗಿ ಸೇರುವ ಜನಪರ ಪಕ್ಷಗಳ ಐಕ್ಯತೆ. ಕಾಂಗ್ರೆಸ್ ಪಕ್ಷ ಹಾಗೂ ಶ್ರೀ ಸಿದ್ದರಾಮಯ್ಯನವರು ಇದನ್ನು ಸೂಕ್ಷ್ಮವಾಗಿ ಗಮನಿಸಬೇಕು. ರಾಜ್ಯದಲ್ಲಿ ಕಳೆದ ಒಂದೆರಡು ವರ್ಷಗಳಲ್ಲಿ ಹೊಸ ದಿಕ್ಕಿನ ಅರಸುವಿಕೆಯನ್ನಾರಂಭಿಸಿದ ಅಹಿಂದ ಮತ್ತು ಸರ್ವೋದಯ ಸಂಘಟನೆಗಳು ತಪ್ಪದೆ ಕಮ್ಯುನಿಸ್ಟ್ ಪಕ್ಷಗಳು ಹಾಗೂ ದಲಿತ ಮತ್ತು ರೈತ ಸಂಘಟನೆಗಳ ಜೊತೆಗೂಡಿ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳಿಗೆ ಪರ್ಯಾಯವನ್ನೊದಗಿಸಬೇಕು. ೨೦೦೭ರಲ್ಲಿ ಇದಕ್ಕಾಗಿ ಎಂತಹ ಪ್ರಯತ್ನಗಳು ನಡೆಯುತ್ತವೆಂದು ಕಾತುರದಿಂದ ನಿರೀಕ್ಷಿಸೋಣ.

*೧೧ನೇ ಪುಟದಿಂದ (ಪತ್ರಗಳು)*

### ದಲಿತ ಚಳವಳಿ ಮತ್ತು ಕಾನ್ಷಿರಾಂ

ಡಿಸೆಂಬರ್ ತಿಂಗಳ 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾದ 'ದಲಿತ ಚಳವಳಿ ಮತ್ತು ಕಾನ್ಷಿರಾಂ' (ದತ್ತಾತ್ರಯ ಇಕ್ಕಳಕಿ) ಎಂಬ ಲೇಖನ ಬಹಳ ಪ್ರಸ್ತುತವಾಗಿತ್ತು. ದಲಿತ ಸಂಘಟನೆಗಳು ಚದುರಿಹೋಗಿ ನುಚ್ಚುನೂರಾಗಿರುವ ಇಂದಿನ ದಿನಗಳಲ್ಲಿ ಈ ಲೇಖನ ದಲಿತ ನಾಯಕರೆಲ್ಲರೂ, ತಮ್ಮನ್ನು ತಾವು ಆತ್ಮಾವಲೋಕನ ಮಾಡಿಕೊಳ್ಳುವಂತಿತ್ತು.

ಲೇಖಕರೇ ಹೇಳಿರುವಂತೆ, ದಲಿತ ಸಮುದಾಯಗಳಿಗೆ ಮಾರ್ಗದರ್ಶನ ಮಾಡಬೇಕಾದ ದಲಿತ ನಾಯಕರು, ವಿಚಾರವಂತರು ಇಂದು ಸ್ವಾರ್ಥ ರಾಜಕೀಯ, ಇನ್ನಿಲ್ಲದ ಆಮಿಷಗಳಿಗೆ ಒಳಗಾಗಿ ಅಂಬೇಡ್ಕರ್ ವಾದವನ್ನು ಗಾಳಿಗೆ ತೂರಿದ್ದಾರೆ ಎಂಬುದನ್ನು ಮಾರ್ಮಿಕವಾಗಿ ಹಾಗೂ ನೋವಿನಿಂದ ಹೇಳಿದ್ದಾರೆ.

ಸಂಘಟನಾತ್ಮಕವಾಗಿ, ಬಲಿಷ್ಠವಾಗಿ ಬೆಳೆಯಬೇಕಾದ ದಲಿತ ಸಂಘಟನೆಗಳು ಒಬ್ಬೊಬ್ಬ ಮುಖಂಡರ ಹೆಸರಲ್ಲಿ ಜನ್ಮತಾಳುತ್ತಿರುವುದು ನಿಜಕ್ಕೂ ಶೋಚನೀಯ ಸಂಗತಿಯಾಗಿದೆ. ಒಂದು ರಾಜಕೀಯ ಪ್ರಾಮಾಣಿಕ ಶಕ್ತಿಯಾಗಿ ಬೆಳೆಯಬೇಕಾದ ದಲಿತ ಸಂಘಟನೆ ತನ್ನ ಸಂಘಟನಾ ಶಕ್ತಿಯನ್ನು ಕ್ಷೀಣಿಸಿಕೊಂಡು ದುರ್ಬಲವಾಗುವುದರ ಹಿಂದೆ ಅಗೋಚರ ಮನಸ್ಸುಗಳು ಕೆಲಸಮಾಡಿರುವ ಸಂಶಯಗಳಿವೆ.

ಈ ಎಲ್ಲಾ ಮಿತಿಗಳನ್ನು ಇನ್ನಾದರೂ ಮೀರಿ ದಲಿತ ನಾಯಕರು ಎಚ್ಚೆತ್ತುಕೊಳ್ಳಲಿ. ಸ್ವಾರ್ಥಪರ ಕೆಲಸಗಳನ್ನು ಬಿಟ್ಟು ಬೌದ್ಧಿಕವಾಗಿ, ಪ್ರಾಮಾಣಿಕವಾಗಿ ದುಡಿದಾಗ ಮಾತ್ರ ಈ ಸಂಘಟನೆಗಳು ಉಳಿಯುತ್ತವೆ. ಆ ಮೂಲಕ ಅಂಬೇಡ್ಕರ್ ಅವರಿಗೆ ನಾವು ಸಲ್ಲಿಸಬಹುದಾದ ನಿಜವಾದ ಗೌರವ ಸಲ್ಲಿಸಿದಂತಾಗುತ್ತದೆ. ಕೇವಲ ದಲಿತರಿಗೆ ಮಾತ್ರ ನಾಯಕರಾಗದ ಅಂಬೇಡ್ಕರ್ ಇಡೀ ಭಾರತೀಯರ ಆಶಾಕಿರಣವಾಗಿದ್ದಾರೆ. ಪ್ರತಿನಿತ್ಯ ಅಂಬೇಡ್ಕರ್ ಪ್ರತಿಮೆಗಳಿಗೆ ಅಪಮಾನ, ದಲಿತರ ಮೇಲೆ ದೌರ್ಜನ್ಯಗಳನ್ನು ತಡೆಯುವ ನಿಟ್ಟಿನಲ್ಲಿ ದಲಿತ ಸಂಘಟನೆಗಳು ಒಂದಾಗಬೇಕಾದ ತುರ್ತು ಇಂದಿನ ಅಗತ್ಯವಾಗಿದೆ.

**ಡಾ|| ಟಿ. ರಾಜೇಂದ್ರ ತಗಡ್ಡಿ**
ಈಟೀವಿ ಕನ್ನಡ, ರಾಮೋಜಿ ಫಿಲ್ಮ್ ಸಿಟಿ, ಹೈದರಾಬಾದ್

ವಿಶ್ವವೀಕ್ಷಣ

# ಲ್ಯಾಟಿನ್ ಅಮೆರಿಕಾದಲ್ಲಿ ಹೊಸ ಅಲೆ

**ಕ**ಳೆದ ಹನ್ನೆರಡು ತಿಂಗಳ ಅಂತಾರಾಷ್ಟ್ರೀಯ ಬೆಳವಣಿಗೆಗಳನ್ನು ಅವಲೋಕಿಸಿದಾಗ ಗಮನ ಸೆಳೆಯುವಂಥವು ಒಂದೆರಡು ಮಾತ್ರ. ಉಳಿದವೆಲ್ಲ ಯಥಾಸ್ಥಿತಿಯ ಮುಂದುವರಿಕೆ. ವಿವಾದಗ್ರಸ್ತ ಭಾರತ - ಅಮೆರಿಕಾ ನಾಗರಿಕ ಪರಮಾಣುಶಕ್ತಿ ಕುರಿತ ಒಪ್ಪಂದ, ಉತ್ತರ ಕೊರಿಯಾದಿಂದ ನಿರೀಕ್ಷಿಸಿದ್ದಂತೆ ಪರಮಾಣು ಬಾಂಬ್ ಸ್ಫೋಟ, ಇರಾನಿನ ನ್ಯೂಕ್ಲಿಯರ್ ಕಾರ್ಯಕ್ರಮದ ವಿಷಯದಲ್ಲಿ ಅಮೆರಿಕಾದ ಆರ್ಭಟ, ಇರಾಕಿನಲ್ಲಿ ತೀವ್ರಗೊಳ್ಳುತ್ತಿರುವ ಅಂತರ್ಯುದ್ಧದ ಸ್ಥಿತಿ, ಸದ್ದಾಂ ಹುಸೇನನಿಗೆ ವಿಧಿಸಿರುವ ಗಲ್ಲುಶಿಕ್ಷೆ, ಅಮೆರಿಕಾದ ಮಧ್ಯಂತರ ಚುನಾವಣೆಗಳಲ್ಲಿ ಅಧ್ಯಕ್ಷ ಜಾರ್ಜ್ ಬುಷ್‌ಗೆ ಮುಖಭಂಗ, ಕುರ್ಚಿ ತೆರವುಗೊಳಿಸುವ ಹಾದಿಯಲ್ಲಿ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್, ಮಧ್ಯಪ್ರಾಚ್ಯದಲ್ಲಿ ಇಸ್ರೇಲಿನ ಅಟ್ಟಹಾಸ ಮೊದಲಾದವುಗಳಲ್ಲಿ ಹೊಸದೇನೂ ಇಲ್ಲ. ಭಯೋತ್ಪಾದನೆ ವಿರುದ್ಧ ಸಮರ ಸಾರಿರುವ ಅಮೆರಿಕಾದ ಆಡಳಿತವರ್ಗದ ಅಹಮಿಕೆ ಹಾಗೂ ಜಗತ್ತಿನ ಮೇಲೆ ಅಧಿನಾಯಕತ್ವ ಸ್ಥಾಪಿಸುವ ಸನ್ನಾಹ ಇರುವವರೆಗೆ ಇವೆಲ್ಲ ಇದ್ದದ್ದೆ. ಇದಕ್ಕೆ ಕಡಿವಾಣ ಬೀಳುವವರೆಗೆ, ಅಂಥ ಶಕ್ತಿಯೊಂದು ಬೆಳೆಯುವವರೆಗೆ ಉಳಿಗಾಲವಿಲ್ಲ. ಒಂದು ದಶಕಕ್ಕೂ ಹೆಚ್ಚು ಕಾಲದಿಂದ ಏಕಮೇವ ಶಕ್ತಿಕೇಂದ್ರವಾಗಿ ಮೆರೆಯುತ್ತಿರುವ ಅಮೆರಿಕಾ, ತನ್ನ ಹಣಬಲ, ಸೈನ್ಯಬಲ ಉಪಯೋಗಿಸಿಕೊಂಡು ಪ್ರಪಂಚದ ಎಲ್ಲ ರಾಷ್ಟ್ರಗಳ ಮೇಲೆ ತನ್ನ ಆಣತಿಯನ್ನು ಹೊರಿಸಲು ಹೊರಟಿದೆ. ಜಾಗತೀಕರಣ, ಉದಾರೀಕರಣ, ಮುಕ್ತ ಮಾರುಕಟ್ಟೆ, ಪ್ರಜಾಪ್ರಭುತ್ವ ಮುಂತಾದ ಘೋಷಣೆಗಳ ಮೂಲಕವಾಗಿ ಅಮೆರಿಕಾ ಹಾಗೂ ಬೆರಳೆಣಿಸುವಷ್ಟು ಶ್ರೀಮಂತ ರಾಷ್ಟ್ರಗಳು ಜಗತ್ತಿನ ಬಹುತೇಕ ಬಡ ರಾಷ್ಟ್ರಗಳನ್ನು ಅಧೀನ ರಾಷ್ಟ್ರಗಳಾಗಿ ಮಾಡಿಕೊಳ್ಳಲು ಸಂಚು ಹೂಡಿವೆ. ಇದನ್ನು ಸಮರ್ಥವಾಗಿ ಎದುರಿಸಿ ಹಿಮ್ಮೆಟ್ಟಿಸಲು ಜನಬಲ, ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿರುವ ಅಭಿವೃದ್ಧಿಶೀಲ ರಾಷ್ಟ್ರಗಳು ಸಂಘಟಿತ ಪ್ರಯತ್ನ ನಡೆಸುವುದು ಅನಿವಾರ್ಯವಾಗುತ್ತಾ ಬಂದಿದೆ. ಅಂಥ ಪ್ರಯತ್ನದಿಂದ ವಿಶ್ವವಾಣಿಜ್ಯ ಸಂಸ್ಥೆಯ ಸಂಧಾನಗಳಲ್ಲಿ ಬಡರಾಷ್ಟ್ರಗಳು ಶ್ರೀಮಂತ ರಾಷ್ಟ್ರಗಳ ಹಂಚಿಕೆಗಳನ್ನು ತಡೆಗಟ್ಟುವುದರಲ್ಲಿ ಯಶಸ್ವಿಯಾಗಿವೆ. ಮುಂದಿನ ದಿನಗಳಲ್ಲಿ, ವರ್ಷಗಳಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳು ಸಂಘಟಿತ ರೀತಿಯಲ್ಲಿ ಶ್ರೀಮಂತ ರಾಷ್ಟ್ರಗಳ ಪ್ರಯತ್ನಗಳನ್ನು ಹಿಮ್ಮೆಟ್ಟಿಸಿ, ಪರ್ಯಾಯ ವ್ಯವಸ್ಥೆಯನ್ನು ರೂಪಿಸುವ ಸಾಧ್ಯತೆಗಳು ಕಾಣಿಸಿಕೊಳ್ಳುತ್ತಿವೆ.

ಮನುಕುಲದ ಇತಿಹಾಸದಲ್ಲಿ ತುಳಿತಕ್ಕೀಡಾಗಿದ್ದ ಶೋಷಿತ ಜನರು ದಬ್ಬಾಳಿಕೆ, ಶೋಷಣೆಗಳ ವಿರುದ್ಧ ಬಂಡೆದ್ದು ವ್ಯವಸ್ಥೆಯಲ್ಲಿ ಬದಲಾವಣೆಗಳಿಗೆ, ಸಂಧಾನಗಳಿಗೆ ಎಡೆಮಾಡಿಕೊಟ್ಟ ಘಟನೆಗಳನ್ನು ಕಂಡಿದ್ದೇವೆ. ಹಾಗೆಯೇ, ಇಂದು ಇಪ್ಪತ್ತೊಂದನೇ ಶತಮಾನದಲ್ಲಿ ಜನಸಾಮಾನ್ಯರು ತಮ್ಮ ಇಚ್ಛಾಶಕ್ತಿಯನ್ನು ಪ್ರದರ್ಶಿಸಿ, ಪ್ರಜಾಪ್ರಭುತ್ವ ರೀತಿಯಲ್ಲಿ ಬದಲಾವಣೆಯನ್ನು ರೂಪಿಸುವ ಹಾದಿ ತುಳಿದಿದ್ದಾರೆ. ಜನಶಕ್ತಿಯ ಮುಂದೆ ಬೇರಾವ ಶಕ್ತಿಯೂ ನಿಲ್ಲದು ಎಂಬುದನ್ನು ತೋರಿಸುತ್ತಿದ್ದಾರೆ. ಅಮೆರಿಕಾದ ಹಿತ್ತಿಲು ಎಂದೇ ಪರಿಗಣಿತವಾಗಿದ್ದ ವಸಾಹತುಶಾಹಿ ಹಾಗೂ ಸರ್ವಾಧಿಕಾರಿ ಆಡಳಿತಗಳಡಿಯಲ್ಲಿ ನೂರಾರು ವರ್ಷಗಳು ಪರಿತಪಿಸಿರುವ ಲ್ಯಾಟಿನ್ ಅಮೆರಿಕಾದಲ್ಲಿ ಇದೀಗ ಅಂತಹ ಬದಲಾವಣೆಗಳು ಸಂಭವಿಸುತ್ತಿರುವುದು ಸ್ವಾಗತಾರ್ಹ. ಈ ಭೂಭಾಗದಲ್ಲಿ ಅಮೆರಿಕಾವನ್ನು ಎದುರಿಸಿ ನಿಂತು, ಸಮಾಜವಾದಿ ಸ್ಥಾಪನೆಯತ್ತ ಹೆಜ್ಜೆ ಇರಿಸಿದ್ದ ಏಕೈಕ ರಾಷ್ಟ್ರ ಫಿಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿರುವ ಪುಟ್ಟ ರಾಷ್ಟ್ರ ಕ್ಯೂಬಾ ಮಾತ್ರವಾಗಿತ್ತು. ಈಗ ಅಮೆರಿಕಾದ ಬಹುತೇಕ ರಾಷ್ಟ್ರಗಳು ಅಮೆರಿಕಾದ ಅಧಿನಾಯಕತ್ವದ ನೀತಿಗಳನ್ನು ಧಿಕ್ಕರಿಸಿ, ತಮ್ಮ ಸ್ವಾತಂತ್ರ್ಯವನ್ನು ಎತ್ತಿಹಿಡಿದು ಪರ್ಯಾಯ ವ್ಯವಸ್ಥೆ ರೂಪಿಸುವ ಹಾದಿಯಲ್ಲಿ ಅಡಿ ಇರಿಸಿವೆ. ಈ ರಾಷ್ಟ್ರಗಳಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಮತದಾರರು ಅಮೆರಿಕಾ ಬೆಂಬಲಿತ ರಾಜಕಾರಣಿಗಳನ್ನು ತಿರಸ್ಕರಿಸಿ, ಎಡ ಪಕ್ಷಗಳ ನಾಯಕರನ್ನು ಆಯ್ಕೆ ಮಾಡಿದ್ದಾರೆ. ಒಂದು ರೀತಿಯ 'ಕೆಂಪುಕ್ರಾಂತಿ' ಈ ಭೂಭಾಗದಲ್ಲಿ ಸಂಭವಿಸುತ್ತಿದ್ದು ಅಮೆರಿಕಾದ ಆಳುವ ವರ್ಗವನ್ನು ದಿಙ್ಮೂಢಗೊಳಿಸಿದೆ. ಬ್ರೆಜಿಲ್‌ನಲ್ಲಿ ಎಡಪಂಥೀಯ ನಾಯಕ ಲೂಲಾರ ಆಯ್ಕೆಯೊಂದಿಗೆ ಪ್ರಾರಂಭವಾದ ಈ 'ಕೆಂಪುಕ್ರಾಂತಿ' ವೆನೆಜ್ಯುವೇಲಾದಿಂದ ಹಿಡಿದು ಈಕ್ವೆಡಾರ್‌ವರೆಗೆ ಕಾಡ್ಗಿಚ್ಚಿನಂತೆ ಒಂದು ಡಜನ್ ರಾಷ್ಟ್ರಗಳಿಗೆ ವ್ಯಾಪಿಸಿದೆ. ಇದು ತಾತ್ಕಾಲಿಕವಾದ್ದೇನಲ್ಲ, ದೃಢವಾದದ್ದು ಎನ್ನುವುದಕ್ಕೆ ಕಳೆದ ಒಂದು ವರ್ಷದಲ್ಲಿ ಬ್ರೆಜಿಲ್‌ನಲ್ಲಿ ಲೂಲಾ ಪುನರಾಯ್ಕೆ, ವೆನೆಜ್ಯುವೇಲಾದಲ್ಲಿ ಹ್ಯೂಗೋ ಚಾವೇಜ್ ಪುನರಾಯ್ಕೆ, ಜೊತೆಗೆ ನಿಕರಾಗುವಾದ ಸಾಂದಿನಿಸ್ತಾ ನಾಯಕ ಡೇನಿಯಲ್ ಓರ್ಟೆಗಾ, ಈಕ್ವೆಡಾರ್‌ನಲ್ಲಿ ರಾಫೆಲ್ ಕೋರಿಯ, ಬೊಲಿವಿಯದಲ್ಲಿ ಇವೊ ಮೊರಾಲೆಸ್, ಚಿಲಿಯಲ್ಲಿ ಮಿಷೆಲ್ ಬ್ಯಾಷೆಲ್, ಗಯಾನಾದಲ್ಲಿ ಭರತ್ ಜಗದೇವ ಇವರುಗಳ ಆಯ್ಕೆ ಸ್ಪಷ್ಟ ನಿದರ್ಶನ. ಇದು ಈ ರಾಷ್ಟ್ರಗಳ ಜನತೆಗೆ ದೊರೆತ ವಿಜಯವಾಗಿದೆ. ಬಡವರೇ ಅಧಿಕ ಸಂಖ್ಯೆಯಲ್ಲಿರುವ ಈ ಪ್ರದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ. ೪೦ರಷ್ಟು ಜನ ಬಡತನದ ರೇಖೆಯ ಮಟ್ಟದಿಂದ ಕೆಳಗಿದ್ದಾರೆ. ಬಹುಕಾಲದಿಂದ ಶೋಷಣೆಗೀಡಾಗಿ ಬಡತನದಲ್ಲಿರುವ ಈ ಜನತೆ ಈಗ ಜನಪರ ಆರ್ಥಿಕ ಸುಧಾರಣೆಗಳನ್ನು ಬಯಸುತ್ತಿದ್ದಾರೆ.

ಅಮೆರಿಕಾ ಲ್ಯಾಟಿನ್ ಅಮೆರಿಕಾದ ದೇಶಗಳ ನೈಸರ್ಗಿಕ ಸಂಪತ್ತನ್ನು ಸೂರೆ ಮಾಡುತ್ತ ಬಂದಿದೆ. ಬಹುರಾಷ್ಟ್ರೀಯ ಕಂಪನಿಗಳು ಈ ಪ್ರದೇಶದ ಆರ್ಥಿಕದ ಮೇಲೆ ಬಲವಾದ ಹಿಡಿತವನ್ನು ಹೊಂದಿವೆ. ಆರ್ಥಿಕಾಭಿವೃದ್ಧಿಯನ್ನು, ಬಡತನ ನಿರ್ಮೂಲವನ್ನು ಗುರಿಯಿರಿಸಿಕೊಂಡಿರುವ ಈ ಪ್ರದೇಶದ ಹೊಸ ನಾಯಕರು ತಮ್ಮ ಸಂಪನ್ಮೂಲಗಳನ್ನು ನಿಯಂತ್ರಣಕ್ಕೊಳಪಡಿಸಲು ಕ್ರಮ ಕೈಗೊಳ್ಳುತ್ತಿದ್ದಾರೆ. ಅಮೆರಿಕಾ ಈ ದೇಶಗಳ ಮೇಲೆ ಹೊರಿಸಲು ಬಯಸಿರುವ ಮುಕ್ತ ಮಾರುಕಟ್ಟೆ ವಲಯದ ಯೋಜನೆಯನ್ನು ಸ್ಪಷ್ಟವಾಗಿ ತಿರಸ್ಕರಿಸಿದ್ದಾರೆ, ಪರಸ್ಪರ ಸಹಕಾರದಿಂದ ಆರ್ಥಿಕಾಭಿವೃದ್ಧಿಯನ್ನು ಸಾಧಿಸಲು ನಿರ್ಧರಿಸಿದ್ದಾರೆ. ಸ್ವತಂತ್ರ ವಿದೇಶಾಂಗ ಧೋರಣೆಯನ್ನು ಪ್ರತಿಪಾದಿಸುತ್ತಿರುವ ಈ ರಾಷ್ಟ್ರಗಳು ಪರ್ಯಾಯ ಆರ್ಥಿಕ ವ್ಯವಸ್ಥೆ ರೂಪಿಸಲು ಯೋಜಿಸುತ್ತಿವೆ.

ಈಗಾಗಲೇ ಈ ದಿಶೆಯಲ್ಲಿ ಅವು ಕ್ರಮಗಳನ್ನು ಕೈಗೊಳ್ಳುತ್ತಿವೆ. ಕ್ಯೂಬಾದಂತೆ ವೆನೆಜ್ಯುವೇಲ, ಬೊಲಿವಿಯ ಮೊದಲಾದ ದೇಶಗಳು ದಿಟ್ಟ ಹೆಜ್ಜೆ ಇರಿಸಿವೆ.

## ಸೀಯಾರ್ಕೆ

ಅಲಿಪ್ತ ಚಳವಳಿಯನ್ನು ಸಕ್ರಿಯಗೊಳಿಸಲು ಇದು ಸಕಾಲ. ಮುಂದಿನ ಶೃಂಗ ಸಮಾವೇಶದವರೆಗೆ ನಾಯಕತ್ವ ವಹಿಸಿಕೊಂಡಿರುವ ಕ್ಯೂಬಾ ಈ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಿದೆ. ಮುಖ್ಯವಾಗಿ ಲ್ಯಾಟಿನ್ ಅಮೆರಿಕಾದ ಇತರ ಸದಸ್ಯರಾಷ್ಟ್ರಗಳು ಆಸಕ್ತಿವಹಿಸುವುದರಿಂದ ಅಲಿಪ್ತ ಚಳವಳಿ ಮತ್ತೆ ಪುನಶ್ಚೇತನಗೊಂಡು ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ತನ್ನ ಪಾತ್ರ ನಿರ್ವಹಿಸುವುದೆಂದು ನಿರೀಕ್ಷಿಸಬಹುದಾಗಿದೆ. ಹವಾನಾ ಶೃಂಗ ಸಮಾವೇಶದ ಇನ್ನೊಂದು ಮುಖ್ಯ ಅಂಶವೆಂದರೆ ಸದಸ್ಯ ರಾಷ್ಟ್ರಗಳ ನಡುವೆ ಪರಸ್ಪರ ಆರ್ಥಿಕ ಸಹಕಾರಕ್ಕೆ ನೀಡಿರುವ ಒತ್ತು. ಜಾಗತೀಕರಣದ ಹಿನ್ನೆಲೆಯಲ್ಲಿ ವಿಶ್ವವಾಣಿಜ್ಯ ಸಂಸ್ಥೆಯಲ್ಲಿ ಶ್ರೀಮಂತರಾಷ್ಟ್ರಗಳೊಂದಿಗೆ ಸಂಧಾನಗಳಲ್ಲಿ ಅಲಿಪ್ತ ರಾಷ್ಟ್ರಗಳ ಕೂಟ ಪ್ರಮುಖ ಪಾತ್ರ ವಹಿಸಬಲ್ಲದು.

ಕರೆಯಲಾಗಿದೆ. ಈ ಬಗೆಯ ವಿಚಾರ ಪ್ರಣಾಳಿಕೆಯಲ್ಲಿ ಸುಖಮಯ ಬದುಕು ಅಥವಾ ಜೀವನ ಮಟ್ಟ ಎಂಬುದನ್ನು ಉತ್ಪನ್ನಗಳ ಅನುಭೋಗದಿಂದ ಜನರು ಪಡೆದುಕೊಂಡ 'ಒಟ್ಟು ತೃಪ್ತಿ'ಯ ಗರಿಷ್ಠ ಪ್ರಮಾಣದಿಂದ ಅಳೆಯಲಾಗುತ್ತದೆ. ಈ ವಿಚಾರ ಪ್ರಣಾಳಿಕೆಯನ್ನು 'ಉತ್ಪನ್ನವಾದಿ ಮೀಮಾಂಸೆ' ಯೆಂದು ಕರೆಯಬಹುದು. ಈ ಮೀಮಾಂಸೆಯಲ್ಲಿ ಉತ್ಪನ್ನವೇ ಪ್ರಧಾನ ಮತ್ತು ಪ್ರಥಮ.

**ಭಿನ್ನಮತ**

ಆದರೆ ಮೆಹಬೂಬ್ ಉಲ್ ಹಕ್ (೧೯೯೦), ಅಮರ್ತ್ಯ ಸೇನ್ (೧೯೯೯), ಮಾರ್ತ ನುಸ್‌ಬಾಮ್ (೨೦೦೦), ಜೀನ್ ಡ್ರೇಜ್ (೨೦೦೨), ಸುಧೀರ್ ಆನಂದ್ (೧೯೯೪), ನೈಲಾ ಕಬೀರ್ (೧೯೯೪) ಮುಂತಾದವರು ವಾದಿಸುವಂತೆ ವರಮಾನವು ಅಭಿವೃದ್ಧಿಯನ್ನು ಸಾಧಿಸಿಕೊಳ್ಳಲು ಅಗತ್ಯವಾದ ಒಂದು ಸಾಧನವೇ ವಿನಾ ಅದು ಅದರ 'ಸಾಧ್ಯ'ವಲ್ಲ. ಬದುಕನ್ನು ಉತ್ತಮಪಡಿಸಿಕೊಳ್ಳಲು ಸುಖಮಯವನ್ನಾಗಿ ಮಾಡಿಕೊಳ್ಳಲು ಅಗತ್ಯವಾದ ಅನೇಕ ಸಂಗತಿಗಳಲ್ಲಿ ವರಮಾನವು ಒಂದಾಗಿದೆ. ವರಮಾನದ ಮೊತ್ತವೇ ಜನರ ಬದುಕಲ್ಲ. ಉತ್ಪನ್ನದ ಮೇಲಿನ ಹಕ್ಕುದಾರಿಕೆ-ಮಾಲೀಕತ್ವ-ಪರಮಾಧಿಕಾರ ವೊಂದರಿಂದಲೇ ಜನರು ತಮ್ಮ ಬದುಕನ್ನು ಉತ್ತಮಪಡಿಸಿಕೊಳ್ಳಲು ಸಾಧ್ಯವಿಲ್ಲ. ವರಮಾನದ ದೃಷ್ಟಿಯಿಂದ ನಮ್ಮ ರಾಜ್ಯದ ೨೭ ಜಿಲ್ಲೆಗಳ ಪೈಕಿ ಕೊಪ್ಪಳ ಮತ್ತು ಮೈಸೂರು ಜಿಲ್ಲೆಗಳ ಸ್ಥಾನ ಕ್ರಮವಾಗಿ ಹದಿನಾಲ್ಕು ಮತ್ತು ಏಳನೆಯದಾಗಿದೆ (೨೦೦೧). ಆದರೆ ಆರೋಗ್ಯ ಮತ್ತು ಶೈಕ್ಷಣಿಕ ಸಾಧನೆಗೆ ಸಂಬಂಧಿಸಿದಂತೆ ಅವುಗಳ ಸ್ಥಾನ ಅನುಕ್ರಮವಾಗಿ ೧೬ ಮತ್ತು ೨೪ ಹಾಗೂ ೧೧ ಮತ್ತು ೧೯. ವರಮಾನದ ಮಟ್ಟವು ಇಲ್ಲಿ ಉತ್ತಮವಾಗಿದ್ದರೂ ಜನರ ಬದುಕು ಸುಖಮಯವಾಗಿಲ್ಲ. ಇಲ್ಲಿ ವರಮಾನದ ವರ್ಧನೆಯು ಜನರ ಆರೋಗ್ಯವಾಗಿ, ಅಕ್ಷರ ಭಾಗ್ಯವಾಗಿ ಪರಿವರ್ತನೆಯಾಗಿಲ್ಲ. ಜನರ ಬದುಕನ್ನು ವರಮಾನದ ಮೊತ್ತಕ್ಕೆ ಸಂವಾದಿಯನ್ನಾಗಿ ಮಾಡುವುದು ಸರಿಯಲ್ಲ.

**ಮಾನವ ಅಭಿವೃದ್ಧಿ**

ಸರೀಕರ ಮುಂದೆ ತಲೆ ಎತ್ತಿ ನಿಲ್ಲುವ, ಮೈತುಂಬಾ ಬಟ್ಟೆ ಧರಿಸುವ, ಓದಲು ಬರೆಯಲು ಬರುವ, ಅಂಕಿ-ಸಂಖ್ಯೆಗಳ ಜ್ಞಾನವುಳ್ಳ, ದೀರ್ಘಕಾಲ ಆರೋಗ್ಯಕಾಯರಾಗಿ ಬದುಕುವ ಜನರ ಸಾಮರ್ಥ್ಯವನ್ನು ಅಮರ್ತ್ಯ ಸೇನ್ ಅಭಿವೃದ್ಧಿಯೆಂದು ಕರೆದಿದ್ದಾರೆ. ಮಾನವ ಹಕ್ಕುಗಳು, ಜನರ ಸ್ವಾತಂತ್ರ್ಯ, ಜನರ ಕರ್ತೃತ್ವ ಸಾಮರ್ಥ್ಯಗಳನ್ನು ಜನರ ಬದುಕು ಒಳಗೊಳ್ಳಬೇಕಾಗುತ್ತದೆ. ಉತ್ಪನ್ನದ ಅನುಭೋಗದಿಂದ ಪಡೆದ ಗರಿಷ್ಠ ತೃಪ್ತಿಯೇ ಜನರ ಸುಖಮಯ ಬದುಕಿಗೆ ಪುರಾವೆಯಾಗುವುದಿಲ್ಲ. ಬದುಕನ್ನು ಉತ್ತಮ ಪಡಿಸಿಕೊಳ್ಳಲು ಲಭ್ಯವಿರುವ ಅವಕಾಶಗಳಲ್ಲಿ ಜನರು ತಮಗೆ ಅಗತ್ಯವೆನಿಸಿದ್ದನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಮತ್ತು ಸಾಮರ್ಥ್ಯಗಳನ್ನು ಅಭಿವೃದ್ಧಿಯೆಂದು ನಿರ್ವಚಿಸಬಹುದು. ಬದುಕನ್ನು ಉತ್ತಮಪಡಿಸಿಕೊಳ್ಳಲು ಅವಕಾಶಗಳು ಹರಿದುಬರುತ್ತಿರುತ್ತವೆ. ಹೀಗೆ ಹರಿದು ಬರುತ್ತಿರುವ ಅವಕಾಶಗಳನ್ನು ಧಾರಣೆ ಮಾಡಿಕೊಳ್ಳುವ ಜನರ ಸಾಮರ್ಥ್ಯವನ್ನು ಅಭಿವೃದ್ಧಿಯೆಂದು ಕರೆಯಬಹುದು. ಜನರ ಆಯ್ಕೆಯ ವ್ಯಾಪ್ತಿಯ ವರ್ಧನೆಯೇ ಅಭಿವೃದ್ಧಿ. ಅದನ್ನು ಉತ್ಪನ್ನಕ್ಕೆ -ವರಮಾನಕ್ಕೆ ಮಾತ್ರ ಸೀಮಿತಗೊಳಿಸುವ ಅಗತ್ಯವಿಲ್ಲ. ಇದನ್ನು ನಮ್ಮ ಸಮಾಜದ ಸಂದರ್ಭದಲ್ಲಿನ ಒಂದು ನಿದರ್ಶನದಿಂದ ಸ್ಪಷ್ಟಪಡಿಸಬಹುದು.

ನಮ್ಮ ಗ್ರಾಮೀಣ ಪ್ರದೇಶದಲ್ಲಿನ ಹೋಟೆಲ್‌ಗಳಲ್ಲಿ ಕೆಲವು ನಿರ್ದಿಷ್ಟ ಸಾಮಾಜಿಕ ಗುಂಪಿನ ಜನರಿಗೆ ಪ್ರತ್ಯೇಕ ಆಸನ ವ್ಯವಸ್ಥೆ ಹಾಗೂ ತಿಂಡಿ ಪಾನೀಯ ಸರಬರಾಜು ವ್ಯವಸ್ಥೆಯಿರುತ್ತದೆ. ಗ್ರಾಮದಲ್ಲಿನ ಇತರೆ ಜನವರ್ಗಗಳಿಗೆ ಒಂದು ವ್ಯವಸ್ಥೆಯಿದ್ದರೆ ಇವರಿಗೆ ಮತ್ತೊಂದು ವ್ಯವಸ್ಥೆ. ಈ ಬಗೆಯ ತಾರತಮ್ಯ-ಅವಮಾನಗಳನ್ನು ಶಾಸನಾತ್ಮಕವಾಗಿ ನಿಷೇಧಿಸಲಾಗಿದೆ. ಆದರೆ ಅವು ಇಂದಿಗೂ ಆಚರಣೆಯಲ್ಲಿವೆ. ಇದಕ್ಕೆ ಅಪವಾದಗಳಿರಬಹುದು. ಈ ಬಗೆಯ ತಾರತಮ್ಯ ಭಾವನೆ, ಪಕ್ಷಪಾತ ಧೋರಣೆ, ಅಮಾನವೀಯ ನಡವಳಿಕೆಗಳಿಗೂ ವರಮಾನದ ಮಟ್ಟಕ್ಕೂ ಸಂಬಂಧವಿಲ್ಲ. ಉತ್ತಮ ಬದುಕು ಅಥವಾ ಸುಖಮಯ ಬದುಕು ಎಂದು ಯಾವುದನ್ನು ಗುರುತಿಸಲಾಗಿದೆಯೋ ಅದು ಮೇಲಿನ ಸಂಗತಿಯನ್ನು ಒಳಗೊಳ್ಳಬೇಕಾಗುತ್ತದೆ. ಸರೀಕರ ಮುಂದೆ ಅವಮಾನವನ್ನು ಅನುಭವಿಸಬೇಕಾದ ಸಂಗತಿಯಿಂದಾಗಿ ಅದನ್ನು ಎದುರಿಸುವ ಜನರ ಬದುಕು ವರಮಾನವೆಷ್ಟೇಯಿರಲಿ ಸುಖಮಯವಾಗಿರಲು ಸಾಧ್ಯವಿಲ್ಲ. ಸರೀಕರ ಮುಂದೆ ಸಮಾನವಾಗಿ ನಿಲ್ಲುವ ಸ್ವಾತಂತ್ರ್ಯದಿಂದ ಜನರು ಇಲ್ಲಿ ವಂಚಿತರಾಗಿದ್ದಾರೆ. ನಾಲ್ಕು ಜನರಿಗೆ ಸರಿಸಮನಾಗಿ ಊರ ಮುಂದಿನ ದೇವಾಲಯದ ಕಟ್ಟೆಯ ಮೇಲೆ ಕೂರುವ ಅವಕಾಶದಿಂದ ವಂಚಿತರಾದ ಜನರ ಬದುಕು ವರಮಾನ ಎಷ್ಟೇ ಇದ್ದರೂ ಗೌರವಯುತವಾಗಿರಲು ಸಾಧ್ಯವಿಲ್ಲ. ಇವರು ಸ್ವಾತಂತ್ರ್ಯದಿಂದ ವಂಚಿತರಾಗಿದ್ದಾರೆ. ಸ್ವಾತಂತ್ರ್ಯವನ್ನು ಜನರು 'ಏನಾಗಿದ್ದಾರೆ' ಮತ್ತು ಅವರು ಏನು 'ಮಾಡಬಲ್ಲರು' ಎಂಬ ನೆಲೆಯಿಂದ ಪರಿಭಾವಿಸಿಕೊಳ್ಳುವ ಕ್ರಮವನ್ನು ಸೇನ್ ಪ್ರತಿಪಾದಿಸುತ್ತಿದ್ದಾರೆ.

ನಿಯಂತ್ರಣಗಳಿಲ್ಲದ ಮುಕ್ತವಾದ ಸ್ಥಿತಿಯನ್ನು ಸ್ವಾತಂತ್ರ್ಯವೆಂದು ಸಾಮಾನ್ಯವಾಗಿ ನಿರ್ವಚಿಸಿಕೊಳ್ಳಲಾಗಿದೆ. ಇದು ನೇತ್ಯಾತ್ಮಕ ಸ್ವಾತಂತ್ರ್ಯ. ಅಭಿವೃದ್ಧಿಯ ದೃಷ್ಟಿಯಿಂದ ಇತ್ಯಾತ್ಮಕ ಸ್ವಾತಂತ್ರ್ಯವು ಬಹಳ ಮುಖ್ಯವಾಗುತ್ತದೆ. ಹಸಿವಿನಿಂದ ಬಿಡುಗಡೆ ಪಡೆಯಲು ಜನರು ಸಮರ್ಥರಾಗಿದ್ದಾರೆಯೆ? ರೋಗರುಜಿನಗಳಿಂದ ಮುಕ್ತರಾಗಿ ದೀರ್ಘಕಾಲ ಮತ್ತು ಆರೋಗ್ಯಕಾಯರಾಗಿ ಬದುಕುವ ಸಾಮರ್ಥ್ಯ ಜನರಿಗಿದೆಯೆ? ಮನೆಗೆಲಸವನ್ನು ಗಂಡನ ಜೊತೆ ಹಂಚಿಕೊಂಡು ಬದುಕು ಮಾಡುವ ಸಾಮರ್ಥ್ಯ ಹೆಂಡತಿಗಿದೆಯೆ? ಸಾರ್ವಜನಿಕ ಸ್ಥಾನಗಳಿಗೆ ಪ್ರವೇಶ ಪಡೆಯಲು ಜನರು ಸ್ವಾತಂತ್ರ್ಯ ಪಡೆದಿದ್ದಾರೆಯೇ? ಸ್ವಾತಂತ್ರ್ಯವನ್ನು ಅಭಿವೃದ್ಧಿಯೆಂದು (೧೯೯೯) ಸೇನ್ ನಿರ್ವಚಿಸಿದಾಗ ಮೇಲಿನ ಅರ್ಥದಲ್ಲಿ ಅವರು ಅದನ್ನು ಪರಿಭಾವಿಸಿಕೊಂಡಿದ್ದಾರೆ.

## ವಿಕೋಪ

ಆಕಾಶದ ಹೊದಿಕೆ ಹೊದ್ದು
ಕಾಲು ಚಾಚಿ ಮಲಗಿದೆ ಭುವಿ
ಮಗ್ಗುಲ ಬದಲಾಯಿಸಿದರೂ,
ಕಂಪ ಪ್ರಳಯ, ಸೊಂಟ ಮುರಿತ

**ವಾಸುದೇವ ನಾಡಿಗ್**
ಜವಹಾರ ನವೋದಯ ವಿದ್ಯಾಲಯ
ವಾನಿಗವಲೆ - ೫೬೩೧೨೫

**ಜನರ ಕರ್ತೃತ್ವದ ಪಾತ್ರ**

ಜನರನ್ನು ಮತ್ತು ಅವರ ಬೌದ್ಧಿಕ ಹಾಗೂ ದೈಹಿಕ ಶಕ್ತಿ- ಸಾಮರ್ಥ್ಯಗಳನ್ನು ಕೇವಲ ಸಂಪನ್ಮೂಲವನ್ನಾಗಿ ನೋಡುವ ಕ್ರಮವೊಂದಿದೆ. ಮಾನವ ಸಂಪನ್ಮೂಲವೆಂಬ ನುಡಿ ಇದನ್ನು ಸರಿಯಾಗಿ ಸೂಚಿಸುತ್ತದೆ. ಜನರನ್ನು ಕೇವಲ ಫಲಾನುಭವಿಗಳನ್ನಾಗಿ ನೋಡುವ ಮಾದರಿಯೂ ಇದೆ. ಸಾಂಪ್ರದಾಯಿಕ ಅಭಿವೃದ್ಧಿ ಸಿದ್ಧಾಂತಗಳಲ್ಲಿ 'ಮಾನವ ಸಂಪನ್ಮೂಲ' - 'ಮಾನವ ಬಂಡವಾಳ'ವೆಂಬ ನುಡಿಗಟ್ಟುಗಳು ಪ್ರಚಲಿತದಲ್ಲಿವೆ. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಂಪನ್ಮೂಲ-ಬಂಡವಾಳದ ಪಾತ್ರ ನಿರ್ಣಾಯಕವಾದುದಾಗಿದೆ. ಅಕ್ಷರ ಸಂಪತ್ತು, ಆರೋಗ್ಯ ಭಾಗ್ಯ, ಆಹಾರ ಭದ್ರತೆ, ಆಶ್ರಯ ಮುಂತಾದವುಗಳನ್ನು ಅಭಿವೃದ್ಧಿಯ ಸಂಪನ್ಮೂಲಗಳೆಂದು ಗುರುತಿಸುವುದು ರೂಢಿಯಲ್ಲಿದೆ. ಈ ಸಂಪನ್ಮೂಲ-ಬಂಡವಾಳದ ಮೇಲೆ ಅಧಿಕಾರವನ್ನು ಹಕ್ಕುದಾರಿಕೆಯನ್ನು ಸಾಧಿಸಿಕೊಳ್ಳುವುದರಿಂದ ಜನರ ಬದುಕು ಉತ್ತಮಗೊಳ್ಳುತ್ತದೆ. ಇದನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ಈ ಬಗೆಯಲ್ಲಿ ಸಂಪನ್ಮೂಲ-ಬಂಡವಾಳವನ್ನು ಹೊಂದುವುದರಿಂದ ಜನರ ಉತ್ಪಾದನಾ ಕ್ಷಮತೆ ಉತ್ತಮಗೊಳ್ಳುತ್ತದೆ.

ಜನರನ್ನು ಹೀಗೆ ಸಂಪನ್ಮೂಲ-ಬಂಡವಾಳವನ್ನಾಗಿ ನೋಡುವುದರ ಜೊತೆಗೆ ಅವರನ್ನು ಬದಲಾವಣೆಯ ಕರ್ತೃಗಳನ್ನಾಗಿ ನೋಡುವ ಕ್ರಮವನ್ನು ಅಮರ್ತ್ಯ ಸೇನ್ ಒತ್ತಿ ಹೇಳುತ್ತಿದ್ದಾರೆ. ಜನರ ಕರ್ತೃತ್ವದ ಪಾತ್ರವನ್ನು ಅಭಿವೃದ್ಧಿಯು ಒಳಗೊಳ್ಳಬೇಕು ಎಂಬುದು ಸೇನ್‌ರ ಅಭಿಮತವಾಗಿದೆ. ಜನರ ಉತ್ಪಾದನಾ ಕ್ಷಮತೆ ಉತ್ತಮಗೊಂಡಿರುವುದೇ ಸುಖಮಯ ಬದುಕಿನ ಸೂಚಿಯಾಗುವುದಿಲ್ಲ. ಸುಖಮಯ ಬದುಕು ಎಂಬುದು ಉತ್ಪನ್ನವಾದಿ ನೆಲೆಗಿಂತ ವಿಸ್ತೃತವಾದುದಾಗಿದೆ. ಸಮಾನತೆ, ಸ್ವಾತಂತ್ರ್ಯ, ಹಕ್ಕುಗಳು ಇಲ್ಲಿ ಮುಖ್ಯವಾಗುತ್ತವೆ. ಈ ಹಕ್ಕುಗಳನ್ನು - ಸ್ವಾತಂತ್ರ್ಯವನ್ನು ಪಡೆದುಕೊಳ್ಳಲು, ಸಮಾನತೆಯನ್ನು ಸಾಧಿಸಿಕೊಳ್ಳಲು ಜನರು ನಡೆಸುವ ಪ್ರಯತ್ನಗಳು ಇಲ್ಲಿ ಮುಖ್ಯವಾಗುತ್ತವೆ. ಈ ಬಗೆಯ ಪ್ರಯತ್ನಗಳು ವ್ಯಕ್ತಿಗತವಾಗಿರಬಹುದು ಅಥವಾ ಸಂಘಟಿತ ಸ್ವರೂಪದಲ್ಲಿರಬಹುದು. ಜನರ ಬದುಕಿನ ಸ್ಥಿತಿಗತಿ ಉತ್ತಮವಾಗುವ ಪರಿ ಒಂದಾದರೆ ಜನರು ತಮ್ಮ ಬದುಕಿನ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳುವ ದಿಶೆಯಲ್ಲಿ ಪ್ರಯತ್ನಿಸಬಲ್ಲರು ಎಂಬುದು ಇನ್ನೊಂದು ಬಗೆ. ಜನರು ತಮ್ಮ ಬದುಕಿನ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುವ, ಅಸ್ತಿತ್ವದಲ್ಲಿರುವ ಸ್ಥಿತಿಗತಿಗಳನ್ನು ಬದಲಾವಣೆ ಮಾಡಲು ಏನು ಮಾಡಬೇಕು ಎಂಬುದನ್ನು ಅರಿತುಕೊಳ್ಳಲು ಪ್ರಯತ್ನಿಸುವ, ತಮ್ಮ ಹಿತಾಸಕ್ತಿಗಳು ಯಾವುವು ಎಂಬುದನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುವ ಪರಿಯನ್ನು ಸೇನ್ 'ಕರ್ತೃತ್ವ'ವೆಂದು ಕರೆದಿದ್ದಾರೆ. ನಾವೇಕೆ ಬಡವರಾಗಿದ್ದೇವೆ? ನಾವೇಕೆ ಅನಕ್ಷರಸ್ಥರಾಗಿದ್ದೇವೆ? ನಮಗೇಕೆ ಸಮಾಜದಲ್ಲಿ ಎಲ್ಲ ಕಡೆ ಮುಕ್ತ ಪ್ರವೇಶವಿಲ್ಲ? ನಮ್ಮ ಕಾರ್ಯಕ್ಷೇತ್ರವೇಕೆ ಗೃಹವಾರ್ತೆಗೆ ಮಾತ್ರ ಸೀಮಿತವಾಗಿರಬೇಕು? ನಮಗೇಕೆ ಆಸ್ತಿ ಪಾಸ್ತಿಯಿಲ್ಲ?– ಮುಂತಾದ ಪ್ರಶ್ನೆಗಳನ್ನು ರೂಪಿಸಿಕೊಳ್ಳುವ, ಕೇಳಿಕೊಳ್ಳುವ ಹಾಗೂ ಕೇಳುವ ಸ್ವಾತಂತ್ರ್ಯ ಹಾಗೂ ಆ ದಿಶೆಯಲ್ಲಿ ನಡೆಸುವ ಪ್ರಯತ್ನಗಳು ಸಾಮಾಜಿಕ ಬದಲಾವಣೆ ದೃಷ್ಟಿಯಿಂದ ತುಂಬಾ ಮುಖ್ಯವಾಗಿರುತ್ತವೆ. ಜನರ ಕರ್ತೃತ್ವದ ಪಾತ್ರವು ಅಭಿವೃದ್ಧಿಯಲ್ಲಿ ನಿರ್ಣಾಯಕವಾದುದಾಗಿದೆ.

ಸಾಕ್ಷರತೆ-ಶಿಕ್ಷಣದಿಂದ ಜನನ ಪ್ರಮಾಣವನ್ನು, ಶಿಶು ಮರಣ ಪ್ರಮಾಣವನ್ನು ಕಡಿಮೆ ಮಾಡಬಹುದೆಂಬುದು ಅಧ್ಯಯನಗಳಿಂದ ದೃಢಪಟ್ಟಿದೆ. ಆದರೆ ಈ ವಿಷಯಗಳಿಗೆ ಸಂಬಂಧಿಸಿದಂತೆ ಮಹಿಳೆಯರ ಸಾಕ್ಷರತೆ-ಶಿಕ್ಷಣದ ಸುಧಾರಣೆಯಿಂದ ಜನನ ಪ್ರಮಾಣವನ್ನು ಹಾಗೂ ಶಿಶುಮರಣ ಪ್ರಮಾಣವನ್ನು ತೀವ್ರವಾಗಿ ಕಡಿಮೆ ಮಾಡಬಹುದು ಎಂಬುದು ಜೀನ್ ಡ್ರೀಜ್ ಅಧ್ಯಯನದಿಂದ ತಿಳಿದುಬಂದಿದೆ. ಮಹಿಳೆಯರಿಗೆ ಹೆಚ್ಚಿನ ಸ್ವಾತಂತ್ರ್ಯ ನೀಡುವುದರಿಂದ ಹಾಗೂ ಅವರ ಧಾರಣಾ ಸಾಮರ್ಥ್ಯವನ್ನು ವರ್ಧಿಸುವುದರಿಂದ ಉಂಟಾಗುವ ಸುಧಾರಣೆಯು ಆರ್ಥಿಕ ಅಭಿವೃದ್ಧಿಯಿಂದ ಉಂಟಾಗುವ ಸುಧಾರಣೆಗಿಂತ ಅಧಿಕತಮವಾಗಿರುತ್ತದೆ. ಹೀಗೆ ಮಹಿಳೆಯರ-ಒಟ್ಟಾರೆ ಜನರ ಕರ್ತೃತ್ವ ಸಾಮರ್ಥ್ಯದ ವರ್ಧನೆ, ಕರ್ತೃತ್ವದ ಸ್ವಾತಂತ್ರ್ಯ ಅಭಿವೃದ್ಧಿಯಲ್ಲಿ ಹಾಗೂ ಸಾಮಾಜಿಕ ಬದಲಾವಣೆ ಪ್ರಕ್ರಿಯೆಯಲ್ಲಿ ಮಹತ್ತರ ಪಾತ್ರವಹಿಸುತ್ತವೆ.

**ಧಾರಣಾ ಸಾಮರ್ಥ್ಯ**

ಈಗಾಗಲೇ ತಿಳಿಸಿರುವಂತೆ ವರಮಾನದ ಕೊರತೆಯಿಂದ ಬಡತನವನ್ನು ನೋಡುವ ಬಗೆಯು ಒಂದಾದರೆ ಅದನ್ನು ಧಾರಣಾ ಸಾಮರ್ಥ್ಯದ ಕೊರತೆಯ ನೆಲೆಯಿಂದ ನೋಡುವುದು ಇನ್ನೊಂದು ಬಗೆ. ಎರಡನೆಯ ದೃಷ್ಟಿಕೋನವು ಮೊದಲನೆಯ ದೃಷ್ಟಿಕೋನಕ್ಕಿಂತ ಹೆಚ್ಚು ಉಪಯುಕ್ತವಾದುದು. ಹೀಗೆ ಧಾರಣಾ ಸಾಮರ್ಥ್ಯದ ಕೊರತೆಯ ನೆಲೆಯಿಂದ ಬಡತನವನ್ನು ಪರಿಭಾವಿಸಿಕೊಳ್ಳುವುದರಿಂದ ಮೊದಲನೆಯದಾಗಿ ಇದರಿಂದ ಬಡತನದ ಪ್ರಮಾಣ ಹಾಗೂ ತೀವ್ರತೆಯನ್ನು ಅರ್ಥ ಮಾಡಿಕೊಳ್ಳಬಹುದು ಮತ್ತು ಎರಡನೆಯದಾಗಿ ಬಡತನಕ್ಕೆ ಕಾರಣವಾದ ಪ್ರಕ್ರಿಯೆಯನ್ನು ಅರಿತುಕೊಳ್ಳಬಹುದು. ನೀತಿ-ನಿರೂಪಣೆ ದೃಷ್ಟಿಯಿಂದ ಇದು ತುಂಬಾ ಮುಖ್ಯವಾದುದಾಗಿದೆ. ಬಡತನವನ್ನು ವರಮಾನಕ್ಕೆ ಅಂದರೆ ಆರ್ಥಿಕ ಸಂಗತಿಗೆ ಮಾತ್ರ ಮೊದಲನೆಯ ಧಾರೆಯಲ್ಲಿ ಸೀಮಿತಗೊಳಿಸಿದ್ದರೆ ಎರಡನೆಯ ಧಾರೆಯಲ್ಲಿ ಅದನ್ನು ಸಾಮಾಜಿಕ ನ್ಯಾಯದ ನೆಲೆಯಿಂದ ವಿಸ್ತೃತವಾದ ರೀತಿಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ.

ವರಮಾನದ ವರ್ಧನೆಯಿಂದ ಉತ್ಪಾದನಾ ಕ್ಷಮತೆಯು ಉತ್ತಮಗೊಳ್ಳುತ್ತದೆ ಎಂಬುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ. ಆದರೆ ಧಾರಣಾ ಸಾಮರ್ಥ್ಯದ ವರ್ಧನೆಯಿಂದ ಜನರ ಉತ್ಪಾದನಾ ಕ್ಷಮತೆಯು ವರ್ಧಿಸುತ್ತದೆ ಮತ್ತು ಜನರ ವರಮಾನ ಸಂಪಾದಿಸುವ ಸಾಮರ್ಥ್ಯವು ಅಧಿಕಗೊಳ್ಳುತ್ತದೆ. ಹೀಗೆ ಧಾರಣಾ ಸಾಮರ್ಥ್ಯದ ವರ್ಧನೆಯಿಂದ ವರಮಾನ ಸಂಬಂಧಿ ಬಡತನವನ್ನು ನಿವಾರಿಸಿಕೊಳ್ಳಬಹುದು. ಅಕ್ಷರ ಸಂಪತ್ತು, ಆರೋಗ್ಯ ಭಾಗ್ಯ, ಶಿಕ್ಷಣ, ಆಹಾರ ಭದ್ರತೆ, ತಾಂತ್ರಿಕ ತರಬೇತಿ ಮುಂತಾದವು ಜನರ ಬದುಕನ್ನು ಉತ್ತಮಪಡಿಸುತ್ತವೆ ಮತ್ತು ಅದಕ್ಕಿಂತ ಮುಖ್ಯವಾಗಿ ಜನರ ವರಮಾನಗಳಿಸುವ ಸಾಮರ್ಥ್ಯವನ್ನು ಅವು ವರ್ಧಿಸುತ್ತವೆ ಹಾಗೂ ಲಭ್ಯವಿರುವ ಅವಕಾಶಗಳಲ್ಲಿ ಬಯಸಿದ್ದನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯದ ವ್ಯಾಪ್ತಿಯನ್ನು ಅವು ವಿಸ್ತರಿಸುತ್ತವೆ.

ಹೀಗೆ ಅಭಿವೃದ್ಧಿಯನ್ನು, ಬಡತನವನ್ನು ಭಿನ್ನ ನೆಲೆಯಿಂದ ನೋಡುವ ಕ್ರಮವೊಂದನ್ನು ಮೆಹಬೂಬ್ ಉಲ್ ಹಕ್ ಹಾಗೂ ಅಮರ್ತ್ಯ ಸೇನ್ ರೂಪಿಸಿದ್ದಾರೆ. ಈ ಬಗೆಯ ವಿಚಾರ ಪ್ರಣಾಳಿಕೆಯನ್ನು 'ಮಾನವ ಅಭಿವೃದ್ಧಿ'ಯೆಂದು ಕರೆಯಲಾಗಿದೆ. ಅಕ್ಷರ, ಆರೋಗ್ಯ, ಆಹಾರ, ಆಶ್ರಯ ಮುಂತಾದ ಸಂಗತಿಗಳನ್ನು ಎರಡು ವಿಭಿನ್ನ ನೆಲೆಗಳಿಂದ ನೋಡುವ ಪರಿಯನ್ನು ಇವರಿಬ್ಬರೂ ಒತ್ತಿ ಹೇಳುತ್ತಿದ್ದಾರೆ. ಇವೆಲ್ಲವೂ ಜನರ ಉತ್ಪಾದನಾ ಕ್ಷಮತೆಯನ್ನು, ಗಳಿಕೆಯ ಸಾಮರ್ಥ್ಯವನ್ನು ಹಾಗೂ ಸಂಪನ್ಮೂಲಗಳ ಮೇಲಿನ ಹಕ್ಕುದಾರಿಕೆಯನ್ನು ವರ್ಧಿಸುತ್ತವೆ. ಇದು ಒಂದು ನೆಲೆ. ಇದಕ್ಕಿಂತ ಮುಖ್ಯವಾಗಿ ಅವುಗಳಿಗೆ ತಮ್ಮದೇ ಆದ ಮಹತ್ವವಿದೆ. ಅವು ಜನರಿಗೆ ವ್ಯಕ್ತಿತ್ವವನ್ನು, ಅನನ್ಯತೆಯನ್ನು ಒದಗಿಸುತ್ತವೆ. ಅವುಗಳನ್ನು ಸಾಧನಗಳನ್ನಾಗಿ ನೋಡುವುದರ ಜೊತೆಗೆ ಅಭಿವೃದ್ಧಿಯ ಅಂತಸ್ಥಗುಣಗಳನ್ನಾಗಿ ನೋಡುವ ವಿಚಾರವನ್ನು ಇಲ್ಲಿ ಹೇಳಲಾಗಿದೆ. ಕುಟುಂಬವೊಂದರ ವರಮಾನದ ಮಟ್ಟವು ಆ ಕುಟುಂಬದ ಮಹಿಳೆಯೊಬ್ಬಳು ಮನೆಯ ಹೊರಗೆ ದುಡಿಮೆ ಮಾಡುವುದರಿಂದ ಉತ್ತಮಗೊಳ್ಳುತ್ತದೆ. ವರಮಾನದ ವರ್ಧನೆಗೆ ಮಹಿಳೆಯ ಮನೆಯ ಹೊರಗಿನ ದುಡಿಮೆಯು ಒಂದು ಸಾಧನ. ಇದಕ್ಕಿಂತ ಮುಖ್ಯವಾಗಿ ಮನೆಯ ಹೊರಗೆ ಹೆಣ್ಣು ದುಡಿಯುವುದರ ಮಹತ್ವವೆಲ್ಲಿದೆಯೆಂದರೆ ಅದು ಆಕೆಗೆ ವ್ಯಕ್ತಿತ್ವವೊಂದನ್ನು ನೀಡುತ್ತದೆ. ಅದು ಅವಳ ಸ್ವಾತಂತ್ರ್ಯದ ವ್ಯಾಪ್ತಿಯನ್ನು ವಿಸ್ತರಿಸುತ್ತದೆ. ಆಕೆಯ ಅರಿವಿನ ಪರಿಧಿಯನ್ನು ಅದು ವಿಸ್ತರಿಸುತ್ತದೆ. ತನ್ನ ದುಡಿಮೆಯ ಮಹತ್ವದ ಅರಿವು ಅವಳಿಗುಂಟಾಗುತ್ತದೆ.

ಸಾಂಪ್ರದಾಯಿಕ ವಿಚಾರ ಪ್ರಣಾಳಿಕೆಯಲ್ಲಿನ 'ಸಾಧನವಾದಿ' ನೆಲೆಯನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ಆದರೆ ಎರಡನೆಯ ದೃಷ್ಟಿಕೋನವೂ ತುಂಬಾ ಮಹತ್ವವಾದುದಾಗಿದೆ. ಮಹಿಳೆಯರ ಮನೆಯೊಳಗಿನ ಹಾಗೂ ಮನೆಯ ಹೊರಗಿನ ದುಡಿಮೆಯು ಆಕೆಯ ಮಕ್ಕಳ, ಗಂಡನ, ಕುಟುಂಬದ ಔನ್ನತ್ಯದಲ್ಲಿ ಲೀನವಾಗಿ ಹೋಗಿ ಬಿಡಬಾರದು. ಅದು ಮಹಿಳೆಗೆ ಒಂದು ವ್ಯಕ್ತಿತ್ವವನ್ನು ನೀಡುತ್ತದೆ. ಅದು ಮಹಿಳೆಯ ಕರ್ತೃತ್ವ ಪಾತ್ರದ ನಿರ್ವಹಣೆಗೆ ಅವಕಾಶ ಮಾಡಿಕೊಡುತ್ತದೆ. ಹೀಗೆ ಅಭಿವೃದ್ಧಿಯನ್ನು ಕುರಿತ ಧಾರಣಾ ಸಾಮರ್ಥ್ಯ ಸಂಬಂಧಿ ದೃಷ್ಟಿಕೋನವು ಸಾಂಪ್ರದಾಯಿಕ ವರಮಾನ

ಸಂಬಂಧಿ ದೃಷ್ಟಿಕೋನಕ್ಕಿಂತ ವಿಸ್ತೃತವಾದುದಾಗಿದೆ ಮತ್ತು ನೀತಿ - ನಿರೂಪಣೆಯ ದೃಷ್ಟಿಯಿಂದ ಹೆಚ್ಚು ಉಪಯುಕ್ತವಾದುದಾಗಿದೆ.

**ಲಿಂಗ ನಿರಪೇಕ್ಷತೆ**

ಸಾಂಪ್ರದಾಯಿಕ ಅಭಿವೃದ್ಧಿ ವಿಚಾರ ಪ್ರಣಾಳಿಕೆಯು ಲಿಂಗ ನಿರಪೇಕ್ಷವಾದುದಾಗಿದೆ. ಅಲ್ಲಿ ಲಿಂಗ ಸಂಬಂಧಿ ನೆಲೆಗಳಿಗೆ ಅವಕಾಶವಿಲ್ಲವಾಗಿದೆ. ಆರ್ಥಿಕ ಅಭಿವೃದ್ಧಿ ಕುರಿತ ಅಧಿಕೃತ ಸಿದ್ಧಾಂತಗಳಲ್ಲಿ ಮಹಿಳೆಯರ ಸ್ಥಾನಮಾನವನ್ನು ಒಂದು ಪ್ರಮುಖ ಸಂಗತಿಯನ್ನಾಗಿ ಪ್ರತ್ಯೇಕವಾಗಿ ಪರಿಗಣಿಸುವುದರ ಬಗ್ಗೆ ತೀವ್ರ ಹಿಂಜರಿಕೆಯಿದೆ ಎಂದು ಅಮರ್ತ್ಯ ಸೇನ್ ತಮ್ಮ ಒಂದು ಪ್ರಸಿದ್ಧ ಪ್ರಬಂಧದಲ್ಲಿ ಬರೆದಿದ್ದಾರೆ (೧೯೯೦). ಸಮಾಜದಲ್ಲಿ ಅನೇಕ ಬಗೆಯ ಅಸಮಾನತೆಗಳಿರುತ್ತವೆ. ಆದರೆ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಅವುಗಳನ್ನು ಕೇವಲ ವರಮಾನದ - ವರ್ಗದ ನೆಲೆಗೆ ಸೀಮಿತಗೊಳಿಸಿರುವುದು ಕಂಡು ಬರುತ್ತವೆ. ಅಭಿವೃದ್ಧಿಗೆ ಸಂಬಂಧಿಸಿದಂತೆ ಲಿಂಗ ಸಂಬಂಧಗಳನ್ನು ಕುರಿತ ಚರ್ಚೆಯನ್ನು 'ವಿಘಟನಾಕಾರಿ'ಯೆಂದು ಟೀಕಿಸುವುದು ಕಂಡುಬರುತ್ತದೆ. ವಾಸ್ತವವಾಗಿ ವರ್ಗ - ಜಾತಿ - ವೃತ್ತಿ ಮುಂತಾದ ಸಂಗತಿಗಳಿಗೆ ಸಂಬಂಧಿಸಿದ ಅಸಮಾನತೆ ಕುರಿತ ಚರ್ಚೆಗೆ ಲಿಂಗ ಸಂಬಂಧಿ ಅಸಮಾನತೆ ಕುರಿತ ಚರ್ಚೆಯು ಪೂರಕವಾಗಿರುತ್ತದೆ ವಿನಾ ಪರ್ಯಾಯವಾಗಿ ಇರುವುದಿಲ್ಲವೆಂಬುದನ್ನು ಸೇನ್ ತೋರಿಸಿ ಕೊಟ್ಟಿದ್ದಾರೆ. ಅಸಮಾನತೆಯ ಬಹುರೂಪಿ ನೆಲೆಗಳ ಬಗ್ಗೆ ಸೇನ್ ತುಂಬಾ ಬರೆದಿದ್ದಾರೆ.

ಅಭಿವೃದ್ಧಿ ಕುರಿತ ಚರ್ಚೆಗಳಲ್ಲಿ ಲಿಂಗ ಸಂಬಂಧಗಳಿಗೆ ಪ್ರಮುಖ ಸ್ಥಾನ ನೀಡಬೇಕು ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಸೇನ್ ಒಂದು ಮುಖ್ಯ ಪ್ರಶ್ನೆ ಎತ್ತಿದ್ದಾರೆ. ವೈದ್ಯಶಾಸ್ತ್ರದ ಪ್ರಕಾರ ಹಾಗೂ ಅದಕ್ಕೆ ಸಂಬಂಧಿಸಿದ ಪುರಾವೆಗಳು ತೋರಿಸುತ್ತಿರುವಂತೆ ಸಮಾಜದಲ್ಲಿ ಮಹಿಳೆಯರಿಗೆ ಮತ್ತು ಪುರುಷರಿಗೆ ಅವಕಾಶಗಳು ಸಮಾನವಾಗಿದ್ದ ಪಕ್ಷದಲ್ಲಿ ಮಹಿಳೆಯರ ಬದುಕುಳಿಯುವ ಸಾಧ್ಯತೆ ಹಾಗೂ ಜೀವನಾಯುಷ್ಯಗಳು ಪುರುಷರಿಗಿಂತ ಅಧಿಕವಾಗಿ ಇರುತ್ತದೆ. ಆದರೆ ವಾಸ್ತವ ಸ್ಥಿತಿ ಭಾರತದಲ್ಲಿ, ಅದರಂತೆ ಕರ್ನಾಟಕದಲ್ಲಿ ಅದಕ್ಕಿಂತ ಭಿನ್ನವಾಗಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ೩೫ನೆಯ ವರ್ಷದವರೆಗೆ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಿದೆ. ಶಿಶುಮರಣ ಹಾಗೂ ಮಕ್ಕಳ ಮರಣಗಳಿಗೆ ಸಂಬಂಧಿಸಿದಂತೆಯೂ ಲಿಂಗತಾರತಮ್ಯ ಕಂಡುಬರುತ್ತದೆ. ಇದರ ಪರಿಣಾಮವಾಗಿ ಲಿಂಗ ಅನುಪಾತವು ಮಹಿಳೆಯರಿಗೆ ಪ್ರತಿಕೂಲವಾಗಿ ಪರಿಣಮಿಸಿದೆ. ಭಾರತದಲ್ಲಿ ಲಿಂಗ ಅನುಪಾತವು ೯೩೩ ರಷ್ಟಿದ್ದರೆ ಕರ್ನಾಟಕದಲ್ಲಿ ಅದು ೯೬೪ರಷ್ಟಿದೆ. ಅಂದರೆ ೨೦೦೧ರಲ್ಲಿ ಅಖಿಲ ಭಾರತ ಮಟ್ಟದಲ್ಲಿ ೩೫೫.೩೯ ಲಕ್ಷ ಮಹಿಳೆಯರು ಕಾಣೆಯಾಗಿದ್ದರೆ ಕರ್ನಾಟಕದಲ್ಲಿ ೯.೭೯ ಲಕ್ಷ ಮಹಿಳೆಯರು ಕಾಣೆಯಾಗಿದ್ದಾರೆ. ಇದಕ್ಕಿಂತ ಆತಂಕಕಾರಿ ಸಂಗತಿಯೆಂದರೆ ೦-೬ರ ವಯೋಮಾನದ ಮಕ್ಕಳಿಗೆ ಸಂಬಂಧಿಸಿದಂತೆ ಲಿಂಗ ಅನುಪಾತವು ೧೯೯೧ರಲ್ಲಿ ಅಖಿಲ ಭಾರತ ಮಟ್ಟದಲ್ಲಿ ೯೪೫ರಷ್ಟಿದ್ದುದು ೨೦೦೧ರಲ್ಲಿ ೯೨೭ಕ್ಕೆ ಕುಸಿದಿದೆ. ಕರ್ನಾಟಕದಲ್ಲಿ ಅದು ೯೬೦ರಿಂದ ೯೪೯ಕ್ಕೆ ಇಳಿದಿದೆ. ಇದನ್ನು ಸೇನ್ ಲಿಂಗತಾರತಮ್ಯಯದ ಸೂಚಿಯನ್ನಾಗಿ ಬಳಸುತ್ತಾರೆ. ಲಿಂಗ ಅನುಪಾತದಲ್ಲಿನ ಕೊರತೆಯನ್ನು ಅವರು 'ಕಾಣೆಯಾದ ಮಹಿಳೆಯರು' ಎಂದು ಕರೆದಿದ್ದಾರೆ. ಇಂತಹ ವಿಕೃತಿಗಳನ್ನು ಅರ್ಥಮಾಡಿಕೊಳ್ಳಲು ಹಾಗೂ ಸರಿಪಡಿಸಲು ಅಭಿವೃದ್ಧಿಯ ಲಿಂಗ ಸಂಬಂಧಿ ಆಯಾಮಗಳನ್ನು ಕುರಿತಂತೆ ಚರ್ಚಿಸಬೇಕಾಗುತ್ತದೆ.

**ಮಹಿಳಾ ದುಡಿಮೆಗಾರರು**

ಕರ್ನಾಟಕದಲ್ಲಿ ೨೦೦೧ರ ಜನಗಣತಿ ಪ್ರಕಾರ ಒಟ್ಟು ದುಡಿಮೆಗಾರರ ಸಂಖ್ಯೆ ೨೩೫.೨೨ ಲಕ್ಷ. ಇವರಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಶೇಕಡ ೩೫.೦೭. ಆದರೆ ರಾಜ್ಯದಲ್ಲಿರುವ ಒಟ್ಟು ದಿನಗೂಲಿ ದುಡಿಮೆಗಾರರ ಸಂಖ್ಯೆ ೬೨.೦೯ ಲಕ್ಷ. ಇವರಲ್ಲಿ ಮಹಿಳಾ ದಿನಗೂಲಿ ದುಡಿಮೆಗಾರರ ಪ್ರಮಾಣ ಶೇ. ೫೮.೧೯. ಕರ್ನಾಟಕದಲ್ಲಿ ಕೃಷಿಯನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರರ ಸಂಖ್ಯೆ ೧೩೧.೪೪ ಲಕ್ಷ. ಅವರಲ್ಲಿ ಮಹಿಳೆಯರ ಪ್ರಮಾಣ ಶೇಕಡ ೪೩. ಆದರೆ ಕೃಷಿಯೇತರ ಚಟುವಟಿಕೆಗಳನ್ನು ತೆಗೆದುಕೊಂಡರೆ ಮಹಿಳಾ ದುಡಿಮೆಗಾರರ ಪ್ರಮಾಣ ಕೇವಲ ಶೇಕಡ ೨೪.೨೭ರಷ್ಟಿದೆ.

ಇದರಿಂದ ಸ್ಪಷ್ಟವಾಗುವ ಸಂಗತಿಯೆಂದರೆ ಸಮಾಜದಲ್ಲಿ ಯಾವುದಕ್ಕೆ ಕಡಿಮೆ ಕೂಲಿಯಿದೆಯೋ ಮತ್ತು ಯಾವುದು ಕೆಳಮಟ್ಟದ ಸ್ಥಾನಮಾನ ಹೊಂದಿದೆಯೋ ಅಂತಹ ದುಡಿಮೆಯಲ್ಲಿ ಮಹಿಳೆಯರ ಪ್ರಮಾಣವು ಪುರುಷರ ಪ್ರಮಾಣಕ್ಕಿಂತ ಅಧಿಕವಾಗಿದೆ. ಇದಕ್ಕಿಂತ ಮುಖ್ಯವಾಗಿ ಮಹಿಳೆಯರು ಮನೆಯೊಳಗಿನ ಮತ್ತು ಮನೆಯ ಹೊರಗಿನ ದುಡಿಮೆಗಳೆರಡನ್ನು ನಿಭಾಯಿಸಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿದ್ದಾರೆ. ಸಾಮಾನ್ಯವಾಗಿ ಗೃಹವಾರ್ತೆ ದುಡಿಮೆಯಿಂದ ಪುರುಷರಿಗೆ ವಿನಾಯಿತಿಯಿದೆ. ನಮ್ಮ ಸಂದರ್ಭದಲ್ಲಿ ಮನೆಯ ಹೊರಗೆ ದುಡಿಯುವ ಮಹಿಳೆಯರು ಇಬ್ಬಗೆಯ ಹೊಣೆಗಾರಿಕೆಯನ್ನು ನಿರ್ವಹಿಸಬೇಕಾದ ಸ್ಥಿತಿ ಎದುರಿಸುತ್ತಿದ್ದಾರೆ. ಮಹಿಳೆಯರು ಮನೆಯೊಳಗೆ ನಿರ್ವಹಿಸುವ ಸಂತಾನೋತ್ಪತ್ತಿ ಹಾಗೂ ಸಂಗೋಪನಾ ದುಡಿಮೆಯನ್ನು ಜೈವಿಕವೆಂದು ವರ್ಗೀಕರಿಸಲಾಗಿದೆ. ಅವುಗಳನ್ನು ಉತ್ಪಾದನಾ ಚಟುವಟಿಕೆಗಳ ಚೌಕಟ್ಟಿಗೆ ಸೇರಿಸುವುದಿಲ್ಲ.

## ಸಾಮಾಜಿಕ ತಂತ್ರಜ್ಞಾನ

ಮಹಿಳೆಯರ ಮನೆಯೊಳಗಿನ ಹಾಗೂ ಸಂಭಾವನಾರಹಿತ ದುಡಿಮೆಯು ಉತ್ಪಾದನಾ ದುಡಿಮೆಯೇ ಅಥವಾ ಅನುತ್ಪಾದಕವೋ ಎಂಬುದರ ಬಗ್ಗೆ ಸೇನ್ ತಮ್ಮ ಪ್ರಸಿದ್ಧ (ಜೆಂಡರ್ ಅಂಡ್ ಕೊ-ಆಪರೇಟಿವ್ ಕಾನ್ಫ್ಲಿಕ್ಟ್ಸ್: ೧೯೯೦) ಪ್ರಬಂಧದಲ್ಲಿ ವಿವರವಾಗಿ ಚರ್ಚಿಸಿದ್ದಾರೆ. ನಿಜಕ್ಕೂ ಇಲ್ಲಿ ನಾವು ಕೇಳಿಕೊಳ್ಳಬೇಕಾದ ಪ್ರಶ್ನೆಯೆಂದರೆ ಮಹಿಳೆಯರ ದುಡಿಮೆಯನ್ನು ಬಿಟ್ಟು ಸಮಾಜದಲ್ಲಿ ಉತ್ಪಾದನಾ ಚಟುವಟಿಕೆಗಳೆಂದು ಯಾವುದನ್ನು ಕರೆಯಲಾಗುತ್ತಿದೆಯೋ ಅದು ನಡೆಯಲು ಸಾಧ್ಯವೇ? ಇವೆರಡೂ ಪರಸ್ಪರಾವಲಂಬನೆಯ ಸಂಗತಿಗಳಾಗಿವೆ.

ಉತ್ಪಾದನೆಯೆಂಬುದು ಕೇವಲ ಕಚ್ಚಾ ಸರಕು ಮತ್ತು ಸಿದ್ಧ ಸರಕುಗಳ ನಡುವಣ ಸಂಬಂಧಕ್ಕೆ ಮಾತ್ರ ಸೀಮಿತವಾದ ಸಂಗತಿಯಲ್ಲ. ಏಕೆಂದರೆ, ಅದು ಸಾಮಾಜಿಕ ವ್ಯವಸ್ಥೆಯೊಂದರ ನಡುವೆ ನಡೆಯಬೇಕಾಗುತ್ತದೆ. ಆದ್ದರಿಂದ ಕಾರ್ಖಾನೆ, ಉದ್ದಿಮೆ, ಕೃಷಿ– ಯಾವುದೇ ಚಟುವಟಿಕೆಯಾದರೂ ಅವು ಸಾಮಾಜಿಕ ವ್ಯವಸ್ಥೆಯ ಭಾಗವಾಗಿ ಜರುಗಬೇಕು.

ಉತ್ಪಾದನಾ ದುಡಿಮೆಯೆಂಬುದು ಇತರೆ ಅನೇಕ ಬಗೆಯ, ಅಂದರೆ ಗೃಹವಾರ್ತೆ, ಸಂಗೋಪನೆ, ಸಂತಾನೋತ್ಪತ್ತಿ, ಸಾಂತ್ವನ, ಹೊಲಗದ್ದೆಗಳಿಗೆ ಊಟ ಒಯ್ಯುವುದು ಮುಂತಾದವುಗಳನ್ನು ಅವಲಂಬಿಸಿಕೊಂಡಿದೆ. ತಂತ್ರಜ್ಞಾನವೆಂಬುದು ಕೇವಲ ಉಪಕರಣ, ಯಂತ್ರ-ತಂತ್ರಗಳಿಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಅದು ಸಾಮಾಜಿಕ ವ್ಯವಸ್ಥಾಪನೆಯ ಚೌಕಟ್ಟಿನಲ್ಲಿ ನಡೆಯುವ ಒಂದು ಚಟುವಟಿಕೆಯಾಗಿದೆ.

ಗೃಹವಾರ್ತೆಯನ್ನು ನಿಕೃಷ್ಟವಾಗಿ ಕಾಣಲಾಗುತ್ತದೆ. ಸಂಗೋಪನೆ, ಸಂತಾನೋತ್ಪತ್ತಿ, ಗೃಹವಾರ್ತೆ ಮುಂತಾದವುಗಳ ಮಹತ್ವವನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ ಉತ್ಪಾದನಾ ಚಟುವಟಿಕೆಗಳಿಗೆ ಅವುಗಳ ಕಾಣಿಕೆಯಿದೆ ಎಂಬುದನ್ನು ಮಾತ್ರ ಒಪ್ಪಲು ಸಮಾಜ ಸಿದ್ಧವಿಲ್ಲ. ಆದ್ದರಿಂದ ಅಂತಹ ಚಟುವಟಿಕೆಗಳನ್ನು ಅನುತ್ಪಾದಕವೆಂದು ವರ್ಗೀಕರಿಸಲಾಗಿದೆ. ಆದರೆ ಮನೆಯೊಳಗಿನ ಹಾಗೂ ಮನೆಯ ಹೊರಗಿನ ಚಟುವಟಿಕೆಗಳನ್ನು ಸಂಯುಕ್ತವಾಗಿ ಉತ್ಪಾದನಾ ಚಟುವಟಿಕೆಗಳೆಂದು ಪರಿಗಣಿಸುವ ಅಗತ್ಯವನ್ನು ಸೇನ್ ಒತ್ತಾಯಿಸುತ್ತಿದ್ದಾರೆ. ಕುಟುಂಬವೊಂದರ ಅಭ್ಯುದಯವು ಇವೆರಡೂ ಬಗೆಯ ಚಟುವಟಿಕೆಗಳ – ಅಂದರೆ ವರಮಾನ ಗಳಿಸುವ, ಸರಕುಗಳನ್ನು ಉತ್ಪಾದಿಸುವ, ಖರೀದಿಸುವ, ಆಹಾರ ಪದಾರ್ಥಗಳನ್ನು ಸಂಗ್ರಹಿಸುವ ಮುಂತಾದವುಗಳ ಒಟ್ಟು ಪರಿಣಾಮವನ್ನು ಅವಲಂಬಿಸಿದೆ. ಒಟ್ಟು ಕುಟುಂಬವೊಂದರ ಪ್ರಗತಿಯು ದುಡಿಮೆಯ ಲಿಂಗ ಸಂಬಂಧಿ ವರ್ಗೀಕರಣವನ್ನು ಅವಲಂಬಿಸಿದೆ. ಕುಟುಂಬ ವ್ಯವಸ್ಥೆಯಲ್ಲಿ ಅದರ ಸದಸ್ಯರು ಎರಡು ಬಗೆಯ ಸಮಸ್ಯೆಗಳನ್ನು ಎದುರಿಸುತ್ತಾರೆ. ಮೊದಲನೆಯದು, ಕುಟುಂಬದ ಸಂಪತ್ತಿಗೆ ಕೊಡುಗೆ ನೀಡುವುದು. ಇದು ಸಹಕಾರವನ್ನು ಬಯಸುತ್ತದೆ. ಎರಡನೆಯದು, ಕುಟುಂಬದ ಸಂಪತ್ತನ್ನು ಸದಸ್ಯರೆಲ್ಲರೂ ಹಂಚಿಕೊಳ್ಳುವುದು. ಇದು ಸಂಘರ್ಷದ ಸಂಗತಿಯಾಗಿದೆ. ಯಾರು ಯಾವ ಚಟುವಟಿಕೆ ಮಾಡಬೇಕು, ಯಾರು ಯಾವುದನ್ನು ಬಳಸಬೇಕು, ಯಾರು ತೀರ್ಮಾನ ತೆಗೆದುಕೊಳ್ಳಬೇಕು ಮುಂತಾದವುಗಳನ್ನೊಳಗೊಂಡ ಸಾಮಾಜಿಕ ವ್ಯವಸ್ಥೆಯು ಲಿಂಗ ಸಂಬಂಧಿ ಶ್ರಮ ವಿಭಜನೆಯನ್ನು ಅವಲಂಬಿಸಿದೆ. ಲಿಂಗ ಸಂಬಂಧಿ ಶ್ರಮ ವಿಭಜನೆಯೆಂಬುದು ಅಂತಹ ಒಂದು ಸಾಮಾಜಿಕ ವ್ಯವಸ್ಥೆಯಾಗಿದೆ.

ಸಾಮಾಜಿಕ ವ್ಯವಸ್ಥೆಯನ್ನು ವಿಶಾಲವಾದ ನೆಲೆಯಲ್ಲಿ ತಂತ್ರಜ್ಞಾನವೆಂದೂ ಉತ್ಪಾದನೆಯೆಂದೂ ಪರಿಗಣಿಸುವುದರಿಂದ ಅನೇಕ ಉಪಯೋಗಗಳಿವೆ. ಮೊದಲನೆಯದಾಗಿ, ಯಾವುದನ್ನು ಇದುವರೆವಿಗೂ 'ಸಾಂಸ್ಕೃತಿಕ'ವೆಂದು ವರ್ಗೀಕರಿಸಿಕೊಂಡು ಬರಲಾಗಿದೆಯೋ ಅದನ್ನು ಉತ್ಪಾದನಾ ನೆಲೆಯಿಂದ ಪರಿಭಾವಿಸಿಕೊಳ್ಳಬೇಕಾದ ಅಗತ್ಯವನ್ನು ಅದು ತೋರಿಸುತ್ತದೆ. ಇದುವರೆವಿಗೂ ಯಾವುದನ್ನು ಉತ್ಪಾದನಾ ಚೌಕಟ್ಟಿನೊಳಗೆ ಸೇರಿಸಿರಲಿಲ್ಲವೋ ಅವುಗಳು ಉತ್ಪಾದನೆ ಚಟುವಟಿಕೆಗಳೆಂದು ಈಗ ಗುರುತಿಸುವುದು ಸಾಧ್ಯವಾಗುತ್ತದೆ. ಎರಡನೆಯದಾಗಿ, ತೀವ್ರ ಅಸಮಾನತೆಯಿಂದ ಕೂಡಿರುವ ಲಿಂಗ ಸಂಬಂಧಿ ವರ್ಗೀಕರಣದ ನೆಲೆಗಳನ್ನು ಇದು ಅನಾವರಣ ಮಾಡುತ್ತದೆ. ಮೂರನೆಯದಾಗಿ, ಸಂಭಾವನಾ ಸಹಿತ ಮತ್ತು ಸಂಭಾವನಾ ರಹಿತವೆಂಬ ವರ್ಗೀಕರಣವು ಉಂಟು ಮಾಡುತ್ತಿರುವ ತಾರತಮ್ಯವಾದಿ ಪರಿಣಾಮಗಳನ್ನು ಇದು ತೋರಿಸುತ್ತದೆ.

## ಹಿತಾಸಕ್ತಿಗಳ ರಾಜಕಾರಣ

ಮಹಿಳೆಯರಿಗೆ ಅವರದೇ ಆದ 'ಹಿತಾಸಕ್ತಿ'ಗಳಿರುವುದು ಸಾಧ್ಯವಿಲ್ಲವೆಂಬ ಸಂಗತಿಯು ವ್ಯಾಪಕವಾಗಿ ನೆಲೆಯೂರಿದೆ. ಹೀಗೆ 'ಹಿತಾಸಕ್ತಿ'ಗಳ ಬಗ್ಗೆ ಯೋಚಿಸುವುದು 'ಮಹಿಳೆ'ಗೆ ತಕ್ಕುದಲ್ಲವೆಂಬ ನಂಬಿಕೆಯನ್ನು ಸಮಾಜದಲ್ಲಿ ಬಿತ್ತಲಾಗಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆಯೊಬ್ಬಳನ್ನು 'ನಿನಗೇನು ಬೇಕು' ಎಂಬ ಪ್ರಶ್ನೆ ಕೇಳಿದರೆ ಸಹಜವಾಗಿ ಆಕೆಯು ಗಂಡನ, ಮಕ್ಕಳ, ಕುಟುಂಬದ ಕ್ಷೇಮಾಭ್ಯುದಯವನ್ನು ಹಾರೈಸುತ್ತಾಳೆ ವಿನಾ 'ತನಗೆ' ಏನು ಬೇಕು, ತನ್ನ ಹಿತಾಸಕ್ತಿಗಳೇನು ಎಂಬುದನ್ನು ಹೇಳುವುದಿಲ್ಲ. ತನಗೆ ಹಿತಾಸಕ್ತಿಗಳಿವೆ, ಹಿತಾಸಕ್ತಿಗಳಿರಬಹುದು, ಅವುಗಳ ಬಗ್ಗೆ ಯೋಚಿಸಬೇಕು ಎಂಬ ವಿಚಾರಗಳು ಮಹಿಳೆಯರ ಮನಸ್ಸಿನಲ್ಲಿ ಮೂಡದಂತೆ ಅವರನ್ನು ಬೆಳೆಸಲಾಗಿರುತ್ತದೆ. ಮಹಿಳೆಯರು ತಮ್ಮ ಹಿತಾಸಕ್ತಿಗಳೇನು ಎಂಬುದನ್ನು ಪರಿಭಾವಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲದಿರುವ ಸಂಗತಿಯ ಆಧಾರದ ಮೇಲೆ ಅವರಿಗೆ ಹಿತಾಸಕ್ತಿಗಳೇ ಇಲ್ಲವೆಂದು ಹೇಳುವುದು ಸರಿಯಾಗುವುದಿಲ್ಲ. ಅವರು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಬಗ್ಗೆ, ತಮ್ಮ ಬದುಕನ್ನು ಕಟ್ಟಿಕೊಳ್ಳುವ ಬಗ್ಗೆ, ತಮ್ಮ ಹಿತಾಸಕ್ತಿಗಳನ್ನು ಗುರುತಿಸಿಕೊಳ್ಳುವ ಬಗ್ಗೆ ಯೋಜಿಸುವಂತಾಗಬೇಕು. ಈ ನೆಲೆಯಿಂದ ಹುಟ್ಟಿಕೊಂಡ ಚರ್ಚೆಯ ಫಲವೇ 'ಸಶಕ್ತೀಕರಣ ಸಿದ್ಧಾಂತ'. ಸಶಕ್ತೀಕರಣವೆಂದರೆ ಸ್ವಂತ ಕಾಲ ಮೇಲೆ ನಿಲ್ಲುವುದು, ಲಿಂಗ ಸಮಾನತೆ, ಸ್ವತಂತ್ರ ವರಮಾನದ ಮೂಲವನ್ನು ಹೊಂದುವುದು ಮುಂತಾದ ರೀತಿಯಲ್ಲಿ ನಿರ್ವಚಿಸಲಾಗುತ್ತದೆ. ಆದರೆ ಸಶಕ್ತೀಕರಣವನ್ನು ತುಂಬಾ ವ್ಯಾಪಕವಾದ ಹಾಗೂ ನಿರ್ದಿಷ್ಟವಾದ ನೆಲೆಯಲ್ಲಿ ಪರಿಭಾವಿಸಿಕೊಳ್ಳುವ ಅಗತ್ಯವಿದೆ. ಅದೊಂದು ರಾಜಕೀಯ ಪರಿಭಾವನೆ. ಅದು ಅಧಿಕಾರ ಹಂಚಿಕೆಗೆ ಸಂಬಂಧಿಸಿದ ಸಂಗತಿ. ಮಹಿಳೆಯರ ಆಸ್ತಿ ಹಕ್ಕು, ಗೃಹವಾರ್ತೆಯನ್ನು ಗಂಡನೊಂದಿಗೆ ಹಂಚಿಕೊಳ್ಳುವುದು, ಕೌಟುಂಬಿಕ ಸಂಗತಿಗಳಿಗೆ ಸಂಬಂಧಿಸಿದಂತೆ ತೀರ್ಮಾನ ತೆಗೆದುಕೊಳ್ಳುವುದು ಮುಂತಾದ ಸಂಗತಿಗಳನ್ನು ಸಶಕ್ತೀಕರಣ ಒಳಗೊಂಡಿದೆ. ತನ್ನ ವ್ಯಕ್ತಿತ್ವ-ಬದುಕು-ದೈಹಿಕ ಭದ್ರತೆಗಳಿಗೆ ಸಂಬಂಧಿಸಿದಂತೆ ತೀರ್ಮಾನ ತೆಗೆದುಕೊಳ್ಳುವ ಹಕ್ಕು ಮಹಿಳೆಗಿರಬೇಕು. ಹೀಗೆ ಇಂತಹ ಹಕ್ಕುಗಳನ್ನು ಪಡೆದುಕೊಳ್ಳುವ ಪ್ರಕ್ರಿಯೆಯೇ ಸಶಕ್ತೀಕರಣ. ಅಮರ್ತ್ಯ ಸೇನ್ ಹೇಳುವ ಧಾರಣಾ ಸಾಮರ್ಥ್ಯ, ಕರ್ತೃತ್ವ, ಸಶಕ್ತೀಕರಣ ಸಂಘರ್ಷ ಮುಂತಾದ ಸಂಗತಿಗಳು ಸ್ತ್ರೀವಾದಿ ಅರ್ಥಶಾಸ್ತ್ರದ ಬೆಳವಣಿಗೆಗೆ ಕಾರಣವಾಗಿವೆ. ಅಮರ್ತ್ಯ ಸೇನ್ ತನ್ನನ್ನು ತಾನು 'ಸ್ತ್ರೀವಾದಿ ಅರ್ಥಶಾಸ್ತ್ರಜ್ಞ'ನೆಂದು ಕರೆದುಕೊಂಡಿದ್ದಾನೆ.

ಅಭಿವೃದ್ಧಿ ಕುರಿತಂತೆ ಚರ್ಚಿಸುವಾಗ, ಯೋಜನೆ ರೂಪಿಸುವಾಗ ನಾಡಿನ ಸರಿ ಸುಮಾರು ಅರ್ಧದಷ್ಟಿರುವ ಮಹಿಳೆಯರನ್ನು 'ಅಯ್ಯೋ ಪಾಪ' ಎನ್ನುವ ನೆಲೆಗೆ ಪ್ರತಿಯಾಗಿ ಹಕ್ಕಿನ ಸಂಗತಿಯಾಗಿ ಪರಿಗಣಿಸಬೇಕು ಎಂಬುದು ಇಂದು ನಿರ್ವಿವಾದದ ಸಂಗತಿಯಾಗಿದೆ.

## ಸಂಗ್ರಹ

ಅಭಿವೃದ್ಧಿಯನ್ನು ಕುರಿತಂತೆ ಎರಡು ತಾತ್ವಿಕ ಧಾರೆಗಳು ಇಂದು ಪ್ರಚಲಿತದಲ್ಲಿವೆ. ಮೊದಲನೆಯದು, ವರಮಾನ ಅಭಿವೃದ್ಧಿ ವಿಚಾರಧಾರೆ ಮತ್ತು ಎರಡನೆಯದು, ಮಾನವ ಅಭಿವೃದ್ಧಿ ವಿಚಾರಧಾರೆ. ವರಮಾನ ಅಭಿವೃದ್ಧಿ ವಿಚಾರಧಾರೆಯ ಮಿತಿಗಳನ್ನು, ಅದು ಉಂಟು ಮಾಡಿರುವ ವಿಕಾರಗಳನ್ನು ಕುರಿತಂತೆ ಅಮರ್ತ್ಯ ಸೇನ್, ಮೆಹಬೂಬ್ ಉಲ್ ಹಕ್, ಮಾರ್ತನುಸ್ಬಾಮ್, ಜೀನ್ ಡ್ರೀಜ್ ಮುಂತಾದವರು ಚರ್ಚೆ ಮಾಡಿದ್ದಾರೆ. ಈ ಬಗೆಯ ವಿಚಾರಧಾರೆಗೆ ಪ್ರತಿಯಾಗಿ ಮಾನವ ಅಭಿವೃದ್ಧಿ ವಿಚಾರಧಾರೆಯನ್ನು ರೂಪಿಸಲಾಗಿದೆ.

ಜನರ ಬದುಕು ಅನ್ನೋದು ವರಮಾನ, ಉತ್ಪನ್ನ, ಉದ್ಯೋಗಗಳನ್ನು ಮೀರಿ ಹಕ್ಕುಗಳು, ಸ್ವಾತಂತ್ರ್ಯ ಮತ್ತು ಕರ್ತೃತ್ವಗಳನ್ನು ಒಳಗೊಳ್ಳಬೇಕು ಎಂಬುದು ಸೇನ್ ಮತ್ತು ಹಕ್ ಅವರ ಪ್ರತಿಪಾದನೆ. ಅಭಿವೃದ್ಧಿಯು ಮಹಿಳೆಯರ ಬದುಕನ್ನು ಒಳಗೊಳ್ಳಬೇಕಾಗುತ್ತದೆ. ಲಿಂಗ ನಿರಪೇಕ್ಷತೆಯೆಂಬುದು ಲಿಂಗ ತಾರತಮ್ಯಕ್ಕೆ ಒಂದು ಸಾಧನವಾಗಿ ಬಿಟ್ಟಿದೆ. ಜನರು ಏನಾಗಿದ್ದಾರೆ ಮತ್ತು ಅವರು ಏನು ಮಾಡಬಲ್ಲರು ಎಂಬುದು ಅಭಿವೃದ್ಧಿಯ ದೃಷ್ಟಿಯಿಂದ ಮುಖ್ಯವಾಗಬೇಕು.

ಅಕ್ಷರ, ಆರೋಗ್ಯ , ಆಹಾರ, ಆದಾಯ ಮತ್ತು ಆಸರೆಗಳನ್ನು ಒಳಗೊಂಡಂತೆ ನಾವು ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳಬೇಕಾಗಿದೆ. ಅಕ್ಷರ, ಆರೋಗ್ಯ, ಆಹಾರ ಮುಂತಾದವು ಕೇವಲ ಅಭಿವೃದ್ಧಿಯ ಸಾಧನಗಳು ಮಾತ್ರವಲ್ಲ. ಅವು ಅಭಿವೃದ್ಧಿಯ ಅಂತರ್ಗತ ಸಂಗತಿಗಳಾಗಿವೆ. ಲಿಂಗ ಸಂಬಂಧಗಳಿಗೆ ಅತೀತವಾದ ನೆಲೆಯಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವುದು ಸರಿಯಲ್ಲ. ಮಹಿಳೆಯರ ಅಭಿವೃದ್ಧಿ ಮತ್ತು ಲಿಂಗ ಸಮಾನತೆ ಎಂಬ ಸಂಗತಿಗಳು ಮಹಿಳೆಯರಿಗೆ ಮಾತ್ರ ಸಂಬಂಧಿಸಿದ ವಿಷಯಗಳಲ್ಲ. ಅವು ಸಮಾಜದ, ಅಭಿವೃದ್ಧಿಯ ಸಂಗತಿಗಳು. ಮಹಿಳೆಯರು ನಿರ್ವಹಿಸುವ ಗೃಹವಾರ್ತೆ, ಸಂಗೋಪನೆ, ಸಂತಾನೋತ್ಪತ್ತಿಗಳನ್ನು ಉತ್ಪಾದನಾ ದುಡಿಮೆಯೆಂದು ಪರಿಗಣಿಸುವ ಸಂಗತಿಯನ್ನು ಸೇನ್ ಒತ್ತಾಯಿಸುತ್ತಿದ್ದಾರೆ. ಅಭಿವೃದ್ಧಿಯೆನ್ನುವುದು ದತ್ತಿ ಅಥವಾ ಉಂಬಳಿಯಲ್ಲ. ಅದು ಜನರ ಹಕ್ಕು. ಅದನ್ನು ದಕ್ಕಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದುಕೊಳ್ಳಬೇಕು. ಇಂತಹ ಸಾಮರ್ಥ್ಯದ ವರ್ಧನೆಯೇ ಅಭಿವೃದ್ಧಿ.

ಡಾ|| ಟಿ. ಆರ್. ಚಂದ್ರಶೇಖರ
ನಿರ್ದೇಶಕ, ಅಧ್ಯಯನಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಮಹಾರಾಜರ ಕಾಲದ 'ವೈಭವಯುತ' ದಿನಗಳನ್ನು ಈಗಲೂ ಮೈಸೂರು ಮತ್ತು ಸುತ್ತಮುತ್ತಣ ಜನ ಭಾವುಕತೆಯಿಂದ ಆಗಾಗ್ಗೆ ನೆನೆಯುವುದುಂಟು. ವೈಭವ ಯುತವೆಂದು ನಾಮಕರಣ ಮಾಡಿದ್ದು ಇಂದಿನ ಪೀಳಿಗೆಯವರಲ್ಲ, ಹಿಂದಿನ ಪೀಳಿಗೆಯವರು. ಆ ವೈಭವವನ್ನು ಮೆರೆಯಲು ಅದೆಷ್ಟೋ ಆಚರಣೆಗಳು ಈಗಲೂ ಜಾರಿಯಲ್ಲಿವೆ. ಮೈಸೂರಿನ ಭವ್ಯವಾದ ಅರಮನೆ, ಅಗಲವಾದ ಶುಭ್ರ ರಸ್ತೆಗಳು, ರಸ್ತೆಯ ಇಕ್ಕೆಲಗಳಲ್ಲಿರುವ ಚಿಕ್ಕ ಚಿಕ್ಕ ಅಂಗಡಿಗಳು, ಅಲ್ಲಿ ತುಂಬಿರುವ ಮನಮೋಹಕ ಸರಕುಗಳು, ಇವೆಲ್ಲಾ ಮೈಸೂರಿನ ವೈಶಿಷ್ಟ್ಯ. ಇವೆಯೋ ಇಲ್ಲವೋ ಎನ್ನುವಷ್ಟು ನಿರುಪದ್ರವಿ ಅಂಗಡಿಗಳು – ಅಲ್ಲಿಯ ಸರಕುಗಳನ್ನು ನಿರ್ಮಾಣ ಮಾಡಿದವರು ಸ್ಥಳೀಯ ಕರಕುಶಲ ಕೆಲಸದವರು. ರಾಜನ ರಾಜಧಾನಿಗೆ ಇವೆಲ್ಲಾ ಒಂದು ಅನನ್ಯ ಶೋಭೆಯನ್ನು ತಂದಿದ್ದವು. ಇವುಗಳೊಡನೆ ಹೋಲಿಸಿದರೆ ಇಂದಿನ ದೊಂಬಿಯ ಬೃಹತ್ ಮಳಿಗೆಗಳು ಒಂದು ರೀತಿ ಅಸಹ್ಯಕರವಾದುವು : ಶಾಸ್ತ್ರೀಯ ನಾಟ್ಯರಂಗದಲ್ಲಿ ಜಾಝ್ ಸಂಗೀತ ಬಂದು ತೂರಿಕೊಂಡಂತೆ. ಅಂದಿನ ಮುಕ್ತತೆಯ ವಾತಾವರಣವನ್ನು ಹಸನುಗೊಳಿಸಲೋ ಎಂಬಂತೆ ನಗರದ ಮುಖ್ಯರಸ್ತೆಗಳಲ್ಲಿ ಆಗಾಗ್ಗೆ ರಾಜ ಗಾಂಭೀರ್ಯದ ಆನೆಗಳು, ಕುದುರೆಗಾಡಿಗಳು, ಕಾಣಿಸಿಕೊಳ್ಳುತ್ತಿದ್ದುವು. ನಗರದ ಪ್ರತಿಷ್ಠಿತರಿಗೆ ಈ ವೈಭವದ ಅನುಭವ ಒಂದೆಡೆಯಾದರೆ ಜನಸಾಮಾನ್ಯರಿಗೆ ಅದೊಂದು ಮೋಜಿನ ದೃಶ್ಯವಾಗಿರುತ್ತಿತ್ತು. ಈ ಜನರೋ, ಏನೂ ಕೆಲಸವಿಲ್ಲದ ಅಲಸಿಗಳಂತೆ ಕಾಣುತ್ತಿದ್ದುದೂ ಉಂಟು.

ನಗರದ ಸಂದಿಗೊಂದಿಗಳಲ್ಲಿ ಪ್ರತಿಷ್ಠಿತರು ಹಾಗೂ ಸಾಮಾನ್ಯರು ತಮ್ಮ ಜೀವನವನ್ನು ನಿಧಾನಗತಿಯಲ್ಲಿ ಸಾಗಿಸುತ್ತಿದ್ದರು. ಮಹಾರಾಜನು ಸಿಂಹಾಸನದಲ್ಲಿ ಕುಳಿತಿರುವಾಗ ಎಲ್ಲವೂ ಸುಗಮವಾಗಿ ನಡೆಯುತ್ತಿರುತ್ತದೆಂಬುದು ಅವರ ನಂಬಿಕೆ. ಅನೇಕ ಮನೆಗಳಲ್ಲಿ ಗೋಡೆಗಳ ಮೇಲೆ ಮಹಾರಾಜನ ಚಿತ್ರವನ್ನು ಶ್ರದ್ಧೆಯಿಂದ ನೇತು ಹಾಕಿರುತ್ತಿದ್ದರು; ಅದೂ ಆಯಾ ಮನೆಗಳ ದೇವರುಗಳ ಸಾಲಿನಲ್ಲೇ. ಬೆಳಗಿನ ಹೊತ್ತು ವಾಯುವಿಹಾರಕ್ಕೆಂದು ತೆರಳಿದಾಗ ರಾಜಮನೆತನಕ್ಕೆ ನಿಷ್ಠೆ ಇದ್ದವರು ಅದನ್ನು ಪ್ರಕಟಿಸಲು ಅರಮನೆಯ ಮಹಾದ್ವಾರದ ಬಳಿ ನಿಂತು ಕೈಜೋಡಿಸಿ ತಲೆ ಬಗ್ಗಿಸುತ್ತಿದ್ದುದೂ ಉಂಟು. ದೇವಸ್ಥಾನವೊಂದರ ಎದುರು ನಿಂತಿದ್ದೇವೋ ಎಂಬ ಭಾವ ಅವರದಾಗಿರುತ್ತಿತ್ತು. ನಗರದ ಒಂದು ಭಾಗದಲ್ಲಿ ಬೇರೆಡೆಗಳಿಗಿಂತಲೂ ಹೆಚ್ಚಿನ ಹಸಿರು, ಗಿಡ-ಮರಗಳು; ಹಾಗೂ ಉದ್ಯಾನಗಳೂ ಬಹಳ. ಅಂತಹ ಕಡೆಯೇ ದೊಡ್ಡ ದೊಡ್ಡ ಬಂಗಲೆಗಳು, ರಾಜನ ಸಚಿವರು, ಆಸ್ಥಾನಿಕರು, ನ್ಯಾಯಮೂರ್ತಿಗಳು ಮತ್ತು ಇತರ ಮುಖ್ಯ ಅಧಿಕಾರಿಗಳ ವಾಸಸ್ಥಾನಗಳು ಇರುತ್ತಿದ್ದುದು. ನಾಗರಿಕರು ಮಹಾರಾಜನ ಮುಖ ನೋಡುವುದು ವಿರಳ. ಎಲ್ಲೋ ಕೆಲವು ಉತ್ಸವಗಳ ಸಂದರ್ಭದಲ್ಲಿ ಮಾತ್ರವೇ ಆತ ಸಾರ್ವಜನಿಕವಾಗಿ ಕಾಣಿಸಿಕೊಳ್ಳುತ್ತಿದ್ದುದು. ಆದಾಗ್ಯೂ ನಾಗರಿಕರಿಗೆ ಏನೋ ಒಂದು ಸಡಗರ : ಆಳುವ ಮಹಾರಾಜನ ಸನಿಹದಲ್ಲೇ ತಾವು ನಿವಾಸಿಗಳು ಎಂಬ ಕಾರಣದಿಂದ.

ಮೈಸೂರಿನವನೊಬ್ಬ ರಾಷ್ಟ್ರದ ಬೇರಾವುದೋ ಪ್ರದೇಶದಲ್ಲಿ ಪ್ರವಾಸದಲ್ಲಿದ್ದಾನೆನ್ನಿ; ಪರಕೀಯನ ಜೊತೆ ಅವನ ಮೊದಲರ್ಧ ಗಂಟೆಯ ಸಂವಾದವು ರಾಜನ ಮತ್ತು ಅವನ ಕುಟುಂಬದ ಶ್ಲಾಘನೆಗೆ ಮೀಸಲಾಗಿರುತ್ತದೆ. ನಗರದ ಹಾಗೂ ಅದರ ಸುತ್ತಮುತ್ತಣ ವಲಯಗಳ ಹೊಗಳಿಕೆಯು ನಂತರ ಬರುತ್ತದೆ. ಹೀಗೆ ಮಾಡದಿದ್ದವನು ಮೈಸೂರಿಗನೇ ಅಲ್ಲವೆಂಬಷ್ಟು ದೂರ ಹೋಗಲು ಅಡ್ಡಿಯಿಲ್ಲ.

ಮಹಾರಾಜರ ಬಗೆಗಿನ ಈ ಅಭಿಮಾನದಿಂದಲೋ ಏನೋ ಹೊಸ ವೇಷದಲ್ಲಿ ಈಗ ಮಹಾರಾಜರು ಮತ್ತೆ ರಾಜ್ಯದಲ್ಲಿ ಅವತರಿಸಿದ್ದಾರೆ. ಈಗಿನ ರಾಜಧಾನಿಯಾದ ಬೆಂಗಳೂರಿನಲ್ಲಿ ಹಿಂದೆ ಮೈಸೂರನ್ನು ಆಳುತ್ತಿದ್ದವರನ್ನು ಮೀರಿಸುವ ದಿಗ್ಗಜಗಳು ಹತ್ತು-ಹನ್ನೆರಡಾದರೂ ಇವೆ. ಅವರಿಗೆ ಅಂತರರಾಷ್ಟ್ರೀಯ ಖ್ಯಾತಿ ಇದೆ. ಸಂಪತ್ತು, ಅಧಿಕಾರ, ಐಷಾರಾಮ, ಖ್ಯಾತಿ, ವೈಯಕ್ತಿಕ ಪ್ರಭಾವ, ಹೀಗೆ ಯಾವುದನ್ನು ಗಣನೆಗೆ ತೆಗೆದುಕೊಂಡರೂ ಅವರು ಹಿಂದಿನ ಮಹಾರಾಜರನ್ನು ಮೀರಿಸುತ್ತಾರೆ. ಅವರು ಅನುಭವಿಸುವ ಭೋಗಗಳನ್ನು ಹಿಂದಿನ ಮಹಾರಾಜರು ಕನಸಿನಲ್ಲೂ ಕಾಣುವಂತಿರಲಿಲ್ಲ.

# ನೂತನ ಮಹಾರಾಜರು

ಎಂ. ಬಿ. ಲಾಲ್





ದೆಹಲಿಯ 'ದಿ ಸ್ಟೇಟ್ಸ್‌ಮನ್' ಪತ್ರಿಕೆಯ ಸಂಪಾದಕರೂ ಅಭಿವೃದ್ಧಿ ಪ್ರತಿನಿಧಿಗಳೂ ಆಗಿದ್ದ ಶ್ರೀ ಎಂ. ಬಿ. ಲಾಲ್ ಅವರು ನಮ್ಮ ದೇಶದ ನೀರು, ಭೂಮಿ, ವಿದ್ಯುತ್ ಮುಂತಾದುವುಗಳನ್ನು ರೂಢಿಸಿಕೊಂಡು ಅಭಿವೃದ್ಧಿಯ ಹಾದಿಯಲ್ಲಿ ಹೇಗೆ ಸಾಗಬೇಕು ಎಂಬುದನ್ನು ಸಮಗ್ರವಾಗಿ ವಿಶ್ಲೇಷಣೆ ಮಾಡಿರುವ ತಜ್ಞರು. ಈ ಬಗ್ಗೆ ಹಲವು ಪುಸ್ತಕಗಳನ್ನು ಸಹ ಪ್ರಕಟಿಸಿರುವ ಶ್ರೀಯುತರು 'ಅಭಿವೃದ್ಧಿ' ಎಂಬುದನ್ನು ಜನರಿಂದ ವಿಮುಖವಾಗುವಂತಹ ರೀತಿಯಲ್ಲಿ ವ್ಯಾಖ್ಯಾನಿಸಲಾಗುತ್ತಿದೆಯಾದ್ದರಿಂದ ಸಮಕಾಲೀನ ಸಂದರ್ಭದಲ್ಲಿ ಅದು ವಿಪರ್ಯಾಸಕ್ಕೆಡೆಮಾಡಿಕೊಡುತ್ತಿದೆ ಎಂಬುದನ್ನು ಚರ್ಚಿಸಿದ್ದಾರೆ. ಎಲ್ಲೆಲ್ಲೂ ಅಭಿವೃದ್ಧಿಯ ಮಾತು ಗಾಳಿಯಲ್ಲಿ ತೇಲಾಡುತ್ತಿದೆ; ಆದರೆ ಕಂಗಾಲಾಗಿರುವ ಜನರ ಜೀವನದಲ್ಲಿ ಅಭಿವೃದ್ಧಿಯ ಹೊನಲು ಬೆಳಗುತ್ತಿಲ್ಲ.

ಇವರೇ ಭಾರತದ ನೂತನ ಮಹಾರಾಜರು. ಅವರಿಗಿಂತ ಸ್ವಲ್ಪ ಕೆಳಗೆ ಕೆಲವು ಸಾವಿರ ಮಂದಿ ಇರುತ್ತಾರೆ. ಅವರನ್ನು ಹೇಗೆ ಹೆಸರಿಸುವುದು ? ಬೇರೆ ಪದಗಳ ಅಭಾವದಲ್ಲಿ ಅವರನ್ನು ಸುಮ್ಮನೆ 'ರಾಜರು' ಎನ್ನಬಹುದು. ಅವರ ವ್ಯಾಪ್ತಿ ಸಹ ಜಾಗತಿಕ ಮಟ್ಟದ್ದು. ಅವರಲ್ಲಿ ಪ್ರತಿಯೊಬ್ಬರೂ ಏನಿಲ್ಲವೆಂದರೂ ನೂರಾರು ಕೋಟಿ ರೂಪಾಯಿಗಳ ಸಂಪತ್ತನ್ನು ಹೊಂದಿರುತ್ತಾರೆ. ಅವರಾದ ನಂತರ ಒಂದಷ್ಟು ಲಕ್ಷಾಧಿಪತಿಗಳ ಸಮೂಹ. ಅವರಲ್ಲಿ ಯಾರೂ ಹತ್ತುಲಕ್ಷ ರೂಪಾಯಿಗಳಿಗಿಂತ ಕಡಿಮೆಯ ಆಸ್ತಿ-ಪಾಸ್ತಿಯನ್ನು ಹೊಂದಿಲ್ಲ. ಕರ್ನಾಟಕದಲ್ಲಿ ಈ ಸಮೂಹದ ಜನರ ಸಂಖ್ಯೆ ಹತ್ತಿಪ್ಪತ್ತು ಲಕ್ಷಗಳಷ್ಟಿರಬಹುದು ಅಥವಾ ಸ್ವಲ್ಪ ಜಾಸ್ತಿಯೂ ಆಗಬಹುದು. ಕಳೆದ ಸುಮಾರು ಹದಿನೈದು ವರ್ಷಗಳಲ್ಲಿ ಅದೆಲ್ಲಿಂದಲೋ ಅವತರಿಸಿದ ಸಾಫ್ಟ್‌ವೇರ್ ಸಾಮ್ರಾಜ್ಯದ ಒಬ್ಬ ನೂತನ ಮಹಾರಾಜ ಕೆಲವು ವರ್ಷಗಳ ಹಿಂದೆ ಹೆಮ್ಮೆಯಿಂದ ಪ್ರಕಟಿಸಿದ್ದ: ''ನನ್ನ ಆಳುಗಳು ಸಹ ಲಕ್ಷಾಧಿಪತಿಗಳು,'' ಎಂದು.

ಈ ಇಪ್ಪತ್ತು ಲಕ್ಷ ಮಂದಿ ಕರ್ನಾಟಕದಲ್ಲಿ ಒಂದು ತರಹದ 'ಅತಿಶಯ ಪ್ರಭುತ್ವ' ಎನ್ನುವ ರೀತಿಯಲ್ಲಿದ್ದಾರೆ. ಇದನ್ನೇ ಇಂಗ್ಲಿಷಿನಲ್ಲಿ 'ಸೂಪರ್ ಸ್ಟೇಟ್' ಎನ್ನುತ್ತಾರೆ. ಅಂದರೆ ರಾಜ್ಯಾಧಿಕಾರ ಹೊಂದಿರುವವರ ಮೇಲಿನ ಪ್ರಭುಗಳು ಇವರು. ಅವರು ಸಾಮಾನ್ಯ ಕಾನೂನಿನ ಪರಿಧಿಗೆ ಬರುವುದಿಲ್ಲ. ಅವರು ರಚಿಸಿಕೊಳ್ಳುವುದೇ ಅವರಿಗೆ ಕಾನೂನು. ''ಕರ್ನಾಟಕದ ನೂತನ ಮುಖ'' ಎಂದರೆ ಅವರೇ. ಇಡೀ ದೇಶದ ಹೊಸ ಮುಖವೆಂದರೆ ಅವರು ಎಂದರೂ ತಡೆಯುತ್ತದೆ. ಬರುವ ವರ್ಷಗಳಲ್ಲಿ ಬೆಂಗಳೂರನ್ನು ಭಾರತದ ಷಾಂಘೈ ಆಗಿ ಪರಿವರ್ತಿಸುವ ಆಶಾಭಾವನೆ ಅವರಲ್ಲಿದೆ. ಅವರ ಹೊಸ ಜೀವನಶೈಲಿಗೆ ಅಮೆರಿಕಾವೇ ಮಾದರಿ. ಕ್ಯಾಸಿನೋಗಳು (ಅಂದರೆ, ಜೂಜುತಾಣಗಳು), ಝಗಮಗಿಸುವ ವಿಶಾಲ ಮತ್ತು ಬೃಹತ್ತಾದ ಅಂಗಡಿಗಳು, ಮತ್ತು ಡಿಸ್ಕೋಗಳು ಅವರಿಗೆ ಆಪ್ಯಾಯಮಾನ. ಈ ಆಧುನಿಕ ವೈಭವಗಳಿಗೆ ಎಷ್ಟು ಬೇಕಾದರೂ ಹಣ ಸುರಿಯಲು ಅವರು ಸಿದ್ಧ. ಈ ಹೊಸ ವೈಖರಿಯ ಜೀವನವನ್ನು ತಮ್ಮದನ್ನಾಗಿಸಿಕೊಂಡಿರುವ ಈ ಇಪ್ಪತ್ತು ಲಕ್ಷ ಅದೃಷ್ಟವಂತರಿಗೆ ಲೈಂಗಿಕ ಜೀವನಕ್ಕೆ ಬಗೆ ಬಗೆಯ ಹೊಸ ವಿಧಾನಗಳು ತೆರೆದುಕೊಂಡಿವೆ. ಅವರ ಜೀವನಕ್ಕೆ ಅದು ಒಂದು ಐಂದ್ರಿಯ ಆಯಾಮವನ್ನು ಕಲ್ಪಿಸಿಕೊಟ್ಟಿದೆ ಹಾಗೂ ಹಿರಿಯ ಪೀಳಿಗೆಯವರ ಮನೋಭಾವಕ್ಕೆ ಬಲವಾದ ಆಘಾತವನ್ನು ನೀಡಿದೆ. ಈ ಹೊಸ ಜೀವನಶೈಲಿಯ ಬಗ್ಗೆ ಆ ಮುದಿಗೂಬೆಗಳು ಏನು ಭಾವಿಸಿದರೇನು ಎಂಬ ಔದಾಸೀನ್ಯ ಈ ಯುವ ಪೀಳಿಗೆಯದು. ವಿಶ್ವವೇ ಅವರದೆಂಬ ಧೋರಣೆ ಬೇರೆ. ಅವರ ಪೈಕಿ ಕೆಲವರ ಶ್ರೀಮಂತಿಕೆ ಎಷ್ಟಿದೆಯೆಂದರೆ ಜೀವನದ ವೈಭೋಗಗಳನ್ನೆಲ್ಲಾ ಕೊಳ್ಳುವ ಸಾಮರ್ಥ್ಯ ಅವರಿಗಿದೆ. ಅದು ಆಸ್ತಿ, ಉಡುಪು, ಪೌಷ್ಟಿಕ ಆಹಾರ, ಲೈಂಗಿಕ ಸಂಬಂಧ, ಯಾವುದೂ ಆಗಬಹುದು. ಪ್ಯಾರಿಸ್, ದುಬೈ, ಸಿಂಗಪುರ, ನ್ಯೂಯಾರ್ಕ್ ಮುಂತಾದೆಡೆಗಳಲ್ಲಿ ಕೊಳ್ಳಬಹುದಾದ್ದನ್ನು ಅವರು ಮನಸೋ ಇಚ್ಛೆ ಪಡೆದುಕೊಳ್ಳಬಲ್ಲರು. ಇವರ ಶ್ರೀಮಂತಿಕೆಯನ್ನು ಕಂಡು ಕರುಬಿ ಅಮೆರಿಕಾದಲ್ಲಿ ನೆಲೆಸಿರುವ ನೂರಾರು ಜನರು ಭಾರತದಲ್ಲೇ ಇರುವ ಕಿರು-ಅಮೆರಿಕಾಕ್ಕೆ ಹಿಂದಿರುಗಲು ಪ್ರೇರೇಪಿಸಲ್ಪಟ್ಟಿದ್ದಾರೆ.

ಎಲ್ಲ ಬಣ್ಣಗಳ ರಾಜಕೀಯ ನಾಯಕರೂ ಇವರ ಹಿಂದೆ ಕೈಕಟ್ಟಿನಿಂತು ಓಲೈಸುತ್ತಿದ್ದಾರೆ. ಏಳುಬೀಳುಗಳಿರುವ ರಾಜಕೀಯದಲ್ಲಿ ಅವರಿಗೀಗ ಒಂದೇ ಕಡೆ ಎಲ್ಲ ಸೌಭಾಗ್ಯವೂ ದಕ್ಕಿಬಿಡುವ ಸಾಧ್ಯತೆ ಇದೆ. ಹಣ, ಅಧಿಕಾರ, ಲೋಲುಪತೆ ಎಲ್ಲಾ ಅವರದಾಗಬಹುದು. ಅವರ ಮಕ್ಕಳು ಮತ್ತು ಮೊಮ್ಮಕ್ಕಳು ಈಗ ರಾತ್ರಿಯಿಡೀ ಪಾರ್ಟಿಗಳಲ್ಲಿ ನಿರತರಾಗಿ ರಸದೂಟ, ಪಾನೀಯ, ನೃತ್ಯ, ಜೂಜು ಇವುಗಳಲ್ಲಿ ಸುಖಿಸುತ್ತಾರೆ. ಭಾರತದ 'ನೂತನ ಪರ್ವ'ವನ್ನು ಅವರು ಸ್ವಾಗತಿಸುವುದು ಹೀಗೆ. ಸರ್ಕಾರದ ಖಜಾನೆ ಮತ್ತು ಹಣಕಾಸು ಸಂಸ್ಥೆಗಳ ಬಾಗಿಲುಗಳನ್ನು ರಾಜ್ಯಗಳ ಮತ್ತು ರಾಷ್ಟ್ರದ ನಾಯಕರು ಇವರಿಗಾಗಿ ತೆರೆದಿಡಿಸಿದ್ದಾರೆ. ಕಿರು-ಅಮೆರಿಕಾದ ದುಬಾರಿ ಬೇಕು-ಬೇಡಗಳಿಗೆ ಹಣವು ಸಾರ್ವಜನಿಕ ತಿಜೋರಿಯಿಂದ ಬರುತ್ತಿದೆ. ಸ್ವರ್ಗದಿಂದ ಅಮೃತವು ತಮ್ಮ ಬೊಗಸೆಯೊಳಕ್ಕೆ ತಾನೇ ತಾನಾಗಿ ಬಂದು ಬಿದ್ದಿದೆಯೆಂಬ ಸಂತೃಪ್ತಿ ಅವರದಾಗಿದೆ. ಬೆಂಗಳೂರು, ಕರ್ನಾಟಕದ ಇತರ ಭಾಗಗಳು, ಹಾಗೂ ಇಡೀ ಭಾರತದಲ್ಲಿ ಉಂಟಾಗಿರುವ ಈ ರೀತಿಯ ಬದಲಾವಣೆಯನ್ನು ಸುದೀರ್ಘವಾಗಿ ವಿವರಿಸುತ್ತಾ ಹೋಗಬಹುದು.

ಇದು ಕರ್ನಾಟಕದ 'ಆಧುನೀಕರಣ'ದ ಪ್ರಕ್ರಿಯೆ. ಭಾರತದಲ್ಲಿ ಮುಂದೇನಾಗ ಬಹುದೆಂಬುದಕ್ಕೆ ಇದು ಪೂರ್ವಭಾವಿ ಸೂಚನೆ. ಈ ಆಧುನೀಕರಣವನ್ನು ತೀವ್ರಗತಿಯಲ್ಲಿ ಮುನ್ನಡೆಸಲಾಗುತ್ತಿದೆ. ಸದ್ಯದಲ್ಲೇ ಬೆಂಗಳೂರು-ಮೈಸೂರುಗಳ ನಡುವಣ ಒಂದು ವಿಶಾಲ ಪ್ರದೇಶವು ವಿಶೇಷ ಆರ್ಥಿಕ ವಲಯವಾಗಿ ಪರಿವರ್ತನೆ ಹೊಂದಲಿದೆ. ಅಲ್ಲಿ ಅಭಿವೃದ್ಧಿಯ ಮಾದರಿಯೆಂದರೆ ಈವರೆಗೆ ನಾವು ಗಮನಿಸಿದ ಅಂಶಗಳೇ; ಅದಕ್ಕೆ ಇನ್ನೊಂದು ಹೊಸ ಆಯಾಮವನ್ನು ಕಲ್ಪಿಸಲಾಗುತ್ತದೆ: ಅಂತರರಾಷ್ಟ್ರೀಯ ಪ್ರವಾಸೋದ್ಯಮದ ರೂಪದಲ್ಲಿ. ಆಗ ಅದ್ದೂರಿ ವಿಮಾನ ನಿಲ್ದಾಣ, ನೂರಾರು ಹೋಟೆಲ್‌ಗಳು, ಹೆದ್ದಾರಿಗಳು, ವೇಗಸಂಚಾರದ ರಸ್ತೆಗಳು, ಮೇಲು ಸೇತುವೆ ರಸ್ತೆಗಳು, ದೊಡ್ಡ ಮಾಲ್‌ಗಳು, ಎಲ್ಲವೂ ಸೇರಿಕೊಳ್ಳುತ್ತವೆ. ಆಗಲೇ ಪ್ರಸ್ತಾಪಿಸಿದ 'ಅತಿಶಯ ಪ್ರಭುತ್ವ'ದಲ್ಲಿ ಸೇರ್ಪಡೆ ಹೊಂದಿರುವ ಇಪ್ಪತ್ತು ಲಕ್ಷ ಮಂದಿ ಮತ್ತು ಅವರೊಡನೆ ಹೊಸದಾಗಿ ಸೇರಿಕೊಳ್ಳುವ ಇನ್ನೊಂದಷ್ಟು ಮಂದಿಯ ಅಗತ್ಯ ಗಳನ್ನು ಪೂರೈಸಲು ಇವೆಲ್ಲಾ ಸಾಧನಗಳಾಗಿರುತ್ತವೆ.

- ೨ -

*ಕರ್ನಾಟಕದ ಇನ್ನುಳಿದ ಐದು ಕೋಟಿ ಜನರ ಪಾಡೇನು? ರಾಜಕೀಯ ನಾಯಕರು ಅದಕ್ಕೊಂದು ಅಧಿಕೃತ ವಿವರಣೆ ನೀಡುತ್ತಾರೆ: ಈ 'ಅತಿಶಯ ಪ್ರಭುತ್ವ' ಎಂಬುದೊಂದು ಪಿಡುಗಲ್ಲ; ಬದಲಾಗಿ, 'ಅಭಿವೃದ್ಧಿಗೆ ಅದೊಂದು ಚಾಲಕ ಯಂತ್ರ', ಎಂದು. ಜನರ ಇಡೀ ಆರ್ಥಿಕತೆಗೆ ಅದು ಹೊಸ ಹುರುಪನ್ನು ತುಂಬುತ್ತದೆ; ಅಭಿವೃದ್ಧಿಯ ಹೊಸ ಕ್ರಾಂತಿಗೆ ಜನರನ್ನು ಅದು ಸಜ್ಜುಗೊಳಿಸುತ್ತದೆ, ಎಂದೂ ಅವರು ಹೇಳುತ್ತಾರೆ. ಹಾಗೆ ಹೇಳುವಾಗ ಅವರು 'ಅತಿಶಯ ಪ್ರಭುತ್ವ'ದ ಸಮರ್ಥಕ ರಾಗಿರುತ್ತಾರೆ; ಅದಕ್ಕಾಗಿ ಸಂಭಾವನೆ ಪಡೆದಿರುತ್ತಾರೆ. ಜನಸಮುದಾಯವು ಅವರನ್ನು ಅಧಿಕಾರಸ್ಥಾನಕ್ಕೆ ಚುನಾಯಿಸಿದೆ ಮತ್ತು ಅವರು ಜನನಾಯಕರು ಎಂಬುದನ್ನು ಎಂದೋ ಮರೆತುಬಿಟ್ಟಿರುತ್ತಾರೆ.*

ಈಗ ಕೆಲವು ವಾಸ್ತವಾಂಶಗಳತ್ತ ಹೊರಳೋಣ: ಮೊದಲಿಗೆ ಕರ್ನಾಟಕವು ಕಳೆದ ಹದಿನೈದು ವರ್ಷಗಳಲ್ಲಿ ಮಾಹಿತಿ ತಂತ್ರಜ್ಞಾನ ಕ್ರಾಂತಿಯಲ್ಲಿ ಈಗಾಗಲೇ ಏನನ್ನು ಸಾಧಿಸಿದೆಯೆಂಬುದನ್ನು ನೋಡಬೇಕು; ಈ ಕ್ಷೇತ್ರದಲ್ಲಿ ಕರ್ನಾಟಕವು ಜಾಗತಿಕ ನಾಯಕತ್ವದಲ್ಲಿ ಭಾಗಿಯಾಗಿದೆ.

ಭಾರತದ ಅಂಕಿ-ಸಂಖ್ಯೆಗಳ ಪಟ್ಟಿಗಳನ್ನು ಗಮನಿಸಿದರೆ ಮೊದಲು ಎದ್ದುಕಾಣುವ ಅಂಶ ಇದು: ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲದೆ ವಿದೇಶಿ ಕಂಪನಿಗಳು ಹಾಗೂ ಇತರ ಸೇವಾಘಟಕಗಳು ಬೇಕಾದಷ್ಟು ಬಂಡವಾಳವನ್ನು ಕರ್ನಾಟಕದಲ್ಲಿ ತೊಡಗಿಸಿವೆ. ಆದರೆ ೧೯೯೧ರಿಂದ ೨೦೦೩ರವರೆಗಿನ ವರ್ಷಗಳಲ್ಲಿ ಕರ್ನಾಟಕದಲ್ಲಿ ವೈಯಕ್ತಿಕ ಸರಾಸರಿ ತಲಾ ಆದಾಯವು ಕಡಿಮೆಯಾಗಿದೆ. ಮೊದಲಿಗೆ ಈ ಬಾಬ್ತಿನಲ್ಲಿ ಕರ್ನಾಟಕವು ಭಾರತದಲ್ಲಿ ಹತ್ತನೆಯ ಸ್ಥಾನದಲ್ಲಿತ್ತು; ೨೦೦೩ರ ವೇಳೆಗೆ ಅದು ಹದಿಮೂರನೆಯ ಸ್ಥಾನಕ್ಕಿಳಿದಿದೆ. 'ಕ್ರಾಂತಿ'ಯ ಫಲ ಹಾಗಾದರೆ ಎಲ್ಲಿ ಹೋಯಿತು ? ರಾಜ್ಯದ ಜನರ ಒಟ್ಟು ಆದಾಯದಲ್ಲಿ ಹೆಚ್ಚಳವನ್ನು ತೋರಿಸಲಾಗಿದೆ. ಆದರೆ ಅದೇ ವರ್ಷಗಳಲ್ಲಿ ಬೇರೆ ಕ್ಷೇತ್ರಗಳಲ್ಲಿ ರಾಜ್ಯವು ಅನುಭವಿಸಿದ ನಷ್ಟವನ್ನು ಈ ಆದಾಯವು ತುಂಬಿ ಕೊಡಲಾರದೆ ಹೋಯಿತು. ಅಚ್ಚರಿಯುಂಟುಮಾಡುವ ಒಂದು ವಾಸ್ತವಾಂಶವನ್ನು ಈ ಸಂಬಂಧದಲ್ಲಿ ನಾವು ಗಮನಿಬೇಕು: ೧೯೯೦ರಲ್ಲಿ ಕರ್ನಾಟಕದ ಕಾರ್ಖಾನೆ ಗಳಲ್ಲಿ ಉದ್ಯೋಗಿಗಳಾಗಿದ್ದವರ ಸಂಖ್ಯೆ ೭,೫೨,೦೦೦; ೨೦೦೩ರಲ್ಲಿ ಅದು ಅರ್ಧಕ್ಕಿಂತಲೂ ಕಡಿಮೆಯಾಗಿ ೩,೭೦,೦೦೦ವನ್ನು ಮುಟ್ಟಿತ್ತು. ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಜಾಗತಿಕ ಖ್ಯಾತಿ ಗಳಿಸಲು ಕರ್ನಾಟಕವು ಬೇರೆ ಕ್ಷೇತ್ರಗಳಲ್ಲಿ ತೆರಬೇಕಾಗಿ ಬಂದ ಅಗಾಧ ಬೆಲೆ ಎಷ್ಟೆಂಬುದು ಇದರಿಂದ ತಿಳಿಯುತ್ತದೆ.

ರಾಜ್ಯಕ್ಕೆ ಸಂಬಂಧಿಸಿದ ಬೇರೆ ಕೆಲವು ಆರ್ಥಿಕ ದತ್ತಾಂಶಗಳು ಮೇಲೆ ನಮೂದಿಸಿದ ಅಂಶಗಳಷ್ಟೇ ಖೇದಕರವಾಗಿವೆ. ಒಂದು ಹೆಕ್ಟೇರಿಗೆ ತಲಾ ಇಂತಿಷ್ಟು ಆಹಾರದ ಉತ್ಪಾದನೆಯೆಂಬ ದೃಷ್ಟಿಯಿಂದ ನೋಡಿದರೆ ರಾಷ್ಟ್ರದಲ್ಲಿ ಕರ್ನಾಟಕದ್ದು ಹದಿನಾಲ್ಕನೆಯ ಸ್ಥಾನ. ದಕ್ಷಿಣ ಭಾರತದ ರಾಜ್ಯಗಳಲ್ಲಿ ಇದು ಕನಿಷ್ಠತಮ ಮತ್ತು ಪಂಜಾಬಿನೊಡನೆ ಹೋಲಿಸಿದರೆ ಅದರ ನಾಲ್ಕನೆಯ ಒಂದರಷ್ಟು ಮಾತ್ರ ಉತ್ಪಾದನೆ ಇದೆ. ರಾಜ್ಯದಲ್ಲಿ ತಾಂತ್ರಿಕ ಪವಾಡ ನಡೆದುಬಿಟ್ಟಿದೆಯೆಂಬ ಅಬ್ಬರದ ಪ್ರಚಾರದ ಮಧ್ಯೆ ನಿವ್ವಳ ಔದ್ಯಮಿಕ ಉತ್ಪನ್ನದತ್ತ ಕಣ್ಣು ಹಾಯಿಸುವುದು ಕಡಿಮೆ. ಇದರಲ್ಲಿ ಕರ್ನಾಟಕದ್ದು ರಾಷ್ಟ್ರದಲ್ಲಿ ಆರನೆಯ ಸ್ಥಾನ. ಈ ಕ್ಷೇತ್ರದಲ್ಲಿ ಗುಜರಾತ್ ಕರ್ನಾಟಕದ ಉತ್ಪಾದನೆ ಗಿಂತಲೂ ಮೂರುಪಟ್ಟು ಹೆಚ್ಚು ಉತ್ಪಾದಿಸುತ್ತದೆ. ಜೀವನಮಟ್ಟವನ್ನು ಸೂಚಿಸುವ ಒಂದು ಅಂಶವೆಂದರೆ ವಿದ್ಯುತ್ತಿನ ಗೃಹಬಳಕೆ. ತಲಾ ಇಷ್ಟು ಎಂಬ ಲೆಕ್ಕದಲ್ಲಿ ದಕ್ಷಿಣದ ರಾಜ್ಯಗಳಲ್ಲಿ ಕರ್ನಾಟಕದ್ದು ಕಡೆಯ ಸ್ಥಾನ ಮತ್ತು ರಾಷ್ಟ್ರಮಟ್ಟದಲ್ಲಿ ಬಹಳ ಹಿಂದುಳಿದಿದೆ. ಉದ್ಯೋಗನಿರತ ಮಹಿಳೆಯರ ಸಂಖ್ಯೆಯನ್ನು ಗಮನಿಸಿದರೆ ಕರ್ನಾಟಕವು

ಮಧ್ಯಪ್ರದೇಶಕ್ಕೆ ಸಮನಾಗಿದೆ. ಒಟ್ಟು ಉದ್ಯೋಗಸ್ಥರಲ್ಲಿ ಮಹಿಳೆಯರ ಪಾಲು ಶೇಕಡ ೩೩. ಬಡತನದ ವ್ಯಾಪ್ತಿಯ ಸೂಚಕಗಳಲ್ಲಿ ಇದು ಪ್ರಮುಖವಾದ್ದು.

ಹಾಗಿದ್ದರೆ ಕರ್ನಾಟಕದ ಏಳು-ಬೀಳುಗಳಿಗೆ ಈ ನೂತನ ಮಹಾರಾಜರು, ರಾಜರು ಮತ್ತು ಅವರ ಇಪ್ಪತ್ತು ಲಕ್ಷ ಸೇವಕವೃಂದ ನೀಡಿರುವ ಕಾಣಿಕೆ ಏನು ? ಏಳಿಗೆ ಇರುವುದು ಪಾಶ್ಚಿಮಾತ್ಯ ದೇಶಗಳಿಗೆ, ವಿಶೇಷತಃ ಅಮೆರಿಕಾಕ್ಕೆ, ಸಾಫ್ಟ್‌ವೇರ್ ಸೇವಾ ಅವಶ್ಯಕತೆಗಳನ್ನು ಪೂರೈಸುವ ಪ್ರಕಾಶಮಾನವಾದ ವಿಭಾಗದಲ್ಲಿ; ಕುಸಿತ ಇರುವುದು ರಾಜ್ಯದ ಐದುಕೋಟಿ ಸಾಮಾನ್ಯಜನರ ಆದಾಯದಲ್ಲಿ. ಬೇರೆ ರಾಜ್ಯಗಳ ಇದೇ ವಿಭಾಗದ ಜನರೊಡನೆ ಹೋಲಿಸಿದರೆ ಕರ್ನಾಟಕದ ಸಾಮಾನ್ಯಜನರ ಆದಾಯವು ಕಡಿಮೆ ಇದೆ. ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಅಗಾಧ ಬೆಳವಣಿಗೆಯ ನಡುವೆ ಕರ್ನಾಟಕದ ಒಟ್ಟು ಅಭಿವೃದ್ಧಿಯು ರಾಷ್ಟ್ರದ ಬೇರೆ ರಾಜ್ಯಗಳ ಸರಾಸರಿ ಬೆಳವಣಿಗೆಗಿಂತಲೂ ಹೆಚ್ಚು ಹಿಂದುಳಿದಿದೆ; ಹಾಗಿದ್ದಾಗ್ಯೂ ಕರ್ನಾಟಕದಲ್ಲಿ ಒಂದು 'ಅತಿಶಯ ಪ್ರಭುತ್ವವು' – ಅಂದರೆ, ಉಪಭೋಗವನ್ನು ಪ್ರೀತಿಸುವ ಇಪ್ಪತ್ತು ಲಕ್ಷ ಮಂದಿ – ತಲೆಯೆತ್ತಿರುವುದು ನಿಜ. ಅದು ಸಾಧ್ಯವಾಗುವುದು ಹೇಗೆ? ಒಟ್ಟು ಲಭ್ಯವಿರುವ ಸ್ವಾದಿಷ್ಟ ರೊಟ್ಟಿಯ ಬಹುಪಾಲನ್ನು ತನ್ನದನ್ನಾಗಿ ಮಾಡಿಕೊಂಡಿರುವುದರಿಂದಲ್ಲದೆ ಬೇರೇನೂ ಅಲ್ಲ. ಇದರ ನೇರ ಪರಿಣಾಮವೆಂದರೆ ಜನಸಾಮಾನ್ಯರು ಇನ್ನೂ ಹೆಚ್ಚಾಗಿ ಅವಶ್ಯಕತೆಗಳ ಪೂರೈಕೆಯಿಂದ ವಂಚಿತರಾಗುವುದು. ಎತ್ತಿನ ಗಾಡಿಯ ಯುಗದಿಂದ ವಿಮಾನಗಳ ಯುಗಕ್ಕೆ ದಾಪುಗಾಲಿಟ್ಟು ಹಾರಲು ಇದೇ ಅತ್ಯುತ್ತಮ ಮಾದರಿಯೆಂದು ಭಾವಿಸಿ ಪ್ರಭುತ್ವವು ಪ್ರಜ್ಞಾ ಪೂರ್ವಕವಾಗಿ ಇದೇ ಪದ್ಧತಿಯನ್ನು ಮುಂದುವರಿಸಿಕೊಂಡು ಹೋಗಲು ತೀರ್ಮಾನಿಸಿದೆ. ಹಿಂದುಳಿದಿರುವಿಕೆಯಿಂದ ಅಭಿವೃದ್ಧಿಯತ್ತ ಹಾದಿಯೆಂದರೆ ಇದೇ ಎಂಬ ಭ್ರಮೆ ಇರುವವರೆಗೆ ಹಿಂದುಳಿದವರು ಇನ್ನೂ ಹಿಂದಕ್ಕೆ ಸಾಗುತ್ತಲೇ ಇರಬೇಕಾಗುತ್ತದೆ.

- ೨ -

ಇದಕ್ಕೆ ಪರ್ಯಾಯವಾದ ಮಾರ್ಗವೊಂದುಂಟೆ ? ಈ ಪ್ರಶ್ನೆಗೆ ಉತ್ತರ ನೀಡುವಾಗ ಅತ್ಯಂತ ಉತ್ತಮವಾದ ವಿಧಾನವೆಂದರೆ ನಿಜಕ್ಕೂ ಪರ್ಯಾಯ ವೆನಿಸುವ ಮಾದರಿಯೊಂದನ್ನು ಪರಿಶೀಲಿಸುವುದು. ಈ ಸಂದರ್ಭದಲ್ಲಿ ಪಂಜಾಬಿನ ಬೆಳವಣಿಗೆಯು ಗಮನ ಸೆಳೆಯುತ್ತದೆ. ೧೯೪೭ರಲ್ಲಿ ಭಾರತವು ವಿಭಜನೆಗೊಂಡಾಗ ಭಾರತದಲ್ಲಿ ಉಳಿದ ಪಂಜಾಬಿನ ಭಾಗವು ಪಾಕಿಸ್ತಾನಕ್ಕೆ ದಕ್ಕಿದ ಪಶ್ಚಿಮ ಪಂಜಾಬಿನ ಭಾಗಕ್ಕಿಂತಲೂ ಹೆಚ್ಚು ಬರಡಾಗಿದ್ದದ್ದು, ಬಡತನದಿಂದ ಕೂಡಿದ್ದದ್ದು. ಭಾರತದಲ್ಲಿ ಉಳಿದ ಪಂಜಾಬಿನ ದಕ್ಷಿಣ ವಿಭಾಗವು ಬಹುಮಟ್ಟಿಗೆ ಮರುಭೂಮಿಯ ತೆರನಾದ್ದು; ರಾಜಸ್ಥಾನದ ವಿಸ್ತರಣೆ ಎಂಬಂತೆ ಇದ್ದ ಭಾಗ ಇದು. ಅದನ್ನು ಬಿಟ್ಟು ಉಳಿದ ಭಾಗದಲ್ಲಿ ಕೃಷಿ ಉತ್ಪಾದನೆಯು ಕೆಳಮಟ್ಟದ್ದೇ ಆಗಿತ್ತು. ಪಾಕಿಸ್ತಾನದಿಂದ ಹರಿದುಬಂದ ನಿರಾಶ್ರಿತರ ಪ್ರವಾಹವು ಲಕ್ಷಗಟ್ಟಲೆ ಜನರನ್ನು ತಂದಿತು. ಮೊದಲೇ ಬಡತನದಿಂದ ಬಸವಳಿದಿದ್ದ ಪಂಜಾಬಿಗೆ ಇದೊಂದು ದೊಡ್ಡ ಹೊರೆಯಾಯಿತು. ಆದರೆ ಕೆಲವೇ ವರ್ಷಗಳಲ್ಲಿ ಪಂಜಾಬಿನ ಪರಿಸ್ಥಿತಿಯು ಬದಲಾವಣೆ ಹೊಂದಿತು.

ಅದೆಲ್ಲಿಂದ ಬಂದುವೋ ಏನೋ ಎನ್ನುವಂತೆ, ಹೊಸ ಪಂಜಾಬ್ ರಾಜ್ಯದ ಹೆದ್ದಾರಿಗಳ ಉದ್ದಕ್ಕೂ ಅಲ್ಲಲ್ಲಿ ಚಿಕ್ಕ ಚಿಕ್ಕ ಕಾರ್ಖಾನೆಗಳು ತಲೆಯೆತ್ತಿದುವು. ಭಾರಿ ಸಂಖ್ಯೆಯಲ್ಲಿ ರಾಜ್ಯವನ್ನು ಪ್ರವೇಶಿಸಿದ್ದ ನಿರಾಶ್ರಿತರಿಗೆ ಆಶ್ರಯ ಒದಗಿಸುವ ಕ್ರಮದಿಂದಾಗಿ ಉದ್ಭವಿಸಿದ ಸನ್ನಿವೇಶ ಇದು. ಹೊಸ ನಗರಪ್ರದೇಶಗಳನ್ನು, ವಸತಿ ಪ್ರದೇಶಗಳನ್ನು, ನಿರ್ಮಿಸಲು ಬೇಕಾದ ಕೌಶಲ್ಯವನ್ನು ಸ್ವತಃ ನಿರಾಶ್ರಿತರೇ ಒದಗಿಸಿದರು. ಅವರಲ್ಲಿ ಮನೆ ಕಟ್ಟುವವರಿದ್ದರು, ವಾಹನ ಚಾಲಕರಿದ್ದರು, ತಾಂತ್ರಿಕ ಕೌಶಲ್ಯ ಉಳ್ಳವರಿದ್ದರು, ಕರಕುಶಲ ಕೆಲಸಗಾರರಿದ್ದರು, ಕಮ್ಮಾರರಿದ್ದರು; ಹೀಗೇ ಇನ್ನೂ ಬೇರೆ ಬೇರೆ ಕೌಶಲ್ಯವುಳ್ಳವರಿದ್ದರು. ಉತ್ತರ ಭಾರತದ ಚಳಿಯನ್ನು ಎದುರಿಸಲು ಬೇಕಾಗುವಂತಹ ಉಣ್ಣೆ ಬಟ್ಟೆಗಳನ್ನು ಹೆಣೆಯುವುದನ್ನು ಮಹಿಳೆಯರು ಮುಖ್ಯ ಕಸುಬನ್ನಾಗಿ ಮಾಡಿಕೊಂಡರು.

ನಾನು ಪಂಜಾಬಿನಲ್ಲಿ ದೀರ್ಘ ಪ್ರವಾಸ ಕೈಗೊಂಡದ್ದು ೧೯೫೫ರಲ್ಲಿ. ಆಗ್ಗೆ ರಸ್ತೆ ಬದಿಯ ಉತ್ಪಾದನಾ ಘಟಕಗಳು ಅನೇಕ ರೀತಿಯ ವಸ್ತುಗಳನ್ನು ತಯಾರಿಸುತ್ತಿದ್ದವು: ಸೂಜಿಯಿಂದ ಹಿಡಿದು ಬೈಸಿಕಲ್ಲಿನ ಬಿಡಿಭಾಗಗಳವರೆಗೆ, ಉತ್ಪಾದನಾ ಸಲಕರಣೆಗಳಿಂದ ಹಿಡಿದು ಕೃಷಿ



ಉಪಯೋಗಿ ಸಾಧನಗಳವರೆಗೆ; ಕೆಲವು ಮೋಟಾರಿನ ಬಿಡಿಭಾಗಗಳು ಹಾಗೂ ಕಟ್ಟಡ ನಿರ್ಮಾಣಕ್ಕೆ ಬೇಕಾದ ಸಲಕರಣೆಗಳು ಸಹ.

ಈ ಪವಾಡವು ನಡೆದದ್ದು ಹೇಗೆ ? ೧೯೪೭ರಿಂದ ೧೯೫೫ರವರೆಗೆ ಚಿಕ್ಕ ಪುಟ್ಟ ತಾಂತ್ರಿಕ ಕೌಶಲ್ಯವುಳ್ಳವರು, ಅರೆಬರೆ ಕಾರ್ಖಾನೆ ಗುಡಾರಗಳಲ್ಲಿ ಕೆಲಸ ಮಾಡುತ್ತಿದ್ದವರು, ಒಂದು ವಿಶೇಷವನ್ನು ಕಂಡುಕೊಂಡರು; ವಿದ್ಯುಚ್ಚಾಲಿತ ಲೇತ್ ಹಾಗೂ ಡ್ರಿಲಿಂಗ್ ಮತ್ತು ವೆಲ್ಡಿಂಗ್ ಯಂತ್ರಗಳಿದ್ದರೆ ಪ್ರಪಂಚದಲ್ಲಿರುವ ಏನನ್ನು ಬೇಕಾದರೂ ಮಾಡಬಹುದು ಮತ್ತು ಅನುಕರಿಸಬಹುದು ಎಂಬುದು ಆ ವಿಶೇಷ. ಇಂಜಿನ್ ಒಂದನ್ನುಳಿದು ಮೋಟಾರು ಕಾರು ಸಹ ಮಾಡಬಹುದೆಂಬ ತಿಳಿವು ಅವರಲ್ಲಿ ಮೂಡಿತು. ಕೆಲವೇ ವರ್ಷಗಳಲ್ಲಿ ಇದೇ ಗಟ್ಟಿ ಮುಟ್ಟಾದ, ಅರೆ-ಅಕ್ಷರಸ್ಥ ಜನ ಎಣ್ಣೆ-ಬಣ್ಣಗಳಿಂದ ಕೈಗಳನ್ನೂ ಬಟ್ಟೆಗಳನ್ನೂ ಕೊಳಕು ಮಾಡಿಕೊಂಡು ಅನೇಕ ಮಾದರಿಗಳಲ್ಲಿ ವರ್ಣಲೇಪ ಮಾಡುವುದನ್ನು ಹಾಗೂ ಅದನ್ನು ಮಾಡಲು ಬೇಕಾದ ಮಶೀನನ್ನು ಮಾಡುವುದನ್ನೂ ಕಲಿತರು. ಆಮೇಲೆ ಲೇತ್‌ಗಳು, ಡ್ರಿಲಿಂಗ್ ಹಾಗೂ ವೆಲ್ಡಿಂಗ್ ಯಂತ್ರಗಳನ್ನೂ ಮಾಡಲಾರಂಭಿಸಿದರು. ಇಂತಹ ಪ್ರಾಥಮಿಕ ಸಾಧನಗಳಿಂದ ಅವರು ಉತ್ಪಾದಿಸಲಾರಂಭಿಸಿದ ಸರಕುಗಳ ವೈವಿಧ್ಯ ನಿಜಕ್ಕೂ ಅಚ್ಚರಿ ಮೂಡಿಸು ವಂಥದು. ದಿನಬಳಕೆಯ ವಿದೇಶಿ ಉಪಕರಣಗಳನ್ನು ನೋಡಿ ಅಂಥವನ್ನು ಅಚ್ಚುಹಾಕುವುದರಲ್ಲಿ ಇವರೇ ನಮ್ಮ ದೇಶದಲ್ಲಿ ಬಹುಶಃ ಮೊದಲಿಗರು. ಆಗ್ಗೆ ಅಂತಹ ಸರಕುಗಳನ್ನು ಆಮದು ಮಾಡಿಕೊಳ್ಳುವುದನ್ನು ನಿಷೇಧಿಸಲಾಗಿತ್ತು. ವಿದೇಶಿ ವಿನಿಮಯವನ್ನು ಜೋಪಾನವಾಗಿ ಕಾದಿರಿಸಲು ಅದು ಅಗತ್ಯವಾಗಿತ್ತು ಕೂಡ. ಮಿಕ್ಸಿಗಳು, ವಿದ್ಯುದುಪಕರಣಗಳು, ಅಡಿಗೆ ಒಲೆಗಳು ಮುಂತಾದ ಗೃಹೋಪಯೋಗಿ ವಸ್ತುಗಳು ತಯಾರಾದುವು. ಕೆಲ ಕಾಲಾನಂತರ ಸೈಕಲ್ಲುಗಳು, ಹೊಲಿಗೆ ಯಂತ್ರಗಳು, ಧಾನ್ಯ ಬಿಡಿಸುವ ಯಂತ್ರಗಳು, ಪರ್ಷಿಯನ್ ಗಾಲಿಗಳು, ಬಟ್ಟೆಗಿರಣಿಗಳಿಗೆ ಬೇಕಾದ ಸ್ಪಿಂಡಲ್‌ಗಳು, ಲೂಮ್‌ಗಳು, ಚಿಕ್ಕಚಿಕ್ಕ ರೇಡಿಯೋಗಳು, ಫ್ಯಾನುಗಳು ಹೀಗೆ ಅನೇಕಾನೇಕ ವಸ್ತುಗಳ ಉತ್ಪಾದನೆ ಆರಂಭವಾಯಿತು. ಅವುಗಳಿಗೆ ಮಾರುಕಟ್ಟೆಯಲ್ಲಿ ಬೇಡಿಕೆಯೂ ಹೆಚ್ಚುತ್ತಲಿತ್ತು.

ಅದಾದನಂತರ ಸರದಿ ಬಂದಿದ್ದು ಹೆಚ್ಚು ನಿಷ್ಕೃಷ್ಟವಾದ ಯಂತ್ರಸಾಧನಗಳ ಉತ್ಪಾದನೆಗೆ : ಉದಾಹರಣೆಗೆ, ಕಾರ್ ಡೈನಮೋ. ಅದಕ್ಕೆ ರೋಟಾರನ್ನು ಬಹಳ ನಿಗದಿತವಾದ ರೀತಿಯಲ್ಲಿ ಅಳವಡಿಸಬೇಕು. ಆವರೆಗೆ ಇದನ್ನು ಮಾಡಲು ಬಹು ಸಂಕೀರ್ಣವಾದ ವಿದೇಶಿ ಯಂತ್ರಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಆದರೆ ಉದ್ದುದ್ದದ ಗಡ್ಡ ಬಿಟ್ಟುಕೊಂಡಿರುತ್ತಿದ್ದ ಈ ಗಡಸು ಮಣ್ಣಿನ ಮಕ್ಕಳು ಯಾವ ಸಂಕೀರ್ಣ ಯಂತ್ರಗಳೂ ಇಲ್ಲದೆಯೇ ಅಚ್ಚುಕಟ್ಟಾದ ಯಂತ್ರಗಳನ್ನು, ಯಂತ್ರದ ಬಿಡಿಭಾಗಗಳನ್ನು ಮಾಡಲು ಕಲಿತರು. ಎಣ್ಣೆಯಿಂದ ಬಣ್ಣ ಕಟ್ಟಿದ ಅವರ ವಿಶಾಲ ಕೈಗಳು ಏನನ್ನು ಬೇಕಾದರೂ ತಯಾರಿಸಿ ಬಿಡುತ್ತವೇನೋ ಎನ್ನುವಷ್ಟು ಕೌಶಲ್ಯ ಅವರಲ್ಲಿ ತುಂಬಿಬಂದಿತು. ಎಷ್ಟೋ ವೇಳೆ ಅವರ ಮನೆಗಳೇ ಅವರ ಯಂತ್ರ ನಿರ್ಮಾಣ ಕೇಂದ್ರಗಳಾಗಿದ್ದುವು. ಮಲಗಲು ಹಗ್ಗದಿಂದ ಹೆಣೆದ ದೊಡ್ಡ ಮಂಚಗಳು. ಬೇಸಿಗೆಯಲ್ಲಿ ಕುಟುಂಬ ಸಮೇತ ಆ ಮಂಚಗಳ ಮೇಲೆ ಮನೆಯ ಹೊರಗಡೆ ಮಲಗುವುದು, ಚಳಿಗಾಲದಲ್ಲಿ ಒಳಗೆ ಮಲಗುವುದು. ಆದರೆ ಯಾವಾಗಲೂ ಮನೆಯು ಕಾರ್ಖಾನೆಯಂತೆಯೇ! ಅದರಲ್ಲಿ ಹೆಂಗಸರು ಸಹ ದುಡಿಯುತ್ತಿದ್ದರು. ಮಕ್ಕಳು ಮಾತ್ರ ನಡೆದೋ, ಬೈಸಿಕಲ್ ಸವಾರಿ ಮಾಡಿಕೊಂಡೋ ದೂರದ ಶಾಲೆಗಳಿಗೆ ಹೋಗುತ್ತಿದ್ದರು

ಎರಡನೆಯ ಪವಾಡ : ಈವರೆಗೆ ಘಟಿಸಿದ್ದು ತಾಂತ್ರಿಕತೆಯ ಒಂದು ಅಲೆ ಎನ್ನುವುದಾದರೆ,

ಇದರೊಡನೆಯೇ ಇನ್ನೊಂದು ನಿಶ್ಶಬ್ದವಾದ ಕ್ರಾಂತಿ ನಡೆಯುತ್ತಿತ್ತು. ಅದು ಉಣ್ಣೆಬಟ್ಟೆಗೆ ಸಂಬಂಧಿಸಿದ್ದು. ಅದು ಮುಖ್ಯವಾಗಿ ಲೂಧಿಯಾನಾದಲ್ಲಿ ಕೇಂದ್ರೀಕೃತವಾಗಿತ್ತು. ರಾಜ್ಯದ ಮುಖ್ಯ ಹೆದ್ದಾರಿಯಲ್ಲಿರುವ ಈ ಪಟ್ಟಣವು ಅಷ್ಟೇನೂ ಪ್ರಮುಖವಾದ ಊರಾಗಿರಲಿಲ್ಲ. ಚಿಕ್ಕಪುಟ್ಟ ಉತ್ಪಾದನಾ ಘಟಕಗಳನ್ನು ಸಣ್ಣ ಪ್ರಮಾಣದ ಉದ್ಯಮಗಳೆಂದು ವಿಂಗಡಿಸುವುದಾದರೆ, ಲೂಧಿಯಾನಾದಲ್ಲಿ ಮಹತ್ತರವಾಗಿ ಉದ್ಭವವಾದ ಚಟುವಟಿಕೆಯನ್ನು ಬಹುಮಟ್ಟಿಗೆ ಗುಡಿ ಕೈಗಾರಿಕೆಯೆಂದು ಕರೆಯಬಹುದು.

ಹೆಚ್ಚಿನ ಬೆಲೆಯ ಉಣ್ಣೆ ಬಟ್ಟೆಗಳು ಮಾರುಕಟ್ಟೆಯಲ್ಲಿದ್ದವು. ಆದರೆ ಚಳಿಗಾಲಕ್ಕೆ ಕಡಿಮೆ ಬೆಲೆಯ ಸರಕುಗಳು ಜನಸಾಮಾನ್ಯರಿಗೆ ಅಗತ್ಯವಾಗಿದ್ದವು. ಈ ಬೇಡಿಕೆಯನ್ನು ಪೂರೈಸಲು ಹೊರಟ ಲೂಧಿಯಾನಾ ಎರಡು ದಶಕಗಳಲ್ಲಿ ಉಣ್ಣೆಬಟ್ಟೆಗೆ ವಿಶ್ವದ ರಾಜಧಾನಿ ಎನ್ನುವ ಮಟ್ಟಕ್ಕೆ ಬೆಳೆಯಿತು. ನೀರಸವಾದ ಪಟ್ಟಣದಂತಿದ್ದ ಲೂಧಿಯಾನಾದಲ್ಲಿ ಹೆಚ್ಚು ಕಡಿಮೆ ಪ್ರತಿಯೊಂದೂ ಮನೆಯೂ ಒಂದು ಚಿಕ್ಕ ಕಾರ್ಖಾನೆಯಾಗಿ ಮಾರ್ಪಾಟಾಗಿ ಉಣ್ಣೆ ಉದ್ದಿಮೆಗೆ ಸಂಬಂಧಿಸಿದ ಒಂದಿಲ್ಲೊಂದು ಪರಿಕರವನ್ನು ತಯಾರಿಸುವ ಕೇಂದ್ರವಾಯಿತು. ಅದು ಹೆಣಿಗೆ ಹಾಕುವುದಿರಬಹುದು, ಇಲ್ಲವೇ ನೂಲುವುದು, ನೇಯುವುದು, ಸ್ಪಿಂಡಲ್‌ಗಳನ್ನು ಮಾಡುವುದು, ಮಗ್ಗ ಹಾಕುವುದು, ಬಣ್ಣ ಹಾಕುವುದು, ಹೀಗೆ ಬೇರಾವುದೇ ಕೆಲಸವಿರಬಹುದು, ಎಲ್ಲವೂ ಇಡೀ ಪಟ್ಟಣಕ್ಕೆ ವ್ಯಾಪಿಸಿಬಿಟ್ಟಿತು. ಒಂದು ಅಗಾಧ ಉದ್ಯಮದ ಕೊಂಡಿಗಳಂತೆ ಮನೆ ಮನೆಯೂ ಕೆಲಸ ಮಾಡುತ್ತಿದ್ದಾಗ್ಯೂ, ಪ್ರತಿಯೊಂದೂ ಒಂದು ಸ್ವತಂತ್ರ ಘಟಕದಂತೆ ಕಾಣಬರುತ್ತಿತ್ತು. ಅವನ್ನೆಲ್ಲಾ ಅಧೀನದಲ್ಲಿಟ್ಟುಕೊಂಡಿದ್ದಂತಹ ಯಾವ ಕೇಂದ್ರೀಯ ಪ್ರಾಧಿಕಾರವೂ ಇರಲಿಲ್ಲ; ಅಥವಾ ಯಾವನೋ ಒಬ್ಬ ಸಂಯೋಜಕ ಉದ್ಯಮಿಯೂ ಇರಲಿಲ್ಲ. ಸರ್ಕಾರವಂತೂ ಅದರಲ್ಲಿ ನೇರವಾಗಿ ಭಾಗಿಯೇ ಆಗಿರಲಿಲ್ಲ. ಸ್ವಾರಸ್ಯದ ಸಂಗತಿಯೆಂದರೆ ಅಮೆರಿಕಾದಿಂದಲೋ ಹಾಂಗ್‌ಕಾಂಗ್‌ನಿಂದಲೋ ಯಾರಾದರೂ ತಮ್ಮ ಬಂಧುಬಳಗದವರಿಗೆ ಕೊಡುಗೆಯಾಗಿ ತಂದ ಉಣ್ಣೆ ಪದಾರ್ಥಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದ್ದರೆ ಎಲ್ಲೋ ಒಂದು ಮೂಲೆಯಲ್ಲಿ ''ಭಾರತದಲ್ಲಿ ಮಾಡಿದ್ದು'' ಎಂದೋ, ''ಲೂಧಿಯಾನಾದಲ್ಲಿ ಮಾಡಿದ್ದು'' ಎಂದೋ ಚಿಕ್ಕಕ್ಷರಗಳಲ್ಲಿ ಮುದ್ರಿತವಾಗಿದ್ದನ್ನು ಕಾಣಬಹುದಾಗಿತ್ತು. ಅದು ಮೋಹಕವಾಗಿ ಹೆಣಿಗೆ ಹಾಕಿದ್ದ ಸ್ವೆಟರ್ ಆಗಿದ್ದಿರಬಹುದು, ಪುಲೋವರ್ ಇರಬಹುದು, ಮಕ್ಕಳ ಅಂಗಿ-ಬಟ್ಟೆ ಇರಬಹುದು, ಮಹಿಳೆಯರ ಉಡುಪುಗಳಿರಬಹುದು. ಲೂಧಿಯಾನಾದಂತಹ ಚಿಕ್ಕ ಪಟ್ಟಣದಲ್ಲಿ ಈ ಪವಾಡ ಹೇಗೆ ಘಟಿಸಿತು ಮತ್ತು ಕ್ರಮೇಣ ಅದು ಇಡೀ ಪಂಜಾಬಿಗೆ ಹೇಗೆ ಹರಡಿಕೊಂಡಿತು ಎಂಬುದು ಒಂದು ದೊಡ್ಡ ಕತೆಯಾಗುತ್ತದೆ. ಲೂಧಿಯಾನಾ ಹೀಗೆ ಉಣ್ಣೆಬಟ್ಟೆಗೆ ಪ್ರಸಿದ್ಧಿ ಹೊಂದುತ್ತಿದ್ದಾಗ ಜಲಂಧರ್‌ನಲ್ಲಿ ಬೇರೊಂದು ಉದ್ಯಮ ಅಭಿವೃದ್ಧಿಯಾಗುತ್ತಿತ್ತು. ವಿಶ್ವಕ್ಕೆಲ್ಲಾ ಆಟಪಾಟಗಳ ಸರಂಜಾಮನ್ನು ಉತ್ಪಾದಿಸುವ ಕೆಲಸ. ಅದೇ ಸಮಯದಲ್ಲಿ ಅಮೃತಸರವು ಜಮಖಾನ ಮತ್ತು ಉಡುಗೆ ಬಟ್ಟೆಗಳ ಉತ್ಪಾದನೆಯಲ್ಲಿ ನಿರತವಾಗಿತ್ತು. ಈ ಬೆಳವಣಿಗೆಯ ಪ್ರಕ್ರಿಯೆ ನಿರಂತರವಾಗಿ ಸಾಗಿದೆ.

ಮೂರನೆಯ ಪವಾಡ : ಇಷ್ಟೆಲ್ಲಾ ನಡೆಯುತ್ತಿದ್ದಾಗ ಚಿಕ್ಕ ಮತ್ತು ಮಧ್ಯಮ ಒಡುವಳಿಗಳನ್ನುಳ್ಳ ರೈತ ಪಂಜಾಬಿನಲ್ಲಿ ಕೃಷಿಯ ಇಳುವರಿಯನ್ನು ಹತ್ತುಪಟ್ಟು ಹೆಚ್ಚಿಸುತ್ತಿದ್ದ. ಶ್ರಮವನ್ನು ಲೆಕ್ಕಿಸದೆ ದುಡಿಯುತ್ತಿದ್ದ ರೈತನಿಗೆ ಸರ್ಕಾರಿ ವಲಯಗಳಿಂದ ಕೃಷಿಗೆ ಅಗತ್ಯವಾದ ವಸ್ತುಗಳು ಮತ್ತು ಸಾಲದ ರೂಪದಲ್ಲಿ ಹಣ ಕಾಲಕಾಲಕ್ಕೆ ಒದಗುವಂತೆ ಮಾಡಲಾಯಿತು. ತನ್ನ ಸ್ವಂತದ ಆಹಾರದ ಒಟ್ಟು ಅವಶ್ಯಕತೆಯನ್ನು ಪೂರೈಸಿ, ೧೯೭೦ರ ದಶಕದ ವೇಳೆಗೆ ಪಂಜಾಬ್ ಇಡೀ ದೇಶದ ಆಹಾರ-ಕಣಜವಾಗಿ ರೂಪುಗೊಂಡಿತು. ಅಂತೆಯೇ, ರಾಷ್ಟ್ರದ ಅತಿ ಶ್ರೀಮಂತ ಜಿಲ್ಲೆಗಳಲ್ಲಿ ಒಂದಾಗಿ ಲೂಧಿಯಾನಾ ಸ್ಥಾನ ಪಡೆದುಕೊಂಡಿತ್ತು.

೧೯೭೦ರ ವೇಳೆಗೆ ಪಂಜಾಬಿನ ಪ್ರತಿಯೊಂದು ಹಳ್ಳಿಗೂ ರಸ್ತೆ ಮತ್ತು ವಿದ್ಯುತ್ ಸರಬರಾಜು ಕಲ್ಪಿಸಲಾಗಿತ್ತು. ಇಡೀ ರಾಜ್ಯದಲ್ಲಿ ಕೃಷಿಯು ಯಂತ್ರಗಳ ಸಹಾಯದಿಂದ ನಡೆಯುವಂತಾಗಿತ್ತು. ದೊಡ್ಡ ಮತ್ತು ಚಿಕ್ಕ ಟ್ರ್ಯಾಕ್ಟರ್‌ಗಳು ಹಾಗೂ ಅಕ್ಕಿ ಗಿರಣಿಗಳು ಹೊರಡಿಸುವ ಶಬ್ದ, ಕಾಳು ಬಿಡಿಸುವ ಯಂತ್ರಗಳ ನಿನಾದ, ಮುಂತಾದುವುಗಳಿಂದ ಇಡೀ ರಾಜ್ಯದ ಗ್ರಾಮಾಂತರ ಪ್ರದೇಶವು ಒಂದು ಕಾರ್ಖಾನೆಯಂತೆ ತೋರುತ್ತಿತ್ತು. ಎತ್ತಿನ ಗಾಡಿಗಳ ಜಾಗದಲ್ಲಿ ಟ್ರ್ಯಾಕ್ಟರ್-ಟ್ರೈಲರ್‌ಗಳು ಬಂದಿದ್ದುವು. ಗ್ರಾಮಾಂತರ ಪಂಜಾಬಿನಲ್ಲಿ ಸರಕುಗಳ ಹಾಗೂ ಜನರ ಸಾರಿಗೆಗೆ ಇವೇ ಸಾಧನಗಳಾಗಿದ್ದವು.

ನಾಲ್ಕನೆಯ ಪವಾಡ : ಹೀಗೆ ಆರ್ಥಿಕ ಪವಾಡವನ್ನು ಮಾಡುವುದರಲ್ಲಿ ಪಂಜಾಬ್ ಏಕೈಕವಾಗಿರಲಿಲ್ಲ. ಮಹಾರಾಷ್ಟ್ರ ಮತ್ತು ಗುಜರಾತ್‌ಗಳಲ್ಲಿ ಬೇರೊಂದು ಅಭಿವೃದ್ಧಿ ಮಾದರಿಯು ಯಶಸ್ವಿಯಾಗಿ ಹೊಮ್ಮುತ್ತಿತ್ತು. ಪಶ್ಚಿಮ ಭಾರತದ ಈ ಎರಡು ರಾಜ್ಯಗಳಲ್ಲಿ ಸಹಕಾರಿ ಚಳುವಳಿಯ ಭಾರಿ ಅಲೆ ಅಪ್ರತಿಮವಾಗಿ ಕಂಡುಬಂದಿತು. ಅಷ್ಟು ವಿಶಾಲವಾದ ಚಳುವಳಿ ಬೇರೆಲ್ಲಿಯೂ ಅಸ್ತಿತ್ವಕ್ಕೆ ಬಂದಂತೆ ತೋರುವುದಿಲ್ಲ. ಎರಡೂ ರಾಜ್ಯಗಳನ್ನು ಒಂದುಮಾಡಿ ನೋಡಿದರೆ ಅದೊಂದು ಸಹಕಾರಿ ಬೃಹತ್ ಕಂಪನಿಯಂತೆ ಗೋಚರಿಸುತ್ತಿತ್ತು. ಗ್ರಾಮಾಂತರ ಪ್ರದೇಶಗಳ ಪ್ರತಿಯೊಂದು ಚಟುವಟಿಕೆಯೂ ಸಹಕಾರಿ ತತ್ವದಡಿ ನಡೆಯುವಂತಾಗಿ ಚಳುವಳಿಯು ಉನ್ನತ ಮಟ್ಟಕ್ಕೇರಿತು. ಪಂಜಾಬಿನ ರೈತನಿಗೆ ಭಿನ್ನವಾಗಿ ಇಲ್ಲಿಯ ರೈತರು ಬಡವರು, ಅನಕ್ಷರಸ್ಥರು ಮತ್ತು ಸ್ವಂತದ ಸಾಮರ್ಥ್ಯದಿಂದ ಜಿಗಿದು ಮೇಲೇಳಲು ಅಸಮರ್ಥರು, ಅಕುಶಲಿಗಳು. ಈ ಸಂಬಂಧದಲ್ಲಿ ಅವರು ಉತ್ತರ ಭಾರತದ ರೈತರನ್ನು ಹೋಲುತ್ತಾರೆ. ಆದರೆ ಇವರಿಗೆ ಒಂದು ಅನನ್ಯವಾದ ಗುಣವಿದ್ದಿತು. ಅದೇನೆಂದರೆ, ಅವರು 'ಸಹಕರಿಸಲು' ಸಿದ್ಧರಿದ್ದರು ಮತ್ತು ಸಾಮೂಹಿಕ ಹಿತಕ್ಕಾಗಿ ಅಗತ್ಯವಾದ ಶಿಸ್ತನ್ನು ಪಾಲಿಸಲು ತಯಾರಿದ್ದರು.

ಇದರ ಪರಿಣಾಮವಾಗಿ ಗ್ರಾಮಾಂತರ ಪ್ರದೇಶದ ಉತ್ಪಾದನೆ ಮತ್ತು ವಿತರಣಾ ಕ್ಷೇತ್ರಗಳೆಲ್ಲಾ ಒಂದೊಂದಾಗಿ ಸಹಕಾರಿ ತತ್ವದಡಿ ಸಂಘಟಿತವಾದವು. ಸಮುದಾಯದಲ್ಲಿ ಅತ್ಯಂತ ಬಡತನದ ಹಂತದಲ್ಲಿರುವ ಗೋವಳಿಗ ಮತ್ತು ಸಣ್ಣ ರೈತನ ಮುಖ್ಯ ಆಶ್ರಯವಾದ ಹಾಲಿನಿಂದ ಗುಜರಾತಿನ ಸಹಕಾರಿ ಚಳುವಳಿ ಆರಂಭವಾಯಿತು. ನಂತರ ಅದು ಹತ್ತಿ, ಎಣ್ಣೆಬೀಜಗಳು, ಸಕ್ಕರೆ ಇತ್ಯಾದಿಗಳಿಗೆ ವಿಸ್ತರಿಸಿಕೊಂಡು ಬ್ಯಾಂಕಿಂಗ್ ಮತ್ತು ಸಾಲ ನೀಡುವ ಸಂಸ್ಥೆಗಳನ್ನು ತನ್ನ ತೆಕ್ಕೆಯೊಳಕ್ಕೆ ತಂದುಕೊಂಡಿತು. ಅಂತೆಯೇ ಮಹಾರಾಷ್ಟ್ರದಲ್ಲಿ ಸಕ್ಕರೆಯ ಉತ್ಪಾದನೆಗೆ ಆರಂಭದಲ್ಲಿ ಒತ್ತುಕೊಟ್ಟ ಸಹಕಾರಿ ಚಳುವಳಿಯು ಕ್ರಮೇಣ ಅದನ್ನು ಉನ್ನತ ಹಂತಕ್ಕೆ ಕೊಂಡೊಯ್ಯಿತು. ಮೊದಲಿಗೆ ಸಕ್ಕರೆಯನ್ನೇ ಉತ್ಪಾದಿಸದಿದ್ದ ಮಹಾರಾಷ್ಟ್ರ, ಕೊನೆಗೆ ಉತ್ತರ ಪ್ರದೇಶವನ್ನು ಹಿಂದಕ್ಕೆ ಹಾಕಿ ತಾನೇ ಸಕ್ಕರೆಯ ಗರಿಷ್ಠ ಉತ್ಪಾದಕನಾಗಿ ವಿಕಾಸ ಹೊಂದಿತು. ಆಮೇಲೆ ಹತ್ತಿಯ ಉತ್ಪಾದನೆಯಲ್ಲೂ ಸಹಕಾರಿ ತತ್ವವನ್ನು ಅಳವಡಿಸಿ ಮಹತ್ತರ ಸಾಧನೆಗಳನ್ನು ಮಾಡಲಾಯಿತು.

ಮಹಾರಾಷ್ಟ್ರ ಮತ್ತು ಗುಜರಾತ್ ಇಂದು ಆರ್ಥಿಕತೆಯ ದೃಷ್ಟಿಯಿಂದ ರಾಷ್ಟ್ರದ ಮೊದಲ ನಾಲ್ಕು ರಾಜ್ಯಗಳಲ್ಲಿ ಸೇರಿವೆ. ಕಳೆದ ಐವತ್ತು ವರ್ಷಗಳಲ್ಲಿ ಆ ರಾಜ್ಯಗಳು ಸಹಕಾರಿ ತತ್ವವನ್ನು ಅನುಷ್ಠಾನಕ್ಕೆ ತಂದಿದ್ದು ಅದಕ್ಕೆ ಪ್ರಮುಖ ಕಾರಣವೆಂದು ಭಾರತೀಯ ಆರ್ಥಿಕತೆಯ ಬೆಳವಣಿಗೆಯನ್ನು ಅಭ್ಯಸಿಸುವ ಯಾವುದೇ ವಿದ್ಯಾರ್ಥಿಯಾದರೂ ಗುರುತಿಸಬಲ್ಲ. ವಿಶೇಷವಾಗಿ ಗಮನಿಸಬೇಕಾದ ಇನ್ನೊಂದು ಅಂಶವಿದೆ. ಅದು ನೀರಾವರಿಯನ್ನು ಸಹಕಾರಿ ತತ್ವದಡಿಯಲ್ಲಿ ಅಳವಡಿಸಿದ್ದು. ಇದು ಮಹಾರಾಷ್ಟ್ರದ ಅತ್ಯಂತ ಹಿರಿಯ ಸಾಧನೆ ಎನ್ನಬಹುದು. ಸೈದ್ಧಾಂತಿಕ ವಿಷಯಗಳನ್ನು ಚರ್ಚಿಸುವ ಯಾವ ಗ್ರಂಥದಲ್ಲೂ ಇರದ ಒಂದು ಸಂಗತಿ ಇದು : ಚಿಕ್ಕ ಹಿಡುವಳಿ ಹೊಂದಿರುವ ಹೆಮ್ಮೆಯ ರೈತನು ಪರಂಪರಾನುಗತವಾಗಿ ಬಂದಿರುವ ತನ್ನ ನೀರಾವರಿ ಹಕ್ಕನ್ನು ಸ್ವಯಂ ಪ್ರೇರಣೆಯಿಂದ ಸಮುದಾಯದ ಹಿತಕ್ಕೆಂದು ಬಿಟ್ಟು ಕೊಡುತ್ತಾನೆಯೇ ? ಇದಕ್ಕೆ ಸಾಮಾನ್ಯವಾದ ಉತ್ತರ, 'ಇಲ್ಲ' ಎಂದು. ಆದರೆ ಮಹಾರಾಷ್ಟ್ರದ ರೈತನು ಪ್ರಾಮಾಣಿಕತೆ ಮತ್ತು ಸಹನೆಯನ್ನು ಮೈಗೂಡಿಸಿಕೊಂಡು ಅದನ್ನು ಮಾಡಿದ. ಏಕೆಂದರೆ, ಅಷ್ಟು ದೊಡ್ಡ ಜಾಲವನ್ನು ಯಾವುದೇ ಹೊರಗಿನ ಆಡಳಿತ ವಿಭಾಗವು ನಿರ್ವಹಿಸಲು ಅಸಮರ್ಥವೆಂಬುದನ್ನು ಅವನು ಕಂಡುಕೊಂಡ. ನೀರಿನ ಹಂಚಿಕೆ ಅಷ್ಟು ಜಟಿಲವಾದ ವಿಷಯ. ಆದರೆ 'ಬರಾಬರಿ' ಎಂಬ ಈ ಸಹಕಾರಿ ವ್ಯವಸ್ಥೆಯಲ್ಲಿ ನೀರಿನ ನಾಲೆಯ ಮೊದಲಿನವನಿಗೆ ಸಿಕ್ಕುವಷ್ಟೇ ನೀರು ನಾಲೆಯ ಕೊನೆಯಲ್ಲಿರುವವನಿಗೂ ಸಿಕ್ಕುವಂತಾಯಿತು. ಮಹಾರಾಷ್ಟ್ರದ ರೈತ ಸಮುದಾಯವು ಸಹಕಾರಿ ತತ್ವದ ಅನುಷ್ಠಾನದಲ್ಲಿ ಅದ್ಭುತವಾದ ಉತ್ಸಾಹವನ್ನು ಮೆರೆದಿರುವುದು ಗಮನಾರ್ಹವಾಗಿದೆ.

೧೯೬೪-೬೫ ನಮ್ಮ ದೇಶದಲ್ಲಿ ಬರಗಾಲದ ವರ್ಷ. ಆ ವರ್ಷದಲ್ಲಿ ಮಹಾರಾಷ್ಟ್ರದ ಯವತ್‌ಮಲ್ ಜಿಲ್ಲೆಯ ಒಂದು ಹಳ್ಳಿಗೆ ಹೋಗಿದ್ದೆ. ಅದೊಂದು ಗುಡ್ಡ ಪ್ರದೇಶ. ನೂರು ಅಡಿ ಕೆಳಗಿನಿಂದ ನೀರು ತರಬೇಕು. ಆಗ್ಗೆ ನಾನು ಕಂಡ ದೃಶ್ಯ ಅಚ್ಚಳಿಯದೆ ಮನಸ್ಸಿನಲ್ಲಿ ನಿಂತಿದೆ : ಹಳ್ಳಿಯ ಗಂಡಸರು, ಹೆಂಗಸರು ಮತ್ತು ಮಕ್ಕಳು, ಚಿಕ್ಕವರು-ದೊಡ್ಡವರು, ಎಲ್ಲರೂ ಕೆಳಗೆ ಹರಿಯುತ್ತಿದ್ದ ಹೊಳೆಯಿಂದ ಗಡಿಗೆಗಳಲ್ಲಿ, ಬೋಗುಣಿಗಳಲ್ಲಿ, ಬಾಂಡಲೆಗಳಲ್ಲಿ ನೀರು ಹೊತ್ತು ತರುತ್ತಿದ್ದರು ಮತ್ತು ಇಡೀ ಗ್ರಾಮಕ್ಕೆ ಸೇರಿದ್ದ ತರಕಾರಿ ಮಡಿಗಳಿಗೆ ಹಾಕುತ್ತಿದ್ದರು. ಅದೂ ಲಾಂದ್ರದ ಮಬ್ಬು ಬೆಳಕಿನಲ್ಲಿ.

ರಾಜ್ಯದ ರಾಜಕೀಯ ನಾಯಕರು ಈ ಚಳುವಳಿಯಲ್ಲಿ ಗಾಢವಾಗಿ ನಿರತರಾಗಿದ್ದರು.

**ಅಂಜಲಿ**



'ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು' ಮತ್ತು 'ಮೈಸೂರು ಸಂಸ್ಥಾನದ ಮೊದಲ ಕಮ್ಯುನಿಸ್ಟರು' – ಕೃತಿಗಳ ಲೇಖಕರು ಹಾಗೂ ನವಕರ್ನಾಟಕ ಪ್ರಕಾಶನದ ಹಿತೈಷಿಗಳು ಆಗಿದ್ದ ಎನ್. ಪಿ. ಶಂಕರ ನಾರಾಯಣ ರಾವ್ ನಿಧರಾಗಿದ್ದಾರೆ. ಇವರ ನೆನಪಿಗೆ 'ಹೊಸತು' ಶ್ರದ್ಧಾಂಜಲಿ ಅರ್ಪಿಸುತ್ತದೆ.

ಅದೇ ಪ್ರವಾಸ ಕಾಲದಲ್ಲಿ, ಆಗ್ಗೆ ಮಹಾರಾಷ್ಟ್ರದ ಮುಖ್ಯಮಂತ್ರಿಯಾಗಿದ್ದ ವಿ. ಪಿ. ನಾಯಕ್ ಅವರನ್ನು ನಾಗಪುರದಲ್ಲಿ ನಾನು ಭೇಟಿಯಾಗಿದ್ದೆ. ರಾಜ್ಯವೆಲ್ಲಾ ಬರಗಾಲದಿಂದ ಪೀಡಿತವಾಗಿದ್ದಾಗ ವಿಶೇಷವಾದ ಭರವಸೆ ಆತನಲ್ಲಿ ಮನೆಮಾಡಿಕೊಂಡಿತ್ತು. ಇದರ ರಹಸ್ಯವೇನೆಂದು ಕೇಳಲಾಗಿ ಅವರು ಉತ್ತರಿಸಿದ್ದರು : "ನಾನು ಸೋತರೆ ನನ್ನನ್ನು ನೇಣುಗಂಬಕ್ಕೇರಿಸಿ. ನಾನು ಆಶ್ವಾಸನೆ ಕೊಡುತ್ತೇನೆ, ಇನ್ನೆರಡು ವರ್ಷಗಳಲ್ಲಿ ಮಹಾರಾಷ್ಟ್ರವು ಆಹಾರಧಾನ್ಯಕ್ಕೆ ಸಂಬಂಧಿಸಿದಂತೆ ಸ್ವಾವಲಂಬಿಯಾಗುತ್ತದೆ." ಆತ ನಿಜಕ್ಕೂ ಯಶಸ್ವಿಯಾದರು, ಏಕೆಂದರೆ ಇಡೀ ರೈತ ಸಮುದಾಯವು ಅವರ ಬೆನ್ನಿಗಿತ್ತು.

ಅದಾದ ಕೆಲವು ವರ್ಷಗಳ ನಂತರ ಆಗ್ಗೆ ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಖ್ಯಾತ ಸಮಾಜವಾದಿ ನಾಯಕ ಅಶೋಕ ಮೆಹ್ತಾ ಅವರನ್ನು ಭೇಟಿಯಾಗುವ ಸಂದರ್ಭ ಬಂದಿತ್ತು. ದೇಶದಲ್ಲಿ ಆಹಾರ ಕೊರತೆಯ ಬಾಧೆ ಇನ್ನೂ ಮುಂದುವರಿದಿದ್ದ ಕಾಲ ಅದು. ನಾನು ಕೇಳಿದೆ : "ಮಹಾರಾಷ್ಟ್ರ ಮತ್ತು ಗುಜರಾತ್‌ಗಳ ಪವಾಡವನ್ನು ಹಿಂದುಳಿದ ಉತ್ತರಪ್ರದೇಶ ಮತ್ತು ಬಿಹಾರಗಳಲ್ಲಿ ಸಾಧಿಸಬಾರದೇಕೆ ?" ಎಂದು. ಅವರು ಹೇಳಿದರು, "ಅಯ್ಯಾ ಮಿತ್ರ, ಉತ್ತರ ಪ್ರದೇಶದ ಪೂರ್ವ ವಿಭಾಗ ಮತ್ತು ಬಿಹಾರಗಳ ರೈತರಲ್ಲಿ ಸಹಕಾರಿ ಮನೋಭಾವವನ್ನು ಬೆಳೆಸಲು ನನ್ನ ರಾಜಕೀಯ ಜೀವನದ ಅರ್ಧಭಾಗವನ್ನು ಸವೆಸಿದ್ದೇನೆ. ನಾನು ಸಂಪೂರ್ಣವಾಗಿ ಸೋತಿದ್ದೇನೆಂದು ಒಪ್ಪಿಕೊಳ್ಳಲು ಯಾವ ಅಂಜಿಕೆಯೂ ಇಲ್ಲ. ಒಂದು ವ್ಯವಸ್ಥೆಯನ್ನು ಇಲ್ಲಿಂದ ಅಲ್ಲಿಗೆ ಅಥವಾ ಅಲ್ಲಿಂದ ಇಲ್ಲಿಗೆ ಸ್ಥಳಾಂತರಿಸಲು ಸಾಧ್ಯ. ಆದರೆ ಆ ವ್ಯವಸ್ಥೆಯನ್ನು ಊರ್ಜಿತಗೊಳಿಸುವ ಮನೋಭಾವವನ್ನು ಅಲ್ಲಿಂದ ತಂದು ಇಲ್ಲಿ ನೆಡುವ ಪ್ರಯತ್ನ ಸಿದ್ಧಿಸುವುದಿಲ್ಲ."

- ೪ -

ಅಭಿವೃದ್ಧಿಯ ಎರಡು ಮಾದರಿಗಳನ್ನು ವಿವರವಾಗಿ ತಿಳಿಯಲು ಈವರೆಗೆ ನಾವು ಯತ್ನಿಸಿದ್ದೇವೆ. ಕರ್ನಾಟಕದಲ್ಲಿ ಈಚಿನ ವರ್ಷಗಳಲ್ಲಿ ಅಳವಡಿಸಿಕೊಳ್ಳಲಾಗಿರುವ ಮಾದರಿಯು ಅವೆರಡಕ್ಕಿಂತಲೂ ಪೂರ್ತಿಯಾಗಿ ಭಿನ್ನವಾಗಿದೆ. ಬೆಂಗಳೂರಿನ ಮಾದರಿಯೇನಾದರೂ ಇಡೀ ದೇಶಕ್ಕೆ ವ್ಯಾಪಿಸಿದರೆ ಅದೊಂದು ರಾಷ್ಟ್ರೀಯ ದುರಂತವಾಗುತ್ತದೆಂಬುದು ನನ್ನ ಖಚಿತ ಅಭಿಪ್ರಾಯ. ಈಗ ಕೇಂದ್ರ ಸರ್ಕಾರವು ರಚಿಸಹೊರಟಿರುವ ವಿಶೇಷ ಆರ್ಥಿಕ ವಲಯಗಳು ಖಂಡಿತವಾಗಿಯೂ ಬೆಂಗಳೂರು ಮಾದರಿಯ ಅನುಕರಣೆಯೇ ಆದ್ದರಿಂದ ದುರಂತವು ಸನ್ನಿಹಿತವಾಗುತ್ತಿದೆಯೆಂಬ ಆತಂಕ ಸಹಜವಾಗಿದೆ. ಇದು ಸಕಾರಣವಾದ್ದು ಕೂಡ :

೧. ಪಂಜಾಬ್, ಗುಜರಾತ್ ಮತ್ತು ಮಹಾರಾಷ್ಟ್ರಗಳ ಪರ್ಯಾಯ ಮಾದರಿಗಳನ್ನು ಗಮನಿಸಿದರೆ ಒಂದಂಶವು ಎದ್ದುಕಾಣುತ್ತದೆ. ಅವುಗಳಲ್ಲಿ ರಾಜ್ಯಗಳ ಇಡೀ ಜನಸಮುದಾಯಗಳು ಉತ್ಪಾದನೆಯ ಘಟಕಗಳಲ್ಲಿ ತೊಡಗಿಕೊಂಡಿವೆ; ಯಾವುದೋ ಕೆಲವು ಇಂಜಿನಿಯರುಗಳು ಮಾತ್ರವಲ್ಲ. (ಈ ಇಂಜಿನಿಯರುಗಳು ಸಹ ಬಹುತೇಕ ಬೇರೆ ರಾಜ್ಯಗಳವರಾಗಿರುತ್ತಾರೆ, ಅವರು 'ಮಣ್ಣಿನ ಮಕ್ಕಳಲ್ಲ'.)

೨. ನಾವು ಗಮನಿಸಿರುವ ಮಾದರಿಗಳಲ್ಲಿ ಬೆಳವಣಿಗೆಯು ಕೆಳಸ್ತರಗಳಿಂದ ಆರಂಭವಾಗುತ್ತದೆ. ಅದರ ಮೊದಲ ಪ್ರಯೋಜನ ಪಡೆಯುವವರು ಬಡವರ್ಗಗಳಿಗೆ ಸೇರಿದ ಚಿಕ್ಕ ರೈತರು, ದನಗಾಹಿಗಳು, ಅಕುಶಲ ಮತ್ತು ಅರೆಕುಶಲ ತಾಂತ್ರಿಕ ಕೆಲಸಗಾರರು ಹಾಗೂ ವಿವಿಧ ಕಸುಬುಗಳಲ್ಲಿ ನಿರತರಾದ ಜನ. ಇಡೀ ರಾಜ್ಯವನ್ನು ಪರಿಗಣನೆಗೆ ತೆಗೆದುಕೊಂಡರೆ, ಗ್ರಾಮಾಂತರ ಮತ್ತು ಅರೆ-ಗ್ರಾಮಾಂತರ ಪ್ರದೇಶಗಳಲ್ಲಿ ಬೆಳವಣಿಗೆಯ ನೇರ ಪ್ರಯೋಜನ ಪಡೆಯದವರು ಯಾರೂ ಇಲ್ಲ ಎನ್ನಬಹುದು.

೩. ಪಂಜಾಬ್-ಗುಜರಾತ್-ಮಹಾರಾಷ್ಟ್ರಗಳ ಕ್ರಿಯಾ ವಂತಿಕೆಯು ಮೂಲತಃ

ಹಳ್ಳಿಗಳಲ್ಲಿ ಚಿಗುರೊಡೆಯಿತು. ಪ್ರತಿಯೊಂದು ಹಳ್ಳಿಯಲ್ಲಿ ಅಥವಾ ಕೆಲವು ಹಳ್ಳಿಗಳ ಸಮುಚ್ಚಯದಲ್ಲಿ ಒಂದು ಕೇಂದ್ರವಿದೆ. ಅಲ್ಲಿ ಜನ ಸೇರುತ್ತಾರೆ, ಯೋಜನೆಗಳನ್ನು ಮತ್ತು ಸಮಸ್ಯೆಗಳನ್ನು ಚರ್ಚಿಸುತ್ತಾರೆ, ಹೊಸ ಆವಿಷ್ಕಾರಗಳನ್ನು ಆಯೋಜಿಸುತ್ತಾರೆ ಮತ್ತು ಅದಕ್ಕಾಗಿ ತಮ್ಮ ಮಾನವ ಸಂಪನ್ಮೂಲಗಳನ್ನು ವೃದ್ಧಿಗೊಳಿಸುತ್ತಾರೆ. ಅದಕ್ಕಾಗಿ ಶಾಲೆಗಳು, ವೈದ್ಯಕೀಯ ಸೌಲಭ್ಯಗಳು ಮತ್ತು ಕಡಿಮೆ ಖರ್ಚಿನ ಮನರಂಜನೆ ಸಂಯೋಜಿಸಲ್ಪಡುತ್ತವೆ. ರಸ್ತೆ ಪಕ್ಕಗಳಲ್ಲಿ ಚಿಕ್ಕ ಚಿಕ್ಕ ಮಾರುಕಟ್ಟೆಗಳು ಹುಟ್ಟಿಕೊಂಡು ಕ್ರಮೇಣ ಅವು ದೊಡ್ಡ ಪೇಟೆಗಳಾಗಿ ಮಾರ್ಪಡುತ್ತವೆ. ಹೀಗೆ ಪಟ್ಟಣವನ್ನು ಬೆಳೆಸುತ್ತಾ ಹೋಗಬಹುದು.

೪. ಇದೆಲ್ಲಾ ನಡೆಯುವುದು ಸ್ಥಳೀಯ ಮುತುವರ್ಜಿಯಿಂದ ಹಾಗೂ ಸ್ಥಳೀಯ ಬಂಡವಾಳ ತೊಡಗುವಿಕೆಯಿಂದ; ಸರ್ಕಾರ ಹಾಗೂ ಹಣಕಾಸು ಸಂಸ್ಥೆಗಳ ಮಧ್ಯ ಪ್ರವೇಶ ಅತ್ಯಲ್ಪ ಅಥವಾ ಇಲ್ಲವೇ ಇಲ್ಲ.




ಇವರು ಬರೆದ ಬೊಜ್ಜು ಕರಗಿಸುವುದು ಹೇಗೆ ಎಂಬ ಪುಸ್ತಕ ಭರ್ಜರಿ ಮಾರಾಟವಾಗುತ್ತಿದೆ...

೫. ಈ ಮಾದರಿಯಲ್ಲಿ ತೊಡಗಿಸಿದ ಹಣಕ್ಕಿಂತಲೂ ಆದಾಯವು ಹೆಚ್ಚಾಗಿರುತ್ತದೆ. ಕೋಟಿಗಟ್ಟಲೆ ಸಾರ್ವಜನಿಕ ಹಣವನ್ನು ತೊಡಗಿಸುವ ಪ್ರಮೇಯವಿಲ್ಲ ಮತ್ತು ದೀರ್ಘಕಾಲಿಕ ಅವಧಿಯಲ್ಲಿ ಅದರಿಂದ ಲಾಭ ಬರುತ್ತದೆಂಬ ನಿರೀಕ್ಷೆ ಇಲ್ಲ. ಅದು ಬರದೆಯೂ ಹೋಗಬಹುದೆಂಬ ತವಕವೂ ಇಲ್ಲ.

೬. ಎಲ್ಲಕ್ಕಿಂತಲೂ ಮುಖ್ಯವಾಗಿ ಈ ಅಸದೃಶವಾದ ಪವಾಡಗಳು ಪಂಜಾಬ್, ಗುಜರಾತ್ ಮತ್ತು ಮಹಾರಾಷ್ಟ್ರಗಳಲ್ಲಿ ನಡೆದಿರುವುದು ಸ್ವತಃ ಜನರ ಪಾಲ್ಗೊಳ್ಳುವಿಕೆಯಿಂದ. ಅದರ ಉಸ್ತುವಾರಿಗೆ ಎಂ.ಬಿ.ಎ. ಪದವೀಧರರಿಲ್ಲ, ಐ.ಐ.ಟಿ.ಗಳ ಜಾಣರಿಲ್ಲ ಅಥವಾ ಅಮೆರಿಕಾದಲ್ಲಿ ತರಬೇತಿ ಪಡೆದ ವಿಜ್ಞಾನಿ ಇಲ್ಲ, ಭಾರತದ ಸುಕೃತವೆಂದು ತೋರುತ್ತದೆ, ಈ ಮೌನಕ್ರಾಂತಿ ನಡೆಯುತ್ತಿದ್ದ ಸಮಯದಲ್ಲಿ ಅಮೆರಿಕೀಕರಣಗೊಂಡ ಭಾರತೀಯರ ದುರಾಸೆ ಪೀಡಿತ ಹೊಸ ವರ್ಗವೊಂದು ಇನ್ನೂ ಹುಟ್ಟಿಕೊಂಡಿರಲಿಲ್ಲ. ಈ ಹೊಸ ಪ್ರತಿಷ್ಠಿತ ವರ್ಗದ ಒಬ್ಬ ವ್ಯಕ್ತಿಗೆ ಏನಿಲ್ಲವೆಂದರೂ ನಮ್ಮ ಹಳ್ಳಿಗಳ ಕಸುಬುದಾರರಿಗೆ ನೀಡಲಾಗುವ ಕೂಲಿಗೆ ನೂರುಪಟ್ಟು ಹೆಚ್ಚು ಹಣ ನೀಡಬೇಕಾಗಿರುತ್ತಿತ್ತು! ಸಾವಿರಪಟ್ಟು ಹೆಚ್ಚು ಕೊಡಬೇಕಾದ ಸಂದರ್ಭಗಳೂ ಉಂಟು. ಇಂತಹ ವರ್ಗವಿಲ್ಲದೆಯೇ ಹಳ್ಳಿ-ಕೇಂದ್ರಿತ ಕ್ರಾಂತಿಯನ್ನು ಸ್ವತಃ ಜನರು ಕಲ್ಪಿಸಿಕೊಂಡರು, ಸಂಯೋಜಿಸಿದರು ಮತ್ತು ನಿರ್ದೇಶಿಸಿದರು. ಎಲ್ಲವೂ 'ಮಣ್ಣಿನ ಮಕ್ಕಳ'ದೇ ಪ್ರತಿಭೆ. ಇದಕ್ಕೆ ಭಿನ್ನವಾಗಿ ಬೆಂಗಳೂರು ಮಾದರಿಯ ಲಕ್ಷಣಗಳನ್ನು ಗಮನಿಸಿದರೆ ಕಾಣುವುದೇನು ? ಎಲ್ಲವೂ ಪಾಶ್ಚಾತ್ಯ ಪ್ರತಿಷ್ಠಿತರು ಮತ್ತು ಅವರ ಮಾನಸಪುತ್ರರು ತಮ್ಮ ಪ್ರತ್ಯೇಕ ಉದ್ಯಮದಂತೆ ಬೆಳೆಸಿದ್ದು. ಈ ಪ್ರತಿಷ್ಠಿತ ವರ್ಗದ ತರಬೇತಿಗೆ ಅದೆಷ್ಟು ಸಾವಿರ ಕೋಟಿ ರೂಪಾಯಿಗಳನ್ನು ದಂಡ ಮಾಡಿದ್ದೇವೆಂಬುದನ್ನು ಇದಕ್ಕೆ ಸೇರಿಸಬೇಕು.

೭. ಸ್ಥಳೀಯವಾಗಿ ಮತ್ತು ಸ್ವಂತವಾಗಿ ನಿರ್ಮಾಣಗೊಂಡ ಮಾದರಿಗಳಲ್ಲಿ (ಅಂದರೆ, ಮೇಲೆ ಪ್ರಸ್ತಾಪಿಸಲಾದ ಮೂರು ರಾಜ್ಯಗಳ ಮಾದರಿಗಳಲ್ಲಿ) ಮೂಲಭೂತ ಸೌಕರ್ಯಗಳಿಗಾಗಿ ಮಾಡಬೇಕಾದ ಹಣದ ಹೂಡಿಕೆಯು ಅತ್ಯಲ್ಪ ಅಥವಾ ಸೊನ್ನೆ. ಆಧುನಿಕ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಗಳಿಲ್ಲ, ಪಂಚತಾರಾ ಹೋಟೆಲುಗಳಿಲ್ಲ, ಭವ್ಯವಾದ ಹವಾನಿಯಂತ್ರಿತ ಕಾರುಗಳು – ಬಸ್ಸುಗಳು ಇಲ್ಲ, ಆರು ಪಥಗಳನ್ನುಳ್ಳ ಹೆದ್ದಾರಿಗಳಿಲ್ಲ, ಫ್ಲೈ ಓವರುಗಳಿಲ್ಲ, ಅಗಾಧವಾದ ಅಂಗಡಿ ಸಾಲುಗಳಿಲ್ಲ, ಜೂಜು ಕೇಂದ್ರಗಳಿಲ್ಲ, ರಾತ್ರಿ ಮೋಜಿನ ಕ್ಲಬ್ಬುಗಳಿಲ್ಲ, ಲೈಂಗಿಕ ಆಸ್ವಾದದ ತಾಣಗಳಿಲ್ಲ, ಮತ್ತು ಅಂತಹ ಇನ್ನೂ ಹತ್ತಾರು ದುಬಾರಿ ಉಪಕರಣ ಸಾಧನಗಳಿಲ್ಲ. ಅವೆಲ್ಲಾ ಬೇಕಾಗುವುದು ಭಾರತದಲ್ಲಿ ಒಂದು ಪುಟ್ಟ-ಅಮೆರಿಕಾ ನಿರ್ಮಾಣ ಮಾಡಬೇಕೆಂದಾಗ ಮಾತ್ರ. ಹಾಗೆ ನಿರ್ಮಾಣಗೊಂಡ ಪುಟ್ಟ-ಅಮೆರಿಕಾಕ್ಕೆ ಖರ್ಚೆಲ್ಲಾ ಹಳ್ಳಿಯ ರೈತನದು ಮತ್ತು ನಗರಗಳ ಸಾಮಾನ್ಯರದು. ಅದರಿಂದಾಗಿ ಅವನು ಇನ್ನೂ ಹೆಚ್ಚಿನ ಬಡತನದ ಕ್ರೌರ್ಯಕ್ಕೆ ತುತ್ತಾಗುತ್ತಾನೆ. ಸ್ಥಳೀಯ ಮಾದರಿಗಳಲ್ಲಿ, ದುಡಿಯುವವರನ್ನು ಉತ್ತೇಜಿಸಲು ಮ್ಯಾಕ್ಡೋನಾಲ್ಡ್ ತಿನಿಸುಗಳಾಗಲಿ ಕೋಕ-ಕೋಲ ಪೇಯವಾಗಲಿ ಬೇಕಾಗುವುದಿಲ್ಲ.

೮. ಮೇಲಾಗಿ, ಈ ಸ್ಥಳೀಯ ಮಾದರಿಗಳಿಗೆ ಮಹಾರಾಜರ, ರಾಜರ ಮತ್ತು ಅವರ ಅನುವರ್ತಿಗಳಾದ ಒಂದಷ್ಟು ಲಕ್ಷ ಲಕ್ಷಾಧಿಪತಿಗಳ 'ಅತಿಶಯ ಪ್ರಭುತ್ವ'ದ ರಚನೆ ಬೇಕಾಗುವುದಿಲ್ಲ.

೯. ಸಂಕ್ಷಿಪ್ತವಾಗಿ ಹೇಳುವುದಾದರೆ, ಬೆಂಗಳೂರು ಮಾದರಿಯು ಎರಡು ಭಾರತಗಳನ್ನು ನಿರ್ಮಾಣ ಮಾಡುವ ಉದ್ದೇಶ ಹೊಂದಿದೆ: ಒಂದು, ಜನಸಂಖ್ಯೆಯ ಶೇಕಡ ಹತ್ತಕ್ಕೂ ಕಡಿಮೆಯಿರುವ ಅತಿ ಶ್ರೀಮಂತರ ಭಾರತ; ಇನ್ನೊಂದು ಅತಿ ಬಡವರ ಭಾರತ. ಇವರ ಪೈಕಿ ಬಹುಮಂದಿ ಅರೆಹೊಟ್ಟೆಯ ಜೀವನ ಸಾಗಿಸಬೇಕು, ನಿರುದ್ಯೋಗದಿಂದ ಕುಸಿಯಬೇಕು ಮತ್ತು ಅದರಿಂದ ಪರಿಣಮಿಸುವ ಎಲ್ಲ ಅಸಹ್ಯ, ಅಮಾನವೀಯ ಉಪಟಳಗಳನ್ನೂ ಸಹಿಸಿಕೊಳ್ಳಬೇಕು.

೧೦. ಬೆಂಗಳೂರು ಮಾದರಿಯನ್ನು ವಿರೋಧಿಸಲು ಇನ್ನೊಂದು ಗಂಭೀರವಾದ ಕಾರಣವಿದೆ; ಅದೇನೆಂದರೆ, ಆ ಮಾದರಿಯ ಫಲವು ಬಹುಮಟ್ಟಿಗೆ ಪಾಶ್ಚಾತ್ಯ ರಾಷ್ಟ್ರಗಳ ಪಾಲಾಗುತ್ತದೆ. ಅದು ಬಹುರಾಷ್ಟ್ರೀಯ ಕಂಪನಿಗಳ ಮೂಲಕ ನಡೆಯುತ್ತದೆ. ಪಾಶ್ಚಾತ್ಯರ ಸೇವಕರಾಗಿ ನೇಮಕಗೊಳ್ಳುವ ವರ್ಗದವರಿಗೆ ಸಿಗುವ ಒಂದು ಕೈಹಿಡಿ ಉದ್ಯೋಗಾವಕಾಶವನ್ನು ಬಿಟ್ಟರೆ ಭಾರತಕ್ಕೆ ದೊರಕುವ ಲಾಭ ಏನೇನೂ ಇಲ್ಲ.

೧೧. ಸ್ಥಳೀಯ ಮಾದರಿಗಳಲ್ಲಾದರೋ ಎಲ್ಲ ಸೌಲಭ್ಯಗಳನ್ನೂ ತಮ್ಮ ಖಾಸಗಿ ಲೂಟಿಯನ್ನಾಗಿ ಮಾಡಿಕೊಳ್ಳುವ ಬಂಡವಳಿಗ ಹೆಮ್ಮಾರಿಗಳು ಇರುವುದಿಲ್ಲ.

೧೨. ಜೊತೆಗೆ, ಹಳ್ಳಿಗಳಿಂದ ನಗರಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಬರುವ ಪ್ರಮೇಯ ಸಹ ಸ್ಥಳೀಯ ಮಾದರಿಗಳಲ್ಲಿ ಇರುವುದಿಲ್ಲ; ಏಕೆಂದರೆ, ಹಳ್ಳಿಯ ತಮ್ಮ ಸ್ವಂತ ಮನೆಗಳಲ್ಲಿಯೇ ಹಳ್ಳಿಯ ವ್ಯಕ್ತಿಗಳು ಏಳಿಗೆಯನ್ನು ಕಂಡುಕೊಳ್ಳುತ್ತಾರೆ, ಫಲಾನುಭವಿಗಳಾಗುತ್ತಾರೆ.

- ೩ -

ಪಂಜಾಬ್-ಗುಜರಾತ್-ಮಹಾರಾಷ್ಟ್ರಗಳ ಅದ್ಭುತವಾದ ಯಶಸ್ಸನ್ನು, ಪ್ರಯೋಗಗಳನ್ನು, ಬೇಕೆಂದೇ ನಮ್ಮ ದೇಶದ ಬಲ ಮತ್ತು ಎಡ ರಾಜಕೀಯ ಪಕ್ಷಗಳು ಮುಚ್ಚಿ ಹಾಕಿವೆ. ಏಕೆಂದರೆ ಅವರ ಪ್ರಣಾಲಿಕೆಗಳಿಗೆ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ ಮತ್ತು ಸಹಕಾರಿ ತತ್ವದ ಆಧಾರದ ಮೇಲೆ ಕಟ್ಟಲಾಗುವ ವ್ಯವಸ್ಥೆ ಸರಿಯಾಗಿ ಹೊಂದಿಕೊಳ್ಳು ವುದಿಲ್ಲ. ಜಾಗತೀಕರಣದ ಪಾಶ್ಚಾತ್ಯ ಪ್ರತಿಪಾದಕರು ಮತ್ತು ಅವರ ಭಾರತೀಯ ಹಿಂಬಾಲಕರು ಕೆಳಮಟ್ಟದಿಂದ ಆರಂಭವಾಗುವ ಎಲ್ಲ ಚಟುವಟಿಕೆಗಳನ್ನೂ ಅಳಿಸಿ ಹಾಕುವುದರಲ್ಲಿ ಆಸಕ್ತಿ ಹೊಂದಿದ್ದಾರೆ. ಯಾವ ಕ್ಷೇತ್ರದಲ್ಲೇ ಆಗಲಿ, ಅದು ಅವರಿಗೆ ರುಚಿಸದು. ಚಿಲ್ಲರೆ ವ್ಯಾಪಾರ, ಸಗಟು ವ್ಯಾಪಾರ, ಉತ್ಪಾದನೆ, ವಿತರಣೆ, ಎಲ್ಲದರಲ್ಲೂ ಅವರಿಗೆ ಮೇಲಿನಿಂದ ಆರಂಭವಾಗುವ ಪ್ರಕ್ರಿಯೆಯೇ ಶ್ರೇಷ್ಠ. ಕಡೆಗೆ ಅವರು ಒಬ್ಬ ಬಡ ಸಾಮಾನ್ಯನನ್ನು ನಿರುದ್ಯೋಗಿ ಭಿಕ್ಷುಕನನ್ನಾಗಿಸಿಬಿಡುತ್ತಾರೆ. ನಮ್ಮ ಸದ್ಯದ ಆರ್ಥಿಕ ನೀತಿಗಳನ್ನು ಒಬ್ಬ ಸಾಮಾನ್ಯನ ದೃಷ್ಟಿಯಿಂದ ಪರಾಮರ್ಶೆ ಮಾಡಿದರೆ ಇದು ತಿಳಿಯುತ್ತದೆ.

ಪಶ್ಚಿಮ ಬಂಗಾಳವೊಂದನ್ನು ಬಿಟ್ಟರೆ ಉಳಿದೆಡೆ ಎಡಪಕ್ಷಗಳು ಕಾರ್ಮಿಕ ಸಂಘಟನೆಯತ್ತ ಮಾತ್ರ ತಮ್ಮ ಗಮನವನ್ನು ಕೇಂದ್ರೀಕರಿಸಿದ್ದಾರೆ. ಈ ಕಾರ್ಮಿಕ ಜನ ವಿಭಾಗವು ದೇಶದ ೪೫ ಕೋಟಿ ದುಡಿಮೆಗಾರರ ಶೇಕಡ ಒಂದರಷ್ಟು ಸಹ ಆಗುವುದಿಲ್ಲ. ಕಡೆಗೆ ಈ ಕಾರ್ಮಿಕ ಸಂಘಟನೆಗಳು ಇದ್ದುದರಲ್ಲಿ ಮೇಲಿನ ಸ್ತರಕ್ಕೆ ಸೇರಿದವರನ್ನು ತುಷ್ಟಿಗೊಳಿಸುವುದರಲ್ಲೇ ಮುಕ್ತಾಯವಾಗುತ್ತವೆ. ಇವರು ಒಂದರ್ಥದಲ್ಲಿ ಹಾಲಿನ ಕೆನೆಯ ಭಾಗ ಎನ್ನಬಹುದು : ಅಧ್ಯಾಪಕರು, ಬ್ಯಾಂಕ್ ನೌಕರರು, ಇತ್ಯಾದಿ. ಅವರ ಪೈಕಿ ಎಷ್ಟೋ ಮಂದಿ ತಮ್ಮ ಮಗಳ ಮದುವೆಗೆ ಹತ್ತು ಲಕ್ಷ ರೂಪಾಯಿ ವರದಕ್ಷಿಣೆ ಕೊಡಲು ಸಮರ್ಥರು ಮತ್ತು ಹೇಸದಂಥವರು.

ಇದೆಲ್ಲದರ ಪರಿಣಾಮವಾಗಿ ಮೂಲಭೂತ ಪ್ರಶ್ನೆಗಳನ್ನು ಅವಗಣನೆಗೆ ಗುರಿ ಮಾಡಲಾಗಿದೆ, ಒಂದು ರೀತಿಯ ನಿರ್ವಾತದ ಸನ್ನಿವೇಶ ನಿರ್ಮಾಣಗೊಂಡಿದೆ. ಆ ಖಾಲಿ ಜಾಗವನ್ನು ಭರ್ತಿಮಾಡಲು ನಕ್ಸಲ್‌ವಾದಿಗಳಿಗೆ ಆಹ್ವಾನ ನೀಡಿದಂತೆಯೂ ಆಗಿದೆ. ಈಗಾಗಲೇ ದೇಶದ ೬೦೦ ಜಿಲ್ಲೆಗಳ ಪೈಕಿ ೧೨೫ ಜಿಲ್ಲೆಗಳಲ್ಲಿ ಅವರು ಶಾಸನ ಹೊರಡಿಸಲು ಸರಿಸುಮಾರು ಸಮರ್ಥರಾಗಿದ್ದಾರೆಂದು ಹೇಳಲಾಗುತ್ತಿದೆ.

**ಎಂ. ಬಿ. ಲಾಲ್**
ಡಿ-೩೦, ಪ್ರೆಸ್ ಎನ್‌ಕ್ಲೇವ್, ನವದೆಹಲಿ - ೧೧೦ ೦೧೭
ಕನ್ನಡಕ್ಕೆ : **ಡಾ|| ಜಿ. ರಾಮಕೃಷ್ಣ**

# ಮಥಿಸಿ ಮಾನವನಾದ

## (ಪ್ರಗತಿ ಮೀಮಾಂಸೆ)

ಡಿಸೆಂಬರ್ ೨೦೦೬ರ ಸಂಚಿಕೆಯಲ್ಲಿ ಈ ಲೇಖನದ ಮೊದಲ ಭಾಗ ಪ್ರಕಟವಾಗಿತ್ತು.

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

ಕೈಗಾರಿಕಾ ಕ್ರಾಂತಿ ಮತ್ತು ನಗರೀಕರಣಗಳಿಗಿಂತ ಹಿಂದೆ ಕೂಡ ಗ್ರಾಮೀಣ ಅನಕ್ಷರಸ್ಥ ಕುಟುಂಬಗಳು ಮಾನವಕುಲದ ಪ್ರಗತಿಗೆ ತಮ್ಮದೇ ಆದ ಕೊಡುಗೆ ಸಲ್ಲಿಸುತ್ತ ಬಂದಿದ್ದವು. ನೆಲವನ್ನು ಉತ್ತು ಬಿತ್ತುವುದರಿಂದ ಹಿಡಿದು, ಕೃತಕ ಕಾಲುವೆಗಳನ್ನೋ ಹೊಂಡಗಳನ್ನೋ ನಿರ್ಮಿಸಿ ಬೆಳೆಗೆ ನೀರೊದಗಿಸುವ ಮೂಲಕ ಫಸಲನ್ನು ಹೆಚ್ಚಿಸುವ ಕೃಷಿ ಚಟುವಟಿಕೆಗಳು ಪ್ರಗತಿಗೆ ಬೆಂಬಲವಾದವು. ಪ್ರಾಣಿಗಳು ಎಳೆಯುವ ಬಂಡಿಗಳು, ತೇಲುದೋಣಿಗಳು, ಚಕ್ರವನ್ನು ಜೋಡಿಸಿದ ವಾಹನಗಳು, ಭಾರವಾದ ವಸ್ತುಗಳನ್ನು ಸಾಗಿಸಲು ಬಲಿಷ್ಠ ಪ್ರಾಣಿಗಳ ಬಳಕೆ, ಪದಾರ್ಥಗಳು ಹುಳಿಬರುವಂತೆ ಮಾಡಿ ಮದ್ಯ ತಯಾರಿಸುವುದು, ತಾಮ್ರದ ಉತ್ಪಾದನೆ ಮತ್ತು ಅದರ ಬಹುಬಗೆಯ ಬಳಕೆ, ಇಟ್ಟಿಗೆಗಳನ್ನು ತಯಾರಿಸಿ ಮನೆಕಟ್ಟುವುದು, ಲೋಹಗಳಿಗೆ ಹೊಳಪು ಕೊಡುವುದು, ಮುದ್ರೆಗಳನ್ನು ತಯಾರಿಸಿ ಬಳಸುವುದು – ಇವೆಲ್ಲ ನಾಗರಿಕತೆಯ ಆರಂಭಕಾಲದಲ್ಲಿ ನಡೆದ ಸಾಧನೆಗಳು.

ಕಬ್ಬಿಣದ ಅದಿರನ್ನು ಕರಗಿಸುವ ಮತ್ತು ಹದಗೊಳಿಸುವ ಸಂಶೋಧನೆಯು ಮಿಶ್ರ ಲೋಹದ ಹತಾರಗಳನ್ನು ಅಗ್ಗವಾಗಿಸಿದ್ದರಿಂದ ಕಾಡುಗಳನ್ನು ಕಡಿದು ಜೌಗುನೆಲವನ್ನು ಒಣಗಿಸುವುದು ಮತ್ತು ಕೃಷಿಯೋಗ್ಯವಾಗಿಸುವುದು ಸುಲಭವಾಯಿತು. ಆ ಮುನ್ನ ಜನ ವಸತಿಗೆ ಅನುಕೂಲವಿರದಿದ್ದ ಜೌಗುನೆಲವು ಸಹ ಈಗ ವಾಸಯೋಗ್ಯವಾದದ್ದರಿಂದ ಜನ ಸಂಖ್ಯೆಯು ದೊಡ್ಡ ಪ್ರಮಾಣದಲ್ಲಿ ವಿಸ್ತರಿಸಿತು. ಕ್ರಮೇಣ ಬಳಕೆಗೆ ಬಂದ ವರ್ಣಮಾಲಾ ಪದ್ಧತಿ ಮತ್ತು ಸಂಖ್ಯಾ ಚಿಹ್ನೆಗಳಿಂದಾಗಿ ಓದುಬರಹಗಳು ಬಹುಜನರಿಗೆ ತಲುಪುವಂತಾಯಿತು. ಇನ್ನೊಂದು ಕಡೆ, ನಗರ ಮತ್ತು ಪಟ್ಟಣಗಳಿಗೆ ಶುದ್ಧನೀರು ಸರಬರಾಜು ಮಾಡುವ ಕಾಲುವೆಗಳ ವ್ಯವಸ್ಥೆಯಿಂದಾಗಿ ನಗರವಾಸಿಗಳ ರೋಗ ರುಜಿನಗಳು, ಮರಣ ಪ್ರಮಾಣ ಕಡಿಮೆಯಾದದ್ದು ಕೂಡ ಜನಸಂಖ್ಯೆಯ ಬೆಳವಣಿಗೆಗೆ ಕಾರಣವಾಯಿತು.



ಪ್ರಗತಿಯ ಚರಿತ್ರೆಯಲ್ಲಿ ಮುಂದಿನ ದೀರ್ಘಕಾಲದ ಅವಧಿಯಲ್ಲಿ ಒಂದು ಬಗೆಯ ಸ್ಥಗಿತತೆಯನ್ನು ಕಾಣುತ್ತೇವೆ. ಇದನ್ನು ನಾವು 'ನಿಷ್ಕ್ರಿಯತೆ' ಎನ್ನಲಾಗದಿದ್ದರೂ ಪ್ರಗತಿಯ ವೇಗವು ಕುಂಠಿತವಾದುದಂತೂ ನಿಜ.

ಪ್ರಗತಿಯು ಹೀಗೆ, ತಾತ್ಕಾಲಿಕವಾಗಿಯಾದರೂ, ನಿಧಾನವಾಗಲು ಕಾರಣವನ್ನು ನಾವು ಭಾಗಶಃ ಮಾನವ ಸಮುದಾಯಗಳಲ್ಲಿ ಉಂಟಾದ ಆಂತರಿಕ ವೈರುಧ್ಯದಲ್ಲಿ ಗುರುತಿಸಬಹುದು. ಈ ವಿರೋಧಾಭಾಸವು ಕೂಡ ಕ್ರಾಂತಿಯ ಫಲಿತಾಂಶವೇ ಎಂಬುದು ವಿಚಿತ್ರವಾದರೂ ಸತ್ಯ. ಒಂದು ಕಡೆ ಅಪಾರ ಸಂಪತ್ತಿನ ಶೇಖರಣೆ ಮತ್ತೊಂದು ಕಡೆ ಅಗತ್ಯ ವಸ್ತುಗಳ ಕೊರತೆ ಎಂದು ನಾವು ಈ ವೈರುಧ್ಯವನ್ನು ಅರ್ಥೈಸಬಹುದು.

ಹೊಸದಾಗಿ ಉತ್ಪತ್ತಿಯಾಗುತ್ತಿದ್ದ ಅಪಾರ ಸಂಪತ್ತು ಅನಿರ್ಬಂಧಿತವಾಗಿ ಶೇಖರವಾಗುತ್ತಿದ್ದುದು ರಾಜಮಹಾರಾಜರು, ಅವರ ಪರಿವಾರದವರು ಮತ್ತು ಶ್ರೀಮಂತ ವ್ಯಾಪಾರಿಗಳ ಬಳಿಯಲ್ಲಿ. ಹೆಚ್ಚುವರಿ ವಸ್ತು ಉತ್ಪಾದನೆಗೆ ಮತ್ತು ಉತ್ಪತ್ತಿಯಾದ ವಸ್ತುಗಳನ್ನು ಗ್ರಾಹಕರಿಗೆ ಸರಬರಾಜು ಮಾಡಲು ಸಂಪತ್ತಿನ ಶೇಖರಣೆ ಅಗತ್ಯವಿದ್ದಿರಲೂಬಹುದು. ಆದರೆ, ಕೆಲವೇ ಜನರ ವಶದಲ್ಲಿ ಶೇಖರವಾದ ಸಂಪತ್ತು ಬಹುಜನರಲ್ಲಿ ಕೊರತೆಗೆ, ಅಂದರೆ ಬಡತನಕ್ಕೆ ಕಾರಣವಾಯಿತು; ಆರ್ಥಿಕ ಪ್ರಗತಿಯು ಕುಂಠಿತವಾಯಿತು. ಇದನ್ನೇ ಏಕಕಾಲದಲ್ಲಿ ಉತ್ಪಾದನೆಯ ಹೆಚ್ಚಳ ಮತ್ತು ಅಗತ್ಯ ವಸ್ತುಗಳ ಕೊರತೆಯ ಅಂತರ್ವಿರೋಧ ಎನ್ನುವುದು. ಈ ಬಗೆಯ ಆರ್ಥಿಕ ವ್ಯವಸ್ಥೆಯಿಂದಾಗಿ ಬೇಸಾಯಗಾರರು, ಮೀನುಗಾರರು, ಹೈನುಗಾರರಿಗೆ ಕೆಲಮಟ್ಟಿನ ಉದ್ಯೋಗಭದ್ರತೆ ದೊರೆಯಿತೆಂಬುದು ನಿಜ. ಆದರೆ ಹೊಸದಾಗಿ ಉತ್ಪಾದನೆಯಾಗುತ್ತಿದ್ದ ಸಂಪತ್ತಿನಲ್ಲಿ ಇವರಿಗೆ ದೊರೆತುದು ಅತ್ಯಲ್ಪಭಾಗ ಮಾತ್ರ. ಹೆಚ್ಚುವರಿ ಉತ್ಪಾದನೆಯು ಖರ್ಚಾಗದಿದ್ದರೆ ಉದ್ಯೋಗ ತರಪೇತಿ ಪಡೆದ ಕುಶಲಕರ್ಮಿಗಳು ನಿರುದ್ಯೋಗಿಗಳಾಗುತ್ತಿದ್ದರು; ಅವರ ಬದುಕು ಸಾಗುತ್ತಿರಲಿಲ್ಲ. ಅವರು ಉತ್ಪಾದನಾ ವ್ಯವಸ್ಥೆಯಲ್ಲಿ ತೊಡಗಿಕೊಳ್ಳಲೇಬೇಕಾಗಿತ್ತು. ಆದರೆ ಇಡೀ ಉತ್ಪಾದನಾ ವ್ಯವಸ್ಥೆಯಲ್ಲಿ ಅವರಿಗೆ ಪುನಃ ದೊರೆತುದು ಕೂಲಿಯ ರೂಪದ ಅಲ್ಪಭಾಗವೆ ಹೊರತು ಸಂಪತ್ತಿನ ಒಡೆತನವಲ್ಲ. ಹೊಸ ವ್ಯವಸ್ಥೆಯಲ್ಲಿ ವ್ಯವಸಾಯಗಾರರು ಮತ್ತು ಕುಶಲ ಕರ್ಮಿಗಳಲ್ಲಿ ಬಹುಸಂಖ್ಯಾತರು, ಭೂಮಿಯ ಒಡೆತನವಿಲ್ಲದ ಉಳುಮೆಗಾರರು, ಹೊಟ್ಟೆಪಾಡಿಗಾಗಿ ದುಡಿಯುವ ಜೀತದಾಳುಗಳಾದರು. ಮಿಕ್ಕವರು ಕಾನೂನುಪ್ರಕಾರ ಸ್ವತಂತ್ರರಾಗಿದ್ದರೂ ದಿನಗೂಲಿ ಕೆಲಸದ ಕಾರಣದಿಂದಾಗಿ ಕಡುಬಡತನದಲ್ಲಿ ಬದುಕು ಸಾಗಿಸತೊಡಗಿದರು. ಅಂತಿಮವಾಗಿ ದೇಹಶ್ರಮದಿಂದ ದುಡಿಯುವ ಬಹುಸಂಖ್ಯಾತ ಜನರು ರಿಕ್ತಸ್ಥಿತಿಯನ್ನು ತಲುಪಿದರು.

ಈ ಸಂದರ್ಭದಲ್ಲಿ 'ದೇಹಶ್ರಮ ದುಡಿಮೆ' ಮತ್ತು 'ಬೌದ್ಧಿಕ ದುಡಿಮೆ' ಅಥವಾ 'ಶ್ರಮಜೀವಿಗಳು' ಮತ್ತು 'ಬುದ್ಧಿಜೀವಿಗಳ' ನಡುವೆ ಬೆಳೆದುಬಂದ ತಾರತಮ್ಯವನ್ನು ಕುರಿತು ಕೆಲವು ಮಾತು ಹೇಳುವುದು ಅಪ್ರಸ್ತುತವಾಗಲಿಕ್ಕಿಲ್ಲ.



ಆಧುನಿಕ ಕೈಗಾರಿಕೆಗಳು

ಅಕ್ಷರವಿದ್ಯೆಯನ್ನು ಆಧರಿಸಿದ ವೃತ್ತಿಗಳು ವಿಶೇಷ ಗೌರವಕ್ಕೆ ಪಾತ್ರವಾಗಿದ್ದೂ ಅಧಿಕಾರ, ಅಂತಸ್ತು, ಸಂಪತ್ತಿಗೆ ದಾರಿಮಾಡಿಕೊಂಡರು. ಹೀಗಾಗಿ ಅಕ್ಷರ ವಿದ್ಯೆಯನ್ನು ಜ್ಞಾನಾರ್ಜನೆಯ ಮಾರ್ಗ ಎನ್ನುವುದಕ್ಕಿಂತ ಹೆಚ್ಚಾಗಿ ಅಭ್ಯುದಯ, ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳಲ್ಲಿ ಏರುವ ಮೆಟ್ಟಿಲು ಎಂದು ಪರಿಗಣಿಸಲಾಯಿತು. ಪ್ರಾಚೀನ ಈಜಿಪ್ಟಿನ ಕುತೂಹಲಕಾರಿ ದಾಖಲೆ ಪತ್ರವೊಂದರಲ್ಲಿ ಅಕ್ಷರಜ್ಞಾನವುಳ್ಳವರು ಪಡೆಯಬಹುದಾದ ಸವಲತ್ತುಗಳನ್ನು ಒಬ್ಬ ವ್ಯವಸಾಯಗಾರ ಇಲ್ಲವೆ ಶ್ರಮಜೀವಿಯು ಅನುಭವಿಸುವ ಸಂಕಷ್ಟ ಗಳೊಂದಿಗೆ ಹೋಲಿಸಲಾಗಿದೆ. ಇಲ್ಲಿನ ಮಾತುಗಳು ಆ ಕಾಲದ ತಂದೆಯು ಮಗನಿಗೆ ಹೇಳಿದ ಬುದ್ಧಿವಾದದ ರೂಪದಲ್ಲಿದೆ. ಅಲ್ಲದೆ ಅವು ಇಂದಿಗೂ ಸಹ ಅನ್ವಯಿಸುತ್ತವೆ. ಉನ್ನತ ವಿದ್ಯಾಭ್ಯಾಸಕ್ಕೆ ಹೋಗಬೇಕೋ ಅಥವಾ ಕಾರ್ಖಾನೆಯ ಕೆಲಸಕ್ಕೆ ಸೇರಬೇಕೋ ಎಂಬ ಸಂದಿಗ್ಧದಲ್ಲಿರುವ ಮಗನಿಗೆ ಒಬ್ಬ ಸಾಮಾನ್ಯ ರೈತನೂ, ಚಿಲ್ಲರೆ ಅಂಗಡಿ ವ್ಯಾಪಾರಿಯೂ ಆದ ಅವನ ತಂದೆಯು ಬರೆದ ಪತ್ರದ ಒಕ್ಕಣೆಯಂತಿ ರುವುದು ವಿಶೇಷ. ಆತ ಹೇಳುತ್ತಾನೆ – ''ವಿದ್ಯೆಯನ್ನು ನಿನ್ನ ಎದೆಯಲ್ಲಿಟ್ಟುಕೊಳ್ಳುವುದರಿಂದ ನೀನು ಯಾವುದೇ ಬಗೆಯ ಕಠಿಣ ಶ್ರಮ ದುಡಿಮೆಯಿಂದ ತಪ್ಪಿಸಿಕೊಂಡು ಗೌರವಾನ್ವಿತ ನ್ಯಾಯಾಧೀಶನಾಗಬಹುದು. ವಿದ್ಯಾವಂತನು ದೇಹಶ್ರಮದ ದುಡಿಮೆಯಿಂದ ಬಿಡುಗಡೆ ಪಡೆಯುತ್ತಾನೆ; ಇತರರ ಮೇಲೆ ಅಧಿಕಾರ ಚಲಾಯಿಸಬಲ್ಲವನಾಗುತ್ತಾನೆ. ವಿದ್ಯಾವಂತನಾಗುವುದು ನಿನಗೆ ಇಷ್ಟವಿಲ್ಲವೇ? ಯೋಚಿಸು. ಲೋಹಗಳನ್ನು ಕರಗಿಸಿ ಅಚ್ಚು ಹೊಯ್ಯುವಂತಹ ಕಠಿಣ ಕೆಲಸ ಮಾಡುವವನಿಗೂ ನಿನಗೂ ವ್ಯತ್ಯಾಸವುಂಟಾಗುವುದು ವಿದ್ಯೆಯಿಂದಲೇ. ಕುಲುಮೆಯೆದುರಿಗೆ ಕುಳಿತು ಲೋಹದ ತುಂಡನ್ನು ಮೊಸಳೆಯಂತೆ ಭದ್ರವಾಗಿ ಹಿಡಿದು ಕೆಲಸಮಾಡುವ ಕಮ್ಮಾರನನ್ನು ನಾನು ನೋಡಿದ್ದೇನೆ; ಅವನು ಮೀನಿನ ಮರಿಗಳಿಗಿಂತಲೂ ಹೆಚ್ಚು ಗಬ್ಬುನಾರುತ್ತಾನೆ. ಇನ್ನು, ಉಳಿ ಸುತ್ತಿಗೆ ಹಿಡಿದು ಕೆಲಸಮಾಡುವವನು ನೆಲ ಅಗೆಯುವವನಿಗಿಂತ ಹೆಚ್ಚು ಕಷ್ಟಪಡುತ್ತಾನೆ. ಮರದ ದಿಮ್ಮಿಗಳೇ ಅವನ ಹೊಲ, ಉಳಿ ಸುತ್ತಿಗೆಗಳೇ ಅವನ ಗುದ್ದಲಿ, ಪಿಕಾಸಿ. ರಾತ್ರಿ ಸ್ವಲ್ಪ ಬಿಡುವು ಸಿಕ್ಕುವುದೆಂದರೆ ಆಗ ಕೈಸೋಲುವವರೆಗೂ ಹೆಚ್ಚುವರಿ ದುಡಿಮೆ ಮಾಡಬೇಕು. ರಾತ್ರಿಯಲ್ಲಿ ದೀಪ ಹೊತ್ತಿಸಿಕೊಂಡು ಅದರ ಬೆಳಕಿನಲ್ಲಿ ಕೆಲಸ ಮಾಡುವವರಿದ್ದಾರೆ. ಕಲ್ಲುಕುಟಿಗನು ಒರಟು ಕಲ್ಲನ್ನೂ ಕತ್ತರಿಸಬೇಕಾಗುತ್ತದೆ; ಅವನು ತನ್ನ ಕೆಲಸ ಮುಗಿಸುವ ಹೊತ್ತಿಗೆ ಕೈಸೋತು ಸುಣ್ಣವಾಗಿರುತ್ತದೆ, ತುಂಬ ದಣಿದಿರುತ್ತಾನೆ. ಬಟ್ಟೆ ಗಿರಣಿಯ ನೇಕಾರನು ಹೆಂಗಸಿಗಿಂತ ಕಡೆ (?); ಅವರು ಮಂಡಿಗಳನ್ನು ಹೊಟ್ಟೆಗೆ ಒತ್ತಿ ಕುಳಿತೇ ಕೆಲಸ ಮಾಡಬೇಕಾಗುವುದರಿಂದ ಸರಿಯಾಗಿ ಉಸಿರಾಡಲಾಗುವುದಿಲ್ಲ. ಅವನು ಹೊರಗಿನ ಗಾಳಿ ಬೆಳಕುಗಳನ್ನು ಕಾಣಬೇಕೆಂದರೆ ಕಾವಲುಗಾರರಿಗೆ ಲಂಚ ಕೊಡಬೇಕು.'' (ಉದ್ಧರಣ : V. Gordon Childe; *Man Makes Himself*, 1951, - p. 149).

> ಪ್ರಗತಿಯ ಚರಿತ್ರೆಯಲ್ಲಿ ಮುಂದಿನ ದೀರ್ಘಕಾಲದ ಅವಧಿಯಲ್ಲಿ ಒಂದು ಬಗೆಯ ಸ್ಥಗಿತತೆಯನ್ನು ಕಾಣುತ್ತೇವೆ. ಇದನ್ನು ನಾವು 'ನಿಷ್ಕ್ರಿಯತೆ' ಎನ್ನಲಾಗದಿದ್ದರೂ ಪ್ರಗತಿಯ ವೇಗವು ಕುಂಠಿತವಾದುದಂತೂ ನಿಜ. ಪ್ರಗತಿಯು ಹೀಗೆ, ತಾತ್ಕಾಲಿಕವಾಗಿಯಾದರೂ, ನಿಧಾನವಾಗಲು ಕಾರಣವನ್ನು ನಾವು ಭಾಗಶಃ ಮಾನವ ಸಮುದಾಯಗಳಲ್ಲಿ ಉಂಟಾದ ಆಂತರಿಕ ವೈರುಧ್ಯದಲ್ಲಿ ಗುರುತಿಸಬಹುದು. ಈ ವಿರೋಧಾಭಾಸವು ಕೂಡ ಕ್ರಾಂತಿಯ ಫಲಿತಾಂಶವೇ ಎಂಬುದು ವಿಚಿತ್ರವಾದರೂ ಸತ್ಯ. ಒಂದು ಕಡೆ ಅಪಾರ ಸಂಪತ್ತಿನ ಶೇಖರಣೆ ಮತ್ತೊಂದು ಕಡೆ ಅಗತ್ಯವಸ್ತುಗಳ ಕೊರತೆ ಎಂದು ನಾವು ಈ ವೈರುಧ್ಯವನ್ನು ಅರ್ಥೈಸಬಹುದು.

ಇನ್ನಿತರ ದೇಶಗಳಲ್ಲಿ ಅಥವಾ ಇನ್ನೂ ಮುಂಚಿನ ಕಾಲದಲ್ಲೂ ಅಕ್ಷರಜ್ಞಾನದಿಂದಾಗಿ ಸಾಮಾಜಿಕವಾಗಿ ಮುಂದುವರಿಯುವ ನಿರೀಕ್ಷೆಗಳು ಈ ಬುದ್ಧಿವಾದದಲ್ಲಿರುವಷ್ಟು ಉಜ್ವಲವೂ ಖಚಿತವೂ ಆಗಿಲ್ಲದಿರಬಹುದು. ಆದರೂ ಸಹ ವಿದ್ಯಾವಂತರು ಪಡೆಯಬಹುದಾದ ಉದ್ಯೋಗಗಳು ದೈಹಿಕ ಸಾಮರ್ಥ್ಯದಿಂದ ಪಡೆಯುವ ಕೆಲಸಗಳಿಗಿಂತ ಶ್ರೇಷ್ಠವೆಂಬ ಭಾವನೆ ನಗರೀಕರಣದ ಆರಂಭಕಾಲದಿಂದಲೂ ಬೆಳೆದುಬಂದಿದೆ (ಕೆಟ್ಟು ಪಟ್ಟಣ ಸೇರು ಎಂಬ ಒಂದು ಗಾದೆ ಉಂಟಷ್ಟೆ). ಈ ಭಾವನೆ ಇಂದಿಗೂ ಪ್ರಸ್ತುತವೇ ಆಗಿದೆ ತಾನೆ. (ಈ ಉದ್ಧರಣದಲ್ಲಿನ ವಿದ್ಯೆ ಎಂಬುದನ್ನು 'ಕಂಪ್ಯೂಟರ್ ವಿದ್ಯೆ'ಯೆಂದೂ ಕಠಿಣ ದೇಹಶ್ರಮ ಜೀವನ ಎಂಬುದನ್ನು ಸಾಮಾನ್ಯ 'ಸರ್ಕಾರಿ' ಎಂದೂ ಬದಲಾಯಿಸಿ, ಸೂಕ್ತ ತಿದ್ದುಪಡಿಗಳನ್ನು ಮಾಡಿಕೊಂಡರೆ ಸದರಿ ಬುದ್ಧಿವಾದವು ಇಂದಿಗೂ ಪ್ರಸ್ತುತವೆನಿಸಬಹುದು.) ಬೌದ್ಧಿಕ ದುಡಿಮೆ ಮತ್ತು ದೇಹಶ್ರಮದ ದುಡಿಮೆಗಳ ನಡುವೆ ಉಂಟಾದ ಅಂತರವು ವರ್ಗ ವಿಭಜನೆಯು ತಲೆದೋರಲು ಅಥವಾ ವಿಭಜನೆಯನ್ನು ತೀವ್ರಗೊಳಿಸಲು ಕಾರಣವಾಯಿತೆಂಬ ಸಂಗತಿಯನ್ನು ನೆನೆದಿರಬೇಕು.

ವಾಸ್ತವ ಬದುಕಿನಲ್ಲಿ ರಾಜರು, ಪುರೋಹಿತರು, ಸೇನಾಧಿಕಾರಿಗಳು ಮೊದಲಾದವರು ವ್ಯವಸಾಯಗಾರರು, ಕೈಕಸಬುದಾರರು ಮತ್ತು ಇನ್ನಿತರ ಬಗೆಯ ಶ್ರಮಜೀವಿಗಳಿಗಿಂತ ಭಿನ್ನರೂ ಶ್ರೇಷ್ಠರೂ ಎನಿಸಿದರು. ಈ ಬಗೆಯ ವರ್ಗ ವಿಭಜನೆಯಲ್ಲಿ ವಿದ್ಯಾವಂತರು ಮೊದಲ ವರ್ಗಕ್ಕೆ ಹತ್ತಿರವಾದರು. ಅಕ್ಷರ ಜ್ಞಾನದಿಂದ ಪಡೆದುದು ಗೌರವಾನ್ವಿತ ಉದ್ಯೋಗವಾಯಿತು.

ಈ ಹಿಂದೆ ವಿವರಿಸಿದಂತೆ ಹೊಸಹೊಸದಾಗಿ ಲಭ್ಯವಾಗುತ್ತಿದ್ದ ಹೆಚ್ಚುವರಿ ಉತ್ಪಾದನೆಯ ಗಣನೀಯ ಭಾಗವು ಸಂದಾಯವಾದುದು ರಾಜಪರಿವಾರದವರು, ವ್ಯಾಪಾರಿಗಳು, ಪಾದ್ರಿ-ಪುರೋಹಿತರು, ಮತ ಧಾರ್ಮಿಕ ಮುಂದಾಳುಗಳು ಮತ್ತು ಅವರ ಆಪ್ತರಾದವರಿಗೆ. ಇದರಿಂದಾಗಿ ಸಮುದಾಯವು ಆರ್ಥಿಕ ತಳಹದಿಯ ಮೇಲೆ ವಿಭಜನೆಗೊಂಡಿತು. ರಾಜರು, ಮಂತ್ರಿಗಳು, ಅಧಿಕಾರಿಗಳು ಮೊದಲಾದವರಿಂದ ಕೂಡಿದ 'ಆಳುವ ವರ್ಗ' ಮತ್ತು ಇದಕ್ಕೆ ಪ್ರತಿಯಾಗಿ ಬೇಸಾಯಗಾರರು, ಕೈಕಸಬುದಾರರು ಮೊದಲಾದ ಶ್ರಮಜೀವಿಗಳಿಂದ ಕೂಡಿದ 'ಅಧೀನ ವರ್ಗ'ಗಳು ಅಸ್ತಿತ್ವಕ್ಕೆ ಬಂದವು. ಆಯಾ ವರ್ಗಗಳು ತಮ್ಮ ಪರಿಸ್ಥಿತಿಗೆ – ಮುಖ್ಯವಾಗಿ ಆರ್ಥಿಕ ಸಾಮರ್ಥ್ಯಕ್ಕೆ – ಅನುಗುಣವಾದ ಜೀವನ ಶೈಲಿಗಳನ್ನು ಅಳವಡಿಸಿಕೊಂಡವು. ಹಾಗೆ ನೋಡಿದರೆ ಇದು ಕೈಗಾರಿಕಾ ಕ್ರಾಂತಿ, ನಗರೀಕರಣಗಳ ಅನಂತರದ ಬೆಳವಣಿಗೆಯೇನೂ ಅಲ್ಲ. ಪುರಾತತ್ವ ಶೋಧಕರು ವಿಭಿನ್ನ ಜೀವನಶೈಲಿಯ ಮಾದರಿಗಳನ್ನು ತೆರೆದಿಟ್ಟಿದ್ದಾರೆ. ಈಜಿಪ್ಟಿನ ರಾಜರಾಣಿಯರ ಅದ್ದೂರಿಯ ಸ್ಮಾರಕಗಳ ವೈಭವ ಹಾಗೂ ಜನಸಾಮಾನ್ಯರ ಖಾಸಗಿ ಗೋರಿಗಳ ನಿರಾಡಂಬರ ಸರಳತೆ; ಸಿಂಧೂ ಕಣಿವೆಯ ವ್ಯಾಪಾರೋದ್ಯಮಿಗಳ ಭವ್ಯ ಸೌಧಗಳು ಮತ್ತು ಸಾಮಾನ್ಯ ಜನರ ಜೋಪಡಿ ಅವಶೇಷಗಳ ಹೋಲಿಕೆಯಿಂದ ಈ ಎರಡು ವರ್ಗಗಳ ವಿಭಿನ್ನ ಜೀವನಶೈಲಿಗಳ ಅಂತರವು ಸ್ಪಷ್ಟವಾಗುತ್ತದೆ. ಇಂಥ ವ್ಯತ್ಯಾಸದೊಂದಿಗೆ ಹೋಲಿಸಿದಾಗ ವಂಶಾಡಳಿತದ ಪೂರ್ವದ ಸ್ಮಶಾನಗಳಲ್ಲಿನ ಸಮಾಧಿಗಳು ಅಥವಾ ಶಿಲಾಯುಗದ ಹಳ್ಳಿಯೊಂದರ ಗುಡಿಸಿಲುಗಳು ಸಮಾನರೂಪದಲ್ಲಿದ್ದುದು – ಅಂದರೆ ಎಲ್ಲವೂ ನಿರಾಡಂಬರ ಬಡ ಸ್ಥಿತಿಯಲ್ಲಿದ್ದುದು ಗಮನಕ್ಕೆ ಬರುತ್ತದೆ.

ಈ ಲೇಖನದ ಮೊದಲ ಭಾಗದಲ್ಲಿ ಚರ್ಚಿಸಿದ ಜೀವವಿಕಾಸ ಶಾಸ್ತ್ರದ ನಿಲುವಿನಿಂದ ನೋಡಿದಾಗ, ವರ್ಗವಿಭಜನೆಯನ್ನು ಒಳಗೊಂಡ ಮೇಲೆಯೂ, ನಗರೀಕರಣ ಕ್ರಾಂತಿಯ ಪರಿಣಾಮವು ಸಮರ್ಥಿತವಾಗುತ್ತದೆ. ಇದರರ್ಥ ವರ್ಗವಿಭಜನೆಯು ತನ್ನಿಂದ ತಾನೆ ಪ್ರಗತಿಯನ್ನು ಚುರುಕುಗೊಳಿಸುತ್ತದೆ ಎಂದಲ್ಲ. ತದ್ವಿರುದ್ಧವಾಗಿ ವರ್ಗವಿಭಜನೆ ಮತ್ತು ನಗರೀಕರಣಗಳು ಪ್ರಗತಿಯನ್ನು ಕುಂಠಿತಗೊಳಿಸಲೂಬಹುದು. ಕೈಗಾರಿಕಾ ಕ್ರಾಂತಿ, ನಗರೀಕರಣ, ವರ್ಗ ವಿಭಜನೆಗಳಿಗಿಂತ ಮುಂಚಿನ ಕಾಲದಲ್ಲಿ 'ಪ್ರಗತಿ' ಎಂದರೆ ಉತ್ಪಾದನಾ ವಿಧಾನದ ಸುಧಾರಣೆಯಾಗಿತ್ತು; ಇಂತಹ ಸುಧಾರಣೆಗಳನ್ನು ಸ್ವತಃ ಕಸಬುದಾರರೇ ಮಾಡಿಕೊಳ್ಳುತ್ತಿದ್ದರು. ಪರಂಪರಾಗತ ವಿಧಾನಗಳನ್ನು ಮುಂದುವರಿಸುತ್ತಿದ್ದ ಕಸಬುದಾರರಲ್ಲಿ ಹೊಸ ಪ್ರಯೋಗಗಳು 'ನವೀನತೆ'ಯ ಅಪಾಯಕಾರಿಯೆಂಬ, ಒಂದು ಬಗೆಯ ಅಂಧಶ್ರದ್ಧೆಯಿತ್ತು.

ಕ್ರಾಂತಿಯ ಪರಿಣಾಮವಾಗಿ ಆ ಮೊದಲು ತುಂಬ ಸೃಜನಶೀಲರಾಗಿದ್ದ



ಕಸಬುದಾರರು ಅಧೀನ ವರ್ಗಗಳಿಗೆ ತಳ್ಳಲ್ಪಟ್ಟರು. ಹೊಸದಾಗಿ ಅಸ್ತಿತ್ವಕ್ಕೆ ಬಂದ ಆಳುವ ವರ್ಗವು ಜನಮನದಲ್ಲಿ ಬೇರುಬಿಟ್ಟಿದ್ದ ಅಂಧಶ್ರದ್ಧೆಯನ್ನೇ ಬಂಡವಾಳ ಮಾಡಿಕೊಂಡು ತನ್ನ ಶೋಷಕ ಶಕ್ತಿಯನ್ನು ಹೆಚ್ಚಿಸಿಕೊಂಡಿತು. ರಾಜಪುರೋಹಿತ, ಪಾದ್ರಿ, ಮಂತ್ರವಾದಿ ಮೊದಲಾದವರ ಶಕ್ತಿಯು ದೈವದತ್ತವಾದುದೆಂದು ಪ್ರಚಾರ ಮಾಡಲಾಯಿತು. ಮಂತ್ರಗಾರನಾಗಿ ವೃತ್ತಿಯನ್ನಾರಂಭಿಸಿದ ಈಜಿಪ್ಟಿನ ಫೆರೋ (Pharaoh) ತಾನೇ ದೇವಪುರುಷನೆಂದು ಹೇಳಿಕೊಳ್ಳುತ್ತ ತನ್ನ ಹೆಚ್ಚಿನ ಕಾಲವನ್ನು ಮಂತ್ರತಂತ್ರಗಳ ಪ್ರಯೋಗದಲ್ಲಿ ಕಳೆದನು. ಸುಮೇರ್‌ನಲ್ಲಿ ಕ್ರಾಂತಿಯ ಮೊದಲ ಫಲ ಪಡೆದವರು ದೇವಾಲಯಗಳ ಅರ್ಚಕರು. ರಾಜನು ರಂಗದ ಮೇಲೆ ಕಾಣಿಸಿಕೊಂಡಾಗ ಆತ ದೈವಶಕ್ತಿಯೊಡನೆ ಸಂಪರ್ಕವಿಟ್ಟುಕೊಂಡವನಂತೆ ಕಾಲಕಾಲದ ಉತ್ಸವಾಚರಣೆಗಳಲ್ಲಿ ದೇವತೆಗಳನ್ನೂ ಪ್ರತಿನಿಧಿಸಿದನು. ಹೀಗೆ ಅಂಧಶ್ರದ್ಧೆಯನ್ನು ಪೋಷಿಸಿಕೊಂಡುಬಂದ ಆಳುವ ವರ್ಗವು ವೈಜ್ಞಾನಿಕ ಚಿಂತನೆಯನ್ನು ಪ್ರೋತ್ಸಾಹಿಸುವುದೆಂದು ನಿರೀಕ್ಷಿಸುವುದು ವ್ಯರ್ಥ. ಅವರು ಮತ್ತೆ ಮತ್ತೆ ಪ್ರೋತ್ಸಾಹದ ಭರವಸೆಗಳನ್ನು ಕೊಡುವುದರಲ್ಲಿ ನಿರತರಾಗಿದ್ದರು; ಇಂತಹ ಭರವಸೆಗಳು ಭ್ರಮೆಯೆಂಬುದನ್ನು ಅನುಭವವು ತೋರಿಸಿಕೊಡುತ್ತಿದ್ದಿತಾದರೂ ಜನರು ಆಳವಾದ ವೈಚಾರಿಕ ಚಿಂತನೆಯ ಮೂಲಕ ಅನುಸರಿಸಬೇಕಾದ ಕಠಿಣ ಮಾರ್ಗದಲ್ಲಿ ಸಾಗಲು ಹಿಂಜರಿದರು.

ಹೊಸ ಪ್ರಯೋಗಗಳನ್ನು ಪ್ರೋತ್ಸಾಹಿಸಲು ಆಳುವ ವರ್ಗವು ಯಾವ ಉತ್ತೇಜನವನ್ನೂ ಕೊಡಲಿಲ್ಲ. ಶ್ರಮ ಉಳಿತಾಯದ ಸಾಧನಗಳಾಗಿ, ಭಾರ ಹೊರಬಲ್ಲ ಪ್ರಾಣಿಗಳ ಬಳಕೆ, ದೋಣಿ ತಯಾರಿಕೆ, ಲೋಹದ ಹತಾರಗಳು ಮೊದಲಾದವುಗಳ ಮೂಲಕ ಈ ಮೊದಲೇ ಪ್ರಗತಿಯಾಗಿತ್ತಷ್ಟೆ. ಆದರೆ ಹೊಸ ಆಡಳಿತಗಾರರು, ಅಂಧಶ್ರದ್ಧೆಗೆ ಶರಣಾಗಿದ್ದ ಪ್ರಜೆಗಳನ್ನು ಮತ್ತು ಯುದ್ಧಗಳಲ್ಲಿ ಸೆರೆಸಿಕ್ಕ ಗುಲಾಮರನ್ನು ಶ್ರಮದುಡಿಮೆಗೆ ಹಚ್ಚಿದರು; ಬಂಡಿಗಳನ್ನು ಎಳೆಯಲು, ಮೇನೆ - ಪಲ್ಲಕ್ಕಿಗಳನ್ನು ಹೊರಲು ಇವರು ಮನುಷ್ಯರನ್ನೆ ಬಳಸಿದರು. ಹೀಗಾಗಿ ಶ್ರಮ ಉಳಿತಾಯದ ಸಾಧನಗಳನ್ನು ಕಂಡುಹಿಡಿಯುವ ಅಗತ್ಯದ ಬಗೆಗೆ ಕೂಡ ಅವರು ತಲೆಕೆಡಿಸಿಕೊಳ್ಳಲಿಲ್ಲ.

ಇದೇ ಸಮಯದಲ್ಲಿ ಓದುಬರಹಗಳನ್ನು ಬಲ್ಲ ವಿದ್ಯಾವಂತರ ಹೊಸ ಮಧ್ಯಮವರ್ಗವು ಆಳುವ ವರ್ಗಕ್ಕೆ ಭದ್ರವಾಗಿ ಅಂಟಿಕೊಂಡಿತು. ಅನೇಕ ಸಂದರ್ಭಗಳಲ್ಲಿ ಇವರು ಪಾದ್ರಿಗಳು, ಪುರೋಹಿತರು, ಆಸ್ಥಾನ ಪಂಡಿತರು ಆಗಿರುತ್ತಿದ್ದರು. ವಿದ್ಯಾವಂತರ ವೃತ್ತಿಗಳು 'ಗೌರವ ಪಾತ್ರ'ವಾಗಿದ್ದುದರಿಂದ ಇವರಿಗೆ ಆಳುವವರ್ಗಕ್ಕೆ ಬಡ್ತಿ ಪಡೆಯುವ ಅವಕಾಶಗಳು ಹೆಚ್ಚಾಗಿ ದೊರೆತವು. ಮಂತ್ರ ವಿದ್ಯೆ, ಜ್ಯೋತಿಷ, ಅರ್ಚಕವೃತ್ತಿ ಮೊದಲಾದವುಗಳಿಗೆ ದೊರೆತಷ್ಟು ಪ್ರಾಧಾನ್ಯವು ಕೈಕಸಬುಗಳಿಗೆ ದೊರೆಯಲಿಲ್ಲ. ಅಂತಿಮವಾಗಿ 'ಬುದ್ಧಿ ಜೀವಿ'ಗಳ ಖಾಸಗಿ ಆಸಕ್ತಿಗಳು ಅವರನ್ನು ಕೇವಲ ಪುಸ್ತಕಗಳಿಂದ ಜ್ಞಾನಸಂಗ್ರಹಿಸುವ, ವಾಸ್ತವ ಜಗತ್ತಿನ ಪ್ರಯೋಗ, ಅವಲೋಕನ ಅನುಭವಗಳಿಂದ ದೂರವಾದ ಒಂದು ವರ್ಗವಾಗಿಸಿದವು. ಕ್ರಾಂತಿಯು ಯಾವ ಹೊಸಬಗೆಯ ವೈಜ್ಞಾನಿಕ ವಿಧಾನಗಳಿಗೆ ಅವಕಾಶ ಮಾಡಿಕೊಂಡಿದ್ದಿತೋ ಅದೆಲ್ಲ ಈಗ ಅಂಧಶ್ರದ್ಧೆಗೆ ಶರಣಾಯಿತು; ಫಲದಾಯಕವಾಗಿ ಬೆಳೆಯುತ್ತಾ ಹೋಗುವ ಅನ್ವಯಿಕ ವಿಜ್ಞಾನದಿಂದ ಪುಸ್ತಕ ವಿದ್ಯೆಯೂ ಪ್ರತ್ಯೇಕಗೊಂಡಿತು.

ದಿನನಿತ್ಯದ ಬದುಕಿನ ಅಗತ್ಯಗಳನ್ನು ಹೊಂದಿಸಿಕೊಳ್ಳುವ ಜಂಜಾಟದಲ್ಲಿ ಸಿಲುಕಿದ ಕುಶಲಕರ್ಮಿಗಳು ಹೊಸಹೊಸ ಪ್ರಯೋಗಗಳಲ್ಲಿ ನಿರತರಾಗುವುದು ಕಷ್ಟ. ಅಂಥವರಿಗೆ

ಆಳುವ ವರ್ಗವು ಸೌಲಭ್ಯ, ಪ್ರೋತ್ಸಾಹಗಳನ್ನು ಒದಗಿಸಿದಾಗ ಮಾತ್ರ ಪ್ರಗತಿ ಸಾಧ್ಯ. ಆದರೆ ಪರಿಸ್ಥಿತಿಯು ಇದಕ್ಕೆ ವಿರುದ್ಧವಾಗಿತ್ತು. ಹೀಗಾಗಿ ಹೊಸಹೊಸ ಪ್ರಯೋಗಗಳು, ಆನ್ವಯಿಕ ವಿಜ್ಞಾನ ಶಾಖೆಗಳು ಬೆಳೆಯಲಿಲ್ಲ. ಹಿಂದಿನಿಂದ ನಡೆದುಬಂದಿದ್ದು, ಅಳಿದುಳಿದ ವೈಜ್ಞಾನಿಕ ವಿಧಾನಗಳಷ್ಟೇ ಏಕ ರೀತಿಯಿಂದ ಮುಂದುವರಿದವು. 'ಬುದ್ಧಿಜೀವಿ'ಗಳು ಮತ್ತು 'ಶ್ರಮಜೀವಿ'ಗಳ ನಡುವಿನ ಕಂದಕವು ಪ್ರಾಯೋಗಿಕ ವಿಜ್ಞಾನ ತಂತ್ರಗಳ ಬೆಳವಣಿಗೆಗೆ ಅಡೆತಡೆಗಳನ್ನೊಡ್ಡಿತು. ತಾಂತ್ರಿಕ ಕೌಶಲವು ಬೆಳೆಯಬೇಕಾದರೆ ಕಸಬುದಾರರಿಗೆ ಬೌದ್ಧಿಕತೆಯ ಬೆಂಬಲ ದೊರೆಯಬೇಕು. ಅಂತಹ ಬೌದ್ಧಿಕತೆಯ ಅಭಾವದಿಂದಾಗಿ ಪ್ರಗತಿಯು ತಾತ್ಕಾಲಿಕವಾಗಿಯಾದರೂ ಸ್ಥಗಿತಗೊಂಡಿತು.

ಈವರೆಗೆ ವಿವರಿಸಿದ ಆಂತರಿಕ ವೈರುಧ್ಯಗಳ ಜೊತೆಗೆ ಪ್ರಾಚೀನ ಪೌರ್ವಾಸ್ತ್ಯ ನಾಗರಿಕತೆಗಳು ಬಾಹ್ಯ ವೈರುಧ್ಯಗಳಲ್ಲಿ ಕೂಡ ಸಿಕ್ಕಿಹಾಕಿಕೊಂಡಿದ್ದವು. ನೈಲ್ ಕಣಿವೆಯಾಗಲಿ, ಬ್ಯಾಬಿಲೋನಿಯ ಆಗಲಿ ಸ್ವಯಂಪೂರ್ಣವಾಗಿರಲಿಲ್ಲ. ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಸಂಘಟಿತವಾಗಿರುವಾಗ ಕೂಡ ಅತ್ಯವಶ್ಯ ಕಚ್ಚಾ ಸಾಮಗ್ರಿಗಳನ್ನು ಅವು ಬೇರೆ ಬೇರೆ ಆಡಳಿತಕ್ಕೊಳಪಟ್ಟ ಪ್ರದೇಶಗಳಿಂದ ಆಮದು ಮಾಡಿಕೊಳ್ಳಬೇಕಾಗುತ್ತಿತ್ತು. ಒಂದು ಕಾಲದಲ್ಲಿ ತಮ್ಮ ತಮ್ಮ ಹೆಚ್ಚುವರಿ ಉತ್ಪಾದನೆಗಳನ್ನು ಅದಲು ಬದಲು ಮಾಡಿಕೊಳ್ಳುವ ಮೂಲಕ ಆಮದು ಅಗತ್ಯವನ್ನು ಪೂರೈಸಿಕೊಳ್ಳುತ್ತಿದ್ದುವೆಂದು ತರ್ಕಿಸಬಹುದು. ಆದರೆ ಹೀಗೆ ಆಮದು ಮಾಡಿಕೊಂಡ ಸರಕು ಕೂಡ ಈಜಿಪ್ಷಿಯನ್ನರ ಮತ್ತು ಸುಮೇರಿಯನ್ನರ ಎಲ್ಲ ಬೇಡಿಕೆಗಳನ್ನು ಪೂರೈಸಲು ಸಾಕಾಗಲಿಲ್ಲ.

ಕ್ರಮಬದ್ಧವಾದ ಮತ್ತು ನಿರಂತರವಾದ ಸರಬರಾಜನ್ನು ಖಚಿತಪಡಿಸಿಕೊಳ್ಳುವ ಸಲುವಾಗಿ ಬಲಪ್ರಯೋಗ ಅಂದರೆ, ದಂಡಯಾತ್ರೆಗಳು ಆರಂಭವಾದವು. ವ್ಯಾಪಾರಕ್ಕಾಗಿ ತೆರೆದಿದ್ದ ದಾರಿಗುಂಟ ಸೇನಾ ತುಕಡಿಗಳು ಚಲಿಸಿದವು. ಅಂತಿಮವಾಗಿ ಕಚ್ಚಾ ಸಾಮಗ್ರಿಗಳನ್ನು ಒದಗಿಸುವ ಮೂಲ ಪ್ರದೇಶಗಳನ್ನು ವಶಪಡಿಸಿಕೊಳ್ಳುವ, ಆಕ್ರಮಿಸಿಕೊಳ್ಳುವ ಪ್ರಕ್ರಿಯೆಗಳು ನಡೆದವು. ಆಕ್ರಮಣ, ಸಾಮ್ರಾಜ್ಯವಿಸ್ತರಣೆಗಳಿಂದ ವಸಾಹತುಗಳು ನಿರ್ಮಾಣವಾದವು.

ಪ್ರಜ್ಞಾಪೂರ್ವಕವಾಗಿ, ಆರ್ಥಿಕ ಲೆಕ್ಕಾಚಾರದಿಂದಲೇ ದಂಡಯಾತ್ರೆಗಳು, ಆಕ್ರಮಣಗಳು ನಡೆದವೆಂದು ಹೇಳಬೇಕಾಗಿಲ್ಲ. ನಾಯಕವೀರರು ತಮ್ಮ ಸಾಹಸ ಪ್ರದರ್ಶನಕ್ಕಾಗಿ ದಂಡಯಾತ್ರೆಗಳನ್ನು ಕೈಗೊಂಡಿರಲೂಬಹುದು. ಆದರೆ ದಂಡಯಾತ್ರೆಗಳು ಅಂತಿಮವಾಗಿ ಸಾಮ್ರಾಜ್ಯವಿಸ್ತರಣೆ, ವಸಾಹತು ಸ್ಥಾಪನೆಗಳಲ್ಲಿ ಪರ್ಯವಸಾನವಾದವು. ವಿಜಯಶಾಲಿಗಳಾದ ಆಕ್ರಮಣಕಾರಿ ದಂಡನಾಯಕರು ರಮ್ಯಾದ್ಭುತ

# ಕೃಷ್ಣ ಕನಸು




ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ
'ಹೊಂಬೆಳಗು', ನಲಂದ ಶಾಲೆ ಪಕ್ಕ, ಶೆಟ್ಟಿಹಳ್ಳಿ ಗೇಟ್
ತುಮಕೂರು - ೫೭೨ ೧೦೩


ಬುದ್ಧಪೂರ್ಣಿಮಾ ರಾತ್ರಿ
ಗೋಧೂಳಿ ಲಗ್ನದಲಿ ನವಜೋಡಿ ಹರಸಿ
ಉಲ್ಲಾಸಭಾವದಲಿ ಮನೆಗೆ ಬಂದು
ಮಡದಿ ಮಗನ ಕೂಡೆ ಮಾತುಕತೆಯಾಡಿ
ನಿದ್ದೆಗೆ ಸಂದ ಹೊತ್ತು
ಸರಿರಾತ್ರಿಯಲಿ ಹಿಂಡನಗಲಿದ ಆನೆ
ಅರಸಿಬಂದಾ ತೆರದಿ ಅಣ್ಣ ಬಂದನು ಮನೆಗೆ

ಹಬ್ಬದೂಟವನುಂಡ ಮನೆ ಮಂದಿ
ಸಂಕಥದಲಿ ಕುಳಿತ ವೇಳೆ
ಹಳೆ ಮನೆಯ ಮಾಡಿನಲಿ
ಧುತ್ತನೆ ಪ್ರತ್ಯಕ್ಷವಾದ
ಕೋಲ್ಮಿಂಚಿನಾ ತೆರದಿ
ಎಲ್ಲರನು ಬಿಟ್ಟು ನನ್ನ ಬದಿಗೇ ಸರಿದ
ಸಂಭ್ರಮಕ್ಕೆ ಬಳಗ ಬೆರಗಾಗಿತ್ತು

ಶಬ್ದವಿಲ್ಲದ ಮಾತು ಎಲ್ಲರೆದೆಯೊಳು ಹೂತು
ಬೆಳಕು ಬಿತ್ತಿದ ಹಾಗೆ ಮುಖದ ಮಾಟ
ಅಣ್ಣ ತಂಗಿಯರೊಲವು ಬಂಧು ಬಳಗದ ಚೆಲುವು
ನಗೆಯ ಬಗೆ ನೆಲವಾಗಿ ನಿಜವು ಒಡಮುರಿದಿತ್ತು

ಇದ್ದಕ್ಕಿದ್ದಂತೆ ಹಿಂಡನಗಲಿ ನಡೆದ
ಹೆಜ್ಜೆ ಸಾಲಲಿ ಗೆಜ್ಜೆ ಉಯಿಲು
ರಚ್ಚೆ ಹಿಡಿದಾ ಕರುಳ ಕುಡಿ
ಅಗೋ ಅಲ್ಲಿ ಇಗೋ ಇಲ್ಲಿ
ಮುಂದೆ ಅವನು ಹಿಂದೆ ಕೂಗು

ಊರು ಕೇರಿಯ ದಾಟಿ
ಆರಳಿ ಓಣಿಯ ಗುಂಟ
ಕಾಯ ಮಾಯದ ನಡಿಗೆ
ನಾಭಿ ಮೂಲದ ಬೆರಗು

ಜಾರುವ ಬೆಳಗ ತಬ್ಬುವ ಬಯಕೆ
ಮುಗಿದಿರದ ಮಾತು ಕತೆ
ಮತ್ತೆ ಬೆಳೆಸುವ ತವಕ

ಮೌನವಾಳಿದ ಬಯಲು
ಅವನು ಬೆಳೆಸಿದ ಚೆಲುವು
ಬಳ್ಳಿ ಮಿಂಚು ಬಳಗ ಸಾಲು

ಧುತ್ತನೆ ಮತ್ತೆ ಎತ್ತ ಸರಿದ ದೇವರೆ ?
ಎರಡು ದಶಕದ ಬರವ ಒಂದು ಕ್ಷಣ ತಣಿಸಿತ್ತು
ಹುಣ್ಣಿಮೆಯು ಹೊನಲಾಗಿ ಬುದ್ಧನಗು ಚೆಲ್ಲಿತ್ತು

ವೀರರಾಗಿಬಿಟ್ಟರು! ಇಂತಹ ನಾಯಕ ವೀರರು ಮತ್ತು ಸಾಮ್ರಾಟರು ಅವಸಾನ ಹೊಂದಿದ ಸಾವಿರಾರು ವರ್ಷಗಳ ಬಳಿಕವೂ ಕವಿಗಳೂ ಸಾಹಿತಿಗಳೂ ಇವರ ಯುದ್ಧ ಸಾಹಸಗಳನ್ನು, ರಣರಂಗದಲ್ಲಿ ಎಸಗಿದ ಅಮಾನುಷ ಭೀಕರ ಕೊಲೆಸುಲಿಗೆಗಳನ್ನು ಕೊಂಡಾಡುತ್ತಲೇ ಬಂದರು.

ಅಲ್ಪಕಾಲ ಬಾಳಿದ ಸಾಮ್ರಾಜ್ಯಗಳು ಕೂಡ ಕಲೆ, ಸಾಹಿತ್ಯ ಮೊದಲಾದ ಕ್ಷೇತ್ರಗಳಲ್ಲಿನ ಪ್ರಗತಿಗೆ ತಮ್ಮ ಕಾಣಿಕೆ ಸಲ್ಲಿಸಿದವೆಂಬುದನ್ನು ಮರೆಯಬೇಕಾದ್ದಿಲ್ಲ. ಉಚ್ಛ್ರಾಯ ಸ್ಥಿತಿಯ ದಿನಗಳಲ್ಲಿ ಸಾಮ್ರಾಟರು ತಮ್ಮ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಆಂತರಿಕ ಶಾಂತಿ ಭದ್ರತೆಗಳನ್ನು ಕಾಪಾಡಿಕೊಂಡು ತಮ್ಮ ಭಂಡಾರದಲ್ಲಿ ಅಪಾರ ಪ್ರಮಾಣದ ಸಂಪತ್ತನ್ನು ಸಂಗ್ರಹಿಸಿದುದುಂಟು. ಇಂತಹ ಸಂಪತ್ತು ಇತರ ದೇಶಗಳ ಮೇಲಿನ ದಂಡಯಾತ್ರೆಗಳ ಮೂಲಕ ದೋಚಿಕೊಂಡು ಬಂದುದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. (ಹಿಂದೆ ಪ್ರಸ್ತಾಪಿಸಿದ ವಿಜಯನಗರ ಸಾಮ್ರಾಜ್ಯಕ್ಕೆ ಕೂಡ ಬಹುಮಟ್ಟಿಗೆ ಈ ಮಾತುಗಳು ಅನ್ವಯಿಸುತ್ತವೆ.) ಪ್ರಬಲವಾಗಿದ್ದ ಸಾಮ್ರಾಜ್ಯಗಳು ತಮ್ಮ ಕೈಗಾರಿಕಾ ಕೇಂದ್ರಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಕಚ್ಚಾ ಸಾಮಗ್ರಿಗಳನ್ನು ಒದಗಿಸುತ್ತಿದ್ದವು. ನಗರೀಕರಣ ಕ್ರಾಂತಿಯು ಆರ್ಥಿಕ ಅನುಕೂಲಗಳನ್ನು ಮತ್ತು ಅನ್ವಯಿಕ ವಿಜ್ಞಾನ (ತಂತ್ರಜ್ಞಾನ)ವನ್ನು ಹೊರದೇಶಗಳಿಗೂ ವಿಸ್ತರಿಸಿದವು. ಒಂದು ದೊಡ್ಡ ಸಾಮ್ರಾಜ್ಯವನ್ನು ನಿರ್ವಹಿಸುವುದಕ್ಕಾಗಿ ನಿರ್ಮಿಸಿಕೊಂಡ ಸಂಪರ್ಕ ಸಾಧನಗಳು ಜ್ಞಾನ ಪ್ರಸಾರದ ಮಾರ್ಗಗಳಾದವು. ಈ ಬಗೆಯ ಸಂಪರ್ಕ ಸಾಧನಗಳಿದ್ದುದರಿಂದಲೇ ಸುಶಿಕ್ಷಿತರು, ವಿದ್ವಾಂಸರು, ಜ್ಞಾನ ಪಿಪಾಸುಗಳು ದೇಶಾದ್ಯಂತ ಸಂಚರಿಸಿದರು; ಪರದೇಶಗಳಲ್ಲಿ ಪ್ರವಾಸ ಮಾಡಿದರು. ವೈದ್ಯರು, ಭೂಗೋಳ/ಖಗೋಳಶಾಸ್ತ್ರಜ್ಞರು ಮಾತ್ರವಲ್ಲದೆ ಸ್ವತಃ ದಂಡನಾಯಕರು ಕೂಡ ತಾವು ಗೆದ್ದುಕೊಂಡ ಪ್ರದೇಶಗಳ ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರಗಳನ್ನು ಅಧ್ಯಯನ ಮಾಡಿದುದುಂಟು. ಇವರು ಸ್ವದೇಶಗಳಿಗೆ ಹಿಂತಿರುಗಿದ ಮೇಲೆ ತಾವು ಕಂಡು ಕೇಳಿದ್ದನ್ನು, ಅನುಭವಿಸಿದ್ದನ್ನು ಬರೆದಿಟ್ಟರು. ಹೀಗೆ ಜ್ಞಾನಾಭಿವೃದ್ಧಿ, ಜ್ಞಾನಪ್ರಸಾರ, ಜ್ಞಾನಸಂಗ್ರಹಗಳು ಸಾಧ್ಯವಾದವು.

ಆದರೆ ಸಾಮ್ರಾಜ್ಯಗಳ ಅಸ್ಥಿರತೆಯು ಅವುಗಳ ಆಂತರಿಕ ವೈರುಧ್ಯವೊಂದನ್ನು ಪ್ರತಿಬಿಂಬಿಸುತ್ತದೆ. ಸಾಮ್ರಾಜ್ಯಗಳ ವಶದಲ್ಲಿದ್ದ ವಸಾಹತುಗಳ ಪ್ರಜೆಗಳು ಸತತವಾಗಿ ಬಂಡಾಯ ಹೂಡುತ್ತಿದ್ದಾರೆ ಎಂಬುದನ್ನು ಗಮನದಲ್ಲಿಟ್ಟುಕೊಂಡು ಅವರಿಗಾದ ಲಾಭ ನಷ್ಟಗಳನ್ನು ತೂಗಿ ನೋಡಬೇಕು. ಕಂಡಹಾಗೆಯೆ ವಸಾಹತು ಜನರಿಗಾದ ನಷ್ಟವು ಅವರಿಗಾದ ಲಾಭಕ್ಕಿಂತ ಬಹುಪಾಲು ಹೆಚ್ಚಾಗಿದ್ದಿತು. ವಾಸ್ತವವಾಗಿ ಸಾರ್ಗಾನ್ ಮಾದರಿಯ ಸಾಮ್ರಾಜ್ಯಶಾಹಿಯಾಗಲಿ, ಬ್ರಿಟಿಷ್ ಸಾಮ್ರಾಜ್ಯಶಾಹಿಯಾಗಲಿ ವಸಾಹತುಗಳಲ್ಲಿ ಸೃಷ್ಟಿಸಿದ ಸಂಪತ್ತಿಗಿಂತ ಕೊಳ್ಳೆಹೊಡೆದುದು, ಹಾಳುಮಾಡಿದುದೇ ಹೆಚ್ಚು.

ಪೌರ್ವಾತ್ಯ ವಿಜೇತನೊಬ್ಬನು ತನ್ನ ಶಾಸನಗಳಲ್ಲಿ ಉಲ್ಲೇಖಿಸುವ ಹೆಗ್ಗಳಿಕೆಗಳಲ್ಲಿ ಮೊಟ್ಟಮೊದಲನೆಯದು ಅವನು ದೋಚಿಕೊಂಡು ಬಂದ ಸಂಪತ್ತು – ಲೋಹಗಳು, ಒಡವೆ ವಸ್ತುಗಳು, ನಗನಾಣ್ಯಗಳು, ಪ್ರಾಣಿಗಳು – ಮತ್ತು ಸೆರೆಹಿಡಿದು ತಂದ ಗುಲಾಮರಿಗೆ ಸಂಬಂಧಿಸಿದ್ದು. ಸ್ವದೇಶಕ್ಕೆ ಮರಳಿದ ಮೇಲೆ ದೋಚಿ ತಂದ ಸಂಪತ್ತಿನಲ್ಲಿ ಅಷ್ಟಿಷ್ಟನ್ನು ಸ್ವದೇಶೀ ಪ್ರಜೆಗಳಿಗೆ ಹಂಚಿರಬಹುದು. ಆದರೆ ಅದರಿಂದ ಜನ ಸಾಮಾನ್ಯರ ಜೀವನಾನುಕೂಲಗಳೇನೂ ಉತ್ತಮಗೊಳ್ಳಲಿಲ್ಲ. ಕೊಳ್ಳೆಹೊಡೆದು ತಂದ ಸಂಪತ್ತಿನ ಬಹುಭಾಗ ದಕ್ಕಿದುದು ಈ ಮೊದಲೇ ಕಂಠಪೂರ್ತಿ ಮುಕ್ಕುತ್ತಿದ್ದ ರಾಜ ಪರಿವಾರದವರಿಗೆ. ಪರಪ್ರದೇಶಗಳನ್ನು ಆಕ್ರಮಿಸಿ ವಸಾಹತುಗಳನ್ನು ಸ್ಥಾಪಿಸಿದ ಮೇಲೆ ಸಾಮ್ರಾಟನ ಪ್ರಮುಖ ಆಸಕ್ತಿಯು ವಸಾಹತುಗಳಿಂದ ನಿಯಮಿತವಾಗಿ ಕಪ್ಪಕಾಣಿಕೆಗಳನ್ನು ವಸೂಲುಮಾಡಿಕೊಳ್ಳುವುದರಲ್ಲಿ ನಿರತವಾಯಿತು.

ವಸಾಹತುಗಳನ್ನು ಸ್ಥಾಪಿಸಿದ ನಂತರ ಸಾಮ್ರಾಜ್ಯಗಳು ಪ್ರಜೆಗಳಿಂದ ತೆರಿಗೆ ವಸೂಲಿ ಮಾಡಿಕೊಳ್ಳುವ ಯಂತ್ರಗಳಾದವು. ಸಾರ್ವಭೌಮ ಸರ್ಕಾರಗಳು ಪ್ರಜೆಗಳ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕುತ್ತಿದ್ದುದು ಅವರನ್ನು ತಮ್ಮ ಹದ್ದುಬಸ್ತಿನಲ್ಲಿಟ್ಟುಕೊಂಡು, ನಿಯಮಿತವಾಗಿ ತೆರಿಗೆ ವಸೂಲಿ ಮಾಡಿಕೊಳ್ಳುವ ಅಗತ್ಯವಿದ್ದಾಗ ಮಾತ್ರ. ಚಕ್ರವರ್ತಿಯು ತನ್ನ ಆಧಿಪತ್ಯಕ್ಕೊಳಪಟ್ಟ ಪ್ರದೇಶಗಳ ಅಭಿವೃದ್ಧಿಗೆ ಗಮನಕೊಡುತ್ತಿದ್ದುದು ಅಂತಹ ಕ್ರಮಗಳಿಂದ ತೆರಿಗೆ ವಸೂಲಿಗೆ ಸಹಾಯವಾಗುವಂತೆ ತೋರಿದ ಸಂದರ್ಭಗಳಲ್ಲಿಯೇ ಸರಿ. ಹಿಂದೆ ಪೌರ್ವಾತ್ಯ, ಪಾಶ್ಚಾತ್ಯ ಚಕ್ರಾಧಿಪತ್ಯಗಳು ಸ್ಥಾಪನೆಯಾದುದು, ಬಹುಮಟ್ಟಿಗೆ, ಹೋರಾಟಗಳ ಮೂಲಕ; ಹಾಗೆಯೇ ಅವುಗಳನ್ನು ನಡೆಸಿಕೊಂಡು ಬಂದುದು, ಅಂತಿಮವಾಗಿ ಅವು ನಾಶವಾದುದು ಕೂಡ ಹೋರಾಟಗಳ ಮೂಲಕವೆ.

ಯುದ್ಧವು ಒಮ್ಮೊಮ್ಮೆ ಶಾಂತಿಸ್ಥಾಪನೆಗೆ ಮತ್ತು ಹೊಸ ವಸ್ತುಗಳ ಉತ್ಪಾದನೆಗೆ, ಸಂಶೋಧನೆಗಳಿಗೆ ಅನುವುಮಾಡಿಕೊಟ್ಟಿರುವುದೂ ನಿಜ. ಯುದ್ಧಸಿದ್ಧತೆಯು ಗಣಿತ ಶಾಸ್ತ್ರ ಪ್ರತಿಭೆಯನ್ನು ಪ್ರಚೋದಿಸಲು ಪ್ರೇರಕವಾದುದುಂಟು. ಹಾಗೆಯೇ ಸೈನಿಕ ಪದ್ಧತಿಯು ನಾಗರಿಕ ಪ್ರಜೆಗಳನ್ನು ಶತ್ರುದಾಳಿಯಿಂದ ರಕ್ಷಿಸಲು, ಆಯಾ ಪ್ರದೇಶದ ಕಲೆ, ಸಂಸ್ಕೃತಿ, ನಾಗರಿಕತೆಗಳ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳಲು ಅಗತ್ಯವೆಂಬುದನ್ನು (ಸದ್ಯದ ಪರಿಸ್ಥಿತಿಯಲ್ಲಿ) ಒಪ್ಪಬಹುದು. ಆದರೂ ಒಟ್ಟಿನ ಮೇಲೆ ಸೇನಾಬಲ ಮತ್ತು ಯುದ್ಧಗಳು ಜನಹಿತ ಸಾಧನೆಯನ್ನು ಸಮರ್ಪಕವಾಗಿ ನಿರ್ವಹಿಸಲು ವಿಫಲವಾಗಿವೆ. ''ಆಕ್ರಮಣವೇ ನಿಜವಾದ ರಕ್ಷಣೆ'' ಎಂಬ (ದುರ್)ನೀತಿ ಸೂತ್ರಕ್ಕೆ ಬದ್ಧವಾಗಿರುವುದರಿಂದ ಪ್ರತಿಯೊಂದು ದೇಶದಲ್ಲಿಯೂ ಸೇನಾನಿರ್ವಹಣೆ ಮತ್ತು ಯುದ್ಧೋಪಕರಣಗಳ ತಯಾರಿಕೆಯ ವೆಚ್ಚವು ಅಗಾಧವಾಗಿ ಏರುತ್ತ ಬಂದಿದೆ. ಪ್ರತಿಯೊಂದು ಆಕ್ರಮಣ ಸಿದ್ಧತೆ, ದಾಳಿ ಮತ್ತು ಹೋರಾಟವು ಅಪಾರ ಸಂಪತ್ತನ್ನು, ಅಸಂಖ್ಯಾತ ಮಾನವ ಜೀವಿಗಳನ್ನು ನಾಶಮಾಡುತ್ತಲೇ ಬಂದಿದೆ. ಇದರಿಂದ ತಾತ್ಕಾಲಿಕವಾಗಿಯಾದರೂ ಪ್ರಗತಿಯ ಹಿನ್ನಡೆಯಾಗಿದೆ; 'ಪ್ರಗತಿ' 'ವಿಗತಿ'ಯಾಗಿದೆ.

ಅಪಾತತಃ ತೋರುವಂತೆ ಅಭಿವೃದ್ಧಿಯು ಸ್ಥಗಿತಗೊಳ್ಳಲು ಇಂತಹ ಪರಿಸ್ಥಿತಿಯು ಕೆಲಮಟ್ಟಿಗೆ ಕಾರಣವಾಗಿರುವುದು. ಕೈಗಾರಿಕಾ ಕ್ರಾಂತಿ ಮತ್ತು ನಗರೀಕರಣಗಳ ಅನಂತರದ ಅವಧಿಯು ವ್ಯವಸ್ಥಿತವಾದ ಯುದ್ಧ ಕಾರ್ಯಾಚರಣೆಯದಾಗಿತ್ತೆಂಬುದಕ್ಕೆ ಮತ್ತೆ ಮತ್ತೆ ಬರುವ ಹೋರಾಟಗಳ ಉಲ್ಲೇಖ ಹಾಗೂ ಶಸ್ತ್ರಾಸ್ತ್ರ ದಾಖಲೆಗಳು ಪುರಾವೆಯೊದಗಿಸುತ್ತವೆ. ಕ್ರಾಂತಿಗಿಂತ ಹಿಂದಿನ ಕಾಲದಲ್ಲಿ ಶಸ್ತ್ರಾಸ್ತ್ರಗಳಾಗಲಿ, ಹೋರಾಟಗಳಾಗಲಿ ಇರಲಿಲ್ಲವೆಂದಲ್ಲ. ಆದರೆ ಅಂದಿನ ಆ ಯುದ್ಧಗಳು ಬಹುತೇಕ ಕಾಡು ಪ್ರಾಣಿಗಳನ್ನು ಬೇಟೆಯಾಡಲು, ದುಷ್ಟ ಪ್ರಾಣಿಗಳನ್ನು ಕೊಲ್ಲಲು, ಕಳ್ಳಕಾಕರನ್ನು ಓಡಿಸಲು, ಬೆಳೆಗಳನ್ನು ಸಂಗ್ರಹಿಸಿಟ್ಟು ಧನಧಾನ್ಯಗಳನ್ನು ರಕ್ಷಿಸಿಕೊಳ್ಳಲು ಅಗತ್ಯವಾದ ಸರಳರೀತಿಯ ಹತಾರಗಳಾಗಿದ್ದುವು. ಹೋರಾಟಗಳು ನಡೆಯುತ್ತಿದ್ದುದು ಬಹುತೇಕ ಒಂದು ಸ್ಥಳದಲ್ಲಿ ನೆಲೆಸಿದ ಮೂಲನಿವಾಸಿಗಳು ಮತ್ತು ಅಂತಹ ಸ್ಥಳಗಳನ್ನು ಆಕ್ರಮಿಸಲು ಬಂದ ವಲಸೆಗಾರರ ನಡುವೆ ಅಥವಾ ನೆರೆಹೊರೆಯ ಗುಂಪುಗಳ ಜನರ ನಡುವೆ. ಸ್ಪಷ್ಟವಾಗಿ ಯುದ್ಧೋಪಯೋಗಿಗಳೆಂದೂ ಸಾಮೂಹಿಕ ಹತ್ಯಾಕಾರಿಗಳೆಂದೂ ಗುರುತಿಸಬಹುದಾದಂಥ ಆಯುಧಗಳು ಕಂಡುಬರುವುದಿಲ್ಲ. ಇದೇ ಅವಧಿಯಲ್ಲಿ ಪ್ರಗತಿಯು ಸಾಕಷ್ಟು ವೇಗದಲ್ಲಿತ್ತೆಂಬುದನ್ನು ನಾವು ಗಮನಿಸಬೇಕು. ಆದ್ದರಿಂದ, ಒಂದು ವೇಳೆ ಪ್ರಗತಿಸಾಧನೆಗೆ ಸಂಘಟಿತ ಯುದ್ಧಗಳು ಅನಿವಾರ್ಯವೆನ್ನುವಂತಿದ್ದರೆ ಈಗಿರುವುದಕ್ಕೆ ವಿರುದ್ಧವಾದ ಪರಿಸ್ಥಿತಿಯನ್ನು ಕಾಣಬಹುದಾಗಿತ್ತು ತಾನೇ?

ಜೀವಶಾಸ್ತ್ರೀಯ ದೃಷ್ಟಿಯಿಂದ ನೋಡಿದರೆ ಹೆಚ್ಚು ಹೆಚ್ಚು ಜನರನ್ನು ಕೊಲ್ಲುತ್ತ ಬಂದುದೇ ಜನಸಂಖ್ಯೆಯ ಹೆಚ್ಚಳಕ್ಕೆ ಕಾರಣವೆಂಬುದು ವಿಪರ್ಯಾಸವಾಗಿ ತೋರುತ್ತದೆ. ಆದರೆ, ಇದೇ ನಮ್ಮ ಪ್ರಗತಿಯ ಅಂತಿಮ ಪರೀಕ್ಷೆಯಾಗಿದ್ದು, ಯುದ್ಧಗಳಲ್ಲಿ ಮನುಷ್ಯರನ್ನು ಕೊಂದಷ್ಟೂ ಜನಸಂಖ್ಯೆ ಹೆಚ್ಚುತ್ತದೆ ಎನ್ನಬೇಕೇ? ಇದೆಂಥ ಪ್ರಗತಿ?

* * *

ಸುಮಾರಾಗಿ ಜೀವನಯಾತ್ರೆಯ ಆರಂಭಕಾಲದಿಂದಲೂ ಮನುಷ್ಯನು ತನಗೇ ವಿಶಿಷ್ಟವಾದ ಬೌದ್ಧಿಕ ಸಾಮರ್ಥ್ಯದಿಂದ ವಾಸ್ತವ ಲೋಕದ ಬಳಕೆಗೆ ಅನುಕೂಲವಾದ ಸಾಧನಗಳನ್ನು ನಿರ್ಮಿಸಿಕೊಳ್ಳುತ್ತ ಬಂದಿದ್ದಾನೆ; ಹಾಗೆಯೇ ಇಂತಹ ಸಾಧನಗಳ ಜೊತೆಗೆ ಬಳಸಬಹುದೆಂದು ಭಾವಿಸಿದ ಅಲೌಕಿಕ ಶಕ್ತಿಗಳನ್ನೂ ಕಲ್ಪಿಸಿಕೊಂಡಿದ್ದಾನೆ.



ಅಂದರೆ ಏಕಕಾಲದಲ್ಲಿ ಭೌತ ಪ್ರಕ್ರಿಯೆಗಳನ್ನು ಅರ್ಥಮಾಡಿಕೊಂಡು ತನ್ನ ಅನುಕೂಲಕ್ಕೆ ಬಳಸಿಕೊಳ್ಳುವುದರ ಜೊತೆ ಜೊತೆಗೆ ಲೋಕವನ್ನು ಕಾಲ್ಪನಿಕ ಜೀವಿಗಳಿಂದ ತುಂಬಿಸುತ್ತ ಬಂದಿದ್ದಾನೆ. ಇಂಥ ಕಾಲ್ಪನಿಕ ಜೀವಿಗಳನ್ನು ಪುಸಲಾಯಿಸುವ ಇಲ್ಲವೇ ಒತ್ತಾಯಿಸುವ ಮೂಲಕ ತನ್ನ ಕೆಲಸ ಮಾಡಿಸಿಕೊಳ್ಳಬಹುದೆಂಬುದು ಮಾನವ ಕುಲಗಳಲ್ಲಿ ಪರಂಪರಾಗತವಾಗಿ ಬೆಳೆದುಬಂದಿರುವ ನಂಬಿಕೆ. ಅಂದರೆ ಭೌತವಾದಿ ಜ್ಞಾನ ಮತ್ತು ಅಭೌತವಾದಿ ಶ್ರದ್ಧೆಗಳೆರಡೂ ಅಕ್ಕಪಕ್ಕದಲ್ಲಿ ಹರಿದುಬಂದಿವೆ.

ಆದಿಮ ಜನರು ಕಲ್ಪಿಸಿಕೊಂಡ ಜೀವರೂಪಗಳು ಮತ್ತು ಬೆಳೆಸಿಕೊಂಡ ನಂಬಿಕೆಗಳು ಅಂದಿನ ಅವರ ಬದುಕನ್ನು ಸಹನೀಯವಾಗಿಸಲು ಅಗತ್ಯವಿದ್ದಿರಲೂಬಹುದು. ಆದರೆ ಇವೇ ಕಾಲ್ಪನಿಕ ರೂಪಗಳು ಮತ್ತು ಅಂಧಶ್ರದ್ಧೆಗಳು ಪ್ರಗತಿಯ ಹಾದಿ ತಪ್ಪಿಸಲು ಕಾರಣವಾದವು. ಮಂತ್ರತಂತ್ರಗಳು, ಮತಧರ್ಮಾಚರಣೆ ಮುಂತಾದವು ಮಿಥ್ಯಾಜ್ಞಾನದ ಕಿರುದಾರಿಗಳನ್ನು ಹೊಕ್ಕದ್ದರಿಂದ ಮನುಷ್ಯನ ಮನಸ್ಸು ಭೌತತತ್ವಗಳ ಶೋಧನೆಗೆ ಹಿಂಜರಿಯಿತು. ಭೌತಶಕ್ತಿಗಳ ಮೇಲೆ ಇನ್ನಷ್ಟು ನಿಯಂತ್ರಣ ಸಾಧಿಸುವ ಹೆದ್ದಾರಿಯು ಮತ್ತೆ ಮತ್ತೆ ತಪ್ಪಿಹೋಯಿತು. ವೈಜ್ಞಾನಿಕ ಪ್ರಯೋಗಕ್ಕಿಂತ ಮಂತ್ರತಂತ್ರಗಳ ಪಠಣ ಮತ್ತು ಮತಾಚರಣೆಗಳು ಸುಲಭವೆನಿಸಿದವು. ಅಪರಾಧವನ್ನು ಸಾಬೀತುಪಡಿಸಬಲ್ಲ ಸಾಕ್ಷ್ಯಗಳನ್ನು ಸಂಗ್ರಹಿಸುವುದಕ್ಕಿಂತ ಪೊಲೀಸಿನವರಿಗೆ ಅಪರಾಧಿಯನ್ನು ಹಿಂಸಿಸಿ ತಮಗೆ ಬೇಕಾದುದನ್ನು ಅವನಿಂದ ಬಾಯಿಬಿಡಿಸುವುದು ಸುಲಭವೆನಿಸುವ ಹಾಗೆ.

ಸಾಮಾಜಿಕ ಸಂರಚನೆ ಮತ್ತು ವಿಜ್ಞಾನವನ್ನು ರೂಢಿಸಲು ಮೊದಲಿಗೆ ಮಂತ್ರ ತಂತ್ರಗಳು ಮತ್ತು ಮತಧರ್ಮಾಚರಣೆಗಳು ವೇದಿಕೆಯನ್ನು ನಿರ್ಮಿಸಿದವು. ಆದರೆ ಮತ್ತೆ ಮತ್ತೆ ಕುಸಿಯತೊಡಗಿದ ವೇದಿಕೆಯು ಶಾಶ್ವತ ಕಟ್ಟಡ ನಿರ್ಮಾಣಕ್ಕೆ ಮುಳುವಾದುದು ವಿಷಾದದ ಸಂಗತಿ. ಅಷ್ಟೇ ಅಲ್ಲದೆ ಎದ್ದು ಕಾಣುವಂತೆ ಒಂದು ಖೋಟಾ ಮುಖಮಂಟಪವನ್ನು ಕಟ್ಟಿನಿಲ್ಲಿಸಿದ್ದರಿಂದ ಅದು ಅದರ ಹಿಂದಿನ ವಾಸ್ತವಿಕ ಕಟ್ಟಡವನ್ನು ಶಿಥಿಲಗೊಳಿಸಲು ಕೂಡ ಕಾರಣವಾಯಿತು. ವಿಜ್ಞಾನದಿಂದ ಸಾಧ್ಯವಾಗಿದ್ದ ನಗರೀಕರಣ ಕ್ರಾಂತಿಯು ಅಂಧಶ್ರದ್ಧೆಗಳಿಗೆ ಬಲಿಯಾಯಿತು. ರೈತರು ಮತ್ತು ಕುಶಲಕರ್ಮಿಗಳ ಶ್ರಮ ದುಡಿಮೆಯ ಲಾಭ ಪಡೆದವರು ರಾಜರು, ಪುರೋಹಿತರು, ರಾಜಕಾರಣಿಗಳು. ವಿಜ್ಞಾನ ಪದ್ಧತಿಗಳಿಗಿಂತಲೂ ಹೆಚ್ಚಾಗಿ ಮಂತ್ರತಂತ್ರಗಳು, ಮತಾಚರಣೆಗಳು ಉನ್ನತ ಸ್ಥಾನಕ್ಕೇರಿ ಸಂಪತ್ತಿನ ಮೇಲೆ ಅಧಿಕಾರ ಸ್ಥಾಪಿಸಿಕೊಂಡವು.

ಭೂತಕಾಲದ ಅಂಧಶ್ರದ್ಧೆಗಳನ್ನು ಈಗ ನಿಂದಿಸುವುದು ಹೇಗೆ ವ್ಯರ್ಥವೋ ಹಾಗೆಯೇ ಸುಂದರ ಕಟ್ಟಡವನ್ನು ನಿರ್ಮಿಸಲು ಅಡ್ಡಿಯಾದ ಅವೈಚಾರಿಕತೆ (ವೇದಿಕೆ) ಬಗೆಗೆ ವಿಷಾದಿಸುವುದು ಕೂಡ ವ್ಯರ್ಥ. ಜೀವನಾವಶ್ಯಕ ವಸ್ತುಗಳ ಕೊರತೆಯ 'ವರ್ಗಪೂರ್ವ' ಸಮುದಾಯದಿಂದ ಮಾನವರು ನೇರವಾಗಿ ಸಕಲ ಸಮೃದ್ಧಿಯ ವರ್ಗರಹಿತ ಸಮುದಾಯದ ಸ್ವರ್ಗಸುಖಕ್ಕೆ (ಅಂತಹ ಸಮುದಾಯವು ಎಲ್ಲೂ ಇನ್ನೂ ಅಸ್ತಿತ್ವಕ್ಕೆ ಬಂದಿಲ್ಲ) ಏರಲಿಲ್ಲವೇಕೆ ಎಂದು ಪ್ರಶ್ನಿಸುವುದು ಬಾಲಿಶವಾಗುತ್ತದೆ. ಪ್ರಾಯಶಃ ಈವರೆಗೆ ಚರ್ಚಿಸಿದ ವೈರುಧ್ಯಗಳು ಮತ್ತು ಸಂಘರ್ಷಗಳು ಪ್ರಗತಿಯ ದ್ವಂದ್ವಾತ್ಮಕತೆಯನ್ನು ರೂಪಿಸುತ್ತವೆ. ಏನೇ ಇರಲಿ, ಇವು ಇತಿಹಾಸದ ಸಂಗತಿ ಸತ್ಯಗಳು. ದ್ವಂದ್ವಗಳನ್ನು ಒಪ್ಪಿಕೊಳ್ಳದಿದ್ದರೆ ನಾವು ಇತಿಹಾಸವನ್ನಾಗಲಿ, ಮನುಷ್ಯನನ್ನಾಗಲಿ, ಪ್ರಗತಿಯನ್ನಾಗಲಿ ಅರ್ಥಮಾಡಿಕೊಂಡಿಲ್ಲವೆಂದಾಗುತ್ತದೆಯೇ ಹೊರತು 'ಪ್ರಗತಿಯು ಒಂದು ಭ್ರಮೆ' ಎಂದೇನೂ ಆಗುವುದಿಲ್ಲ. ಮನುಷ್ಯನು ವಿಜ್ಞಾನವನ್ನೂ ಉತ್ಪಾದನಾ ಸಾಧನಗಳನ್ನೂ ನಿರ್ಮಿಸಿದ ಹಾಗೆಯೇ ಅಂಧಶ್ರದ್ಧೆಗಳನ್ನೂ ದಬ್ಬಾಳಿಕೆಯ ಸಂಸ್ಥೆಗಳನ್ನೂ ನಿರ್ಮಿಸಿದ್ದಾನೆ. ಎರಡೂ ಬಗೆಯಲ್ಲಿ ಮನುಷ್ಯನು ತನ್ನನ್ನು ತಾನು ಕಂಡುಕೊಳ್ಳುತ್ತ, ಅಭಿವ್ಯಕ್ತಿಸಿಕೊಳ್ಳುತ್ತ, ನಿರ್ಮಿಸಿಕೊಳ್ಳುತ್ತ ಬಂದಿದ್ದಾನೆ.

* * *

ಈ ಲೇಖನದಲ್ಲಿ ಯಾವುದೇ ನಿರ್ದಿಷ್ಟ ಜನಾಂಗದ ಪ್ರಸ್ತಾಪ ಮಾಡಿಲ್ಲವೆಂಬುದನ್ನು ಓದುಗರು ಗಮನಿಸಿರಬಹುದು. ಒಂದು ಜನಾಂಗಕ್ಕೆ ಪ್ರಭುತ್ವ ಸಾಮರ್ಥ್ಯ, ಇನ್ನೊಂದಕ್ಕೆ ಗಣಿತಶಾಸ್ತ್ರ ಪ್ರತಿಭೆ, ಮತ್ತೊಂದಕ್ಕೆ ಅಧ್ಯಾತ್ಮಜ್ಞಾನ ಇವು ಆನುವಂಶಿಕವಾಗಿ ಬಂದಿವೆಯೆಂದು ಪ್ರತಿಪಾದಿಸುವಂಥ ಸಿದ್ಧಾಂತಗಳು ಜನಪ್ರಿಯವಾಗಿವೆ ನಿಜ. ಆದರೆ ಇವೆಲ್ಲ ವೈಜ್ಞಾನಿಕವೆನ್ನಲಾಗುವುದಿಲ್ಲ. ಹಾಗೆ ಹೇಳಿದರೆ, ಆಯಾ ಜನಾಂಗದ ಕಾಲ್ಪನಿಕ ಪೂರ್ವಜರ ಅಂಡಾಣು ಜೀವದ್ರವ್ಯದಲ್ಲಿ, ವಿವರಣೆಗೆ ಮೀರಿದ ವ್ಯತ್ಯಯದ ಪರಿಣಾಮವಾಗಿ, ಅವರ ಮಿದುಳು ಮತ್ತು ನರಮಂಡಲಗಳಲ್ಲಿ ಆಯಾ

ಹುಟ್ಟುಗುಣವು ಸಿದ್ಧವಾಯಿತು ಎಂದು ಹೇಳಿದಂತಾಗುತ್ತದೆ, ಅಷ್ಟೆ. ಕೃಷಿಯ ಅಭಿವೃದ್ಧಿ, ವಿಜ್ಞಾನ ಸಾಧನೆ, ಸಾಮ್ರಾಜ್ಯ ಸ್ಥಾಪನೆ, ಮಂತ್ರತಂತ್ರಗಳು, ಮತ ಧರ್ಮಗಳು – ಇಂಥ ಸರ್ವ ಸಾಮಾನ್ಯ ವಿಷಯಗಳನ್ನು ಚರ್ಚಿಸುವಾಗ ಒಂದೊಂದು ಜನಾಂಗಕ್ಕೆ ವಿಶಿಷ್ಟವಾದ ಶಾರೀರಿಕ ಮತ್ತು ಮಾನಸಿಕ ವೈಲಕ್ಷಣ್ಯಗಳನ್ನು ಪ್ರಸ್ತಾಪಿಸುವುದು ಅನಗತ್ಯವೆಂದು ತೋರಿತು. ಮಾನವ ಸಮುದಾಯಗಳು ತಮ್ಮ ಪರಿಸರಕ್ಕೆ ಹೊಂದಿಕೊಳ್ಳುವ ಪ್ರಕ್ರಿಯೆಯಲ್ಲಿ ಮಾನವರಿಗೆಲ್ಲ ಸಮಾನವಾದ ಮತ್ತು ಮನುಷ್ಯನಿಗೆ ವಿಶಿಷ್ಟವಾದ ಸಾಮರ್ಥ್ಯಗಳನ್ನು ಹೇಗೆ ಬಳಸಿಕೊಂಡಿದ್ದಾನೆ; ಅಂತಹ ಸಾಮರ್ಥ್ಯದ ಮೂಲಕ ಪೈರು ಬೆಳೆಯುವ, ರಾಜ್ಯ ಕಟ್ಟುವ, ಅಗತ್ಯ ವಸ್ತುಗಳನ್ನು ಉತ್ಪಾದಿಸುವ ಕೆಲಸಗಳಲ್ಲಿ ವೈಜ್ಞಾನಿಕ ವಿಧಾನಗಳನ್ನು ಹೇಗೆ ಅಳವಡಿಸಿಕೊಂಡಿವೆ, ಮಾನವ ಸಮುದಾಯಗಳು ಬದುಕಿ ಉಳಿಯಲು ಮತ್ತು ಸಂತಾನಾಭಿವೃದ್ಧಿಗೆ ಇದೆಲ್ಲ ಹೇಗೆ ಅಗತ್ಯವಿತ್ತು– ಎಂದು ತೋರಿಸುವುದು ಇಲ್ಲಿನ ಉದ್ದೇಶವಿತ್ತು. ಈವರೆಗೆ ಚರ್ಚಿಸಿದ ಪ್ರಕ್ರಿಯೆಗಳ ಹಿಂದೆ ಅಲೌಕಿಕ ಶಕ್ತಿಗಳ ಪ್ರಭಾವ ಅಥವಾ ಅಜ್ಞಾತ ಪೂರ್ವಜರ ಅಂಡಾಣು ಜೀವದ್ರವ್ಯ ವ್ಯತ್ಯಯದ ಪ್ರಭಾವವಿದೆಯೆಂದು ಊಹಿಸಬೇಕಾಗಿಲ್ಲ.




ಮಾನವಕುಲದ ಸಾಧನೆಗಳು ಸನ್ನಿವೇಶವೊಂದಕ್ಕೆ ಸ್ವಯಂಸ್ಫೂರ್ತಿಯಿಂದ ಸ್ಫುರಿಸಿದ ಪ್ರತಿಕ್ರಿಯೆಗಳಾಗಲಿ, ಮಾನವೇತರ ಅಲೌಕಿಕ ಶಕ್ತಿಗಳು ಅಭಿಮಾನದಿಂದ ದಯಪಾಲಿಸಿದ ಕೊಡುಗೆಗಳಾಗಲಿ ಅಲ್ಲ. ನಿರ್ದಿಷ್ಟ ಸಮುದಾಯಗಳು ತಮತಮಗೆ ವಿಶಿಷ್ಟವಾದ ಐತಿಹಾಸಿಕ ಸಂದರ್ಭದ ಅಗತ್ಯಕ್ಕನುಗುಣವಾಗಿ ಮಾಡಿಕೊಂಡಂಥ ಹೊಂದಾಣಿಕೆಗಳು ಇವಾಗಿವೆ. ಆಯಾ ಸಮುದಾಯವು ತನ್ನ ಇತಿಹಾಸದ ಚಲನೆಯಲ್ಲಿ ಬದುಕಿನ ಸೂತ್ರ ಸಂಪ್ರದಾಯಗಳನ್ನು, ವೃತ್ತಿ ಚಾತುರ್ಯಗಳನ್ನು, ಅನ್ವಯಿಕ ವಿಜ್ಞಾನವನ್ನು ಬೆಳೆಸಿಕೊಳ್ಳುತ್ತಾ ಬಂದಿದೆ. ಬದುಕಿನ ಸೂತ್ರಗಳು ಮತ್ತು ವಿಜ್ಞಾನವನ್ನು ನಿರ್ದಿಷ್ಟ ಸನ್ನಿವೇಶಕ್ಕೆ ಅನ್ವಯಿಸುವ ಮೂಲಕ ನಾವು ಈವರೆಗೆ ಸಮೀಕ್ಷಿಸಿದ ಹೊಂದಾಣಿಕೆಗಳು ರೂಪ ತಾಳಿವೆ.

ಯಾವುದೇ ಎರಡು ಸಮುದಾಯಗಳ ರಾಜಕೀಯ ವ್ಯವಸ್ಥೆಗಳನ್ನು ಮತ್ತು ವಿಜ್ಞಾನ ಕೌಶಲಗಳನ್ನು ಹೋಲಿಸಿ ನೋಡುವಾಗ ಆ ಎರಡು ಸಮುದಾಯಗಳು ವಾಸಿಸಿದ ಪ್ರದೇಶಗಳನ್ನಾಗಲಿ ಅಥವಾ ಆಯಾ ಜನರ ಆನುವಂಶಿಕ ನರಮಂಡಲ ಪ್ರಕ್ರಿಯೆಗಳನ್ನಾಗಲಿ ಹೋಲಿಸುವುದರಿಂದ ಪ್ರಯೋಜನವಿಲ್ಲ; ಬದಲಾಗಿ ಅವರ ವಿಭಿನ್ನ ಚರಿತ್ರೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ.

ಇತಿಹಾಸವು ರೂಪಿಸಿದ ಸಾಮಾಜಿಕ ಸಂಪ್ರದಾಯಗಳು ಸಮುದಾಯದ ಸದಸ್ಯರ ಸಾಮಾನ್ಯ ವರ್ತನೆಯನ್ನು ನಿರ್ಧರಿಸುತ್ತವೆ. ಎರಡು ಬೇರೆ ಬೇರೆ ಸಮುದಾಯಗಳ ಸದಸ್ಯರ ವರ್ತನೆಯಲ್ಲಿ ತೋರಿಬರುವ ವ್ಯತ್ಯಾಸಗಳನ್ನು ಒಟ್ಟಾರೆ ನೋಡಿದಾಗ ಆ ವ್ಯತ್ಯಾಸವು ವಿಭಿನ್ನ ಚರಿತ್ರೆಯ ಕಾರಣದಿಂದಾಗಿ ಎಂಬುದು ತಿಳಿಯುತ್ತದೆ. ಜನಾಂಗೀಯ ಮನಶ್ಶಾಸ್ತ್ರವೆಂಬ ವಿಜ್ಞಾನಶಾಖೆಯು ಅಧ್ಯಯನ ಮಾಡುವುದು ಇಂತಹ ಸರಾಸರಿ ವರ್ತನೆಯನ್ನೇ; ವೈಜ್ಞಾನಿಕ ಉದ್ದೇಶವನ್ನು ವಿಕೃತಗೊಳಿಸಿದಾಗ ಮಾತ್ರ ಇದನ್ನು 'ಸ್ವಾಭಾವಿಕ ಶಕ್ತಿ' ಎಂದು ತರ್ಕಿಸಬಹುದು.

ವಾಸ್ತವವಾಗಿ ಮಾನವ ವರ್ತನೆಯು ಸ್ವಭಾವಸಿದ್ಧವಾದುದಾಗಲಿ, ಅಲುಗಾಡದಂತೆ ಭದ್ರವಾಗಿ ನಾಟಿಸಿದುದಾಗಲಿ ಅಲ್ಲ, ಅದು ಸಾಮಾಜಿಕ ಸಂಪ್ರದಾಯಗಳಿಂದ ನಿರ್ಧಾರವಾಗುವಂತಹದು. ಸಂಪ್ರದಾಯಗಳು ಮಾನವ ನಿರ್ಮಿತವೇ ಆಗಿದ್ದು ವೈಚಾರಿಕ ವಿಧಾನಗಳ ಮೂಲಕ ಸಂವಹನಗೊಳ್ಳುತ್ತವೆ; ಅವು ಅಚಲ ಸ್ಥಾಯಿಗಳಲ್ಲ, ಸಮಾಜವು ಹೊಸ ಹೊಸ ಸನ್ನಿವೇಶಗಳಲ್ಲಿ ವ್ಯವಹರಿಸತೊಡಗಿದಂತೆ ಸಂಪ್ರದಾಯಗಳು ಸತತವಾಗಿ ಬದಲಾವಣೆ ಹೊಂದುತ್ತವೆ. ಕೆಲವೊಂದು ನಿಬಂಧನೆಗಳಿಗೆ ಒಳಪಟ್ಟಂತೆ ಸಂಪ್ರದಾಯವು ಮಾನವ ವರ್ತನೆಯನ್ನು ರೂಪಿಸುತ್ತದೆ. ಹಾಗೆಯೇ ಸಂಪ್ರದಾಯಗಳನ್ನು ಮನುಷ್ಯರೇ ನಿರ್ಮಿಸುತ್ತಾರೆಂಬುದು ಕೂಡ ಅಷ್ಟೇ ಸತ್ಯ. ಆದ್ದರಿಂದ ಮತ್ತೊಮ್ಮೆ ದೃಢವಾಗಿ ಹೇಳಬಹುದು 'ಮನುಷ್ಯ ತನ್ನನ್ನು ತಾನೆ ನಿರ್ಮಿಸಿಕೊಳ್ಳುತ್ತಾನೆ.'

(ಇಲ್ಲಿನ ವಿಷಯ ಪ್ರತಿಪಾದನೆಯು ವಿ. ಗಾರ್ಡನ್ ಚೈಲ್ಡ್ ಅವರ 'ಮ್ಯಾನ್ ಮೇಕ್ಸ್ ಹಿಮ್‌ಸೆಲ್ಫ್' ಗ್ರಂಥದ ಮೊದಲ ಮತ್ತು ಕಡೆಯ ಅಧ್ಯಾಯಗಳನ್ನು ಬಹುಮಟ್ಟಿಗೆ ಅವಲಂಬಿಸಿದೆ.)

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ
ನಂ. ೨೨೮೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ಉನ್ನತ ಶಿಕ್ಷಣ : ಸಂಶೋಧನೆ

## ಪ್ರೊ॥ ಎಂ. ಎಸ್. ತಿಮ್ಮಪ್ಪ

ಸಂಶೋಧನೆ ನಡೆಯಲು ನಮಗಿರುವ ಪ್ರಮುಖ ಕ್ಷೇತ್ರ ವಿಶ್ವವಿದ್ಯಾಲಯ ಮತ್ತು ವಿಶ್ವವಿದ್ಯಾಲಯ ಮಟ್ಟದ ಉನ್ನತ ಶಿಕ್ಷಣ ಸಂಸ್ಥೆಗಳು. ವಿಶ್ವವಿದ್ಯಾಲಯದ ಮೂರು ಪ್ರಮುಖ ಗುರಿಗಳು : ಬೋಧನೆ, ಸಂಶೋಧನೆ, ವಿಸ್ತರಣೆ. ಉನ್ನತ ಶಿಕ್ಷಣದಲ್ಲಿ ಸಾಮಾನ್ಯವಾಗಿ ಎಲ್ಲ ವಿಷಯಗಳಲ್ಲೂ ಸಂಶೋಧನೆ ಶಿಸ್ತು , ಸಾಧನ, ನಿರ್ವಹಣ ಕ್ರಮಗಳನ್ನು ಹೇಳಿಕೊಡಲಾಗುತ್ತದೆ. ಜ್ಞಾನವೃದ್ಧಿಯು ಬೋಧನೆಗೂ ವಿಸ್ತರಣೆಗೂ ಬುನಾದಿ. ಜ್ಞಾನವೃದ್ಧಿ, ಹೊಸ ಹೊಸ ವಿಚಾರಗಳು, ಸಂಶೋಧನೆಯಿಂದ ಮಾತ್ರ ಸಾಧ್ಯ. ಸೃಜನಶೀಲತೆಗೆ ನಿರಂತರವಾಗಿ ಬರುವ ಯುವ ಹಾಗೂ ಹಚ್ಚಹಸಿರಿನ ಮನಸ್ಸಿನ ಜನರ ವಿಶ್ವವಿದ್ಯಾಲಯಗಳೇ ತಾಣ ವಾಗಬೇಕು. ಅಲ್ಲದೆ, ವಿಶ್ವವಿದ್ಯಾಲಯಗಳಲ್ಲಿ ಹಲವು ವಿಷಯಗಳ ತಜ್ಞರು, ಪಾಂಡಿತ್ಯವಿರುವವರು ಇರುವುದರಿಂದ ಮುಕ್ತ ಅನ್ವೇಷಣೆ, ಚರ್ಚೆ, ವಾಗ್ವಾದಗಳಿಗೆ ತಕ್ಕ ವಾತಾವರಣ ವಾಗಿರುತ್ತದೆ. ನಮ್ಮ ದೇಶದ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆ ಹೇಗಿದೆ ? ಎತ್ತ ಸಾಗಿದೆ ?




**ಜ್ಞಾನ-ವಿಜ್ಞಾನ**

ಜ್ಞಾನ ಒಂದು ನಿರಂತರ ಪ್ರಕ್ರಿಯೆ, ಅದು ಸದಾ ನಮ್ಮಲ್ಲಿ ಆಗುತ್ತಿರುತ್ತದೆ. ಇಂದ್ರಿಯಗಳ ಮೂಲಕ ಅಂದರೆ ನೋಡಿ, ಕೇಳಿ, ಮಾಡಿ, ಗ್ರಹಿಸಿ ಒಟ್ಟಿನಲ್ಲಿ ಅನುಭವಿಸಿ ನಮಗೆ ಪದಾರ್ಥ, ವಿಷಯ, ಸಂಗತಿ, ಸಂಬಂಧಗಳ ಬಗ್ಗೆ ಅರಿವು ಮೂಡುತ್ತಲೇ ಇರುತ್ತದೆ. ಆದರೆ ಆ ಅರಿವು ಎಷ್ಟೊಂದು ದಿಟ, ಅದನ್ನು ನಂಬಿ ವ್ಯವಹರಿಸಿದಾಗ ಎಷ್ಟೊಂದು ಫಲಕಾರಿಯಾಗಿದೆ ಎಂದು ಯೋಚಿಸಿದಾಗ ವಿಜ್ಞಾನದ ಮಹತ್ವವನ್ನು ಕಾಣುತ್ತೇವೆ. ನಾನು ೧೯೭೭ರಲ್ಲಿ ಜ್ಞಾನಭಾರತಿ (ಅದಕ್ಕೆ ಹಳೆಯ ಹೆಸರು ನಾಗರಭಾವಿ)ಗೆ ಸೇರಿದಾಗ ಸಾಮಾನ್ಯವಾಗಿ ಕೇಳಿಬರುತ್ತಿದ್ದುದು 'ಇಲ್ಲಿ ಎಲ್ಲೆಲ್ಲೂ ತುಂಬಾ ಹಾವು ಇವೆ'. ಇದೊಂದು 'ಅನುಭವದ' ಮಾತಾದರೂ ಅವೈಜ್ಞಾನಿಕ ಹೇಳಿಕೆ. ಏಕೆಂದರೆ, ನಾನು ಸದ್ಯದಲ್ಲಿ, ಆ ಜಾಗದಲ್ಲಿ ಹಾವನ್ನು ಕಾಣುತ್ತಿಲ್ಲವಲ್ಲ. ಆದರೆ ಈ ಹೇಳಿಕೆ ನೋಡಿ: ಮೇ, ಜೂನ್ ತಿಂಗಳಲ್ಲಿ, ಸಂಜೆ ವೇಳೆ ಅ, ಆ, ಇ, ಈ ಜಾಗ (ಕಣಿವೆ)ದಲ್ಲಿ ಹಾವಿರುತ್ತದೆ. ಇದು ವೈಚಾರಿಕ ಹೇಳಿಕೆ. ವಿಜ್ಞಾನ ಸಂಸ್ಕರಿಸಿದ ಜ್ಞಾನ. ಇದು ನಮಗೆ ಧೈರ್ಯ ಸ್ಥೈರ್ಯವನ್ನೂ ವಿಶ್ವಾಸವನ್ನೂ ಕೊಡುವುದರ ಜೊತೆಗೆ ವಾಸ್ತವದ ಮೇಲೆ ಪ್ರಭುತ್ವ, ನಿಯಂತ್ರಣ, ಮುನ್ಸೂಚನೆಗಳನ್ನೂ ಕೊಡಬಲ್ಲದು. ಅವೈಜ್ಞಾನಿಕ ಹೇಳಿಕೆಗಳಿಂದ ದಿಗಿಲು, ಅತಂತ್ರತೆಯೇ ಹೆಚ್ಚು. ಮೌಢ್ಯತೆಗೆ ದಾರಿ ಮಾಡಿಕೊಡುತ್ತದೆ. ಈ ಸಂಸ್ಕರಿಸಿದ ಜ್ಞಾನಕ್ಕೆ ಮೂಲ ಸಾಧನವೇ ಸಂಶೋಧನೆ. ಇವು ಹೇಳುವ ಸತ್ಯಗಳು ಸಾರ್ವತ್ರಿಕವಾದವು, ಮತ್ತೆ ಮತ್ತೆ ಪರಿಶೀಲಿಸಿ ಪಕ್ಕಾ ಮಾಡಿಕೊಳ್ಳಬಹುದಾದಂಥವು. ಏಕೆಂದರೆ ನೋಡಿದವ ಯಾವ ಯಾವ ಸಾಧನಗಳಿಂದ, ಹೇಗೆ, ಯಾವ ಸಂಬಂಧದಲ್ಲಿ ಇದನ್ನು ಕಾಣಬಹುದು ಎಂದು ಬಹಿರಂಗ ಪಡಿಸುವುದರಿಂದ ಯಾರೇ ಆದರೂ ಆಯಾ ಸಾಧನ, ಸಂದರ್ಭಗಳಿಂದ ಅದನ್ನು ಸ್ವಯಂ ಮನದಟ್ಟು ಮಾಡಿಕೊಳ್ಳಬಹುದು. ಸಾರ್ವತ್ರಿಕತೆ, ಬಹಿರಂಗತೆ, ಅಗೌಪ್ಯತೆ, ಪುನರಾವರ್ತನೆ ಮರು ಸಮರ್ಥನೆಗಳೇ ಸಂಶೋಧನೆಯ ಜೀವಾಳ. ಅದರಿಂದ ಮೂಡಿಬಂದ ವಿಜ್ಞಾನ ಹತೋಟಿ– ನಿಯಂತ್ರಣ, ಮುಂಜಾಗರೂಕತೆ – ಮುನ್ಸೂಚನೆಗಳನ್ನು ಪ್ರಕೃತಿ ಮೇಲೆ ದೊರಕಿಸಿ ಅವುಗಳನ್ನು ಮಾನವ ಕಲ್ಯಾಣಕ್ಕೆ ಉಪಯೋಗಿಸುವುದನ್ನು ನಾವು ಕಂಡಿದ್ದೇವೆ. ನಮ್ಮ ದೇಶದ ಹಸಿರುಕ್ರಾಂತಿ (ಪಂಜಾಬಿನಿಂದ), ಬಿಳಿಕ್ರಾಂತಿ (ಗುಜರಾತ್)ಯಿಂದ ಓಡಿದು ಈಗಿನ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನದ ಕ್ರಾಂತಿಯವರೆಗೆ ಸಂಶೋಧನೆಯ ಪ್ರಭಾವವನ್ನು ಕಾಣುತ್ತಿದ್ದೇವೆ.

**ಸಂಶೋಧನೆ – ವಿಶ್ವವಿದ್ಯಾಲಯ**

ಸಂಶೋಧನೆ ನಡೆಯಲು ನಮಗಿರುವ ಪ್ರಮುಖ ಕ್ಷೇತ್ರ ವಿಶ್ವವಿದ್ಯಾಲಯ ಮತ್ತು ವಿಶ್ವವಿದ್ಯಾಲಯ ಮಟ್ಟದ ಉನ್ನತ ಶಿಕ್ಷಣ ಸಂಸ್ಥೆಗಳು. ವಿಶ್ವವಿದ್ಯಾಲಯದ ಮೂರು ಪ್ರಮುಖ ಗುರಿಗಳು : ಬೋಧನೆ, ಸಂಶೋಧನೆ, ವಿಸ್ತರಣೆ. ಉನ್ನತ ಶಿಕ್ಷಣದಲ್ಲಿ ಸಾಮಾನ್ಯವಾಗಿ ಎಲ್ಲ ವಿಷಯಗಳಲ್ಲೂ ಸಂಶೋಧನೆ ಶಿಸ್ತು, ಸಾಧನ, ನಿರ್ವಹಣ ಕ್ರಮಗಳನ್ನು ಹೇಳಿಕೊಡಲಾಗುತ್ತದೆ. ಜ್ಞಾನವೃದ್ಧಿಯು ಬೋಧನೆಗೂ ವಿಸ್ತರಣೆಗೂ ಬುನಾದಿ. ಜ್ಞಾನವೃದ್ಧಿ, ಹೊಸ ಹೊಸ ವಿಚಾರಗಳು, ಸಂಶೋಧನೆಯಿಂದ ಮಾತ್ರ ಸಾಧ್ಯ. ಸೃಜನಶೀಲತೆಗೆ ನಿರಂತರವಾಗಿ ಬರುವ ಯುವ ಹಾಗೂ ಹಚ್ಚಹಸಿರಿನ ಮನಸ್ಸಿನ ಜನರ ವಿಶ್ವವಿದ್ಯಾಲಯಗಳೇ ತಾಣವಾಗಬೇಕು. ಅಲ್ಲದೆ, ವಿಶ್ವವಿದ್ಯಾಲಯಗಳಲ್ಲಿ ಹಲವು ವಿಷಯಗಳ ತಜ್ಞರು, ಪಾಂಡಿತ್ಯವಿರುವವರು ಇರುವುದರಿಂದ ಮುಕ್ತ ಅನ್ವೇಷಣೆ, ಚರ್ಚೆ, ವಾಗ್ವಾದಗಳಿಗೆ ತಕ್ಕ ವಾತಾವರಣವಾಗಿರುತ್ತದೆ. ನಮ್ಮ ದೇಶದ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆ ಹೇಗಿದೆ ? ಎತ್ತ ಸಾಗಿದೆ ?

**ಸ್ಥಿತಿ–ಗತಿಗಳು**

೧೧೦ ಕೋಟಿ ಜನಸಂಖ್ಯೆಯ ನಮ್ಮ ದೇಶದಲ್ಲಿ ೩೪೨ ವಿಶ್ವವಿದ್ಯಾಲಯಗಳಿವೆ. ಇದು ಅತಿ ಕಡಿಮೆ. ೨೭ ಕೋಟಿ ಜನರಿರುವ ಅಮೆರಿಕೆಯಲ್ಲಿ ೨೪೬೬ ವಿಶ್ವವಿದ್ಯಾಲಯಗಳಿವೆ. ೧೨ ಕೋಟಿಯ ಜಪಾನಿನಲ್ಲಿ ೭೨೬ ವಿಶ್ವವಿದ್ಯಾಲಯಗಳಿವೆ. ೮ ಕೋಟಿಯ ಜರ್ಮನಿಯಲ್ಲಿ ೩೫೦ ವಿಶ್ವವಿದ್ಯಾಲಯಗಳು, ೬ ಕೋಟಿಯ ಇಂಗ್ಲೆಂಡಿನಲ್ಲಿ ೧೨೫ ವಿಶ್ವವಿದ್ಯಾಲಯಗಳು, ೨೨ ಕೋಟಿಯ ಇಂಡೋನೇಷ್ಯಾದಲ್ಲಿ ೧೨೫೭ ವಿಶ್ವವಿದ್ಯಾಲಯಗಳು, ೮ ಕೋಟಿ ಜನರ ಫಿಲಿಪೈನ್ಸ್‌ನಲ್ಲಿ ೧೯೯೫ ವಿಶ್ವವಿದ್ಯಾಲಯಗಳು, ಚೀನಾದಲ್ಲಿ ೨೦೦೦ ವಿಶ್ವವಿದ್ಯಾಲಯಗಳಿವೆ.

ನಮ್ಮ ದೇಶದಲ್ಲಿ ಸಂಶೋಧನೆಗಾಗಿ ವಿಶ್ವವಿದ್ಯಾಲಯಗಳಿಗೆ ಹಣ ನಿಯೋಜನೆಯೂ ಅತಿ ಕಡಿಮೆ. ಉದಾಹರಣೆಗೆ, ಈ ಮಾಹಿತಿ ನೋಡಿ :

**ಸಂಶೋಧನೆಗೆ ನಿಯೋಜಿತ ಹಣ (ಶೇಕಡ)**

| | ೧೯೮೮-೮೯ | ೨೦೦೨-೦೩ |
|---|---|---|
| ೧. ಕೇಂದ್ರ ಸರ್ಕಾರದ ಪ್ರಯೋಗಾಲಯ ಮತ್ತು ಸಂಸ್ಥೆಗಳು | ೬೨.೫ | ೬೨.೦ |
| ೨. ರಾಜ್ಯ ಸರ್ಕಾರದ ಪ್ರಯೋಗಾಲಯ ಮತ್ತು ಸಂಸ್ಥೆಗಳು | ೮.೦ | ೮.೫ |
| ೩. ಸಾರ್ವಜನಿಕ ಕ್ಷೇತ್ರ ಪ್ರಯೋಗಾಲಯಗಳು | ೫.೦ | ೫.೦ |
| ೪. ಖಾಸಗಿ ಕಾರ್ಖಾನೆಗಳು | ೨೧.೬ | ೨೦.೩ |
| ೫. ಉನ್ನತ ಶಿಕ್ಷಣ ಸಂಸ್ಥೆಗಳು (ವಿಶ್ವವಿದ್ಯಾಲಯಗಳು) | ೨.೯ | ೪.೨ |

(ಮೂಲ : ಸಂಶೋಧನ ಮತ್ತು ಅಭಿವೃದ್ಧಿ ಅಂಕಿಅಂಶಗಳು : ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗ, ಭಾರತ ಸರ್ಕಾರ : ೨೦೦೦-೦೧ ಮತ್ತು ೨೦೦೪-೦೫)

ವಿಶ್ವವಿದ್ಯಾಲಯದಲ್ಲಿ ಸಂಶೋಧನೆ ಇಷ್ಟೊಂದು ಕಡಿಮೆ ನಿಯೋಜನೆ ಹಣದ ಅಭಾವದಿಂದೇನೂ ಅಲ್ಲ; ಸಂಸ್ಥೆಗಳೇ ಹೆಚ್ಚಿನ ಹಣ ಬೇಡಿಕೆಯನ್ನು ಸಮರ್ಥಿಸಿಕೊಳ್ಳಲಾಗದೇ ಇರುವ ಸ್ಥಿತಿಯೇ ಕಾರಣ. ಈ ಕೆಳಗಿನ ಮಾಹಿತಿಯಿಂದ ಇದು ಸ್ಪಷ್ಟವಾಗುತ್ತದೆ.

**ವಿವಿಧ ಕ್ಷೇತ್ರಗಳಿಗೆ ಸಂಶೋಧನೆಗೆ ಹಣ ವಿನಿಯೋಗ ೧೯೯೭-೯೮ – ೨೦೦೦-೦೧ (ಕೋಟಿ ರೂ. ಗಳಲ್ಲಿ)**

| | ೧೯೯೭-೯೮ | ೯೮-೯೯ | ೯೯-೨೦೦೦ | ೨೦೦೦-೦೧ |
|---|---|---|---|---|
| ೧. ಕೇಂದ್ರ ಸಂಶೋಧನಾ ಸಂಸ್ಥೆಗಳು | ೬೮೮೫ | ೮೭೦೬ | ೧೦೧೫೧ | ೧೧೮೩೬ |
| ೨. ರಾಜ್ಯ ಸಂಶೋಧನಾ ಸಂಸ್ಥೆಗಳು | ೯೨೭ | ೧೦೨೭ | ೧೧೭೮ | ೧೩೫೧ |
| ೩. ಖಾಸಗಿ ಕಾರ್ಖಾನೆಗಳು | ೨೪೩೮ | ೨೭೯೦ | ೩೩೬೫ | ೪೦೫೯ |
| ೪. ಉನ್ನತ ಶಿಕ್ಷಣ ಸಂಸ್ಥೆಗಳು | ೩೬೨ | ೩೭೯ | ೩೯೬ | ೪೧೫ |

(ಮೂಲ : ಸಂಶೋಧನೆ ಮತ್ತು ಅಭಿವೃದ್ಧಿ ಅಂಕಿಅಂಶಗಳು : ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗ, ಭಾರತ ಸರ್ಕಾರ, ೨೦೦೦-೦೧, ಪ್ರಕಟಣೆ ೨೦೦೨)

ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಗೆ ಮೀಸಲಾದ ಇಷ್ಟೊಂದು ಕಡಿಮೆ ಹಣಕ್ಕೆ ಪ್ರಮುಖ ಕಾರಣ ವಿಶ್ವವಿದ್ಯಾಲಯಗಳ ಅಸಮರ್ಥತೆ. ಬೋಧಕರ ಕೊರತೆ, ಬೋಧನೆ ಉನ್ನತೀಕರಣ ಸಾಮಗ್ರಿಗೆ, ಕಟ್ಟಡಗಳ, ಹಾಸ್ಟೆಲ್, ಶೌಚಾಲಯಗಳ, ಕುಡಿಯುವ ನೀರಿನ ಕೊರತೆಗಳೇ ಇರುವಾಗ ಸಂಶೋಧನೆ ಕಡಿಮೆಯ ಮಾತಾಗುತ್ತದೆ. ವಿಶ್ವವಿದ್ಯಾಲಯಗಳ ಸಂಶೋಧನೆ ಸಾಮಾನ್ಯವಾಗಿ ಅಲ್ಲಿಯ ಶಿಕ್ಷಕರಿಂದ, ಅವರು ಮಂಡಿಸಿದ ಯೋಜನೆಗಳ ಮಂಜೂರಾತಿಯಿಂದ. ಇಂತಹ ಯೋಜನೆಗೆ ಹಣ ಸಹಾಯ ಕೇಂದ್ರದ ಅಣುಶಕ್ತಿ ವಿಭಾಗ, ಬಾಹ್ಯಾಕಾಶ ವಿಭಾಗ, ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗ, ಜೈವಿಕ ತಂತ್ರಜ್ಞಾನ ವಿಭಾಗ, ಯುಜಿಸಿ, ಐಸಿಎಸ್‌ಎಸ್‌ಆರ್ (ಸಾಮಾಜಿಕ ವಿಜ್ಞಾನ), ಐಸಿಎಚ್‌ಆರ್ (ಇತಿಹಾಸ), ಐಸಿಪಿಆರ್ (ತತ್ತ್ವಶಾಸ್ತ್ರ), ವಿಶ್ವಸಂಸ್ಥೆ, ವಿಶ್ವಬ್ಯಾಂಕ್, ಐಎಲ್‌ಒ, ಶಿಕ್ಷಣ ವಿಭಾಗ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಭಾಗ, ಸಾಮಾಜಿಕ ನ್ಯಾಯ ಮಂತ್ರಾಲಯ, ಎಐಸಿಟಿಇ (ಇಂಜಿನಿಯರಿಂಗ್). ಸಮರ್ಥ ಸಂಶೋಧಕರ ಕೊರತೆ ಈ ಬೋಧಕ ವೃಂದದಲ್ಲೂ ಇರುವುದರಿಂದ ಮುಕ್ಕಾಲುಪಾಲು ಶಿಕ್ಷಕರು ಯಾವ ಸಂಶೋಧನೆಯಲ್ಲೂ ನಿರತರಾಗಿಲ್ಲ. ಸಂಶೋಧನೆಗೆ ಇಲ್ಲಿ ಇನ್ನೊಂದು ಅವಕಾಶ ಇರುವುದು ಪಿಎಚ್.ಡಿ. ವಿದ್ಯಾರ್ಥಿಗಳಿಂದ. ಒಂದು ಅಂದಾಜಿನ ಪ್ರಕಾರ ನಮ್ಮ ದೇಶದಲ್ಲಿ ವರ್ಷಕ್ಕೆ ೫೦೦೦ ಪಿಎಚ್.ಡಿ. ಪದವೀಧರರನ್ನು ತಯಾರು ಮಾಡುತ್ತಿದ್ದೇವೆ. ಕರ್ನಾಟಕ ರಾಜ್ಯ ಒಂದರಲ್ಲೇ, ಕಳೆದ ಮೂರು ವರ್ಷಗಳಲ್ಲಿ ೧೩೭೯ ಪಿಎಚ್.ಡಿ.ಯವರನ್ನು ಕೊಟ್ಟಿದೆ.

### ಗುಣ-ಮೌಲ್ಯ

ನಮ್ಮ ವಿಶ್ವವಿದ್ಯಾಲಯಗಳ ಸಂಶೋಧನೆ ಬಗ್ಗೆ ಒಂದು ವ್ಯಂಗ್ಯೋಕ್ತಿ ಇದೆ : ಇಲ್ಲಿ ಮಾಡುವ ಸಂಶೋಧನೆಗಳೆಲ್ಲಾ ಎಲ್ಲೋ ನೋಡಿದುದರ ಪುನರಾವರ್ತನೆ; ಯಾವುದಾದರೂ ಅಲ್ಲೊಂದು ಇಲ್ಲೊಂದು ಹೊಸತು ಅಂತ ಸಿಕ್ಕರೆ ಅದು ನಿಷ್ಪ್ರಯೋಜಕ ವಿಷಯದ ಮೇಲಾಗಿರುತ್ತದೆ! ಇದು ವಾಸ್ತವಕ್ಕೆ ಹತ್ತಿರವೂ ಕೂಡ! ಸುಮಾರು ಹತ್ತು ವರ್ಷಗಳ ಹಿಂದೆ ನಮ್ಮ ರಾಜ್ಯದ ಪ್ರತಿಷ್ಠಿತ ವಿಶ್ವವಿದ್ಯಾಲಯವೊಂದರಲ್ಲಿ ಪಿಎಚ್.ಡಿ. ವಿಷಯದ ಬಗ್ಗೆ ಶೈಕ್ಷಣಿಕ ಪರಿಷತ್‌ನಲ್ಲಿ ವ್ಯಗ್ರ ಚರ್ಚೆಯಾಗಿತ್ತು. ಆ ವಿದ್ಯಾರ್ಥಿ ಸಂಶೋಧನೆಗೆ ಆಯ್ದುಕೊಂಡ ವಿಷಯ: ರೇಷ್ಮೆ ಉಡುಪು ಧರಿಸಿದ ಕನ್ನಡ ಕವಿಗಳು! ಅದಕ್ಕೆ ಕಾರಣ ಇಷ್ಟೆ. ಸ್ನಾತಕೋತ್ತರ ಪದವಿ ಆದ ಮೇಲೆ ಮುಂದೇನು? ಕೆಲಸವಂತೂ ಇಲ್ಲ, ಪಿಎಚ್.ಡಿ. ಮಾಡುತ್ತಾ ೩-೫ ವರ್ಷ ಕಳೆದು ಕೆಲಸಕ್ಕೆ ಹೆಚ್ಚು ಸನ್ನದ್ಧರಾಗಬಹುದು. ಆದರೆ ಮಾರ್ಗದರ್ಶಕರ ಕೊರತೆ. ಆ ವಿದ್ಯಾರ್ಥಿ ರೇಷ್ಮೆ ಕೃಷಿ ವಿದ್ಯಾರ್ಥಿ. ಅಲ್ಲಿ ಗೈಡ್ ಇಲ್ಲ, ಇರುವವರೆಲ್ಲರಿಗೂ ಭರ್ತಿಯಾಗಿದೆ. ಕನ್ನಡ ವಿಭಾಗದಲ್ಲಿ ಗೈಡ್ ಸಿಗುತ್ತಾರೆ. ಅದಕ್ಕೆ ಅಂತರ ವಿಭಾಗೀಯ ನೋಂದಣಿಯ ಅಡಿಯಲ್ಲಿ ಕನ್ನಡ ಗೈಡ್‌ನ ಆಯ್ದುಕೊಂಡಾಗ ಕನ್ನಡ - ರೇಷ್ಮೆ ಸೇರಿದ ವಿಷಯವಾಗಬೇಕಷ್ಟೆ! ಈ ಸಂಶೋಧನೆ ಯಾವ ಪುರುಷಾರ್ಥಕ್ಕೆ? ಪದವಿಗೆ ಮಾತ್ರ, ಅನ್ವೇಷಣೆ ಜ್ಞಾನ ಅಭಿವೃದ್ಧಿಗೆ ಅಲ್ಲ. ಬಹಳಷ್ಟು ವಿದ್ಯಾರ್ಥಿ, ಶಿಕ್ಷಕರಲ್ಲಿ ಶೋಧನೆಯಲ್ಲಿ ಆಸಕ್ತಿ, ಸಾಮರ್ಥ್ಯದ ಕೊರತೆಯನ್ನು ಕಾಣುತ್ತೇವೆ. ಸಂಶೋಧನ ಮಾಡದಿದ್ದರೂ ನಡೆದುಕೊಂಡುಹೋಗುತ್ತದೆ ಎನ್ನುವ ವಾತಾವರಣವೇ ಈ ಸ್ಥಿತಿಗೆ ಕಾರಣವಾಗಿದೆ. ಸಂಶೋಧನೆಗೆ ಪೂರಕವಾದ ಒತ್ತಡ, ತ್ವರಿತತೆ ಕಡಿಮೆ. ಇದಕ್ಕೆ ಮೇಲೆ ಹೇಳಿದ ವಿಶ್ವವಿದ್ಯಾಲಯಗಳ ಇತರ ಮೂಲಭೂತ ಕೊರತೆಗಳನ್ನು ನೀಗಿಸುವ ಆದ್ಯತೆ, ಹಣದ ಅಭಾವವೂ ಕಾರಣ. ಮೇಲಾಗಿ ನಮ್ಮ ಶಿಕ್ಷಣದಲ್ಲಿ, ಬೋಧನಾಕ್ರಮದಲ್ಲಿ ಶೋಧನೆ, ಅನ್ವೇಷಣೆಯ ಕಾವು, ಹರವು, ಸಾರ್ಥಕ್ಯಗಳನ್ನು ಮನವರಿಕೆ ಮಾಡಿಕೊಡುತ್ತಿಲ್ಲ. ಜಾಗತಿಕ ಪ್ರಪಂಚದಲ್ಲೂ ನಾವು ಹಿಂದುಳಿಯುತ್ತಿದ್ದೇವೆ. ೧೯೮೦ರಲ್ಲಿ ಸಂಶೋಧನಾತ್ಮಕ ಪ್ರಕಟಣೆಗಳಲ್ಲಿ ನಾವು ೮ನೇ ಸ್ಥಾನದಲ್ಲಿದ್ದೆವು. ಚೈನಾ ೨೩ರಲ್ಲಿತ್ತು. ೧೯೯೪-೯೫ರಲ್ಲಿ ನಾವು ೧೨ನೇ ಸ್ಥಾನಕ್ಕೆ ಬಿದ್ದರೆ, ಚೈನಾ ೧೫ನೇ ಸ್ಥಾನಕ್ಕೆ ಏರಿದೆ. ಇತ್ತೀಚಿಗಿನ ಮಾಹಿತಿ ಪ್ರಕಾರ ಭಾರತ, ಪ್ರಕಟಣೆಯಲ್ಲಿ ೧೩ನೇ ಸ್ಥಾನದಲ್ಲೂ, ಉಲ್ಲೇಖದಲ್ಲಿ ೨೧ನೇ ಸ್ಥಾನದಲ್ಲಿದ್ದರೆ, ಚೈನಾ ೯ ಮತ್ತು ೧೯ನೇ ಸ್ಥಾನದಲ್ಲಿದೆ. ೧೯೯೫ರಿಂದ ೨೦೦೩ರೊಳಗೆ ಚೈನಾದಲ್ಲಿ ಪಿಎಚ್.ಡಿ. ವಿದ್ಯಾರ್ಥಿಗಳು ೮೧೯೩ರಿಂದ ೪೮೭೪೦ಕ್ಕೆ ಏರಿದರೆ ಭಾರತದಲ್ಲಿ ೩೦೦೦ದಿಂದ ೫೦೦೦ಕ್ಕೆ ಮಾತ್ರ ಏರಿದೆ. ೨೦೦೪ನೇ ಇಸವಿ ಒಂದರಲ್ಲೇ ಚೈನಾದಲ್ಲಿ ೫೭,೩೭೮ ವೈಜ್ಞಾನಿಕ ಸಂಶೋಧನಾ ಲೇಖನಗಳು ಪ್ರಕಟವಾದರೆ ಭಾರತದಲ್ಲಿ ಆ ವರ್ಷ ಅದು ೨೩,೩೩೮ ಮಾತ್ರ ಆಗಿತ್ತು. ನಾವು ಬಳಸುತ್ತಿರುವ ತಂತ್ರಜ್ಞಾನಗಳಲ್ಲೂ ಹೊರದೇಶದ ತಂತ್ರಜ್ಞಾನವನ್ನು ಹಾಗೆಯೇ ಇಡಿಯಾಗಿ ಅಳವಡಿಸಿಕೊಂಡಿರುವುದು ಶೇಕಡ ೫೦, ಶೇಕಡ ೪೫ ಭಾಗ ಹೊರದೇಶದ್ದನ್ನೇ ಮಾರ್ಪಡಿಸಿ ನಮ್ಮ ಅಗತ್ಯಕ್ಕೆ ಅಳವಡಿಸಿಕೊಂಡಿರುವುದು, ಉಳಿದ ಶೇಕಡ ೫ ಭಾಗ ಮಾತ್ರ ನಮ್ಮದೇ ಅಂತ ಹೇಳಬಹುದು.

ನಮ್ಮಲ್ಲಿರುವ ವಿಶ್ವವಿದ್ಯಾಲಯಗಳೇ ಕಡಿಮೆ; ಶಾಲೆಯಿಂದ ಕಾಲೇಜಿಗೆ (ಉನ್ನತ ಶಿಕ್ಷಣ)ಕ್ಕೆ ಬರುವವರ ಸಂಖ್ಯೆ ಶೇಕಡ ೮, ಅದರಲ್ಲೂ ಪಿಎಚ್.ಡಿ. (ಸಂಶೋಧನೆ)ಗೆ ಬರುವವರು ಇನ್ನೂ ಕಡಿಮೆ. ಶಿಕ್ಷಕರಲ್ಲೂ ಸಂಶೋಧನೆಗೆ ಒತ್ತಡ, ಪ್ರಲೋಭನೆ ಅಷ್ಟಕ್ಕಷ್ಟೆ. ಸಿಗುವ ಸಂಶೋಧನೆಗಳು ಕಳಪೆ ಗುಣಮಟ್ಟದ್ದು. ಅಂದರೆ ಒಳ್ಳೆಯ ಸಂಶೋಧನೆ ಇಲ್ಲವೆಂತಲ್ಲ. ಕರ್ನಾಟಕವನ್ನೇ ತೆಗೆದುಕೊಂಡರೆ ೧೫ ವಿಶ್ವ ವಿದ್ಯಾಲಯಗಳ ಪ್ರತಿ ವಿಶ್ವವಿದ್ಯಾಲಯದಲ್ಲೂ ಕನಿಷ್ಠ ಮೂರು ವಿಭಾಗದಲ್ಲಾದರೂ ಶ್ರೇಷ್ಠಮಟ್ಟದ ಸ್ವಪರಹಿತ ಸಾಧಿಸುವ ಸಂಶೋಧನೆಗಳು ನಡೆಯುತ್ತಿವೆ; ಆದರೆ ಇಷ್ಟೊಂದು ದೊಡ್ಡ ದೇಶಕ್ಕೆ, ಅಪಾರ ಪ್ರಕೃತಿ ಸಂಪದ್ಭರಿತವಾದ ಭಾರತ/ಕರ್ನಾಟಕಕ್ಕೆ ಅಷ್ಟೇ ಸಾಲದು. ಅಣು, ಬಾಹ್ಯಾಕಾಶ, ವಿದ್ಯುನ್ಮಾನ, ರಕ್ಷಣೆ, ಕೃಷಿ, ಜೀವತಳಿ ಅಭಿವೃದ್ಧಿ, ಆರೋಗ್ಯ, ರಾಜಕೀಯ, ಆರ್ಥಿಕ, ಸಾಮಾಜಿಕ, ಆಡಳಿತ ವ್ಯವಸ್ಥೆ ಮತ್ತು ಮಾನವ ವರ್ತನೆ ಕ್ಷೇತ್ರಗಳಲ್ಲಿ ಸಂಶೋಧನೆಗೆ ವಿಪುಲವಾದ ಅವಕಾಶವಿದೆ. ನಮ್ಮ ಸಂಪತ್ತನ್ನು ನಮ್ಮ ಸ್ಥಿತಿಗತಿಗೆ ಅನುಕೂಲವಾಗುವಂತೆ ಸಾರ್ಥಕವಾಗಿ ಉಪಯೋಗಿಸಿಕೊಳ್ಳಲು ನಮ್ಮದೇ ಸಂಶೋಧನೆ ಅತ್ಯಗತ್ಯ. ಎರವಲು ತಂದದ್ದು ಬಹಳ ದಿನ ಉಳಿಯುವುದಿಲ್ಲವಷ್ಟೇ ಅಲ್ಲ, ಕ್ರಮೇಣ ಅವು ನಮಗೆ ವಿನಾಶಕಾರಿಯೂ ಆಗಬಹುದು.

ಇಂದು ಪ್ರಪಂಚದ ಎಲ್ಲ ಜನ, ದೇಶ ಭೌತಿಕವಾಗಿ ಹತ್ತಿರವಾಗುತ್ತಿದ್ದಾರೆ. ಇದು ಹಲವು ಸಾಮಾಜಿಕ, ಮಾನವಿಕ, ನೈತಿಕ ಸಮಸ್ಯೆಗಳಿಗೂ ಎಡೆಮಾಡಿಕೊಟ್ಟಿದೆ. ಈ ಪೈಪೋಟಿಯ, ಸ್ಪರ್ಧಾತ್ಮಕ ಯುಗದಲ್ಲಿ ನಾವು ಬೇರೆ ಇರಲು ಅಸಾಧ್ಯ. ಜಾಗತಿಕ ಸ್ಪರ್ಧಾತ್ಮಕತೆ ವರದಿ ೨೦೦೪ರ ಪ್ರಕಾರ ಅಧ್ಯಯನ ಮಾಡಿದ ೫೩ ದೇಶಗಳಲ್ಲಿ,

ನಮ್ಮ ಸ್ಥಾನ ಪೈಪೋಟಿತನದಲ್ಲಿ ಅತ್ಯಂತ ಕೆಳಗಿನ ೪೫ನೆಯದು. ಅಮೆರಿಕಾ ಮೊದಲನೇ ಸ್ಥಾನ, ತೈವಾನ್ ೩, ಸಿಂಗಪುರ ೪, ಚೈನಾ ೩೩. ಇದೇ ವರದಿಯ ಪ್ರಕಾರ ವೃತ್ತಿಪರ ಪರಿಣತರನ್ನು ಉಪಯೋಗಿಸಿ ಕೊಳ್ಳುವವರಲ್ಲಿ ನಮ್ಮ ಸ್ಥಾನ ೫೦ (೫೩ಕ್ಕೆ) ! ವೃತ್ತಿಪರರ ಬದಲಾಗಿ ನೌಕರಶಾಹಿ ಶಿರೋಭಾರದ ಭಾರತವಾಗಿದೆ!

**ಪರಿಹಾರ-ಪುರಸ್ಕಾರ**

'ಎದ್ದೇಳಿ ಮುಂದೆ ನಡೆ'ವುದು ಹೇಗೆ ? ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ ರಚಿಸಿದ 'ವಿಶ್ವವಿದ್ಯಾಲಯಗಳಲ್ಲಿ ಮೂಲ ವೈಜ್ಞಾನಿಕ ಸಂಶೋಧನೆ ಕಾರ್ಯಪಡೆ' ವರದಿ (ಮೇ ೨೦೦೫) ಶಿಫಾರಸು ಇಂತಿವೆ: (೧) ಅನುದಾನಿತ ಕಾಲೇಜುಗಳನ್ನು ವಿಶ್ವವಿದ್ಯಾಲಯಗಳಿಂದ ಬೇರ್ಪಡಿಸಬೇಕು. (೨) ೧೦೦೦೦ ಸಂಶೋಧನಾ ವಿಜ್ಞಾನಿಗಳನ್ನು – ಲೆಕ್ಚರರ್, ರೀಡರ್ ಮತ್ತು ಪ್ರೊಫೆಸರ್ ಮಟ್ಟದವರನ್ನು ಆಯಬೇಕು. (೩) ದೇಶದ ವಿವಿಧ ಭಾಗಗಳ ವಿಶ್ವವಿದ್ಯಾಲಯದ ಪ್ರಬುದ್ಧ ಬೆಳವಣಿಗೆಗಳಿಸಿದ ವಿಭಾಗಗಳಲ್ಲಿ ಮೂಲ ವಿಜ್ಞಾನಗಳಲ್ಲಿ ೧೦ ಅಂತರ್‌ಜಾಲ ಕಾರ್ಯಕೇಂದ್ರಗಳನ್ನು ರಚಿಸಬೇಕು. ಅದರಲ್ಲಿ ತಲಾ ಎರಡು ಭೌತಿಕ ವಿಜ್ಞಾನ, ರಾಸಾಯನಿಕ ವಿಜ್ಞಾನ, ಜೀವ ವಿಜ್ಞಾನ, ಪದಾರ್ಥ ವಿಜ್ಞಾನ ಮತ್ತು ಗಣಿತ ವಿಜ್ಞಾನಕ್ಕೆ ಸಂಬಂಧಪಟ್ಟಿರಬೇಕು. ಆ ಕೇಂದ್ರಗಳು ಸಂಘಟಿತ ಸಂಶೋಧನೆಯನ್ನು ಬೆಳೆಸಬೇಕು, ಶ್ರೇಷ್ಠ ಸೌಲಭ್ಯಗಳು ಅವಕ್ಕೆ ಲಭ್ಯವಾಗ




ಬೇಕು ಮತ್ತು ಇತ್ತೀಚೆಗಿನ ಹೊಸ ಕ್ಷೇತ್ರಗಳಲ್ಲಿ ತರಬೇತಿ ಕೊಡುವಂತಿರಬೇಕು. (೪) ರಾಷ್ಟ್ರಮಟ್ಟದ ಸಂಸ್ಥೆ, ಪ್ರಯೋಗಾಲಯಗಳಿಗೆ ವಿಶ್ವವಿದ್ಯಾಲಯದ ಸಂಪರ್ಕ ಕಲ್ಪಿಸಿ ಸಹಸಂಶೋಧನಾ ಯೋಜನೆಗಳು, ತರಬೇತಿಗಳು ನೆರವೇರಬೇಕು. (೫) ಎಲ್ಲಾ ವಿಶ್ವವಿದ್ಯಾಲಯಗಳಲ್ಲೂ ಯೋಗ್ಯಮಟ್ಟದ ಪಿಎಚ್.ಡಿ. ಮಾಡುವವರನ್ನು ಮುಂದಿನ ಹತ್ತು ವರ್ಷದಲ್ಲಿ ಐದುಪಟ್ಟು ಹೆಚ್ಚಿಸಬೇಕು. (೬) ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ ವರ್ಷಕ್ಕೆ ೬೦೦ ಕೋಟಿ ರೂ. ಹಣವನ್ನು ಈ ಮೇಲಿನ ಕಾರ್ಯಕ್ಕೆ ಬಿಡುಗಡೆ ಮಾಡಬೇಕು.

ಇದರ ಜೊತೆಗೆ ಸಾಮಾಜಿಕ, ಆರ್ಥಿಕ ವಿಜ್ಞಾನಗಳಿಗೂ ಗಮನ ಹರಿಸಬೇಕಾಗಿದೆ, ನಮ್ಮದೇ ವಿಶಿಷ್ಟವಾದ ಸಾಮಾಜಿಕ, ಆರ್ಥಿಕ ಸಮಸ್ಯೆಗೆ ವೈಜ್ಞಾನಿಕ ಸಂಶೋಧನೆಯಿಂದ ಪರಿಹಾರ ಕಂಡುಕೊಳ್ಳಬೇಕಾಗಿದೆ. ಅದಿಲ್ಲದಿದ್ದರೆ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ಆಡಳಿತಾತ್ಮಕ ನಿರ್ಧಾರಗಳನ್ನು ತೆಗೆದುಕೊಳ್ಳಲು ರಾಜಕೀಯವನ್ನು ಪ್ರೇರೇಪಿಸುತ್ತವೆ. ಇದು ಬಹುಜನ ಹಿತಕ್ಕೆ ಧಕ್ಕೆಯಾಗುತ್ತದೆ. ಆಧುನಿಕ, ನಾಗರಿಕ ಸಮಾಜದಲ್ಲಿ ವಸ್ತುನಿಷ್ಠ, ನಿಷ್ಪಕ್ಷಪಾತ ಜ್ಞಾನ ನಮ್ಮೆಲ್ಲ ನಿರ್ಧಾರಕ್ಕೆ ಎಡೆಮಾಡಿಕೊಡಬೇಕು; ವೈಜ್ಞಾನಿಕ ಸಂಶೋಧನೆ ನಮಗೆ ಅದನ್ನು ದೊರಕಿಸಿ ಕೊಡಬಲ್ಲದು. ನಮ್ಮ ವಿದ್ಯಾರ್ಥಿಗಳಲ್ಲಿ ಸಂಶೋಧನಾ ದೃಷ್ಟಿ, ಪ್ರಯೋಗಶೀಲತೆ, ಅನ್ವೇಷಣೆ, ಶೋಧನಾ ಮನೋಭಾವ ಬೆಳೆದಾಗಲೇ ಆತ ಸ್ವಾವಲಂಬಿಯಾಗಿ, ಚಿಂತನಶೀಲತೆಯಿಂದ ತನ್ನ ಬದುಕನ್ನು ಪ್ರಗತಿಯತ್ತ ನಿರ್ವಹಿಸಿಕೊಳ್ಳಬಹುದು. ಆ ರೀತಿ ವಿದ್ಯಾರ್ಥಿಗಳನ್ನು ತಯಾರುಮಾಡುವುದೂ ವಿಶ್ವವಿದ್ಯಾಲಯಗಳ ಕೆಲಸ.

**ಪ್ರೊ|| ಎಂ. ಎಸ್. ತಿಮ್ಮಪ್ಪ**
ಮಾಜಿ ಕುಲಪತಿಗಳು, ಬೆಂಗಳೂರು ವಿಶ್ವವಿದ್ಯಾಲಯ
೪೯, ೫ನೇ ಮುಖ್ಯರಸ್ತೆ, ಆಂಜನೇಯ ನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಶಿಕ್ಷಕ, ಶಿಕ್ಷಣಾರ್ಥಿ ಮತ್ತು ಶಿಕ್ಷಣ

ಇಂದು ಕಂಪ್ಯೂಟರ್, ಸಿ.ಡಿ.ಗಳು, ದೂರ ಶಿಕ್ಷಣ, ಟೆಲಿವಿಷನ್ ಮಾಧ್ಯಮಗಳ ಮೂಲಕ ಅದರಲ್ಲೂ ಇಂಟರ್‌ನೆಟ್ ಜಾಲದಲ್ಲಿ ಜ್ಞಾನದ ಸ್ಫೋಟವನ್ನು ನೋಡುತ್ತಿರುವ ನಮಗೆ ಶಿಕ್ಷಕನ ಸ್ಥಾನ ಮಾನ ಎರಡೂ ಮಸುಕಾಗಿ ಕಾಣುತ್ತಿರುವುದು ಸ್ವಾಭಾವಿಕ. ಆದರೆ ವಾಸ್ತವ ಬೇರೆ. ಪವಿತ್ರ ಹಾಗೂ ಪರಿಣಾಮಕಾರಿ ಗುರು-ಶಿಷ್ಯ ಸಂಬಂಧವನ್ನು ಯಾವ ವ್ಯವಸ್ಥೆಯಿಂದಲೂ ಬೇರ್ಪಡಿಸಲು ಸಾಧ್ಯವಿಲ್ಲ. ತನ್ನ ವೃತ್ತಿ ಮತ್ತು ವಿದ್ಯಾರ್ಥಿಗಳನ್ನು ಪ್ರೀತಿಸುವ ಶಿಕ್ಷಕ ಕೇವಲ ಬೋಧನೆ ಮಾಡುವುದಿಲ್ಲ, ಆದರ್ಶಗಳನ್ನು ರೂಪಿಸುವ ಸ್ಫೂರ್ತಿಯ ಸೆಲೆಯಾಗುತ್ತಾನೆ. ಆತನ ನಡೆ, ನುಡಿಗಳು ಪ್ರೇರಕಶಕ್ತಿಯಾಗಿ ಕೆಲಸ ಮಾಡುತ್ತವೆ. ಸಮಗ್ರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಶಾಲಾ, ಕಾಲೇಜು ವಾತಾವರಣ ಅನಿವಾರ್ಯ. ವೈಚಾರಿಕತೆ, ಪ್ರಜಾಪ್ರಭುತ್ವ, ಮಾನವ ಹಕ್ಕುಗಳ ಪ್ರತಿಪಾದನೆ ಯಂತ್ರಗಳಿಂದ ಸಾಧ್ಯ ಎನ್ನುವುದಾದರೆ ನಮ್ಮ ಚರಿತ್ರೆ, ಕಾವ್ಯ, ಸಾಹಿತ್ಯ, ಸಂಸ್ಕೃತಿ, ಸಹೃದಯತೆ ಮೌಲ್ಯದ ನೆಲೆಗಳು ಏನೂ ಅಲ್ಲ ಎಂದು ಬಹಳ ಸರಳವಾಗಿ ಹೇಳಬಹುದು. ನಮ್ಮ ಜೀವನದಲ್ಲಿ ಬಂದಿರುವ ಶಿಕ್ಷಕರ ನೆನಪು ಮಾಡಿಕೊಂಡಲ್ಲಿ ಹಲವು ಶಿಕ್ಷಕರು ಶಾಶ್ವತವಾಗಿ ಮನದಾಳದಲ್ಲಿ ಭದ್ರವಾಗಿ ನೆಲೆಯೂರಿರುವುದು ಸತ್ಯ. ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ರಾಷ್ಟ್ರದ ೩೫೦ಕ್ಕೂ ಹೆಚ್ಚಿನ ವಿಶ್ವವಿದ್ಯಾಲಯಗಳಲ್ಲಿ, ೧೬೦೦೦ಕ್ಕೂ ಮಿಗಿಲಾದ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಸಾಮಾನ್ಯ ತರಗತಿ ಕೋಣೆಗಳಲ್ಲಿ ವಿದ್ಯಾರ್ಜನೆ ಮಾಡುತ್ತಿರುವುದು ಇದಕ್ಕೆ ಸಾಕ್ಷಿ. ಶಿಕ್ಷಣದ ಉಳಿದ ಸ್ತರಗಳಲ್ಲಿ ಇದು ಇನ್ನೂ ಹೆಚ್ಚಿದೆ. ಪ್ರತಿವರ್ಷ ಈ ವ್ಯವಸ್ಥೆಗೆ ಬೇಡಿಕೆ ಹೆಚ್ಚುತ್ತಿದೆ ಎನ್ನುವುದನ್ನೂ ಗಮನಿಸಿದರೆ ಶಿಕ್ಷಕ-ವಿದಾರ್ಥಿ ಸಂಬಂಧವನ್ನು ಬೇರೊಂದು ವ್ಯವಸ್ಥೆ ಮೂಲಕ ಬೇರ್ಪಡಿಸುವುದು ಸಾಧ್ಯವಿಲ್ಲ.

■ **ಪ್ರೊ|| ಎ. ಎಂ. ನರಹರಿ**



ಶಿಕ್ಷಕರ ದಿನಾಚರಣೆ ವಾರ್ಷಿಕ ಸಂಪ್ರದಾಯ ಮುಗಿದಿದೆ. ಇತ್ತೀಚೆಗೆ ಮಧ್ಯಪ್ರದೇಶದ ಉಜ್ಜಯಿನಿಯಲ್ಲಿ ಪ್ರೊ|| ಸಬರ್ವಾಲ್ ವಿದ್ಯಾರ್ಥಿ ಗೂಂಡಾಗಳಿಂದ ಕೊಲೆಯಾಗಿರುವ ಹಿನ್ನೆಲೆಯಲ್ಲಿ ವ್ಯಕ್ತವಾಗಿರುವ ಕೆಲವು ಪ್ರಶ್ನೆಗಳಿಗೆ ಪ್ರತಿಕ್ರಿಯಿಸುವ ಒಂದು ಪ್ರಯತ್ನ ಈ ಲೇಖನ. ವಿದ್ಯಾರ್ಥಿ-ಶಿಕ್ಷಕ ಸಂಬಂಧ ಅತ್ಯಂತ ಕೆಳಮಟ್ಟ ತಲುಪಿದೆಯೇ ಎನ್ನುವ ಪ್ರಶ್ನೆಯನ್ನು ಅನೇಕ ಮಾಧ್ಯಮಗಳಲ್ಲಿ ರಾಷ್ಟ್ರಾದ್ಯಂತ ಚರ್ಚಿಸಿರುವುದನ್ನು ಗಮನಿಸಿದ್ದೇವೆ. ನಮ್ಮ ರಾಷ್ಟ್ರಪತಿಗಳು ಹಾಗೂ ಪ್ರಧಾನ ಮಂತ್ರಿಗಳು ಶ್ರೇಷ್ಠ ಶಿಕ್ಷಕರಾಗಿ ತಮ್ಮ ಅನುಭವಗಳನ್ನು ಮೆಲುಕುಹಾಕುತ್ತಿರುವ ಈ ಸಂದರ್ಭದಲ್ಲಿ ಈ ಚರ್ಚೆ ತುಂಬಾ ಪ್ರಸ್ತುತವೆನ್ನಿಸಿದೆ.

ಕೆಲವು ಮೂಲಭೂತ ಪ್ರಶ್ನೆಗಳು ನಮ್ಮೆದುರುಗಿವೆ. ಈ ಲೇಖನದಲ್ಲಿ ೩ ವಿಷಯಗಳ ಬಗ್ಗೆ ಪ್ರಸ್ತಾವಿಸುತ್ತೇನೆ.

೧. ತರಗತಿಯ ನಾಯಕನಾಗಿ ಶಿಕ್ಷಕನ ಸ್ಥಾನ ಕುಸಿಯುತ್ತಿದೆಯೆ ?

೨. ಕಾಲೇಜು ಆವರಣದಲ್ಲಿ ರಾಜಕೀಯ ಚಟುವಟಿಕೆಗಳಿಗೆ ಅವಕಾಶ ನೀಡುವುದು ಸರಿಯೆ ?

೩. ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಸರಕಾರ ತನ್ನ ಜವಾಬ್ದಾರಿ ನಿರ್ವಹಿಸುತ್ತಿದೆಯೆ ?

ಶಿಕ್ಷಣದಿಂದ ಮಾತ್ರ ಸಮಾಜ, ನಾಗರಿಕತೆ, ದೇಶ ಪ್ರಗತಿ ಹೊಂದಲು ಸಾಧ್ಯ. ಅದರಲ್ಲೂ ಅಸಮಾನತೆ ಸಾಮಾನ್ಯವಾಗಿರುವ ನಮ್ಮ ದೇಶದಲ್ಲಿ ಶಿಕ್ಷಣ ಸಮಾಜದ ಸಬಲೀಕರಣ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಇದರಲ್ಲಿ ಶಿಕ್ಷಕರ ಪಾತ್ರ ಏನು ? ನಮ್ಮ ಪ್ರಾಚೀನ ಗುರು ಪರಂಪರೆ ಮರೆಯಾಗಿ ಯಾಂತ್ರಿಕ ಪರಂಪರೆ ಆಕ್ರಮಿಸಿಕೊಳ್ಳುತ್ತಿರುವ ಭ್ರಮೆ ಮೂಡುತ್ತಿದೆಯಾದರೂ ಇಂದಿಗೂ ಗುರುವಿನ ಪ್ರಸ್ತುತತೆ ಕಡಿಮೆಯಾಗಿಲ್ಲ ಎನ್ನುವುದು ನನ್ನ ಭಾವನೆ. ಕೇವಲ ವಿಷಯಗಳನ್ನು ಬೋಧಿಸುವುದು ಶಿಕ್ಷಕನ ಕೆಲಸವಲ್ಲ. ವಿಷಯಗಳನ್ನು ಜ್ಞಾನವನ್ನಾಗಿ ಪರಿವರ್ತಿಸಿ ಉತ್ತಮ ಪ್ರಜೆಯನ್ನು ನಿರ್ಮಿಸುವ ಪವಿತ್ರ ಕೆಲಸ ಶಿಕ್ಷಕನದು. ಇದರಲ್ಲಿ ಉತ್ಪ್ರೇಕ್ಷೆ ಇಲ್ಲ. ಇದು ವಾಸ್ತವ. ಈ ದೃಷ್ಟಿಯಿಂದಲೇ ಶಿಕ್ಷಕ ವೃತ್ತಿಯನ್ನು ಪ್ರವೃತ್ತಿ ಎಂದು ಮಾನ್ಯ ಮಾಡಿರುವುದು. ಅತಿ ವೇಗವಾಗಿ ಓಡುತ್ತಿರುವ ವೈಜ್ಞಾನಿಕ ಯುಗದಲ್ಲಿ, ಸಾಮಾನ್ಯ ತರಗತಿ ಕೋಣೆಯನ್ನು ಗಣಕೀಕೃತ ಕೋಣೆ ಆಕ್ರಮಿಸಿಕೊಂಡಿದೆ ಎನ್ನುವ ಭಾವನೆ ಮೂಡಿರುವುದು ತಪ್ಪಲ್ಲ. ಇಂದು ಕಂಪ್ಯೂಟರ್, ಸಿ.ಡಿ.ಗಳು, ದೂರ ಶಿಕ್ಷಣ, ಟೆಲಿವಿಷನ್ ಮಾಧ್ಯಮಗಳ ಮೂಲಕ ಅದರಲ್ಲೂ ಇಂಟರ್‌ನೆಟ್ ಜಾಲದಲ್ಲಿ ಜ್ಞಾನದ ಸ್ಫೋಟವನ್ನು ನೋಡುತ್ತಿರುವ ನಮಗೆ ಶಿಕ್ಷಕನ ಸ್ಥಾನ ಮಾನ ಎರಡೂ ಮಸುಕಾಗಿ ಕಾಣುತ್ತಿರುವುದು ಸ್ವಾಭಾವಿಕ. ಆದರೆ ವಾಸ್ತವ ಬೇರೆ. ಪವಿತ್ರ ಹಾಗೂ ಪರಿಣಾಮಕಾರಿ

ಗುರು-ಶಿಷ್ಯ ಸಂಬಂಧವನ್ನು ಯಾವ ವ್ಯವಸ್ಥೆಯಿಂದಲೂ ಬೇರ್ಪಡಿಸಲು ಸಾಧ್ಯವಿಲ್ಲ. ತನ್ನ ವೃತ್ತಿ ಮತ್ತು ವಿದ್ಯಾರ್ಥಿಗಳನ್ನು ಪ್ರೀತಿಸುವ ಶಿಕ್ಷಕ ಕೇವಲ ಬೋಧನೆ ಮಾಡುವುದಿಲ್ಲ. ಆದರ್ಶಗಳನ್ನು ರೂಪಿಸುವ ಸ್ಫೂರ್ತಿಯ ಸೆಲೆಯಾಗುತ್ತಾನೆ. ಆತನ ನಡೆ, ನುಡಿಗಳು ಪ್ರೇರಕಶಕ್ತಿಯಾಗಿ ಕೆಲಸ ಮಾಡುತ್ತವೆ. ಸಮಗ್ರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಶಾಲಾ, ಕಾಲೇಜು ವಾತಾವರಣ ಅನಿವಾರ್ಯ. ವೈಚಾರಿಕತೆ, ಪ್ರಜಾಪ್ರಭುತ್ವ, ಮಾನವ ಹಕ್ಕುಗಳ ಪ್ರತಿಪಾದನೆ ಯಂತ್ರಗಳಿಂದ ಸಾಧ್ಯ ಎನ್ನುವುದಾದರೆ ನಮ್ಮ ಚರಿತ್ರೆ, ಕಾವ್ಯ, ಸಾಹಿತ್ಯ, ಸಂಸ್ಕೃತಿ, ಸಹೃದಯತೆ ಮೌಲ್ಯದ ನೆಲೆಗಳು ಏನೂ ಅಲ್ಲ ಎಂದು ಬಹಳ ಸರಳವಾಗಿ ಹೇಳಬಹುದು. ನಮ್ಮ ಜೀವನದಲ್ಲಿ ಬಂದಿರುವ ಶಿಕ್ಷಕರ ನೆನಪು ಮಾಡಿಕೊಂಡಲ್ಲಿ ಹಲವು ಶಿಕ್ಷಕರು ಶಾಶ್ವತವಾಗಿ ಮನದಾಳದಲ್ಲಿ ಭದ್ರವಾಗಿ ನೆಲೆಯೂರಿರುವುದು ಸತ್ಯ. ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ರಾಷ್ಟ್ರದ ೩೫೦ಕ್ಕೂ ಹೆಚ್ಚಿನ ವಿಶ್ವವಿದ್ಯಾಲಯಗಳಲ್ಲಿ, ೧೬೦೦೦ಕ್ಕೂ ಮಿಗಿಲಾದ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಸಾಮಾನ್ಯ ತರಗತಿ ಕೋಣೆಗಳಲ್ಲಿ ವಿದ್ಯಾರ್ಜನೆ ಮಾಡುತ್ತಿರುವುದು ಇದಕ್ಕೆ ಸಾಕ್ಷಿ. ಶಿಕ್ಷಣದ ಉಳಿದ ಸ್ತರಗಳಲ್ಲಿ ಇದು ಇನ್ನೂ ಹೆಚ್ಚಿದೆ. ಪ್ರತಿವರ್ಷ ಈ ವ್ಯವಸ್ಥೆಗೆ ಬೇಡಿಕೆ ಹೆಚ್ಚುತ್ತಿದೆ ಎನ್ನುವುದನ್ನೂ ಗಮನಿಸಿದರೆ ಶಿಕ್ಷಕ - ವಿದಾರ್ಥಿ ಸಂಬಂಧವನ್ನು ಬೇರೊಂದು ವ್ಯವಸ್ಥೆ ಮೂಲಕ ಬೇರ್ಪಡಿಸುವುದು ಸಾಧ್ಯವಿಲ್ಲ. ವಿದ್ಯಾರ್ಥಿಗಳು ಶಿಕ್ಷಕರನ್ನು ಮೌಲ್ಯಗಳ ಮಾದರಿಯನ್ನಾಗಿ ನೋಡ ಬಯಸುವುದು ಸಹಜ. ಇನ್ನೊಂದು ಭಾವನೆ ಇದೆ. ಇಲ್ಲಿಯವರೆಗೆ ಶಿಕ್ಷಣ ಶಿಕ್ಷಕರ ಕೇಂದ್ರೀಕೃತವಾಗಿತ್ತು. ಇದು ವಿದ್ಯಾರ್ಥಿ ಕೇಂದ್ರೀಕೃತವಾಗಬೇಕು ಎಂದು. ನನ್ನ ಪ್ರಕಾರ ಶಿಕ್ಷಣ, ಶಿಕ್ಷಕ ಅಥವಾ ವಿದ್ಯಾರ್ಥಿ ಕೇಂದ್ರೀಕೃತ ಅನ್ನೋದಕ್ಕಿಂತ ಜ್ಞಾನ ಕೇಂದ್ರೀಕೃತವಾಗಿತ್ತು. ಅದು ಹಾಗೆ ಇರಬೇಕು. ವಿದ್ಯಾರ್ಥಿಗಳು ಕೇಂದ್ರ ಬಿಂದು ಎನ್ನುವುದನ್ನು ಒಪ್ಪಿಕೊಳ್ಳೋಣ. 'ಗುರು ಜ್ಞಾನದ ಮೂಲ' ವಿಚಾರದಲ್ಲಿ ಬದಲಾವಣೆ ಮಾಡಿಕೊಳ್ಳುವ ಅಗತ್ಯ ಇದೆ. ಇದು ನಮ್ಮ ಮೂಲ ಪರಂಪರೆಯ ಸತ್ಯ ಇರಬಹುದು. ಆದರೆ ಶಿಕ್ಷಕ ವೃತ್ತಿಯ ಮೌಲ್ಯಗಳ ಸ್ಪಷ್ಟೀಕರಣ ದೃಷ್ಟಿಯಿಂದ ಇಂದು ಶಿಕ್ಷಕ ಒಬ್ಬ ಪ್ರಶಿಕ್ಷಕ ಎನ್ನುವುದು ಹೆಚ್ಚು ಸೂಕ್ತ. ಇನ್ನೊಂದು ವಿಚಾರ ಎಂದರೆ ಶಿಕ್ಷಣ ಕೇವಲ ಜ್ಞಾನ ಸಂಪಾದನೆಗೆ, ಆರೋಗ್ಯವಂತ ಸಮಾಜದ ನಿರ್ಮಾಣಕ್ಕೆ ಸೀಮಿತ ಎನ್ನುವ ನಿಲುವು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಜ್ಞಾನದ ಜೊತೆಗೆ ವೃತ್ತಿ, ಉದ್ಯೋಗ ಸಂಪಾದನೆ ಮುಂತಾದ ಆರ್ಥಿಕ ನಿಲುವುಗಳಿಂದ ಹೊರತಾಗಿಲ್ಲ ಎನ್ನುವ ಬಲವಾದ ವಾದ ಹುಟ್ಟಿಕೊಳ್ಳುತ್ತಿದೆ. ವೃತ್ತಿ ಶಿಕ್ಷಣದ ಅಬ್ಬರ ನೋಡಿದರೆ, ಸಾಮಾನ್ಯ ಶಿಕ್ಷಣವನ್ನು ವೃತ್ತಿ ಶಿಕ್ಷಣವನ್ನಾಗಿ ಪರಿವರ್ತಿಸಿದರೆ ಹೆಚ್ಚು ಉಪಯುಕ್ತ ಎಂದೆನಿಸುತ್ತದೆ. ಅಂದರೆ ಕೌಶಲ್ಯಗಳನ್ನು ಹೆಚ್ಚಿಸುವ ಅಗತ್ಯ ಇದೆ. ಈ ದೃಷ್ಟಿಯಿಂದಲೂ ಶಿಕ್ಷಕರ ಪಾತ್ರ ದೊಡ್ಡದಾಗುತ್ತದೆ.



ಶಿಕ್ಷಕರನ್ನು ನಿರಂತರ ವಿದ್ಯಾರ್ಥಿಗಳು ಎಂದು ಕರೆದಿದ್ದಾರೆ. ನಿರಂತರ ಅಧ್ಯಯನ, ಅಧ್ಯಾಪನ ಮತ್ತು ಸಂಶೋಧನೆ ಶಿಕ್ಷಕರ ವೃತ್ತಿ. ಶಿಕ್ಷಕ ವಿದ್ಯಾರ್ಜನೆ ನಿಲ್ಲಿಸಿದಲ್ಲಿ ನಾವು ಬರ್ನಾರ್ಡ್ ಷಾ ಮತ್ತು ಆಸ್ಕರ್ ವೈಲ್ಡ್ ಶಿಕ್ಷಕರ ಬಗ್ಗೆ ಹೇಳಿರುವ ಅಭಿಪ್ರಾಯಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಎಲ್ಲಾ ಶಿಕ್ಷಕರು ಯೋಗ್ಯರಲ್ಲದಿರಬಹುದು. ಶಾಲಾ, ಕಾಲೇಜುಗಳಲ್ಲಿ ನಡೆಯುತ್ತಿರುವ ಹಲವು ವಿದ್ಯಮಾನಗಳು ಶಿಕ್ಷಕರಿಗೆ ಶೋಭೆ ತರುವಂತದಲ್ಲ. ಹಾಗೆಂದು ಇಡೀ ಶಿಕ್ಷಕ ಸಮುದಾಯವನ್ನೇ ದೂಷಿಸಿ ಅವರ ಮನೋಬಲವನ್ನು ಕುಗ್ಗಿಸುವ ಕೆಲಸವೂ ತರವಲ್ಲ. ಶಿಕ್ಷಕರು ಆತ್ಮಶೋಧನೆ ಮಾಡಿಕೊಳ್ಳಬೇಕು. ದಕ್ಷತೆ, ಯೋಗ್ಯತೆ ಇಲ್ಲದ ಸಾಮಾನ್ಯ ಗುಣಮಟ್ಟದ ಶಿಕ್ಷಕರನ್ನು ವಿದ್ಯಾರ್ಥಿಗಳು ಸಹಿಸುವುದಿಲ್ಲ ಎನ್ನುವ ಸಾಮಾನ್ಯ ಜ್ಞಾನ ನಮಗಿರಬೇಕು. ಕ್ರಿಯಾಶೀಲ ಶಿಕ್ಷಕ ಇನ್ನೂ ತರಗತಿಯ ನಾಯಕ, ಮೌಲ್ಯಗಳ ಪ್ರತಿಪಾದಕ ಎನ್ನುವುದು ಉತ್ಪ್ರೇಕ್ಷೆಯಲ್ಲ.

ವಿದ್ಯಾರ್ಥಿ ಶಕ್ತಿ ಎನ್ನುವುದು ಅಗಾಧವಾದದ್ದು. ಸಂಘಟನಾ ಶಕ್ತಿಯಲ್ಲಿ ವಿದ್ಯಾರ್ಥಿ ಶಕ್ತಿಯನ್ನು ಮೀರಿಸುವುದು ಸಾಧ್ಯವಿಲ್ಲ. ಸಾಮಾಜಿಕ ಹಾಗೂ ರಾಜಕೀಯವಾಗಿಯೂ ವಿದ್ಯಾರ್ಥಿ ಸಂಘಟನೆಗಳು ಕ್ರಾಂತಿಕಾರಕ ಬದಲಾವಣೆ ತಂದಿರುವ ಅನೇಕ ದೃಷ್ಟಾಂತಗಳು ನಮ್ಮೆದುರು ಇವೆ. ಪ್ರಜಾಪ್ರಭುತ್ವ ಪ್ರಕ್ರಿಯೆಗಳಲ್ಲಿ ಅವರಿಗೆ ನೇರ ಪಾತ್ರವಿರುವುದು ವಾಸ್ತವ. ಹಾಗಾಗಿ ವಿದ್ಯಾರ್ಥಿ ಸಂಘಟನೆಗಳನ್ನು ಒಡೆಯುವ ಅಥವಾ ಅವಕಾಶಗಳನ್ನು ನೀಡದಿರುವ ಕ್ರಮ ಸರಿಯಲ್ಲ. ಪ್ರಜಾಪ್ರಭುತ್ವ ಎನ್ನುವುದು ನಮಗೆ ಒಂದು ಜೀವನ ಮೌಲ್ಯ. ನಮ್ಮನ್ನು ನಾವು ಆಳುವ ವ್ಯವಸ್ಥೆಗೆ ಅವರನ್ನು ತಯಾರು ಮಾಡುವುದು ನಮ್ಮ ಕರ್ತವ್ಯ. ರಾಜಕೀಯ ವ್ಯವಸ್ಥೆ ಎನ್ನುವುದನ್ನು ನಾವೇ ರೂಪಿಸಿ ಕೊಂಡಿರುವುದರಿಂದ ವಿದ್ಯಾರ್ಥಿಗಳನ್ನು ಇದರ ವ್ಯಾಪ್ತಿಯಿಂದ ಸಂಪೂರ್ಣ ಹೊರಗಿಡುವ ಪ್ರಯತ್ನ ವ್ಯರ್ಥ ಪ್ರಯತ್ನವಾಗಬಹುದು. ಸ್ವಾತಂತ್ರ್ಯ ಚಳುವಳಿಯ ಹಿನ್ನೆಲೆಯಲ್ಲಿ ನಮ್ಮ ಅನೇಕ ಧುರೀಣರು ವಿದ್ಯಾರ್ಥಿ ಜೀವನದಲ್ಲೇ ಮಾಡಿರುವ ತ್ಯಾಗದ ಅರಿವು ಇದೆ. ವಿದ್ಯಾರ್ಥಿಗಳನ್ನು ರಾಜಕೀಯ ಸಿದ್ಧಾಂತಗಳ ಪ್ರಭಾವದಿಂದ ಹೊರತರಲು ಸಾಧ್ಯವೇ ಎನ್ನುವ ಪ್ರಶ್ನೆಗೆ ಉತ್ತರ ಕಷ್ಟ. ಆದರೆ ಕಾಲೇಜು ಆವರಣದಲ್ಲಿ ರಾಜಕೀಯ ಪಕ್ಷಗಳು ನೇರವಾಗಿ ಭಾಗವಹಿಸುವಷ್ಟು ಪ್ರಬುದ್ಧತೆ ನಮ್ಮಲ್ಲಿ ಬೆಳೆದಿದೆಯೇ ? ರಾಜಕೀಯದಲ್ಲಿ ಪ್ರಸಕ್ತ ವಿದ್ಯಮಾನಗಳನ್ನು ಗಮನಿಸಿದರೆ ವಿಷಾದವೆನಿಸುತ್ತದೆ. ಇದು ಬಹುಶಃ ಶಿಕ್ಷಣ ವ್ಯವಸ್ಥೆಯ ಸೋಲು ಎಂದರೆ ಪ್ರತಿವಾದ ಮಾಡುವುದು ಕಷ್ಟ. ರಾಜಕೀಯ ಪಕ್ಷಗಳ ನಾಯಕರಿಗೇ ಸಿದ್ಧಾಂತ, ತತ್ವ, ಮೌಲ್ಯಗಳ ಅರಿವೂ ಇಲ್ಲದಿರುವ ಈ ಕಾಲದಲ್ಲಿ ವಿದ್ಯಾರ್ಥಿ ಸಂಘಟನೆ ಚುನಾವಣೆ ನೆಪದಲ್ಲಿ ರಾಜಕೀಯ ಪಕ್ಷಗಳಿಗೆ ಅಥವಾ ಅವರ ಉಪಸಂಘಟನೆಗಳಿಗೆ ಕಾಲೇಜು ಆವರಣದಲ್ಲಿ ನೇರ ಹಸ್ತಕ್ಷೇಪಕ್ಕೆ ಅನುವುಮಾಡಿ ಹಿಂಸೆ ಮತ್ತು ಭ್ರಷ್ಟಾಚಾರದಲ್ಲಿ ನಂಬಿಕೆ ಇಟ್ಟಿರುವ ವ್ಯಕ್ತಿಗಳಿಗೆ ಅವಕಾಶ ಕೊಡಬಾರದು ಎನ್ನುವುದು ನನ್ನ ನಿಲುವು. ಇಲ್ಲಿ ದೃಢ ನಿಲುವು ಅಗತ್ಯ. ಹದಿಹರೆಯದ ವಿದ್ಯಾರ್ಥಿಗಳಲ್ಲಿ ಶಕ್ತಿ ತುಂಬಿ ತುಳುಕುತ್ತಿರುವುದು ಸ್ವಾಭಾವಿಕ. ಅವರು ಶಿಕ್ಷಕರನ್ನು ಗೌರವಿಸುತ್ತಿಲ್ಲ ಎನ್ನುವ ಭಾವನೆ ಬೇಡ. ಇಂದಿಗೂ ಸಾವಿರಾರು ವಿದ್ಯಾರ್ಥಿಗಳು ಮಾರ್ಗದರ್ಶನಕ್ಕಾಗಿ ಶಿಕ್ಷಕರತ್ತ ನೋಡುತ್ತಿದ್ದಾರೆ. ಈ ಯುವ ಶಕ್ತಿಯನ್ನು ಸರಿಯಾದ ಮಾರ್ಗದಲ್ಲಿ ತೊಡಗಿಸುವ ಪ್ರೇರೇಪಣಾ ಪಾತ್ರ ಶಿಕ್ಷಕರದ್ದು.

ಶಿಕ್ಷಣ, ಅದರಲ್ಲೂ ಉನ್ನತ ಶಿಕ್ಷಣ ರಾಷ್ಟ್ರದ ಪ್ರಗತಿಗೆ ಅತ್ಯವಶ್ಯ ಎನ್ನುವುದು ಪ್ರಶ್ನಾತೀತ. ಉನ್ನತ ಶಿಕ್ಷಣವನ್ನು ಅಲಕ್ಷಿಸಿದ ಕೆಲವು ದೇಶಗಳು ಸಾಕಷ್ಟು ನಷ್ಟ ಅನುಭವಿಸಿರುವ ಜ್ವಲಂತ ಉದಾಹರಣೆಗಳು ಇವೆ. ನಮ್ಮ ದೇಶದಲ್ಲಿ ಅತ್ಯಂತ ಗೊಂದಲಮಯವಾದ ವಿಷಯಗಳಲ್ಲಿ ಉನ್ನತ ಶಿಕ್ಷಣವೂ ಒಂದು. ರಾಷ್ಟ್ರೀಯ ಉತ್ಪನ್ನದ ಶೇಕಡ ೬ ಭಾಗವನ್ನು ಶಿಕ್ಷಣಕ್ಕೆ ಮೀಸಲಿಡಬೇಕು ಎನ್ನುವ ಸಂವಿಧಾನ ನಿರೂಪಕರ ಆಶಯಗಳನ್ನು ನಮ್ಮ ಸರಕಾರ ಮರೆತಿದೆ. ಬದಲಾಗಿ ಶಿಕ್ಷಣದ ವಿವಿಧ

ಸ್ತರಗಳನ್ನು ಉಲ್ಲೇಖಿಸುತ್ತಾ ಪ್ರಾಥಮಿಕ ಶಿಕ್ಷಣ ನಮ್ಮ ಆದ್ಯತೆ, ಉನ್ನತ ಶಿಕ್ಷಣ ಸಮಾಜದ ಜವಾಬ್ದಾರಿ ಎಂದು ತನ್ನ ಜವಾಬ್ದಾರಿಯನ್ನು ಕಳಚಿಕೊಳ್ಳುವ ವ್ಯವಸ್ಥಿತ ಪ್ರಯತ್ನ ಮಾಡುತ್ತಿದೆ. ರಾಷ್ಟ್ರೀಯ ಉತ್ಪನ್ನದ ಶೇಕಡ ೦.೭ರಷ್ಟನ್ನು ಮಾತ್ರ ಉನ್ನತ ಶಿಕ್ಷಣಕ್ಕೆ ಖರ್ಚುಮಾಡಿ, ಉನ್ನತ ಶಿಕ್ಷಣವನ್ನು ವಿದೇಶಿ ಕಂಪನಿಗಳಿಗೆ, ಖಾಸಗಿ ಕಂಪನಿಗಳಿಗೆ ಮಾರಾಟ ಮಾಡುವ ಹುನ್ನಾರ ನಡೆಯುತ್ತಿದೆ. ಇದು ಅನಿವಾರ್ಯ ಎನ್ನುವ ಭ್ರಮೆಯನ್ನು ಈಗಾಗಲೇ ಮೂಡಿಸಿರುವುದರಿಂದ ಸಾರ್ವಜನಿಕ ಪ್ರತಿಕ್ರಿಯೆಯೂ ನಾವು ನಿರೀಕ್ಷಿಸಿದ ಮಟ್ಟದಲ್ಲಿ ಸಿಗುತ್ತಿಲ್ಲ. ವೃತ್ತಿ ಶಿಕ್ಷಣದ ಅಬ್ಬರದಲ್ಲಿ ಉದ್ಯೋಗಾವಕಾಶಗಳು ಹೆಚ್ಚುತ್ತಿರುವುದು ನಿಜವಿರಬಹುದು. ಕಾಲ್ ಸೆಂಟರ್, ಬಾಹ್ಯ ಮೂಲಗಳಿಂದ ವ್ಯಾಪಾರ ನಿರ್ವಹಣೆ (ಬಿಪಿಒ) ಉದ್ಯೋಗಗಳು ಮಾನಸಿಕವಾಗಿ ಹತಾಶೆಯನ್ನು ಉಂಟುಮಾಡುವ ಅಪಾಯ ಇದೆ. ಇಲ್ಲಿ ಶೈಕ್ಷಣಿಕ ಅರ್ಹತೆಗಿಂತ ಕೌಶಲ್ಯ ಮುಖ್ಯ ಎನ್ನುವುದು ಸಾಬೀತಾಗಿದೆ. ಪದವಿ ಗಳಿಸುವ ಅವಶ್ಯಕತೆಯೂ ಇಲ್ಲ ಎಂದು ಇತ್ತೀಚಿನ ಬೆಳವಣಿಗೆಗಳಿಂದ ಕಂಡುಬರುತ್ತಿದೆ. ಕಂಪ್ಯೂಟರ್, ಭಾಷಾ ಕೌಶಲ್ಯಗಳು ಪ್ರಮುಖವಾಗಿರುವುದರಿಂದ ವೃತ್ತಿಗೆ ಬೇಕಾಗಿರುವ ಅರ್ಹತೆಗಳನ್ನು ನಮ್ಮ ಯುವಕರಲ್ಲಿ ಕಂಡುಕೊಂಡಿರುವ ಬಹುರಾಷ್ಟ್ರೀಯ ಕಂಪನಿಗಳು ಶಿಕ್ಷಣ ಕ್ಷೇತ್ರವನ್ನೂ ವ್ಯಾಪಾರಕ್ಕೆ ವಿಪುಲ ಅವಕಾಶ ಎಂದು ಸರಕಾರಕ್ಕೆ ಮನದಟ್ಟು ಮಾಡಿಕೊಡುವಲ್ಲಿ ಯಶಸ್ವಿಯಾಗಿವೆ. ಜಾಗತೀಕರಣ, ಉನ್ನತ ಶಿಕ್ಷಣ ಕ್ಷೇತ್ರದಲ್ಲಿರುವ ಅಪಾರ ವ್ಯಾಪಾರಾವಕಾಶವನ್ನು ಬಿಟ್ಟುಕೊಡಲು ತಯಾರಿಲ್ಲ.

ಇತ್ತೀಚೆಗೆ ಕೇಂದ್ರ ಸರಕಾರದ ವಾಣಿಜ್ಯ ಸಚಿವಾಲಯ, ಉನ್ನತ ಶಿಕ್ಷಣದ ಬಗ್ಗೆ ೨೪ ಪುಟಗಳ ಪ್ರಸ್ತಾವವನ್ನು ಸಾರ್ವಜನಿಕ ಚರ್ಚೆಗೆ ಬಿಡುಗಡೆ ಮಾಡಿದೆ. ಒಟ್ಟಾರೆ ಸಾರಾಂಶ ಇಷ್ಟು. ಸರಕಾರಕ್ಕೆ ಉನ್ನತ ಶಿಕ್ಷಣಕ್ಕೆ ರಾಷ್ಟ್ರೀಯ ಉತ್ಪನ್ನದ ಶೇಕಡ ಒಂದರಷ್ಟನ್ನು ಸಂಪನ್ಮೂಲದ ಕೊರತೆಯಿಂದ ವಿನಿಯೋಗಿಸಲಾಗಿಲ್ಲ. ಕಳೆದ ಕೆಲವು ವರ್ಷಗಳಿಂದ ಉನ್ನತ ಶಿಕ್ಷಣದ ಬೆಳವಣಿಗೆಗಳನ್ನು ಗಮನಿಸಿದರೆ ಕೇವಲ ಖಾಸಗಿ ವಿಶ್ವವಿದ್ಯಾನಿಲಯಗಳು, ಖಾಸಗಿ ಶಿಕ್ಷಣ ಸಂಸ್ಥೆಗಳು ಹಾಗೂ ವಿದೇಶೀ ಸಂಸ್ಥೆಗಳು ಹೆಚ್ಚು ವೇಗವಾಗಿ ಬೆಳೆಯುತ್ತಿವೆ. ಸರಕಾರೀ ಸಂಸ್ಥೆಗಳು ಹಾಗೂ ಸರಕಾರದ ಅನುದಾನಿತ ಸಂಸ್ಥೆಗಳ ಬೆಳವಣಿಗೆ ಕುಂಠಿತಗೊಳ್ಳುತ್ತಿದೆ. ಹಾಗಾಗಿ ಉನ್ನತ ಶಿಕ್ಷಣದ ಸಮಸ್ಯೆಗಳಿಗೆ ಖಾಸಗೀಕರಣ, ಗ್ಯಾಟ್ಸ್ ಮೂಲಕ ವಿದೇಶೀ ವಿ.ವಿ.ಗಳನ್ನು ಆಹ್ವಾನಿಸುವುದೊಂದೇ ಪರಿಹಾರ ಎಂದು ನಮ್ಮ ಅಧಿಕಾರಶಾಹಿವರ್ಗ ಮೇಲ್ನೋಟಕ್ಕೆ ಎಲ್ಲರೂ ಒಪ್ಪಿಕೊಳ್ಳುವ ಆದರೆ ಸತ್ಯವನ್ನು ಮರೆಮಾಚುವ ಪ್ರಾಮಾಣಿಕ ಪ್ರಯತ್ನ ಮಾಡಿರುವುದು ವಿಷಾದನೀಯ. ಇತ್ತೀಚಿನ ವರ್ಷಗಳಲ್ಲಿ ಸರಕಾರ ಉನ್ನತ ಶಿಕ್ಷಣ ದಿಂದ ವ್ಯವಸ್ಥಿತವಾಗಿ ಹೊರಬರುತ್ತಿರುವುದನ್ನು ಶಿಕ್ಷಕರು ವಿರೋಧಿಸುತ್ತಿದ್ದರೂ ಅಸಹಾಯಕರಾಗಿದ್ದಾರೆ. ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡುವ ಸರಕಾರದ ನೀತಿಗೆ ಆಕ್ಷೇಪವಿಲ್ಲ. ಇದು ಅನಿವಾರ್ಯ. ಆದರೆ ಉನ್ನತ ಶಿಕ್ಷಣವನ್ನು ಅಲಕ್ಷಿಸಿ ಸರಕಾರ ಆಲೋಚನೆ ಮಾಡಬಾರದು. ಈ ದೃಷ್ಟಿಯಿಂದ ಶಿಕ್ಷಣದ ಯಾವುದೇ ಸ್ತರಗಳನ್ನು ಅಂದರೆ ಪ್ರಾಥಮಿಕ, ಮಾಧ್ಯಮಿಕ, ಉನ್ನತ ಶಿಕ್ಷಣವನ್ನು ಬೇರೆ ಬೇರೆ ವರ್ಗಗಳನ್ನಾಗಿ ವಿಂಗಡಿಸಿ ಆದ್ಯತೆಗಳನ್ನು ನೀಡುವ ಕ್ರಮ ಸರಿಯಲ್ಲ. ಪ್ರಸಕ್ತ ೧೫-೨೩ ವಯಸ್ಸಿನ ವಿದ್ಯಾರ್ಥಿಗಳು ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಶೇಕಡ ೯-೧೦ರಷ್ಟು ಮಾತ್ರ ಇದ್ದಾರೆ ಎನ್ನುವುದನ್ನು ಅರ್ಥ ಮಾಡಿಕೊಳ್ಳಬೇಕು. ೨೦೨೦ರ ಹೊತ್ತಿಗೆ ಭಾರತ ಅಭಿವೃದ್ಧಿ ಹೊಂದಿದ ರಾಷ್ಟ್ರ ಹಾಗೂ ೨೦೫೦ರಲ್ಲಿ ಭಾರತ ವಿಶ್ವದ ಸೂಪರ್ ಪವರ್ ಎನ್ನುವ ನಮ್ಮ ರಾಷ್ಟ್ರಪತಿಗಳ ಕನಸು ನನಸಾಗಬೇಕಾದರೆ ಉನ್ನತ ಶಿಕ್ಷಣಕ್ಕೆ ಆದ್ಯತೆ ಸಿಗಲೇಬೇಕು. ಖಾಸಗೀಕರಣ ನಿಜವಾದ ಅರ್ಥದಲ್ಲಿ ಜನಸಾಮಾನ್ಯರನ್ನು ತಲುಪುತ್ತಿಲ್ಲ. ವೃತ್ತಿ ಶಿಕ್ಷಣದ ಹೆಸರಿನಲ್ಲಿ ಶಿಕ್ಷಣದ ವ್ಯಾಪಾರೀಕರಣ ನಡೆಯುತ್ತಿರುವುದನ್ನು ಅರ್ಥ ಮಾಡಿಕೊಳ್ಳದಷ್ಟು ಮೂರ್ಖ ಸಮಾಜ ನಮ್ಮದಲ್ಲ. ಬಡತನವಿರಬಹುದು, ಆದರೆ ಅಭಿವ್ಯಕ್ತಿ ಸ್ವಾತಂತ್ರ್ಯದಲ್ಲಿ, ವೈಚಾರಿಕತೆಯಲ್ಲಿ ನಮ್ಮ ಸಮಾಜ ಹಿಂದುಳಿದಿಲ್ಲ. ಸರಕಾರ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ಸಂಸ್ಥೆಗಳ ಪಾತ್ರ ಹೆಚ್ಚುತ್ತಿದೆ ಎಂದು ಹೇಳುತ್ತಿರುವುದನ್ನು ಅಲ್ಲಗಳೆಯುವಂತಿಲ್ಲ. ಆದರೆ ಈ ಶಿಕ್ಷಣ ಸಂಸ್ಥೆಗಳು ಪ್ರಮುಖವಾಗಿ ಮೆಡಿಕಲ್, ಪ್ಯಾರಾಮೆಡಿಕಲ್, ಇಂಜಿನಿಯರಿಂಗ್, ಡಿಪ್ಲೋಮಾ ಕೋರ್ಸ್‌ಗಳು, ಕಂಪ್ಯೂಟರ್ ಶಿಕ್ಷಣ, ಆಡಳಿತ ವ್ಯವಹಾರ (ಮ್ಯಾನೇಜ್‌ಮೆಂಟ್)ದಂತಹ ವೃತ್ತಿಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುತ್ತಿವೆ. ಹೈದರಾಬಾದಿನ ಲೆಕ್ಕಶಾಸ್ತ್ರ ಸಂಸ್ಥೆಯೊಂದು ವಾರ್ಷಿಕ ೧೦೦೦ ಕೋಟಿ ರೂಪಾಯಿಗಳಿಗಿಂತಲೂ ಹೆಚ್ಚಿನ ನಿರ್ವಹಣೆ ಮಾಡುತ್ತಿದೆ. ಕರ್ನಾಟಕದಲ್ಲಿ ಇಂತಹ ಅನೇಕ ಸಂಸ್ಥೆಗಳು ತಲೆ ಎತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಅಂಬಾನಿ-ಬಿರ್ಲಾರವರಂತವರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ವಿದೇಶಿ ವಿ.ವಿ.ಗಳು ತಮ್ಮ ವ್ಯವಹಾರ ಪ್ರಾರಂಭಿಸಿವೆ. ಡೀಮ್ಡ್ ವಿ.ವಿ. ಹೆಸರಿನಲ್ಲಿ ಖಾಸಗಿ ಸಂಸ್ಥೆಗಳು, ಕಂಪನಿಗಳು ಶಿಕ್ಷಣದ ಹೆಸರಿನಲ್ಲಿ ವ್ಯಾಪಾರ ಮಾಡುತ್ತಿರುವುದನ್ನು ನಿತ್ಯ ಗಮನಿಸುತ್ತಿದ್ದೇವೆ. ಈ ವ್ಯವಸ್ಥೆಗಳು, ಸೌಲಭ್ಯಗಳು ಯಾರಿಗೆ ತಲುಪುತ್ತಿವೆ? ಯಾವ ರೀತಿಯ ಶಿಕ್ಷಣ ದೊರಕುತ್ತಿದೆ? ಎಲ್ಲಾ ವರ್ಗಗಳಿಗೂ ನಿಜವಾದ ಅರ್ಥದಲ್ಲಿ ತಲುಪುತ್ತಿದೆ ಎಂದರೆ ಸರಿ ಎಂದು ಒಪ್ಪಿಕೊಳ್ಳೋಣ. ಕಾಲೇಜು ಶಿಕ್ಷಣದಲ್ಲಿ ಸರಕಾರಿ ಕಾಲೇಜುಗಳು ಹಾಗೂ ಅನುದಾನಿತ ಕಾಲೇಜುಗಳು ನಮ್ಮ ರಾಜ್ಯದಲ್ಲಿ ಶಿಕ್ಷಣ ಪಡೆಯುತ್ತಿರುವ ಶೇಕಡ ೮೦ ವಿದ್ಯಾರ್ಥಿಗಳನ್ನು ತಲುಪುತ್ತಿವೆ. ಖಾಸಗಿ ಅನುದಾನಿತ ಕಾಲೇಜುಗಳ ಸಂಖ್ಯೆ ೫೦೦ ಇದ್ದರೂ ಶೇಕಡ ೨೦ರಷ್ಟು ವಿದ್ಯಾರ್ಥಿಗಳು ಮಾತ್ರ ಇಂತಹ ಸಂಸ್ಥೆಗಳಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ಆದರೆ ವೃತ್ತಿ ಶಿಕ್ಷಣ ಕ್ಷೇತ್ರದಲ್ಲಿ ಶೇಕಡ ೮೦ರಷ್ಟು ಸಂಸ್ಥೆಗಳು ಖಾಸಗಿ ಆಡಳಿತ ಮಂಡಳಿಗಳ ಹತೋಟಿಯಲ್ಲಿವೆ. ಇಂತಹ ಸಂಸ್ಥೆಗಳ ಮೇಲೆ ಸರಕಾರಕ್ಕೆ ಯಾವ ಹಕ್ಕೂ ಇಲ್ಲ ಎನ್ನುವುದನ್ನು ಇತ್ತೀಚಿನ ಸರ್ವೋಚ್ಚ ನ್ಯಾಯಾಲಯದ ತೀರ್ಮಾನಗಳು ಸಾರುತ್ತಿವೆ. ದುಬಾರಿ ಶುಲ್ಕದ ವೆಚ್ಚವನ್ನು ಸಾಮಾನ್ಯರಿಗೆ ಭರಿಸಲು ಸಾಧ್ಯವಾಗುತ್ತಿದೆಯೇ? ಸಿಇಟಿ ಗೊಂದಲ ಇದಕ್ಕೆ ಸಾಕ್ಷಿ. ಸಾಮಾಜಿಕ ಸಂವಿಧಾನಾತ್ಮಕ ಬದ್ಧತೆಯನ್ನು ಖಾಸಗಿ ವಲಯ ತೋರಿಸಲು ಸಾಧ್ಯವಿಲ್ಲ. ಸಾಮಾಜಿಕ ಕಲ್ಯಾಣ ಮತ್ತು ಬೆಳವಣಿಗೆ ಸರಕಾರದ ಪವಿತ್ರ ಕರ್ತವ್ಯ. ಸಾಮಾನ್ಯ ಶಿಕ್ಷಣವೂ ಸಮಾಜ ಸ್ವಾಸ್ಥ್ಯ ಕಾಪಾಡಲು ಅತೀ ಅವಶ್ಯ. ಒಂದು ಸಮಾಜದ ಆರೋಗ್ಯವನ್ನು ಕೇವಲ ವೃತ್ತಿ ನಡೆಸುವುದರಿಂದ ಕಾಪಾಡಲು ಸಾಧ್ಯವಿಲ್ಲ. ಚಿಂತನೆ, ಬರಹ, ವಿಮರ್ಶೆ, ಸಾಮಾಜಿಕ ಸೇವೆ, ಅಗತ್ಯ ಸೇವೆಗಳು, ಸಂಗೀತ, ಕ್ರೀಡೆ, ಕೃಷಿ, ರಾಜಕೀಯ ಹೀಗೆ ಬಹುಶಃ ಎಲ್ಲಾ ರಂಗಗಳಲ್ಲಿಯೂ ಸಾಮಾನ್ಯ ಶಿಕ್ಷಣದ ಅವಶ್ಯಕತೆ ಇದೆ. ಅಂದರೆ ಇವರಿಗೆಲ್ಲಾ ಉದ್ಯೋಗವಿಲ್ಲ ಎಂದು ಅರ್ಥವಲ್ಲ. ವೃತ್ತಿಪರತೆ ಎಲ್ಲಾ ರಂಗದಲ್ಲಿಯೂ ಅಗತ್ಯ ಎಂದು ಒಪ್ಪಿಕೊಳ್ಳಲೇಬೇಕು. ಗುಣಮಟ್ಟದಲ್ಲಿ ರಾಜಿ ಸಾಧ್ಯವಿಲ್ಲ. ಆದರೆ ಇದು ಕೇವಲ ಖಾಸಗಿ ರಂಗದಿಂದ ಮಾತ್ರ ಸಾಧ್ಯ ಎನ್ನುವುದನ್ನು ಒಪ್ಪಲು ಸಾಧ್ಯವಿಲ್ಲ. ಇತಿಹಾಸವನ್ನು ಗಮನಿಸಿದಾಗ ಸೂಕ್ತ ಸಂದರ್ಭದಲ್ಲಿ ಸರಿಯಾದ ಕ್ರಮ ಕೈಗೊಳ್ಳದಿದ್ದರೆ ಎಂತಹ ದುರಂತಗಳು ಸಂಭವಿಸುತ್ತವೆ ಎನ್ನುವುದೂ ನಮಗೆ ಅರ್ಥವಾಗಲಾರದೇ? ಅಷ್ಟೊಂದು ಭ್ರಮಿತರಾಗಿದ್ದೇವೆಯೆ? ಸಂಪನ್ಮೂಲದ ಕೊರತೆ ಇರುವುದು ಎಲ್ಲರಿಗೂ ಗೊತ್ತಿರುವ ವಿಚಾರ. ಸರಕಾರವೇ ಎಲ್ಲಾ ಜವಾಬ್ದಾರಿಗಳನ್ನು ನಿರ್ವಹಿಸುವುದು ಸಾಧ್ಯವಿಲ್ಲ. ಸಾಮಾಜಿಕ ಸಂಸ್ಥೆಗಳು, ಸರಕಾರಿಯೇತರ ಸಂಸ್ಥೆಗಳು ಸರಕಾರದೊಂದಿಗೆ ಸಹಕರಿಸಬೇಕು. ಖಾಸಗಿ ಕಂಪನಿಗಳು ಕೂಡ ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಲೇಬೇಕು. ಈ ದೃಷ್ಟಿಯಿಂದ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ಪಾಲುದಾರಿಕೆಯನ್ನು ಒಪ್ಪಿಕೊಳ್ಳಬಹುದು. ಆದರೆ ಸರಕಾರದ ನಿಯಂತ್ರಣ ವ್ಯಾಪ್ತಿಯಿಂದ ಸಂಪೂರ್ಣ ಹೊರಗಿಡುವುದು ಸರಿಯಲ್ಲ. ಅದೇ ರೀತಿ ವಿದೇಶಿ ವಿಶ್ವವಿದ್ಯಾನಿಲಯಗಳು ಯುಜಿಸಿ ನಿಯಂತ್ರಣಕ್ಕೆ ಒಳಪಡಬೇಕು. ವಿದೇಶಿ ನೇರ ಬಂಡವಾಳ ಹೂಡಿಕೆ ಮಾರ್ಗದಲ್ಲಿ ಇಂತಹ ವಿ.ವಿ.ಗಳನ್ನು ಸ್ಥಾಪಿಸಲು ಅವಕಾಶ ನೀಡಬಾರದು. ಉದಾರೀಕರಣದ ಹೆಸರಿನಲ್ಲಿ ಒತ್ತಡಗಳಿಗೆ ಮಣಿದು ನೀತಿ ನಿರ್ಧಾರಗಳನ್ನು ಕೈಗೊಂಡರೆ ಆರ್ಥಿಕ ಹಾಗೂ ಸಾಮಾಜಿಕ ಅಸಮಾನತೆ, ಕಂದರಗಳು ದೊಡ್ಡದಾಗಿ ನಮ್ಮ ಆಶಯಗಳಿಗೆ ಕೊಡಲಿ ಏಟು ಬೀಳುವುದು ನಿಶ್ಚಿತ. ನಮ್ಮ ರಾಜಕೀಯ ವ್ಯವಸ್ಥೆ ಎಚ್ಚೆತ್ತುಕೊಳ್ಳಬೇಕು. ಕನಿಷ್ಠ ರಾಷ್ಟ್ರೀಯ ಉತ್ಪನ್ನದ ಶೇಕಡ ೧ರಷ್ಟನ್ನಾದರೂ ತಕ್ಷಣ ಉನ್ನತ ಶಿಕ್ಷಣಕ್ಕೆ ಮೀಸಲಿಡಬೇಕು. ಅದೇ ರೀತಿ ಶೇಕಡ ೬ರಷ್ಟನ್ನು ಶಿಕ್ಷಣಕ್ಕೆ ಖರ್ಚು ಮಾಡುವ ರಾಜಕೀಯ ಸಂಕಲ್ಪ ಮಾಡಬೇಕು. ಶಿಕ್ಷಕ ಶಿಕ್ಷಣದ ಅವಿಭಾಜ್ಯ ಅಂಗ. ಶಿಕ್ಷಕರ ಶೋಷಣೆಯಿಂದ ಶಿಕ್ಷಣಕ್ಕೆ ಒಳ್ಳೆಯದಾಗಲು ಸಾಧ್ಯವಿಲ್ಲ. ಪ್ರತಿಭಾವಂತರನ್ನು ಶಿಕ್ಷಕ ವೃತ್ತಿಗೆ ಆಕರ್ಷಿಸದಿದ್ದರೆ ಸಾಮಾನ್ಯ ದರ್ಜೆಯ ಶಿಕ್ಷಕ ಮಾತ್ರ ಸಿಗಲು ಸಾಧ್ಯ. ಶಿಕ್ಷಕರ ಸೇವಾ ಸೌಲಭ್ಯಗಳನ್ನು ಸಂರಕ್ಷಿಸುವಲ್ಲಿ ಹಾಗೂ ಶಿಕ್ಷಣ ಜನಸಾಮಾನ್ಯರಿಗೆ ತಲುಪುವಲ್ಲಿ ಸರಕಾರದ ಮಹತ್ವದ ಪಾತ್ರವಿದೆ. ಈ ನಿಟ್ಟಿನಲ್ಲಿ ಸಾರ್ವಜನಿಕ ಅಭಿಪ್ರಾಯಗಳು ಸರಕಾರಕ್ಕೆ ಸ್ಪಷ್ಟ ನಿರ್ದೇಶನಗಳನ್ನು ನೀಡಲು ಸಾಧ್ಯ.

ಪ್ರೊ|| ಎ. ಎಂ. ನರಹರಿ
ಅಧ್ಯಕ್ಷರು, ರಾಜ್ಯ ವಿ.ವಿ. ಹಾಗೂ ಕಾಲೇಜು ಅಧ್ಯಾಪಕ ಸಂಘಟನೆಗಳ ಒಕ್ಕೂಟ (ಫುಕ್ಟಾಕ್)
ಸಂತ ಅಲೋಶಿಯಸ್ ಕಾಲೇಜು, ಮಂಗಳೂರು

# ವಿಜ್ಞಾನೇಶ್ವರನ ಮರ್ತೂರು ಶಾಸನ : ಮೂರು ಸಂದೇಹಗಳು

ಡಾ|| ಎಂ. ಎಂ. ಕಲಬುರ್ಗಿ

ಭಾರತೀಯ ನ್ಯಾಯಶಾಸ್ತ್ರದ ಇತಿಹಾಸದಲ್ಲಿ 'ಮಿತಾಕ್ಷರ' ಗ್ರಂಥಕ್ಕೆ ಗಣ್ಯಸ್ಥಾನವಿದೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯ (೧೦೭೬-೧೧೨೬)ನ ಕಾಲಾವಧಿಯಲ್ಲಿ ಹುಟ್ಟಿದ ಇದು ಯಾಜ್ಞವಲ್ಕ್ಯಸ್ಮೃತಿಗೆ ಬರೆದ ಸಂಸ್ಕೃತ ವ್ಯಾಖ್ಯಾನವಾಗಿದೆ. ಈ ವ್ಯಾಖ್ಯಾನದ ಕರ್ತೃವಾಗಿರುವ ವಿಜ್ಞಾನೇಶ್ವರನು ಗುಲ್ಬರ್ಗಾ ಜಿಲ್ಲೆಯ ಮರ್ತೂರು ಗ್ರಾಮದವನೆಂದು ಅಲ್ಲಿಯ ಶಾಸನ (ಕ್ರಿ.ಶ. ೧೧೨೩) ತಿಳಿಸುವುದಾಗಿ ವಿದ್ವಾಂಸರ ಅಭಿಮತ. ಇದರ ಚರ್ಚೆ ಈ ಲೇಖನದ ಉದ್ದೇಶವಾಗಿದೆ.

ಡಾ|| ಪಿ. ಬಿ. ದೇಸಾಯಿಯವರು ಈ ಶಾಸನವನ್ನು ೧೯೩೨ರಲ್ಲಿ ಶೋಧಿಸಿ 'ಪ್ರಾಚೀನ ಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟಿಸಿದರು. ಆಮೇಲೆ ಡಾ|| ವಿ. ಎಸ್. ಕುಲಕರ್ಣಿ, ಶ್ರೀ ಸೀತಾರಾಮ್ ಜಾಗೀರ್‌ದಾರ್, ಡಾ|| ಜೆ. ಎಂ. ನಾಗಯ್ಯ ಮೊದಲಾದವರು ಹೆಚ್ಚಿನ ವಿವರಗಳೊಂದಿಗೆ ಲೇಖನ ಬರೆದರು. ಇದೆಲ್ಲವನ್ನು ಗಮನಿಸಿ ಜಸ್ಟಿಸ್ ಶ್ರೀ ಎಂ. ರಾಮಾ ಜೋಯಿಸ್ ಅವರು ೧೯೯೦ರಲ್ಲಿ ಮರ್ತೂರನ್ನು ಸಂದರ್ಶಿಸಿ ''ರಾಷ್ಟ್ರೀಯ ವಿಜ್ಞಾನೇಶ್ವರ ಸ್ಮಾರಕ ಭವನ ಮತ್ತು ಸಂಶೋಧನ ಕೇಂದ್ರ'' ಸ್ಥಾಪಿಸಿದರು. ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ''ವಿಜ್ಞಾನೇಶ್ವರ ಅಧ್ಯಯನ ಪೀಠ''ವೂ ಅಸ್ತಿತ್ವಕ್ಕೆ ಬಂದಿತು. ಇತ್ತೀಚೆಗೆ ಶ್ರೀ ಶ್ರೀನಿವಾಸ್ ಸಿರನೂರಕರ್ ಅವರು 'ವಿಜ್ಞಾನೇಶ್ವರ-ಮಿತಾಕ್ಷರ' ಹೆಸರಿನ ಗ್ರಂಥ ಬರೆದು ಗುಲ್ಬರ್ಗಾ ವಿಶ್ವವಿದ್ಯಾಲಯದ ಮೂಲಕ ಪ್ರಕಟಿಸಿದರು. ಈ ಎಲ್ಲ ಶೋಧ, ಬರವಣಿಗೆ, ಸ್ಮಾರಕ ನಿರ್ಮಾಣ, ಅಧ್ಯಯನ ವ್ಯವಸ್ಥೆಗಳಿಗೆ ಮೂಲ ಪ್ರೇರಣೆ ವಿಜ್ಞಾನೇಶ್ವರನ ಹೆಸರನ್ನು ಪ್ರಸ್ತಾಪಿಸುವ ಮರ್ತೂರು ಶಾಸನ. ಈಗ ಈ ಶಾಸನವನ್ನು ಪುನಃಪರಿಶೀಲಿಸಿ ೧. ಶಾಸನೋಕ್ತ ವಿಜ್ಞಾನೇಶ್ವರನು ವೈದಿಕ ಶೈವ ಬ್ರಾಹ್ಮಣನಲ್ಲ, ಆಗಮಿಕ ಶೈವಬ್ರಾಹ್ಮಣ, ೨. ಶಾಸನೋಕ್ತ ವಿಜ್ಞಾನೇಶ್ವರನು ಮಿತಾಕ್ಷರದ ವಿಜ್ಞಾನೇಶ್ವರನಲ್ಲ, ಮತ್ತು ೩. ಶಾಸನೋಕ್ತ ವಿಜ್ಞಾನೇಶ್ವರನ ಗ್ರಾಮ ಮರ್ತೂರು ಅಲ್ಲ– ಎಂಬ ಸಂದೇಹಗಳನ್ನು ಇಲ್ಲಿ ಮಂಡಿಸಬಹುದಾಗಿದೆ.

**ಶಾಸನೋಕ್ತ ವಿಜ್ಞಾನೇಶ್ವರನು ವೈದಿಕ ಶೈವಬ್ರಾಹ್ಮಣನಲ್ಲ, ಆಗಮಿಕ ಶೈವಬ್ರಾಹ್ಮಣ**

ಕರ್ನಾಟಕದ ಸಂದರ್ಭದಲ್ಲಿ ಬ್ರಾಹ್ಮಣ ಎಂದಾಕ್ಷಣ ಎಲ್ಲ ವಿದ್ವಾಂಸರು ವೈದಿಕ ಪರಂಪರೆಯ ಶಂಕರನ ಅದ್ವೈತ, ರಾಮಾನುಜನ ವಿಶಿಷ್ಟಾದ್ವೈತ, ಮಧ್ವಾಚಾರ್ಯನ ದ್ವೈತಗಳನ್ನು ಮಾತ್ರ ನೆನಪಿಸಿಕೊಳ್ಳುತ್ತಾರೆ. ಇವರಲ್ಲಿ ಅದ್ವೈತವು ಶಿವಪರ, ವಿಶಿಷ್ಟಾದ್ವೈತ, ದ್ವೈತಗಳು ವಿಷ್ಣುಪರ. ಮರ್ತೂರು ಶಾಸನವು ಶಿವಸ್ತುತಿಯೊಂದಿಗೆ ಆರಂಭವಾಗಿ ಅಲ್ಲಲ್ಲಿ ಶೈವ ವಾತಾವರಣವನ್ನು ಪ್ರಕಟಿಸುವುದರಿಂದ, ಇಲ್ಲಿಯ ವಿಜ್ಞಾನೇಶ್ವರನು ಶಂಕರನ ವೈದಿಕ ಶೈವ ಬ್ರಾಹ್ಮಣನೆಂದು ವಿದ್ವಾಂಸರು ಭಾವಿಸಿದಂತಿದೆ, ಭಾವಿಸಿದ್ದಾರೆ. ಆದರೆ ಶಾಸನದ ಆಂತರಿಕ ಆಧಾರಗಳಿಂದ ಇವನು ಆಗಮಿಕ ಶೈವ ಬ್ರಾಹ್ಮಣನೆಂದು ಹೀಗೆ ವಿವರಿಸಬಹುದಾಗಿದೆ :



೧. ಪ್ರಾಚೀನ ಕರ್ನಾಟಕದಲ್ಲಿ ವೈದಿಕ ಶೈವಬ್ರಾಹ್ಮಣದಂತೆ ಆಗಮಿಕ ಶೈವಬ್ರಾಹ್ಮಣವು ಅಸ್ತಿತ್ವದಲ್ಲಿದ್ದಿತು. ಬಸವಣ್ಣನ ತಂದೆ ಮಂಡಗೆಯ ಮಾದಿರಾಜ, ಕವಿ ಹರಿಹರ ಮೊದಲಾದವರು ಈ ಆಗಮಿಕ ಶೈವಬ್ರಾಹ್ಮಣರು. ಇವರಿಗೆ ಶುದ್ಧ ಶೈವ ಬ್ರಾಹ್ಮಣರೆಂದು ಕರೆಯುತ್ತಿದ್ದರು. ಮಹೇಶ್ವರ (ಶಿವ)ನ ಅನುಯಾಯಿಗಳಾದುದರಿಂದ ಈ ಸಮಾಜದವರಿಗೆ ಮಾಹೇಶ್ವರರೆಂಬುದು ಪರ್ಯಾಯನಾಮವಾಗಿದ್ದಿತು. ಮರ್ತೂರು ಶಾಸನವು ಈ ಆಗಮಿಕ ಬ್ರಾಹ್ಮಣಕ್ಕೆ ಸಂಬಂಧಿಸಿದುದೆಂಬುದನ್ನು ಅದರ ಆರಂಭದ ಸ್ತುತಿಪದ್ಯ ಹೀಗೆ ಸ್ಪಷ್ಟಪಡಿಸುತ್ತದೆ :

*ಶ್ರೀಯಂ ಶ್ರೀಪದ್ಮನಾಭಂಗಖಿಳ ಭುವನಸ್ತುತೆಯಾಗಿಳ್ದ ವಾಣಿ*<br>
*ಶ್ರೀಯಂ ಶ್ರೀಪದ್ಮ ಗರ್ಭಂಗಮರ ಪರಿವ್ರಿಢಶ್ರೀಯನಿಂದ್ರಂಗೆ, ವೀರ*<br>
*ಶ್ರೀಯಂ ಶ್ರೀನಂದಿಕೇಶ ಪ್ರಮಥ ಸಮಿತಿಗೀಶಾಂಘ್ರಿ ಪಂಕೇಜಭಕ್ತಿ*<br>
*ಶ್ರೀಯಂ ಮಾಹೇಶ್ವರರ್ಗ್ಗಿತ್ತನುಪಮನೆಸೆದಂ ಪಾರ್ವ್ವತೀಶಂ ಮಹೇಶಂ ||*

ಶಿವನು ವೈದಿಕ ಶೈವ-ಆಗಮಿಕ ಶೈವಗಳೆರಡಕ್ಕೂ ಆರಾಧ್ಯನಾಗಿದ್ದರೂ, ಇಲ್ಲಿಯ 'ನಂದಿಕೇಶ ಪ್ರಮಥ ಸಮಿತಿ', 'ಮಾಹೇಶ್ವರರ್' ಪದಗಳು ಆಗಮಿಕ ಶೈವ ಪರಿಭಾಷೆಗಳಾಗಿವೆ. ಶಿವನ ಕೈಲಾಸದಲ್ಲಿ ನಂದಿಕೇಶ, ಭೃಂಗಿ ಮೊದಲಾದ ಪ್ರಮಥ ಗಣಗಳ ಪರಿಕಲ್ಪನೆ ಆಗಮಿಕ ಶೈವದಲ್ಲಿದೆಯೇ ಹೊರತು ವೈದಿಕ ಶೈವದಲ್ಲಿಲ್ಲ. 'ಅಂಘ್ರಿ ಪಂಕೇಜಭಕ್ತಿ ಶ್ರೀಯಂ ಮಾಹೇಶ್ವರರ್ಗೆ' ಶಿವನು ದಯಪಾಲಿಸಲೆಂಬ ಇಲ್ಲಿಯ ಹೇಳಿಕೆ 'ಮಾಹೇಶ್ವರ' ಹೆಸರಿನ ಜನವರ್ಗವನ್ನು ಅಂದರೆ ಆಗಮಿಕ ಶೈವಮಾರ್ಗಾನುಯಾಯಿಗಳನ್ನು ಸೂಚಿಸುತ್ತದೆ. ಒಟ್ಟಾರೆ ಆರಂಭದ ಸ್ತುತಿಪದ್ಯದಿಂದಲೇ ಇದು ಆಗಮಿಕ ಶೈವಶಾಸನವೆಂದು ಹೇಳಬಹುದಾಗಿದೆ.

> ಮಾನ್ಯ ಪ್ರೊ|| ಕಲಬುರ್ಗಿಯವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಈ ವರ್ಷದ ಪುರಸ್ಕಾರವನ್ನು ಪಡೆದಿದ್ದಾರೆ. ಅವರ ಸಂಶೋಧನಾ ಗ್ರಂಥಗಳಿಗೆ ಸಂದಿರುವ ಈ ಗೌರವವನ್ನು ಸ್ವಾಗತಿಸುತ್ತಾ 'ಹೊಸತು' ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

೨. ಈ ಶಾಸನೋಕ್ತ ವಿಜ್ಞಾನೇಶ್ವರನ ಕುಟುಂಬದ ನಾಮಗಳು ವೈದಿಕ ಶೈವ ಬ್ರಾಹ್ಮಣರ ನಾಮಗಳಂತಿರದೆ, ಆಗಮಿಕ ಶೈವ ಬ್ರಾಹ್ಮಣರ ನಾಮಗಳಂತಿವೆ. ಉದಾ :

ಸೋಮ (= ಸೋಮರಾಜ) + ಭಾಗ್ಯವತಿ<br>
|<br>
ಕಂಚ (= ವಿಜ್ಞಾನೇಶ್ವರ) + ಕೇತಿಕಬ್ಬೆ<br>
|<br>
ಕಾಮದೇವ   ಸೋಮ   ಮಾರಸಿಂಗ   ಬೇಜಿರಾಜ + ಚಾಮಲದೇವಿ

ವೈದಿಕ ಬ್ರಾಹ್ಮಣರಲ್ಲಿ ಕಂಚ, ಮಾರಸಿಂಗ, ಬೇಚ, ಕೇತಿಕಬ್ಬೆ – ಇಂಥ ಹೆಸರುಗಳು ಕಾಣಸಿಗುವುದಿಲ್ಲವೆಂದೇ ಹೇಳಬೇಕು.

೩. ಅಟ್ಟಳೆ ನಾಡಿನ ಮಾಸೆಯಮಡು ಗ್ರಾಮದ ಈ ಮನೆತನಕ್ಕೆ ಸಂಬಂಧಿಸಿದ ಬೇಚಿ ರಾಜನು, ಅಲಂದೆ ಸಾಸಿರದ ಗೊಂಕನಾಡಿನ ಮರಿತೂರಿನಲ್ಲಿ ಮಹಾದೇವ, ಕೇಶವದೇವ ಹೆಸರಿನ ದೇವಾಲಯ ಕಟ್ಟಿಸಿದ್ದನು. ಈ ದೇವಾಲಯಗಳಿಗೂ, ಬಿಬ್ಬೇಶ್ವರ, ಸೂರ್ಯ ನಾರಾಯಣ ದೇವಾಲಯಗಳಿಗೂ ಅಲಂದೆವೆಡಂಗ ಬಿರುದಿನ ಗೊಂಕರಾಜ, ಬಿಬ್ಬರಾಜ ಮತ್ತು ಗ್ರಾಮಸ್ಥರು ದಾನ ನೀಡಿದರೆಂದು ಈ ಶಾಸನ ತಿಳಿಸುತ್ತದೆ. ಈ ಶಾಸನದ ಒಳ ವಿವರಗಳಲ್ಲಿ ಆಗಮಿಕ ಶೈವ ವಾತಾವರಣವಿದೆಯೇ ಹೊರತು ವೈದಿಕ ಶೈವ ವಾತಾವರಣವಿಲ್ಲ. ಕೇಶವ ದೇವರ ಉಲ್ಲೇಖ ಒಂದಿಷ್ಟು ಸಂದೇಹ ಹುಟ್ಟಿಸುತ್ತಿದ್ದರೂ, ಆಗಮಿಕ ಶೈವರು ಕೇಶವ ದೇವಾಲಯಕ್ಕೆ ನಡೆದುಕೊಳ್ಳುತ್ತಿದ್ದರೆಂದು ಕುರಬೆಟ್ಟ ಮೊದಲಾದ ಗ್ರಾಮಗಳ ಶಾಸನ ತಿಳಿಸುವುದನ್ನು ಇಲ್ಲಿ ನೆನೆಯಬಹುದು. ವೈದಿಕ ಬ್ರಾಹ್ಮಣರ 'ಅಗ್ರಹಾರ' ಇತ್ಯಾದಿ ವ್ಯವಸ್ಥೆಗಳೂ 'ಮಹಾಜನ' ಇತ್ಯಾದಿ ಪರಿ ಭಾಷೆಗಳೂ ಇಲ್ಲಿ ತಪ್ಪಿಯೂ ಕಂಡು ಬರುವುದಿಲ್ಲ.

ಈ ಮೂರು ಆಧಾರಗಳಿಂದ ಶಾಸನೋಕ್ತ ಈ ಮನೆತನ ವೈದಿಕ ಶೈವ

ಬ್ರಾಹ್ಮಣವಲ್ಲ, ಆಗಮಿಕ ಶೈವಬ್ರಾಹ್ಮಣವೆಂದು ಹೇಳಲು ಮನಸ್ಸಾಗುತ್ತದೆ.

**ಶಾಸನೋಕ್ತ ವಿಜ್ಞಾನೇಶ್ವರನು 'ಮಿತಾಕ್ಷರ'ದ ವಿಜ್ಞಾನೇಶ್ವರನಲ್ಲ**

೧. ಶಾಸನದಲ್ಲಿ ತಂದೆ ಸೋಮರಾಜನನ್ನು 'ಪೊಣರ್ದರ್ತ್ಯುಗ್ರಾರಿ ಘನಸಮೀರ ಮುದಗ್ರ ಯಶಂ ಸೋಮರಾಜನೂರ್ಜ್ಜಿತ ತೇಜಂ' ಎಂದೂ, ಮಗ ಕಂಚ (ವಿಜ್ಞಾನೇಶ್ವರ)ನನ್ನು ''ಉಜ್ವಳ ಯಶೋನಿಧಿ ಕಂಚನತರ್ಕ್ಯ ವಿಕ್ರಮಂ'' ಎಂದೂ, ಕಂಚನ (ವಿಜ್ಞಾನೇಶ್ವರನ) ನಾಲ್ಕು ಜನ ಮಕ್ಕಳನ್ನು ''ಅನತಾರಾತಿಯನಿಕ್ಕಲುಂ, ಮರೆಗೆವಂದಿರ್ದ್ದಾತನಂ ಕಾಯಲುಂ'' ಸಮರ್ಥರೆಂದೂ ವರ್ಣಿಸಲಾಗಿದೆ. ಸಾಲು ೧೨ರಿಂದ ೧೯ರವರೆಗೆ ಈ ನಾಲ್ವರ ಶೌರ್ಯ ಔದಾರ್ಯಗಳು ಚಿತ್ರಿತವಾಗಿವೆ. ಮರ್ತೂರಿನಲ್ಲಿ ದೇವಾಲಯ ನಿರ್ಮಿಸಿದ್ದ ನಾಲ್ಕನೆಯ ಮಗ ಬೀಚನಂತೂ ಸಾಲು ೨೯ರಿಂದ ೩೮ರವರೆಗೆ ತುಂಬ ವೈಭವದಿಂದ ವರ್ಣಿತನಾಗಿದ್ದಾನೆ. ಈ ವರ್ಣನೆಯನ್ನು ನೋಡಿದರೆ ಈ ಮೂರೂ ತಲೆಮಾರಿನವರು ರಾಜ್ಯಾಡಳಿತದ ಮುಖ್ಯ ಭಾಗವಾಗಿದ್ದರೆನಿಸುತ್ತದೆ. ನಾಲ್ವರಲ್ಲಿ ಬೀಚ ಮತ್ತು ಸೋಮರನ್ನು ಪೆರ್ಗ್ಗಡೆಯೆಂದು ಕರೆಯಲಾಗಿದೆ. ಇದಕ್ಕೆ ಪಿರಿಯ ಗಾವುಂಡ – ಪಿರಿಯ ಗೌಡ ಎಂಬ ಸಾಮಾನ್ಯ ಅರ್ಥವಿದ್ದರೂ, ಶಾಸನೋಕ್ತ ವರ್ಣನೆ ಇವರು ಇನ್ನೂ ದೊಡ್ಡ ಸ್ಥಾನವನ್ನಲಂಕರಿಸಿರಬಹುದೆಂದು ತಿಳಿಸುತ್ತದೆ. ಪರಿಷತ್ತಿನ ನಿಘಂಟುವಿನಲ್ಲಿ ಪೆರ್ಗ್ಗಡೆ ಶಬ್ದಕ್ಕೆ ರಾಯಭಾರಿ, ದೂತ, ಮಂತ್ರಿ, ಪ್ರಧಾನಿ ಇತ್ಯಾದಿ ಅರ್ಥಗಳಿವೆ. ಸೋಮದೇವ ಸೂರಿಯ ನೀತಿಕಾವ್ಯಾಮೃತದಲ್ಲಿ ಸಚಿವ ಪದಕ್ಕೆ ಪೆರ್ಗಡೆ ಅರ್ಥ ಹೇಳಲಾಗಿದೆ (೧೦-೯). ಇದೆಲ್ಲವನ್ನು ಮನದಂದರೆ ಈ ಎಲ್ಲ ತಲೆಮಾರಿನವರು ಸಾಮಾನ್ಯ ಪೆರ್ಗಡೆಗಳಾಗಿರದೆ, ಅತಿಮುಖ್ಯ ರಾಜಕೀಯ ವ್ಯಕ್ತಿಗಳಾಗಿರಬಹುದೆನಿಸುತ್ತದೆ. 'ಮಿತಾಕ್ಷರ' ಕೃತಿಯಲ್ಲಿ ವಿಜ್ಞಾನೇಶ್ವರನ ಬಗ್ಗೆ ಈ ಯಾವ ರಾಜಕೀಯ ಸೂಚನೆಗಳು ಕಂಡುಬರುವುದಿಲ್ಲವಾಗಿ ಇಬ್ಬರೂ ಭಿನ್ನವ್ಯಕ್ತಿಗಳೆಂಬ ಅನುಮಾನ ಮೂಡುತ್ತದೆ.

೨. ಈ ರಾಜಕೀಯ ವಿಚಾರಗಳನ್ನು ಬಿಟ್ಟರೂ ಶಾಸನದಲ್ಲಿ ವಿಜ್ಞಾನೇಶ್ವರನು ''ಅರಿಮಕುಟ ತಾಡಿತ ಚರಣನೆನಲು ನೆಗಳ್ದ ವಿಕ್ರಮಾದಿತ್ಯನ ರತ್ನೋತ್ತರ ನಿಚಿತ ಮಕುಟತಾಡಿತ ಚರಣಂ ವಿಜ್ಞಾನೇಶ್ವರದೇವರ್'', ''ನೀರಜಭವ ನಿಭರುದಿತ ಗಭೀರರ್ ವಿಜ್ಞಾನದೇವರ್', ''ಕೌಶಿಕಗೋತ್ರಲಲಾಮಂ ಅಂಬುಜೋದ್ಭವ ಕುಲದೀಪಂ ಬುಧನಿಕಾಯ ವಿಪತ್ತಿ ತಿಮಿರಾರಿ ಪಾರ್ವತೀಧವ ಪಾದಪಂಕಭಜ್ರಮರಂ ಇಷ್ಟ ವಿಶಿಷ್ಟ ಜನಾಳಿನೇತ್ರಕೈರವವನ ಚಂದ್ರಂ ಉಜ್ವಳಯಶೋನಿಧಿ ಕಂಚಂ (=ವಿಜ್ಞಾನೇಶ್ವರ) ಅತರ್ಕ್ಯ ವಿಕ್ರಮಂ'', ''ಸ್ವಸ್ತಿ ಯಮ ನಿಯಮಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ಸಮಾಧಿಶೀಲಸಂಪನ್ನರುಂ ಶ್ರೀಮತ್ ತ್ರಿಭುವನಮಲ್ಲ ದೇವರ ಪರಮಾರಾಧ್ಯರುಮಪ್ಪ ಶ್ರೀಮತ್ ವಿಜ್ಞಾನೇಶ್ವರದೇವರು'' ಎಂದು ವರ್ಣಿತನಾಗಿದ್ದಾನೆ.

ಈಗ 'ಮಿತಾಕ್ಷರ'ದಲ್ಲಿ ವಿಜ್ಞಾನೇಶ್ವರನು ತನ್ನ ಬಗ್ಗೆ ನೀಡುವ ವಿವರಗಳನ್ನು ಗಮನಿಸಬಹುದಾಗಿದ್ದು, ಅವು ಹೀಗಿವೆ :

*''ಇತಿ ಶ್ರೀಪದ್ಮನಾಭಭಟ್ಟೋಪಾಧ್ಯಾಯಾತ್ಮಜಸ್ಯ ಶ್ರೀಮತ್ಪರಮಹಂಸ ಪರಿವ್ರಾಜಕ ವಿಜ್ಞಾನೇಶ್ವರ ಭಟ್ಟಾರಕಸ್ಯ ಕೃತೌ'',*

*''ಧರ್ಮಶಾಸ್ತ್ರಸ್ಯ ವಿವೃತಿರ್ವಿಜ್ಞಾನೇಶ್ವರಯೋಗಿನಃ''*

- ಪ್ರಥಮ ಅಧ್ಯಾಯದ ಅಂತ್ಯಪ್ರಶಸ್ತಿ

*''ಇತಿ ಶ್ರೀಮತ್ಪದ್ಮನಾಭಭಟ್ಟೋಪಾಧ್ಯಾಯಾತ್ಮಜಸ್ಯ ಶ್ರೀಮತ್ಪರಮ ಹಂಸಪರಿವ್ರಾಜಕಾಚಾರ್ಯ ವಿಜ್ಞಾನೇಶ್ವರ ಭಟ್ಟಾರಕಸ್ಯ ಕೃತೌ'', ''ಧರ್ಮಶಾಸ್ತ್ರಸ್ಯ ವಿವೃತಿರ್ವಿಜ್ಞಾನೇಶ್ವರಯೋಗಿನಃ''* - ದ್ವಿತೀಯ ಅಧ್ಯಾಯದ ಅಂತ್ಯಪ್ರಶಸ್ತಿ

*''ಇತಿ ಶ್ರೀ ಭಾರದ್ವಾಜ ಪದ್ಮನಾಭಭಟ್ಟೋಪಾಧ್ಯಾಯಾತ್ಮಜಸ್ಯ ಶ್ರೀಮತ್ಪರಮಹಂಸ ಪರಿವ್ರಾಜಕ ವಿಜ್ಞಾನೇಶ್ವರ ಭಟ್ಟಾರಕಸ್ಯ ಕೃತೌ ಋಜುಮಿತಾಕ್ಷರಾಯಾಂ ಯಾಜ್ಞವಲ್ಕ್ಯ ಧರ್ಮಶಾಸ್ತ್ರ ವಿವೃತೌ ಪ್ರಾಯಶ್ಚಿತ್ತಾಧ್ಯಾಯಸ್ತೃತೀಯಃ ಸಮಾಪ್ತಃ'', ''ಧರ್ಮಶಾಸ್ತ್ರಸ್ಯ ವಿವೃತಿ ವಿಜ್ಞಾನೇಶ್ವರಯೋಗಿನಃ''* - ತೃತೀಯ ಅಧ್ಯಾಯದ ಅಂತ್ಯಪ್ರಶಸ್ತಿ

ಮೂರೂ ಆಶ್ವಾಸಗಳ ಕೊನೆಗೆ ಬರುವ ಈ ಸಾಮಾನ್ಯ ಪ್ರಶಸ್ತಿಗಳನ್ನು ಬಿಟ್ಟರೂ, ಮೂರನೆಯದರ ಇನ್ನೂ ಕೊನೆಗೆ ಈ ವಿವರಗಳಿವೆ.

*ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣ ಕಲ್ಪಂ ಪುರಂ*
*ನೋ ದೃಷ್ಟಃ ಶ್ರುತ ಏವ ವಾ ಕ್ಷಿತಿಪತಿಃ ಶ್ರೀ ವಿಕ್ರಮಾರ್ಕೋಪಮಃ।*
*ವಿಜ್ಞಾನೇಶ್ವರ ಪಣ್ಡಿತೋ ನ ಭಜತೇ ಕಿಂಚಾನ್ಯದನ್ಯೋಪಮ*
*ಶ್ವಾಕಲ್ಪಂ ಸ್ಥಿರಮಸ್ತು ಕಲ್ಪ ಲತಿಕಾಕಲ್ಪಂ ತದೇತತ್ತ್ರಯಮ್ ॥ ೪ ॥*
*ಸೃಷ್ಟಾ ವಾಚಾಂ ಮಧುರ ವಪುಷಾಂ ವಿದ್ವದಾಶ್ಚರ್ಯ ಸೀಮ್ನಾಂ*
*ದಾತಾರ್ಥಿನಾಮತಿಶಯ ಜುಷಾಮರ್ಥಿ ಸಾರ್ಥಾರ್ಥನಾಯಾಃ*
*ಧ್ಯಾತಾ ಮೂರ್ತೇಃ ಮುರವಿಜಯಿನೋ ಜೇವಿತಾದಾರ್ಕಚಂದ್ರಂ*
*ಜೇತಾರೀಣಾಂ ತನುಸಹಭುವಾಂ ತತ್ತ್ವ ವಿಜ್ಞಾನನಾಥಃ ॥ ೫ ॥*
*ಆಸೇತೋಃ ಕೀರ್ತಿರಾಶೇಃ ರಘುಕುಲತಿಲಕಸ್ಯಾ ಚ ಶೈಲಾಧಿರಾಜಾ*
*ದಾಚಪ್ರತ್ಯಕ್ಪಯೋದೇಃ ಚಟುಲ ತಿಮಿಕುಲೋತ್ತುಂಗ ರಿಂಗತ್ತರಂಗಾತ್*
*ಆ ಚ ಪ್ರಾಚಸ್ಸಮುದ್ರಾತ್ ನತ ನೃಪತಿಶಿರೋರತ್ನಭಾ ಭಾಸುರಾಂಘ್ರಿಃ*
*ಪಾಯಾದಾಚಂದ್ರತಾರಂ ಜಗದಿದಮಖಿಲಂ ವಿಕ್ರಮಾದಿತ್ಯ ದೇವಃ ॥ ೬ ॥*
*ಅನ್ತರ್ಮುಖಾನಿ ಯದಿ ರವಾನಿ ತಪಸ್ತತಃ ಕಿಂ*
*ನಾನ್ತರ್ಮುಖಾನಿ ಯದಿ ರವಾನಿ ತಪಸ್ತತಃ ಕಿಂ*
*ಅನ್ತರ್ಬಹಿರ್ಯದಿ ಹರಿಶ್ಚ ತಪಸ್ತತಃ ಕಿಂ*
*ನಾನ್ತರ್ಬಹಿರ್ಯದಿ ಹರಿಶ್ಚ ತಪಸ್ತತಃ ಕಿಂ ॥ ೭ ॥*

(ಕಲ್ಯಾಣದಂತಹ ನಗರ ಹಿಂದೆ ಇರಲಿಲ್ಲ, ಇಂದು ಇಲ್ಲ, ಮುಂದೆ ಇರುವುದಿಲ್ಲ.
ಶ್ರೀ ವಿಕ್ರಮಾದಿತ್ಯನಿಗೆ ಸಮನಾದ ಕ್ಷಿತಿಪತಿಯನ್ನು ಕಂಡಿಲ್ಲ ಕೇಳಿಲ್ಲ.
ಇದಕ್ಕಿಂತ ಭಿನ್ನ ಉಪಮೆಯುಳ್ಳ ಯಾವುದನ್ನೂ ವಿಜ್ಞಾನೇಶ್ವರ ಪಂಡಿತ ಭಜಿಸುವುದಿಲ್ಲ.
ಕಲ್ಪವಲ್ಲಿಯಂತಹ ಈ ಮೂರೂ, ಕಲ್ಪ(ಕಾಲ)ದುದ್ದಕ್ಕೂ ಸ್ಥಿರವಾಗಿರಲಿ ॥ ೪ ॥
ವಿದ್ವಾಂಸರ ಆಶ್ಚರ್ಯದ ಸೀಮೆಯಾಗಿರುವ, ಮಧುರಕಾಯವುಳ್ಳ ಮಾತುಗಳ ಸೃಷ್ಟಿಕರ್ತನಾಗಿರುವ,
ಯಾಚಿಸುವವರಿಗೆ ಅತಿಶಯ ಸಂತೋಷಗೊಳಿಸುತ್ತ ಅರ್ಥಗಳನ್ನು ಕೊಡುವ,
ಮುರವಿಜಯಿಯ (ಮುರಾರಿಯ) ಮೂರ್ತಿಯನ್ನು ಆಚಂದ್ರಾರ್ಕ ಧ್ಯಾನಿಸುವ
ದೇಹೇಂದ್ರಿಯ ವೈರಿಗಳನ್ನು ಗೆದ್ದ, ತತ್ವಜ್ಞಾನಗಳ ಅಧಿಪತಿಯಾದ (ನಾನು) ॥ ೫ ॥
ರಘುಕುಲತಿಲಕ (ವಿಕ್ರಮಾದಿತ್ಯ)ನಿಗೆ ಆಸೇತು ಹಿಮಾಲಯದವರೆಗೆ ಕೀರ್ತಿಯನ್ನು ಹಾರೈಸುತ್ತೇನೆ.
ಪಶ್ಚಿಮ ಸಮುದ್ರದಿಂದ ತಿಮಿಂಗಿಲಗಳು ತೇವಳುವ ಉತ್ತುಂಗ ತರಂಗದಿಂದ
ಪೂರ್ವ ಸಮುದ್ರದವರೆಗಿನ ಅರಸರ ಬಾಗಿದ ಶಿರೋರತ್ನಗಳಿಂದ ಪ್ರಕಾಶಿಸುವ ಪಾದಗಳುಳ್ಳ
ವಿಕ್ರಮಾದಿತ್ಯದೇವನು ಅಖಿಲ ಜಗತ್ತನ್ನು ಆಚಂದ್ರಾರ್ಕ ಕಾಪಾಡಲಿ ॥ ೬ ॥
ಗಣಿಗಳು, ತಪಸ್ಸು ಅಂತರ್ಮುಖಿಯಾಗಿವೆ, ಅಲ್ಲವೇನು ?
ಗಣಿಗಳು, ತಪಸ್ಸು ಅಂತರ್ಮುಖಿಗಳಾಗಿಲ್ಲವಾದರೆ ಅದರಿಂದೇನು (ಫಲ) ?
ಹರಿಯು ಮತ್ತು ತಪಸ್ಸು ಒಳಗೂ ಹೊರಗೂ ಇದ್ದಾರೆ, ಅಲ್ಲವೇನು ?
ಹರಿಯು ಮತ್ತು ತಪಸ್ಸು ಒಳಹೊರಗೆ ಇಲ್ಲವಾದರೆ ಅದರಿಂದೇನು (ಫಲ) ? ॥ ೭ ॥)

ಈ ಪ್ರಶಸ್ತಿಗಳನ್ನು ಬಿಟ್ಟರೆ ಪ್ರಸ್ತುತ ಗ್ರಂಥದಲ್ಲಿ ತನ್ನ ಬಗ್ಗೆ ಬೇರೆ ವಿವರಗಳೇನನ್ನೂ ವಿಜ್ಞಾನೇಶ್ವರ ನೀಡಿಲ್ಲ. ವಿಜ್ಞಾನೇಶ್ವರನೆಂಬ ಹೆಸರು, ವಿಕ್ರಮಾದಿತ್ಯನ ಸಂಬಂಧ – ಇವುಗಳನ್ನು ಬಿಟ್ಟರೆ, ಮಿಕ್ಕಂತೆ ಶಾಸನೋಕ್ತ ಮತ್ತು ಮಿತಾಕ್ಷರೋಕ್ತ ವಿಜ್ಞಾನೇಶ್ವರರು ಭಿನ್ನರೆಂದು ಹೇಳಬಹುದಾದಷ್ಟು ಇಬ್ಬರಲ್ಲಿಯೂ ವ್ಯತ್ಯಾಸವಿದೆ. ೫೦ ವರ್ಷಗಳಷ್ಟು ದೀರ್ಘಕಾಲ ಆಳಿದ ಅರಸನೊಬ್ಬನ ಅವಧಿಯಲ್ಲಿ ಒಂದೇ ಹೆಸರಿನ ಇಬ್ಬರು ಮಹತ್ವದ ವ್ಯಕ್ತಿಗಳು ಆಗಿಹೋಗುವುದು ಅಸಂಭವವೇನಲ್ಲ. ಇದನ್ನು ಒಪ್ಪಿಕೊಂಡು ಕೆಳಗಿನ ವಿವರಣೆಯಿಂದ ಇವರಿಬ್ಬರೂ ಭಿನ್ನರೆಂದು ಹೇಳಬಹುದಾಗಿದೆ.

ಅ. ಮಿತಾಕ್ಷರದ ವಿಜ್ಞಾನೇಶ್ವರನು ಭಾರದ್ವಾಜ (ಗೋತ್ರ)ದ ಪದ್ಮನಾಭ ಭಟ್ಟೋಪಾಧ್ಯಾಯನ ಮಗ. ಶಾಸನೋಕ್ತ ವಿಜ್ಞಾನೇಶ್ವರನು ಕೌಶಿಕ ಗೋತ್ರದ ಸೋಮರಾಜನ ಮಗ. ಒಂದು ವೇಳೆ ಈ ವೈರುಧ್ಯವನ್ನು ತಪ್ಪಿಸಲು ವಿದ್ವಾಂಸರು ''ಈ ಪದ್ಮನಾಭನು ವಿಜ್ಞಾನೇಶ್ವರನ ಗುರುವಾಗಿರಬಹುದು. ತುಂಬ ಗೌರವ ಕೊಡುವ ಉದ್ದೇಶದಿಂದ ತಾನು ಈತನ ಮಗನೆಂದು (ಆತ್ಮಜ) ಹೇಳಿರಬಹುದು'' ಎಂದು ವಾದಿಸಿದರೆ, ಅದು ಸಮಸ್ಯೆಯಿಂದ ಜಾರಿಕೊಳ್ಳಲು ಮಾಡಿದ ಊಹೆ ಯೆನಿಸುತ್ತದೆ. ಮಿತಾಕ್ಷರ ಗ್ರಂಥದಲ್ಲಿಯ ಹೆಸರೇ ತಿಳಿಸುವಂತೆ ವಿಜ್ಞಾನೇಶ್ವರನ ತಂದೆ ಪದ್ಮನಾಭ ವೈಷ್ಣವ, ಶಾಸನ ಹೇಳುವಂತೆ ಸೋಮರಾಜನ ಮಗ ವಿಜ್ಞಾನೇಶ್ವರನು ಶೈವ. ಆದುದರಿಂದ ಇಬ್ಬರಲ್ಲಿಯೂ ಗುರು-ಶಿಷ್ಯ ಸಂಬಂಧ ಕಲ್ಪಿಸುವುದು ಸರಿಯೆನಿಸುವುದಿಲ್ಲ.

ಆ. ಶಾಸನದಲ್ಲಿ ವಿಜ್ಞಾನೇಶ್ವರದೇವರ್, ವಿಜ್ಞಾನೇಶ್ವರ ಭಟ್ಟಾರಕ ದೇವರ್ ಎಂದು, ಮಿತಾಕ್ಷರದಲ್ಲಿ ವಿಜ್ಞಾನೇಶ್ವರ ಭಟ್ಟಾರಕ, ವಿಜ್ಞಾನೇಶ್ವರ ಯೋಗಿ, ವಿಜ್ಞಾನೇಶ್ವರ ಪಂಡಿತ, (ತತ್ವ) ವಿಜ್ಞಾನನಾಥ ಎಂಬ ಹೆಸರುಗಳಿವೆ. ಈ ಎರಡು ಬಗೆಯ ಹೆಸರುಗಳಲ್ಲಿ ಹೋಲಿಕೆಯಿದ್ದರೂ ಮಿತಾಕ್ಷರದಲ್ಲಿಯ ಯೋಗಿ, ಪಂಡಿತ, ನಾಥ ಎಂಬ ವಿಶೇಷಣಗಳು ಶಾಸನದಲ್ಲಿ ತೋರಿಬರುವುದಿಲ್ಲ. ಶಾಸನದಲ್ಲಿ ತಪ್ಪದೇ ಕಂಡು ಬರುವ 'ದೇವರ್' ಎಂಬ ವಿಶೇಷಣ ಮಿತಾಕ್ಷರದಲ್ಲಿ ತಪ್ಪಿಯೂ ಕಂಡುಬರುವುದಿಲ್ಲ.

ಇ. ಮಿತಾಕ್ಷರದಲ್ಲಿ ಮತ್ತೆ ಮತ್ತೆ ತೋರಿಬರುವ ಶ್ರೀಮತ್ಪರಮಹಂಸ ಪರಿವ್ರಾಜಕ, ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ, ವಿಜ್ಞಾನೇಶ್ವರಯೋಗಿ ಎಂಬ ದೈವಿ

ವ್ಯಕ್ತಿತ್ವ ಸೂಚಕ ಬಿರುದುಗಳು ಶಾಸನದಲ್ಲಿ ಇಲ್ಲವೇ ಇಲ್ಲ.

ಈ. ವಿಜ್ಞಾನೇಶ್ವರನ ಪ್ರಸಿದ್ಧಿಗೆ ಕಾರಣವಾದ 'ಮಿತಾಕ್ಷರ' ಕರ್ತೃತ್ವವು, ಏನೆಲ್ಲ ಘನತೆಗಳನ್ನು ಹೇಳುವ ಶಾಸನದಲ್ಲಿ ಕಂಡುಬರದಿರುವುದು ಆಶ್ಚರ್ಯ ಹುಟ್ಟಿಸುತ್ತದೆ.

ಉ. ಶಾಸನೋಕ್ತ ವಿಜ್ಞಾನೇಶ್ವರನು ಶೈವಬ್ರಾಹ್ಮಣ. ಅದರಲ್ಲಿಯೂ ಆಗಮಿಕ ಶೈವಬ್ರಾಹ್ಮಣ. ಮಿತಾಕ್ಷರದಲ್ಲಿ ಬರುವ –

*''ಧರ್ಮಾಧರ್ಮೌ ತದ್ವಿಪಾಕಾಸ್ತ್ರಯೋಽಪಿ ಕ್ಲೇಶಾ*
*ಪಂಚಪ್ರಾಣಿನಾಮಾಯತಂತೇ ।*

*ಯಸ್ಮಿನ್ನೇತ್ರೈರ್ನೋಪರಾಮೃಷ್ಟ ಈಶೋ ಯಸ್ತಂ ವಂದೇ ವಿಷ್ಣು -*
*ಮೋಂಕಾರವಾಚ್ಯಮ್ ॥''* - ಕೃತಿ ಆರಂಭದ ಸ್ತುತಿ ಶ್ಲೋಕ

(ಧರ್ಮ, ಅಧರ್ಮಗಳ ವಿಪಾಕ (ಜಾತಿ, ಆಯುಃ, ಭೋಗ), ಪಂಚಕ್ಲೇಶ (ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ) ಗಳು ಜೀವಿಗಳಿಗೆ ಬರುತ್ತವೆ. ಇವುಗಳಿಂದ ವಿದೂರನಾದ ಒಡೆಯನಾದ ಓಂಕಾರವಾಚ್ಯ ವಿಷ್ಣುವನ್ನು ವಂದಿಸುತ್ತೇನೆ.)

*''ಧ್ಯಾತಾ ಮೂರ್ತೇರ್ಮುರವಿಜಯಿತೋ ಜೀವತಾದಾರ್ಕಚಂದ್ರಂ''*

*''ಅಂತರ್ಬಹಿರ್ಯದಿ ಹರಿಶ್ಚ ತಲಸ್ತತಃ ಕಂ ನಾಂತರ್ಬಹಿರ್ಯದಿ*
*ಹರಿಶ್ಚ ತತಸ್ತತಃ ಕಿಮ್ ।''*

- ಕೃತಿ ಅಂತ್ಯದ ಶ್ಲೋಕ

(''ಸೂರ್ಯ ಚಂದ್ರರಿರುವವರೆಗೂ (ನಾನು) ವಿಷ್ಣುವನ್ನು ಧ್ಯಾನಿಸುವವನು''

''(ಲೋಕದ) ಒಳಗೂ ಹೊರಗೂ ಕೆಳಗೂ ಹರಿ ಇದ್ದಾನೆಯೆಂದರೆ (ನಮ್ಮ) ಒಳಗೂ ಹೊರಗೂ ಕೆಳಗೂ ಅವನು ವಿಸ್ತರಿಸಿರುವನಲ್ಲವೇ ?)

ಈ ಪದ್ಯಗಳು ಗ್ರಂಥಕರ್ತೃವನ್ನು ವೈಷ್ಣವ ಬ್ರಾಹ್ಮಣನೆಂದು ಸೂಚಿಸುತ್ತವೆ. ತಂದೆಯ ಪದ್ಮನಾಭ ಭಟ್ಟೋಪಾಧ್ಯಾಯನೆಂಬ ಹೆಸರೂ ವೈಷ್ಣವ ಪರವಾಗಿರುವುದನ್ನು ಇಲ್ಲಿ ನೆನೆದರೆ, ಶೈವನಾದ ಶಾಸನೋಕ್ತ ವಿಜ್ಞಾನೇಶ್ವರನಿಂದ ಈ ವೈಷ್ಣವ ವಿಜ್ಞಾನೇಶ್ವರನು ಭಿನ್ನನೆನಿಸುತ್ತಾನೆ.

**ಶಾಸನೋಕ್ತ ವಿಜ್ಞಾನೇಶ್ವರನ ಗ್ರಾಮ ಮರ್ತೂರು ಅಲ್ಲ**

ಮರ್ತೂರು, ಇಲ್ಲಿಯ ಶಾಸನೋಕ್ತ ವಿಜ್ಞಾನೇಶ್ವರನ ಗ್ರಾಮವೇ ? ಎಂಬ ವಿಷಯವನ್ನು ಕುರಿತು ಈಗ ಚರ್ಚಿಸಬಹುದು. ಅಟ್ಟಳೆ ನಾಡಿನ ಮಾಸೆಯಮಡು ಊರಿನ ಪೆರ್ಗಡೆಯಾಗಿದ್ದ ಬೀಚರಸನು ಅಲಂದೆ ಸಾಸಿರದ ಗೊಂಕನಾಡಿನ ಮರ್ತೂರಿನಲ್ಲಿ ಕಟ್ಟಿಸಿದ ದೇವಾಲಯಕ್ಕೆ ಈ ಗೊಂಕನಾಡನ್ನು ಆಳುತ್ತಿದ್ದ ಮಂಡಳೇಶ್ವರರಾದ ಬಿಬ್ಬರಸ, ಗೊಂಕರಸರು ದಾನ ನೀಡಿದರು. ಇದು ಶಾಸನದ ವಿಷಯ. ಹೀಗೆ ಒಂದು ವಿಭಾಗದ ಆಳರಸರು ಇನ್ನೊಂದು ವಿಭಾಗದಲ್ಲಿ ದೇವಾಲಯ ಕಟ್ಟಿಸಿದುದಕ್ಕೆ, ಸ್ಥಳೀಯ ವಿಭಾಗದ ಆಳರಸರು ದಾನ ನೀಡಿದುದಕ್ಕೆ ಕರ್ನಾಟಕದಲ್ಲಿ ನೂರಾರು ಉದಾಹರಣೆಗಳಿವೆ. ವಸ್ತುಸ್ಥಿತಿ ಹೀಗಿರುವುದರಿಂದ, ಬೀಚರಸನು ಮರ್ತೂರಿನಲ್ಲಿ ದೇವಾಲಯ ಕಟ್ಟಿಸಿದ ಮಾತ್ರಕ್ಕೆ ಅದು ಅವನ ಸ್ವಗ್ರಾಮವಾಗಿರಬೇಕಿಲ್ಲ. ಇಷ್ಟೇ ಏಕೆ ಈ ಶಾಸನದಲ್ಲಿ ವ್ಯಕ್ತವಾಗಿಯೇ ''ಎನೆ ನೆಗಳ್ದ ವರನಯವೆಂತೆನೆ ಅಟ್ಟಳೆ ನಾಡೊಳೆಸೆವ ಮಾಸೆಯ ಮಡು...'' ಎಂದು ಮುಂತಾಗಿ ಹೇಳುತ್ತ, ಅವನ ಗ್ರಾಮದತ್ತ ಬೆರಳು ನೀಡಲಾಗಿದೆ. ಆದುದರಿಂದ ಮರ್ತೂರಿನಲ್ಲಿ ದೇವಾಲಯ ಕಟ್ಟಿಸಿದ ಬೀಚರಸನ ಗ್ರಾಮ, ಇದೇ ರೀತಿ ಇವನ ತಂದೆಯ ಗ್ರಾಮ ಮಾಸೆಯಮಡು ಎಂದು ಹೇಳಬಹುದು. ಹೀಗಿದ್ದೂ ಮಾಸೆಯ ಮಡು ಗ್ರಾಮದ ಬೀಚಿರಾಜ ಮರ್ತೂರಿನಲ್ಲಿ ದೇವಾಲಯ ಕಟ್ಟಿಸಿದುದನ್ನು ಗಮನಿಸಿ, ಇದೇ ಅವನ ಮತ್ತು ಅವನ ತಂದೆ ವಿಜ್ಞಾನೇಶ್ವರನ ಗ್ರಾಮವೆಂದು ವಿದ್ವಾಂಸರು ಭಾವಿಸಿದುದು ತಪ್ಪು. ಶಾಸನೋಕ್ತ ವಿಜ್ಞಾನೇಶ್ವರನೇ ಮಿತಾಕ್ಷರದ ವಿಜ್ಞಾನೇಶ್ವರನೆಂದು ಭ್ರಮಿಸಿ, ಗುಲ್ಬರ್ಗಾ ಜಿಲ್ಲೆಯ ಮರ್ತೂರಿನಲ್ಲಿ ಸ್ಮಾರಕ ನಿರ್ಮಿಸಿದುದು ಅವಸರದ ನಿರ್ಣಯ. ಒಂದು ವೇಳೆ ಇಬ್ಬರೂ ವಿಜ್ಞಾನೇಶ್ವರರು ಒಬ್ಬನೇ ಎಂದು ಸಿದ್ಧವಾದಲ್ಲಿ, ಸ್ಮಾರಕವನ್ನು ಬೀದರ ಜಿಲ್ಲೆಯ ಮಾಸೆಯಮಡುವಿನಲ್ಲಿ ನಿರ್ಮಿಸುವುದು ನ್ಯಾಯವೆನಿಸುತ್ತದೆ.

ಈ ಎಲ್ಲ ಅಂಶಗಳ ಆಧಾರದಿಂದ 'ಮಿತಾಕ್ಷರ'ದ ವಿಜ್ಞಾನೇಶ್ವರನು ಆಗಮಿಕ ಶೈವ ಬ್ರಾಹ್ಮಣನೇ ಹೊರತು ವೈದಿಕ ಶೈವಬ್ರಾಹ್ಮಣನಲ್ಲ, ಶಾಸನೋಕ್ತ ವಿಜ್ಞಾನೇಶ್ವರನು 'ಮಿತಾಕ್ಷರ'ದ ವಿಜ್ಞಾನೇಶ್ವರನಲ್ಲ, ಶಾಸನೋಕ್ತ ವಿಜ್ಞಾನೇಶ್ವರನ ಗ್ರಾಮ ಮರ್ತೂರು ಅಲ್ಲ– ಎಂದು ಹೇಳಬಹುದಾಗಿದೆ.

**ಡಾ|| ಎಂ. ಎಂ. ಕಲಬುರ್ಗಿ**
ವಿಶ್ರಾಂತ ಕುಲಪತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ,
'ಸೌಜನ್ಯ', ೯ನೇ ಅಡ್ಡರಸ್ತೆ, ಕಲ್ಯಾಣ ನಗರ, ಧಾರವಾಡ - ೫೮೦ ೦೦೭

# ಕೈಗಾರಿಕೆಗಳೂ ಸಮಾಜಮುಖಿ ಕೆಲಸ ಮಾಡಬೇಕು, ಕೇವಲ ಕಾರ್ಪೋರೇಟ್ ಗುರಿ ಮಾತ್ರವಲ್ಲ

ಅಂತರರಾಷ್ಟ್ರೀಯ ಖ್ಯಾತಿವೆತ್ತ ಅಣುವಿಜ್ಞಾನಿ, ತಂತ್ರಜ್ಞ ಡಾ|| ಎಂ. ಆರ್. ಶ್ರಿನಿವಾಸನ್‌ರವರ ಜನನ : ಜನವರಿ ೫, ೧೯೩೦. ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿನಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್‌ನಲ್ಲಿ ಪ್ರಥಮ ರ್‍ಯಾಂಕ್ ಪಡೆದು ಪದವಿ ಗಳಿಸಿದ ಶ್ರೀಯುತರು ಪ್ರಾರಂಭದಲ್ಲಿ ಭಾರತೀಯ ವಿಜ್ಞಾನ ಮಂದಿರದಲ್ಲಿ ಅಂತರ್ದಹನ ಇಂಜಿನ್ನಿನ ವಿಭಾಗದಲ್ಲಿ ಸಂಶೋಧಕರಾಗಿ ಸೇರಿದರು. ಅನಂತರ ಕೆನಡಾ ಸರ್ಕಾರದ ವಿದ್ಯಾರ್ಥಿವೇತನ ಪಡೆದು ಮಾಂಟ್ರಿಯಲ್‌ನ ಮ್ಯಾಕ್‌ಗಿಲ್ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡಿದರು. ಅಲ್ಲಿ ಸ್ನಾತಕೋತ್ತರ ಪದವಿ ಪಡೆದುದಲ್ಲದೆ ಡಾಕ್ಟೊರೇಟ್ ಪಡೆದರು. ೧೯೫೬ರಲ್ಲಿ ಭಾರತಕ್ಕೆ ಮರಳಿದ ಶ್ರೀನಿವಾಸನ್ ಪರಮಾಣು ಶಕ್ತಿ ಇಲಾಖೆಯಲ್ಲಿ ಹಿರಿಯ ಸಂಶೋಧಕರಾಗಿ ಸೇರಿದರು. ಮೊತ್ತಮೊದಲ ಸ್ಥಾವರವೆನ್ನಿಸಿದ ಅಪ್ಸರ ಸ್ಥಾಪಿಸುವಲ್ಲಿ ಇವರದು ವಿಶೇಷ ಕೊಡುಗೆ ಇದೆ. ಮುಂದೆ ೧೯೮೭-೯೦ರ ನಡುವೆ ಪರಮಾಣು ಶಕ್ತಿ ಆಯೋಗದ ಅಧ್ಯಕ್ಷರಾಗಿದ್ದುದರ ಜೊತೆಗೆ ಪರಮಾಣು ಶಕ್ತಿ ಇಲಾಖೆಯ ಕಾರ್ಯದರ್ಶಿಯ ಹುದ್ದೆಗೂ ಏರಿದರು. ಸರ್ಕಾರಿ ಕೆಲಸದಿಂದ ನಿವೃತ್ತರಾದ ನಂತರ ಅಂತರರಾಷ್ಟ್ರೀಯ ಪರಮಾಣು ಶಕ್ತಿ ಏಜೆನ್ಸಿ, ವಿಯೆನ್ನಾ. ಇಲ್ಲಿ ೧೯೯೦ರಿಂದ ೧೯೯೨ರವರೆಗೆ ಸಲಹೆಗಾರರಾಗಿದ್ದರು. ಅನಂತರ ೧೯೯೬-೯೮ರ ಅವಧಿಯಲ್ಲಿ ಯೋಜನಾ ಆಯೋಗದ ಸದಸ್ಯರಾಗಿದ್ದರು. ಡಾ|| ಶ್ರೀನಿವಾಸನ್ ಭಾರತದ ಪರಮಾಣು ಶಕ್ತಿ ಯೋಜನೆಯ ಚರಿತ್ರೆ ಕುರಿತಂತೆ 'ಫ್ರಂ ಫಿಶನ್ ಟು ಫ್ಯೂಷನ್' ಎಂಬ ಉದ್ಗ್ರಂಥವನ್ನು ಬರೆದಿದ್ದಾರೆ. ಭಾರತದ ಪರಮಾಣು ಶಕ್ತಿಯ ಪ್ರಾರಂಭಿಕ ಯೋಜನೆಯಿಂದ ತೊಡಗಿ ಭವಿಷ್ಯದಲ್ಲಿ ಭಾರತದ ಪರಮಾಣು ಯೋಜನೆಗಳು ಹೇಗಿರಬೇಕೆಂಬ ನೀಲಿನಕ್ಷೆಯನ್ನು ಅವರು ನೀಡಿದ್ದಾರೆ. ಅಪ್ಸರದಿಂದ ತೊಡಗಿ ಕೈಗಾ ಸ್ಥಾವರದವರೆಗೆ ಇವರ ತಾಂತ್ರಿಕ ನೈಪುಣ್ಯ ಕಂಡುಬರುತ್ತದೆ. ಡಾ|| ಶ್ರೀನಿವಾಸನ್ ಅವರ ತಾಂತ್ರಿಕ ಕೊಡುಗೆಗಳನ್ನು ಪುರಸ್ಕರಿಸಿ ಭಾರತ ಸರ್ಕಾರ ೧೯೯೦ರಲ್ಲಿ ಅವರಿಗೆ 'ಪದ್ಮಭೂಷಣ' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ೨೦೦೫ರಲ್ಲಿ ಭಾರತ ಮತ್ತು ಅಮೆರಿಕಾ ಪರಮಾಣು ಶಕ್ತಿ ಕುರಿತು ಮಾಡಿಕೊಂಡ ಒಪ್ಪಂದ ಕುರಿತು ನಿರ್ಭೀತರಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಕನ್ನಡಿಗ ಡಾ|| ಶ್ರೀನಿವಾಸನ್ ವಿಜ್ಞಾನವನ್ನು ಕನ್ನಡದಲ್ಲಿ ಸಂವಹಿಸಬೇಕೆಂಬ ಕಳಕಳಿ ಹೊತ್ತವರು, ವೈಜ್ಞಾನಿಕತೆ, ವೈಚಾರಿಕತೆಯನ್ನು ಹರಡಬೇಕೆಂದು ಹಂಬಲಿಸುವವರು.

## – ವಿಜ್ಞಾನಿ ಡಾ|| ಎಂ. ಆರ್. ಶ್ರೀನಿವಾಸನ್

**ಹೊಸತು** : ನಮಸ್ಕಾರ. ನೀವು ಪರಮಾಣು ಶಕ್ತಿ ಆಯೋಗದ ಮುಖ್ಯಸ್ಥರಾಗಿ, ಜೊತೆಗೆ ಪರಮಾಣು ಶಕ್ತಿ ಇಲಾಖೆಯ ಕಾರ್ಯದರ್ಶಿಯಾಗಿಯೂ ಉನ್ನತ ಹುದ್ದೆ ನಿರ್ವಹಿಸಿದ್ದೀರಿ. ಭಾರತದ ಪರಮಾಣು ಶಕ್ತಿ ಸ್ಥಾವರಗಳ ಸ್ಥಾಪನೆಯಲ್ಲಿ ಮೊದಲಿನಿಂದಲೂ ತೊಡಗಿಕೊಂಡವರು. ಇತ್ತೀಚೆಗೆ ಭಾರತ ಮತ್ತು ಅಮೆರಿಕಾಗಳ ನಡುವೆ ಈ ಕ್ಷೇತ್ರದಲ್ಲಿ ಆಗಬೇಕೆಂದಿರುವ ಒಪ್ಪಂದದ ಬಗೆಗೆ ಹಾಗೂ ಅಣುಶಕ್ತಿ ಕ್ಷೇತ್ರದಲ್ಲಿ ನಮ್ಮ ಸಾಧನೆಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ನಮ್ಮ ಓದುಗರಿಗಾಗಿ ತಿಳಿದುಕೊಳ್ಳುವುದು ನಮ್ಮ ಸಂದರ್ಶನದ ಉದ್ದೇಶ.

ಪರಮಾಣು ಶಕ್ತಿ ಇಲಾಖೆಯಲ್ಲಿ ಬಹಳಷ್ಟು ಮಂದಿ ಕರ್ನಾಟಕದವರೇ ಪ್ರಮುಖ ಸ್ಥಾನದಲ್ಲಿ ಕಂಡುಬಂದಿದ್ದಾರೆ. ಅದು ಹೇಗೆ ? ನೀವು ಎಲ್ಲರೂ ಒಟ್ಟಿಗೆ ಬಂದಿರಾ ?

ಶ್ರೀನಿವಾಸನ್ : ಹೌದು. ನನಗೂ ಇದು ಒಂದು ಕುತೂಹಲಕಾರಿ ವಿಷಯವೇ. ಆಗ ಇದು ಹೊಸ ಇಲಾಖೆ ಆಗಿತ್ತು. ರಾಜಾ ರಾಮಣ್ಣನವರು ಮೈಸೂರಿನವರೇ. ಅವರು ಬಂದರು. ಆ ಮೊದಲು ನನಗೆ ಅವರ ಪರಿಚಯ ಇರಲಿಲ್ಲ. ಆನಂತರ ವಾಸು ಅಯ್ಯ ಎನ್ನುವವರು ಬಂದರು. ಅವರು ಸೆಂಟ್ರಲ್ ಕಾಲೇಜಿನಲ್ಲಿ ಕೆಮಿಸ್ಟ್ರಿ ಅಧ್ಯಯನ ಮಾಡಿದ್ದರು. ಫ್ರಾನ್ಸ್‌ಗೆ ಹೋಗಿ ರೇಡಿಯೋ ಕೆಮಿಸ್ಟ್ರಿಯನ್ನು ವಿಶೇಷವಾಗಿ ಅಧ್ಯಯನ ಮಾಡಿ ಅದರಲ್ಲಿ ಪರಿಣತರು ಎನ್ನಿಸಿಕೊಂಡರು. ಬಿ. ವಿ. ಪಂಡಿತರ ಮಗ ಬಿ. ವಿ. ಶ್ರೀಕಂಠ ಅವರು ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರೀಸರ್ಚ್‌ನಲ್ಲಿ ಡಾ|| ಹೋಮಿ ಜೆ: ಭಾಭಾ ಅವರ ವಿದ್ಯಾರ್ಥಿಯಾಗಿದ್ದರು. ಅವರು ನಮ್ಮೆಲ್ಲರಿಗಿಂತಲೂ ಮೊದಲೇ ಸೇರಿದರು. ಆ ಕಾಲದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಫಿಸಿಕ್ಸ್, ಕೆಮಿಸ್ಟ್ರಿ ವಿಭಾಗದಲ್ಲಿ ಒಳ್ಳೆಯ ಅಧ್ಯಾಪಕರಿದ್ದರು. ಉತ್ತಮ ಪರಂಪರೆ ಇತ್ತು. ಆಮೇಲೆ ಬಿ. ಎಸ್. ಅಯ್ಯಂಗಾರ್, ಎ. ಎನ್. ಪ್ರಸಾದ್ ಇವರೆಲ್ಲ ನಮ್ಮ ಜೊತೆ ಕೂಡಿ

ಸಂದರ್ಶನಕಾರರು
ಡಾ|| ಜಿ. ರಾಮಕೃಷ್ಣ, ಕೆ. ಎಸ್. ಪಾರ್ಥಸಾರಥಿ,
ಟಿ. ಆರ್. ಅನಂತರಾಮು, ಗಿರಿಧರ ಖಾಸನೀಸ್
ಚಿತ್ರಗಳು : ಕೆ. ಪಿ. ಸ್ವಾಮಿ


ಡಾ|| ಎಂ. ಆರ್. ಶ್ರೀನಿವಾಸನ್

ಕೊಂಡರು. ಅಯ್ಯಂಗಾರ್ ನನ್ನ ಜೊತೆಯವರು, ಸಹಪಾಠಿ. ಪ್ರಸಾದ್ ನನಗಿಂತಲೂ ಚಿಕ್ಕವರು. ಇವರಲ್ಲದೆ ಬೆಂಗಳೂರು ಇಂಜಿನಿಯರಿಂಗ್ ಕಾಲೇಜಿನ ಅನೇಕರು ಈ ಇಲಾಖೆಗೆ ಸೇರಿದರು. ನೇರವಾಗಿ ಅವರೆಲ್ಲ ಟ್ರೈನಿಂಗ್ ಸ್ಕೂಲ್‌ಗೆ ಬಂದರು. ಹೆಚ್ಚಿನ ಅನುಭವಕ್ಕೆ ಆಗ ಅವರನ್ನೆಲ್ಲ ಕೆನಡಾಕ್ಕೆ ಕಳಿಸುತ್ತಾ ಇದ್ದರು. ಇವರ ಜೊತೆಗೆ ಸಾಕಷ್ಟು ಜನ ಬಿ.ಎಂ.ಎಸ್. ಇಂಜಿನಿಯರಿಂಗ್ ಕಾಲೇಜಿಂದ ಬಂದವರೂ ಇದ್ದರು.

**ಹೊ** : ಆ ಕಾಲದಲ್ಲಿ ನೀವೆಲ್ಲ ವಿದೇಶಕ್ಕೆ ಹೋಗಿ ಅಲ್ಲೇ ನೆಲೆಸೋ ಅವಕಾಶ ಇತ್ತು. ಅದನ್ನೆಲ್ಲ ಬಿಟ್ಟು ಇಲ್ಲೇ ಉಳಿದು ಕೊಂಡದ್ದು ಹೇಗೆ ?

ಶ್ರೀ : ಕೆಲವರಿಗೆ ಹಣ ಗಳಿಸೋದೇ ಮುಖ್ಯ. ಅಂತಹವರು ಈಗಿನಂತೆ ಆಗಲೂ ಇದ್ದರು. ಆದರೆ ಇಲ್ಲೇ ಒಳ್ಳೇ ಕೆಲಸ ಸಿಕ್ಕಿದರೆ, ಒಳ್ಳೇ ವಾತಾವರಣ ಇದ್ದರೆ ಎಲ್ಲೋ ಹೋಗೋದರಲ್ಲಿ ಅರ್ಥ ಇಲ್ಲ ಅಂತ ಆಗ ನಾವೆಲ್ಲ ಅಂದುಕೊಂಡಿದ್ದೆವು. ಅದರಲ್ಲೂ ಅಟಾಮಿಕ್ ಎನರ್ಜಿ ಡಿಪಾರ್ಟ್‌ಮೆಂಟ್‌ನ ಪ್ರಾರಂಭಿಕ ಹಂತದಲ್ಲಿ ಸೇರಿಕೊಂಡವರಿಗೆ ಡಾ|| ಭಾಭಾ ಅವರ ಸಖ್ಯ ಸಿಕ್ಕುತ್ತಾ ಇತ್ತು. ಅದೇ ಒಂದು ದೊಡ್ಡ ಅನುಭವ. ಹೊಸ ಹೊಸ ಯೋಜನೆಗಳನ್ನ ತಗೋಬೇಕು ಅನ್ನೋ ಉತ್ಸಾಹ ಮತ್ತು ಬದ್ಧತೆ ಎರಡೂ ಭಾಭಾ ಅವರಿಗೆ ಇತ್ತು. ಇನ್ನೊಬ್ಬರಿಗೆ ಸದಾ ಸ್ಫೂರ್ತಿ ನೀಡೋ ತರಹ ಅವರ ವ್ಯಕ್ತಿತ್ವ. ೧೯೬೬ರ ಹೊತ್ತಿಗೆ ನಾನಾಗಲೇ ಇಂಜಿನಿಯರ್ ಆಗಿ ತಾರಾಪುರದ ಯೋಜನೆಯನ್ನು ಚೆನ್ನಾಗಿ ನಿರ್ವಹಿಸಿದ್ದೆ. ಅಮೆರಿಕಾದ ಜನರಲ್ ಎಲೆಕ್ಟ್ರಿಕ್ ಕಂಪನಿ ನನಗೆ ಒಳ್ಳೆ ಕೆಲಸದ 'ಆಫರ್' ಕೂಡ ಕೊಟ್ಟಿತ್ತು. ಅದನ್ನು ಒಪ್ಪಿಕೊಂಡಿದ್ದರೆ ಇಂಡಿಯಾ ಬಿಡಬೇಕಾಗಿತ್ತು. ಅಂದರೆ ಕುಟುಂಬದಿಂದ ದೂರ ಇರೋದು ಮತ್ತೆ ವೀಸಾ – ಇವೆಲ್ಲ ತಲೆನೋವು ಅಂತ ಅನ್ನಿಸಿತು. ವಿಕ್ರಂ ಸಾರಾಭಾಯಿ ಅವರ ಜೊತೆ ಮಾತನಾಡಿದೆ. ಅವರು ಹೇಳಿದರು,



'ನೋಡು ಶ್ರೀನಿವಾಸನ್, ಇಂಡಿಯಾ ಅಲ್ಲದೆ ಬೇರೆ ಯಾವ ದೇಶ ನಿನಗೆ ದೊಡ್ಡ ದೊಡ್ಡ ಸಮಸ್ಯೆಗಳ ಸವಾಲು ನೀಡುತ್ತೆ? ಯೋಚನೆ ಮಾಡಿ ನೋಡು' ಅಂದರು. ನನಗೂ ಅವರ ಮಾತಿನಲ್ಲಿ ಸತ್ಯ ಇದೆ ಅನ್ನಿಸಿತು. ಹಾಗಾಗಿ ಇಲ್ಲೇ ಉಳಿದುಕೊಂಡೆ.

**ಹೊ** : ನೀವು ಸಾರಾಭಾಯಿ ಅವರ ಪ್ರಸ್ತಾಪ ಮಾಡಿದಿರಿ. ಅದು ಹೇಗೆ ಅವರು ತಮ್ಮ ವೃತ್ತಿಯ ದಿಕ್ಕನ್ನೆ ಬದಲಾಯಿಸಿ ಕೊಂಡರಲ್ಲ? ಏನಾದರು 'ಟೆಂಪ್ಟ್' ಆದರಾ ?

ಶ್ರೀ : ಸಾರಾಭಾಯಿ ಅವರ ವಿಷಯದಲ್ಲಿ 'ಟೆಂಪ್ಟ್' ಅನ್ನೋ ಪ್ರಶ್ನೇನೇ ಬರೋದಿಲ್ಲ. ಅವರು ಭಾಭಾ ಅವರ ಮೊದಲ ಶಿಷ್ಯರಲ್ಲೊಬ್ಬರಾಗಿದ್ದರು. ಅಟ್‌ಮಾಸ್ಫಿಯರ್ ಫಿಸಿಕ್ಸ್ ಅವರ ವಿಶೇಷವಾದ ಅಧ್ಯಯನ ಕ್ಷೇತ್ರ. ಭಾಭಾ ಅವರು ೧೯೩೯ರಲ್ಲಿ ಬೆಂಗಳೂರಿಗೆ ಬಂದರು. ಕೇಂಬ್ರಿಜ್‌ನಿಂದ ರಜೆ ಮೇಲೆ ಬಂದಿದ್ದರು. ಆಗ ಯುದ್ಧದ ಪರಿಸ್ಥಿತಿ ಇತ್ತು. ಅವರಿಗೆ ಫಿಸಿಕ್ಸ್ ಪ್ರೊಫೆಸರ್ ಹುದ್ದೆ ನಿರ್ವಹಿಸೋದಕ್ಕೆ ಆಹ್ವಾನ ಬಂತು. ಆಗ ಕಾಸ್ಮಿಕ್ ರೇ ಲ್ಯಾಬೋರೇಟರಿಯನ್ನು ಸ್ಥಾಪಿಸಬೇಕಾಗಿತ್ತು. ಆ ಹೊತ್ತಿಗೆ ಸಾರಾಭಾಯಿ ಕೂಡ ಇಲ್ಲೇ ಇದ್ದರು. ಭಾಭಾ ಅವರು ಆಗ ಅಟಾಮಿಕ್ ಕಮಿಷನ್‌ಗೆ ಹೊರತಾದ ಅಭ್ಯರ್ಥಿಗಳನ್ನು ಅಣುಕ್ಷೇತ್ರಕ್ಕೆ ತೆಗೆದುಕೊಂಡಿದ್ದು ಅದೇ ಮೊದಲು. ನಮ್ಮ ಸಂಖ್ಯೆ ತುಂಬ ಕಡಿಮೆ ಇತ್ತು. ಭಾಭಾ, ಕೃಷ್ಣನ್ ಅಲ್ಲದೆ ಪಿ. ಎನ್. ಥಾಪರ್ ಅಂತ ಹಣದ ವಹಿವಾಟು ನೋಡಿಕೊಳ್ಳುತ್ತಿದ್ದರು. ಆಮೇಲೆ ಜಗನ್ನಾಥನ್ ಅಂತ ೧೯೬೫ರಲ್ಲಿ ಸೇರಿಕೊಂಡರು. ಆ ಹೊತ್ತಿಗೆ ಅಟಾಮಿಕ್ ಎನರ್ಜಿ ಕಮಿಷನ್‌ನಲ್ಲಿ ಅಂತರಿಕ್ಷ ಕುರಿತು ಕೂಡ ಒಂದಷ್ಟು ಸಂಶೋಧನೆಗಳು ಆಗ್ತಾ ಇದ್ದವು. ವಿಶೇಷವಾಗಿ ರಾಕೆಟ್ ಒಯ್ಯುವ ಪೇ ಲೋಡ್ಸ್ ಬಗ್ಗೆ ಮತ್ತು ಕಾಸ್ಮಿಕ್ ಕಿರಣಗಳನ್ನು ಬೆಂಬತ್ತುವ ಬಗ್ಗೆ ಹೆಚ್ಚು ಗಮನವನ್ನು ಕೊಡಲಾಗುತ್ತಿತ್ತು. ಈ ಎರಡೂ ವಿಚಾರಗಳೂ ಸಾರಾಭಾಯಿ ಮತ್ತು ಭಾಭಾ ಇಬ್ಬರಿಗೂ ಪ್ರಿಯವಾಗಿದ್ದವು. ಆ ಹೊತ್ತಿಗಾಗಲೇ

ಭಾಭಾ ಅವರು ವಿಕ್ರಂ ಸಾರಾಭಾಯಿ ಅವರನ್ನು ಅಟಾಮಿಕ್ ಎನರ್ಜಿ ಕಮಿಷನ್‌ಗೆ ಕರೆಸಿಕೊಂಡಿದ್ದರು. ಸಾಮಾನ್ಯವಾಗಿ ಆಗಿನಿಂದಲೂ ಈಗಿನವರೆಗೆ ಒಂದು ಸಂಪ್ರದಾಯವಿದೆ. ಅದೇನು ಅಂದರೆ ಅಟಾಮಿಕ್ ಎನರ್ಜಿ ಕಮಿಷನ್ ಅನ್ನು ಪ್ರತಿವರ್ಷ ಪುನರ್‌ರಚಿಸೋದು. ೧೯೬೬ರ ಹೊತ್ತಿಗೆ ಭಾಭಾ ಅವರು ತೀರಿಕೊಂಡರು. ಆಗ ಉಳಿದವರು ಸಾರಾಭಾಯಿ ಒಬ್ಬರೇ. ಶ್ರೀಮತಿ ಇಂದಿರಾ ಗಾಂಧಿ ಅವರು ಶಿಕಾಗೋದಲ್ಲಿದ್ದ ಡಾ|| ಎಸ್. ಚಂದ್ರಶೇಖರ್ ಅವರ ಸೇವೆ ಬೇಕು ಅಂತ ಬಯಸಿದರು. ಆದರೆ 'ಅದು ತಮ್ಮ ಕ್ಷೇತ್ರ ಅಲ್ಲ' ಅಂತ ನಯವಾಗಿ ಚಂದ್ರಶೇಖರ್ ಅವರು ತಿರಸ್ಕರಿಸಿದರು. ಆಗ ಸಾರಾಭಾಯಿ ಅವರಿಗೆ ಸಹಜವಾಗಿಯೇ ಈ ಹುದ್ದೆ ಲಭಿಸಿತು. ಬಹುಶಃ ಸೇತ್ನಾ ಅವರನ್ನು ಪರಿಗಣಿಸಬಹುದಾಗಿತ್ತು ಅಂತ ಕಾಣಿಸುತ್ತೆ, ಆದರೆ ಇಂದಿರಾ ಗಾಂಧಿ ಅವರ ಜೊತೆ ಸಾರಾಭಾಯಿ ಅವರ ಸಂಬಂಧ ಬಹಳ ಉತ್ತಮವಾಗಿತ್ತು.

**ಹೊ** : ಕರ್ನಾಟಕ ಸರ್ಕಾರದವರು ಟಾಸ್ಕ್ ಫೋರ್ಸ್ ಕಮಿಟಿ ಅಂತ ನೇಮಿಸಿದಾಗ ಅದಕ್ಕೆ ತಾವು ಛೇರ್‌ಮನ್ ಆಗಿದ್ದಿರಿ. ಅದು ಉನ್ನತ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ಹಾಗೆ. ನಾನು (ಡಾ|| ಜಿ. ರಾಮಕೃಷ್ಣ) ಕಾಲೇಜಿನಲ್ಲಿ ಅಧ್ಯಾಪಕ ಆಗಿದ್ದು, ಹಾಗೇನೇ ಅಧ್ಯಾಪಕರ ಸಂಘದಲ್ಲೂ ಸಕ್ರಿಯವಾಗಿ ಕೆಲಸ ಮಾಡಿದವನು. ಒಂದು ವಿಚಾರ ನಾನು ಗಮನಿಸಿದ್ದೀನಿ. ನಮ್ಮ ಸೈನ್ಸ್ ಕೋರ್ಸ್‌ಗಳಿಗೆ ಹೆಚ್ಚಿಗೆ ಅಭ್ಯರ್ಥಿಗಳು ಬರ್ತಾ ಇರಲಿಲ್ಲ. ಹಾಗೂ ಹೀಗೂ ಪಿಯುಸಿ ಮಟ್ಟದಲ್ಲಿ ಫಿಸಿಕ್ಸ್, ಕೆಮಿಸ್ಟ್ರಿಗೆ ರಷ್ ಇರ್ತಾ ಇತ್ತು. ಬಿ.ಎಸ್ಸಿಗೆ ಬರಬೇಕಾದ ಎಷ್ಟೋ ಜನ ಇಂಜಿನಿಯರಿಂಗ್ ಅಂಥ ವೃತ್ತಿಪರ ಕೋರ್ಸ್‌ಗೆ ಹೋಗ್ತಾ ಇದ್ದರು. ಅದರಿಂದ ಸ್ನಾತಕೋತ್ತರ ತರಗತಿಗೆ ಆಸಕ್ತರಾದ, ನಿಜವಾಗಲೂ ಸಮರ್ಥರಾದ ವಿದ್ಯಾರ್ಥಿಗಳು ಬರ್ತಾ ಇರಲಿಲ್ಲ. ಪರಿಸ್ಥಿತಿ ಹೀಗಿದ್ದರೆ ನಾಳೆ ಎಂಥ ಅಧ್ಯಾಪಕರು ನಮಗೆ ಸಿಗ್ತಾರೆ? ನೀವು ಸಾಕಷ್ಟು ಸಂಶೋಧನೆ ಮಾಡಿದವರು. ಆ ಮಟ್ಟದ ಸಂಶೋಧನೆ ಮಾಡಬೇಕು ಅಂದರೆ ವಿಶ್ವವಿದ್ಯಾಲಯಗಳು ಅರ್ಹ ವಿದ್ಯಾರ್ಥಿಗಳನ್ನು ಕೊಡೋದಕ್ಕೂ ಶಕ್ತವಾಗಿ ಇರೋಲ್ಲ. ಈ ಬಗ್ಗೆ ನಿಮಗೆ ಏನನ್ನಿಸುತ್ತದೆ ?

**ಶ್ರೀ** : ಈಗ ಮೂಲದಲ್ಲಿ ಏನಾಗಿದೆ ಅನ್ನೋದನ್ನ ವಿಚಾರ ಮಾಡೋಣ. ನಿಮಗೂ ಗೊತ್ತು, ಎಷ್ಟೋ ಸಲ ನಮ್ಮ ಭಾರತದ ಪರಿಸ್ಥಿತಿಯಲ್ಲಿ ಮಕ್ಕಳಿಗೆ ಎಂಥ ಶಿಕ್ಷಣ ಬೇಕು ಅನ್ನೋದನ್ನ ತೀರ್ಮಾನ ಮಾಡೋರು ಪೋಷಕರು. ಪೋಷಕರು ನೋಡೋದು ಮುಂದೆ ಕೆಲಸ ಸಿಕ್ಕುತ್ತದೆಯೇ ಅನ್ನೋ ದೃಷ್ಟಿಯಿಂದ. ಆಕಾಶ ಏಕೆ ನೀಲಿಯಾಗಿದೆ ? ಆ ಹಸುರು ಗಿಡದಲ್ಲಿ ಹಳದಿ ಹೂ ಏಕೆ ಬಿಡುತ್ತೆ? ಇಂಥ ಪ್ರಶ್ನೆಗಳನ್ನು ಮಕ್ಕಳು ಕೇಳಿದರೆ, 'ಪಾಠ ಓದುಕೋ, ಸರಿಯಾಗಿ ಮಾರ್ಕ್ಸ್ ತಗೋ' ಅನ್ನೋದೇ ಅವರ ಜವಾಬು. ಕಾಮರ್ಸ್ ತಗೊಂಡರೆ ಚಾರ್ಟರ್ಡ್ ಅಕೌಂಟೆಂಟ್ ಆಗಬಹುದು ಅಥವಾ ಮ್ಯಾನೇಜ್‌ಮೆಂಟ್‌ಗೆ ಹೋಗು ಅಂತಾರೆ. ಪೋಷಕರಿಗೆ ಟೆಕ್ನಾಲಜಿ ಬಗ್ಗೆ ಆಸಕ್ತಿ ಇದ್ದರೆ, ಐ.ಐ.ಟಿ.ಗೆ ಹೋಗು ಅಂತಾರೆ. ಹೀಗಾಗಿ ಮೂಲ ವಿಜ್ಞಾನ ಓದೋರ ಸಂಖ್ಯೆ ಕಡಿಮೆ ಆಗೇ ಆಗುತ್ತೆ. ಕಳೆದ ಹತ್ತು ವರ್ಷಗಳಿಂದ ಸಾಫ್ಟ್‌ವೇರ್ ಕ್ಷೇತ್ರದ ಪರಿಣಾಮ ದೊಡ್ಡ ಪ್ರಮಾಣದಲ್ಲಿ ಬದಲಾವಣೆ ತಂದಿದೆ. ಅದರಲ್ಲೂ ನಗರವಾಸಿಗಳ ಗಮನ ತಮ್ಮ ಮಕ್ಕಳು ಸಾಫ್ಟ್‌ವೇರ್ ಇಂಜಿನಿಯರ್ಸ್ ಆಗ ಬೇಕು ಅಂತಾನೇ ಇರುತ್ತೆ. ಹಳ್ಳಿಗಳಲ್ಲಿ ಮಾತ್ರ ಅದೇ ಪರಿಸ್ಥಿತಿ ಇದೆ. ಅಲ್ಲಿ ಶಿಕ್ಷಣದಲ್ಲಿ ಗುಣಮಟ್ಟ ಯಾವತ್ತೂ ಹೆಚ್ಚಿನದಾಗಿ ಇರುವುದಿಲ್ಲ. ಅಂದರೆ ನಾನು ಹೇಳ್ತಾ ಇರೋದು ಶಾಲೆಗಳ ಹಂತಗಳಲ್ಲಿ, ನಿರುದ್ಯೋಗಿ ಆದವರು ಕೊನೆಗೆ ಆರಿಸಿಕೊಳ್ಳೋದು ಟೀಚರ್ ಕೆಲಸಾನೇ. ನೋಡಿ ವಿದೇಶದಲ್ಲಿ ಸಂಪೂರ್ಣವಾಗಿ ಬೇರೆ ಸ್ಥಿತಿ ಇದೆ. ಅಲ್ಲಿ ಅತ್ಯುತ್ತಮ ಪ್ರೊಫೆಸರ್‌ಗಳು, ನೊಬೆಲ್ ಪ್ರಶಸ್ತಿ ವಿಜೇತರು ಕೂಡ ಅಂಡರ್ ಗ್ರಾಜ್ಯುಯೇಟ್ ಕ್ಲಾಸುಗಳಿಗೆ ಪಾಠ ಹೇಳಿಕೊಡಲು ಇಷ್ಟಪಡ್ತಾರೆ. ಕೇಂಬ್ರಿಜ್ ಇರಬಹುದು, ಆಕ್ಸ್‌ಫರ್ಡ್ ಇರಬಹುದು ಅಥವಾ ಫ್ರಾನ್ಸ್ ಇರಬಹುದು. ಅಂಥವರು ಪಾಠ ಮಾಡಿದರೆ ಅದೂ ಮೊದಲನೇ ವರ್ಷದ ವಿದ್ಯಾರ್ಥಿಗಳಿಗೆ ಅಂದರೆ ನಿಜವಾಗಲೂ ಅವರಿಗೆ ಪ್ರೋತ್ಸಾಹ ಸಿಗುತ್ತೆ. ಗುರಿ ಸಾಧಿಸಬೇಕು ಅನ್ನೋ ಹುಮ್ಮಸ್ಸೂ ಸಿಗುತ್ತೆ.

ದುರದೃಷ್ಟ ಅಂದರೆ ನಮ್ಮ ದೇಶದಲ್ಲಿ ಈ ಪರಿಸ್ಥಿತಿ ಇಲ್ಲ. ಕೆಲವು ಕಡೆ ಇಂಟೆಗ್ರೇಟೆಡ್ ಕೋರ್ಸ್ ಅಂತ ಶುರು ಮಾಡಿದ್ದಾರೆ. ಜಯಂತ್ ನಾರ್ಳೀಕರ್, ವಸಂತ್ ಗೌವಾರಿಕರ್, ಗೋವಿಂದ್ ಸ್ವರೂಪ್ ಇಂತಹವರು. ಮುಖ್ಯವಾದ ಉದ್ದೇಶ ಸಂಶೋಧನೆಗೆ ಸಮರ್ಥವಾದ ವಿದ್ಯಾರ್ಥಿಗಳು ಬೇಕು ಅನ್ನೋದು. ಅವರು ಫಿಸಿಕ್ಸ್, ಕೆಮಿಸ್ಟ್ರಿನಲ್ಲಿ ಹೀಗೆ ಮಾಡಿದರು. ಹಾಗೇನೇ ಮ್ಯಾಥ್‌ಮ್ಯಾಟಿಕ್ಸ್‌ನಲ್ಲಿ ಚೆನ್ನೈ ಮ್ಯಾಥ್‌ಮ್ಯಾಟಿಕ್ಸ್ ಇನ್‌ಸ್ಟಿಟ್ಯೂಟ್ ಅಂತ ಇದೆ, ಅದನ್ನು ಪ್ರಾರಂಭಿಸಿದವರು ಶೇಷಾದ್ರಿ ಅಂತ. ಈಗ ಏನಾಗಿದೆ ಅಂದರೆ ಹೆಚ್ಚು ಕಡಿಮೆ ವಿಶ್ವವಿದ್ಯಾಲಯಗಳು ಅಂಡರ್ ಗ್ರಾಜ್ಯುಯೇಟ್ ಹಂತಕ್ಕೆ ಬೋಧಿಸುತ್ತಲೇ ಇಲ್ಲ. ಇಂಥ ಸ್ಥಿತೀಲಿ ತರುಣ ಪ್ರತಿಭಾವಂತರನ್ನು ವಿಜ್ಞಾನಕ್ಕೆ ಸೆಳೆಯೋದರಲ್ಲಿ ವಿಶ್ವವಿದ್ಯಾಲಯ ವಿಫಲವಾಗಿದೆ. ಹಳೆಯ ಕಾಲದಲ್ಲಿ ಅಂದರೆ ಶಿಕ್ಷಣಕ್ಷೇತ್ರಕ್ಕೆ ಬಂದವರಿಗೆ ಅಷ್ಟೇನೂ ಆರ್ಥಿಕವಾದ ಲಾಭ ಇರುತ್ತಾ ಇರಲಿಲ್ಲ. ಆದರೆ ಅಧ್ಯಾಪಕರು ಅಂದರೆ ಸಾಮಾಜಿಕವಾಗಿ ಅವರಿಗೆ ಗೌರವ ಸ್ಥಾನ ಇರುತ್ತಿತ್ತು. ಅದರಲ್ಲೂ ಕೆಲವು ಕುಟುಂಬಗಳಂತೂ ಟೀಚರ್ಸ್ ಕುಟುಂಬ ಅಂತ ಹೆಸರು ಮಾಡಿದ್ದವು. ೭೦-೮೦ರ ದಶಕದಲ್ಲಂತೂ ಶಿಕ್ಷಣಕ್ಕೆ ಬಂದಂಥ ಅಧ್ಯಾಪಕರಿಗೆ ಬದ್ಧತೆ ಇರಲಿಲ್ಲ, ನೀತಿ ಸಂಹಿತೆ ಅಂತ ಇರಲಿಲ್ಲ, ನೋಡಿ, ಬೆಂಗಳೂರಿಂದ ಕೆಲವರು ಮುಂಬೈಗೆ ಹೋದರು. ಶಿಕ್ಷಣ ವೃತ್ತಿಯಲ್ಲಿ ತೊಡಗಿದರು. ಆದರೆ ಪ್ರಶ್ನೆಪತ್ರಿಕೆ ಬಹಿರಂಗಪಡಿಸುವಂತಹ ಜಾಲಕ್ಕೆ ಸೇರಿಕೊಂಡರು. ಯಾರೋ ದೊಡ್ಡ ಮನುಷ್ಯರನ್ನು ಒಲಿಸಿಕೊಳ್ಳುವುದಕ್ಕೆ ಅಂಕಪಟ್ಟಿಯನ್ನೇ



ತಿದ್ದುತ್ತಿದ್ದರು. ಬರುಬರುತ್ತಾ ಈ ಕಾಯಿಲೆ ಇಡೀ ದೇಶಕ್ಕೆ ಹಬ್ಬಿತು. ಶಿಕ್ಷಕರಲ್ಲಿ ತತ್ತ್ವಕ್ಕೆ ಬದ್ಧರಾಗಿರುವವರು ತುಂಬ ಕಡಿಮೆ. ಇದರರ್ಥ ಇಷ್ಟೇ, ಇಡೀ ಸಮಾಜದ ಒಂದು ಸಾಮಾನ್ಯ ಮೌಲ್ಯ ಅಂತ ಏನಿತ್ತು ಅದೇ ಸಂಪೂರ್ಣವಾಗಿ ನಾಶವಾಗಿಹೋಗಿದೆ. ಗಾಳಿ ಬಂದಾಗ ತೂರಿಕೋ ಅನ್ನೋ ಪ್ರವೃತ್ತಿ ಜಾಸ್ತಿಯಾಗಿದೆ. ಅಲ್ಲದೆ ವಿಶ್ವವಿದ್ಯಾಲಯಗಳಲ್ಲಿ ಬೋಧನೆಗೆ ಅಕಾಡೆಮಿಕ್ ವ್ಯಕ್ತಿಗಳನ್ನು ಆರಿಸಿಕೋಬೇಕಾದರೆ ಅವರ ಸಾಮರ್ಥ್ಯವನ್ನು, ಮೆರಿಟ್‌ಅನ್ನು ಎಲ್ಲಿ ಪರಿಗಣಿಸುತ್ತಾರೆ ಹೇಳಿ. ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ಇದು ಇನ್ನೂ ಉಲ್ಬಣ ಆಗಿದೆ.

**ಹೊ** : ಇದೇ ಮಾತನ್ನು ವೈಸ್-ಚಾನ್ಸಲರ್‌ಗಳ ಆಯ್ಕೆಗೂ ಅನ್ವಯಿಸಬಹುದೇನೊ ?

**ಶ್ರೀ** : ಹೌದು. ಪರಿಸ್ಥಿತಿ ಹೀಗಿರುವಾಗ ವಿಜ್ಞಾನಕ್ಕೆ ತರುಣ ಪೀಳಿಗೆ ಬರುತ್ತಾ ಇಲ್ಲ, ಅವರಿಗೇನೂ ಕಮಿಟ್‌ಮೆಂಟೇ ಇಲ್ಲ, ಅವರಿಗೆ ಗುರಿ ಇಲ್ಲ ಅಂತ ಹೇಳೋದರಲ್ಲಿ ಯಾವ ಅರ್ಥ ಇದೆ? ಐಡಿಯಲಿಸಂ ಅನ್ನೋದು ಸಮಾಜಕ್ಕೇ ಬೇಕಾಗಿಲ್ಲವಲ್ಲ. ಹಳೇ ಕಾಲದಲ್ಲಿ ಗಾಂಧಿ ಹೆಸರನ್ನಾದರೂ ಹೇಳುತ್ತಿದ್ದರು, ಈಗ ಯಾರು ಹೇಳ್ತಾರೆ ? ಗಾಂಧಿ ಹೆಸರೇ ಕೆಲವರಿಗೆ ಮುಜುಗರ ತರುತ್ತೆ. ಹೀಗಿರಬೇಕಾದರೆ ಆತ್ಮಸಾಕ್ಷಿ, ಪ್ರಜ್ಞೆ ಅನ್ನೋದೆಲ್ಲಿರುತ್ತೆ ?

**ಹೊ** : ಇದು ಇಡೀ ಜಗತ್ತಿಗೆ ಅನ್ವಯಿಸುತ್ತಾ? ಅಥವಾ ನಮ್ಮ ದೇಶಕ್ಕಷ್ಟೇ ಅನ್ವಯಿಸುತ್ತಾ? ಅಮೆರಿಕಾದಲ್ಲಿ ಟೀಚರ್ಸ್‌ಗಳ ಸ್ಟ್ಯಾಂಡರ್ಡ್ ಹೇಗಿದೆ ?

**ಶ್ರೀ** : ನೋಡಿ, ಬಹಳ ನೋವಾಗುತ್ತೆ. ಅಮೆರಿಕಾದಲ್ಲೂ ಕೂಡ ಬುದ್ಧಿವಂತ ತರುಣರು ವಿಜ್ಞಾನದ ಕಡೆ ಆಕರ್ಷಿತರಾಗಿಲ್ಲ. ಅವರ ಒಲವು ಪೂರ್ತಿ ಮ್ಯಾನೇಜ್‌ಮೆಂಟ್ ಕಡೆಗೆ. ಅವರು ಕನಸು ಕಾಣೋದು ಕಾರ್ಪೊರೇಟ್ ಲೈಫ್. ಇನ್ನೊಂದು ವಿಶೇಷ ಏನು ಗೊತ್ತೆ? ಅಲ್ಲಿ ಸಂಶೋಧನಾ ರಂಗಕ್ಕೆ ಹೋಗ್ತಾ ಇರೋ ಬಹಳಷ್ಟು ಮಂದಿ ಭಾರತ, ಚೈನಾ, ಕೊರಿಯ ಇಲ್ಲಿಂದ ವಲಸೆ ಬಂದವರು. ಇಡೀ ನಮ್ಮ ವಾತಾವರಣ ಅಂಥವರನ್ನು ಇಲ್ಲಿ ಉಳಿಸಿಕೊಳ್ಳೋದಿಕ್ಕೆ ಬಿಡೋದಿಲ್ಲ. ಅಮೆರಿಕಾಕ್ಕೆ ಹೋಗ್ತಾರೆ. ಹಾಗಂತ ನಾನು ಇಲ್ಲಿನ ರಿಸರ್ವೇಷನ್ ಪಾಲಿಸಿ ಬಗ್ಗೆ ಕಟ್ಟಿ ತುಂಡಾಗೋ ತರಹ ಮಾತಾಡೋದಿಲ್ಲ. ಆದರೂ ಒಂದು ಸಾಮಾಜಿಕ ಸಮಾನತೆ ಅಂತ

ಇರುತ್ತಲ್ಲ ಅದು ಬಹಳ ಮುಖ್ಯ. ಇದುವರೆಗೆ ಸಾಮಾಜಿಕವಾಗಿ ಹಿಂದುಳಿದವರನ್ನು ವಿದ್ಯಾಭ್ಯಾಸದಲ್ಲಿ ಮುಖ್ಯವಾಹಿನಿಗೆ ತರಬೇಕಾದ್ದು ಕರ್ತವ್ಯ. ಆದರೆ ಒಂದು ಸಲ ಹುದ್ದೆ ದೊರೆತ ಮೇಲೆ ಬಡ್ತಿ ವಿಚಾರ ಬಂದಾಗ ಮತ್ತೆ ಅದೇ ವಿನಾಯಿತಿ ನೀಡುವುದು, ಅದಕ್ಕಾಗಿ ಸಮರ್ಥರನ್ನು ಹಿಂದಕ್ಕೆ ಹಾಕುವುದು ನನ್ನ ಮಟ್ಟಿಗೆ ಅಸಂಬದ್ಧ ಅನ್ನಿಸುತ್ತೆ. ಅಮೆರಿಕಾದಲ್ಲೂ ನೋಡಿ, ನಿಜ, ಹೊರಗಿನಿಂದ ಬಂದವರು ಅಲ್ಲಿನ ಅತಿ ಉನ್ನತ ಹುದ್ದೆ ಹಿಡಿಯೋದು ಕಷ್ಟ. ಕೆಲವರ ಮಟ್ಟಿಗೆ ಅದು ಸಾಧ್ಯ ಕೂಡ. ಆದರೆ ಶೇ. ೯೦ ಭಾಗ ಅವರವರ ಸಾಮರ್ಥ್ಯಕ್ಕೆ ತಕ್ಕ ಹಾಗೆ ಮುಂದೆ ಬರೋದಕ್ಕೆ ಅವಕಾಶ ಇದೆ. ಇತ್ತೀಚೆಗೆ ನಾನು ಕ್ಯಾಲಿಫೋರ್ನಿಯಾದಲ್ಲಿದ್ದೆ. ಅಲ್ಲಿ ಒಂದು ಲ್ಯಾಬೋರೇಟರಿನಲ್ಲಿ ಉನ್ನತ ಹುದ್ದೆಯಲ್ಲಿದ್ದ ವ್ಯಕ್ತಿ ಸ್ಪೈನ್‌ನಿಂದ ಬಂದವನು. ಜನರಲ್ ಫ್ರಾಂಕೋನ ಆಡಳಿತ ಕಾಲದಲ್ಲಿ ಆತ ಸ್ಪೈನ್ ಬಿಟ್ಟನಂತೆ. ಅಲ್ಲಿ ಉಸಿರು ಕಟ್ಟೋ ವಾತಾವರಣ ಇತ್ತೂಂತ ಆತ ಹೇಳಿದ. ಲಾಸ್ ಅಲಮೋಸ್ ಲ್ಯಾಬೋರೇಟರಿಗೆ ಆತ ನಿರ್ದೇಶಕ. ಈ ಲ್ಯಾಬೋರೇಟರಿ ಸೆಕ್ಯೂರಿಟಿ ದೃಷ್ಟಿಯಿಂದ ತುಂಬ ಮುಖ್ಯವಾದ್ದು. ಅಮೆರಿಕಾ ಸಂಯುಕ್ತ ಸಂಸ್ಥಾನ ಈ ನೀತಿಯಿಂದಲೇ ಜಗತ್ತಿನ ಬುದ್ಧಿವಂತರನ್ನು ತನ್ನೊಳಕ್ಕೆ ಸೆಳೆದುಕೊಳ್ಳುವುದರಲ್ಲಿ ಸಫಲವಾಗಿದೆ.

**ಹೊ :** ಇಂಥ ಸೀಮಿತ ಪರಿಸ್ಥಿತಿ ಇರುವಾಗ ನಮ್ಮ ಮುಂದಿನ ಹೆಜ್ಜೆ ಹೇಗಿರಬೇಕು ?

**ಶ್ರೀ :** ಕೆಲವು ಸಂದರ್ಭಗಳಲ್ಲಿ ನಾವು ಪರಿಹಾರ ಕಂಡುಕೊಳ್ಳೋ ಅವಕಾಶಗಳೂ ಉಂಟು. ಕೆಲವು ತಿಂಗಳ ಹಿಂದೆ ನಮ್ಮ ದೇಶದ ಪ್ರಧಾನಿಯವರನ್ನು ಭೇಟಿಯಾಗೋ ಅವಕಾಶ ಆಗಿತ್ತು. ಪರಮಾಣು ಕ್ಷೇತ್ರ ಕುರಿತು ಸಭೆ ಇತ್ತು. ಇದರಲ್ಲಿ ನಾನು ಮತ್ತು ಸಿ.ಎನ್.ಆರ್. ರಾವ್ ಅನ್ನೋರು ಸದಸ್ಯರಾದ್ದರಿಂದ ಹೋಗಬೇಕಾಗಿ ಬಂತು. ನಮ್ಮ ದೇಶದಲ್ಲಿ ವಿಜ್ಞಾನಿಗಳ ಕೊರತೆ ಕೂಡ ಅಲ್ಲಿ ಪ್ರಸ್ತಾಪಕ್ಕೆ ಬಂತು. ಅಲ್ಲಿ ನಾನು ಹೇಳಿದೆ, ಅತ್ಯಂತ ಮೇಧಾವಿಗಳು ಆಗಿದ್ದು, ಕೆಲವು ಕ್ಷೇತ್ರಗಳಲ್ಲಿ ತುಂಬ ಒಳ್ಳೆಯ ಕೆಲಸ ಮಾಡಿರುವಂಥ ವಿಜ್ಞಾನಿಗಳ ನಿವೃತ್ತಿ ವಯಸ್ಸನ್ನು ಏರಿಸಿ ಅಂತ. ರಿಸರ್ವೇಶನ್‌ಗೂ ಇದಕ್ಕೂ ಸಂಬಂಧ ಇಲ್ಲ. ೬೫ರಲ್ಲೂ ತುಂಬ ಚಟುವಟಿಕೆಯಾಗಿ ಕೆಲಸ ಮಾಡೋರುಂಟು. ಅಲ್ಲದೆ ನ್ಯಾಷನಲ್ ಟ್ಯಾಲೆಂಟ್ ಸ್ಕಾಲರ್‌ಷಿಪ್ ಕೊಟ್ಟು ತರುಣ ಜನಾಂಗವನ್ನು ವಿಜ್ಞಾನ ಮತ್ತು ತಂತ್ರಜ್ಞಾನದ ಕಡೆಗೆ ಸೆಳೆಯಬಹುದು. ಜೊತೆಗೆ ವಿಜ್ಞಾನ ಬೋಧಿಸೋ ಅಧ್ಯಾಪಕರಿಗೆ, ಶಿಕ್ಷಕರಿಗೆ ಒಂದಷ್ಟು ಪ್ರೋತ್ಸಾಹಧನ ಕೊಟ್ಟರೆ ಇನ್ನಷ್ಟು ಅರ್ಪಣಾ ಮನೋಭಾವದಿಂದ ಅವರು ಕೆಲಸದಲ್ಲಿ ತೊಡಗಿಕೊಳ್ಳಬಹುದು. ಎಷ್ಟೋ ಸರಕಾರೇತರ ಸಂಸ್ಥೆಗಳಿವೆ. ಅವರಿಗೆ ಧನಸಹಾಯ ಬೇಕಾಗುತ್ತೆ. ಮಾಡಬೇಕು ಅಂದರೆ ಬೇಕಾದಷ್ಟು ಅವಕಾಶ ಇದೆ. ಅದನ್ನು ಅನುಷ್ಠಾನಕ್ಕೆ ತರೋ ಅಂತಹ ಮನೋಭಾವ ಬೇಕು ಅಷ್ಟೇ. ನೋಡಿ, ದೆಹಲಿಯಲ್ಲಿ ಆಳುವವರ ಮನೋಭಾವಾನೇ ಬೇರೆ, ಇಲ್ಲಿ ರಾಜ್ಯದ ಆಡಳಿತ ಇನ್ನೂ ಹೆಚ್ಚು ಬ್ಯೂರೋಕ್ರಾಟಿಕ್. ಪತ್ರಿಕೆಗಳಲ್ಲಿ ದೊಡ್ಡಕ್ಷರದಲ್ಲಿ ಅವರ ಸಾಧನೆಗಳು ಬರಬೇಕು ಅನ್ನೋದೆ ರಾಜಕೀಯ ವ್ಯಕ್ತಿಗಳ ಇಂಗಿತ. ಬೆಂಗಳೂರಿನಲ್ಲೇ ನೋಡಿ ಸುಮಾರು ನೂರು ಮಂದಿ ಕ್ರಿಯಾಶೀಲ ವಿಜ್ಞಾನಿಗಳು, ಅದರಲ್ಲೂ ಅಟಾಮಿಕ್ ಎನರ್ಜಿಯಿಂದ ಬಂದವರು ಇದ್ದಾರೆ. ಬಹುಶಃ ಅಂತರಿಕ್ಷ ವಿಭಾಗದಲ್ಲೂ ಇಷ್ಟೇ ಸಂಖ್ಯೆ ಇರಬಹುದು. ಇವರಲ್ಲಿ ಕೆಲವರಿಗಾದರೂ ವಿಜ್ಞಾನವನ್ನು ಜನರಿಗೆ ತಲಪಿಸಬೇಕು, ಮಕ್ಕಳಿಗೆ ತಲಪಿಸಬೇಕು ಅನ್ನೋ ಇಚ್ಛೆ ಇದೆ. ಇದನ್ನು ಒಂದು ಆಂದೋಲನವಾಗಿ ತರಬೇಕು.

**ಹೊ :** ವಿಜ್ಞಾನಕ್ಕೆ ಒಂದು ವೇದಿಕೆ ಸೃಷ್ಟಿ ಮಾಡೋದಕ್ಕೆ ಇದು ಒಂದು ಸಕಾಲ ಅಲ್ಲವೆ ?

**ಶ್ರೀ :** ಅದನ್ನೇ ಅಲ್ವೆ ನಮ್ಮ ಎಚ್.ಎನ್. ಎಷ್ಟೋ ಕಾಲದಿಂದ ನಡೆಸಿಕೊಂಡು ಬರ್ತಾ ಇರೋದು. ನೀವು ಯಾವುದೇ ಬಿಡಿ ದಿನದಲ್ಲಿ ಅಲ್ಲಿ ಹೋಗಿ, ಯಾವುದೋ ಒಂದು ವಿಜ್ಞಾನ ವಿಷಯಕ ಭಾಷಣಾನ ಆ ವೇದಿಕೆಯಲ್ಲಿ ಏರ್ಪಡಿಸಿರುತ್ತಾರೆ. ಅದನ್ನು ಕೇಳೋದಕ್ಕೆ ಸಾಕಷ್ಟು ಜನಾನೂ ಬರ್ತಾರೆ. ಇಂಥ ವೇದಿಕೆಗಳು ಮಲ್ಲೇಶ್ವರಂನಲ್ಲಿ ಆಗಬೇಕು. ಜಯನಗರದಲ್ಲಿ ಆಗಬೇಕು. ಕರ್ನಾಟಕದಲ್ಲೆಲ್ಲಾ ಆಗಬೇಕು. ಅಲ್ಲದೆ ಕೆಲವು ದೊಡ್ಡ ದೊಡ್ಡ ಉದ್ದಿಮೆಗಳ ಜನರ ಮನ ಒಲಿಸಿ ಒಂದಷ್ಟು ಹಣ ಸಹಾಯ ಪಡೆಯಬೇಕು. ಜೊತೆಗೆ ಅಂಥ ಕೈಗಾರಿಕೆಗಳಲ್ಲೂ ಕೆಲವರನ್ನು ಸಮಾಜಮುಖಿ ಕೆಲಸ ಮಾಡೋದಕ್ಕೆ ಪ್ರೇರೇಪಿಸಬೇಕು. ಬರೀ ಅವರ ಕಾರ್ಪೊರೇಟ್ ಗುರಿ ಅಷ್ಟೇ ಮುಖ್ಯವಾಗೋದಿಲ್ಲ.

**ಹೊ :** ನೀವು ಹೇಳಿದಿರಲ್ಲ, ಕೇಂದ್ರ ಮತ್ತು ರಾಜ್ಯದಲ್ಲಿ ಆಳುವವರ ಮನೋಧರ್ಮ ಅಂತ. ಇದು ಎಷ್ಟರಮಟ್ಟಿಗೆ ಆಗಿದೆ ಅಂದರೆ ಕರ್ನಾಟಕದಲ್ಲಿನ ಕಾಲೇಜುಗಳ ಶೇಕಡ ೮೦ ಮಂದಿ ಅಧ್ಯಾಪಕರು ಅರೆಕಾಲಿಕ ಅಧ್ಯಾಪಕರಾಗಿ ಕೆಲಸ ಮಾಡ್ತಿದ್ದಾರೆ, ಇಲ್ಲವೆ ಗುತ್ತಿಗೆ ಮೇಲೆ ಕೆಲಸ ಮಾಡ್ತಿದ್ದಾರೆ. ತಾವು ಟಾಸ್ಕ್‌ಫೋರ್ಸ್ ಕಮಿಟಿ ಚೇರ್ಮನ್ ಆಗಿದ್ದಾಗ ಈ ಕುರಿತು ಪ್ರಸ್ತಾಪಿಸಿದಿರಿ. ಇಂಥ ಅಧ್ಯಾಪಕರು ತಮ್ಮ ವೃತ್ತಿಯಲ್ಲಿ ನೆಮ್ಮದಿಯಿಂದ ಹೇಗೆ ತೊಡಗಿಕೊಳ್ಳೋದಕ್ಕೆ ಸಾಧ್ಯ ?

**ಶ್ರೀ :** ಇದೊಂದು ಕೆಟ್ಟ ಸಂಪ್ರದಾಯ. ವರ್ಷದಿಂದ ವರ್ಷಕ್ಕೆ ತಾತ್ಕಾಲಿಕ, ತಾತ್ಕಾಲಿಕ ಅಂತಾಲೇ ನಡೆಸಿಕೊಂಡು ಬರ್ತಾನೇ ಇದ್ದಾರೆ. ಗುಣಮಟ್ಟ ಕುಸಿಯೋದಕ್ಕೆ ಇದೂ ಒಂದು ಕಾರಣ. ಬೆಂಗಳೂರಿನ ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿಗೆ ಹಿಂದೆ ಬಹಳ ದೊಡ್ಡ ಹೆಸರಿತ್ತು. ಬಹಳಷ್ಟು ಮೇಧಾವಿ ಅಧ್ಯಾಪಕರು ಅಲ್ಲಿದ್ದರು. ಅಲ್ಲಿಂದ ಹೊರಬಂದ ವಿದ್ಯಾರ್ಥಿಗಳಿಗೂ ಬೆಲೆ ಇರ್ತಾ ಇತ್ತು. ಈಗ ಏನಾಗಿದೆ ? ಯಾರಾದರೂ ಬುದ್ಧಿವಂತ ಹುಡುಗರು ಇಂಜಿನಿಯರಿಂಗ್ ಅಧ್ಯಯನ ಮಾಡಬೇಕು



ಅಂದರೆ ಇಲ್ಲಿಗೆ ಎಷ್ಟು ಜನ ಕಳಿಸ್ತಾ ಇದ್ದಾರೆ ?

**ಹೊ** : ಕಳೆದ ಮೂರು ವರ್ಷದಿಂದ ಈ ಕಾಲೇಜಿಗೆ ಹೋಗೋದಕ್ಕೆ ಇಷ್ಟ ಪಡೋರ ಸಂಖ್ಯೆ ಬಹಳ ಕಡಿಮೆಯಾಗಿದೆ. ಮೊದಲೆಲ್ಲ ರ್‍ಯಾಂಕ್ ವಿದ್ಯಾರ್ಥಿಗಳು ಮಾತ್ರ ಅಲ್ಲಿಗೆ ಹೋಗ್ತಾ ಇದ್ದರು.

**ಶ್ರೀ** : ಹೌದು. ಈ ವಿಚಾರ ಕೇಳಿ ನನಗೂ ಆಘಾತ ಆಯ್ತು. ಯು.ಎನ್.ಡಿ.ಪಿ., ಯುನೆಸ್ಕೋ ಇಂಥ ಸಂಸ್ಥೆಗಳು ಕೆಲವು ಇಂಜಿನಿಯರಿಂಗ್ ಕಾಲೇಜುಗಳಿಗೆ ಇನ್ನಷ್ಟು ಗುಣಮಟ್ಟ ಸುಧಾರಣೆ ಮಾಡ್ಲಿ ಅಂತ ಫಂಡ್ ಕೊಡುತ್ತೆ. ಮೊದಲು ೭೫ ಕೋಟಿ ಅಂದರು, ಆಮೇಲೆ ೫೦ಕ್ಕೆ ಬಂದರು, ಆಮೇಲೆ ೧೫ ಕೋಟಿ ಅಂದರು. ಅವರು ಹಾಕಿದ ಒಂದು ಷರತ್ತು ಅಂದರೆ, ಅಧ್ಯಾಪಕರ ಹುದ್ದೆ ಖಾಲಿ ಬಿದ್ದ ತಕ್ಷಣ ಅದನ್ನು ಭರ್ತಿ ಮಾಡಬೇಕು ಅಂತ. ಸರ್ಕಾರದವರು ಈ ಷರತ್ತನ್ನು ಸಡಿಲಗೊಳಿಸುತ್ತೇವೆ ಅಂದರು. **ಆಮೇಲೇನಾಯಿತು? ಯಾರೋ ಹಣ ಕೊಡುತ್ತಾರೆ. ಆಮೇಲೆ ನಾನೊಂದು ರಿಪೋರ್ಟ್ ಕೊಟ್ಟೆ. ಧರ್ಮಸಿಂಗ್ ಸೌಜನ್ಯ ತೋರಿಸಿದರು. ಸರ್ಕಾರ ಹೋಯಿತು. ಹೊಸ ಸರ್ಕಾರ ಬಂತು. ಕುಮಾರಸ್ವಾಮಿ ಅವರಿಗೆ ಬರೆದೆ. ನಾನೊಂದು ರಿಪೋರ್ಟ್ ಕೊಟ್ಟಿದ್ದೇನೆ, ನಿಮ್ಮ ಜೊತೆ ಕೆಲವು ವಿಚಾರ ಚರ್ಚಿಸಬೇಕಾಗಿದೆ ಅಂತ. ಸಿ.ಎಂ. ಆಫೀಸಿನಲ್ಲಿ ಇದನ್ನು ನೋಟ್ ಮಾಡಿಕೊಂಡಿದ್ದೇವೆ ಅಂತ ಹೇಳಿ ಉತ್ತರ ಕೊಟ್ಟರು. ನಾನೆಷ್ಟು ಸಲ ಪ್ರಯತ್ನ ಮಾಡಿದರೂ ಮತ್ತೆ ಅಲ್ಲಿಂದ ಉತ್ತರ ಬರಲೇ ಇಲ್ಲ.**




**ಹೊ** : ನಿಮ್ಮ ವರದೀನ ಎಲ್ಲೋ ಮೂಲೆಗೆ ಹಾಕಿದ್ದಾರೆ. ಏಕೆ ಅಂದರೆ ಆ ಶಿಫಾರಸ್ಸಿನಲ್ಲಿ ನೀವು ಹೇಳಿದ್ದಿರಿ, ಶಿಕ್ಷಕರನ್ನು ತಾತ್ಕಾಲಿಕವಾಗಿ ನೇಮಕ ಮಾಡಿದರೆ ಅದು ಸಾಧು ಅಲ್ಲ, ಸರ್ಕಾರಕ್ಕೆ ಕಾಲೇಜುಗಳು ಒಂದು ಆದ್ಯತೆಯ ಕ್ಷೇತ್ರ ಆಗಬೇಕು ಅಂತ.

**ಶ್ರೀ** : ಹೌದು. ಇದಲ್ಲದೆ ನಾನು ಬೇರೆ ಕ್ಷೇತ್ರದಲ್ಲೂ ತೊಡಗಿಕೊಂಡಿದ್ದೆ. ಅದು ಈ ಶಕ್ತಿ ಪೂರೈಕೆ ಕ್ಷೇತ್ರ. ವಿಶೇಷವಾಗಿ ವಿದ್ಯುತ್ ಬಗ್ಗೆ ಕುರಿತದ್ದು. ಒಂದು ಹೊಸ ಅಭಿಪ್ರಾಯ ಮೂಡಿತ್ತು. ಸರ್ಕಾರ ಈ ವಿದ್ಯುತ್ ಪೂರೈಕೆ ಕ್ಷೇತ್ರದಿಂದ ಹಿಂತೆಗೆಯೋದೇ ವಾಸಿ, ಅದನ್ನು ಖಾಸಗಿಯವರಿಗೆ ಕೊಡಬೇಕು. ಆಗ ಚೆನ್ನಾಗಿ ನಿರ್ವಹಿಸುತ್ತಾರೆ ಅನ್ನೋ ಅಭಿಪ್ರಾಯ. ಕಳೆದ ವರ್ಷ 'ಹಿಂದೂ' ಪತ್ರಿಕೆಗೆ ಒಂದು ಲೇಖನ ಬರೆದಿದ್ದೆ, ಇದೇ ವಿಚಾರ ಕುರಿತು. ನಾನು ಅದರಲ್ಲಿ ಹೇಳಿದ್ದೆ, ಖಾಸಗಿಯವರನ್ನು ದೊಡ್ಡ ಪ್ರಮಾಣದಲ್ಲಿ ತೊಡಗಿಸಿಕೊಳ್ಳಬೇಕು, ಸದ್ಯ ೧,೨೦,೦೦೦ ಮೆಗಾವ್ಯಾಟ್ ಉತ್ಪತ್ತಿ ಇದೆ, ಕೇಂದ್ರ ಮತ್ತು ರಾಜ್ಯ ಉತ್ಪಾದನೆ ಮೂಲಕ. ಪರಿಸ್ಥಿತಿ ಹೀಗೆ ಇದ್ದರೆ ನಮ್ಮ ಬಡ ಜನರಿಗೆ ಹೇಗೆ ಇದನ್ನು ಪೂರೈಸೋದು ? ಎಲ್ಲ ಲಾಭವನ್ನು ನಗರಕ್ಕೆ ವಿಸ್ತರಿಸಿದರೆ ಅಸಮತೋಲ ಆಗುತ್ತೆ ಅಲ್ವೆ? ಆಮೇಲೆ ಏನಾಯ್ತು ಅಂದ್ರೆ ವಿದ್ಯುತ್ ಇಲಾಖೆ ನೌಕರರ ಒಂದು ಸಂಘ ಇದೆ. ಬಹುಶಃ ಅದು ಸಿ.ಪಿ.ಎಂ.ದು ಅಂತ ಕಾಣುತ್ತೆ. ಅವರು ಹೇಳಿದರು : ನಿಮ್ಮ ಲೇಖನ ನೋಡಿದ್ದೇವೆ. ಆ ಕುರಿತು ಒಂದು ಸಮಿತಿ ನೇಮಿಸ್ತಾ ಇದ್ದೇವೆ. ಅದರಲ್ಲಿ ನೀವು ಸದಸ್ಯರಾಗಿ ಸಲಹೆ ಕೊಡಬೇಕು ಅಂತ. ವಿದ್ಯುತ್‌ವಾಹನೆ (Power Transmission), ಹಂಚಿಕೆ ಮತ್ತು ಉತ್ಪಾದನೆ ಇವನ್ನೆಲ್ಲ ಆಡಳಿತದ ದೃಷ್ಟಿಯಿಂದ ಬೇರೆ ಬೇರೆ ಮಾಡೋದು. ಇದನ್ನು ಅನ್ ಬಂಡಲಿಂಗ್ ಅನ್ನೋ ಒರಟು ಹೆಸರಿಂದ ಕರೀತಾರೆ. ನಾನು ಒಂದು ವಿಚಾರ ಸ್ಪಷ್ಟವಾಗಿ ಹೇಳಿದೆ. ಖಾಸಗೀವಲಯದವರಿಗೆ ಈ ಕ್ಷೇತ್ರದಲ್ಲಿ ಅನುವು ಮಾಡಿಕೊಡ ಬೇಕು, ಅಂದರೆ ಈಗ ಇರುವ ಪರಿಸ್ಥಿತಿಯನ್ನು ಸಂಪೂರ್ಣವಾಗಿ ತೊಡೆದು ಹೊಸ ವಾತಾವರಣ ಸೃಷ್ಟಿ ಮಾಡಬೇಕು. ಇನ್ನೂ ಒಂದು ಕೆಟ್ಟ ಆಲೋಚನೆ ಅಧಿಕಾರಿಗಳಲ್ಲದೆ ಜನರಲ್ಲೂ ಇದೆ. ಈ ಸರ್ಕಾರದ ಕೈ ಹೇಗೋ ಕಳಚಿಹೋಗುತ್ತೆ, ಕೊನೆಗೂ ಖಾಸಗೀ ಕ್ಷೇತ್ರಾನೇ ಗತಿ ಅನ್ನೋದು. ಈ ಕ್ಷೇತ್ರ ಅಷ್ಟೇ ಅಲ್ಲ, ನನ್ನಂತಹ ಕೆಲವರು ಯೋಚನೆ ಮಾಡ್ತಾ ಇರೋ ರೀತೀನೇ ಬೇರೆ, ಎಲ್ಲವನ್ನೂ ಖಾಸಗಿಗೆ ಬಿಡೋಕ್ಕೆ ಆಗೋದಿಲ್ಲ. ಅದರಲ್ಲೂ ಶಿಕ್ಷಣದಂತಹ ಕ್ಷೇತ್ರದಲ್ಲಿ ಸರ್ಕಾರ ತನ್ನ ಪಾತ್ರವನ್ನು ವಹಿಸಲೇಬೇಕಾಗುತ್ತದೆ. ಸಂಪೂರ್ಣವಾಗಿ ಖಾಸಗೀ ಒಡೆತನಕ್ಕೆ ಕೊಟ್ಟರೆ ಶಿಕ್ಷಣ ಕೂಡ ದುಬಾರಿಯಾಗುತ್ತೆ ಅನ್ನೋದನ್ನ ಕೆಲವರು ಒಪ್ಪಿಕೊಳ್ಳೋದಕ್ಕೆ ಸಿದ್ಧರಾಗಿಲ್ಲ. ನನ್ನ ವಿಚಾರಾನೇ ತಗೊಳ್ಳಿ, ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಲ್ಲದಿದ್ದರೆ ನಮ್ಮಂಥ ಮಧ್ಯಮ ವರ್ಗದವರು ಉನ್ನತ ವಿದ್ಯಾಭ್ಯಾಸ ಮಾಡೋದಿಕ್ಕೆ ಆಗ್ತಾ ಇತ್ತಾ? ನನಗೆ ಸ್ಕಾಲರ್‌ಷಿಪ್ ಕೂಡ ಸಿಕ್ಕಿತು, ಅದು ಬೇರೆ ಮಾತು.

**ಹೊ** : ನ್ಯೂಕ್ಲಿಯರ್ ಶಕ್ತಿ ಸ್ಥಾವರಗಳಲ್ಲಿ ಸಾಕಷ್ಟು ಮಂದಿ ಸಮರ್ಥರನ್ನು ತೆಗೆದುಕೊಳ್ಳಲು ಆಗಿದೆಯೆ ? ಹೇಗೆ ಅಲ್ಲಿ ನಿರ್ವಹಿಸುತ್ತಿದ್ದಾರೆ ?

**ಶ್ರೀ**: ನಾವು ಏನು ಮಾಡುತ್ತಿದ್ದೇವೆ ಅಂದರೆ ಅಭ್ಯರ್ಥಿಗಳು ಯಾವ ಕಾಲೇಜಿನಿಂದಲೇ ಬರಲಿ, ದೇಶದ ಎಲ್ಲಿಂದಲೇ ಬರಲಿ ಸಮರ್ಥರಾಗಿದ್ದರೆ ಅಂಥವರಿಗೆ ಆದ್ಯತೆ. ನಮ್ಮ ಕೆಲಸಕ್ಕೆ ಬೇಕಾದ ಹಾಗೆ ತರಪೇತಿ ಕೊಡುತ್ತೇವೆ. ಇಲ್ಲಿಗೆ ಮೆಕ್ಯಾನಿಕಲ್, ಎಲೆಕ್ಟ್ರಿಕಲ್, ಕೆಮಿಕಲ್, ಎಲೆಕ್ಟ್ರಾನಿಕ್, ಮೆಟಲರ್ಜಿ, ಫಿಸಿಕ್ಸ್, ಕೆಮಿಸ್ಟ್ರಿ ಹೀಗೆ ಬೇರೆ ಬೇರೆ ಕ್ಷೇತ್ರ ದಿಂದ ಯುವ ಪದವೀಧರರು ಬರ್ತಾರೆ. ಭಾಭಾ ಅಟಾಮಿಕ್ ರೀಸರ್ಚ್ ಕೇಂದ್ರದಲ್ಲಿ, ಮತ್ತೆ ಕೆಲವು ನ್ಯೂಕ್ಲಿಯರ್ ಶಕ್ತಿ ಕೇಂದ್ರಗಳಲ್ಲಿ ತರಪೇತಿ ಕೇಂದ್ರಗಳಿವೆ. ಅದರಿಂದ ಅದು ಅಂಥ ದೊಡ್ಡ ಸಮಸ್ಯೆ ಆಗೋದಿಲ್ಲ. ನಮಗೆ ಬೇಕಾಗಿರುವಂತಹವರು ನಿಜಕ್ಕೂ ಪ್ರತಿಭಾವಂತರಾಗಿರಬೇಕು.

**ಹೊ** : ನಮ್ಮಲ್ಲಿ ೧೬ ರಿಯಾಕ್ಟರುಗಳಿವೆ. ಇನ್ನೂ ಆರು ಸ್ಥಾಪನೆ ಆಗ್ತಾ ಇವೆ. ಈ ಎಲ್ಲ ಮೂಲಗಳಿಂದ ೧೧೧ ಗಿಗಾ ವ್ಯಾಟ್ ಶಕ್ತಿ ಉತ್ಪಾದನೆ ಆಗ್ತಾ ಇದೆ. ಈ ಪೈಕಿ ಶೇಕಡ ೭೦ ಉಷ್ಣ ಮೂಲದಿಂದ, ಶೇಕಡ ೨೬ ಜಲವಿದ್ಯುತ್ ಮೂಲದಿಂದ, ಶೇಕಡ ೨.೫ ನ್ಯೂಕ್ಲಿಯರ್ ಮೂಲದಿಂದ ಮತ್ತು ೧.೫ ಗಾಳಿ ಮೂಲದಿಂದ ಬರ್ತಾ ಇದೆ. ಈ ಹಿನ್ನೆಲೆಯಲ್ಲಿ ನ್ಯೂಕ್ಲಿಯರ್ ಕ್ಷೇತ್ರಕ್ಕೆ ಏಕೆ ನಾವು ಅಷ್ಟೊಂದು ಪ್ರಾಮುಖ್ಯ ಕೊಡ್ತಾ ಇದ್ದೇವೆ? ಜಗತ್ತಿನ ಬೇರೆ ಬೇರೆ ಕಡೆ ಕೂಡ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ. ಗರಿಷ್ಠ ಅಂದರೆ ನ್ಯೂಕ್ಲಿಯರ್ ಮೂಲದಿಂದ ಶೇಕಡ ೧೬ ಭಾಗದ ಕೊಡುಗೆ ಇದೆ ಅನ್ನಬಹುದು. ಪರಿಸ್ಥಿತಿ ಹೀಗಿದ್ದಾಗ ಈ ಮೂಲದಿಂದ ಕೊಡುಗೆ ತುಂಬ ಕಡಿಮೆ ಅನ್ನಿಸುವುದಿಲ್ಲವೆ ?

**ಶ್ರೀ** : ಇದು ತುಂಬ ಒಳ್ಳೆ ಪ್ರಶ್ನೆ. ಈ ಶಕ್ತಿ ಕ್ಷೇತ್ರದಲ್ಲಿ ನಾವು ದೀರ್ಘಾವಧಿಯ ಯೋಜನೆ ಮಾಡಿರುತ್ತೇವೆ, ಅಂದರೆ ನಮ್ಮ ಗುರಿ ಕ್ರಿ.ಶ. ೨೦೫೦ರವರೆಗೆ. ಈ ಕ್ಷೇತ್ರದಲ್ಲಿ ಲಘು ಅವಧಿಯ ಯೋಜನೆ ಮಾಡುವುದಕ್ಕೆ ಆಗುವುದಿಲ್ಲ. ಆ ಹೊತ್ತಿಗೆ ಅಂದರೆ ೨೦೫೦ರ ಹೊತ್ತಿಗೆ ಒಟ್ಟಾರೆ ಉತ್ಪಾದನೆಯಾಗುವ ಎಲ್ಲ ಮೂಲದ ವಿದ್ಯುತ್ ಈಗಿನದಕ್ಕಿಂತ ಹತ್ತುಪಟ್ಟು ಹೆಚ್ಚಾಗಿರುತ್ತದೆ. ಈಗ ೧೨೦ ಗಿಗಾ ವ್ಯಾಟ್ ಇದೆ. ಆ ಹೊತ್ತಿಗೆ ಇದು ೧೨೫೦ ಗಿಗಾ ವ್ಯಾಟ್ ಆಗುತ್ತೇ ಅನ್ನೋದು ನಮ್ಮ ಅಂದಾಜು. ಹಾಗೇನೆ ನ್ಯೂಕ್ಲಿಯರ್ ಸಾಮರ್ಥ್ಯ ಕೂಡ ನೂರು ಮಡಿ ಹೆಚ್ಚಾಗುತ್ತೆ. ಈಗ ಮೂರು ಗಿಗಾ ವ್ಯಾಟ್ ಅಂತ ಇಟ್ಟುಕೊಂಡರೂ ಅದು ಕನಿಷ್ಠ ೨೭೫ ಗಿಗಾ ವ್ಯಾಟ್ ಆಗಿರುತ್ತೆ. ಮುಂದೆ ಕಾಲ ಹೋದಂತೆ ಈ ವಿಭಾಗದಿಂದ ಶೇಕಡ ೫೦ರಿಂದ ೬೦ರಷ್ಟು ಕೊಡುಗೆಯನ್ನು ನಾವು ನಿರೀಕ್ಷಿಸಬಹುದು. ಅಂದರೆ ಈಗಿನಿಂದಲೇ ಬೃಹತ್ ವಿಸ್ತರಣಾ ಯೋಜನೆಯನ್ನು ನಾವು ಹಮ್ಮಿಕೊಳ್ಳಬೇಕಾಗುತ್ತದೆ.

**ಹೊ** : ಬಹುಶಃ ಯಾವ ದೇಶವೂ ಶಕ್ತಿಯ ವಿಚಾರದಲ್ಲಿ ಸಂಪೂರ್ಣವಾಗಿ ತನ್ನ ಆವಶ್ಯಕತೆಯನ್ನು ತನ್ನ ಸಂಪನ್ಮೂಲದಿಂದಲೇ ನೀಗಿಸಿಕೊಳ್ಳುತ್ತೆ ಎನ್ನುವ ಹಾಗಿಲ್ಲ. ಈ ಹಿನ್ನೆಲೆಯಲ್ಲಿ ಜಾಗತಿಕ ಪ್ರಮಾಣದಲ್ಲಿ ಒಂದು ಜಾಲವನ್ನು ವಿಸ್ತರಿಸಿಕೊಂಡು ಏಕೆ ಹಂಚಿಕೊಳ್ಳಬಾರದು ? ಒಂದು ದೇಶದಲ್ಲಿ ತೈಲ ಜಾಸ್ತಿ ಇರಬಹುದು, ಇನ್ನೊಂದರಲ್ಲಿ ಕಲ್ಲಿದ್ದಲು ಇರಬಹುದು, ಮತ್ತೊಂದರಲ್ಲಿ ಇನ್ನೇನೋ ಇರಬಹುದು. ಶಕ್ತಿ ಸಂಪನ್ಮೂಲವನ್ನು ಇಡೀ ಮನುಕುಲದ ಸರ್ವಸಾಮಾನ್ಯ ಸಂಪತ್ತು ಅಂತ ಭಾವಿಸಿ ಹಂಚಿಕೊಳ್ಳುವುದಕ್ಕೆ ಏನು ತೊಂದರೆ ಇದೆ? ಈ ವಿಚಾರದಲ್ಲಿ ವಿದೇಶಗಳನ್ನು ಏಕೆ ಸಂಪರ್ಕ ಮಾಡಬಾರದು ?

**ಶ್ರೀ** : ಇದು ಅಪೇಕ್ಷಣೀಯ. ಆದರೆ ನ್ಯೂಕ್ಲಿಯರ್ ಶಕ್ತಿ ವಿಚಾರಕ್ಕೆ ಬಂದಾಗ ಯಾವ ದೇಶಗಳು ಅದನ್ನು ಶಸ್ತ್ರಾಸ್ತ್ರಗಳ ತಯಾರಿಕೆಗೆ ಬಳಸಿಕೊಂಡಿವೆಯೋ ಅಂಥವು ಕೆಲವು ಷರತ್ತುಗಳನ್ನು ವಿಧಿಸಿವೆ. ಅವು ಐದು ದೇಶಗಳು. ಸೆಕ್ಯೂರಿಟಿ ಕೌನ್ಸಿಲ್‌ನ ಖಾಯಂ ಸದಸ್ಯ ದೇಶಗಳೂ ಹೌದು. ವಾಸ್ತವವಾಗಿ ನ್ಯೂಕ್ಲಿಯರ್ ವಾಣಿಜ್ಯ ಅಂತ ಏನು ಹೇಳ್ತೇವೆ ಅದರ ಭಾಷ್ಯವನ್ನು ಈ ದೇಶಗಳು ಬರೆದಿವೆ. ಈ ಐದು ದೇಶಗಳಲ್ಲದೆ ಬೇರೆ ಯಾವ ದೇಶಕ್ಕೂ ನ್ಯೂಕ್ಲಿಯರ್ ಶಕ್ತಿ ಬೇಕು ಅಂದರೆ ಆ ದೇಶಗಳು

ನ್ಯೂಕ್ಲಿಯರ್ ಶಸ್ತ್ರಾಸ್ತ್ರಗಳನ್ನು ತಯಾರಿಸುವಂತಿಲ್ಲ ಎಂದು ಷರತ್ತು ವಿಧಿಸುತ್ತಾರೆ. ಇದನ್ನೇ ಪರಮಾಣು ನಿಶ್ಶಸ್ತ್ರೀಕರಣ ಒಪ್ಪಂದ ಅಂತ ಹೇಳ್ತಾರೆ. ಇದು ೧೯೬೮ ರಿಂದಲೇ ಜಾರಿಗೆ ಬಂತು. ಅಮೆರಿಕಾ, ಬ್ರಿಟನ್ ಮತ್ತು ಆಗಿನ ಸೋವಿಯತ್ ಒಕ್ಕೂಟ ಇದರ ರೂವಾರಿಗಳು. ಈಗ ಇನ್ನೊಂದು ಷರತ್ತನ್ನು ಹಾಕಿದ್ದಾರೆ. ಅದರ ಪ್ರಕಾರ ೧೯೬೭ಕ್ಕೆ ಮೊದಲು ಯಾವ ದೇಶಗಳು ನ್ಯೂಕ್ಲಿಯರ್ ಶಸ್ತ್ರಾಸ್ತ್ರಗಳನ್ನು ಪರೀಕ್ಷೆ ಮಾಡಿವೆಯೋ ಅಂಥವನ್ನು ನ್ಯೂಕ್ಲಿಯರ್ ಶಸ್ತ್ರಾಸ್ತ್ರವಿರುವ ದೇಶ ಅಂತ ಪರಿಗಣಿಸಲಾಗಿದೆ. ಹೊಸದಾಗಿ ಯಾವ ದೇಶಗಳೂ ಹಿಂದಿನವರಂತೆ ಶಸ್ತ್ರಾಸ್ತ್ರ ಅಭಿವೃದ್ಧಿಪಡಿಸುವಂತಿಲ್ಲ. ಇಂಡಿಯ ೧೯೭೪ರ ನ್ಯೂಕ್ಲಿಯರ್ ಪರೀಕ್ಷೆ ಮಾಡಿದಾಗ ಅಮೆರಿಕಾ ನ್ಯೂಕ್ಲಿಯರ್ ವಾಣಿಜ್ಯದ ಅನೇಕ ಅಂಶಗಳನ್ನು ನಿಯಂತ್ರಿಸುವುದಕ್ಕೆ ಶುರುಮಾಡಿತು. ಇದರ ಅರ್ಥ ಯಾವ ದೇಶ ಪರಮಾಣು ನಿಶ್ಶಸ್ತ್ರೀಕರಣ ಒಪ್ಪಂದಕ್ಕೆ ಸಹಿ ಹಾಕಿಲ್ಲವೋ ಅಂಥ ದೇಶಗಳಿಗೆ ನ್ಯೂಕ್ಲಿಯರ್ ತಂತ್ರಜ್ಞಾನದ ಬಗ್ಗೆ ಮಾಹಿತಿ ಕೊಡಬಾರದು. ಏಕೆಂದರೆ ಹಾಗೆ ಮಾಡಿದರೆ ಮುಂದೆ ಒಂದು ದಿನ ನ್ಯೂಕ್ಲಿಯರ್ ಶಸ್ತ್ರಗಳನ್ನು ಮಾಡುವುದಕ್ಕೆ ಕುಮ್ಮಕ್ಕು ಕೊಟ್ಟ ಹಾಗೆ ಆಗುತ್ತೆ. ಈ ನಿಷೇಧಗಳನ್ನು ಮೀರಬೇಕು ಅನ್ನೋ ದೃಷ್ಟಿಯಿಂದಲೇ ಈಗ ನಾವು ಕೆಲಸ ಮಾಡುತ್ತಿರುವುದು. ಮೊನ್ನೆ ಅಮೆರಿಕಾದ ಜೊತೆ ಮಾಡಿಕೊಂಡ ಒಪ್ಪಂದದ ಯಾವ ಅಂಶಗಳನ್ನು 'ಹೌಸ್ ಆಫ್ ರೆಪ್ರೆಸೆಂಟೆಟಿವ್ಸ್' ಪರಿಗಣಿಸುತ್ತೆ, ಯಾವುದನ್ನು ಪರಿಗಣಿಸೋದಿಲ್ಲ ಅನ್ನೋದನ್ನ ನಾವು ಕಾದು ನೋಡಬೇಕು. ಅಲ್ಲದೆ ಸೆನೆಟ್‌ನಲ್ಲಿ ಈ ಬಿಲ್ಲು ಪಾಸ್ ಆಗಬೇಕು. ಅಲ್ಲೂ ಬೇಕಾದಷ್ಟು ಆಕ್ಷೇಪಣೆಗಳು ಬರೋ ಸಾಧ್ಯತೆ ಇದೆ. ಬಹುಶಃ ಅಮೆರಿಕಾದ ಆಡಳಿತಾನೇ ಆ ಕಾಂಗ್ರೆಸ್ ಜೊತೆ ಕೆಲಸ ಮಾಡಿ ಒಮ್ಮತಕ್ಕೆ ಬಂದರೆ ಭಾರತ ಜುಲೈ ೨೦೦೫ರಲ್ಲಿ ಮಾಡಿಕೊಂಡ ಒಪ್ಪಂದಕ್ಕೆ ಅನುಕೂಲವಾಗುತ್ತೆ ಅನ್ನೋದು ನಮ್ಮ ಆಕಾಂಕ್ಷೆ.

**ಹೊ :** ಅಮೆರಿಕಾ ಒಂದು ಪೂರ್ವ ಷರತ್ತನ್ನು ಹಾಕಿದೆ. ಸಿವಿಲಿಯನ್ ಮತ್ತು ಮಿಲಿಟರಿ ಎಂದು ನ್ಯೂಕ್ಲಿಯರ್ ಕ್ಷೇತ್ರಾನ ಎರಡು ವಿಭಾಗವಾಗಿ ಮಾಡಿ ಪ್ರತ್ಯೇಕ ಗೊಳಿಸಿ ಅಂತ. ಈ ಬಗ್ಗೆ ನಿಮ್ಮ ಅನಿಸಿಕೆ ಏನು ?

**ಶ್ರೀ :** ಈ ವಿಚಾರದಲ್ಲಿ ನಾವು ಏನು ಮಾಡಿದ್ದೇವೆ ಅಂದರೆ ಈ ಒಪ್ಪಂದದ ಹಿನ್ನೆಲೆಯಲ್ಲಿ ಒಂದು ಪ್ರತ್ಯೇಕ ಪಟ್ಟಿ ತಯಾರು ಮಾಡಿ ಇಂತಿಂಥವು ಶಾಂತಿಯುತ ಬಳಕೆಗೆ ಅಂತ ತೋರಿಸಿದ್ದೇವೆ. ಇದರರ್ಥ ಉಳಿದವನ್ನು ಬೇರೆ ಉದ್ದೇಶಕ್ಕೆ ಬಳಸುತ್ತೇವೆ ಅಂತ ಅಲ್ಲ. ಆದರೆ ಅಂತರರಾಷ್ಟ್ರೀಯ ಪರೀಕ್ಷೆಗೆ ಅವನ್ನು ಒಳಪಡಿಸುವಂತಿಲ್ಲ. ೨೨ ರಿಯಾಕ್ಟರುಗಳ ಪೈಕಿ ೧೪ನ್ನು ಸಿವಿಲಿಯನ್ ಅನ್ನುವ ಪಟ್ಟಿಗೆ ಸೇರಿಸಿದ್ದೇವೆ. ಮುಂದೆ ಯಾವುದೇ ರಿಯಾಕ್ಟರುಗಳನ್ನು ನಾವು ಆಮದು ಮಾಡಿಕೊಳ್ಳಲಿ, ತಂತಾನೇ ಅವು ಸಿವಿಲಿಯನ್ ಪಟ್ಟಿಗೆ ಸೇರುತ್ತವೆ, ಈ ಒಪ್ಪಂದದ ಪ್ರಕಾರ. ಒಂದುವೇಳೆ ನೈಸರ್ಗಿಕ ಯುರೇನಿಯಮ್‌ನ ರಿಯಾಕ್ಟರುಗಳನ್ನು ವಿದೇಶದಿಂದ ಪಡೆದುಕೊಂಡು ಸ್ಥಾಪಿಸಿದರೆ ಅವು ಕೂಡ ಸಿವಿಲಿಯನ್ ಲಿಸ್ಟ್‌ಗೆ ಸೇರುತ್ತವೆ. ಆಗ ಅವು ಪರಿಶೀಲನೆಗೆ ಒಳಪಡುತ್ತವೆ.

**ಹೊ :** ಮೊದಲಿನಿಂದಲೂ ನಮಗೆ ಕೆನಡಾ ಅಲ್ವಾ ಸರ್ ಯುರೇನಿಯಮ್ ಪೂರೈಕೆ ಮಾಡ್ತಾ ಇದ್ದದ್ದು?

**ಶ್ರೀ :** ಇಲ್ಲ, ಇಲ್ಲ, ಪುಷ್ಟೀಕೃತ ಯುರೇನಿಯಮ್ಮನ್ನ ನಾವು ರಷ್ಯಾ ಮತ್ತು ಫ್ರಾನ್ಸ್‌ನಿಂದ ಪಡೆಯುತ್ತಾ ಇದ್ದೇವೆ. ಕೆನಡಾದಿಂದ ಅಲ್ಲ. ನಾವು ಯಾವ ರಿಯಾಕ್ಟರುಗಳನ್ನು ಸ್ಥಾಪಿಸಿದ್ದೇವೋ ಅಂಥವನ್ನೇ ಕೆನಡಾ ಕೂಡ ಸ್ಥಾಪಿಸಿದೆ. ಅದೂ ಕೂಡ ನೈಸರ್ಗಿಕ ಯುರೇನಿಯಮ್‌ನೇ ಬಳಸ್ತಾ ಇದೆ.

**ಹೊ :** ಹಾಗಾದರೆ ತಾರಾಪುರ ಸ್ಥಾವರಕ್ಕೆ ?

**ಶ್ರೀ :** ಇಲ್ಲಿ ನಾವು ಅವಲಂಬಿಸಿದ್ದು ಅಮೆರಿಕಾವನ್ನು. ಕೆನಡಾಕ್ಕೂ ತಾರಾಪುರ ಸ್ಥಾವರಕ್ಕೂ ಸಂಬಂಧ ಇಲ್ಲ. ತಾರಾಪುರ ಸ್ಥಾವರವನ್ನು ಅಮೆರಿಕಾದ ಜನರಲ್ ಎಲೆಕ್ಟ್ರಿಕ್ ಕಂಪನಿ ನಿರ್ಮಿಸಿತು. ಆ ದೇಶದಿಂದಲೇ ಪುಷ್ಟೀಕೃತ ಯುರೇನಿಯಮ್ ತರಿಸಿಕೊಳ್ಳುತ್ತ ಇದ್ದೆವು. ಈಗ ಒಂದು ವೇಳೆ ಅಮೆರಿಕಾದ ಕಾಂಗ್ರೆಸ್ ಮೊನ್ನೆ ನಾವು ಮಾಡಿಕೊಂಡ ಒಪ್ಪಂದವನ್ನು ಪಾಸ್ ಮಾಡಿದರೆ ಮುಂದಿನ ಹೆಜ್ಜೆ ಅಂದರೆ ನ್ಯೂಕ್ಲಿಯರ್ ಸಪ್ಲೈಯರ್ ಗ್ರೂಪ್‌ದು. ನಾಲ್ಕು ನ್ಯೂಕ್ಲಿಯರ್ ಶಸ್ತ್ರಾಸ್ತ್ರ ದೇಶಗಳ ಜೊತೆಗೆ ಅಮೆರಿಕಾ ಸೇರಿ ಉಳಿದಂತೆ ೪೦ ದೇಶಗಳನ್ನು ಅದರಲ್ಲಿ ಸೇರಿಸಿಕೊಂಡು ಲಂಡನ್ ಕ್ಲಬ್ ಅಂತ ಮಾಡಿಕೊಂಡಿದ್ದಾರೆ. ಕೆಲವು ದೊಡ್ಡವು. ಕೆಲವು ಚಿಕ್ಕವು. ಇದನ್ನೇ ನ್ಯೂಕ್ಲಿಯರ್ ಸಪ್ಲೈಯರ್ಸ್ ಗ್ರೂಪ್ ಅಂತಾರೆ. ಈ ಎಲ್ಲ ದೇಶಗಳು ಎಲ್ಲ ನ್ಯೂಕ್ಲಿಯರ್ ಸ್ಥಾವರಗಳನ್ನೂ ಪೂರೈಕೆ ಮಾಡದಿದ್ದರೂ ಅದಕ್ಕೆ ಬೇಕಾದ ಬೇರೆ



ಚಿತ್ರದಲ್ಲಿರುವವರು : ಎಡದಿಂದ ಬಲಕ್ಕೆ – ಟಿ. ಆರ್. ಅನಂತರಾಮು, ಕೆ. ಎಸ್. ಪಾರ್ಥಸಾರಥಿ, ಎಂ. ಆರ್. ಶ್ರೀನಿವಾಸನ್, ಗಿರಿಧರ್ ಖಾಸನೀಸ, ಡಾ|| ಜಿ. ರಾಮಕೃಷ್ಣ

ಬೇರೆ ಬಿಡಿ ಭಾಗಗಳನ್ನು ಪೂರೈಕೆ ಮಾಡೋ ಸಾಮರ್ಥ್ಯ ಪಡೆದಿವೆ.

**ಹೊ :** ಭಾರತವು ಲಂಡನ್ ಕ್ಲಬ್‌ನ ಸದಸ್ಯತ್ವ ಪಡೆದಿದೆಯೆ ?

**ಶ್ರೀ :** ಇಲ್ಲ, ನಾವು ಸೇರಿಕೊಳ್ಳಲಿಲ್ಲ, ಮೊದಲಿನಿಂದಲೂ ಅದರಿಂದ ದೂರ ಇದ್ದೇವೆ. ಈಗ ನ್ಯೂಕ್ಲಿಯರ್ ಸಪ್ಲೈಯರ್ಸ್ ಗ್ರೂಪ್ ಕೂಡ ತನ್ನದೇ ಷರತ್ತನ್ನು ಹಾಕಿದೆ. ಯಾವ ದೇಶ ಪರಮಾಣು ನಿಶ್ಶಸ್ತ್ರೀಕರಣ ಒಪ್ಪಂದಕ್ಕೆ ಸಹಿ ಹಾಕಿಲ್ಲವೋ ಅಂಥ ದೇಶದ ಜೊತೆ ನ್ಯೂಕ್ಲಿಯರ್ ವಾಣಿಜ್ಯ ಇಟ್ಟುಕೊಳ್ಳುವಂತಿಲ್ಲ. ಈಗ ನಮ್ಮ ದೇಶದ ವಿಚಾರವಾಗಿ ಅಮೆರಿಕಾ ಒಂದು ರಿಯಾಯಿತಿ ತೋರಿಸಿದರೆ ಈ ಲಂಡನ್ ಗ್ರೂಪ್ ಕೂಡ ಹಾಗೆ ಮಾಡಬೇಕಾಗುತ್ತೆ. ಇವೆರಡೂ ಆದಮೇಲೆ ಇನ್ನೂ ಒಂದು ಹಂತ ಇದೆ. ಅದು ಅಂತರ ರಾಷ್ಟ್ರೀಯ ಪರಮಾಣು ಶಕ್ತಿ ಏಜೆನ್ಸಿ ಜೊತೆ ರಿಯಾಕ್ಟರ್‌ಗಳ ಸುರಕ್ಷೆ ಕುರಿತಂತೆ ಒಪ್ಪಂದ ಮಾಡಿಕೊಳ್ಳುವುದು. ಈ ರಿಯಾಕ್ಟರುಗಳು ಯಾವುವೆಂದರೆ, ನಾವೇ ಸ್ವತಃ ಮುಂದೆ ಬಂದು ಇವು ಸುರಕ್ಷಿತವಾದವು ಎಂದು ಪಟ್ಟಿ ಮಾಡಿದಂತಹವು.

**ಹೊ :** ಈ ಹಂತದಲ್ಲಿ ಒಂದು ಪ್ರಶ್ನೆ ಏಳುತ್ತೆ. ಆ ದೇಶಗಳೇನಾದರೂ ನಮ್ಮ ಸಂಶೋಧನಾ ಕ್ಷೇತ್ರದಲ್ಲಿ ಮೂಗು ತೂರಿಸುತ್ತಾ ಇವೆಯೆ ?

**ಶ್ರೀ :** ಇಲ್ಲ. ಈ ವಿಚಾರವಾಗಿ ಎಲ್ಲೋ ಒಂದು ತಪ್ಪು ಅಭಿಪ್ರಾಯ ನುಸುಳಿದೆ. ಮಾರ್ಚ್ ೨ನೇ ತಾರೀಖು ತಯಾರು ಮಾಡಿದ ಪ್ರತ್ಯೇಕತಾ ಪಟ್ಟಿಯಲ್ಲಿ ೧೪ ರಿಯಾಕ್ಟರುಗಳ ಪೈಕಿ ೮ ಹೊರಗೇ ಉಳಿಯುತ್ತವೆ. ನಾವು ಕೊಟ್ಟಿರುವ ಪಟ್ಟಿಯಲ್ಲಿ ಇದಲ್ಲದೆ ಇನ್ನೂ ಕೆಲವು ಸಿವಿಲಿಯನ್ ಪಟ್ಟಿಯಲ್ಲೇ ಬರುತ್ತವೆ ಅಂತ ಸ್ಪಷ್ಟಪಡಿಸಿದ್ದೇವೆ. ಇವು ಯಾವುವೆಂದರೆ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್, ಸಾಹಾ ಇನ್‌ಸ್ಟಿಟ್ಯೂಟ್ ಆಫ್ ನ್ಯೂಕ್ಲಿಯರ್ ಫಿಸಿಕ್ಸ್, ಟಾಟಾ ಮೆಮೋರಿಯಲ್ ಸೆಂಟರ್ ಇವು. ಕೆಲವರು, ವಿಶೇಷವಾಗಿ ಪಿ. ಕೆ. ಐಯ್ಯಂಗಾರ್ ಅವರು, ನನ್ನ ನಂತರ ಅಟಾಮಿಕ್ ಎನರ್ಜಿ ಕಮಿಷನ್‌ನ ಛೇರ್ಮನ್ ಆದವರು, ಇದನ್ನು ಕುರಿತು ಹುಚ್ಚು ಅಂತ ಹೇಳಿದ್ದಾರೆ. ನಾವು ಇಲ್ಲಿ ಏನು ಮಾಡುತ್ತಿದ್ದೇವೆ ಅವನ್ನೆಲ್ಲ ಅವರಿಗೆ ಏಕೆ ಒಪ್ಪಿಸಬೇಕು ಅನ್ನೋದು ಅವರ ಅಭಿಮತ. ನಾನು ಅವರ ಲೇಖನಕ್ಕೆ ಪ್ರತಿಯಾಗಿ 'ಕರೆಂಟ್ ಸೈನ್ಸ್' ಪತ್ರಿಕೆಯಲ್ಲಿ ಮತ್ತೊಂದು ಲೇಖನ ಬರೆದು 'ಈ ಭಯಕ್ಕೆ ಕಾರಣ ಇಲ್ಲ. ಸುರಕ್ಷತೆ ಅನ್ನೋ ಪ್ರಶ್ನೆ ಬರೋದು ಈ ಸಂಸ್ಥೆಗಳಲ್ಲಿ ನ್ಯೂಕ್ಲಿಯರ್ ವಸ್ತುಗಳು ಇದ್ದಾಗ, ಅಂದರೆ ಯುರೇನಿಯಮ್ ಅಥವಾ ಪ್ಲುಟೋನಿಯಮ್ ಇದ್ದಾಗ ಅಂಥ ಸಂಸ್ಥೆಗಳು ಪರಿಶೀಲನೆಗಳಿಗೆ ಒಳಪಡುತ್ತವೆ; ಅಲ್ಲಿ ಅದಿಲ್ಲದಮೇಲೆ ಅವರು ತಾನೇ ಬಂದು ವಿನಾಕಾರಣ ಪರಿಶೀಲನೆ ಮಾಡಿ ಕಾಲವನ್ನು ಏಕೆ ವ್ಯಯಮಾಡ್ತಾರೆ' ಎಂದು ಕೇಳಿದ್ದೇನೆ.

**ಹೊ :** ಪರಿಶೀಲನೆಗೆ ಬಂದೇ ಬರ್ತೀವಿ ಅಂದರೆ ನಾವು ತಡೆಯೋದಕ್ಕೆ ಸಾಧ್ಯವೆ ?

**ಶ್ರೀ :** ಇಲ್ಲಿ ಒಂದು ವಿಚಾರ. ಒಂದು ಸಲ ನಾವು ಇವು ಸಿವಿಲಿಯನ್ ಅಂತ ಪಟ್ಟಿ ಮಾಡಿದ ಮೇಲೆ ಅವರು ಪರಿಶೀಲನೆ ಮಾಡೋದಕ್ಕೆ ಬರಬಹುದು. ಒಪ್ಪಂದದ ಪ್ರಕಾರ ಅದಕ್ಕೆ ಅವಕಾಶವಿದೆ. ಇದನ್ನು ನಾವು ಯಾತಕ್ಕೆ ಒಪ್ಪಿಕೊಂಡೆವು ಅಂದರೆ ಒಂದು ವೇಳೆ ಕೆಲವನ್ನು ಸಿವಿಲ್ ಅನ್ನೋ ಗುಂಪಿಗೆ ಸೇರಿಸದಿದ್ದರೆ ನಾವು ಯಾವುದೇ ಸುಧಾರಿತ ನವೀನ ಉಪಕರಣಗಳನ್ನು ಆಮದು ಮಾಡಿಕೊಳ್ಳೋದಕ್ಕೆ ಸಾಧ್ಯವಿಲ್ಲ. ಅಷ್ಟೇ ಅಲ್ಲ, ಈ ಕ್ಷೇತ್ರದಲ್ಲಿ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ಚರ್ಚಿಸುವುದಕ್ಕೆ

ಕೂಡ ಅವಕಾಶ ಇರೋದಿಲ್ಲ. ಅಲ್ಲದೆ ಇಂಥ ಸಂಸ್ಥೆಗಳನ್ನು ರಕ್ಷಣಾ ಕ್ಷೇತ್ರದ ಕೆಲಸಗಳಿಗಾಗಿ ನಾವು ಬಳಸಿಕೊಳ್ಳುವ ಅಭಿಲಾಷೆ ಕೂಡ ಇಲ್ಲ.

**ಹೊ** : ಅಮೆರಿಕಾದ ಜೊತೆ ಮಾಡಿಕೊಂಡಿರುವ ಒಪ್ಪಂದ ಕುರಿತು ಎಲ್ಲ ವಿಜ್ಞಾನಿಗಳಿಗೂ ಸಮಾಧಾನವಿದೆಯೆ ?

ಶ್ರೀ : ಹಾಗೇನಿಲ್ಲ. ಕೆಲವರು ಅಸಮಾಧಾನಗೊಂಡಿರುವುದೂ ಉಂಟು. ಕೆಲವರು, ಉದಾಹರಣೆಗೆ, ಭರತ್ ಕರ್ನಾಡ್, ಏಷ್ಯನ್ ಏಜ್ ಪತ್ರಿಕೆಗೆ ಬರೆಯುತ್ತ 'ಈ ವಿಚಾರದಲ್ಲಿ ಭಾರತದ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವ (ಅಂದರೆ ನ್ಯೂಕ್ಲಿಯರ್ ಶಸ್ತ್ರಗಳನ್ನು ತಯಾರಿಸಲು) ಯಾವುದೇ ಷರತ್ತಿಗೂ ಮಣಿಯಬಾರದು' ಎಂದೇ ಆತ ಬರೆಯುತ್ತಾರೆ. ಸ್ವತಃ ಆತ ವಿಜ್ಞಾನಿಯಲ್ಲ, ಆದರೆ ವಿಶ್ಲೇಷಣಾತ್ಮಕ ದೃಷ್ಟಿಕೋನವುಳ್ಳ ಬರಹಗಾರ.

**ಹೊ** : ಈ ಒಪ್ಪಂದದಲ್ಲಿ ನಾವೇನಾದರೂ ರಾಜಿ ಮಾಡಿ ಕೊಂಡಿದ್ದೇವೆಯೆ ?

ಶ್ರೀ : ನನಗೆ ತಿಳಿದಂತೆ ಪ್ರಮಾದವಾದ ರಾಜಿಯೇನೂ ಆಗಿಲ್ಲ. ವಾಸ್ತವವಾಗಿ ಭಾರತ ಉನ್ನತ ಯುದ್ಧಾಸ್ತ್ರಗಳನ್ನಾಗಲಿ, ದೂರಗಾಮಿ ಕ್ಷಿಪಣಿಗಳನ್ನಾಗಲಿ ತಯಾರಿಸಲು ಯಾರ ಪರವಾನಗಿಯನ್ನೂ ಕೇಳುತ್ತಿಲ್ಲ. ಒಂದು ಅಂಶವನ್ನು ಮನಗಾಣಿಸುವುದು ಯುಕ್ತ. ಕ್ಷಿಪಣಿ ತಂತ್ರಜ್ಞಾನ ನಿಯಂತ್ರಣ ಆಡಳಿತ ಎನ್ನುವ ಒಂದು ಗುಂಪಿದೆ. ಬಹುಶಃ, ನ್ಯೂಕ್ಲಿಯರ್ ಸಪ್ಲೈ ಗ್ರೂಪ್‌ನಂತೆ ಇದೂ ಒಂದು. ಇದೂ ಕೂಡ ನಾವು ಹೊಸ ಬಗೆಯ ಕ್ಷಿಪಣಿ ತಯಾರಿಸಲು ಹೊರಟರೆ ಅದಕ್ಕೆ ಬೇಕಾದ ತಾಂತ್ರಿಕ ಸಲಕರಣೆಗಳನ್ನು ಕೊಡಲು ನಿರಾಕರಿಸುತ್ತದೆ. ಸ್ವಾವಲಂಬನೆಯಿಂದ ನಾವು ಮಾಡುವುದಾದರೆ ಅವರ ಮುಲಾಜಿರುವುದಿಲ್ಲ.

**ಹೊ** : ಬ್ರೀಡರ್ ರಿಯಾಕ್ಟರ್ ಕುರಿತಂತೆ ನಮ್ಮದು ದೊಡ್ಡ ಸಾಧನೆಯೆ ? ಬೇರಾವ ದೇಶವೂ ಸಾಧಿಸಿಲ್ಲವೆ ?

ಶ್ರೀ : ಇದರಲ್ಲಿ ಭಾಗಶಃ ಸತ್ಯವಿದೆ; ಭಾಗಶಃ ಉತ್ಪ್ರೇಕ್ಷೆ ಇದೆ. ಮೊದಲು ನಾವು ಬ್ರೀಡರ್ ರಿಯಾಕ್ಟರುಗಳನ್ನು ಏಕೆ ಅಭಿವೃದ್ಧಿಪಡಿಸಲು ಹೊರಟೆವು ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ನಮ್ಮಲ್ಲಿ ದೊಡ್ಡ ಪ್ರಮಾಣದ ಯುರೇನಿಯಮ್ ದಾಸ್ತಾನಿಲ್ಲ. ನಮ್ಮಲ್ಲಿರುವುದೆಲ್ಲ ಕಡಿಮೆ ದರ್ಜೆಯ ಯುರೇನಿಯಮ್ ನಿಕ್ಷೇಪ, ಅದೂ ಕೂಡ ಕಡಿಮೆ ಪ್ರಮಾಣದಲ್ಲೇ ಇದೆ. ಆದರೆ ನಮ್ಮಲ್ಲಿ ಥೋರಿಯಮ್ ಪ್ರಮಾ ಸಾಕಷ್ಟಿದೆ. ನಾವು ಥೋರಿಯಮ್ ಬಳಸಬೇಕೆಂದರೆ ಬ್ರೀಡರ್ ಮಾರ್ಗವೊಂದೇ ನಮಗಿರುವ ದಾರಿ. ಪರಿಸ್ಥಿತಿಯ ಒತ್ತಡದಿಂದ ನಾವು ಈ ಕಡೆಗೆ ಹೊರಳಬೇಕಾಗಿದೆ. ಬೇರೆಯ ದೇಶಗಳಿಗೆ ಈ ಬಗೆಯ ಒತ್ತಡವಿರಲಾರದು.

ಮೊದಲಿಗೆ ಬ್ರೀಡರ್ ರಿಯಾಕ್ಟರ್ ವಿಚಾರದಲ್ಲಿ ಅಮೆರಿಕಾ ಸಾಕಷ್ಟು ಮುಂದಿತ್ತು. ಕಾರ್ಟರ್ ಅಧಿಕಾರಕ್ಕೆ ಬಂದ ನಂತರ ರಾಜಕೀಯ ತೀರ್ಮಾನ ರೀತ್ಯ ಅದನ್ನು ಕೈಬಿಡ ಬೇಕಾಯಿತು. ಏಕೆಂದರೆ, ಈ ಪ್ರಕ್ರಿಯೆಯಲ್ಲಿ ಉತ್ಪನ್ನವಾಗುವ ಪ್ಲೂಟೋನಿಯಮ್ ಮನುಕುಲಕ್ಕೆ ಅತ್ಯಂತ ಅಪಾಯಕಾರಿ ಎಂದು ಅಮೆರಿಕಾ ನಿರ್ಣಯಿಸಿತು. ಥೋರಿಯಮ್ ಅಂತರ್ಗತ ಪ್ಲೂಟೋನಿಯಮ್ಮನ್ನು ಪ್ರತ್ಯೇಕಿಸಬಾರದು ಎಂಬುದು ಧೋರಣೆ. ಈ ಕಾರಣಕ್ಕಾಗಿ ಅಮೆರಿಕಾದಲ್ಲಿ ಬ್ರೀಡರ್ ಯೋಜನೆ ಸ್ಥಗಿತವಾಗ ಬೇಕಾಯಿತು. ಆದರೆ ರಷ್ಯನ್ನರು ಈಗಲೂ ಅದನ್ನು ಮುಂದುವರಿಸಿದ್ದಾರೆ. ಫ್ರಾನ್ಸ್ ಒಂದು ಹಂತದಲ್ಲಿ ರಷ್ಯಾಕ್ಕಿಂತಲೂ ಒಂದು ಹೆಜ್ಜೆ ಮುಂದಿತ್ತು. ಅವರು ಅತಿ ದೊಡ್ಡ ಬ್ರೀಡರ್ ರಿಯಾಕ್ಟರ್ ಸೂಪರ್ ಫೀನಿಕ್ಸ್ ಎಂಬುದನ್ನು ನಿರ್ಮಿಸಿದರು. ತಾಂತ್ರಿಕವಾಗಿ ಅನೇಕ ತೊಡರುಗಳು ಎದುರಾದವು. ಆ ಹೊತ್ತಿಗೆ ಪರಿಸರವಾದಿಯಾಗಿದ್ದ ಫ್ರಾನ್ಸಿನ ಮಂತ್ರಿಯೊಬ್ಬ ನ್ಯೂಕ್ಲಿಯರ್ ಶಕ್ತಿಗೆ ವಿರುದ್ಧವಾಗಿದ್ದ. ಮತ್ತೆ ಹಳೆಯ ಈ ಸ್ಥಾವರವನ್ನು ಪುನರುಜ್ಜೀವನ ಮಾಡಲು ಆತ ಒಪ್ಪಲಿಲ್ಲ. ಇದು ೯೦ರ ದಶಕದ ಕಥೆ. ಈಗ ಫ್ರಾನ್ಸ್ ಮತ್ತೆ ಬ್ರೀಡರ್ ರಿಯಾಕ್ಟರ್‌ಗೆ ಶರಣಾಗಿದೆ. ಇತ್ತೀಚೆಗೆ ಚೈನಾ, ಕೊರಿಯ ಮತ್ತು ಜಪಾನ್ ಕೂಡ ಬ್ರೀಡರ್ ಬಗ್ಗೆ ಒಲವು ತೋರಿಸಿವೆ.

**ಹೊ** : ಪ್ಲೂಟೋನಿಯಮ್ ಉತ್ಪನ್ನ ಅಪಾಯಕಾರಿ ಎಂದಮೇಲೆ ಆ ಬಗೆಯ ತಂತ್ರಜ್ಞಾನವನ್ನು ಬೆನ್ನುಹತ್ತುವುದು ಅನಿವಾರ್ಯವೇ ?

ಶ್ರೀ : ವಸ್ತುನಿಷ್ಠವಾಗಿ ಯೋಚಿಸಿದರೆ ಅದೇನೂ ಅಂಥ ಅಪಾಯಕಾರಿಯಲ್ಲ. ಅದು ನಮ್ಮ ಪರಿಕಲ್ಪನೆಯನ್ನು ಅವಲಂಬಿಸಿದೆ. ಅಮೆರಿಕಾದಲ್ಲಿ ಸಾಕಷ್ಟು ಪ್ಲುಟೋನಿಯಮ್ ದಾಸ್ತಾನಿದೆ. ಕಳೆದ ೪೦ ವರ್ಷಗಳಿಂದ ದಾಸ್ತಾನು ಮಾಡಿಟ್ಟು ಕೊಂಡಿದೆ. ತಮ್ಮ ಶಸ್ತ್ರಾಸ್ತ್ರ ಕುರಿತಂತೆ ಅವರು ಪ್ಲುಟೋನಿಯಮ್ಮನ್ನು ಅಪಾಯಕಾರಿ ಎನ್ನುವುದಿಲ್ಲ. ಆದರೆ ಇತರ ದೇಶಗಳ ಪ್ರಶ್ನೆ ಬಂದಾಗ ಅದನ್ನು ಅಪಾಯಕಾರಿ ಎಂದು

ವರ್ಗೀಕರಿಸುವ ಚಾಳಿ ಅಮೆರಿಕಾದ್ದು. ಅಮೆರಿಕಾದ ಧೋರಣೆ ತಾನು ದೊಡ್ಡಣ್ಣ ಎನ್ನುವುದೇ. ೫೦ ವರ್ಷಗಳಿಂದ ದಾಸ್ತಾನು ಮಾಡಿರುವ ಆ ದೇಶಕ್ಕೆ ಅದು ಅಪಾಯಕಾರಿಯಲ್ಲದಿದ್ದರೆ ಬೇರೆ ದೇಶಗಳಿಗೆ ಹೇಗೆ ಅಪಾಯಕಾರಿ ?

**ಹೊ :** ನಾವು ಈ ತಂತ್ರಜ್ಞಾನದಲ್ಲಿ ಹೇಗೆ ಮುಂದುವರಿಯುತ್ತೇವೆ ಎನ್ನುವುದನ್ನು ತಿಳಿದುಕೊಳ್ಳುವ ಕುತೂಹಲ ಅಮೆರಿಕಾಕ್ಕೆ ಇದ್ದು, ಅದರಿಂದ ಸತಾಯಿಸುತ್ತಿದೆಯೆ ?

**ಶ್ರೀ :** ಒಂದು ವಿಚಾರವಂತೂ ಬಹು ಸ್ಪಷ್ಟವಾಗಿದೆ. ಇತ್ತೀಚೆಗೆ ಪ್ಲುಟೋನಿಯಮ್ ಬಗ್ಗೆ ಅಮೆರಿಕಾ ಒಂದು ಗೋಷ್ಠಿಯನ್ನು ಏರ್ಪಡಿಸಿತ್ತು. ನನ್ನನ್ನೂ ಆಹ್ವಾನಿಸಿತ್ತು. ಇದೊಂದು ಅಪರೂಪದ ಪ್ರಸಂಗ. ಮೊತ್ತ ಮೊದಲು ಭಾರತೀಯನೊಬ್ಬನನ್ನು ಇಂಥ ಗೋಷ್ಠಿಗೆ ಆಹ್ವಾನಿಸಲಾಗಿತ್ತು. ಅಮೆರಿಕಾದ ಮುಖ್ಯ ಉದ್ದೇಶ ನಾವು ಬ್ರೀಡರ್ ಪಥವನ್ನು ಅನುಸರಿಸುತ್ತೇವೆಯೇ ಎನ್ನುವುದನ್ನು ತಿಳಿದುಕೊಳ್ಳುವುದೇ ಆಗಿತ್ತು. ಅಮೆರಿಕಾದ ಪರಿಭಾಷೆಯಲ್ಲಿ ಇದನ್ನು 'ಫಾಸ್ಟ್ ಸ್ಪೆಕ್ಟ್ರಮ್ ಬರ್ನರ್' ಎನ್ನುತ್ತಾರೆ. ಇದರ ಅರ್ಥವಿಷ್ಟೇ. ಪ್ಲುಟೋನಿಯಮ್ಮನ್ನು ಪ್ರತ್ಯೇಕಿಸದೆ ಸ್ವಸ್ಥಳದಲ್ಲೇ ಬಳಸುವುದು. ಏಕೆಂದರೆ ಒಮ್ಮೆ ಪ್ರತ್ಯೇಕಗೊಳಿಸಿದರೆ ಶಸ್ತ್ರಾಸ್ತ್ರಕ್ಕೆ ಅದನ್ನು ಬಳಸಬಹುದು, ವಿಶೇಷವಾಗಿ ಆತಂಕವಾದಿಗಳಿಂದಾಗಿ ಈ ಬಗೆಯ ಆತಂಕ ಅಲ್ಲಿ ಕಾಣುತ್ತಿತ್ತು. ಆದ್ದರಿಂದ ಪ್ಲುಟೋನಿಯಮ್ಮನ್ನು ಅನೇಕ ವಿದಳನ ಉತ್ಪನ್ನ (ಫಿಶನ್ ಪ್ರಾಡಕ್ಟ್ಸ್)ಗಳೊಂದಿಗೆ ಬೆರೆಸುವುದು. ಇವು ನ್ಯೂಟ್ರಾನನ್ನು ಹೀರುತ್ತವೆ. ಹಾಗೆ ಮಾಡಿದಾಗ ಅದು ಬಾಂಬ್ ತಯಾರಿಕೆಗೆ ಅನನುಕೂಲಕಾರಿ. ಆದರೆ ಇಂಧನವಾಗಿ ಅತ್ಯುತ್ತಮ. ನಮ್ಮ ದೃಷ್ಟಿಯಲ್ಲಿ ಈ ಬಗೆಯ ಇಂಧನಕ್ಕೆ ಹೆಚ್ಚು ಸಾಮರ್ಥ್ಯವಿರುವುದಿಲ್ಲ. ಬಹುಪಾಲು ನ್ಯೂಟ್ರಾನ್ ವ್ಯರ್ಥವಾಗಿಹೋಗುತ್ತದೆ. ಇದನ್ನೇ ನಾವು ಅನುತ್ಪಾದಕ ಸೆರೆ ಎನ್ನುತ್ತೇವೆ (ನಾನ್-ಪ್ರೊಡಕ್ಟಿವ್ ಕ್ಯಾಪ್ಚರ್).

ನಾನು ಆ ಗೋಷ್ಠಿಯಲ್ಲಿ 'ಆ ಉದ್ದೇಶ ನಮಗಿಲ್ಲ' ಎಂದು ಸ್ಪಷ್ಟಪಡಿಸಿದೆ. ನಮ್ಮ ಮುಖ್ಯ ಉದ್ದೇಶ ಪ್ಲುಟೋನಿಯಮ್ಮನ್ನು ಪ್ರತ್ಯೇಕಿಸುವುದು, ಫಾಸ್ಟ್ ರಿಯಾಕ್ಟರ್‌ನಲ್ಲಿ ಬಳಸುವುದು ಮತ್ತು ಥೋರಿಯಮ್ಮನ್ನು ಯುಕ್ತ ರೀತಿಯಲ್ಲಿ ಬಳಸುವುದು. ಕೆಲವು ಅಮೆರಿಕನ್ನರಿಗೆ ನಮ್ಮ ಈ ಯೋಜನೆ ಅತ್ಯುತ್ತಮ ಎನ್ನಿಸಿತು. ಶಕ್ತಿಯ ಆಯ್ಕೆಯಲ್ಲಿ ಭಾರತ ಈ ಮೂಲಕ ಮತ್ತೊಂದು ನವೀನ ಹೆಜ್ಜೆ ಇಡುತ್ತದೆ ಎಂದು ಭಾವಿಸಿದವರೂ ಉಂಟು. ಕೆಲವರಿಗೆ ಈ ಬಗ್ಗೆ ನಂಬಿಕೆ ಇರಲಿಲ್ಲ. ಈ ತಂತ್ರಜ್ಞಾನವನ್ನು ಕಾರ್ಯರೂಪಕ್ಕೆ ತರುವುದೇ ಸಾಧ್ಯವಾಗದು ಎಂಬ ನಕಾರಾತ್ಮಕ ಧೋರಣೆ ಅವರದು. ಆದರೆ ನನ್ನ ದೃಷ್ಟಿಯಲ್ಲಿ ಈ ತಂತ್ರಜ್ಞಾನವನ್ನು ಬೆಂಬತ್ತಲು ನಮಗೆ ಅವಕಾಶವಿದೆ. ವಾಸ್ತವವಾಗಿ ಪ್ರಧಾನಿ ಮನಮೋಹನ ಸಿಂಗ್ ಅವರನ್ನು ಭೇಟಿಯಾದಾಗ ನಾನು ಅವರ ಗಮನಕ್ಕೆ ಈ ವಿಚಾರವನ್ನು ತಂದೆ : ಕೆಲವು ಅಮೆರಿಕನ್ನರಿಗೆ ನಾವು ಈ ಬಗೆಯ ತಂತ್ರಜ್ಞಾನ ಅನುಸರಿಸುವುದು ಹುಚ್ಚಾಟ ಎಂಬಂತೆ ಕಂಡಿದೆ. ''ಒಮ್ಮೆ ಭಾರತ ಈ ಆಯ್ಕೆಯನ್ನು ಬೆಂಬತ್ತಿದರೆ ಅದು ಸಾಧ್ಯವಾಗದು ಎಂಬುದು ಸ್ವತಃ ಸಿದ್ಧವಾಗುತ್ತದೆ. ಆಗ ಅವರೇ ಕೈಬಿಡುತ್ತಾರೆ'' ಎಂಬುದು ಅಮೆರಿಕನ್ನರ ಅಭಿಪ್ರಾಯ. ನನಗನ್ನಿಸುವುದಿಷ್ಟು: ಅವರು ಏನೇ ಹೇಳಲಿ, ಈ ತಂತ್ರಜ್ಞಾನವನ್ನು ಯಶಸ್ವಿಯಾಗಿ ನಿರ್ವಹಿಸುವ ತಾಕತ್ತು ನಮ್ಮ ತಂತ್ರಜ್ಞರಿಗಿದೆ. ನಮ್ಮಲ್ಲೇ ಲಭ್ಯವಿರುವ ದ್ರವ್ಯವನ್ನು ಬಳಸಿ ಇದನ್ನು ಸಾಧಿಸಬೇಕಾಗಿದೆ.

**ಹೊ :** ಉತ್ಪನ್ನವಾಗುವ ನ್ಯೂಕ್ಲಿಯರ್ ವ್ಯರ್ಥ ಪದಾರ್ಥವನ್ನು ಸಂಸ್ಕರಿಸಿರುವುದಿಲ್ಲವೆ ?

**ಶ್ರೀ :** ವಾಸ್ತವವಾಗಿ ಫಾಸ್ಟ್ ರಿಯಾಕ್ಟರ್ ಅನುಸರಿಸಿದರೆ ವ್ಯರ್ಥ ಪದಾರ್ಥದ ಬಹುಪಾಲು ಭಸ್ಮವಾಗಿ ಹೋಗುತ್ತದೆ. ಅಮೆರಿಕಾದಲ್ಲಿ ತಮ್ಮ ಫಾಸ್ಟ್ ಸ್ಪೆಕ್ಟ್ರಮ್ ರಿಯಾಕ್ಟರುಗಳಲ್ಲಿ ಇದನ್ನು ಅನುಸರಿಸುತ್ತಿದ್ದಾರೆ. ಕ್ಯಾಲಿಫೋರ್ನಿಯಾದ ಸಮಾವೇಶದಲ್ಲಿ ದುಂಡುಮೇಜಿನ ಚರ್ಚೆ ಇತ್ತು. ವಿಶೇಷವೆಂದರೆ ಅಲ್ಲಿ ಮಾತನಾಡಿದವರು ಮೂರೇ ಮಂದಿ; ೧೯೭೬ರಲ್ಲಿ ಫಿಸಿಕ್ಸ್ ವಿಭಾಗದಲ್ಲಿ ನೊಬೆಲ್ ಪ್ರಶಸ್ತಿ ಪಡೆದ ಬರ್ಟನ್ ರಿಕ್ಟರ್ ನನಗಿಂತ ಮೊದಲು ಉಪನ್ಯಾಸ ನೀಡಿದರು. ಆತ ಮಾತನಾಡುತ್ತ ಹೇಳಿದರು : 'ಅಮೆರಿಕಾ ಫಾಸ್ಟ್ ಸ್ಪೆಕ್ಟ್ರಮ್ ರಿಯಾಕ್ಟರ್ ಅಭಿವೃದ್ಧಿ ಪಡಿಸಿದರೆ ವ್ಯರ್ಥ ಪದಾರ್ಥವನ್ನು ಹೂಳಲು ಒಂದೇ ಒಂದು ಜಾಗ ಸಾಕು. ಹಾಗೆ ಮಾಡದಿದ್ದಲ್ಲಿ ಹನ್ನೊಂದು ಜಾಗಗಳು ಬೇಕಾಗುತ್ತವೆ. ಇದರರ್ಥ ಫಾಸ್ಟ್ ರಿಯಾಕ್ಟರ್ ಬಳಸಿದ್ದಾದರೆ ಉತ್ಪನ್ನವಾಗುವ ವ್ಯರ್ಥ ಪದಾರ್ಥ ಶೇಕಡ ೧೦ಕ್ಕೆ ಕಡಿತಗೊಳ್ಳುತ್ತದೆ. ಆದ್ದರಿಂದ ವ್ಯರ್ಥ ಪದಾರ್ಥದ ನಿರ್ವಹಣೆ ಮತ್ತು ಥೋರಿಯಮ್‌ನ ಬಳಕೆಯ ದೃಷ್ಟಿಯಿಂದ ನಮಗೂ ಫಾಸ್ಟ್ ರಿಯಾಕ್ಟರ್‌ಗಳು ಬೇಕು.' ಹಿಂದೂ ಪತ್ರಿಕೆಗೆ ನಾನು ಲೇಖನ ಕಳಿಸಿದ ಎರಡು ದಿನ ಮೊದಲು ಕಾಕೋದ್‌ಕರ್ ಅವರ ಲೇಖನ ಪ್ರಕಟವಾಯಿತು. ನಾನು ಅಮೆರಿಕಾದ ಸೆನೆಟ್‌ಗೆ ಬಹಿರಂಗ ಪತ್ರ ಬರೆದಿದ್ದೆ. ಕಾಕೋದ್‌ಕರ್ ಅಭಿಪ್ರಾಯದಂತೆ ಬಳಸಿದ ಇಂಧನವನ್ನು ಮರುಸಂಸ್ಕರಣೆ ಮಾಡುವ ಹಕ್ಕು ನಮ್ಮ ಒಪ್ಪಂದದಲ್ಲಿರಬೇಕು. ಅದಿಲ್ಲದಿದ್ದರೆ ಇಡೀ ಒಪ್ಪಂದವೇ ಅರ್ಥ ಕಳೆದುಕೊಳ್ಳುತ್ತದೆ. ಈ ವಿಚಾರದಲ್ಲಿ ಭಾರತದ ನಿಲುವು ದೃಢವಾದುದು. ಒಂದು ವೇಳೆ ಅಮೆರಿಕಾ ಪುಷ್ಟೀಕೃತ ಯುರೇನಿಯಮ್ಮನ್ನು ನಮ್ಮ ರಿಯಾಕ್ಟರ್‌ಗಳಿಗೆ ಒದಗಿಸುತ್ತೇವೆಂದು ಒಪ್ಪಿಕೊಂಡು ಮರುಸಂಸ್ಕರಿಸುವ ಅವಕಾಶ ನೀಡದಿದ್ದರೆ ನಾವು ಥ್ಯಾಂಕ್ಸ್ ಎಂದಷ್ಟೇ ಹೇಳಬೇಕು, ಒಪ್ಪುವ ಪ್ರಶ್ನೆಯೇ ಇಲ್ಲ. ಅಲ್ಲದೆ ಕೂಡಂಕುಳಮ್ ಸ್ಥಾವರಕ್ಕೆ ಪುಷ್ಟೀಕೃತ



ಯುರೇನಿಯಮ್ಮನ್ನು ಪೂರೈಸಲು ರಷ್ಯಾ ಸಮ್ಮತಿಸಿದೆ, ಇದರ ಮರುಸಂಸ್ಕರಣೆ ಮಾಡುವ ಹಕ್ಕು ನಮಗಿದೆ. ಫ್ರಾನ್ಸ್ ಕೂಡ ಇದನ್ನು ಒಪ್ಪುತ್ತದೆ. ಎಲ್ಲಿಯವರೆಗೆ ನಮ್ಮ ಉದ್ದೇಶ ಶಾಂತಿಗಾಗಿ ಬಳಕೆಯಾಗುತ್ತದೋ ಅಲ್ಲಿಯವರೆಗೆ ಅವರು ತಕರಾರು ತೆಗೆಯುವಂತಿಲ್ಲ. ನಾವು ಕೂಡ ಅದಕ್ಕೆ ಬದ್ಧರಾಗೇ ಇರುತ್ತೇವೆ. ಅವರ ಒಟ್ಟಾರೆ ಧೋರಣೆ ಇಷ್ಟು: ಮರುಸಂಸ್ಕರಣೆಗೊಳಿಸಿದರೆ ಪ್ಲುಟೋನಿಯಮ್ ದೊರೆಯುತ್ತದೆ. ಅದು ಬೇರಾರ ಕೈಗೂ ಸಿಗಬಾರದು, ಅಮೆರಿಕಾ ಹೊರತು.

**ಹೊ :** ಹಿಂದೆ ನೀವು ನೀಡಿದ ಪತ್ರಿಕಾ ಸಂದರ್ಶನದಲ್ಲಿ ಹಾಗೂ ಲೇಖನದಲ್ಲಿ ಪರಮಾಣು ಶಸ್ತ್ರಾಸ್ತ್ರ ಮುಕ್ತ ವಲಯದ ಬಗ್ಗೆ ಹೆಚ್ಚು ಒತ್ತು ಕೊಡುವ ಬದಲು ಪರಮಾಣು ಶಸ್ತ್ರಾಸ್ತ್ರ ರಹಿತ ಜಗತ್ತು ಇರಬೇಕೆಂಬುದು ನಮ್ಮ ಆದ್ಯತೆ ಆಗಬೇಕು ಎಂದು ಹೇಳಿದ್ದೀರಿ.

**ಶ್ರೀ :** ನಿಜ. ಈಗಲೂ ನಮ್ಮದು ಇದೇ ನಿಲುವು. ಅಮೆರಿಕಾದ ಸೆನೆಟರುಗಳಿಗೆ ಬರೆದ ಬಹಿರಂಗ ಪತ್ರದಲ್ಲಿ ನಾನು ಮತ್ತೆ ಇದನ್ನೇ ಪ್ರಸ್ತಾಪಿಸಿದ್ದೇನೆ. ಒಂದು ವೇಳೆ ಈ ಮಸೂದೆಯನ್ನು ಎರಡೂ ದೇಶಗಳೂ ಒಪ್ಪುವುದಾದರೆ ಭಾರತ ಮತ್ತು ಅಮೆರಿಕಾದ ಸಂಬಂಧ ಮಹತ್ತರವಾಗಿ ಬದಲಾಗುತ್ತದೆ. ಅಷ್ಟೇ ಅಲ್ಲ, ಎರಡು ಪ್ರಜಾಪ್ರಭುತ್ವ ರಾಷ್ಟ್ರಗಳು ಜಾಗತಿಕ ಆರ್ಥಿಕರಂಗಕ್ಕೆ ಗಣನೀಯ ಕೊಡುಗೆಯನ್ನು ಕೊಡಲು ಸಾಧ್ಯ.

**ಹೊ :** ನ್ಯೂಕ್ಲಿಯರ್ ವಿಭಾಗದಲ್ಲಿ ನಮ್ಮ ಪ್ರಗತಿ ಹೇಗಿದೆ ?

**ಶ್ರೀ :** ನಾವು ನಮ್ಮದೇ ಆದ ಸಣ್ಣ ಪ್ರಮಾಣದ ರಿಯಾಕ್ಟರುಗಳನ್ನು ನಿರ್ಮಿಸುತ್ತಿದ್ದೇವೆ. ಅಂದರೆ ೨೨೦ ಮೆಗಾವ್ಯಾಟ್ ಸ್ಥಾವರಗಳು. ಈಗಷ್ಟೇ ೫೪೦ ಮೆಗಾವ್ಯಾಟ್ ಸಾಮರ್ಥ್ಯವನ್ನು ತಲಪಿದ್ದೇವೆ. ನಮ್ಮ ಸದ್ಯದ ಪ್ರಗತಿ ಎಂದರೆ ೭೦೦ ಮೆಗಾವ್ಯಾಟ್ ಸಾಮರ್ಥ್ಯದ ಸ್ಥಾವರ ವಿನ್ಯಾಸ ಮಾಡುವುದು. ಯಾಕೆ ಸ್ವಲ್ಪ ಹಿನ್ನಡೆಯಾಯಿತೆಂದರೆ, ಈಗಾಗಲೇ ಹೇಳಿದ ಹಾಗೆ ಪರಾವಲಂಬನೆಯ ಜೊತೆಗೆ ಅನೇಕ ಬಹಿಷ್ಕಾರಗಳನ್ನು ಈ ಕ್ಷೇತ್ರದಲ್ಲಿ ಎದುರಿಸಬೇಕಾಯಿತು. ೧೯೭೫ರಿಂದಲೂ ೧೯೯೦ರವರೆಗೂ ಈ ಪರಿಸ್ಥಿತಿಯನ್ನು ಎದುರಿಸಿದೆವು. ಅದರಲ್ಲೂ ವಿ. ಪಿ. ಸಿಂಗ್ ಮತ್ತು ಚಂದ್ರಶೇಖರ್ ಅವರ ಸರ್ಕಾರದ ಅವಧಿಯಲ್ಲಿ ನಮ್ಮ ದೇಶದ ಆರ್ಥಿಕ ಸ್ಥಿತಿ ನೆಲ ಕಚ್ಚಿತ್ತು. ನಮ್ಮ ಕರೆನ್ಸಿಗೆ ಜೀವ ಕೊಡಲು ಚಿನ್ನವನ್ನೇ ಮಾರಬೇಕಾಯಿತು. ನರಸಿಂಹರಾವ್ ಸರ್ಕಾರ ಬಂದಾಗ ಅಜೆಂಡ ಬದಲಾಯಿತು. ಆಗ ಮನಮೋಹನ್ ಸಿಂಗ್ ಅರ್ಥ ಸಚಿವರಾಗಿದ್ದರು. ಕೆಲವು ಅರ್ಥಶಾಸ್ತ್ರಜ್ಞರ ಸಲಹೆಯ ಮೇರೆಗೆ – ವಿಶೇಷವಾಗಿ

ಹೊರದೇಶದವರಿಂದ ಒಂದು ಸಲಹೆ ಬಂತು... ಅದೇನೆಂದರೆ ಶಕ್ತಿಯ ಕ್ಷೇತ್ರವನ್ನು ಖಾಸಗಿಯವರಿಗೆ ಒಪ್ಪಿಸುವುದು. ವಿಷಾದವೆಂದರೆ ಆ ಹತ್ತು ವರ್ಷಗಳಲ್ಲಿ ಸಾಂಪ್ರದಾಯಿಕ ಶಕ್ತಿಯ ಕ್ಷೇತ್ರಕ್ಕಾಗಲಿ, ನ್ಯೂಕ್ಲಿಯರ್ ಶಕ್ತಿ ಕ್ಷೇತ್ರಕ್ಕಾಗಲಿ ಸಾಕಷ್ಟು ಆರ್ಥಿಕ ಬೆಂಬಲ ಸಿಕ್ಕದೆ ಅವು ಸಂಪೂರ್ಣವಾಗಿ ಸೊರಗಿಹೋದವು.

**ಹೊ** : ಅಂಥ ವಿಷಮ ಸ್ಥಿತಿಯಲ್ಲಿ ನಿಮ್ಮಂಥ ಅನುಭವಿ ವಿಜ್ಞಾನಿಗಳೊಡನೆ ಸರ್ಕಾರ ಸಂವಾದ ಮಾಡಲಿಲ್ಲವೆ ?

**ಶ್ರೀ** : ನಾನು ೧೯೯೬ರಲ್ಲಿ ಯೋಜನಾ ಆಯೋಗದ ಸದಸ್ಯನಾಗಿದ್ದೆ. ಖಾಸಗಿಯವರಿಗೆ ಒಪ್ಪಿಸುವುದನ್ನು ನಾನು ಸಮ್ಮತಿಸಲಿಲ್ಲ. ಯಾವ ಯಾವ ನ್ಯೂಕ್ಲಿಯರ್ ಯೋಜನೆಗಳನ್ನು ನಿಷ್ಕ್ರಿಯಗೊಳಿಸಿದ್ದವೋ ದೇವೇಗೌಡ ಮತ್ತು ಗುಜರಾಲ್ ಅವರು ಪ್ರಧಾನ ಮಂತ್ರಿಯಾಗಿದ್ದಾಗ ಅವುಗಳನ್ನೆಲ್ಲ ಪುನರ್ ವಿಮರ್ಶಿಸಿದೆವು. ಇವೆಲ್ಲ ಬಹುತೇಕ ಇಂಡೋ-ಸೋವಿಯತ್ ಯೋಜನೆಗಳು. ತಾರಾಪುರ್ ೩ ಮತ್ತು ೪ ಇವುಗಳಲ್ಲಿ ಮುಖ್ಯವಾದವು. ಇಂದಿಗೂ ಅವು ಅತಿ ದೊಡ್ಡ ಸ್ಥಾವರಗಳು. ಇವತ್ತಿಗೂ ಮಾಂಟೆಕ್‌ಸಿಂಗ್ ಅಹುಲ್‌ವಾಲಿಯ ಅವರಂತಹ ವಿವೇಚನಾಶಾಲಿಗಳೂ ನಮ್ಮ ದೇಶಕ್ಕೆ ಖಾಸಗಿಯವರ ಬಳಿ ಹೋಗದಿದ್ದರೆ ಭವಿಷ್ಯವೇ ಇಲ್ಲ ಎಂದು ನಂಬಿದ್ದಾರೆ. ಇತ್ತೀಚೆಗಷ್ಟೇ ಅವರ ಧೋರಣೆ ಸ್ವಲ್ಪ ಸಡಿಲವಾಗಿದೆ. ಖಾಸಗಿ ಮತ್ತು ಸರ್ಕಾರಿ ಸಹಭಾಗಿತ್ವ ಎನ್ನುವ ಶಬ್ದಗಳು ಕೇಳಿಬರುತ್ತಿವೆ. ಹೆಸರೇನೋ ಮುದ್ದಾಗಿದೆ. ಸಮಸ್ಯೆ ಎಂದರೆ ಖಾಸಗಿ ವಲಯ ಕಾಸು ಮಾಡಿಕೊಳ್ಳುತ್ತದೆ. ಸರ್ಕಾರಿ ವಲಯ ವೆಚ್ಚ ಭರಿಸುತ್ತದೆ. ಬಹುಶಃ ಈ ಬಗೆಯ ಯೋಜನೆಗಳು ಅನುಷ್ಠಾನಕ್ಕೆ ಬರುವುದಿಲ್ಲ ಎಂದು ನಾನು ಭಾವಿಸಿದ್ದೇನೆ.

**ಹೊ** : ಇದರರ್ಥ ಅಮೆರಿಕಾದೊಡನೆ ಒಪ್ಪಂದ ಮಾಡಿಕೊಳ್ಳದೆ ನಮಗೆ ಗತ್ಯಂತರವಿಲ್ಲವೆಂದೆ ?

**ಶ್ರೀ** : ಈ ಒಪ್ಪಂದ ಕುರಿತು ನಾನು ಹೀಗೆ ಯೋಚಿಸಬಯಸುತ್ತೇನೆ. 'ಒಂದು ಒತ್ತಡವೆಂದರೆ ಭಾರತದಲ್ಲಿ ನ್ಯೂಕ್ಲಿಯರ್ ಶಕ್ತಿಯ ಅತಿ ನಿಧಾನದ ಬೆಳವಣಿಗೆ. ಹಾಗೆ ನಿಧಾನಗತಿಯದಾಗಿರದಿದ್ದರೆ, ಯುರೇನಿಯಮ್ ಕೊರತೆ ಇರದಿದ್ದರೆ, ನಾವು ಭಾರಜಲ ಸ್ಥಾವರಗಳು (ಹೆವಿ ವಾಟರ್ ರಿಯಾಕ್ಟರ್ಸ್)ಗಳನ್ನು ಹೆಚ್ಚು ನಿರ್ಮಿಸ ಬಹುದಾಗಿತ್ತೋ ಏನೋ. ದುರದೃಷ್ಟವೆಂದರೆ ನಮ್ಮಲ್ಲಿರುವುದು ಬಹು ಕಡಿಮೆ ದರ್ಜೆಯ ಯುರೇನಿಯಮ್. ಇತ್ತೀಚೆಗಷ್ಟೇ ಹೊಸ ಯುರೇನಿಯಮ್ ಗಣಿಗಳು ಪ್ರಾರಂಭವಾಗಿವೆ; ಉತ್ಪಾದನೆಗೆ ಸಾಕಷ್ಟು ಸಮಯ ಬೇಕಾಗುತ್ತದೆ. ಇನ್ನೊಂದು ಮುಖ್ಯವಾದ ವಿಚಾರ. ನ್ಯೂಕ್ಲಿಯರ್ ದೇಶಗಳು ಒಂದು ಅಂಶವನ್ನಂತೂ ಮನ ಗಂಡಿವೆ. ಅದೇಂದರೆ ನಮಗೆ ಎಷ್ಟೇ ಇತಿಮಿತಿ ಇದ್ದರೂ ಸದೃಢವಾದ ನ್ಯೂಕ್ಲಿಯರ್ ಕೈಗಾರಿಕೆಯನ್ನು ಸ್ಥಾಪಿಸುವಲ್ಲಿ ನಾವು ಸಫಲರಾಗುತ್ತೇವೆ ಹಾಗೂ ಸಂಪೂರ್ಣವಾಗಿ ಅದು ಅಂತರರಾಷ್ಟ್ರೀಯ ನ್ಯೂಕ್ಲಿಯರ್ ಸಾಮ್ರಾಜ್ಯದಿಂದ ಹೊರಗಿರುತ್ತದೆ.'

**ಹೊ** : ಶಕ್ತಿಯ ವಿಭಾಗದಲ್ಲಿ ಉಷ್ಣಸ್ಥಾವರಗಳ ಕೊಡುಗೆ ಶೇಕಡ ೭೦. ಹೀಗಿರುವಾಗ ಆ ವಿಭಾಗವನ್ನು ಮತ್ತಷ್ಟು ಬಲಪಡಿಸುವುದರಲ್ಲಿ ಅರ್ಥವಿಲ್ಲವೆ ?

**ಶ್ರೀ** : ನಿಜ. ಆದರೆ ಬೇರೆಯ ಸಮಸ್ಯೆಯನ್ನು ನೋಡಿ. ಕಾರ್ಬನ್ ಡೈ ಆಕ್ಸೈಡ್ ಉತ್ಸರ್ಜನೆ ಒಂದು ಮಹಾ ಸಮಸ್ಯೆ. ಈಗಿನ ಮಾಹಿತಿಯ ಪ್ರಕಾರ ಶೇಕಡ ೭೦ ಭಾಗ ಕಲ್ಲಿದ್ದಲು ಹಾಗೂ ಸ್ವಲ್ಪ ಭಾಗ ಅನಿಲ ನಮಗೆ ಲಭ್ಯ. ಜಲ ವಿದ್ಯುತ್ ಮತ್ತು ನ್ಯೂಕ್ಲಿಯರ್ ಇವು ಅಸಾಂಪ್ರದಾಯಿಕ. ಈಗಾಗಲೇ ಹೇಳಿದ ಹಾಗೆ ಕಲ್ಲಿದ್ದಲು ಹಸಿರು ಮನೆ ಪರಿಣಾಮವನ್ನು ಮತ್ತಷ್ಟು ಚುರುಕುಗೊಳಿಸುತ್ತದೆ. ತಾಂತ್ರಿಕವಾಗಿ ನಮ್ಮಲ್ಲಿ ೨೦೦ ಬಿಲಿಯನ್ ಟನ್ ಕಲ್ಲಿದ್ದಲಿದೆ. ಆದರೆ ಕಲ್ಲಿದ್ದಲ ಗಣಿಯ ಬಗ್ಗೆ ವಸ್ತುನಿಷ್ಠ ವಿಮರ್ಶೆ ಮಾಡಿದಾಗ ಉತ್ತಮ ಗುಣಮಟ್ಟದ ೪೦ ಬಿಲಿಯನ್ ಟನ್ನಿಗಿಂತಲೂ ಹೆಚ್ಚು ಉತ್ಪಾದಿಸುವ ಸಾಧ್ಯತೆ ಇಲ್ಲ. ಸದ್ಯದಲ್ಲಿ ೪೦೦ ಮಿಲಿಯನ್ ಟನ್ ಉತ್ಪಾದಿಸುತ್ತಿದ್ದೇವೆ. ನಮ್ಮ ಈಗಿನ ಯೋಜನೆಯನ್ನು ಬೆಂಬಲಿಸಬೇಕೆಂದರೂ ವರ್ಷಕ್ಕೆ ೧೦೦೦೦ ಮಿಲಿಯನ್ ಟನ್ ಕಲ್ಲಿದ್ದಲು ಬೇಕಾಗುತ್ತದೆ. ನಮ್ಮಲ್ಲಿ ಕಲ್ಲಿದ್ದಲು ಅಕ್ಷಯ ಎಂದು ಭಾವಿಸಿರುವುದೇ ಒಂದು ತಪ್ಪು ಕಲ್ಪನೆ. ಅಲ್ಲದೆ ನಮ್ಮ ಸ್ಥಾವರಗಳು ಹೆಚ್ಚು ಸಮರ್ಥವಾಗಿ ಕೆಲಸ ಮಾಡ ಬೇಕೆಂದರೆ ಕಾರ್ಬನ್ ಡೈ ಆಕ್ಸೈಡನ್ನು ತೊಡೆದುಹಾಕಲೇಬೇಕಾಗುತ್ತದೆ. ಅಮೆರಿಕಾ ಈಗಾಗಲೇ ಆ ನಿಟ್ಟಿನಲ್ಲಿ ಹೆಜ್ಜೆ ಇಟ್ಟು ಮೊದಲ ಸ್ಥಾವರವನ್ನು ಸ್ಥಾಪಿಸಿದೆ. ಭಾರತ ಕೂಡ ಈ ಬಗೆಯಲ್ಲಿ ಹೆಜ್ಜೆ ಇಡಲು ಅಮರಿಕಾ ನೆರವು ನೀಡುವ ಆಶ್ವಾಸನೆ ನೀಡಿದೆ.

**ಹೊ** : ರಷ್ಯಾದ ಚರ್ನೋಬಿಲ್ ಮತ್ತು ಅಮೆರಿಕಾದ ತ್ರೀಮೈಲ್ ಐಲೆಂಡ್ ಸ್ಥಾವರ ಗಳಲ್ಲಿ ಆದ ಅಪಘಾತಗಳು ನ್ಯೂಕ್ಲಿಯರ್ ಶಕ್ತಿಯ ಬಗ್ಗೆ ಜನರಲ್ಲಿ ಭೀತಿ ಹುಟ್ಟಿಸಿವೆಯೆ ?

**ಶ್ರೀ** : ಈ ಎರಡೂ ಸ್ಥಾವರಗಳಲ್ಲಿ ಯಾವ ಕಾರಣಕ್ಕಾಗಿ ಅಪಘಾತವಾಯಿತು ಎನ್ನುವುದನ್ನು ವಿಶ್ಲೇಷಣೆ ಮಾಡಲಾಗಿದೆ. ತ್ರೀಮೈಲ್ ಐಲೆಂಡ್‌ನಲ್ಲಿ ಆದ ದುರಂತ ಆ ಸ್ಥಾವರದ ನಿರ್ವಹಣೆಗೆ ಸಾಕಷ್ಟು ಬಜೆಟ್ ಬೆಂಬಲ ನೀಡದೆ ಹೋದದ್ದರಿಂದ. ಅಲ್ಲಿ ವಿಕಿರಣದಿಂದ ಯಾವ ಸಾವು-ನೋವು ಸಂಭವಿಸಲಿಲ್ಲ. ಆದರೆ ಚರ್ನೋಬಿಲ್ ನಿಜಕ್ಕೂ ದೊಡ್ಡ ದುರಂತವೇ. ಅನೇಕ ಜನ ಸತ್ತರು. ಅದು ಇಡೀ ದೇಶದ ದುರಂತವೇ ಆಯಿತು. ಈಗ ಅರ್ಥ ಮಾಡಿಕೊಂಡಿರುವಂತೆ ಚರ್ನೋಬಿಲ್‌ನಲ್ಲಿ ಸ್ಥಾವರದ ವಿನ್ಯಾಸದಲ್ಲೇ ದೋಷವಿತ್ತು. ಜೊತೆಗೆ ಅದನ್ನು ನಿರ್ವಹಿಸುತ್ತಿದ್ದವರ ಅಶಿಸ್ತು ಕೂಡ ಈ ದುರಂತಕ್ಕೆ ಇಂಬುಗೊಟ್ಟಿತು. ಯಾವ ವ್ಯವಸ್ಥೆಯಲ್ಲಿ ಸರ್ಕಾರವನ್ನು ಪ್ರಶ್ನಿಸುವ ಹಕ್ಕಿಲ್ಲವೋ ಅಲ್ಲಿ ಈ ಬಗೆಯ ಪರಿಸ್ಥಿತಿ ಆಗುತ್ತದೆ. ತಾವು ಮಾಡಿದ್ದೆಲ್ಲ ಸರಿ ಎನ್ನುವ ಹುಸಿ ನಂಬಿಕೆ ಸೋವಿಯತ್ ಸರ್ಕಾರಕ್ಕಿತ್ತು. ಚೀನ ಕೂಡ ಅದೇ ಧೋರಣೆಯನ್ನು ಅನುಸರಿಸುತ್ತಿದೆ. ಇದಾದನಂತರ ಸಾಕಷ್ಟು ಬದಲಾವಣೆ ಆಗಿದೆ. ಈಗ ವರ್ಲ್ಡ್ ಅಸೋಸಿಯೇಷನ್ ಆಫ್ ನ್ಯೂಕ್ಲಿಯರ್ ಆಪರೇಟರ್ಸ್ ಎಂಬ ಒಂದು ಸಂಸ್ಥೆ ಅಸ್ತಿತ್ವಕ್ಕೆ ಬಂದಿದೆ. ಇದು ಜಗತ್ತಿನ ಎಲ್ಲ ನ್ಯೂಕ್ಲಿಯರ್ ಸ್ಥಾವರಗಳ ಜೊತೆ ಸಂಪರ್ಕ ಇಟ್ಟುಕೊಂಡು ಆಪರೇಟರ್‌ಗಳ ಜೊತೆ ವಿಚಾರ ವಿನಿಮಯ, ಮಾಹಿತಿ ವಿನಿಮಯ ಮಾಡಿಕೊಳ್ಳುತ್ತಿದೆ. ಮುಖ್ಯವಾಗಿ ಆಗ ನಡೆದಂತಹ ದುರಂತಗಳು ಮತ್ತೆ ಘಟಿಸದಿರಲಿ ಎಂದು ಸೂಕ್ತ ಮುನ್ನೆಚ್ಚರಿಕೆಯನ್ನು ವಹಿಸುವುದು ಅತ್ಯವಶ್ಯಕ.

**ಹೊ** : ಭಾರತ-ಅಮೆರಿಕಗಳ ಒಪ್ಪಂದದಲ್ಲಿ ಅನೇಕ ಮೂಲಭೂತ ವಿಚಾರ ಗಳಲ್ಲೇ ಅಸಮ್ಮತಿ ಇತ್ತು. ನೀವು ಪ್ರಧಾನ ಮಂತ್ರಿಗಳನ್ನು ಭೇಟಿಮಾಡಿದಾಗ ನಿಮ್ಮ ಆತಂಕವನ್ನು ಅವರಲ್ಲಿ ಹೇಳಿದಿರಾ ?

**ಶ್ರೀ** : ರಾಜ್ಯಸಭೆಯಲ್ಲಿ ಪ್ರಧಾನ ಮಂತ್ರಿಗಳು ಈ ಕುರಿತು ಚರ್ಚಿಸಿದ್ದು ಆಗಸ್ಟ್ ೧೭ರಂದು. ನಾವು ಅವರನ್ನು ಭೇಟಿಯಾದದ್ದು ಆಗಸ್ಟ್ ೨೬ರಂದು. ನಮ್ಮ ನಿಲುವಿಗೆ ನಾವು ಬದ್ಧ ಎಂದು ಪ್ರಧಾನ ಮಂತ್ರಿಗಳು ಮತ್ತೊಮ್ಮೆ ಸ್ಪಷ್ಟೀಕರಿಸಿದರು.

**ಹೊ** : ಬಾಂಬ್ ತಯಾರಿಕೆಯ ಬಗ್ಗೆಯೇ ನಮ್ಮ ಎಷ್ಟೋ ವಿಜ್ಞಾನಿಗಳೇ ಅಪಸ್ವರ ಎತ್ತಿದ್ದಾರೆ. ಅಲ್ಲದೆ ನ್ಯೂಕ್ಲಿಯರ್ ಸ್ಥಾವರಗಳು ಕೂಡ ನಮಗೆ ಬೇಡ ಎನ್ನುವವರೂ ಇದ್ದಾರೆ.

ಶ್ರೀ : ಹೌದು. ಭಾರತೀಯ ವಿಜ್ಞಾನ ಮಂದಿರದ ಅಮೂಲ್ಯ ರೆಡ್ಡಿ ಮತ್ತು ಇನ್ನೊಬ್ಬ ವ್ಯಕ್ತಿ ರಮಣ ಎನ್ನುವವರು ಈ ಬಗೆಯ ನಿಲುವು ತಳೆದಿದ್ದರು. ನನಗನ್ನಿಸುತ್ತದೆ, ಈಗಿನ ಪ್ರಪಂಚದಲ್ಲಿ ನ್ಯೂಕ್ಲಿಯರ್ ಶಸ್ತ್ರಾಸ್ತ್ರಗಳಿಲ್ಲದಿದ್ದಲ್ಲಿ ಕಾಸಿನ ಬೆಲೆಯೂ ಇಲ್ಲ. ಆರ್ಥಿಕವಾಗಿ ಸೂಪರ್‌ಪವರ್ ಆಗಿರಬೇಕು, ಇಲ್ಲವೇ ಪರಮಾಣು ಶಸ್ತ್ರಾಸ್ತ್ರವನ್ನು ಹೊಂದಿರಬೇಕು. ಹಾಗಿರದಿದ್ದಲ್ಲಿ ಲೋಕ ಪರಿಭಾವಿಸುವುದಿಲ್ಲ.

**ಹೊ :** ಪಾಕಿಸ್ತಾನಕ್ಕೆ ಬಾಂಬ್ ಮಾಡುವ ಸಾಮರ್ಥ್ಯವಿದೆ ಎಂದು ನಮಗೆ ಗೊತ್ತಿತ್ತೇ ?

ಶ್ರೀ : ಖಂಡಿತ ಗೊತ್ತಿತ್ತು. ೧೯೮೦ರಲ್ಲೇ ಅವರು ಸಾಕಷ್ಟು ಪ್ರಗತಿ ಸಾಧಿಸಿದ್ದರು. ನಾವು ೭೪ರಲ್ಲಿ ಆಗಲೇ ಪ್ರಾರಂಭಿಸಿರಲಿಲ್ಲವೆ ಎಂದು ನಮ್ಮತ್ತಲೂ ಬೊಟ್ಟು ಮಾಡಬಹುದು. ಹಾಗೆ ಅಂದು ಮಾಡದಿದ್ದಲ್ಲಿ ನಮ್ಮಿಬ್ಬರ ನಡುವೆ ಸಮತೋಲವೇ ಇರುತ್ತಿರಲಿಲ್ಲ ಎಂಬುದನ್ನು ಈಗಿನ ಪರಿಸ್ಥಿತಿಯಲ್ಲಿ ನಾವು ಮನಗಾಣಲೇಬೇಕಾಗಿದೆ. ಇನ್ನೂ ಒಂದು ವಿಚಾರ: ನಾವು ಬಾಂಬ್ ತಯಾರಿಸಿ ಷೆಲ್ಫ್‌ನಲ್ಲಿಟ್ಟರೆ ಏನು ಪ್ರಯೋಜನ ? ನಮ್ಮಲ್ಲಿ ಈ ಸಾಮರ್ಥ್ಯವಿದೆ ಎಂದು ಹೊರ ಜಗತ್ತಿಗೆ ತೋರಿಸಲೇಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಅಮೆರಿಕಾ ಮತ್ತು ರಷ್ಯಾದ ಬಾಂಬ್ ವಿನ್ಯಾಸಕಾರರು ಹೇಳುವುದಿಷ್ಟು: 'ನಾವು ಬಾಂಬನ್ನು ಅನುಕರಣೆಯಿಂದ (ಸಿಮ್ಯುಲೇಷನ್) ಮಾಡಿ ತೋರಿಸಬಹುದು. ಕ್ರಾಂತಿಪರೀಕ್ಷೆ (ಕ್ರಿಟಿಕಲ್ ಟೆಸ್ಟ್) ಮಾಡಬಹುದು. ಹೈಡ್ರೋ ಡೈನಮಿಕ್ ಟೆಸ್ಟ್ ಮಾಡಬಹುದು. ಆದರೆ ಕೆಲವು ವೇಳೆ ನಿಜವಾದ ಪರೀಕ್ಷೆ ಅತ್ಯವಶ್ಯಕವಾಗುತ್ತದೆ. ಎಲ್ಲವೂ ಸರಿಯಾಗಿದೆ ಎಂದು ಖಾತರಿ ಮಾಡಿಕೊಳ್ಳಬೇಕಾದರೆ ಇದು ಬೇಕೇಬೇಕು. ಅಲ್ಲದೆ ಶಸ್ತ್ರಾಸ್ತ್ರದ ವಿಶ್ವಾಸಾರ್ಹತೆ ಕುರಿತಂತೆ ಕೆಲವು ಪರೀಕ್ಷೆಗಳು ಅನಿವಾರ್ಯ.'

**ಹೊ :** ಪರಿಸ್ಥಿತಿ ಹೀಗಿರುವಲ್ಲಿ ನ್ಯೂಕ್ಲಿಯರ್ ಶಸ್ತ್ರಾಸ್ತ್ರಗಳನ್ನು ಇರಾನ್ ಹೊಂದಬಾರದು ಎಂದು ಹೇಳುವಲ್ಲಿ ಯಾವ ತರ್ಕವಿದೆ ?

ಶ್ರೀ : ಇರಾನ್ ಪರಮಾಣು ನಿಶ್ಯಸ್ತ್ರೀಕರಣ ಒಪ್ಪಂದಕ್ಕೆ ಸಹಿ ಹಾಕಿದೆ. ಅದಕ್ಕೆ ಬದ್ಧವಾಗಿರಬೇಕಾದ್ದು ನೈತಿಕವಾಗಿ ಅದರ ಕರ್ತವ್ಯ. ಅವರಿಗೆ ಇರುವುದು ಎರಡೇ ಆಯ್ಕೆ. ಒಪ್ಪಂದದಿಂದ ಹೊರಗೆ ಬಂದು ಶಸ್ತ್ರಾಸ್ತ್ರ ತಯಾರು ಮಾಡುವುದು, ಇಲ್ಲ ನಿಶ್ಯಸ್ತ್ರೀಕರಣ ಒಪ್ಪಂದಕ್ಕೆ ಬದ್ಧವಾಗಿರುವುದು.

**ಹೊ :** ಪರಮಾಣು ಶಸ್ತ್ರಾಸ್ತ್ರ ಕುರಿತಂತೆ ಇರುವ ಅಂತರರಾಷ್ಟ್ರೀಯ ಏಜೆನ್ಸಿ ಎಷ್ಟು



ಸ್ವತಂತ್ರವಾದ್ದು ? ಅದರ ಗುರಿ ನಿಜಕ್ಕೂ ಸದುದ್ದೇಶದಿಂದಿದೆಯೆ ?

ಶ್ರೀ : ಒಂದು ವಿಚಾರವಂತೂ ನಿಜ. ಸೂಪರ್‌ಪವರ್‌ಗಳು ಇಂಥ ಏಜೆನ್ಸಿಗಳನ್ನು ನಿಯಂತ್ರಿಸುತ್ತಿವೆ. ಹಿಂದೆಲ್ಲ ಅಮೆರಿಕಾ ಮತ್ತು ಸೋವಿಯತ್ ಯೂನಿಯನ್ ಹೀಗೆ ಮಾಡುತ್ತಿದ್ದುವು. ಹಿಂದಿನ ಸೋವಿಯತ್ ಯೂನಿಯನ್ ದುರ್ಬಲವಾಗುತ್ತ ಬಂತು. ಅಮೆರಿಕಾ ಪ್ರಬಲವಾಯಿತು. ಅಮೆರಿಕಾ ಮತ್ತಷ್ಟು ಸೆಕ್ಯೂರಿಟಿ ಕೌನ್ಸಿಲ್ ಮೆಂಬರುಗಳನ್ನು ತನ್ನ ತೆಕ್ಕೆಗೆ ತಂದುಕೊಂಡಿತು. ಇದಾದ ನಂತರ ಹೆಚ್ಚು ಕಡಿಮೆ ಪರೋಕ್ಷವಾಗಿ ಆ ದೇಶವೇ ಇವನ್ನೆಲ್ಲ ನಿಯಂತ್ರಿಸುತ್ತಿದೆ.

**ಹೊ :** ಇರಾಕ್‌ಗೂ ಇದೇ ಗತಿಯಾಯಿತಲ್ಲ ?

ಶ್ರೀ : ಇರಾಕ್ ವಿಚಾರದಲ್ಲಿ ಆದದ್ದೇ ಬೇರೆ. ಇರಾಕ್ ಸಮೂಹನಾಶಕ ಶಸ್ತ್ರಾಸ್ತ್ರಗಳನ್ನು ಮಾಡುವ ಹಂತದಲ್ಲಿದೆ ಎಂದು ಐ.ಎ.ಇ.ಎ (ಇಂಟರ್‌ನ್ಯಾಷನಲ್ ಆಟಾಮಿಕ್ ಎನರ್ಜಿ ಏಜೆನ್ಸಿ) ಯಾವತ್ತೂ ಹೇಳಿರಲೇ ಇಲ್ಲ. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಇರಾಕ್ ಸಮೂಹನಾಶಕ ಶಸ್ತ್ರಾಸ್ತ್ರವನ್ನು ಪಡೆಯುವ ಹಂತದಲ್ಲಿಲ್ಲ ಎಂದು ನಾವು ಹೇಳಲಾಗದು ಎಂಬುದನ್ನೇ ಅಮೆರಿಕಾ ಮುಖ್ಯವಾಗಿಸಿತು.

**ಹೊ :** ಈಗಲೂ ಐ.ಎ.ಇ.ಎ., ಇರಾನ್ ಶಸ್ತ್ರಾಸ್ತ್ರ ಮಾಡುವ ಸ್ಥಿತಿಯಲ್ಲಿಲ್ಲ ಎಂದೇ ಹೇಳಿದೆಯಲ್ಲ!

ಶ್ರೀ : ನಿಜ. ಐ.ಎ.ಇ.ಎ. ಡೈರೆಕ್ಟರ್ ಜನರಲ್ ಒಬ್ಬ ವಕೀಲ. ಆತ ಹೇಳುವುದಿಷ್ಟು: ಯಾವುದೇ ದೇಶವನ್ನು ನ್ಯಾಯಬದ್ಧವಾಗಿ ನ್ಯೂಕ್ಲಿಯರ್ ಶಸ್ತ್ರಾಸ್ತ್ರ ರಾಷ್ಟ್ರ ಎಂದು ಪರಿಗಣಿಸುವಂತಿಲ್ಲ, ಅಥವಾ ನ್ಯಾಯಬಾಹಿರ ನ್ಯೂಕ್ಲಿಯರ್ ಶಸ್ತ್ರಾಸ್ತ್ರ ರಾಷ್ಟ್ರ ಎಂದು ವರ್ಗೀಕರಿಸುವಂತಿಲ್ಲ. ಪರಮಾಣು ನಿಶ್ಯಸ್ತ್ರೀಕರಣದ ಒಪ್ಪಂದದ ಉದ್ದೇಶ ಇಡೀ ಜಗತ್ತಿನಲ್ಲೇ ಪರಮಾಣು ಶಸ್ತ್ರಾಸ್ತ್ರವನ್ನು ಸಂಪೂರ್ಣವಾಗಿ ಇಲ್ಲದಂತೆ ಮಾಡುವುದು. ಅದಕ್ಕೇ ೧೯೮೮ರಲ್ಲಿ ರಾಜೀವ್ ಗಾಂಧಿ ವಿಶ್ವಸಂಸ್ಥೆಯ ವಿಶೇಷ ಅಧಿವೇಶನದಲ್ಲಿ ಮಾತನಾಡುತ್ತ 'ಮುಂದಿನ ೧೫-೨೦ ವರ್ಷಗಳಲ್ಲಿ ಪರಮಾಣು ಶಸ್ತ್ರಾಸ್ತ್ರಗಳನ್ನೆಲ್ಲ ಜಗತ್ತಿನಾದ್ಯಂತ ನಾಶಪಡಿಸೋಣ' ಎಂದು ಕರೆಕೊಟ್ಟಿದ್ದರು. ಈಗಲೇ ಅದನ್ನು ಪ್ರಾರಂಭಿಸಬೇಕು ಎಂದಿದ್ದರು.

**ಹೊ :** ನಮ್ಮಲ್ಲೇ ಇರುವ ಥೋರಿಯಮ್ಮನ್ನು ಸಂಸ್ಕರಿಸಲು ಅಂತರರಾಷ್ಟ್ರೀಯ ಮಟ್ಟದಲ್ಲಿ ಒಪ್ಪಂದದ ಅವಶ್ಯಕತೆ ಇದೆಯೆ ? ಸ್ವತಂತ್ರವಾಗಿ ನಾವೇ ಮಾಡಲು ಸಾಧ್ಯವಿಲ್ಲವೆ ?

ಶ್ರೀ : ಥೋರಿಯಮ್ಮನ್ನು ನಾವೇ ಸಂಸ್ಕರಿಸುತ್ತಿದ್ದೇವೆ. ವಾಸ್ತವವಾಗಿ ಸ್ವತಃ ಥೋರಿಯಮ್ ಇಂಧನವಲ್ಲ. ಇದರ ಜೊತೆಗೆ ಪ್ಲುಟೋನಿಯಮ್ ಬೆರೆಸಬೇಕಾಗಿದೆ.

## ಇನ್ನೇನು ಕೆಲಸ

ಸುಸ್ವಾಗತ ನಿನಗೆ . ನಡೆಮುಡಿಯ ಸ್ತವನ
ಮೂಲೆಯಲಿ ಮೊಮ್ಮಗನ ಆಟಿಕೆಯ ಮೌನ
ಧರ್ಮಕರ್ಮಗಳ ಲೆಕ್ಕಾಚಾರದ ತುಲಾಭಾರ
ಒಡನಾಡಿ ಆತ್ಮೀಯನ ಜೊತೆ ಶೂನ್ಯವಿಹಾರ

ಹಳೆಯ ದಿವಾನಖಾನೆಯ ಪಿಸುಮಾತಿನ ಹುನ್ನಾರ
ಪುರಾತನ ತಲೆಬಾಗಿಲ ಕಾಲೊರೆಸಿನ ಚಿತ್ತಾರ
ಖಾಲಿಕೋಣೆ ರೂಪಾಂತರದ ವಿಚಾರ ಸಂಕಿರಣ
ಭುಜಕುಣಿಸಿದ ಸ್ಮರಣಿಕೆ ಹಗೇವಿನ ಆಭರಣ

ಪಟದ ಕಟಕಟೆಯ ದನಿರಹಿತ ಮಾತುಕತೆ
ಸುಮ್ಮನೆ ಮರೆಯಾಗುವ ಪರಸಂಗದ ಜವನಿಕೆ
ಭವದಿರುವಿಕೆಯಲ್ಲಿ ಎಲ್ಲರಲು ಒಂದೆ ಮನಸು
ಭವ ದೂರದಲ್ಲಿ ಎಲ್ಲರಲು ಸಾವಿರದ ಕನಸು

ಶುಭರಾತ್ರಿ ನಿನಗೆ. ಪಂಚಭೂತದ ಮೈತ್ರಿಗೆ
ಐರಾವತ ಸಿದ್ಧವಾಗಿದೆ ಕಸ ವಿಲೇವಾರಿಗೆ



ಚಿ. ಶ್ರೀನಿವಾಸರಾಜು
೨೨ (ರ), 'ಚಿರಂಜೀವಿ', ಹಳೇ ಕಾಮಕೊಳದ ರಸ್ತೆ
ಕೋದಂಡರಾಮಪುರ
ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩



ಈ ಸಂದರ್ಶನದ ನಂತರ ಅಮೆರಿಕ ಸಂಯುಕ್ತ ಸಂಸ್ಥಾನವು ಪರಮಾಣುಶಕ್ತಿಯ ತಂತ್ರಜ್ಞಾನ ಮುಂತಾದವುಗಳನ್ನು ಹಂಚಿಕೊಳ್ಳುವ ಬಗ್ಗೆ ಹೊಸ ಕಾನೂನು ಮಾಡಿದೆ. ಇದರ ಕಲಂ ೧೨೩ರ ಅಡಿ ಭಾರತ - ಅಮೆರಿಕಾಗಳ ನಡುವೆ ಒಪ್ಪಂದ ಚರ್ಚಿತವಾಗುತ್ತಿದೆ. ಈ ಕಾನೂನಿನ ಕೊರತೆಗಳ ಬಗ್ಗೆ ಶ್ರೀ ಎಂ. ಆರ್. ಶ್ರೀನಿವಾಸನ್‌ರವರು 'ದಿ ಹಿಂದೂ' ಪತ್ರಿಕೆಯಲ್ಲಿ ದಿ. ೧೪.೧೨.೦೬ರಂದು ಗಂಭೀರ ಲೇಖನ ಬರೆದಿದ್ದಾರೆ. ತಾನು ಮಾತ್ರ ಅತ್ಯಾಧುನಿಕ ಅಣ್ವಸ್ತ್ರ ತಯಾರಿಸಲು ಸಂಶೋಧನೆ, ಯೋಜನೆಗಳನ್ನು ಮುಂದುವರಿಸುತ್ತಲೇ ಭಾರತ ಮತ್ತಿತರರಿಗೆ ಆ ಹಕ್ಕನ್ನು ಎಲ್ಲ ಕಾಲಕ್ಕು ನಿರಾಕರಿಸುವ ಅಮೆರಿಕಾದ ಹುನ್ನಾರವನ್ನು ಬಯಲಿಗೆಳೆದಿದ್ದಾರೆ. ಈ ಕಾನೂನಿನಡಿ ಒಪ್ಪಂದ ಮಾಡಿಕೊಂಡಿದ್ದೇ ಆದರೆ ಭಾರತ ಹೇಗೆ ಅಣುಶಕ್ತಿ ಕುರಿತ ನೀತಿ ನಿರೂಪಣೆಯಲ್ಲಿ ತನ್ನ ಸ್ವಾಯತ್ತತೆಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತದೆ ಎಂಬುದನ್ನು ಬಯಲಿಗೆಳೆದು ಎಚ್ಚರಿಸಿದ್ದಾರೆ.

ನಮ್ಮ ರಿಯಾಕ್ಟರುಗಳಲ್ಲೇ ಇದನ್ನು ಸಂಸ್ಕರಿಸುತ್ತಿದ್ದೇವೆ.

**ಹೊ :** ಈ ತಂತ್ರಜ್ಞಾನದಲ್ಲಿ ನಾವೇನಾದರೂ ಹೊಸ ಹೆಜ್ಜೆ ಇರಿಸಲು ಸಾಧ್ಯವಾಗಿದೆಯೆ ?

ಶ್ರೀ : ಇವೆಲ್ಲ ದೀರ್ಘಕಾಲಿಕ ಯೋಜನೆಗಳು. ಕೆಲವೇ ದಿನಗಳಲ್ಲಿ ಮಾಡುವಂತಹುವಲ್ಲ. ನಾವು ೫೦೦ ಮೆಗಾವ್ಯಾಟ್ ಫಾಸ್ಟ್ ರಿಯಾಕ್ಟರನ್ನು ನಿರ್ಮಿಸುತ್ತಿದ್ದೇವೆ. ಬೇರೆ ದೇಶಗಳು ಈ ನಿಟ್ಟಿನಲ್ಲಿ ಇಷ್ಟೊಂದು ಸಾಧನೆ ಮಾಡಿಲ್ಲ. ಚೈನಾ ಮತ್ತು ಕೊರಿಯ ಕೂಡ ಇತ್ತ ಗಮನಹರಿಸಿವೆ ಎಂದು ಈಗಾಗಲೇ ಪ್ರಕಟಿಸಿವೆ. ಆದರೆ ಅವೆಲ್ಲ ಚಿಕ್ಕ ರಿಯಾಕ್ಟರುಗಳು. ನಮ್ಮದೋ ದೊಡ್ಡದು.

**ಹೊ :** ಅಮೆರಿಕಾದೊಡನೆ ಮಾಡಿಕೊಂಡ ಒಪ್ಪಂದ ಕುರಿತು ಆ ದೇಶ ನಂಬಲರ್ಹವಲ್ಲ ಎಂಬುದೇ ಬಹುಜನರ ಅಭಿಪ್ರಾಯ. ನೀವೇನಂತೀರಿ ?

ಶ್ರೀ : ನನ್ನ ಅಭಿಪ್ರಾಯವೂ ಅದೇ. ನಾನು ಸ್ವತಃ ಕಿಸಿಂಜರ್‌ಗೆ ಈ ಮಾತನ್ನು ಹೇಳಿದ್ದೇನೆ. ಅಮೆರಿಕಾದ ಹಿಂದಿನ ವರ್ತನೆಯನ್ನು ಗಮನಿಸಿ ನಮ್ಮ ಪ್ರಧಾನ ಮಂತ್ರಿಗಳಿಗೂ ಈ ಬಗ್ಗೆ ಮನವರಿಕೆ ಮಾಡಿಕೊಟ್ಟಿದ್ದೇನೆ. ಮೂಗಿಗೆ ತುಪ್ಪ ಸವರಿದರೆ ಸಾಲದು, ಅಮೆರಿಕಾದ ಹಿಂದಿನ ವರ್ತನೆಗಳನ್ನು ನಾವು ಮರೆತಿಲ್ಲ.

**ಹೊ :** ಭಾರತ ಒಂದು ಜವಾಬ್ದಾರಿಯುತ ರಾಷ್ಟ್ರ ಎಂದು ಬುಷ್ ಒಪ್ಪಿಕೊಂಡಿದ್ದಾರಲ್ಲ ?

ಶ್ರೀ : ಹೌದು. ಅದು ಅವರ ನಂಬಿಕೆ ಕೂಡ. ಅಮೆರಿಕಾದ ನೀತಿ ನಿರೂಪಕರೇ ಬೇರೆ, ಅಧ್ಯಕ್ಷರ ಸ್ಥಾನ ಬೇರೆ ಎಂಬುದನ್ನು ಅರಿತುಕೊಳ್ಳಬೇಕಾಗಿದೆ. ಭಾರತ ಮತ್ತು ಅಮೆರಿಕಾ ಈ ಒಪ್ಪಂದವನ್ನು ಅನುಷ್ಠಾನಕ್ಕೆ ತಂದರೆ ನಮಗೆ ಗಟ್ಟಿ ಭೂಮಿಕೆ ದೊರೆತಂತೆಯೇ. ಅನಂತರ ರಷ್ಯಾ ಮತ್ತು ಫ್ರಾನ್ಸ್‌ಗಳ ಸಹಕಾರವನ್ನೂ ಕೋರಬಹುದು. ಏಕೆಂದರೆ ಅಮೆರಿಕಾ ಒಡ್ಡುವಷ್ಟು ಷರತ್ತುಗಳನ್ನು ಆ ದೇಶಗಳು ಒಡ್ಡುವುದಿಲ್ಲ.

**ಹೊ :** ಒಂದು ವೇಳೆ ಅಮೆರಿಕಾದೊಡನೆ ನಮ್ಮ ಸಂಧಾನ ವಿಫಲವಾದರೆ ನ್ಯೂಕ್ಲಿಯರ್ ಕ್ಲಬ್ ನಮ್ಮ ನೆರವಿಗೆ ಬರಬಹುದೆ ?

ಶ್ರೀ : ರಷ್ಯಾ ಮತ್ತು ಫ್ರಾನ್ಸ್ ಕೂಡ ಆ ೪೦ ದೇಶಗಳಿಗೆ ಭಾರತವನ್ನು ಕುರಿತಂತೆ ರಿಯಾಯಿತಿ ತೋರಿಸೋಣ ಎಂದು ಹೇಳಿವೆ. ಸದ್ಯಕ್ಕಂತೂ ನಮ್ಮ ಸ್ಥಿತಿ ಸದೃಢವಾಗಿದೆ. ಒಂದು ವೇಳೆ ಇವು ಯಾವುವೂ ಕಾರ್ಯಗತವಾಗದಿದ್ದರೆ ನಾವು ಮುಂದುವರಿಯಲು ಯಾವುದೇ ಬಾಧಕವಿಲ್ಲ. ಇವೆಲ್ಲವನ್ನೂ ವಿದೇಶಿ ನೆರವು ಎಂದಷ್ಟೇ ಪರಿಗಣಿಸಬೇಕು ಅಷ್ಟೇ. ಈ ಯಾವ ನೆರವಿಲ್ಲದೆಯೂ ನಾವು ಸಮರ್ಥವಾಗಿ ಎದ್ದು ನಿಂತಿಲ್ಲವೆ ? ಪೆಟ್ರೋಲಿಯಮ್ ವಿಚಾರದಲ್ಲೇ ನೋಡಿ. ನಾವು ಅದರ ಬಗ್ಗೆ ಶೇಕಡ ೭೦ರಷ್ಟು ಪರಾವಲಂಬಿಗಳು. ಆದರೆ ಪೆಟ್ರೋಲ್ ಇಲ್ಲದಿದ್ದರೂ ಬದುಕು ಸಾಗುವುದಿಲ್ಲವೆ ? ಹಳ್ಳಿಗಳಲ್ಲಿ ಆಗುತ್ತಿರುವುದೇನು ? ದೇವೇಗೌಡರು ಪ್ರಧಾನಿಗಳಾಗಿದ್ದಾಗ ಒಂದು ಮಾತನ್ನು ಹೇಳಿದ್ದರು : 'ನೋಡಿ, ಟೆಸ್ಟ್ ಗಿಸ್ಟ್ ಮಾಡಬೇಕು ಅಂತ ಹೇಳ್ತಾರೆ, ಜೊತೆಗೆ ಹಾಗೆ ಮಾಡಿದರೆ ಆರ್ಥಿಕ ದಿಗ್ಬಂಧನ ಕೂಡ ಆಗುತ್ತೇ ಅಂತ ಹೇಳ್ತಾರೆ. ನಾನು ಹಳ್ಳಿಯಿಂದ ಬಂದವನು. ನಮ್ಮ ದೇಶಾನ ಇಂಥದರಿಂದ ಜಗ್ಗಿಸೋದಕ್ಕೆ ಆಗೋದಿಲ್ಲ. ರೈತರು ಏನು ಬೆಳೆಯುತ್ತಾರೋ ಅದನ್ನು ತಿಂದುಕೊಂಡು ಇರ್ತಾರೆ. ನಾನು ಹೇಳೋದು ಇಷ್ಟೇ. ಈ ಟೆಸ್ಟ್ ವಿಚಾರವಾಗಿ ಎಲ್ಲ ಪಕ್ಷಗಳ ಸರ್ವಸಮ್ಮತಿ ಇರಬೇಕು. ಎಲ್ಲರೂ ಸರಿ ಅಂದರೆ ನಾನೂ ಒಪ್ಪುತ್ತೇನೆ.' ನೋಡಿ, ಈ ದೇವೇಗೌಡರು ಎಷ್ಟು ವಿಚಾರಶೀಲವಾಗಿ ಮಾತನಾಡಿದರು !

**ಹೊ :** ಕೊನೆಯ ಪ್ರಶ್ನೆ, ನ್ಯೂಕ್ಲಿಯರ್ ಶಕ್ತಿಯಾಗಲಿ, ವಿದ್ಯುಚ್ಛಕ್ತಿಯಾಗಲಿ, ಅದನ್ನೆಲ್ಲ ರಾಷ್ಟ್ರೀಯ ಜಾಲಕ್ಕೆ ಸಂಪರ್ಕ ಮಾಡ್ತಾರೆ. ಅದರ ಲಾಭ ಪಡೆಯೋರು ಮಾತ್ರ ಯಾರೊ ! ಉದಾಹರಣೆಗೆ, ಕೈಗಾ ಶಕ್ತಿ ಸ್ಥಾವರದಿಂದ ಸ್ಥಳೀಯರಿಗೇನು ಲಾಭವಾಗಿದೆ ?

ಶ್ರೀ : ಇದಕ್ಕೊಂದು ಮಾರ್ಗ ಇದೆ. ನಮಗೆ ಹೆಚ್ಚುವರಿ ಯೂನಿಟ್ ಬೇಕು ಅಂದರೆ ಇದಕ್ಕೆ ಸ್ಥಳೀಕರ ಸಹಭಾಗಿತ್ವ ಬೇಕಾಗುತ್ತೆ. ಆಗ ಶಕ್ತಿಯ ವಿತರಣೆಯಲ್ಲಿ ಅವರು ಪಾಲು ಕೇಳಬಹುದು.

**ಹೊ :** ಡಾ|| ಶ್ರೀನಿವಾಸನ್ ಅವರೇ, ದಣಿವರಿಯದೆ ಉತ್ಸಾಹದ ಚಿಲುಮೆಯಾಗಿ ಇಷ್ಟು ಹೊತ್ತು ನಮ್ಮೊಂದಿಗೆ ಮುಕ್ತವಾಗಿ ನಿಮ್ಮ ಅನುಭವವನ್ನು, ಅನಿಸಿಕೆಗಳನ್ನು ಹಂಚಿಕೊಂಡಿದ್ದಕ್ಕೆ ಧನ್ಯವಾದಗಳು.


ಸಂದರ್ಶನ ಸಂಯೋಜನೆ : **ಟಿ. ಆರ್. ಅನಂತರಾಮು**
ನಂ. ೫೩೪, 'ಧಾತ್ರಿ', ೭೦ನೇ ಕ್ರಾಸ್, ೧೪ನೇ ಮುಖ್ಯರಸ್ತೆ
ಕುಮಾರಸ್ವಾಮಿ ಲೇಔಟ್ ೧ನೇ ಹಂತ, ಬೆಂಗಳೂರು - ೫೬೦ ೦೭೮
ಮತ್ತು
**ಕೆ. ಎಸ್. ಪಾರ್ಥಸಾರಥಿ**
ಸಿ-೨, 'ಐಕ್ಯತಾ', ೬೦/೨, ೧೭ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫



# ರಾಷ್ಟ್ರೀಯತೆಯ ಆಚರಣೆಯ ಸೂತ್ರ

ನಮ್ಮಲ್ಲಿ ಭಾಷೆ, ಧರ್ಮ, ಪ್ರದೇಶ, ಸಂಸ್ಕೃತಿ ಇವುಗಳಿಂದ ನಿರ್ದೇಶಿತವಾದ ಹಲವು ರಾಷ್ಟ್ರೀಯತೆಗಳಿವೆ. ಇವು ನಿತ್ಯ ಸಾಪೇಕ್ಷವಾದ ಶ್ರೇಣೀಕರಣಗಳು. ಧಾರ್ಮಿಕ ರಾಷ್ಟ್ರೀಯತೆ ಕೆಲವೊಮ್ಮೆ ಭಾಷಿಕ ರಾಷ್ಟ್ರೀಯತೆಯೊಂದಿಗೆ ಸಮೀಕರಣಗೊಂಡು 'ಅನ್ಯ'ಧರ್ಮ, ಉಪರಾಷ್ಟ್ರೀಯತೆಗಳ ಮೇಲೆ ಯಜಮಾನಿಕೆ ನಡೆಸಬಹುದು. ಸಾಂಸ್ಕೃತಿಕ ರಾಷ್ಟ್ರೀಯತೆಯು ತಳ ಸಂಸ್ಕೃತಿಗಳನ್ನು ಕೀಳಾಗಿ ಕಾಣುತ್ತ ಕಲ್ಪಿತ ಸಾಂಸ್ಕೃತಿಕ ಏಕತೆಯನ್ನು 'ಸ್ಥಳೀಯ' ಸಂಸ್ಕೃತಿಗಳ ಮೇಲೆ ಹೇರುತ್ತಿರಬಹುದು. ಸದಾ ಈ ಹಲವು ರಾಷ್ಟ್ರೀಯತೆಗಳ ನಡುವೆ ಸಂಘರ್ಷ ನಡೆಯುತ್ತಿರುತ್ತದೆ. ಇವಲ್ಲದೆ ದಲಿತರು ಮಾರ್ಕ್ಸ್‌ವಾದಿಗಳು ಧರ್ಮ ನಿರಪೇಕ್ಷತೆಯ ವಾದಿಗಳು ಹೀಗೆ ಹಲವು ತೆರನ ರಾಷ್ಟ್ರೀಯತೆಯ ವ್ಯಾಖ್ಯಾನಗಳಿರಲು ಸಾಧ್ಯ. ಹಾಗಾಗಿ ಇಲ್ಲಿ ಒಂದು ರಾಷ್ಟ್ರೀಯತೆಯ ಜೊತೆಗೆ ಹಲವು ರಾಷ್ಟ್ರೀಯತೆಗಳೂ ಇವೆ.

ಆರಂಭದಲ್ಲಿ ಗಾಂಧಿವಾದಿ ಕನಸಿನ ರಾಷ್ಟ್ರವೇ ಬೇರೆ, ನೆಹರೂವಾದಿ ಕಲ್ಪನೆಯ ರಾಷ್ಟ್ರವೇ ಬೇರೆ, ಸಂಘಪರಿವಾರದವರ ರಾಷ್ಟ್ರೀಯತೆಯೇ ಬೇರೆ ಬೇರೆ ಆಗಿದ್ದುವು. ಆದರೆ ಇಂದು ಗಾಂಧಿವಾದಿ ರಾಷ್ಟ್ರಕಲ್ಪನೆ ಸರಿಸುಮಾರು ಇಲ್ಲವಾಗಿದೆ. ನೆಹರೂವಾದಿ ಮತ್ತು ಸಂಘ ಪರಿವಾರದ ರಾಷ್ಟ್ರೀಯತೆಗಳು ಪರಸ್ಪರ ಕೈಜೋಡಿಸಿವೆ. ಹೀಗಾಗಿ ಇಂದಿನ ರಾಷ್ಟ್ರೀಯತೆಯು ಪ್ರಗತಿ, ಕೈಗಾರಿಕೀಕರಣ, ನಗರೀಕರಣ, ಆಧುನಿಕತೆ, ಸಾಮ್ರಾಜ್ಯವಾದ, ಮಾರುಕಟ್ಟೆ ಆರ್ಥಿಕತೆ, ಸಂಸ್ಕೃತಿ-ಸ್ವದೇಶಿ ರಕ್ಷಣೆ, ಧರ್ಮ, ಅಂಧಾಭಿಮಾನ, ಸನಾತನತೆ ಇವುಗಳ ಹಿಡಿತಕ್ಕೆ ಸಿಲುಕಿದೆ. ಇಂಥ ರಾಷ್ಟ್ರೀಯತೆಯು ಏಕರೂಪೀಕರಣದ ಕಡೆಗೆ ಚಲಿಸುತ್ತಿದೆ.

ಅಲ್ಲದೆ ಏಕತೆಯನ್ನು ಉಂಟುಮಾಡುವ ಒಂದು ಸಂಘಟಕ ಶಕ್ತಿಯಂತೆಯೂ ಜನತೆಯನ್ನು ಒಡೆಯುವ ವಿಘಟಕ ಶಕ್ತಿಯಂತೆಯೂ ಈ ರಾಷ್ಟ್ರೀಯತೆಯು ಇಂದು ಕೆಲಸ ಮಾಡುತ್ತಿದೆ. ಹಲವು ತೆರನ 'ನಾವು ಮತ್ತು ಅನ್ಯರು' (ಸ್ಥಳೀಯ ಮತ್ತು ಪರಕೀಯ) ಎಂಬ ಬೈನರಿಗಳನ್ನು ಈ ರಾಷ್ಟ್ರೀಯತೆ ಪೋಷಿಸುತ್ತಲೂ ಇದೆ. ಹೀಗಾಗಿ ಭಾವನಾತ್ಮಕ ಏಕತೆ, ಧರ್ಮ, ಭಾಷೆ ಜನಾಂಗ, ಪ್ರದೇಶ, ಸಂಸ್ಕೃತಿ, ಉಪರಾಷ್ಟ್ರೀಯತೆಗಳು, ಆಧುನಿಕತೆ ಇಂಥ ಹಲವು ಮುಖಗಳಲ್ಲಿ ಈ ರಾಷ್ಟ್ರೀಯತೆಯು ಇಂದು ಬೈನರಿಯೂ ಬಹುರೂಪಿಯೂ ಏಕರೂಪಿಯೂ ಆಗಿ ಆಚರಣೆಯಾಗುತ್ತಿದೆ.

**ಭಾರತಾಂಬೆಯ ಕಲ್ಪನೆ**

ತಾಯಿಯ ಸಂಬಂಧವನ್ನು ರಾಷ್ಟ್ರಕ್ಕೆ ಕಲ್ಪಿಸಿ, ಎಲ್ಲರ ಭಾವನಾತ್ಮಕ ತಾಯಿಯಾಗಿ ಭಾರತಾಂಬೆಯ ಕಲ್ಪನೆಯನ್ನು ಮಾಡಿಕೊಳ್ಳಲಾಗಿದೆ. ಭಾರತಮಾತೆಯ ಮಕ್ಕಳಾದ ನಾವೆಲ್ಲರೂ ಸೋದರ ಸಂಬಂಧಿಗಳು ಎಂಬ ಈ ನಂಬಿಕೆಯ ಹಿಂದೆ ಭಾವನಾತ್ಮಕವಾಗಿ ಎಲ್ಲರನ್ನೂ ಒಂದೇ ಎಂದು ಬಿಂಬಿಸುವ ಪ್ರಯತ್ನವಿದೆಯಾದರೂ ಇದು ಕೆಲವರನ್ನು ದೂರ ಇಡುವ ಹುನ್ನಾರವೂ ಹೌದು. ಧಾರ್ಮಿಕ, ಭಾಷಿಕ, ಜಾತೀಯ, ಪ್ರಾದೇಶಿಕ ಅಸಮಾನತೆಗಳ ನಿವಾರಣೆಗೆ ಈ ಕಲ್ಪನೆಯಲ್ಲಿ ಉತ್ತರವಿಲ್ಲ. ಬ್ರಿಟಿಷರ ವಿರುದ್ಧ ಉಪಖಂಡದ ಎಲ್ಲರನ್ನೂ ಸಂಘಟಿಸಲು ಸಮಸ್ತರ ಮಾತೆಯ ಕಲ್ಪನೆಯ ಅಗತ್ಯ ಅಂದು ಇತ್ತು. ಆದರೆ ಎಂದೂ ಈ ಕಲ್ಪನೆ ಸಮಸ್ತರನ್ನೂ ಒಳಗೊಳ್ಳುವ ಕಲ್ಪನೆಯಾಗಿ ಮೂಡಲಿಲ್ಲ. ಭಾರತಮಾತೆಯ ಚಿತ್ರ ಹಿಂದೂ ಮಾತೆಯ ಚಿತ್ರವೇ ಆಗಿದೆ. ಆಕೆಯ ಚಿತ್ರವನ್ನು ನೋಡಿದರೆ ಅಲ್ಲಿ ಯಾವ ಮುಸ್ಲಿಂ, ಸಿಖ್, ಜೈನ, ಗೊಲ್ಲ, ಹೊಲೆಯಾದಿ

ಇದು ಸುವರ್ಣ ಕರ್ನಾಟಕ ವರ್ಷ. ಭಾರತವು ಸ್ವಾತಂತ್ರ್ಯಗಳಿಸಿ 60ನೇ ವರ್ಷಕ್ಕೆ ಕಾಲಿಡುತ್ತಿರುವ ಸಂದರ್ಭವೂ ಕೂಡ. ನಮ್ಮ ರಾಷ್ಟ್ರೀಯತೆ ಮತ್ತು ಉಪರಾಷ್ಟ್ರೀಯತೆಗಳು ರಾಜಕೀಯ ಅಸ್ತಿತ್ವ ಪಡೆದು ಸುಮಾರು ಒಂದು ತಲೆಮಾರು ಕಾಲಮಾನವಾಗಿದೆ. ಈ ಸಂದರ್ಭದಲ್ಲಿ ನಮ್ಮ ರಾಷ್ಟ್ರೀಯತೆಯ ಆಚರಣೆಯು ನಮ್ಮಲ್ಲಿ ಒಡ್ಡಿರುವ ಆತಂಕಗಳನ್ನು ಪರಿಶೀಲಿಸುವುದು ಈ ಬರೆಹದ ಉದ್ದೇಶವಾಗಿದೆ.

ರಾಮಲಿಂಗಪ್ಪ ಟಿ. ಬೇಗೂರು



ಕುರುಹುಗಳೂ ಕಾಣಿಸುವುದಿಲ್ಲ. ಈಕೆ ಖಂಡಿತ ಹಿಂದೂಮಾತೆ.

**ರಾಷ್ಟ್ರೀಯತೆಯ ಕಲ್ಪಿತ ಚಹರೆಗಳು**

ಒಂದು ರಾಷ್ಟ್ರಕ್ಕೆ ಒಬ್ಬಳೇ ದೇವಿ ಇರಬೇಕೆಂಬ ಏಕರೂಪಿ ವಾದದ ಪ್ರತೀಕ ಭಾರತಮಾತೆ. ಈ ಏಕರೂಪಿತನದ ಮುಂದುವರಿಕೆಯಾಗಿ ನಮ್ಮಲ್ಲಿ ರಾಷ್ಟ್ರಧರ್ಮ, ರಾಷ್ಟ್ರ ಭಾಷೆ, ರಾಷ್ಟ್ರಪಕ್ಷಿ, ರಾಷ್ಟ್ರಪ್ರಾಣಿ, ರಾಷ್ಟ್ರಪುಷ್ಪ, ರಾಷ್ಟ್ರಗೀತೆ ಎಲ್ಲವೂ ಇವೆ. ಭಾರತಕ್ಕೆ ಒಂದು ರಾಷ್ಟ್ರವೆಂಬ ಚಹರೆ ಪ್ರಾಪ್ತವಾಗುತ್ತಿದ್ದಂತೆ ಇಲ್ಲಿ ಕ್ರಮೇಣ ಹಲವು ಸಮುದಾಯಗಳೂ ಕಲ್ಪಿತಗೊಂಡಿವೆ. ಇವು ಸರಿಸುಮಾರು ರಾಷ್ಟ್ರೀಯತೆಯ ಫಲಿತಗಳೇ ಹೌದು. ಹಿಂದೂ ಧರ್ಮವೆಂಬ ಒಂದು ಧರ್ಮದ ಕಲ್ಪನೆ, ಹಿಂದಿ ಭಾಷೆಯೆಂಬ ರಾಷ್ಟ್ರಭಾಷೆಯ ಕಲ್ಪನೆ, ಆರ್ಯ - ದ್ರಾವಿಡವೆಂಬ ಬೈನರಿ ಜನಾಂಗ ಕಲ್ಪನೆ, ದಲಿತ-ಅಚ್ಯುತ ಇತ್ಯಾದಿ ಸಮುದಾಯ ಕಲ್ಪನೆಗಳು, ಹೀಗೆ ಹಲವು ಕಲ್ಪಿತ ಸಮುದಾಯಗಳು ರಾಷ್ಟ್ರೀಯತೆಯೊಂದಿಗೆ ಹುಟ್ಟಿ ಹಲವು ತೆರನ ಧನ ಮತ್ತು ಋಣಾತ್ಮಕ ಪರಿಣಾಮಗಳಿಗೆ ಕಾರಣವಾಗಿದೆ ಮತ್ತು ಇಂದಿಗೂ ಕಾರಣವಾಗುತ್ತಿದೆ. ಇದನ್ನು ರೋಮಿಲಾ ಥಾಪರ್ ದೀರ್ಘವಾಗಿ ಚರ್ಚಿಸಿದ್ದಾರೆ.

ಒಂದು ರಾಷ್ಟ್ರ ಅಂದಮೇಲೆ ಒಂದು ಸಂಸ್ಕೃತಿ ಇರಬೇಕಲ್ಲವೇ! ಅದಕ್ಕಾಗಿ ನಿರಂತರ ನಿರ್ವಚನ ನಡೆಯುತ್ತಲೇ ಇದೆ. ಭಾರತೀಯ ಸಂಸ್ಕೃತಿ ಎಂಬ ಒಂದು ಸಂಸ್ಕೃತಿಯ ಕಲ್ಪನೆ ಕೂಡ ರಾಷ್ಟ್ರೀಯತೆಯ ಕಲ್ಪಿತ ಚಹರೆಯೇ. ಈ ತೆರನ ಒಂದು ಸಂಸ್ಕೃತಿ ಇಲ್ಲ. ಆದಾಗ್ಯೂ ರಾಷ್ಟ್ರೀಯತೆ ಮಾತ್ರ ಇಂಥ 'ಏಕತಾ ಕಲ್ಪನೆ'ಗಳ ಹುಟ್ಟಿಗೆ ಸದಾ ಪ್ರಚೋದಕವಾಗಿ ದುಡಿಯುತ್ತಿರುತ್ತದೆ. ಆದರೆ ಈ ಕಲ್ಪನೆಗಳು ಇಂದು ಏಕತೆಗಿಂತ ಯಜಮಾನಿಕೆಯ ಕಲ್ಪನೆಗಳಾಗಿ ಬೆಳೆಯುತ್ತಿವೆ.

**ಕನ್ನಡಮ್ಮನ ಕಲ್ಪನೆ**

ಸ್ವಾತಂತ್ರ್ಯಕ್ಕೆ ಮುಂಚೆ ಇದ್ದ ಒಬ್ಬಳೇ ಮಾತೆಯ ಜೊತೆಗೆ ಭಾಷಾವಾರು ಪ್ರಾಂತಗಳ ವಿಂಗಡಣೆಯ ನಂತರ ರಾಜ್ಯವಾರು ಮಾತೆಯರೂ ಸೇರಿಕೊಂಡಿದ್ದಾರೆ. ಕನ್ನಡ ರಾಷ್ಟ್ರೀಯತೆಯ ಕುರುಹಾದ ಭುವನೇಶ್ವರಿ ಕೂಡ ಕೋಮುವಾದಿ ಮಾತೆಯೇ. ಎಷ್ಟೇ ಆಗಲಿ ಈಕೆ ಭಾರತ ಜನನಿಯ ತನುಜಾತೆಯಲ್ಲವೆ! ಈ ಸಂಬಂಧದಲ್ಲಿ ನಾವೆಲ್ಲರೂ ಭಾರತಮಾತೆಯ ಮಕ್ಕಳೂ ಹೌದು, ಮೊಮ್ಮಕ್ಕಳೂ ಹೌದು. ಇಬ್ಬರು ಮೂವರು ತಾಯಿಯರಾದಾಗ ಸಹಜವಾಗಿಯೇ ಶ್ರೇಣೀಕರಣ ಉಂಟಾಗುವುದಿಲ್ಲವೇ ? ಹಾಗಾಗಿ ಭಾರತಮಾತೆ ಎಲ್ಲ ಮಾತೆಯರಿಗೂ ದೊಡ್ಡವಳು.

ಕನ್ನಡ ರಾಷ್ಟ್ರೀಯತೆಯಂತೆಯೇ ಭಾರತೀಯ ಉಪರಾಷ್ಟ್ರೀಯತೆಗಳೆಲ್ಲವೂ ಏಕತೆ ಮತ್ತು ಅಸಮಾನತೆಗಳೆರಡನ್ನೂ ಇರಿಸಿಕೊಂಡಿವೆ. ವಿವಿಧತೆಯಲ್ಲಿ ಏಕತೆಯನ್ನು ಕಾಪಾಡಿಕೊಳ್ಳುವುದೆಂದರೆ ಅಸಮಾನತೆಯಲ್ಲಿ ಸಹನೆಯನ್ನು ಕಾಯ್ದುಕೊಳ್ಳುವುದೆಂದೇ ಅರ್ಥ. ವಿಶ್ವಮಾನವ, ವಿಶ್ವಕುಟುಂಬ, ವಿಶ್ವಭ್ರಾತೃತ್ವ ಚಿಂತನೆಗಳು ರಾಷ್ಟ್ರೀಯತೆಗಳನ್ನು ಮೀರುವ ಆದರ್ಶಗಳೇನೋ ಹೌದು. ಆದರೆ ಈಗ ಆದರ್ಶಗಳೂ ಕೂಡ ಭಾವನಾತ್ಮಕವಾದ ಒಂದು ಸುಖೀ ಸ್ಥಿತಿಯನ್ನು ಸಾಧಿಸುವ ಕಡೆಗೆ ನಮ್ಮನ್ನು ಪ್ರಚೋದಿಸುತ್ತವೆಯೇ ವಿನಾ ವಾಸ್ತವವಾಗಿ ಅಸಮಾನತೆಯಲ್ಲಿ ಸಹನೆಯ ಸ್ಥಿತಿಯನ್ನು ನಿರಾಕರಿಸುವುದಿಲ್ಲ.

**ಪ್ರೇಮ-ಭಕ್ತಿ-ಅಭಿಮಾನ**

ರಾಷ್ಟ್ರೀಯತೆಯಲ್ಲಿ ಆಯಾ ನೆಲ, ಜಲ, ಭಾಷೆ ಕಲೆ, ಸಂಸ್ಕೃತಿ, ದೈವ, ಧರ್ಮ ಇತ್ಯಾದಿಗಳ ಬಗೆಗಿನ ಭಾವನಾತ್ಮಕ ಪ್ರೇಮವೂ ಸೇರಿರುತ್ತದೆ. ಈ ಪ್ರೇಮ ಬಹಳ ಪೊಸೆಸಿವ್ ಆದದ್ದು. ಇವೆಲ್ಲ ನಮ್ಮವು ಎಂಬ ಒಡೆತನ ಉಳ್ಳದ್ದು. ಇಂಥ ಒಡೆತನವು ಇವುಗಳಿಗೆ ಅನ್ಯರಿಂದ ಧಕ್ಕೆ ಉಂಟಾದಾಗ ರಕ್ಷಣೆಗಾಗಿ ಪ್ರಾಣತ್ಯಾಗಕ್ಕೂ ಸಿದ್ಧವಿರಬೇಕೆಂಬ ನಿಷ್ಠೆಯನ್ನು ಬಯಸುತ್ತದೆ. ಇದು ಬರಿ ನಿಷ್ಠೆ ಅಷ್ಟೇ ಅಲ್ಲ, ಕರ್ತವ್ಯ ಕೂಡ. ಕುರುಡು ಅಭಿಮಾನವು ಇಂಥ ಕರ್ತವ್ಯಕ್ಕೆ ಪ್ರಾಣ ನೀಗುವುದನ್ನು ಬಲಿದಾನವೆಂದೇ ವ್ಯಾಖ್ಯಾನಿಸುತ್ತದೆ.

ವಿಶೇಷವೆಂದರೆ ದೈನಂದಿನ ಸಮಾಜದಲ್ಲಿ ಯಾರಾದರೂ ಯಾರನ್ನಾದರೂ ಕೊಂದರೆ ಅದು ಅಪರಾಧವಾಗುತ್ತದೆ. ಆದರೆ ಅದೇ ರಾಷ್ಟ್ರ ರಾಷ್ಟ್ರಗಳ ನಡುವಣ ಯುದ್ಧದಲ್ಲಿ ಮಾಡುವ ಕೊಲೆಯು (ವಧೆ-ಹತ್ಯೆ) ಕರ್ತವ್ಯ ಪಾಲನೆ ಎನಿಸುತ್ತದೆ. ಶ್ಲಾಘನೀಯ ಕಾರ್ಯ ಎನ್ನಿಸುತ್ತದೆ. ಬರ್ಟ್ರಂಡ್ ರಸೆಲ್ ಇದನ್ನು ವಿವರವಾಗಿ

ಚರ್ಚಿಸಿರುವುದುಂಟು. ಪ್ರಭುತ್ವ ಪ್ರಣೀತ ಹಿಂಸೆ - ಭಯೋತ್ಪಾದನೆಗಳನ್ನು, ದೇಶಭಕ್ತಿಯ ಹೆಸರಿನಲ್ಲಿ ನಡೆಯುವ ಹಿಂಸಾಚಾರಗಳನ್ನು, ಈ ರಾಷ್ಟ್ರೀಯತೆಯು ಮಾನ್ಯವೆಂದು ಬೆಂಬಲಿಸುತ್ತದೆ. ಅನ್ಯರ ಮಾನ-ಪ್ರಾಣ ಹರಣವೇ ನಮ್ಮವರ ವಿಜಯೋತ್ಸವ ಎಂಬ ದೇಶಭಕ್ತಿಯಲ್ಲಿ ಮಾನವೀಯತೆಗೆ ಜಾಗ ಕಡಿಮೆ. ಗಡಿಗಳನ್ನು ಗೋಡೆಗಳಾಗಿಸಲು, ಸ್ವ-ಅನ್ಯ ಎಂಬ ದ್ವೀಪಗಳನ್ನು ನಿರ್ಮಿಸಲು ಸದಾ ಇದು ಕುಮ್ಮಕ್ಕು ನೀಡುತ್ತದೆ. ರಾಷ್ಟ್ರವು ದೈವರೂಪಿ – ಅದು ಪೂಜಾರ್ಹ ಎಂದು ಹೇಳುವ ಈ ರಾಷ್ಟ್ರೀಯತೆಯು ತನ್ನನ್ನು ಪ್ರಶ್ನೆ ಮಾಡದೆ ಭಕ್ತಿ ತೋರುವುದನ್ನು ಮಾತ್ರ ಅಪೇಕ್ಷಿಸುತ್ತದೆ.

**ರಾಷ್ಟ್ರ–ಧರ್ಮಗಳ ಸಮೀಕರಣ**

ಇವತ್ತು ರಾಷ್ಟ್ರ ಮತ್ತು ಧರ್ಮ ಹಾಗೂ ಭಾಷೆಗಳನ್ನು ರಾಷ್ಟ್ರೀಯತೆಯು ಸಮೀಕರಿಸಿದೆ. ನಮ್ಮಲ್ಲಿನ ಜಾತಿ, ಕುಲ, ಪಂಥ, ಬುಡಕಟ್ಟು ಸಮುದಾಯಗಳ ಚಹರೆಗಳನ್ನೆಲ್ಲ ಏಕರೂಪಿಸಿ ಹಿಂದೂ ಎಂಬ ಒಂದೇ 'ಕಲ್ಪಿತ' ಧಾರ್ಮಿಕ ಸಮುದಾಯದಲ್ಲಿ ತುರುಕಲಾಗಿದೆ. ವಾಸ್ತವದ ಬಹುಮುಖತೆಯನ್ನು ನಿರಾಕರಿಸುವಂತಹ ರಾಷ್ಟ್ರೀಯತೆಯನ್ನಿಂದು ಆಚರಣೆಗೆ ತರಲಾಗುತ್ತಿದೆ. ಒಂದು ರಾಷ್ಟ್ರಕ್ಕೆ ಒಂದೇ ಧರ್ಮ, ಒಂದೇ ಕಾನೂನು ಇರಬೇಕೆನ್ನುವ ರಾಷ್ಟ್ರೀಯವಾದವು ಸಮಾನ ನಾಗರಿಕ ಸಂಹಿತೆಯನ್ನು ಎಲ್ಲರ ಮೇಲೂ ಹೇರುತ್ತಿದೆ. ಉರ್ದು ಮುಸ್ಲಿಮರ ಭಾಷೆ, ಹಿಂದಿ ಹಿಂದೂಗಳ ಭಾಷೆ ಎಂಬ ನಂಬಿಕೆಯನ್ನು ಬಿತ್ತಲಾಗುತ್ತಿರುವ ಈ ರಾಷ್ಟ್ರೀಯತೆಯಿಂದ ಇತರ ದೇಶಭಾಷೆಗಳೂ ಹಿಂದಿ ದಬ್ಬಾಳಿಕೆಗೆ ಗುರಿಯಾಗಿವೆ. ಹಿಂದೂಗಳಿಗೆ ಹಿಂದೂಸ್ತಾನ, ಮುಸ್ಲಿಮರಿಗೆ ಪಾಕಿಸ್ತಾನ ಇರುವುದರಿಂದ ಭಾರತೀಯ ಮುಸ್ಲಿಮರೆಲ್ಲ ಪಾಕಿಸ್ತಾನಕ್ಕೆ ಹೋಗಲಿ ಎಂಬ ಧೋರಣೆಯೊಂದು 'ರಾಷ್ಟ್ರೀಯವಾದ'ದಿಂದ ಪ್ರಚಾರಗೊಳ್ಳುತ್ತಿದೆ. ಇಂಥ ಸಮೀಕೃತ ರಾಷ್ಟ್ರೀಯತೆಯು ಅಪಾಯಕಾರಿಯಾದದ್ದು.

ರಾಷ್ಟ್ರೀಯ ಬೇಕು ಬೇಡಗಳು ಬಹುಸಂಖ್ಯಾತರ ಬೇಕು ಬೇಡಗಳೇ ಆಗಿದ್ದು ಅಲ್ಪಸಂಖ್ಯಾತರು ಅನಾಥಪ್ರಜ್ಞೆಗೆ ದೂಡಲ್ಪಡುತ್ತಿದ್ದಾರೆ. ಸಂಖ್ಯಾಬಲವೇ ಪ್ರಭುತ್ವವನ್ನೂ ನಿರ್ಧರಿಸುವ ಪ್ರಜಾಪ್ರಭುತ್ವದಲ್ಲಿ ಯಾರನ್ನಾದರೂ ಅಲ್ಪಸಂಖ್ಯಾತರೆಂದು ಕರೆಯುವುದೇ ಅವರ ಆತ್ಮಸ್ಥೈರ್ಯವನ್ನು ಕುಗ್ಗಿಸುವ, ಆ ಮೂಲಕ ಧಾರ್ಮಿಕ ಆಸರೆಗೆ ಅವರನ್ನು ತಳ್ಳುವ ಕ್ರಿಯೆಯಾಗಿದೆ. ಭಾರತದಲ್ಲಿ ಮುಸ್ಲಿಮರು ಇತ್ತೀಚೆಗೆ ಹೆಚ್ಚು ಹೆಚ್ಚು ಕರ್ಮಠರಾಗಲು ಈ ಹಿಂದೂ ಎಂಬ 'ಕಲ್ಪಿತ' ಬಹುಸಂಖ್ಯಾತ ರಾಷ್ಟ್ರೀಯತಾ ಯಜಮಾನಿಕೆಯೇ ಪರೋಕ್ಷವಾಗಿ ಕಾರಣವಾಗಿದೆ. ಧಾರ್ಮಿಕ ದಬ್ಬಾಳಿಕೆ, ಹಿಂಸೆ, ಕೋಮುಗಲಭೆಗಳು ಬಹುಸಂಖ್ಯಾತರಿಂದ ಜರುಗಿದಾಗ ನ್ಯಾಯಯುತ ಮತ್ತು ಧರ್ಮ ರಕ್ಷಣಾ ಕರ್ತವ್ಯಗಳೆಂದೂ ಅಲ್ಪಸಂಖ್ಯಾತರ ಪ್ರತಿಕ್ರಿಯೆಗಳು ದೇಶದ್ರೋಹದಂತೆಯೂ ಪರಿಗಣಿತವಾಗುವುದು ಪ್ರಜಾಪ್ರಭುತ್ವವಾದಿ ರಾಷ್ಟ್ರೀಯತೆಯ ಕ್ರೂರ ಮುಖವಾಗಿದೆ.

**ಪರಕೀಯ ಪ್ರಜ್ಞೆ**

ಮುಸ್ಲಿಮರನ್ನು ಅವರ ಅಲ್ಪಸಂಖ್ಯಾತ ಸ್ಥಿತಿಯೇ ಒಂದು ಸಾಮೂಹಿಕ ಅಭದ್ರತೆಗೆ ತಳ್ಳಿದೆ. ಭಾರತೀಯ ಮುಸ್ಲಿಮರಲ್ಲಿ ಬಹುಪಾಲು ಜನ ಪರಕೀಯ ಪ್ರಜ್ಞೆಯಿಂದ, ಮೈನಾರಿಟಿ ಕಾಂಪ್ಲೆಕ್ಸಿನಿಂದ ನರಳುತ್ತಿದ್ದಾರೆ. ದೇಶವಿಭಜನೆಯ ಹಿಂಸೆ ಘಟಿಸಿ ೬೦ ವರ್ಷಗಳಾದರೂ ಭಾರತ ಹಿಂದೂಗಳ ಸ್ವತ್ತು, ಪಾಕಿಸ್ತಾನ ಮುಸ್ಲಿಮರ ಸ್ವತ್ತು ಎಂಬ ಭಾವನೆ ಗಾಢವಾಗಿರುವುದು ರಾಷ್ಟ್ರವನ್ನು ಧರ್ಮಗಳು ಆಳುವ ಪರಿಯಾಗಿದೆ.

ಈ ಹಿಂದೂ ಎಂಬ ಕಲ್ಪಿತ ಧರ್ಮದ ಜಾಯಮಾನವೇ ಒಂದೋ ಜೀರ್ಣಿಸಿ ಕೊಂಡು ಐಕ್ಯ ಮಾಡಿಕೊಳ್ಳುವುದು, ಇಲ್ಲವೇ ಅನ್ಯವೆಂದು ಉಚ್ಚಾಟಿಸುವುದು. ಇಸ್ಲಾಂ ಧರ್ಮವನ್ನು ಇದು ಎಂದಿಗೂ ಜೀರ್ಣಿಸಿಕೊಳ್ಳಲು ಆಗಲೇ ಇಲ್ಲ. ತಮ್ಮದೇ ರಾಷ್ಟ್ರವಿಲ್ಲದ ಜೈನ, ಬೌದ್ಧ, ಸಿಖ್, ವೀರಶೈವ ಇತ್ಯಾದಿ ಧರ್ಮಗಳು ಹಿಂದೂ ರಾಷ್ಟ್ರೀಯತೆಗೆ ಇಂದು 'ಅನ್ಯ' ಆಗಿ ಕಾಣುತ್ತಿಲ್ಲ. ಇವೆಲ್ಲ ದೇಶವಿಭಜನೆಯ ಕಾಲದಲ್ಲಿ ತಮ್ಮದೇ ಪ್ರತ್ಯೇಕ ರಾಷ್ಟ್ರದ ಬೇಡಿಕೆ ಒಡ್ಡದೆ ಹಿಂದೂ ರಾಷ್ಟ್ರೀಯತೆಯನ್ನು ಒಪ್ಪಿಕೊಂಡ ಧರ್ಮಗಳು. ಹಾಗಾಗಿ ಇವುಗಳು ಪರಕೀಯ ಪ್ರಜ್ಞೆಯಿಂದ ನರಳುತ್ತಿಲ್ಲ. ಅಲ್ಲದೆ ಇವು ಇಂದು ಎರಡನೇ ದರ್ಜೆಯ ತನದಲ್ಲಿ ಬಾಳುತ್ತಿರುವುದರಿಂದ ಮತ್ತು ನಿಜಕ್ಕೂ ಇವರು ಅಲ್ಪಸಂಖ್ಯಾತರಾಗಿ ಇರುವುದರಿಂದ ಈ ಅಲ್ಪಸಂಖ್ಯಾತ ತನವೇ ಇದಕ್ಕೆ ಒಂದು ಸೌಲಭ್ಯವಾಗಿದೆ.

ಸ್ಥಳೀಯ ಪರಕೀಯವಾದವನ್ನು ಮಂಡಿಸುವ ಸಂಘ ಪರಿವಾರದವರು ಸೋನಿಯಾ ಪರಕೀಯಳು ಎಂಬ ಕಾರಣಕ್ಕೆ ಇಲ್ಲಿ ಪ್ರಧಾನಿಯಾಗಕೂಡದೆಂದು ವಾದಿಸುತ್ತಾರೆ. ಪ್ರತಿ ಪ್ರದೇಶಗಳಲ್ಲೂ ಕಾಲವೆಂಬ ಗೋರಿಯನ್ನು ಅಗೆಯುತ್ತ ಹೋದರೆ ಸ್ಥಳೀಯ - ಪರಕೀಯವೆಂಬ ಯಜಮಾನ ಪರಿಭಾಷೆ ಬಿದ್ದುಹೋಗುತ್ತದೆ. ರಾಮಜನ್ಮಭೂಮಿ-ಬಾಬ್ರಿ ಮಸೀದಿ ಅಗೆಯುತ್ತ ಹೋದರೆ ಇತಿಹಾಸದಲ್ಲಿ ಅದು ಯಾರಿಗೆ ಸೇರಿದ್ದೆಂದು



ಶೋಧಿಸಲು ಸಾಧ್ಯವೇ ? ಇತಿಹಾಸವೇನೂ ನಿಂತ ನೀರಲ್ಲ. ಅದು ಶಾಶ್ವತ ಒಡೆತನಗಳಿಗೆ ಸಾಕ್ಷಿಯಂತೂ ಅಲ್ಲವೇ ಅಲ್ಲ. ಹೀಗಿರುವಾಗ ಐತಿಹಾಸಿಕ ಸಮರ್ಥನೆಯ ನೆಲದ ವಾರಸುದಾರಿಕೆ ಎಂಬುದೇ ಹಾಸ್ಯಾಸ್ಪದವಾದದ್ದು. ಸ್ಥಳೀಯತೆ-ಪರಕೀಯತೆಗಳು ಪ್ರದೇಶದಿಂದ ಆಗಲೀ, ಇತಿಹಾಸದಿಂದ ಆಗಲೀ ಶೋಧಿತವಾಗತಕ್ಕ ವಿಚಾರ ಅಲ್ಲ. ಅದು ವರ್ತಮಾನದ ಲಾಭಗಳಿಗೆ ಬಳಕೆಯಾಗುವ ನಾಣ್ಯ, ಅಷ್ಟೆ.

**ಉಪರಾಷ್ಟ್ರೀಯತೆ – ಭಾಷೆ**

ಭಾಷಾವಾರು ಪ್ರಾಂತ ವಿಂಗಡಣೆಯು ಭಾರತದಲ್ಲಿ ಹಲವಾರು ಉಪರಾಷ್ಟ್ರೀಯತೆಗಳ ಉಗಮಕ್ಕೆ ಕಾರಣವಾಗಿದೆ. ಬಹುಭಾಷಿಕತೆಯೇ ಭಾರತೀಯರ ಚಹರೆ ಆಗಿದ್ದಾಗ್ಯೂ ಆಯಾ ರಾಜ್ಯಗಳ ಭಾಷೆಯನ್ನು ಆಯಾ ರಾಜ್ಯಪ್ರಜೆಗಳು ಬಳಸಿ ಬೆಳೆಸಬೇಕೆಂದು ನಿರೀಕ್ಷಿಸಲಾಗುತ್ತಿದೆ. ದೇಶಭಕ್ತಿಯ ಎಲ್ಲ ಇತಿಮಿತಿಗಳೂ ಇಂದು ಭಾಷಾಭಕ್ತಿಗೂ ಇವೆ. ಚೋದ್ಯವೆಂದರೆ ಎಲ್ಲರಿಗೂ ಒಂದೊಂದೇ ತಾಯ್ನುಡಿ ಇರುತ್ತದೆ ಎಂಬ ಮೂಢನಂಬಿಕೆಯೊಂದು ನಮ್ಮಲ್ಲಿಂದು ಚಾಲ್ತಿಯಲ್ಲಿದೆ. ದುರಂತವೆಂದರೆ ಗಡಿಭಾಗಗಳ ಜನತೆ ಸಹಜವಾಗಿಯೇ ಬಹುಭಾಷಿಕರಾಗಿದ್ದರೂ ಅವರಿಗೆ ತಮ್ಮ ಭಾಷಿಕ ಆಯ್ಕೆಗಳಿಗೆ ಅವಕಾಶವಿಲ್ಲ. ಉಪರಾಷ್ಟ್ರೀಯತೆಯು ರಾಜ್ಯಭಾಷೆಯನ್ನೂ ಅವರು ಸ್ವೀಕರಿಸಬೇಕೆಂದು ಒತ್ತಾಯಿಸುತ್ತದೆ. ಗಡಿಗಳಲ್ಲಿ ಕೆಲವರಿಗೆ ಎರಡೆರಡು, ಮೂರುಮೂರು ತಾಯ್ನುಡಿಗಳಿರುತ್ತವೆ. ಇಂಥವರು ಯಾವ ನುಡಿಗೂ ತಾರತಮ್ಯ ತೋರುವುದಿಲ್ಲ. ಆದರೆ ಉಪರಾಷ್ಟ್ರೀಯತೆಯು ಈ ಬಹು ತಾಯ್ನುಡಿಗಳನ್ನು ಒಪ್ಪುವುದಿಲ್ಲ. ಇದು ಆಯಾಯ ಭಾಷೆಗಳು ಆಯಾಯ ರಾಜ್ಯಗಳಿಗೆ ಹೋಗಲಿ ಎಂದು ಒತ್ತಾಯಿಸುತ್ತದೆ. ಮುಸ್ಲಿಮರೆಲ್ಲ ಪಾಕಿಸ್ತಾನಕ್ಕೆ ಹೋಗಲಿ ಎಂಬ ವಾದಕ್ಕಿಂತ ಇದು ಭಿನ್ನವಲ್ಲ. ವಿಪರ್ಯಾಸವೆಂದರೆ ಭಾರತ ಮಾನ್ಯ ಮಾಡಿರುವ ಎಲ್ಲ ಭಾಷೆಗಳಿಗೂ ಅವುಗಳದ್ದೇ ರಾಜ್ಯ ಇಲ್ಲ. ತಮ್ಮದೇ ರಾಜ್ಯಗಳಿಲ್ಲದ ಭಾಷೆಗಳು ಎಲ್ಲಿ ಹೋಗಬೇಕು ?

ಕೋಲಾರದ ಗಡಿ ಪ್ರದೇಶದಲ್ಲಿ ತೆಲುಗು ಮತ್ತು ತಮಿಳು ಕನ್ನಡದೊಂದಿಗೆ ಮಾತೃಭಾಷೆಗಳಾಗಿವೆ. ಇಲ್ಲಿನ ಜನತೆ, ಅದರಲ್ಲೂ ವಿದ್ಯೆಗೆ ಒಡ್ಡಿಕೊಳ್ಳುತ್ತಿರುವ ಜನತೆ, ತಮ್ಮ ಬಹು ಮಾತೃಭಾಷಿಕ ಚಹರೆಯನ್ನು ಬಚ್ಚಿಟ್ಟುಕೊಳ್ಳಬೇಕಾದ – ಬಿಟ್ಟುಕೊಡ ಬೇಕಾದ ಒತ್ತಡಕ್ಕೆ ಸಿಲುಕಿದ್ದಾರೆ. ಕನ್ನಡ ರಾಷ್ಟ್ರೀಯತೆಯು ಈ 'ಅನ್ಯ' ಭಾಷೆಗಳನ್ನು ಈ ನೆಲದಿಂದ ಉಚ್ಚಾಟಿಸಬೇಕೆಂದೇನೂ ವಾದ ಹೂಡುವುದಿಲ್ಲ. ಆದರೆ ಇವುಗಳು ತಮ್ಮ ಪ್ರತಿಷ್ಠೆ ತೋರದೆ ಕನ್ನಡದ ಅಡಿಯಾಳಂತೆ, ಎರಡನೇ ದರ್ಜೆಯತನ ಒಪ್ಪಿಕೊಂಡು ಇರುವುದಾದರೆ ಇರಲಿ, ಇಲ್ಲದಿದ್ದರೆ ಮುಸಿಬಳಿಸಿಕೊಂಡು ಜಾಗ ಖಾಲಿಮಾಡಲಿ ಎಂಬ ವಾದ ಇದರದ್ದು.

**ರಾಷ್ಟ್ರೀಯತೆಗಳು ಮತ್ತು ನಿಸರ್ಗ**

ಉಪರಾಷ್ಟ್ರೀಯತೆಗೂ ನಿಸರ್ಗಕ್ಕೂ ಒಂದು ತೆರನಾದ ಸಂಬಂಧ ಇದೆ. ಇದು ಪ್ರೇಮವೂ ಒಡೆತನವೂ ಸ್ವಾರ್ಥವೂ ಒಂದೇ ಎಂದು ಹೇಳುವ ಸಂಬಂಧ. ನಮ್ಮಲ್ಲಿನ ಮಹಾರಾಷ್ಟ್ರ - ಕರ್ನಾಟಕದ ನಡುವಿನ ಗಡಿ ವಿವಾದ, ಕಾವೇರಿ ವಿವಾದ, ಆಲಮಟ್ಟಿ ವಿವಾದ, ನೆರೆ-ಬರ ಪರಿಹಾರ ಸಮಸ್ಯೆಗಳ ಹಿಂದೆ ಉಪರಾಷ್ಟ್ರೀಯತೆ ಖಂಡಿತ ಪ್ರಧಾನ ಪಾತ್ರ ವಹಿಸುತ್ತಿದೆ. ಭಾಷೆಗಳಿಗೆ, ನೀರು-ಗಾಳಿ-ಬೆಳಕು ಇತ್ಯಾದಿ ಸಂಪನ್ಮೂಲಗಳಿಗೆ ನಾವು ಹೇಳುವ ಉಪರಾಷ್ಟ್ರೀಯ ಗಡಿಗಳಿರುವುದಿಲ್ಲ. [illegible] ತುಂಡರಿಸಿ ಇದು ನಮ್ಮದು ಎನ್ನುವಷ್ಟು [illegible] ಮಾಡಲಾಗುವುದಿಲ್ಲ. ಆದರೆ ಉಪರಾಷ್ಟ್ರೀಯತೆಗಳು ಈ ಪ್ರಾಕೃತಿಕ [illegible] ಮಾಡಿಕೊಳ್ಳುವುದಿಲ್ಲ. ನಿಸರ್ಗವನ್ನೂ ಕೂಡ ಇವು ತಮ್ಮ [illegible]

ಕೊಳ್ಳಲು ಬಯಸುತ್ತವೆ. ಈ ರಾಷ್ಟ್ರೀಯತೆಗಳೇ ಹೀಗೆ : ತಿಕ್ಕಲು ಏಕಮುಖ ರಸ್ತೆಯ ಪ್ರೇಮಿಗಳ ಹಾಗೆ ; ಒಡೆತನವನ್ನು ಪ್ರೇಮದ ಹೆಸರಿನಲ್ಲಿ ಹೇರುವ ಜಾಯಮಾನಗಳು.

ಅಲ್ಲೆಲ್ಲೋ ನರ್ಮದಾ ನದಿಗೆ ಬೃಹತ್ ಅಣೆಕಟ್ಟು ಕಟ್ಟಿದರೆ ಅದರ ಪರಿಣಾಮಗಳು ಆ ಪ್ರದೇಶಕ್ಕೆ ಮಾತ್ರ ಸೀಮಿತವಾದುವಲ್ಲ. ಕೋಲಾರದಲ್ಲೆಲ್ಲೋ ವಿಪರೀತ ಕೊಳವೆ ಬಾವಿ ಕೊರೆದರೆ ಅದರ ಪರಿಣಾಮ ಕೋಲಾರಕ್ಕೆ ಮಾತ್ರ ಸೀಮಿತವಲ್ಲ. ಪರಿಸರದ ಮೇಲೆ ಎಲ್ಲೇ ದಾಳಿ ಮಾಡಲಿ ಅದರ ಪರಿಣಾಮಗಳು ಆಯಾ ರಾಷ್ಟ್ರೀಯ ಉಪ ರಾಷ್ಟ್ರೀಯ ಗಡಿಗಳಿಗೆ ಮಾತ್ರ ಸೀಮಿತವಾಗಿರುವುದಿಲ್ಲ. ಆದಾಗ್ಯೂ ಉಪರಾಷ್ಟ್ರೀಯತೆಗಳು ನಿಸರ್ಗವನ್ನು ತಮ್ಮ ಉಪಯೋಗಕ್ಕೆ ಮಾತ್ರ ಇರಬೇಕೆಂದು ಬಯಸುತ್ತವೆ.

ಜಗತ್ತಿನ ಸಕಲ ಸಂಪತ್ತು ನಮ್ಮದು ಮತ್ತು ಅನ್ಯರದ್ದು ಎಂಬುದಾಗಿ ಖಾಸಗಿ ಮತ್ತು ಸರ್ಕಾರಿ ಒಡೆತನಗಳಿಗೆ ಸೇರಲ್ಪಡುತ್ತಿದೆ. ಜಾಗತಿಕವಾಗಿ ನಿಸರ್ಗವನ್ನು ರಾಷ್ಟ್ರೀಯತೆಗಳು ಪಾಲು ಮಾಡಿಕೊಳ್ಳುತ್ತಿವೆ. ವಾಯುಪ್ರದೇಶ, ನದಿ, ಸಾಗರ, ಭೂಮಿಯ ಅಂತರ್ಭಾಗಗಳಿಗೂ ರಾಷ್ಟ್ರೀಯ ಗಡಿಗಳು ಪ್ರಾಪ್ತವಾಗಿವೆ. ಹೆಣ್ಣುಗಳಿಗಾಗಿ, ಸಾಕುಪ್ರಾಣಿಗಳಿಗಾಗಿ, ಭೂ ಒಡೆತನಕ್ಕಾಗಿ, ಅಧಿಕಾರ ಮೋಹಕ್ಕಾಗಿ ನಡೆಯುತ್ತಿದ್ದ ಎಲ್ಲ ಯುದ್ಧಗಳ ಹಿಂದೆ 'ಅನ್ಯ'ರ ಸಂಪತ್ತಿನ ಕೊಳ್ಳೆಯೂ ಒಂದು ಉದ್ದೇಶವಾಗಿರುತ್ತಿತ್ತು. ಆದರೆ ಈಗ ರಾಷ್ಟ್ರೀಯ ಒಡೆತನವನ್ನು ಮೀರಿ ತನ್ನ ಹಸ್ತಕ್ಷೇಪ ನಡೆಸಲು, ಅನ್ಯರನ್ನು ಶೋಷಿಸಲು ಕದನಗಳು ನಡೆಯುತ್ತಿವೆ. ವಸಾಹತುವಾದದ ಹಿಂದೆ ಇದ್ದ ಉದ್ದೇಶ ಇದೇ ಆಗಿತ್ತು. ಈಗ ಜಾಗತಿಕ ನ್ಯಾಯದ ಮುಖವಾಡದಲ್ಲಿ ಅಮೆರಿಕಾ ನಡೆಸುತ್ತಿರುವ ಹಸ್ತಕ್ಷೇಪ, ಪೆಟ್ರೋ ಟೆರರಿಸಂ, ಶಸ್ತ್ರ ಮಾರಾಟಗಳ ಹಿಂದೆ 'ಅನ್ಯ'ರ ಸಂಪತ್ತನ್ನು ರಾಷ್ಟ್ರೀಯ ಗಡಿಗಳಿಂದ ಕಿತ್ತುಕೊಳ್ಳುವ ಉದ್ದೇಶವೇ ಇದೆ.

ಆಯಾ ರಾಷ್ಟ್ರಗಳ ಮಾನವ ಪ್ರಕೃತಿ ಸಂಪತ್ತಿನ ಒಡೆತನ ಆಯಾ ರಾಷ್ಟ್ರಗಳಿಗೆ ಮಾತ್ರ ಸೇರಬೇಕೇ ಬೇಡವೇ ಎಂಬ ಚರ್ಚೆ ಇಲ್ಲಿ ಮುಖ್ಯವಲ್ಲ. ಪ್ರಕೃತಿಯ ಒಡೆತನದ ಕಲ್ಪನೆ, ಸರ್ವವೂ ಮಾನವನ ಉಪಭೋಗಕ್ಕೆಂದೇ ಇದೆ ಎಂಬ ಧೋರಣೆ, ಪ್ರಕೃತಿ ಸಂಪತ್ತನ್ನು ಐಷಾರಾಮ-ಶ್ರೀಮಂತಿಕೆಗಳಿಗೆ ಶೋಷಿಸುವ ಧೋರಣೆಗಳೇ ಇಂದು ಪ್ರಶ್ನಿತವಾಗಬೇಕಿದೆ. ಈ ಕಲ್ಪನೆ, ಧೋರಣೆಗಳು ಜಾಗತಿಕ ನ್ಯಾಯವೋ, ಸಾಮಾಜಿಕ ನ್ಯಾಯವೋ, ರಾಷ್ಟ್ರೀಯ ವಾದವೋ ಹೀಗೆ ಯಾವುದೇ ಹೆಸರಿನಲ್ಲಿ ನಡೆದರೂ ಅದು ಅಮಾನವೀಯವಾದದ್ದು. ಬಲಶಾಲಿಯಾಗುವುದು - ಶ್ರೀಮಂತವಾಗುವುದು ಇವೆಲ್ಲ ಆಧುನಿಕತೆಯ ವಿಕಾರಗಳು. ರಾಷ್ಟ್ರಗಳಿಗೆ ಈ ವಿಕಾರ ತಗುಲಿಕೊಂಡರೆ ಜಾಗತಿಕವಾಗಿ ಪರಸ್ಪರ ಶೋಷಣೆ, ಘರ್ಷಣೆಗಳು ಉಂಟಾಗಿ ವಿಶ್ವವೇ ಕದನಕಣವಾಗುತ್ತದೆ. ವರ್ಗ ಸಂಘರ್ಷವು ರಾಷ್ಟ್ರಸಂಘರ್ಷವಾಗಿ ಬದಲಾಗುತ್ತದೆ. ವ್ಯಕ್ತಿಗಳಿಗೆ ಇರುವ ಕೆಲ ವಿಕಾರಗಳಾದ ಶ್ರೀಮಂತಿಕೆಯ ದಾಹ, ಸ್ವಪ್ರತಿಷ್ಠೆ, ನಾನೇ ಉನ್ನತವಾಗಬೇಕು, ನನ್ನ ಮಾತೇ ನಡೆಯಬೇಕೆಂಬ ವಾದ ರಾಷ್ಟ್ರಕ್ಕೆ ತಗುಲಿಕೊಂಡರೆ ರಾಷ್ಟ್ರೀಯವಾದವೇ ಒಂದು ಶೋಷಕ ವ್ಯಕ್ತಿತ್ವವಾಗಿ ಬೆಳೆಯುತ್ತದೆ.

**ರಾಷ್ಟ್ರೀಯತೆ – ಅತಿ ರಾಷ್ಟ್ರೀಯತೆ**

ಜಾಗತೀಕರಣವು ಇಂದು ರಾಷ್ಟ್ರೀಯತೆಗಳನ್ನು ದಾಟಿ ದಾಳಿಯಿಕ್ಕುತ್ತಿದೆ. ಬಂಡವಾಳಶಾಹಿಯು ಇಂದು ಜಾಗತಿಕವಾಗಿ ಎಲ್ಲ ಧನದಾಹಿಗಳನ್ನು – ಬಲಿಷ್ಠರನ್ನು ಕ್ರಮಕ್ರಮೇಣ ಒಂದು ಪ್ರತಿಷ್ಠಿತ ವರ್ಗವನ್ನಾಗಿ ರೂಪಿಸುತ್ತಿದೆ. ಹೀಗಾಗಿ ಇಂದು ಸ್ವ ಮತ್ತು ಅನ್ಯ ಎಂಬ ಬೈನರಿಗೆ ಒಂದು ಹೊಸ ಜಾಗತಿಕ ವಿನ್ಯಾಸ ಲಭ್ಯವಾಗಿದೆ. ರಾಷ್ಟ್ರೀಯ ಗಡಿಗಳನ್ನು ಮೀರಿದ ವರ್ಗ ವಿನ್ಯಾಸ ಇದು. ಇದಕ್ಕೆ ಯಾವ ಜನಾಂಗ, ಧರ್ಮ, ಭಾಷೆ, ಸಂಸ್ಕೃತಿಗಳ ಗಡಿಗಳೂ ಇಲ್ಲ. ಈ ಬಲಿಷ್ಠ ವರ್ಗದ ಹಿತಾಸಕ್ತಿಗಳಿಗೆ ಅನುಗುಣವಾಗಿಯೇ ರಾಷ್ಟ್ರ-ರಾಷ್ಟ್ರಗಳ ಆಲೋಚನೆ, ಬದುಕನ್ನು ರೂಪಿಸುವ ಹುನ್ನಾರಗಳನ್ನು ಹೂಡಲಾಗುತ್ತಿದೆ. ಈ ಪ್ರತಿಷ್ಠಿತ ವರ್ಗಕ್ಕೆ ರಾಷ್ಟ್ರೀಯತೆಗಳು ಲೆಕ್ಕವಿಲ್ಲ. ರಾಷ್ಟ್ರೀಯತೆಗಳನ್ನು ಆಳುವ ಸೂಪರ್ ರಾಷ್ಟ್ರೀಯತೆ ಇದು. ಈ ಅತಿ ರಾಷ್ಟ್ರೀಯತೆಯು ತನ್ನ ಲಾಭಬಡುಕ ದಬ್ಬಾಳಿಕೆಯನ್ನೇ ಸುಖೀ ಬದುಕಿನ ಸೂತ್ರವೆಂಬಂತೆ ಬಿಂಬಿಸುತ್ತಿದೆ.

ಜಪಾನು, ಚೀನಾ, ಭಾರತ, ಬ್ರಿಟನ್ನು, ಜರ್ಮನಿಗಳೆಲ್ಲ ಈ ವರ್ತನೆಯ ಬಾಲ ಹಿಡಿದು ಅಮೆರಿಕಾದ ನೆರಳುಗಳಂತೆ ಆಡುತ್ತಿವೆ. ರಾಷ್ಟ್ರೀಯತೆಯು ಅತಿ ರಾಷ್ಟ್ರೀಯ ಶಕ್ತಿಯಾಗಿ ಬೆಳೆಯುವ ಅಪಾಯಕಾರಿ ಪೈಪೋಟಿಯೊಂದು ರಾಷ್ಟ್ರಗಳ ನಡುವೆ ನಡೆಯುತ್ತಿದೆ. ಅಮೆರಿಕಾ ಈ ಪೈಪೋಟಿಯ ಕೇಂದ್ರ ಕಾರಸ್ಥಾನವಾಗಿ ಬಲಯುತಗೊಳ್ಳುತ್ತಿದೆ. ಅಂತರರಾಷ್ಟ್ರೀಯ ನ್ಯಾಯಾಲಯ, ವಿಶ್ವಸಂಸ್ಥೆ, ವಿಶ್ವವ್ಯಾಪಾರ ಸಂಸ್ಥೆ, ಯೂರೋಪಿಯನ್ ಯೂನಿಯನ್ನುಗಳೆಲ್ಲ ಈ ಪೈಪೋಟಿಯಲ್ಲಿ ಅಮೆರಿಕಾದ ಸಹಾಯಕರಂತೆ ರೂಪುಗೊಳ್ಳುತ್ತಿವೆ. ಸಾರ್ಕ್, ಅಲಿಪ್ತ ಚಳುವಳಿ ಮುಂತಾದವು ಇಂಥ

## ಸಾದರ ಸ್ವೀಕಾರ

**ಕೋಮು ದಳ್ಳುರಿ ಗುಜರಾತ್‌ನಿಂದ ಮಂಗಳೂರುವರೆಗೆ** — ಸನತ್‌ಕುಮಾರ ಬೆಳಗಲಿ
**ಪುಟ :** ೪೮ — **ಬೆಲೆ :** ರೂ. ೧೫
ಏಕತಾ ಪ್ರಕಾಶನ, ಎಲ್ ಎಫ್ ೧೭/೬, ಬಿ.ಡಿ.ಎ. ಫ್ಲಾಟ್ಸ್
ಬಿ.ಟಿ.ಎಂ. ಲೇಔಟ್, ಬೆಂಗಳೂರು - ೫೬೦ ೦೭೬

**ಮಾಹಿತಿ ಹಕ್ಕು** — ವೈ. ಜಿ. ಮುರಳೀಧರ
**ಪುಟ :** ೧೨೦ — **ಬೆಲೆ :** ರೂ. ೪೫

**ಪ್ರಾಣಿ-ಪಕ್ಷಿಗಳ ಕಥೆಗಳು** (ಕಿರಿಯರ ಕಥಾಮಾಲೆ) — ವಿವಿಧ ಲೇಖಕರು
**ಪುಟ :** ೧೨೮ — **ಬೆಲೆ :** ರೂ. ೪೦

**ವಿನೋದ ಕಥೆಗಳು** (ಕಿರಿಯರ ಕಥಾಮಾಲೆ) — ವಿವಿಧ ಲೇಖಕರು
**ಪುಟ :** ೧೨೮ — **ಬೆಲೆ :** ರೂ. ೪೦

**ನೀತಿ ಕಥೆಗಳು** (ಕಿರಿಯರ ಕಥಾಮಾಲೆ) — ವಿವಿಧ ಲೇಖಕರು
**ಪುಟ :** ೧೨೦ — **ಬೆಲೆ :** ರೂ. ೪೦

**ಜಾಣ ಕಥೆಗಳು** (ಕಿರಿಯರ ಕಥಾಮಾಲೆ) — ವಿವಿಧ ಲೇಖಕರು
**ಪುಟ :** ೧೨೦ — **ಬೆಲೆ :** ರೂ. ೪೦
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಆದರ್ಶ ಸಮಾಜ ನಿರ್ಮಾಣಕ್ಕೆ ಭಗವದ್ಗೀತೆಯ ಬೆಳಕು** — ಪ್ರೊ॥ ಕೆ. ಆರ್. ರವಿಕುಮಾರ್
**ಪುಟ :** ೮೪ — **ಬೆಲೆ :** ರೂ. ೪೦
**ಶ್ರೀಮತಿ ಸಿ. ಎಸ್. ಅನ್ನಪೂರ್ಣ**, ನಂ. ೭೫೦, ೩ನೇ ಬಡಾವಣೆ
೩ನೇ ವಿಭಾಗ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

**ಮಕ್ಕಳು** (ಹನಿಗವನ) — ಸಂ. : ಕೋ. ಲ. ರಂಗನಾಥರಾವ್
**ಪುಟ :** ೧೮೬ — **ಬೆಲೆ :** ರೂ. ೬೦
**ಗುರುರಾಜ ಪ್ರಕಾಶನ**, 'ಹರಿಕೃಪ', ೨೩೬, ೧೧ನೇ ಮುಖ್ಯರಸ್ತೆ ಏಜಿಸ್ ಲೇಔಟ್,
ಅರೆಹಳ್ಳಿ, ಸುಬ್ರಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

**ಮಧ್ಯಪ್ರದೇಶ ಐದು ವರ್ಷ, ಹತ್ತು ಸುತ್ತು** (ಪ್ರವಾಸ ಕಥನ) — ಎಚ್. ಎಸ್. ಮಂಜುನಾಥ
**ಪುಟ :** ೬೪ — **ಬೆಲೆ :** ರೂ. ೩೦

**ಕಾಂಗರೂ ಕಿವಿಯ ನಾಡಿನಲ್ಲಿ** (ಪ್ರವಾಸ ಕಥನ) — ಹೇಮಲತಾ ಮಹಿಷಿ
**ಪುಟ :** ೯೦ — **ಬೆಲೆ :** ರೂ. ೪೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸುಮುಖ ಪ್ರಕಾಶನ**, ೧೭೪ ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ
ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ವರದಿಗಾರರೇ ಈ ಕಡೆ ಸ್ವಲ್ಪ ನೋಡಿ...** — ಪಿ. ರಾಜೇಂದ್ರ
**ಪುಟ :** ೧೦೨ — **ಬೆಲೆ :** ರೂ. ೬೫
**ಸೃಷ್ಟಿ ಪಬ್ಲಿಕೇಷನ್ಸ್**, ನಂ. ೨/೨, ೧ನೇ ಕ್ರಾಸ್, ೧ನೇ ಮೇನ್
ಗೋವಿಂದಪ್ಪ ಲೇಔಟ್, ನಾಗಶೆಟ್ಟಿಹಳ್ಳಿ, ಬೆಂಗಳೂರು - ೫೬೦ ೦೯೪

**ಪ್ರಭುಗಳಲ್ಲ; ಪ್ರಜಾಸೇವಕರು** — ಕೆ. ದಾಮೋದರ ಐತಾಳ
**ಪುಟ :** ೮೬ — **ಬೆಲೆ :** ರೂ. ೪೫
ಬಳಕೆದಾರರ ವೇದಿಕೆ, ಉಡುಪಿ

**ಕೃಷ್ಣಾ ತೊರೆ** (ಸಮಗ್ರ ಕಾವ್ಯ) — ಪ್ರೊ॥ ಭುಜೇಂದ್ರ ಮಹಿಷವಾಡಿ
ಸಂ. : ಡಾ॥ ಪಿ. ಜಿ. ಕೆಂಪಣ್ಣವರ
**ಪುಟ :** ೪೬೮ — **ಬೆಲೆ :** ರೂ. ೧೮೦
**ಕನ್ನಡ ಜಾಗೃತಿ ಪುಸ್ತಕ ಮಾಲೆ**, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧ ಸಂಸ್ಥಾನ ಮಠ, ಚಿಂಚಣಿ - ೫೯೧ ೨೭೨, ಚಿಕ್ಕೋಡಿ ತಾಲ್ಲೂಕು. ಬೆಳಗಾವಿ ಜಿಲ್ಲೆ

ರಾಷ್ಟ್ರೀಯತೆಗಳನ್ನು ಬೇರೆಬೇರೆ ಚಹರೆಗಳಾಗಿ ಇದ್ದಾಗ್ಯೂ ಅತಿರಾಷ್ಟ್ರೀಯ ಪ್ರಭುತ್ವವನ್ನು ಸಾಗಿಸುವ ಶಕ್ತಿ ಇವುಗಳಿಗಿಲ್ಲದಾಗಿದೆ. ತನ್ನ ಲಾಭಕ್ಕಾಗಿ ತಾನು ನಡೆಸುವ ಗಡಿಯಾಚೆಯ ಭಯೋತ್ಪಾದನೆಯನ್ನು ಅಮೆರಿಕಾ 'ಸಾಮ್ರಾಜ್ಯದ ಜವಾಬ್ದಾರಿ' ಎಂಬಂತೆ ಇಂದು ಬಿಂಬಿಸುತ್ತಿದೆ. ವಸಾಹತುಶಾಹಿಗೆ ವಿರೋಧವಾಗಿ ಹುಟ್ಟಿದ ಹಲವು ರಾಷ್ಟ್ರೀಯತೆಗಳ ಎದುರಿಗೆ ಯೂರೋಪಿನ ಬಿಳಿಯರು ತಮ್ಮ ದಬ್ಬಾಳಿಕೆಯನ್ನು ಜನಕಲ್ಯಾಣ ಕಾರ್ಯವೆಂದು ಬಿಂಬಿಸಲು 'ಬಿಳಿಯರ ಹೊರೆ' ಪರಿಕಲ್ಪನೆಯನ್ನು ಪ್ರಚಾರ ಮಾಡಿದ್ದಕ್ಕಿಂತ ಈ 'ಸಾಮ್ರಾಜ್ಯದ ಜವಾಬ್ದಾರಿ' ಭಿನ್ನವಲ್ಲ. ಜಗತ್ತಿನಲ್ಲಿ ಎಲ್ಲೇ ಅನ್ಯಾಯ ನಡೆದರೂ ನಾನು ನ್ಯಾಯ ಬಗೆಹರಿಸುತ್ತೇನೆಂದು ಬರುವ ಹಸ್ತಕ್ಷೇಪವಾದಿ ಸೂಪರ್ ರಾಷ್ಟ್ರೀಯತೆಯು ತನ್ನ ಲಾಭಕ್ಕಾಗಿಯೇ ತನ್ನೆಲ್ಲ ದುರಾಚಾರವನ್ನು ನೈತಿಕವೆಂದು ಬಿಂಬಿಸುತ್ತಿದೆ. ಅಲ್ಲದೆ ಈ ಅತಿ ರಾಷ್ಟ್ರೀಯತೆಯು ತನ್ನ ಐಹಾರಾಟಿ ಗರ್ವದಿಂದಾಗಿ ರಾಷ್ಟ್ರ ರಾಷ್ಟ್ರಗಳ ಸಂಸ್ಕೃತಿಗಳನ್ನು ಜನಾಂಗೀಯ ದೃಷ್ಟಿಯಿಂದ ನೋಡುತ್ತ ಆಯಾ ರಾಷ್ಟ್ರೀಯರಿಗೇ ತಮ್ಮ ಸಾಹಿತ್ಯ, ಸಂಸ್ಕೃತಿ, ಪರಂಪರೆಗಳ ಬಗ್ಗೆ ಕೀಳರಿಮೆ ಬರುವಂತೆ ಮಾಡುತ್ತಿದೆ. ಇದಕ್ಕೆ ಪ್ರತಿರೋಧ ತೋರಲು ರಾಷ್ಟ್ರೀಯತೆ (ದೇಶೀ ಕಲ್ಪನೆ) ಯನ್ನು ಜಾಗತಿಕವಾಗಿ ಎದುರು ನಿಲ್ಲಿಸಬೇಕಾದ ಅನಿವಾರ್ಯತೆಗೆ ಮೂರನೇ ಜಗತ್ತು ಗುರಿಯಾಗಿದೆ.

ಇದರಿಂದಾಗಿ ಭಾರತದಲ್ಲಿ ದೇಶೀವಾದವು ಸನಾತನತೆಯನ್ನು ಹೇರುವುದನ್ನು ನ್ಯಾಯಯುತವೆಂದು ಬಿಂಬಿಸಲು ಅನುಕೂಲವಾಗಿದೆ. ನಿಜವಾಗಿಯೂ ನಮ್ಮ ರಾಷ್ಟ್ರೀಯತೆಯು ಜಾಗತೀಕರಣದ ಎದುರಿನ ಒಂದು ಪ್ರತಿರೋಧಿ ಅಸ್ತ್ರವಾಗಿ ಇಂದು ಬಳಕೆಯಾಗುತ್ತಿಲ್ಲ. ಬದಲಾಗಿ, ರಾಷ್ಟ್ರೀಯ ರಾಜಕೀಯ ಲಾಭಕ್ಕಾಗಿ, ಕೋಮು ವಾದವನ್ನು ಅಂಗೀಕಾರಗೊಳಿಸಲಿಕ್ಕಾಗಿ, ಜನರನ್ನು ಸ್ವ ಮತ್ತು ಅನ್ಯ ಸ್ಥಳೀಯ ಮತ್ತು ಪರಕೀಯ ಎಂಬಂತೆ ಒಡೆಯಲಿಕ್ಕಾಗಿ, ಭಾಷಿಕ ತಾರತಮ್ಯದ ಮಾನದಂಡವಾಗಿ, ಪ್ರಗತಿ - ಆಧುನಿಕತೆಗಳ ಪ್ರಚೋದಕವಾಗಿ ಇತ್ಯಾದಿ ಇತ್ಯಾದಿಗಳಿಗಾಗಿ ಬಳಕೆಯಾಗುತ್ತಿದೆ. ಹಿಂದೂವಾದಿ ಪ್ರಭುತ್ವ, ಭಾಷಾವಾದಿ ಪ್ರಭುತ್ವ, ಉಪರಾಷ್ಟ್ರೀಯತಾ ಪ್ರಭುತ್ವಗಳು ಹೀಗೆ ಹಲವು ಪ್ರಭುತ್ವಗಳಿಗೆ ತಮ್ಮ ಅಧಿಕಾರ ರಕ್ಷಣೆ ಮತ್ತು ಚಲಾವಣೆಯ ಸಾಧನವಾಗಿ ಬಳಕೆಯಾಗುತ್ತಿದೆ.

ಈ ರಾಷ್ಟ್ರೀಯತೆಯು ಸ್ಥಳೀಯ ಸಂಸ್ಕೃತಿಗಳನ್ನು ತರತಮದಿಂದ ಕೀಳಾಗಿ ಕಾಣುತ್ತಿದೆ. ಆಯಾ ಸಂಸ್ಕೃತಿಯ ಜನರೇ ತಮ್ಮ ಸಂಸ್ಕೃತಿಗಳನ್ನು ಕೀಳರಿಮೆಯಿಂದ ನೋಡುವಂತೆ ಮಾಡುವ ಅಧಿಕಾರ ರಚನೆಯಾಗಿ ಕೆಲಸ ಮಾಡುತ್ತಿದೆ. ದೇಶ ರಕ್ಷಣೆಯ ಹೆಸರಿನಲ್ಲಿ ಅಣು ಬಾಂಬು, ಮಾರಕಾಸ್ತ್ರಗಳ ನಿರ್ಮಾಣ, ಸೈನ್ಯ ನಿರ್ವಹಣೆಗಾಗಿ ಅಪಾರ ಸಂಪತ್ತಿನ ವಿನಿಯೋಗಕ್ಕೆ ಜನಮಾನ್ಯತೆ ಒದಗಿಸುತ್ತಿದೆ. ಅನಗತ್ಯಗಳನ್ನು ಅನಿವಾರ್ಯಗಳೆಂಬಂತೆ ಬಿಂಬಿಸುತ್ತಿದೆ. ಇದು ಬರೀ ಭಾರತಕ್ಕೆ ಮಾತ್ರ ಸಂಬಂಧಿಸಿದ್ದಲ್ಲ, ಇದೊಂದು ಜಾಗತಿಕ ವಿದ್ಯಮಾನವೂ ಹೌದು.

ರಾಷ್ಟ್ರೀಯತೆ ಎನ್ನುವುದು ನಿಜವಾಗಿಯೂ ಇಂದು ಎಲ್ಲರನ್ನೂ ತನ್ನ ಮಡಿಲಲ್ಲಿ ಇಟ್ಟು ಪಾಲಿಸುವ ತಾಯಿಯಂತೆ ಇಲ್ಲ. ಬದಲಾಗಿ ತಾನೊಂದು ಸಾಮಾಜಿಕ ಸಮಸ್ಯೆಯೂ, ಹಲವು ಸಮಸ್ಯೆಗಳ ತಾಯಿಯೂ ಆಗಿ ಬೆಳೆದಿದೆ. ಹಲ ತೆರನ ಸಂಘರ್ಷಗಳಿಗೆ ಕಾರಣವಾಗುತ್ತಿದೆ. ರಾಷ್ಟ್ರೀಯತೆಯು ಇಂಥ ಆಚರಣೆಗಳಿಗೆ ಗುರಿಯಾಗುತ್ತಿರುವುದು ನಿಜಕ್ಕೂ ಒಂದು ಆತಂಕಕಾರಿ ಬೆಳವಣಿಗೆಯಾಗಿದೆ. ಇದು ಸರಳವಾಗಿ ಪರಿಹರಿಸಿಬಿಡಬಹುದಾದ ಸಮಸ್ಯೆ ಅಲ್ಲ. ಇದಕ್ಕೆ ಕಾರಣಗಳನ್ನು ಚಿಂತಿಸಿ ಇದು ರೋಗವಾಗದಂತೆ ತಡೆಯುವ ಆಲೋಚನೆಯನ್ನು ನಾವೆಲ್ಲ ಮಾಡಬೇಕಾಗಿದೆ. ನಾವೆಲ್ಲರೂ ಸೆಕ್ಯುಲರ್ ರಾಷ್ಟ್ರೀಯತೆಗಳ ಕಡೆಗೆ, ಸೋದರ ರಾಷ್ಟ್ರಗಳ ಭಯೋತ್ಪಾದನೆಗಳನ್ನು ಪ್ರೀತಿಯಿಂದ ಗೆಲ್ಲುವ ಕಡೆಗೆ, ಅಮೆರಿಕಾದ ದೊಡ್ಡಣ್ಣತನವನ್ನು ಪ್ರತಿರೋಧಿಸಲು ಕಿರುರಾಷ್ಟ್ರಗಳನ್ನು ಸಜ್ಜುಗೊಳಿಸುವ ಕಡೆಗೆ, 'ವಿಶ್ವಸರ್ಕಾರ' 'ವಿಶ್ವಪಾರ್ಲಿಮೆಂಟು'ಗಳ ಸಾಧ್ಯತೆಯ ಕಡೆಗೆ ಚಲಿಸಬೇಕಾಗಿದೆ.

**ರಾಮಲಿಂಗಪ್ಪ ಟಿ. ಬೇಗೂರು**
ನಂ. ೪೭, ೪ನೇ ಮುಖ್ಯ ರಸ್ತೆ, ೪ನೇ ಅಡ್ಡ ರಸ್ತೆ, ಬಾಲಾಜಿ ಛತ್ರದ ಬಳಿ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ರಾಷ್ಟ್ರೀಯತೆ ಮತ್ತು ಸಂಕಲ್ಪ

**ಭಾ**ರತದಂಥ ದೀರ್ಘಕಾಲೀನ ಮತ್ತು ಬಹು ವಿಶಾಲವಾದ ದೇಶದಲ್ಲಿ ಇತಿಹಾಸದ ಆಗುಹೋಗುಗಳು ತುಂಬ ತೊಡಕಿನದೂ, ಸಂಕೀರ್ಣವಾದ ಮನೋಭೂಮಿಕೆಯನ್ನು ಉತ್ಪತ್ತಿ ಮಾಡುವಂತಹದೂ ಆಗಿದ್ದರೆ ಆಶ್ಚರ್ಯವಿಲ್ಲ. ಹಾಗೆ ಇದ್ದರೂ ಸ್ವಾಭಾವಿಕ. ಈಜಿಪ್ತ್, ಗ್ರೀಸ್‌ದಂಥ ಪುರಾತನ ಸಂಸ್ಕೃತಿ, ನಾವು ಊಹಾತ್ಮಕವಾಗಿ ರಾಷ್ಟ್ರೀಯತೆ ಎಂದು ಗ್ರಹಿಸಬಹುದಾದ ಪ್ರಭುತ್ವ ಇಂದು ನಮ್ಮೆದುರು ಇಲ್ಲ. ಅದರ ಪಳೆಯುಳಿಕೆಗಳನ್ನು ಮಾತ್ರ ಗುರುತಿಸಬಹುದಾಗಿದೆ. ಅಂದರೆ ಭಾರತ ಕೂಡ ಅನೇಕ ಆಡಳಿತವನ್ನು ಹೊಂದಿದ್ದು, ಕಂಡಿದ್ದೂ ಇದ್ದುದಾಗಿದೆ. ಇಂದು ನಾವು ಯಾವುದನ್ನು ನಮ್ಮ 'ರಾಷ್ಟ್ರೀಯತೆ' ಎಂದು ಕರೆಯುತ್ತೇವೆಯೋ ಅದಕ್ಕೆ ಸಂಬಂಧಪಟ್ಟಂಥ ರಾಷ್ಟ್ರೀಯತೆಯ ಅಂಶವನ್ನು ಅಲ್ಲಿ ನೋಡಬಹುದೇ ಹೊರತು ಅದರ ಪೂರ್ಣ ರೂಪದಲ್ಲಿ ಕಾಣಲಾರೆವು.

ಪ್ರಾಚೀನ ಭಾರತದಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ ನಾವು ಇಂದು ಗ್ರಹಿಸುವ ಹಾಗೆ ಇದ್ದಿರಲಿಲ್ಲ. ಅದು ದೇಶದ ಕಲ್ಪನೆಯಾಗಿದ್ದು ಪ್ರಭುತ್ವಕ್ಕೂ ಇತರ ವಿಷಯಗಳಿಗೂ ಸಂಬಂಧಿಸಿದ್ದಾಗಿದೆ. ಆದರೂ ಭಾಷೆ, ಧರ್ಮ, ಅಂಶ ಇತ್ಯಾದಿಗಳು ಅದಕ್ಕೆ ಅಡ್ಡಿಪಡಿಸಿರಲಿಲ್ಲ. ಸುಧಾರಿಸದವರೂ ಆಧುನಿಕರು ಎನ್ನಿಸಿಕೊಳ್ಳುವ ಇಂದಿನ ನಮ್ಮ ರಾಷ್ಟ್ರೀಯತೆಯ ಗೊಂದಲ ಅಲ್ಲಿ ಇದ್ದಿರಲಿಲ್ಲ.

ಅನೇಕ ಭಾಷೆ, ಬುಡಕಟ್ಟು, ವಂಶಗಳ, ಪ್ರಕೃತಿ ವೈವಿಧ್ಯ ಮುಂತಾದವುಗಳಿಂದ ಕೂಡಿದ ಭಾರತ ತನ್ನೊಳಗೇ ಅನೇಕ ರಾಷ್ಟ್ರೀಯತೆಯನ್ನು ಹೊಂದಿತ್ತು. ಆದರೂ ಆರ್ಯಾವರ್ತದಿಂದ ಭಾರತವರ್ಷ ಎಂಬ ಭಾವನೆ ಬೆಳವಣಿಗೆ ಹೊಂದಿತ್ತು. ಇದಕ್ಕೆ ಮುಖ್ಯವಾಗಿ ಭಾರತದ ಸಾಂಸ್ಕೃತಿಕ ಇತಿಹಾಸ ಕಾರಣವಾಗಿದ್ದಿರಬಹುದು.

ಮುಖ್ಯವಾಗಿ ವೈದಿಕಧರ್ಮ ಎನ್ನುವುದು ಆಗಲೂ ಅಲ್ಪ ಸಂಖ್ಯಾತವೇ, ಇಂದಿಗೂ ಅಲ್ಪಸಂಖ್ಯಾತವೆ. ಆದರೆ ವೈದಿಕ ಧರ್ಮ ಸಂಗೋಪನೆಗೊಂಡ ರೀತಿಯಲ್ಲಿ ಅಂದರೆ ವೈದಿಕರು ತಮ್ಮ ಯಜಮಾನಿಕೆಯನ್ನೇ ಇಟ್ಟುಕೊಂಡು ಇತರ ಬುಡಕಟ್ಟುಗಳನ್ನು ಅಧೀನ ಮಾಡಿಕೊಂಡ, ಚಾತುರ್ವರ್ಣ್ಯ- ಜಾತಿ, ದಲಿತ ಇತ್ಯಾದಿ – ಉಪಾಯದಿಂದ ವೈದಿಕೇತರವಾದ ಜನಾಂಗಗಳೂ ತಾವೂ ವೈದಿಕ ಧರ್ಮದವರು (ಈಗ ಇದೇ ಹಿಂದೂ ಧರ್ಮವಾಗಿ ಇಲ್ಲಿಯ ವೈದಿಕೇತರರಲ್ಲಿ ಹೆಚ್ಚಿನ ಶೂದ್ರರೆಲ್ಲ– ತಾವೂ ಹಿಂದೂಗಳು ಎಂದು ತಮ್ಮ ಅಸ್ಮಿತೆಯನ್ನು ಅಲ್ಲಿ ಕಂಡುಕೊಂಡು ಹಿಂದೂ ಧರ್ಮದ ಪುರೋಹಿತಶಾಹಿಯ ಕಾಲಾಳುಗಳೂ ಸೈನಿಕರೂ ಆಗಿದ್ದಾರೆಂಬುದನ್ನು ನೋಡಬಹುದು) ಎಂದುಕೊಂಡು ಅದನ್ನು ತಮ್ಮದೆಂದು ಭಾವಿಸಿಕೊಂಡು ನಂಬಿದರು. ಆದ್ದರಿಂದ ರಾಮಾಯಣ ಗುಹನನ್ನು ಅಂಬಿಗನನ್ನಾಗಿಸಿ, ಶಬರಿಯನ್ನು ಭಕ್ತೆಯನ್ನಾಗಿಸಿ, ಜಟಾಯುವನ್ನು ಮಿತ್ರನನ್ನಾಗಿಸಿ, ಸುಗ್ರೀವನನ್ನು ಸ್ವಾಮಿನಿಷ್ಠನನ್ನಾಗಿಸಿ ಇಡೀ ಭಾರತ (ಅದರ ಹೊರಗೂ)ದಲ್ಲಿ ವಿಸ್ತಾರಗೊಂಡು ತಾವೆಲ್ಲ ಒಂದೆಂಬ ಭಾವನೆಗೆ ಒಳಗಾದರು. ಸಾಂಸ್ಕೃತಿಕ, ಭಾಷಿಕ, ಭೌಗೋಳಿಕ ವಿಭಿನ್ನತೆಯ ಮಧ್ಯೆಯೇ ನಾವೆಲ್ಲ ಒಂದೆಂಬ ಒಂದು ಅಸ್ಮಿತೆಯ ಎಳೆ ಗಂಗೆ ಯಮುನೆಯೊಡನೆ ಗೋದಾವರಿ ಕಾವೇರಿಯೂ ಸೇರಿ ಆಸೇತು ಹಿಮಾಚಲವಾಯಿತು. ಆದರೆ ಏಕತೆಗೆ ಅನೇಕ ದೇಶಗಳು ಅಡ್ಡಿಯಾಗಲಿಲ್ಲ. ಯುದ್ಧಗಳೂ ನಿಲ್ಲಲಿಲ್ಲ. ಇಲ್ಲಿ ಸಂಘರ್ಷ ಇರಲಿಲ್ಲ ಎಂದೇನೂ ಅಲ್ಲ. ರಾಮಾಯಣದ ರಾಮನ ಅಯನವೆಲ್ಲ ಹಿಂಸಾಪೂರ್ಣವಾದ ಬಲಪ್ರಯೋಗದಿಂದಲೇ ಮಾಡಿದ ರಾಜ್ಯ ವಿಸ್ತಾರವಾಗಿದೆ. ಅದೇನೇ ಇದ್ದರೂ ಭಾರತದ ಗುಂಟ ಒಂದು ಸಾಂಸ್ಕೃತಿಕ ವಿಸ್ತಾರವನ್ನು ನೋಡಬಹುದು. ಇದನ್ನು ಯಾಕೆ ಹೇಳಿದ್ದೆಂದರೆ ರಾಷ್ಟ್ರೀಯತಾವಾದದಲ್ಲಿ ಈ ಜನಾಂಗೀಯ ಅಂಶ ಕೂಡ ಪ್ರಬಲವಾದುದು ಎಂದು ಗುರುತಿಸಲು.

ಈ ದೇಶಕ್ಕೆ ಮುಸ್ಲಿಮರ ಆಗಮನದಿಂದ ಮೊದಲಿನ ಸಂಸ್ಕೃತಿಯ ಮೇಲೆ ಬಲವಾದ ಆಘಾತವಾಯಿತು. ಬಂದ ಮುಸ್ಲಿಮರ ಎದುರು ಅವರು ಕಂಡರಿಯದ ಸಂಸ್ಕೃತಿಯೊಂದು ನಿಂತಿತ್ತು. ಮೂರ್ತಿಯನ್ನೇ ಧ್ವಂಸಮಾಡಿದ ತಮ್ಮೆದುರೇ ಸಾವಿರಾರು ದೇವರುಗಳನ್ನು ಪೂಜಿಸುವ ಈ ಜನಾಂಗ ಎಂಥ ಅಜ್ಞಾನಿಗಳು ! ಎಂಥ ಪಾಪಿಗಳು ! ಎಂದೆನ್ನಿಸಿಬಿಟ್ಟಿತು. ಅವರು ಎರಡು ಕ್ರಿಯೆಗಳನ್ನು ಕೈಗೆತ್ತಿಕೊಳ್ಳುವುದು ಅಗತ್ಯ ಎಂದುಕೊಂಡರು. ಮುಖ್ಯವಾದುದು ರಾಜ್ಯ ಸ್ಥಾಪನೆ. ರಾಜ್ಯ ವಿಸ್ತಾರಕ್ಕಾಗಿ ಅವರು ಧಾಳಿ ಮಾಡಿದ್ದು. ಇಲ್ಲಿ ಬಂದ ಮೇಲೆ ಎರಡನೆಯದು ಮತಾಂತರ. ಮತಾಂತರದಿಂದ ಜನರನ್ನು ತಮ್ಮವರನ್ನಾಗಿ ಮಾಡಿಕೊಳ್ಳುವುದು ರಾಜ್ಯ ಸ್ಥಾಪನೆಗೆ ಅನುಕೂಲ. ಆದ್ದರಿಂದ ಮುಸ್ಲಿಮರು ಧಾಳಿ ಮಾಡಿದಲ್ಲೆಲ್ಲ ದೇವಾಲಯ ನಾಶ, ಮತಾಂತರ, ಕೊಲೆ-ಸುಲಿಗೆ ಪ್ರಬಲವಾಗಿ ನಡೆದವು.

ಡಾ|| ಆರ್. ವಿ. ಭಂಡಾರಿ

ಪ್ರಾಚೀನ ಭಾರತದಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ ನಾವು ಇಂದು ಗ್ರಹಿಸುವ ಹಾಗೆ ಇದ್ದಿರಲಿಲ್ಲ. ಅದು ದೇಶದ ಕಲ್ಪನೆಯಾಗಿದ್ದು ಪ್ರಭುತ್ವಕ್ಕೂ ಇತರ ವಿಷಯಗಳಿಗೂ ಸಂಬಂಧಿಸಿದ್ದಾಗಿದೆ. ಆದರೂ ಭಾಷೆ, ಧರ್ಮ, ಅಂಶ ಇತ್ಯಾದಿಗಳು ಅದಕ್ಕೆ ಅಡ್ಡಿಪಡಿಸಿರಲಿಲ್ಲ. ಸುಧಾರಿಸದವರು ಆಧುನಿಕರು ಎನ್ನಿಸಿಕೊಳ್ಳುವ ಇಂದಿನ ನಮ್ಮ ರಾಷ್ಟ್ರೀಯತೆಯ ಗೊಂದಲ ಅಲ್ಲಿ ಇದ್ದಿರಲಿಲ್ಲ. ಅನೇಕ ಭಾಷೆ, ಬುಡಕಟ್ಟು, ವಂಶಗಳ, ಪ್ರಕೃತಿ ವೈವಿಧ್ಯ ಮುಂತಾದವುಗಳಿಂದ ಕೂಡಿದ ಭಾರತ ತನ್ನೊಳಗೇ ಅನೇಕ ರಾಷ್ಟ್ರೀಯತೆಯನ್ನು ಹೊಂದಿತ್ತು. ಆದರೂ ಆರ್ಯಾವರ್ತದಿಂದ ಭಾರತವರ್ಷ ಎಂಬ ಭಾವನೆಗೆ ಬೆಳವಣಿಗೆ ಹೊಂದಿತ್ತು. ಇದಕ್ಕೆ ಮುಖ್ಯವಾಗಿ ಭಾರತದ ಸಾಂಸ್ಕೃತಿಕ ಇತಿಹಾಸ ಕಾರಣವಾಗಿದ್ದಿರಬಹುದು.
ರಾಷ್ಟ್ರೀಯತೆ ಎನ್ನುವುದು ಬೆಳೆದುಬಂದುದೇ ಹೊರತು ಸ್ಥಿರಾಸ್ತಿಯಲ್ಲ. ಒಂದು ಮತಧರ್ಮ, ಒಂದು ಭಾಷೆ, ಒಂದು ಭೌಗೋಳಿಕತೆ ಇವೆಲ್ಲ ರಾಷ್ಟ್ರೀಯತೆಯ ಅಂಶಗಳೇ ಆದರೂ ಅದಷ್ಟರಿಂದಲೇ ರಾಷ್ಟ್ರೀಯತೆ ಸಾಧಿಸಲ್ಪಡುವುದಿಲ್ಲ. ರೆವರೆಂಡ್ ಮೈಕೇಲ್ ಒಪ್ಲಾನಗನ್ ಎನ್ನುವವರು ಐರ್ಲೆಂಡ್ ವಿಭಜನೆಯ ವಿಷಯದಲ್ಲಿ ಹೇಳುವ ಬುದ್ಧಿ ಮಾತು ಈಗ ನಮ್ಮದಾಗಬೇಕು.



ಇದರಿಂದ ನಾವು ಮತ್ತು ಅವರು ಎಂಬ ಭಾವ ಹೊರೆದುಕೊಳ್ಳಲು ಅವಕಾಶವಾಯಿತು.

ಇಲ್ಲಿ ಒಂದು ಅಂಶವನ್ನು ನೆನಪಿಡುವುದು ಅವಶ್ಯ. ಅದೆಂದರೆ, ಈ ಮತಾಂತರ, ದೇವಾಲಯ ನಾಶ ಇತ್ಯಾದಿಗಳೆಲ್ಲ ಇಲ್ಲಿ ಮುಸ್ಲಿಮರ ರಾಜ್ಯಕ್ಕೆ ನಿರಾತಂಕ ಎನ್ನಿಸಿಕೊಳ್ಳುತ್ತಿದ್ದಂತೆ ಕ್ಷೀಣಿಸುತ್ತ ಬಂದವು. ಅವರಿಗೆ ರಾಜ್ಯ ಆಳುವುದು ಮುಖ್ಯವಾಗಿತ್ತೇ ಹೊರತು ಧರ್ಮ ಪ್ರಚಾರ ಅಷ್ಟೇ ಮಹತ್ವದ್ದಾಗಿರಲಿಲ್ಲ. ಅಂದರೆ ಧಾರ್ಮಿಕ ವಿಷಯ ಕೂಡ ರಾಜ್ಯಾಧಿಕಾರವನ್ನು ಸ್ಥಿರಗೊಳಿಸುವಲ್ಲೇ ಹೆಚ್ಚಿನ ಭಾರ ಹೊಂದಿತ್ತು. ಇದಕ್ಕೆ ಕೆಲ ಉದಾಹರಣೆಗಳು ಸಾಕ್ಷಿಯಾಗುತ್ತವೆ. ಅಲ್ತುಮಿಶ್ ದೆಹಲಿಯ ಅರಸನಾಗಿದ್ದಾಗ ಆತನ ಆಸ್ಥಾನದಲಿದ್ದ ಧರ್ಮಾಧಿಕಾರಿಗಳು ಎಲ್ಲಾ ಹಿಂದೂಗಳನ್ನು ಮತಾಂತರಿಸಬೇಕೆಂದು ರಾಜನನ್ನು ಒತ್ತಾಯಿಸುತ್ತಾರೆ. ಆದರೆ ಅಲ್ತುಮಿಶ್ ಬಹುಸಂಖ್ಯೆಯಲ್ಲಿರುವ ಅವರನ್ನು ಮತಾಂತರಿಸುವುದು ರಾಜನೀತಿಯಾಗುವುದಿಲ್ಲ ಎನ್ನುತ್ತಾನೆ. ಹಾಗೆಯೇ ಜಲಾಲುದ್ದೀನ್ ಖಿಲ್ಜಿ ಕೂಡ ತನ್ನ ಅರಮನೆಯ ಎದುರೇ ವಾದ್ಯ ಬಾರಿಸುತ್ತ ಮೆರವಣಿಗೆ ಹೋಗುವ ಹಿಂದುಗಳನ್ನು ತಡೆಯಲಾರದ ಅಸಹಾಯಕತೆಯನ್ನು ವ್ಯಕ್ತಮಾಡುತ್ತಾನೆ. ಅಲ್ಲಾವುದ್ದೀನ್ ಖಿಲ್ಜಿಗೆ ಖಾಜಿಯೊಬ್ಬ "ಅಲ್ಲಾಹನು ನಿನ್ನನ್ನು ಸಾಮ್ರಾಟನನ್ನಾಗಿ ಮಾಡಿದನು. ಆದರೆ ನೀನು ಶರೀಯಕ್ಕೆ ಅನುಸಾರವಾಗಿ ನಡೆದು ಕೊಳ್ಳುವುದಿಲ್ಲ ಎಂದು ಬುದ್ಧಿ ಹೇಳುವಾಗ ಅಲ್ಲಾವುದ್ದೀನನು ಶರೀಯದ ಪ್ರಕಾರ ನಡೆದುಕೊಂಡಿದ್ದರೆ ನಾನು ಖಾಜಿಯಾಗಿಯೇ ಇರುತ್ತಿದ್ದೆ, ಸಾಮ್ರಾಟನಾಗುತ್ತಿರಲಿಲ್ಲ" ಎಂದು ಉತ್ತರಿಸುತ್ತಾನೆ (*ಲೌಕಿಕ-ಅಲೌಕಿಕ*, ರಾಜಾರಾಮ ಹೆಗಡೆ).

ಮುಖ್ಯವಾಗಿ ಬಹುಸಂಖ್ಯಾತರಾದ ಹಿಂದೂಗಳನ್ನೇ ಸಾಮ್ರಾಜ್ಯದ ಶಕ್ತಿ ಅವಲಂಬಿಸಿತ್ತು. ಅದೇನೇ ಇದ್ದರೂ ಧಾರ್ಮಿಕ ಕ್ರೌರ್ಯ ಮತ್ತು ಹಿಂಸೆ ಕ್ರಮೇಣ ಕಡಿಮೆಯಾಗಿ ಹಿಂದೂ-ಮುಸ್ಲಿಮರ ಸಹಬಾಳ್ವೆಗೆ ಸಿದ್ಧವಾಗಿತ್ತು ಮತ್ತು ಅದು ಮುಂದುವರಿಯುತ್ತಿತ್ತು. ಇವೆಲ್ಲ ರಾಷ್ಟ್ರೀಯತೆಯ ಬೆಳವಣಿಗೆಯಲ್ಲಿ ಪಾತ್ರವಹಿಸುವ ಅಂಶಗಳೇ ಆಗಿವೆ. ಆದರೆ ನಮ್ಮ ಇಂದಿನ ರಾಷ್ಟ್ರೀಯತೆ ಬೆಳೆದುಬಂದುದು ಬ್ರಿಟಿಷ್ ವಸಾಹತುಶಾಹಿ ಸಂದರ್ಭದಲ್ಲಿ. ರಾಷ್ಟ್ರೀಯತೆಯ ಪರಿಕಲ್ಪನೆ ಕೂಡ ಆಧುನಿಕವಾದುದು.

ಸ್ವಾತಂತ್ರ್ಯಾಂದೋಲನದಲ್ಲಿ ಮುಖ್ಯ ಪ್ರವಾಹವಾಗಿ ಬಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸು ಹಿಂದೂ-ಮುಸ್ಲಿಮ್ ಒಗ್ಗಟ್ಟಿಗಾಗಿ (ಏಕರಾಷ್ಟ್ರೀಯತೆಗಾಗಿ) ಕೊನೆಯ ತನಕವೂ ಚೌಕಶಿ ನಡೆಸಿತು. ಆಂದೋಲನದ ನೇತೃತ್ವ ವಹಿಸಿದ ಗಾಂಧೀಜಿಯಂತೂ ಹಿಂದೂ-ಮುಸ್ಲಿಂ ಒಗ್ಗಟ್ಟಿಗಾಗಿ ತಮ್ಮ ಜೀವನವನ್ನೇ ಪಣವನ್ನಾಗಿಟ್ಟಿದ್ದರು. ಅದು ಒಂದು 'ಅತಿ' ಎಂದು ಕೂಡ ಕೆಲವರು ವಿಮರ್ಶಿಸಿದ್ದಾರೆ. ಈ ಮಧ್ಯೆ ಹಿಂದೂ ಮಹಾಸಭೆ ಮತ್ತು ಮುಸ್ಲಿಂ ಲೀಗ್ ಎರಡು ರಾಷ್ಟ್ರೀಯತೆಯ ಎರಡು ಧಾರೆ ಅಸ್ತಿತ್ವಕ್ಕೆ ಬಂತು.

ಹಿಂದೂ ಮಹಾಸಭೆ ಹಿಂದೂಗಳ ಪ್ರತಿನಿಧಿಯೆಂದು ಘೋಷಿಸಿಕೊಂಡರೆ, ಮುಸ್ಲಿಂ ಲೀಗ್ ಮುಸ್ಲಿಂ ರಾಷ್ಟ್ರೀಯತೆಯನ್ನು ಪ್ರತಿಪಾದಿಸಿತು. ಇದೊಂದು ಅನಪೇಕ್ಷಣೀಯ ಬೆಳವಣಿಗೆಯಾದರೂ ಪರಸ್ಪರ ಎದುರುಬದುರಾಗಿ ನಿಂತವು. ಹಿಂದೂ ಮತ್ತು ಮುಸ್ಲಿಂ ಕೋಮುಗಳಲ್ಲಿ ದ್ವೇಷ ಭುಗಿಲೆದ್ದಿತು.

ಮೊದಲು ಮುಸ್ಲಿಂ ಮುಂದಾಳುಗಳಾದ ಸರ್ ಮೊಹ್ಮದ್ ಇಕ್ಬಾಲ್ ಮತ್ತು ಮಲಿಕ್ ಬರಕತ್ ಅಲಿ ಹಿಂದೂ-ಮುಸ್ಲಿಂ ಏಕತೆಯನ್ನು ಸಾರುವ ತಮ್ಮ ದೀರ್ಘ ಭಾಷಣದಲ್ಲಿ ಹೀಗೆ ಹೇಳಿದ್ದರು :

**"...ಮತ್ತು ನಾವು ಸ್ವತಂತ್ರ ಇಂಡಿಯಾದಲ್ಲಿ ಅಷ್ಟೇ ಅಲ್ಲ, ಅಖಂಡ ಇಂಡಿಯಾದಲ್ಲಿ ನಂಬಿಗೆ ಉಳ್ಳವರಾಗಿದ್ದೇವೆ. ಆ ಇಂಡಿಯಾ ಹಿಂದೂಗಳ ಅಥವಾ ಸಿಖ್ಖರದ್ದಾಗಿರಲಿ, ಈ ಆ ಜಾತಿಯದ್ದಾಗಿರಲಿ ಆಗಿರದೆ ಸರ್ವಜನತೆಯು ಇಂಡಿಯಾ ಆಗಿರುತ್ತದೆ. ಇದು ನಮ್ಮ ಅಚಲ ಶ್ರದ್ಧೆಯಾಗಿರುವುದರಿಂದ ಹಿಂದೂ ಅಥವಾ ಮುಸ್ಲಿಂ ಇಂಡಿಯಾ ಎನ್ನುವ ಇಂಡಿಯಾದ ವಿಭಜನೆಗೆ ನಾವು ಭಾಗೀದಾರರಾಗುವುದಿಲ್ಲ ಎಂದು ಅದನ್ನು ತಿರಸ್ಕರಿಸುತ್ತೇವೆ. ಹಿಂದೂ ಮತ್ತು ಮುಸ್ಲಿಂ ಇಂಡಿಯಾದ ಕಲ್ಪನೆ ಆಯಾ ಪಕ್ಷಗಳ ಜಾತ್ಯಂಧರಿಗೆ ಎಷ್ಟೇ ರೋಚಕವಾಗಿರಲಿ, ಅದರಲ್ಲಿ ಎಷ್ಟೇ ಬಗೆಯ ಉನ್ಮಾದದ ಅಲೆಗಳನ್ನು ಹುಟ್ಟಿಸಲಿ ಅದನ್ನು ನಾವು ಎತ್ತರದ ಧ್ವನಿಯಿಂದ ವಿರೋಧಿಸುತ್ತೇವೆ..."** (ಉದ್ಧರಣೆ : *ಡಾ|| ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು*. ಸಂ ೮; ೧೯೯೮, ಪು : ೪೨೦)

ಆದರೆ ಇಂಥ ಏಕರಾಷ್ಟ್ರೀಯವಾದಿಗಳು ತಿರುಗಿಬಿದ್ದರು. ಭಾರತ ಮತ್ತು ಪಾಕಿಸ್ತಾನವನ್ನು ಬಯಸಿದರು. ಹಿಂದೂಗಳ ಮಧ್ಯೆ ತಮ್ಮ ಅಸ್ಮಿತೆಗೆ ಭರವಸೆ ಇಲ್ಲ ಎಂದೆನಿಸಿರಬೇಕು. ಭಾರತ ವಿಭಜನೆಯಾಯಿತು. ಭಾರತದ ಏಕತೆಗಾಗಿ ಹೋರಾಡಿದ ರಾಷ್ಟ್ರೀಯ ಕಾಂಗ್ರೆಸ್ಸು ಸೋತಿತು. ಆದರೂ ಭಾರತದ ರಾಷ್ಟ್ರೀಯವಾದದಲ್ಲಿ ಧರ್ಮನಿರಪೇಕ್ಷತೆ (ಸೆಕ್ಯುಲರಿಸಂ) ಯನ್ನು ಹೊಂದುವಲ್ಲಿ ಗೆದ್ದಿತು. ಆದರೆ ಸ್ವಾತಂತ್ರ್ಯ

...ೋರಾಟಗಾರರ ಅಲ್ಪಸಂಖ್ಯಾತರ ಸಂರಕ್ಷಣೆಯ ಕುರಿತಾದ ಆಶಾಭಾವನೆ ...ಂಪೂರ್ಣವಾಗಿ ಸಾಧಿಸಲಾಗಲಿಲ್ಲ. ಭಾರತದಲ್ಲಾದ ಮುಸ್ಲಿಂ ಅಲ್ಪಸಂಖ್ಯಾತರ ...ರ್ಮಿಕ ಅಸ್ಮಿತೆಗೆ ಸಂಪೂರ್ಣ ಭರವಸೆಯನ್ನು ಕೊಡಬೇಕಾದ ಕರ್ತವ್ಯ ಅದು.

''ಭಾರತದ ರಾಷ್ಟ್ರ ಕಲ್ಪನೆಯಲ್ಲಿ ಅನೇಕ ಅಪಸ್ವರಗಳು ಎದ್ದಿವೆ. ಅವುಗಳಲ್ಲಿ ಭಾರತವು ...ಂದು 'ಸೆಕ್ಯುಲರ್ ದೇಶ' ಎಂಬ ವಾದವು ಈ ರಾಷ್ಟ್ರವು ಭಾರತದ ಅಲ್ಪಸಂಖ್ಯಾತ ವರ್ಗದ ...ರ್ಮಿಕ ಗುರುತುಗಳನ್ನು ಒಳಗೊಳ್ಳಬೇಕು ಎನ್ನುತ್ತದೆ. ಹಿಂದೂರಾಷ್ಟ್ರ ಕಲ್ಪನೆ ಅಲ್ಪಸಂಖ್ಯಾತ ...ರ್ಗಗಳು 'ಹಿಂದೂರಾಷ್ಟ್ರ' ಇತಿಹಾಸ ನಿರೂಪಣೆಯಲ್ಲಿ ಬರಬೇಕೆನ್ನಿಸುತ್ತದೆ. ಈ ...ಂದೂರಾಷ್ಟ್ರ' ಇತಿಹಾಸವು ಹೆಚ್ಚೂ ಕಡಿಮೆ ರಾಷ್ಟ್ರೀಯ ಇತಿಹಾಸದಿಂದಲೇ ತನ್ನನ್ನು ...ಷ್ಟೀಕರಿಸುತ್ತಿದೆ ಎಂಬುದು ವಿಚಿತ್ರವಾದರೂ ನಿಜ. ಪ್ರಾಚೀನ ಭಾರತದ ವೈಭವೀಕರಣ, ...್ರಾಹ್ಮಣ ಸಂಸ್ಕೃತಿಯೇ ಈ ಪ್ರಾಚೀನ ಸಂಸ್ಕೃತಿಯ ಪ್ರತಿನಿಧಿ ಎಂಬ ಭಾವನೆ, ಮುಸ್ಲಿಂ ಸಂಸ್ಕೃತಿ ...ಾರತೀಯರ ಜೊತೆ ಬೆರೆಯಲಿಲ್ಲ ಎಂಬ ನಂಬಿಕೆ, ಹಿಂದೂ ಪುರಾಣ-ಸಂಕೇತ ...ಪಂಚದಿಂದಲೇ ರಾಷ್ಟ್ರಕಲ್ಪನೆಯ ನಿರ್ಮಾಣ ಇದು ರಾಷ್ಟ್ರೀಯವಾದಿ ಇತಿಹಾಸಗಳ ...ಳುವಳಿಗಳೇ'' (*ರಾಜಾರಾಮ ಹೆಗಡೆ, ಗತ ಇತಿಹಾಸ ಕಥನ, ೩೦೫, ಪು. ೬೯*) ಎಂಬ ...ಾತಿಗೆ ಇಂದೂ ನಮ್ಮಲ್ಲಿ ಕಾಣಬರುವ ಹಿಂದೂ ಕೋಮುವಾದವೇ ಸಾಕ್ಷಿಯಾಗಿದೆ. ಅದು ...ುಸ್ಲಿಂ ದ್ವೇಷವನ್ನು ಒಂದು ರಾಷ್ಟ್ರೀಯ ತತ್ವವನ್ನಾಗಿಯೇ ಕಾಣುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿ 'ಧರ್ಮನಿರಪೇಕ್ಷತೆ'ವಾದ ಸಂವಿಧಾನವನ್ನು ...ೊಂದಿದ್ದೇವೆ. ಆದರೆ ಈಗ ನಮ್ಮ ಮುಂದೆ ಇರುವುದು ಧರ್ಮನಿರಪೇಕ್ಷತ ...ಸೆಕ್ಯುಲರಿಸಂ) ತತ್ವಕ್ಕೆ ಬಂದ ಗಂಡಾಂತರ. ಅದು ಹಿಂದೂತ್ವವಾದಿಗಳೆಂಬ 'ಹಿಂದೂ ...ಹಾಸಭೆ' ಅಸ್ತಿತ್ವದಿಂದಲೇ.

ಒಮ್ಮೆ ರಾಷ್ಟ್ರ ವಿಭಜನೆಯಾದ ಮೇಲೆ ಮುಸ್ಲಿಂ ದ್ವೇಷ ನಿಂತಿತು ಎಂದು ...ೂಹಿಸಲಾಗಿತ್ತು. ಹಾಗೆ ಊಹಿಸುವುದು, ಅದನ್ನು ಸ್ಥಾಪಿಸುವುದು ಭಾರತದ ...ರ್ತವ್ಯವೇ ಆಗಿತ್ತು. ಆದರೆ 'ಹಿಂದೂ ಮಹಾಸಭೆ' ಸ್ವಾತಂತ್ರ್ಯ ಬಂದದ್ದರಿಂದ ತನ್ನ ...ಲಸ ಮುಗಿಯಿತು ಎಂದು ಸ್ತಬ್ಧವಾಗಲಿಲ್ಲ. ಅದರ ಬದಲಾಗಿ ವಿಶ್ವಹಿಂದೂ ಪರಿಷತ್, ...ಜರಂಗದಳ, ರಾಮಸೇನೆ, ಶಿವಸೇನೆಯೇ ಮೊದಲಾದ ಶಾಖೆಗಳಾಗಿ ...ಲ್ಪಸಂಖ್ಯಾತರ ದ್ವೇಷವನ್ನೇ ಗುರಿಯಾಗಿಟ್ಟುಕೊಂಡು ಕೆಲಸಮಾಡುತ್ತಿವೆ. ಅದು ...ಾಷ್ಟ್ರದ್ರೋಹಿ ಕೆಲಸವೇ ಆಗಿದ್ದರೂ 'ಹಿಂದೂ' ಎಂಬ ಹೆಸರಿನಲ್ಲಿ ನಡೆಸುತ್ತಿದೆ. ಹಿಂದೆ ...ತಿಹಾಸಿಕ ಕಾಲದಲ್ಲಿ ಮುಸ್ಲಿಮರು ಹಿಂದೂ ವಿರೋಧಿ ಕೆಲಸ-ಹಿಂಸೆ ನಡೆಸಿದ್ದಾರೆ. ...ದ್ದರಿಂದ ಇಂದಿನ ಮುಸ್ಲಿಮರಿಗೆ ಶಿಕ್ಷೆ ಕೊಡಬೇಕು ಎಂಬುದು ಒಟ್ಟೂ ...ಂದುತ್ವವಾದಿಗಳ ತತ್ವ. ಇದರ ಹಿನ್ನೆಲೆಯಲ್ಲಿ ಇಡಿಯಾಗೇ ವೈದಿಕಶಾಹಿಯನ್ನು ...ಲಪಡಿಸಿಕೊಳ್ಳಬೇಕೆಂಬ ಹುನ್ನಾರು ಕೂಡ ಇದೆ.

ಆಳುವವರ ಸಂಸ್ಕೃತಿಯನ್ನೇ ಆಳಲ್ಪಡುವವರೂ ಅನುಸರಿಸುತ್ತಾರೆ ಎಂಬ ಮಾನಸ ...ಾಸ್ತ್ರಕ್ಕನುಗುಣವಾದ ಕ್ರಿಯೆ ಹಿಂದೆ ಇಲ್ಲಿ ನಡೆದಂತೆ ಇಂದೂ ನಡೆಯುತ್ತದೆ. ಕೇವಲ ...ಣ್ಣ ಗುಂಪಾದ ವೈದಿಕ 'ಹಿಂದುತ್ವ' ತಮಗೆ ಅರಿವೇ ಇಲ್ಲದಂತೆ ತಮ್ಮ ತಲೆಯನ್ನು ...ೈದಿಕಕ್ಕೆ ಕೊಟ್ಟಿರುವ (ಇಲ್ಲಿ ಎಲ್ಲಿಯೂ ಬಹುಸಂಖ್ಯೆಯನ್ನೇ ಮನಸ್ಸಿನಲ್ಲಿಟ್ಟು ...ೊಂಡಿದೆಯೇ ಹೊರತು ಬ್ರಾಹ್ಮಣರೆಲ್ಲ ಹಿಂದುತ್ವವಾದಿಗಳೆಂದೂ, ಶೂದ್ರರೆಲ್ಲ ಅವರ ...ಾತು ಕೇಳುವ ಮೂರ್ಖ ದಡ್ಡರೂ ಎಂದು ಅರ್ಥವಲ್ಲ, ಆ ಕುರಿತು ಕ್ಷಮೆಯಿರಲಿ) ...ೂದ್ರರೂ ದಲಿತರೂ ಹಿಂದೂ ಧರ್ಮದ ರಕ್ಷಕರೂ ಆಗಿ ಮುಸ್ಲಿಂ ದ್ವೇಷಕರೂ ಆಗಿ ...ರಿವರ್ತನೆಯಾಗಿದ್ದಾರೆ. ಇಂಥವರ ಪಡೆ ಬಾಬರಿ ಮಸೀದಿ ಧ್ವಂಸದಲ್ಲಿಯೂ ...ಲುಗೊಂಡಿತು; ಬಾಬಾಬುಡನ್‌ಗಿರಿ ಗಲಭೆಯಲ್ಲೂ ಇದೇ ಪಡೆ ಕೂಡಿಕೊಂಡಿದೆ. ...ವರನ್ನೂ ಪರಿವರ್ತಿಸುವಲ್ಲಿ ನಾವು ಏನು ಮಾಡಿದ್ದೇವೆ? ನಾಲ್ಕು ಜನ ಬುದ್ಧಿಜೀವಿಗಳು ...ೀಟಿಂಗ್' ಮಾಡಿದರೆ ಸಾಕೆ? ಇದಕ್ಕೆ ಜನಮಧ್ಯೆ ಹೋಗಿ ತಿಳುವಳಿಕೆ ...ಡಬೇಕಲ್ಲವೆ? ಅದರಲ್ಲೂ ನಮ್ಮಲ್ಲಿ ಓದು ಬಲ್ಲವರ ಸಂಖ್ಯೆಯೇ ಕಡಿಮೆ.

ಇದಕ್ಕಿಂತ ಹೆಚ್ಚಾಗಿ ವಿಧ್ವಂಸಕವಾದ, ದ್ವೇಷಕ್ಕೆ ಅನುವು ಮಾಡಿಕೊಡುವ ಹಿಂದೂ ...ರ್ಮದ ಕೀರ್ತನೆಗೇ ಬೆಲೆ ಬರುತ್ತದೆ. ಯಾಕೆಂದರೆ ಹಿಂದೂ ಧರ್ಮದಲ್ಲಿ ಅವರ ...ಸ್ಮಿತೆಯ ಪ್ರಶ್ನೆ ಕೂಡ ಅಡಗಿದೆ. ಅದು ಅಸಹಜ ಕೂಡ ಅಲ್ಲ.

ಬುದ್ಧಿಜೀವಿಗಳ ಆಂದೋಲನದಿಂದಾಗಿ ಮತ್ತು ವೈದಿಕ-ವೈದಿಕೇತರ ಎನ್ನದೆ ಎಲ್ಲ ...ಾತಿಗಳಲ್ಲಿರುವ ಮಾನವ ಪ್ರೇಮಿಗಳ ಸಹಕಾರದಿಂದಾಗಿ ಕೋಮುಸೌಹಾರ್ದತೆಯ ...ಂದೋಲನವೇನೋ ಕರ್ನಾಟಕದಲ್ಲಿದೆ. ಆದರೆ ಈಗ ಒಡಕುಗೊಳ್ಳುವ ಸ್ಥಿತಿಯಲ್ಲಿದೆ ...ಂದು ಪತ್ರಿಕೆ ಸುದ್ದಿ ಮಾಡುವುದು ಖರೆಯೇ ಆದೀತು. ಇದಕ್ಕೆ ಕಾರಣ ಕೋಮು ...ಹಾರ್ದ ವೇದಿಕೆಯೊಡನೆ ಸೈದ್ಧಾಂತಿಕ ಭಿನ್ನಾಭಿಪ್ರಾಯ ಕಾರಣ ಎನ್ನಲಾಗುತ್ತಿದೆ. ...ದು ಹೀಗಾದರೆ ಜನಾಂದೋಲನಕ್ಕೆ ದೊಡ್ಡ ಹಿನ್ನಡೆಯೇ ಆಗುತ್ತದೆ.

ಕೋಮುವಾದೀ ಗಲಭೆಗೆ ರಾಜಕಾರಣದ ಕೊಡುಗೆ ಬಹುದೊಡ್ಡದಾಗಿದೆ. ನಾನು ಇಲ್ಲಿ ಬಿ.ಜೆ.ಪಿ ರಾಜಕಾರಣದ ಬಗ್ಗೆ ಪ್ರಸ್ತಾಪ ಮಾಡುತ್ತಿಲ್ಲ. ಬಿ.ಜೆ.ಪಿ. ರಾಜಕಾರಣಕ್ಕೆ ಜನಸಾಮಾನ್ಯರ ಕುರಿತು ಯಾವ ಕಾಳಜಿಯೂ ಇಲ್ಲ ಎಂಬುದು ಅದರ ತತ್ವ ಪ್ರಣಾಳಿಕೆಯಿಂದಲೇ ಗೊತ್ತಾಗುತ್ತದೆ. ಅದು ಬಂಡವಾಳಶಾಹಿ ಧೋರಣೆಯ ಪೋಷಕವಾಗಿದ್ದು, ಧರ್ಮದ ಹೆಸರಿನಲ್ಲಿ ಮುಸ್ಲಿಮರ ತುಷ್ಟಿ ಎಂಬ ದ್ವೇಷಪೂರ್ಣ ಹಿನ್ನೆಲೆಯಲ್ಲಿ ಬಡ ಜನರ- ಕೆಳವರ್ಗ, ಜಾತಿಗಳ ವೋಟನ್ನು ಸೆರೆಹಿಡಿಯುತ್ತದೆ. ಹೀಗಿರುವಾಗ, ಸ್ವಾತಂತ್ರ್ಯಾಂದೋಲನದ ಕಾಲದಿಂದಲೂ ಧರ್ಮಸಹಿಷ್ಣುತೆ, ಧರ್ಮನಿರಪೇಕ್ಷತೆಯನ್ನು ಒಂದು ಮುಖ್ಯ ತತ್ವವನ್ನಾಗಿ ಅನುಸರಿಸುತ್ತಾ ಬಂದ ಕಾಂಗ್ರೆಸ್ ಎಂಬ ರಾಜಕೀಯ ಪಕ್ಷ ಏನು ಸಾಧಿಸುತ್ತಿದೆ? ಈ ಪಕ್ಷದ ದೂರದೃಷ್ಟಿ ಇಲ್ಲದ ಮುಂದಾಳುಗಳ ರಾಜಕೀಯ ನಿರ್ಣಯವೂ ಬಿ.ಜೆ.ಪಿ.ಯ ಕೋಮು ರಾಜಕೀಯಕ್ಕೂ ಅನುಕೂಲವಾಗಿ ಪರಿಣಮಿಸಲಿಲ್ಲವೇ?

ಶುದ್ಧವಾಗಿ ಹೇಳುವುದಿದ್ದರೆ ನೆಹರೂ ಆಡಳಿತದ ಕಾಲದಲ್ಲಿ ಮಾತ್ರ ಕಾಂಗ್ರೆಸ್ ಜಾತ್ಯತೀತ (ಧರ್ಮನಿರಪೇಕ್ಷಿತ) ತತ್ವಕ್ಕೆ ಬದ್ಧವಾಗಿತ್ತೇ ಹೊರತು ಮುಂದೆಲ್ಲ ಹಂತ ಹಂತವಾಗಿ ತನ್ನ ತತ್ವಕ್ಕೆ ತಿಲಾಂಜಲಿ ಕೊಡುತ್ತಲೇ ಬಂದು, ಇಂದು ಮತ್ತೊಂದು ಅಂಚಿಗೆ ಬಂದು ನಿಂತಿದೆ. ಬಿ.ಜೆ.ಪಿ.ಯನ್ನು ಅದು ಹಿಂದುತ್ವವಾದಿ ಅಲ್ಪಸಂಖ್ಯಾತದ್ವೇಷಿ ಎಂದು ಸ್ಪಷ್ಟವಾಗಿ ಜನ ಗುರುತಿಸುತ್ತಾರೆ. ಆದರೆ ಗುಮ್ಮಣ್ಣ ಗುಸುಕಿನ ಮುಸುಕಿನಲ್ಲಿ ಕಾಂಗ್ರೆಸ್ ಮಾಡುತ್ತಿರುವುದೇನು? ಅದೂ ತತ್ವಭ್ರಷ್ಟವಾಗಿ, ಲಂಚಕೋರವಾಗಿ ಅಧಿಕಾರ ದಾಹದಲ್ಲಿ ದೇಶವನ್ನೇ ಮಾರಾಟ ಮಾಡಲು ಹಿಂದೆ ಮುಂದೆ ನೋಡೀತು ಅಂದುಕೊಳ್ಳುತ್ತೀರಾ? ಅಂಥ ಅಂಜಿಕೆ ಏನಾದರೂ ಇದ್ದರೆ ಅದು ಜನಸಾಮಾನ್ಯರ ಹೆದರಿಕೆಯಿಂದಾಗಿಯೇ ಹೊರತು ತನ್ನ ದೇಶಪ್ರೇಮದಿಂದಲ್ಲ. ಸ್ಪಷ್ಟವಾಗಿ ಧರ್ಮನಿರಪೇಕ್ಷಿತ (ಸೆಕ್ಯುಲರಿಸಂ) ಸಿದ್ಧಾಂತವನ್ನು ಓಟಿನ ರಾಜಕೀಯವಲ್ಲದೆ ಎತ್ತಿ ಹಿಡಿಯುವ ಪಕ್ಷ ಕಮ್ಯುನಿಸ್ಟನ್ನು ಬಿಟ್ಟರೆ ಬೇರೆ ಯಾವುದಿದೆ?

ಹೌದು. ಜನಸಾಮಾನ್ಯರು ಕೆಳಜಾತಿಯವರಾಗಿರಬಹುದು, ಬಡವರಾಗಿರಬಹುದು, ಅನಕ್ಷರಸ್ಥರಾಗಿರಬಹುದು, ಇಂಗ್ಲಿಷ್ ಕಲಿಯದವರಾಗಿರಬಹುದು. ಆದರೆ, ಅವರು ತಮ್ಮ ದೇಶದ ಲೋಕದೃಷ್ಟಿಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಇದಕ್ಕೆ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಎಂಬ ಹಣೆಪಟ್ಟಿಯಿಲ್ಲ. ಅದು ನಿಜವಾದ ರಾಷ್ಟ್ರೀಯತೆ ಕೂಡ. ಅದಕ್ಕೆ ಸಾಕ್ಷಿಯಾಗಿ ದೇಶದಲ್ಲಿ ಸಾವಿರಾರು ದರ್ಗಾಗಳೂ ಸಮಾಧಿಗಳೂ ಇವೆ. ಅಂಥ ಪ್ರಸಿದ್ಧ ದರ್ಗಾ-ಸಮಾಧಿಗಳಲ್ಲಿ ಬಾಬಾಬುಡನ್‌ಗಿರಿ ಒಂದು. ಅಲ್ಲಿಯ ಯಜಮಾನ ಮುಸ್ಲಿಂನೇ ಆಗಿದ್ದರೂ ನೂರಾರು ವರ್ಷಗಳಿಂದ ಬಡವರು, ಕೆಳಜಾತಿಯವರು ಯಾವ ಮತಧರ್ಮದ ಸೋಂಕು ಇಲ್ಲದೆ ತಮ್ಮ ಪ್ರಾರ್ಥನೆಯನ್ನು ಪೂಜೆಯನ್ನು ತಮ್ಮದೇ ಆದ ರೀತಿಯಲ್ಲಿ ಸಲ್ಲಿಸಿ ಸಮಾಧಾನವನ್ನು ಹೊತ್ತು ತಮ್ಮ ನಿತ್ಯದ ಬದುಕಿಗೆ ಮರಳುತ್ತಿದ್ದಾರೆ. ಆದರೆ ಅಲ್ಲಿಯ ಪ್ರಶಾಂತತೆಗೆ ಬೆಂಕಿ ಹಚ್ಚುವ ನೆಲೆಗೆ ಈ ಹಿಂದುತ್ವವಾದಿಗಳು ತಲುಪಿದ್ದಾರೆ. ಜನಸಾಮಾನ್ಯರ ಪ್ರಶಾಂತ ಮನಸ್ಸಿಗೆ ಬೆಂಕಿ ಹಚ್ಚುತ್ತಿದ್ದಾರೆ. ಬಾಬಾಬುಡನ್‌ಗಿರಿಯನ್ನು ಮತ್ತೊಂದು ಗುಜರಾತನ್ನಾಗಿ ಮಾಡಲು ಹೊರಡುತ್ತೇವೆನ್ನುವ ಅವರಲ್ಲಿ ಅಧಿಕಾರ ಪಡೆಯುವ ಮತ್ತು ಮತೀಯ ದ್ವೇಷವನ್ನು ಬಿಟ್ಟರೆ ನಿಜವಾದ ಅರ್ಥದಲ್ಲಿ ಧರ್ಮ-ದೇವರು ಇದೆಯೇ? ಇಲ್ಲ ಎನ್ನುವುದು ಸ್ಪಷ್ಟ.

ಇದನ್ನು ತಡೆಯಲು ಸೆಕ್ಯುಲರ್ ರಾಜಕೀಯ ಪಕ್ಷಗಳ ರಾಜಕೀಯ ಶಕ್ತಿಯ ನಿರ್ಧಾರಿತ ಬದ್ಧತೆ ಬೇಕು. ರಾಷ್ಟ್ರೀಯತೆ ಎನ್ನುವುದು ಬೆಳೆದುಬಂದುದೇ ಹೊರತು ಸ್ಥಿರಾಸ್ತಿಯಲ್ಲ. ಒಂದು ಮತಧರ್ಮ, ಒಂದು ಭಾಷೆ, ಒಂದು ಭೌಗೋಳಿಕತೆ ಇವೆಲ್ಲ ರಾಷ್ಟ್ರೀಯತೆಯ ಅಂಶಗಳೇ ಆದರೂ ಅದಷ್ಟರಿಂದಲೇ ರಾಷ್ಟ್ರೀಯತೆ ಸಾಧಿಸಲ್ಪಡುವುದಿಲ್ಲ. ರೆವರೆಂಡ್ ಮೈಕೇಲ್ ಬಪ್ಲಾನಗನ್ ಎನ್ನುವವರು ಐರ್ಲೆಂಡ್ ವಿಭಜನೆಯ ವಿಷಯದಲ್ಲಿ ಹೇಳುವ ಬುದ್ಧಿಮಾತು ಈಗ ನಮ್ಮದಾಗಬೇಕು.

ಕೊನೆಯ ವಿಶ್ಲೇಷಣೆಯಲ್ಲಿ ಜನಗಳ ಇಷ್ಟವೇ ರಾಷ್ಟ್ರೀಯತೆಯ ಒರೆಗಲ್ಲು (ಅಂಬೇಡ್ಕರ್ ಮೇಲೆ ಹೇಳಿದ್ದು, ೪೭೭). ಇಂಥ ಜನಗಳ ಇಷ್ಟವನ್ನು ನಿರೂಪಿಸುವ ಎಲ್ಲ ಕಾರ್ಯಕ್ರಮವೂ ನಮ್ಮದಾಗಬೇಕು. ಈ ಉದ್ದೇಶ ಸಾಧನೆಗಾಗಿ ದೊಡ್ಡ ಪ್ರಮಾಣದಲ್ಲಿ ಜನಾಂದೋಲನವನ್ನು ರೂಪಿಸಬೇಕು. ಇದರಲ್ಲಿ ಅಲ್ಪಸಂಖ್ಯಾತರು ದ್ವೀಪಗಳಾಗಬಾರದು, ವಿಚಲಿತರಾಗಬಾರದು. ಧರ್ಮನಿರಪೇಕ್ಷಿ ಆಂದೋಲನದಲ್ಲಿ ಸಹಭಾಗಿಗಳಾಬೇಕು.

**ಡಾ|| ಆರ್. ವಿ. ಭಂಡಾರಿ**
ಆರೆ ಅಂಗಡಿ ಅಂಚೆ, ಹೊನ್ನಾವರ ತಾಲ್ಲೂಕು
ಉತ್ತರ ಕನ್ನಡ - ೫೮೧ ೪೩೦



# ಸಮಕಾಲೀನ ರಾಷ್ಟ್ರೀಯತೆಯ ಸಮಸ್ಯೆಗಳು
## ಭಾರತವನ್ನು ಅನುಲಕ್ಷಿಸಿ

ಡಾ|| ತಾರಕೇಶ್ವರ್ ವಿ. ಬಿ.

**ಪೀಠಿಕೆ**

ಈ ವರ್ಷದ ದೀಪಾವಳಿಯ ಆರಂಭಕ್ಕೆ ಮೊದಲ ದಿನ ಕರ್ನಾಟಕದ ಪ್ರಮುಖ ಆಂಗ್ಲ ದಿನಪತ್ರಿಕೆಯಲ್ಲಿನ ಮುಖಪುಟದಲ್ಲಿ ಒಂದು ಸುದ್ದಿ ಪ್ರಕಟವಾಗಿತ್ತು. ಆ ಸುದ್ದಿಯ ಮೊದಲ ಸಾಲು ಇದು : ''ಟಾಟಾ ಕಂಪನಿಯ ಅಧ್ಯಕ್ಷ ರತನ್ ಟಾಟಾ ದೀಪಾವಳಿಯ ಮುನ್ನಾದಿನ ದೇಶಕ್ಕೆ ಅಮೂಲ್ಯವಾದ ಬಳುವಳಿಯೊಂದನ್ನು ನೀಡಿದ್ದಾರೆ. ಅದೇನೆಂದರೆ ಬ್ರಿಟನ್ನಿನ ಕೋರಸ್ ಕಂಪನಿಯನ್ನು ತಮ್ಮ ಕಂಪನಿಯು ಪಡೆದುಕೊಳ್ಳಲಿದೆಯೆಂದು ಅವರು ಘೋಷಿಸಿದ್ದಾರೆ. ಇದನ್ನು ವಶಕ್ಕೆ ತೆಗೆದುಕೊಂಡಾಗ ಉಕ್ಕು ಉತ್ಪಾದನೆಯಲ್ಲಿ ಈ ಕಂಪನಿಯು ವಿಶ್ವದಲ್ಲಿ ಐದನೆಯ ಸ್ಥಾನದಲ್ಲಿರುತ್ತದೆ.''

ನಮ್ಮ ದೇಶದ ಬಂಡವಾಳಶಾಹಿ ಸಂಸ್ಥೆಯು ಬೇರೊಂದು ದೇಶದ ಕಂಪನಿಯನ್ನು ಕೊಂಡುಕೊಂಡರೆ, ಅದು ದೇಶಕ್ಕೆ ಆ ಸಂಸ್ಥೆ ಕೊಟ್ಟ ದೀಪಾವಳಿ ಉಡುಗೊರೆ ಎಂದು ಈ ವರದಿ ಭಾವಿಸುತ್ತಿದೆ. ಈ ಬಂಡವಾಳಶಾಹಿ ಸಂಸ್ಥೆಯು ಮತ್ತೊಂದು ಕಂಪನಿಯನ್ನು ತನ್ನ ಮಡಿಲಿಗೆ ಹಾಕಿಕೊಳ್ಳುವ ಮೂಲಕ ಉಕ್ಕು ಉತ್ಪಾದನಾ ಕ್ಷೇತ್ರದಲ್ಲಿ ಪ್ರಪಂಚದಲ್ಲೇ ಐದನೇ ದೊಡ್ಡದಾದ ಬಂಡವಾಳಶಾಹಿ ಕಂಪನಿಯಾಗುವುದು ಎಂದು ಇದು ತಿಳಿಸುತ್ತದೆ. ಆ ಕಂಪನಿಯ ಒಡೆತನ ಹೊಂದಿರುವವರಿಗೆ ಅಥವಾ ಆ ಕಂಪನಿಯ ಬಂಡವಾಳದಲ್ಲಿ ಭಾಗ (ಶೇರ್) ಹೊಂದಿರುವವರಿಗೆ ಅದನ್ನು ಉಡುಗೊರೆ ಎಂದು ಭಾವಿಸುವುದು ಅರ್ಥವಾಗುತ್ತದೆ. ಆದರೆ ಅದು ಇಡೀ ದೇಶಕ್ಕೇ ದೀಪಾವಳಿಯ ಕೊಡುಗೆ ಎಂದು ಭಾವಿಸುವುದು ಹೇಗೆ? ಹಾಗೆಯೇ, ವೆಸ್ಟ್ ಇಂಡೀಸ್ ತಂಡವು ಭಾರತವನ್ನು ಕ್ರಿಕೆಟ್ ಆಟದಲ್ಲಿ ಸೋಲಿಸಿದಾಗ ನಮ್ಮ ಮುಖ ಸಪ್ಪೆಯಾಗುವುದು ಏಕೆ ?

ಇದರ ರಹಸ್ಯವೇ ರಾಷ್ಟ್ರೀಯತೆ. ಬೇರೆ ದೇಶದ ಬಂಡವಾಳವು ನಮ್ಮ ದೇಶದ ಬಂಡವಾಳಶಾಹಿಯನ್ನು ಬಲಿ ತೆಗೆದುಕೊಂಡರೆ ನಮಗೆ ಆದ ನಷ್ಟವೆನ್ನುತ್ತೇವೆ. ಅದೇ ನಮ್ಮ ಬಂಡವಾಳಶಾಹಿ ಬೇರೆ ದೇಶದ ಕಂಪನಿಯನ್ನು ಕೊಂಡುಕೊಂಡರೆ ಅದನ್ನು ನಮಗೇ ನೀಡಿದ ಉಡುಗೊರೆ ಎಂದು ಭಾವಿಸುತ್ತೇವೆ. ನಾವು ಎಂದೂ ಮುಖ ನೋಡದ, ನೋಡದೆಯೂ ಇರಬಹುದಾದ ಭಾರತೀಯ ವ್ಯಕ್ತಿಯೊಬ್ಬನಿಗೆ ಲೆಬನಾನ್‌ನಲ್ಲಿ ಕಾರಣಾಂತರಗಳಿಂದ ತೊಂದರೆಯಾದರೆ ನಮ್ಮ ಜೀವ ಮಿಡಿಯುತ್ತದೆ. ಗೋವಾದ ಸ್ಲಂಗಳಲ್ಲಿನ ಕನ್ನಡಿಗರಿಗೆ ತೊಂದರೆಯಾದರೆ ಅದು ಕನ್ನಡ ಪತ್ರಿಕೆಗಳಿಗೆ ದೊಡ್ಡ ಸುದ್ದಿಯಾಗುತ್ತದೆ. ಅದೇ ಸ್ಲಂಗಳಲ್ಲಿನ ತಮಿಳರಿಗೆ ತೊಂದರೆಯಾದರೆ ಅದು ನಮಗೆ ದೊಡ್ಡ ಸುದ್ದಿಯಲ್ಲ.

**ಹಿನ್ನೆಲೆ**

ರಾಷ್ಟ್ರ ಎನ್ನುವುದು ಒಂದು ಸಾಮಾಜಿಕ-ಆರ್ಥಿಕ- ರಾಜಕೀಯ ಸಂಸ್ಥೆ. ಕುಟುಂಬ ವನ್ನು ಸಮಾಜಶಾಸ್ತ್ರಜ್ಞರು ಸಾಮಾನ್ಯವಾಗಿ ಸಮಾಜದ ಪ್ರಾಥಮಿಕ ಘಟಕವೆಂದು ಭಾವಿಸುತ್ತಾರೆ. ರಾಷ್ಟ್ರ ಎನ್ನುವುದು ಆ ರೀತಿಯಾದ ಪ್ರಾಥಮಿಕ ಘಟಕವೂ ಅಲ್ಲ ಅಥವಾ ಅಷ್ಟು ಪುರಾತನವಾದದ್ದೂ ಅಲ್ಲ. ಅದರ ಇತಿಹಾಸ ಕೆಲವೇ ಶತಮಾನಗಳದ್ದು. ಭಾರತದಲ್ಲಂತೂ ಅದು ಬಹಳ ಹೊಚ್ಚ ಹೊಸ ಕಲ್ಪನೆ, ಹತ್ತೊಂಭತ್ತು ಮತ್ತು ಇಪ್ಪತ್ತನೇ ಶತಮಾನದ ಬಳುವಳಿ.

ಕುಟುಂಬದಲ್ಲಿನ ಸದಸ್ಯತ್ವವು ಸಾಮಾನ್ಯವಾಗಿ ರಕ್ತಸಂಬಂಧ ಮತ್ತು ಮದುವೆ ಯಿಂದ ಉಂಟಾಗುವ ಸಂಬಂಧಗಳನ್ನು ಆಧರಿಸಿದೆ. ಕುಟುಂಬ ಪದ್ಧತಿ ಇಲ್ಲದಿರ ಬಹುದಾದ ಬುಡಕಟ್ಟುಗಳಲ್ಲೂ ಸಾಂಘಿಕ (ಸಾಮುದಾಯಿಕ) ಬಾಳುವಿಕೆಯನ್ನು ಕಾಣಬಹುದು. ಈ ಬುಡಕಟ್ಟುಗಳಲ್ಲಿ ಸಮುದಾಯದ ಸದಸ್ಯತ್ವವು ವಂಶ (ಕ್ಲಾನ್)ದಿಂದ ನಿರ್ಧರಿಸಲ್ಪಡುತ್ತದೆ. ರಾಷ್ಟ್ರ ಎನ್ನುವ ಸಂಸ್ಥೆಯು ಸಹ ಒಂದು ಸಮುದಾಯವೇ. ಆದರೆ ಈ ಸಮುದಾಯದ ಸದಸ್ಯತ್ವವು ವಂಶ ಅಥವಾ ರಕ್ತ ಸಂಬಂಧದ ಆಧಾರದ ಮೇಲೆ ಮುಖ್ಯವಾಗಿ ಆಧರಿಸಿರುವುದಿಲ್ಲ. ವಾಸಿಸುವ ಪ್ರದೇಶದ ಆಧಾರದ ಮೇಲೆ ಈ ಸಮುದಾಯದ ಸದಸ್ಯತ್ವವು ನಿರ್ಧಾರವಾಗುತ್ತದೆ. ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶವನ್ನು ಆಧರಿಸಿ ಅದರಲ್ಲಿನ ನಿವಾಸಿಗಳು ತಮಗೆ ತಾವೇ ಒಂದು ಪ್ರಭುತ್ವವನ್ನು ನಿಯಮಿಸಿಕೊಳ್ಳುವುದನ್ನು ಮತ್ತು ಆ ಪ್ರಭುತ್ವಕ್ಕೆ ಪ್ರದೇಶದ ಸಾರ್ವಭೌಮತ್ವವನ್ನು ವಹಿಸಿಕೊಡುವುದು ೧೬ರಿಂದ ೨೦ನೇ ಶತಮಾನದಲ್ಲಿ ರೂಪುಗೊಂಡ ಒಂದು ವಿಚಾರ. ಅದಕ್ಕೆ ಮುಂಚೆ ರಾಜರುಗಳು ಒಂದು ರಾಷ್ಟ್ರದ ಗಡಿಗಳನ್ನು ತಮ್ಮ ಸೈನ್ಯಶಕ್ತಿಯ ಆಧಾರದ ಮೇಲೆ ನಿರ್ಧರಿಸುತ್ತಿದ್ದರು. ಯುದ್ಧಗಳು ರಾಷ್ಟ್ರಗಳನ್ನು ನಿರ್ಮಾಣ ಮಾಡುತ್ತಿದ್ದವು ಅಥವಾ ರೂಪಿಸುತ್ತಿದ್ದವು.

ಈ ರಾಷ್ಟ್ರ ಎನ್ನುವ ಪರಿಕಲ್ಪನೆ ರೂಪುಗೊಂಡದ್ದು ಯೂರೋಪ್‌ನಲ್ಲಿ. ರಾಷ್ಟ್ರ ಎನ್ನುವ ಪರಿಕಲ್ಪನೆ ರೂಪುಗೊಳ್ಳುವುದಕ್ಕೂ ಕೈಗಾರಿಕಾ ಕ್ರಾಂತಿಗೂ, ಬಂಡವಾಳ ಶಾಹಿಯ ಉಗಮಕ್ಕೂ ನಿಕಟ ಸಂಬಂಧಗಳಿವೆ. ಬಂಡವಾಳಶಾಹಿ ಮತ್ತು ಕೈಗಾರಿಕಾ ಕ್ರಾಂತಿ ಆರಂಭವಾಗುವ ಮುಂಚೆ ಯೂರೋಪಿನಲ್ಲಿ ಊಳಿಗಮಾನ್ಯಶಾಹಿ ವ್ಯವಸ್ಥೆ ಇತ್ತೆಂಬುದನ್ನು ನಾವು ಬಲ್ಲೆವು. ಅಂದಿನ ಜನರ ಜೀವನವನ್ನು ರೂಪಿಸುತ್ತಿದ್ದ ಬಹುಮುಖ್ಯ ಸಂಗತಿಗಳು ಈ ವ್ಯವಸ್ಥೆ ಮತ್ತು ಧರ್ಮ. ವ್ಯಕ್ತಿಗಳು ನಾವಿಂದು ಪರಿಭಾವಿಸುವ ಇಂಡಿವಿಜುಯಲ್‌ಗಳಾಗಿರಲಿಲ್ಲ; ಅವರು ಗುಲಾಮರಾಗಿರುತ್ತಿದ್ದರು ಇಲ್ಲಾ ಗುಲಾಮರ ಒಡೆಯರಾಗಿರುತ್ತಿದ್ದರು ಅಥವಾ ಧಾರ್ಮಿಕ ಸಮುದಾಯದ ಸದಸ್ಯರಾಗಿರುತ್ತಿದ್ದರು. ಧರ್ಮ ಅಥವಾ ಒಡೆಯ ಹೇಳಿದಂತೆ ನಡೆಯುವುದು ಜೀವನ ನಿರ್ವಹಣೆಯ ಬಹುಮುಖ್ಯ ದಾರಿಯಾಗಿತ್ತು. ಬಂಡವಾಳಶಾಹಿ ತನ್ನ ಅಗತ್ಯಗಳಿಗೆ ಅನುಗುಣವಾಗಿ ವ್ಯಕ್ತಿಗಳನ್ನು ಧರ್ಮ ಮತ್ತು ಊಳಿಗಮಾನ್ಯಶಾಹಿ ವ್ಯವಸ್ಥೆಯ ಬಂಧನ ದಿಂದ ತನ್ನ ಜೀವನವನ್ನು ತಾನೇ ಸ್ವಯಂ ರೂಪಿಸಿಕೊಳ್ಳಬೇಕೆನ್ನುವ ಇಂಡಿವಿಜುಯಲ್ ಗಳನ್ನು ಸೃಷ್ಟಿಸುವ ಕ್ರಿಯೆಯಲ್ಲಿ ತೊಡಗಬೇಕಾಯಿತು. ಈ ಕ್ರಿಯೆಯನ್ನೇ ನಾವು ಆಧುನಿಕತೆ ಎನ್ನುತ್ತೇವೆ. ಮನುಷ್ಯರು ವಿಚಾರವಂತರು. ಅವರ ಲಾಭ, ನಷ್ಟಗಳನ್ನು ನೋಡಿ ಅವರ



ಜೀವನವನ್ನು ಅವರೇ ರೂಪಿಸಿಕೊಳ್ಳುತ್ತಾರೆ. ಅವರ ಮೇಲೆ ಯಾವುದೇ ರೀತಿಯ ಕಟ್ಟುಪಾಡುಗಳಿರಬಾರದು, ಅವರು ಸಂಪೂರ್ಣವಾಗಿ ವ್ಯಕ್ತಿಗತವಾಗಿ, ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳಬೇಕು ಎಂಬಂತಹ ವಿಚಾರ ರೂಪುಗೊಂಡಿತು.

ಈ ಆಧುನಿಕತೆಯು ಬಹಳ ಬೇಗ ಎಲ್ಲೆಡೆಯೂ ಹಬ್ಬಿತು. ಮೊದಲು ಯೂರೋಪಿನಲ್ಲಿ ಹಾಗೂ ನಂತರ ವಸಾಹತುಶಾಹಿಯ ಬೆನ್ನಲ್ಲಿ ನಮ್ಮಲ್ಲೂ ಬಂದಿತು. ಆಧುನಿಕತೆಗೂ ಬಂಡವಾಳಶಾಹಿಗೂ ಒಂದು ನಂಟಿದೆ. ಬಂಡವಾಳಶಾಹಿಗೂ ವಸಹಾತು ಶಾಹಿಗೂ ನಂಟಿದೆ. ಆಧುನಿಕತೆಯನ್ನು ಒಪ್ಪಿದರೂ ಬಂಡವಾಳಶಾಹಿಯನ್ನು ವಿರೋಧಿಸುವ ಇನ್ನೊಂದು ವಿಚಾರವು ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಮತ್ತು ೨೦ನೇ ಶತಮಾನದ ಮಧ್ಯಭಾಗದಲ್ಲಿ ರೂಪುಗೊಂಡಿತು. ಇದೇ ಮಾರ್ಕ್ಸ್‌ವಾದ.

ಇವುಗಳು ಮುಖ್ಯವಾಗಿ ಹಳೆಯ ಸಾಮುದಾಯಿಕ ಗುರುತುಗಳೇನಿದ್ದವು ಅವುಗಳನ್ನು ಅಳಿಸಿಹಾಕುವ ಕೆಲಸದಲ್ಲಿ ತೊಡಗಿದ್ದವು. ಮನುಷ್ಯರು ತಮ್ಮನ್ನು ತಾವು ಇದುವರೆವಿಗಿಂತ ಭಿನ್ನವಾದ ಸಾಂಘಿಕ ಜೀವನಕ್ಕಾಗಿ ರೂಪಿಸಿಕೊಳ್ಳಬೇಕೆಂದು ಈ ವಿಚಾರಗಳು ಕಾರ್ಯಪ್ರವೃತ್ತವಾಗಿದ್ದವು. ಆದರೆ ಈ ಆಧುನಿಕ ವಿಚಾರಧಾರೆ ಇತರ ಸಾಂಘಿಕ ಗುರುತುಗಳನ್ನು ಅಮಾನ್ಯ ಮಾಡಿದರೂ, ರಾಷ್ಟ್ರ ಎನ್ನುವ ಸಂಸ್ಥೆಯನ್ನು ಮತ್ತು ಅದು ಅದರ ಸದಸ್ಯರುಗಳಿಗೆ ದಯಪಾಲಿಸುವ ಸಾಂಘಿಕ ಗುರುತನ್ನು ಮಾನ್ಯ ಮಾಡಿತು. ಮಾರ್ಕ್ಸ್‌ವಾದವು ಮೊದಲಿಗೆ ರಾಷ್ಟ್ರ ಎನ್ನುವ ಗುರುತನ್ನು ಮಾನ್ಯ ಮಾಡಿರಲಿಲ್ಲ. ಇಡೀ ಪ್ರಪಂಚದ ಶ್ರಮಿಕರೆಲ್ಲರೂ ಒಂದಾಗಬೇಕು ಮತ್ತು ಎಲ್ಲರೂ ಶ್ರಮಿಕರಾಗಬೇಕೆಂದುಕೊಂಡಿತ್ತು. ಆದರೆ ಅನಂತರ ಅದು ರಾಷ್ಟ್ರ ಎನ್ನುವ ವಾಸ್ತವವನ್ನು ಒಪ್ಪಿ ಕೆಲಸಮಾಡಬೇಕಾಯಿತು. ಇರಲಿ ಅದು ಬೇರೆಯದೇ ಆದ ಕಥೆ/ಚರಿತ್ರೆ, ನಮಗೆ ಅಗತ್ಯವಲ್ಲ.

ಯೂರೋಪಿನಲ್ಲಿ ರಾಷ್ಟ್ರಗಳು ಭಾಷೆಯ ಆಧಾರದ ಮೇಲೆ ರೂಪುಗೊಂಡವು. ಧರ್ಮದ ಹಿಡಿತ ತಪ್ಪಿಹೋಗುತ್ತಿದ್ದಂತೆ, ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳು ಸರ್ವಮಾನ್ಯತೆಯನ್ನು ಕಳೆದುಕೊಳ್ಳುವ ಪ್ರಕ್ರಿಯೆ ಆರಂಭವಾಯಿತು. ಮುದ್ರಣ ಯಂತ್ರಗಳ ಉಗಮ ಅವುಗಳ ಬಳಕೆ ಹೆಚ್ಚಾದಂತೆ ಯೂರೋಪಿನ ವರ್ನಾಕ್ಯುಲರ್ ಭಾಷೆಗಳು ಮುನ್ನಲೆಗೆ ಬಂದವು. ಅದರೊಂದಿಗೆ ಸಾರ್ವಜನಿಕ ಶಿಕ್ಷಣ ನೀತಿಯಿಂದಾಗಿ ಭಾಷೆ ಪ್ರಾಮುಖ್ಯತೆಯನ್ನು ಪಡೆಯಿತು. ಭಾಷಿಕ ಗುರುತು ಪ್ರಮುಖ ಗುರುತಾಗಿ ರೂಪುಗೊಂಡಿದ್ದರಿಂದ, ಅದೇ ರಾಷ್ಟ್ರಗಳನ್ನು ರೂಪಿಸಲು ತಳಹದಿಯಾಯಿತು. ಹೀಗೆ ಯೂರೋಪಿನಲ್ಲಿ ಭಾಷೆ ಆಧಾರದ ಮೇಲೆ ರಾಷ್ಟ್ರಗಳು ರೂಪುಗೊಂಡವು.

ಭಾರತದಲ್ಲಿ (ಇದು ರೂಪುಗೊಂಡದ್ದೆ ರಾಷ್ಟ್ರೀಯತೆಯ ಹೋರಾಟದ ಪರಿಣಾಮವಾಗಿ) ವಸಾಹತುಶಾಹಿಯ ಆಗಮನದೊಂದಿಗೆ ಕಾಲಿರಿಸಿದ ಶಿಕ್ಷಣ ವ್ಯವಸ್ಥೆ ಆಧುನಿಕ ವಿಚಾರಗಳನ್ನು ಇಲ್ಲಿಯವರಿಗೂ ಪರಿಚಯಿಸಿತು. ಅದರೊಂದಿಗೆ ಬಂಡವಾಳಶಾಹಿ ಮತ್ತು ಕೈಗಾರಿಕೆಗಳೂ ಹೊಸ ಸಂಚಲನವನ್ನು ಇಲ್ಲಿ ರೂಪಿಸಿದುವು. ಹೊಸ ವಿಚಾರಗಳನ್ನು ತನ್ನದಾಗಿ ಮಾಡಿಕೊಂಡಿದ್ದ ಇಲ್ಲಿನ ಒಂದು ವರ್ಗ ವಸಾಹತುಶಾಹಿಯನ್ನು ವಿರೋಧಿಸಲು ಆರಂಭಿಸಿತು. ಅದು ತನ್ನೊಂದಿಗೆ ಇತರ

# ಹುಚ್ಚಿ



**ಮೋ**ಹದ ಜೊತೆಗೆ ಆಕೆ ಮಲಗಿದ್ದಳು :
ನಂತರ ಸಹಜವಾಗಿಯೇ ಬಸುರಾದಳು ;
ಉಳಿದಂತೆ ಎಲ್ಲ ನಿರಾತಂಕ.
ಮನೆಯೊಳಗಿನ ಮಣ್ಣ ಬಿಂದಿಗೆಯನಾಕೆ
ಖುಷಿಯಿಂದಲೇ ಒಡೆದುಹಾಕಿ
ಹೊರಟುಬಿಟ್ಟಳು ದೇಹಾಂತ್ಯದ ಯಾತ್ರೆಗೆಂದು.
ದಾರಿಯಲ್ಲಿ ಎದುರಾದ ಕತ್ತೆಗೆ
ವಿಧಿವತ್ತಾಗಿ ಪೂಜೆ ಮಾಡಿದಳು.
ಧೂಪದ ಕುಡಿಕೆಯಲ್ಲುಳಿದದ್ದನ್ನು ಆಶೆಯಿಂದ
ಸ್ವಾಧೀನಪಡಿಸಿಕೊಂಡು ಹೇಳಿದಳು :
''ಇದೂ ಬೂದಿಯಾಗಿಬಿಟ್ಟಿದ್ದರೆ ಜಗತ್ತಿಗೆ ನಾನು
ಏನು ಹೇಳಬಹುದಾಗಿತ್ತು ? ಆದರೆ ಅದೃಷ್ಟ
ಮಿತಿಮೀರುತ್ತ ಮುಂದಾಗಿ ಸಾಗಿದೆ ನಾಯಿಯಂತೆ''
ಆಮೇಲೆ ಆಕೆ ಆಲದ ಎಲೆಗಳನ್ನಷ್ಟು ಹರಿದು
ಅರಳಿ ಮರಕ್ಕೆ ಹಚ್ಚಿ ಬಡಿದು ಹೇಳಿದಳು :
''ಈಗ ನಾನು ಯಾರ ಋಣದಲ್ಲಿಯೂ ಇಲ್ಲ,
ಪೂರ್ಣಚಂದ್ರನಷ್ಟು ಕೂಡ ಅಲ್ಲ.''
ಉಳಿದದ್ದು ಎಲ್ಲ ನಿರಾತಂಕ (ಈ ಮಾತು ಮೊದಲೇ ಹೇಳಿದ್ದೇನೆ )
ಸಿಡಿಲಿಗೆ ಜನ್ಮವಿತ್ತಳು ಹುಚ್ಚಿ;
ಅದಕ್ಕೆ ಮೊಲೆಯೂಡುತ್ತ ಮುಂದೆ ನಡೆದಂತೆ
ಭೆಟ್ಟಿಯಾದನು ಅರಮನೆಯ ವಿದೂಷಕ;
ಆಮೇಲೆ ರಾಜ, ನಂತರ ರಾಣಿ, ಹಾಗೇ ಅವರು, ಇವರು.
ಆದರೆ ಹುಚ್ಚಿ ಸಾಕಷ್ಟು ಬುದ್ಧಿವಂತೆ –
ಯಾರನ್ನೂ ಆಕೆ ಗುರುತಿಸಲಿಲ್ಲ.

ಮೂಲ ಮರಾಠಿ : **ವಿಂದಾ ಕರಂದೀಕರ**
ಭಾವಾನುವಾದ : **ಚೆನ್ನವೀರ ಕಣವಿ**
'ಚೆಂಬೆಳಕು', ಕಲ್ಯಾಣನಗರ
ಧಾರವಾಡ - ೫೮೦ ೦೦೭

ವರ್ಗಗಳನ್ನೂ ತೆಕ್ಕೆಗೆ ತೆಗೆದುಕೊಂಡಿತು. ಅವುಗಳ ಸಹಾಯದಿಂದ ರಾಷ್ಟ್ರೀಯತೆಯ ಚಳುವಳಿ ಆರಂಭಿಸಿತು. ಈ ಹೋರಾಟವು ಭಾರತ ಎಂಬ ರಾಷ್ಟ್ರ ಒಂದನ್ನು ಪರಿಭಾವಿಸಿಕೊಂಡು ಅದಕ್ಕೊಂದು ಚರಿತ್ರೆಯನ್ನು ಕಲ್ಪಿಸಿ ಅದನ್ನು ರೂಪಿಸಲು ಯತ್ನಿಸಿತು. ಆಡಳಿತದ ದೃಷ್ಟಿಯಿಂದ ಬ್ರಿಟಿಷ್ ವಸಾಹತುಶಾಹಿ ಅದಕ್ಕೊಂದು ರೂಪವನ್ನು ನೀಡಿತ್ತು. ರೈಲು, ಅಂಚೆ, ಶಿಕ್ಷಣ ಇತ್ಯಾದಿಗಳು ಭಾರತವನ್ನು ಒಂದು ರಾಷ್ಟ್ರವಾಗಿ ಪರಿಭಾವಿಸಲು ಪ್ರೇರಕವಾಗಿದ್ದವು.

ಭಾರತದಲ್ಲಿ ಭಾಷೆ ಆಧಾರದ ಮೇಲೆ ಸಾಂಘಿಕ/ಸಾಮುದಾಯಿಕ ಗುರುತುಗಳು ಬೆಳೆಯಲಿಲ್ಲ ಎಂದಲ್ಲ; ಅವುಗಳೂ ಬೆಳೆದವು. ಏಕೆಂದರೆ ಭಾಷಿಕ ಗುರುತುಗಳು ಬೆಳೆಯಲು ಸಹಾಯಕವಾಗಿದ್ದ ಯೂರೋಪಿನಲ್ಲಿದ್ದ ಎಲ್ಲಾ ಅಂಶಗಳು ಎಲ್ಲಾ ಪರಿಸ್ಥಿತಿಗಳು ಭಾರತದಲ್ಲೂ ಇದ್ದವು. ಸಂಸ್ಕೃತದ ಬಳಕೆ ಕಮ್ಮಿಯಾಗಿತ್ತು, ಇಲ್ಲಿನ ವರ್ನಾಕ್ಯುಲರ್ ಎನ್ನಬಹುದಾದ ಭಾಷೆಗಳು ತಮ್ಮ ಗುರುತುಗಳನ್ನು ಸ್ಥಾಪಿಸಿಕೊಳ್ಳುತ್ತಿದ್ದವು. ಮುದ್ರಣ ಯಂತ್ರಗಳ ಆಗಮನದಿಂದ ಉಂಟಾದ ಸಾಹಿತ್ಯಕ ಬೆಳವಣಿಗೆಗಳು ಮತ್ತು ಸಮಾಚಾರ ಪತ್ರಿಕೆಗಳೂ ಇದ್ದವು.

ಭಾರತದಲ್ಲಿ ರಾಷ್ಟ್ರೀಯತೆಯ ವಿಚಾರವು ಕಾಲದ ದೃಷ್ಟಿಯಿಂದ ಮೊದಲಿಗೆ ಬಂಗಾಳದಲ್ಲಿ ಆರಂಭವಾಯಿತೆಂದು ಗುರುತಿಸುತ್ತಾರೆ. ೧೯ನೇ ಶತಮಾನದ ಉತ್ತರಾರ್ಧದಲ್ಲಿನ ಬಂಗಾಳಿ ಸಾಹಿತ್ಯದಲ್ಲಿನ ರಾಷ್ಟ್ರೀಯತೆಯನ್ನು ಅಧ್ಯಯನ ಮಾಡಿರುವ ವಿದ್ವಾಂಸರು ಮೊದಲಿಗೆ ಅಲ್ಲಿನ ಸಾಹಿತ್ಯದಲ್ಲಿ ಬಂಗಾಳಿ ಗುರುತು ಮೂಡಿತು ಎಂದು ತಿಳಿಸುತ್ತಾರೆ. ಆದರೆ ವಸಾಹತುಶಾಹಿಯನ್ನು ಎದುರಿಸಲು ಬಂಗಾಳಿ ಎಂಬ ಸಾಂಘಿಕ/ಸಾಮುದಾಯಿಕ ಗುರುತು ಸಾಲದು ಎಂದು ಆ ಬಂಗಾಳಿ ಗುರುತು ಶೀಘ್ರದಲ್ಲೇ ಭಾರತವೆಂಬ ಸಾಮುದಾಯಿಕ ಗುರುತಾಗಿ ಮಾರ್ಪಾಡಾಯಿತು ಎಂದು ಅಧ್ಯಯನಕಾರರು ಗುರುತಿಸಿದ್ದಾರೆ. ಕನ್ನಡದಲ್ಲಿ ೨೦ನೇ ಶತಮಾನದ ಉತ್ತರಾರ್ಧದಲ್ಲಿಯೂ ಕನ್ನಡ ಎಂಬ ಗುರುತು ಬಹಳ ಪ್ರಬಲವಾಗೇ ಕಾಣಿಸಿಕೊಳ್ಳುತ್ತದೆ. ಭಾರತ ಎಂಬ ಗುರುತು ಇಲ್ಲಿ ೨೦ನೇ ಶತಮಾನದ ಆರಂಭ ಭಾಗದಲ್ಲಿ ಕಾಣಿಸಿಕೊಂಡರೂ ಅದರೊಂದಿಗೆ ಕನ್ನಡದ ಗುರುತು ಬಂಗಾಳದಂತೆ ಏಕೀಭವಿಸಿರಲಿಲ್ಲ. ಅವುಗಳು ಪರಸ್ಪರ ವಿರೋಧವಾಗಿ ರೂಪುಗೊಳ್ಳದಿದ್ದರೂ, ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಂಡಿದ್ದವು ಮತ್ತು ಅವುಗಳ ಸಂಬಂಧವನ್ನು ವಿವಿಧ ರೀತಿಯಾಗಿ ಅರ್ಥೈಸುವ ಪ್ರಯತ್ನಗಳು ನಡೆಯುತ್ತಿದ್ದವು. ಕೊನೆಗೆ ಉಳಿದದ್ದು ಕುಟುಂಬ ಸಂಬಂಧವನ್ನು ಆಧರಿಸಿ ರೂಪಿಸಿದ ತಾಯಿ ಮತ್ತು ಮಗಳ ಸಂಬಂಧ. ಇರಲಿ ಇದು ಬೇರೆಯ ಕಥೆ. ಕೊನೆಗೆ ಭಾರತದಲ್ಲಿ ಭಾಷೆ ಆಧಾರದ ರಾಷ್ಟ್ರಗಳ ಆಧಾರದಲ್ಲಿ ರಾಷ್ಟ್ರ ರೂಪುಗೊಳ್ಳಲಿಲ್ಲ, ಬದಲಿಗೆ ವಸಾಹತು ವಿರೋಧದಲ್ಲಿ ಅವರು ನೇರ ಅಧಿಕಾರ ಸ್ಥಾಪಿಸಿದ್ದ ಮತ್ತು ಅವರ ಅಧೀನದಲ್ಲಿದ್ದ ಪ್ರಾಂತ್ಯ ರಾಜರುಗಳು ಒಪ್ಪಿ ಸೇರಿದ ಭೌಗೋಳಿಕ ಪ್ರದೇಶಗಳನ್ನು ಒಟ್ಟುಗೂಡಿಸಿ ಎರಡು ರಾಷ್ಟ್ರಗಳು ರೂಪುಗೊಂಡವು.

**ಭಾರತ ರಾಷ್ಟ್ರೀಯತೆಗೆ ಧಾರ್ಮಿಕ ಸವಾಲುಗಳು**

ಭಾರತದ ರಾಷ್ಟ್ರೀಯತೆಯು ರೂಪುಗೊಳ್ಳುತ್ತಿದ್ದ ಸಂದರ್ಭದಲ್ಲಿ ಈ ರಾಷ್ಟ್ರವು ಬಹಳ ಸನಾತನವಾದದ್ದು ಮತ್ತು ಈ ರೂಪದಲ್ಲೇ ಇತ್ತು, ನಮ್ಮನ್ನು ನಾವು ಆಳಿಕೊಳ್ಳುತ್ತಿದ್ದೆವು ಎಂದೆಲ್ಲಾ ರಾಷ್ಟ್ರೀಯ ವಿಚಾರಧಾರೆ ವಾದಿಸುತ್ತಿತ್ತು. ಇದಕ್ಕೆ ಅಗತ್ಯವಾದ ಚರಿತ್ರೆಯನ್ನೂ ರೂಪಿಸಿಕೊಳ್ಳುತ್ತಿತ್ತು. ಆದರೆ ಚರಿತ್ರೆ ಎನ್ನುವ ಶಾಸ್ತ್ರವೇ ನಮಗೆ ಹೊಸದಾಗಿತ್ತು. ಓರಿಯಂಟಲಿಸ್ಟರೆಂದು ಕರೆಸಿಕೊಳ್ಳುವ ಪಾಶ್ಚಾತ್ಯ ವಿದ್ವಾಂಸರು ಈಗಾಗಲೇ ತಾವು ಆಳುತ್ತಿದ್ದ ಪ್ರದೇಶದ ಚರಿತ್ರೆಯನ್ನು ಶಾಸನಗಳು ಮತ್ತು ಕಾವ್ಯಗಳ ಆಧಾರದ ಮೇಲೆ ರೂಪಿಸಿದ್ದರು. ಈ ಚರಿತ್ರೆಯು ಅವರ ಆಳ್ವಿಕೆಯನ್ನು ಸಮರ್ಥಿಸುವ ಸಲುವಾಗಿ ರೂಪುಗೊಂಡಿತ್ತು. ಈ ಚರಿತ್ರೆಯಲ್ಲಿ ಭಾರತ ದೇಶದ ಚರಿತ್ರೆಯನ್ನು ಮೂರುಭಾಗಗಳಾಗಿ ವಿಂಗಡಿಸಲಾಗಿತ್ತು. ಮೊದಲನೆಯದು ದೊಡ್ಡ ಸಾಮ್ರಾಜ್ಯಗಳ ಆಳ್ವಿಕೆ – ಸುವರ್ಣಕಾಲವಾಗಿತ್ತು. ನಂತರದ ಕಾಲವು ಮುಸಲ್ಮಾನರ ಆಗಮನದೊಂದಿಗೆ ಆರಂಭವಾಗುತ್ತಿತ್ತು. ನಮ್ಮ ಆಕ್ರಮಣ ಮತ್ತು ಆಳ್ವಿಕೆಯನ್ನು ಸಮರ್ಥಿಸುವ ಸಲುವಾಗಿ ಬ್ರಿಟಿಷರು ಮುಸಲ್ಮಾನರ ಆಳ್ವಿಕೆಯನ್ನು ಬಹಳ ತೀಕ್ಷ್ಣವಾದ ಆಕ್ರಮಣ ಮತ್ತು ದುರಾಡಳಿತದ ಕಾಲವಾಗಿ ರಚಿಸಿದ್ದರು. ಭಾರತ ಈ ರೀತಿಯ ಆಳ್ವಿಕೆಯಿಂದ ಬರ್ಬರವಾಗಿದೆ. ಅದನ್ನು ಈ ಬರ್ಬರತೆಯಿಂದ ಮೇಲೆತ್ತಿ ನಾಗರಿಕಗೊಳಿಸಲು (ಆಧುನಿಕಗೊಳಿಸಲು) ನಮ್ಮ ಅಗತ್ಯವಿದೆ ಎಂದು ತೋರಿಸುವುದು ಅವರ ಉದ್ದೇಶವಾಗಿದ್ದರಿಂದ ಮೂರನೆಯ ಭಾಗವನ್ನು ಆಧುನಿಕ ಕಾಲವೆಂದು ಕರೆದಿದ್ದರೂ ರಾಷ್ಟ್ರೀಯವಾದಿಗಳು ಇದೇ ಚರಿತ್ರೆಯನ್ನೇ ಆದರಿಸಿ ತಮ್ಮ ಕಥನಗಳನ್ನು ರೂಪಿಸಿಕೊಂಡಿದ್ದರು. ವಸಾಹತುಶಾಹಿಯ ವಿರೋಧವನ್ನು ಬಿಟ್ಟರೆ, ರಾಷ್ಟ್ರೀಯತಾ ವಿಚಾರಧಾರೆಗೂ ವಸಾಹತು ವಿಚಾರಧಾರೆಗೂ ಅಂತಹ ವಿರೋಧವಿರಲಿಲ್ಲ. ಹಿಂದೂ

ಸಾಮ್ರಾಜ್ಯದ ಸುವರ್ಣಯುಗ ಮತ್ತು ಮುಸ್ಲಿಂ ದುರಾಡಳಿತಗಳು ಭಾರತದ ರಾಷ್ಟ್ರೀಯತಾ ವಿಚಾರಧಾರೆಯ ಸಾಮಾನ್ಯ ಜ್ಞಾನದ ಭಾಗವಾಗಿತ್ತು.

ಇದಲ್ಲದೆ, ಜನಸಾಮಾನ್ಯರನ್ನು ಸಂಘಟಿಸಲು ರಾಷ್ಟ್ರೀಯವಾದಿ ನಾಯಕರು ರೂಪಿಸಿದ್ದ ಸಂಕೇತಗಳು ಮತ್ತು ಆಚರಣೆಗಳೂ ಕೂಡ 'ಹಿಂದೂ' ಎಂದು ಕರೆಯಲ್ಪಡುವ ಧಾರ್ಮಿಕ ಆಚರಣೆಗಳನ್ನು ಆಧರಿಸಿತ್ತು. ಉದಾಹರಣೆಗೆ, ಭಾರತಮಾತೆಯ ಚಿತ್ರ, ಗಣೇಶನ ಹಬ್ಬಕ್ಕೆ ತಿಲಕರು ನೀಡಿದ ವ್ಯಾಖ್ಯಾನ ಇತ್ಯಾದಿ. ಆದರೆ ವಾಸ್ತವವಾಗಿ ನಾವು ಇಂದು ಹಿಂದು ಎಂದು ಕರೆಯುವ ವಿಚಾರವು ರೂಪುಗೊಂಡು ಇವತ್ತಿನ ಸ್ವರೂಪವನ್ನು ಪಡೆದದ್ದೇ ೧೯ನೇ ಶತಮಾನದಲ್ಲಿ. ಮುಸಲ್ಮಾನೇತರ ಎಲ್ಲಾ ಧಾರ್ಮಿಕ ಮತ್ತು ಆಧ್ಯಾತ್ಮಿಕ ವಿಚಾರಗಳನ್ನು ಹಿಂದೂ ಎಂದು ಕರೆಯಲು ಆರಂಭಿಸಿದ್ದೇ ಈ ಸಂದರ್ಭದಲ್ಲಿ.

ಇವೆಲ್ಲವುಗಳ ಪರಿಣಾಮವಾಗಿ, ಭಾರತ ರಾಷ್ಟ್ರ ನಿರ್ಮಾಣಗೊಂಡರೆ ನಾವೆಲ್ಲ ಎರಡನೆಯ ದರ್ಜೆಯ ಪ್ರಜೆಗಳಾಗಿ ಬಿಡುತ್ತೇವೆಯೋ ಎಂದು ಆಧುನಿಕ ಮುಸ್ಲಿಮರು ಆತಂಕಕ್ಕೆ ಒಳಗಾದರು. ಮತ್ತು ಅವರು ಧರ್ಮ ಆಧಾರಿತ ಪ್ರತ್ಯೇಕ ರಾಷ್ಟ್ರದ ಪರಿಕಲ್ಪನೆಯನ್ನು ಮುಂದಿಟ್ಟರು. ಕೊನೆಗೆ ಆಡಳಿತ ಹಸ್ತಾಂತರವಾಗುವ ಸಂದರ್ಭದಲ್ಲಿ ಬ್ರಿಟಿಷರು, ಮುಸ್ಲಿಂ ಲೀಗಿನ ಬೇಡಿಕೆಯನ್ನು ಒಪ್ಪಿದರು. ಇದರಿಂದಾಗಿ ಒಟ್ಟಿಗೇ ಎರಡು ರಾಷ್ಟ್ರಗಳು ನಿರ್ಮಾಣಗೊಂಡವು. ಒಂದು ಧರ್ಮವನ್ನು ಆಧರಿಸಿ ರೂಪುಗೊಂಡ ಪಾಕಿಸ್ತಾನವಾದರೆ, ಮತ್ತೊಂದು ತನ್ನನ್ನು ತಾನು ಸೆಕ್ಯುಲರ್ ಎಂದು ಕರೆದುಕೊಂಡ ಭಾರತ. ಇಂದಿನ ಬಾಂಗ್ಲಾದೇಶವು ಅಂದು ಪೂರ್ವ ಪಾಕಿಸ್ತಾನವಾಗಿತ್ತು. ಆದರೆ ನಂತರ ಪಾಕಿಸ್ತಾನದಲ್ಲಿ ಧರ್ಮಕ್ಕಿಂತ ಭಾಷೆ ಮುಖ್ಯ ಎಂದು ಭಾವಿಸಿದ ಇವತ್ತಿನ ಬಾಂಗ್ಲಾದೇಶ ಭಾಷೆ ಆಧಾರದ ಮೇಲೆ ಪಾಕಿಸ್ತಾನದಿಂದ ಬೇರೆಯಾಯಿತು. ಬಾಂಗ್ಲಾದೇಶದ ಪ್ರತ್ಯೇಕತೆಗೆ ಭಾರತ ಸಹಾಯ ಮಾಡಿತು ಎಂದು ಪಾಕಿಸ್ತಾನವು ಭಾರತವನ್ನು ಹೆಚ್ಚು ಸಂಶಯಿಸಲು ಆರಂಭಿಸಿತು.

ಇದಲ್ಲದೆ, ಪಾಕಿಸ್ತಾನ ಮತ್ತು ಭಾರತ ಎಂದು ಎರಡು ರಾಷ್ಟ್ರಗಳು ಉದಯವಾದಾಗ ಬ್ರಿಟಿಷರ ನೇರ ಆಡಳಿತದಲ್ಲಿ ಇಲ್ಲದಿದ್ದ ರಾಜರ ಆಳ್ವಿಕೆಯ ಪ್ರದೇಶಗಳಿಗೆ ಯಾವುದೇ ರಾಷ್ಟ್ರದ ಭಾಗವಾಗುವ ಅವಕಾಶವನ್ನು ಅಂದು ಕಲ್ಪಿಸಲಾಗಿತ್ತು. ಇವುಗಳಲ್ಲಿ ಎರಡು ಪ್ರಾಂತ್ಯಗಳಲ್ಲಿ ಈ ವಿಷಯವಾಗಿ ಸಮಸ್ಯೆಯಾಯಿತು. ಮೊದಲನೆಯದು, ನಿಜಾಮರ ಆಳ್ವಿಕೆಯಲ್ಲಿದ್ದ ಹೈದರಾಬಾದ್ ಪ್ರಾಂತ್ಯ. ಇಲ್ಲಿ ಮುಸ್ಲಿಮೇತರರು ಬಹುಸಂಖ್ಯಾತರಾಗಿದ್ದು ಆಡಳಿತ ನಿಜಾಮರ ಕೈಯಲ್ಲಿದ್ದದ್ದರಿಂದ ಆತ ಆ ಪ್ರಾಂತ್ಯವನ್ನು ಪಾಕಿಸ್ತಾನಕ್ಕೆ ಸೇರಿಸಬಯಸಿದ್ದರು. ಆದರೆ ಅಂದಿನ ಭಾರತ ಸರಕಾರ ಮಿಲಿಟರಿ ಬಳಸಿ ಅದನ್ನು ಭಾರತದ ಭಾಗವಾಗಿಸಿತು. ಇದೇ ರೀತಿ ಸಮಸ್ಯೆಯಾಗಿದ್ದ ಮತ್ತೊಂದು ಪ್ರಾಂತ್ಯ ಕಾಶ್ಮೀರ. ಅಲ್ಲಿ ಬಹುಸಂಖ್ಯಾತರು ಮುಸಲ್ಮಾನರಾಗಿದ್ದು, ಹಿಂದೂ ರಾಜನ ಆಳ್ವಿಕೆಯಲ್ಲಿತ್ತು. ಆ ರಾಜ ಅದನ್ನು ಪ್ರತ್ಯೇಕ ರಾಷ್ಟ್ರವಾಗಿಯೇ ಉಳಿಸಿಕೊಳ್ಳಬಯಸಿದ. ಆದರೆ, ಪಾಕಿಸ್ತಾನ ಆ ಪ್ರಾಂತ್ಯ ತನ್ನಲ್ಲಿ ವಿಲೀನವಾಗಬೇಕೆಂದು ಬಯಸಿತ್ತು. ಈ ಹುನ್ನಾರದ ವಿರುದ್ಧ ಅಲ್ಲಿನ ರಾಜ ಭಾರತದ ಸಹಾಯವನ್ನು ಅಪೇಕ್ಷಿಸಿದ. ಸಹಾಯ ನೀಡಿದ ಭಾರತ ಅದನ್ನು ಹೆಚ್ಚಿನ ಸ್ಥಾನಮಾನ ನೀಡುವ ಭರವಸೆಯೊಂದಿಗೆ ತನ್ನಲ್ಲಿ ಲೀನಗೊಳಿಸಿಕೊಂಡಿತು. ಇದು ಪಾಕಿಸ್ತಾನಕ್ಕೂ ಮತ್ತು ಅಲ್ಲಿನ ಕೆಲವು ಬಹುಸಂಖ್ಯಾತ ಮುಸಲ್ಮಾನರಿಗೂ ಸರಿತೋರದೆ ಇಂದಿಗೂ ಭಾರತದ ಪ್ರಭುತ್ವದ ವಿರುದ್ಧದ ಹೋರಾಟ ಮುಂದುವರಿದಿದೆ.

ಇದಲ್ಲದೆ, ಭಾರತವನ್ನು ಪಾಕಿಸ್ತಾನದಂತೆಯೇ ಹಿಂದೂ ರಾಷ್ಟ್ರಗೊಳಿಸಬೇಕೆಂಬ ಆಸೆಯೊಂದಿಗೆ ಇಲ್ಲಿ ಅನೇಕ ಸಂಘಟನೆಗಳು ಕಾರ್ಯನಿರತವಾಗಿವೆ. ಅದೇ ರೀತಿ ಅದರ ವಿರುದ್ಧ ಕೆಲಸ ಮಾಡಲು ಮುಸ್ಲಿಂ ಸಂಘಟನೆಗಳು ಕೆಲವು ಆರಂಭಗೊಂಡಿವೆ. ಇವುಗಳ ಕಾರ್ಯನೀತಿಗಳು ಪ್ರಸ್ತುತ ಭಾರತದ ಘೋಷಿತ ಸೆಕ್ಯುಲರ್ ರೂಪಕ್ಕೆ ಭಾರಿ ಆತಂಕವನ್ನು ತಂದೊಡ್ಡಿವೆ.

ಈ ಹಿಂದೆ ಅಂದರೆ, ಕಳೆದೆರಡು-ಮೂರು ದಶಕಗಳ ಹಿಂದೆ ಭಾಷೆ ಮತ್ತು ಧರ್ಮ ಆಧರಿಸಿದ ಖಲಿಸ್ತಾನ್ ಚಳುವಳಿಯು ಪಂಜಾಬಿನಲ್ಲಿ ಆರಂಭಗೊಂಡಿತ್ತು. ಪಂಜಾಬ್ ಪ್ರಾಂತ್ಯದ ಸಿಖ್ ಸಮುದಾಯದವರು ಭಾರತದಿಂದ ಬೇರೆಯಾಗಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಬೇಕೆಂದಿದ್ದರು. ನಂತರ ಆ ಚಳುವಳಿ ತಣ್ಣಗಾಗಿದೆ. ಇಂದು ಆ ಕುರಿತ ಬೇಡಿಕೆ ಬಹಳ ಪ್ರಮುಖವಾಗಿಲ್ಲ.

**ಭಾರತ ರಾಷ್ಟ್ರೀಯತೆಗೆ ಭಾಷಿಕ ಸವಾಲುಗಳು**

ರಾಷ್ಟ್ರೀಯತೆಯ ಹೋರಾಟದ ಮುಂಚೂಣಿಯಲ್ಲಿದ್ದ ಕಾಂಗ್ರೆಸ್, ಭಾಷಿಕ



ಗುರುತುಗಳ ಬೆಳವಣಿಗೆಯನ್ನು ತಳ್ಳಿಹಾಕಲು ಸಾಧ್ಯವಾಗದೆ ಅವುಗಳನ್ನು ಮಾನ್ಯ ಮಾಡಿತು, ಅವುಗಳನ್ನು ರಾಷ್ಟ್ರವಾಗಿ ಮಾನ್ಯ ಮಾಡದೆ ಪ್ರಾಂತ್ಯಗಳನ್ನಾಗಿ ಮಾಡಿತು. ಕೆಲವರು ಇದೇ ಇಂದಿನ ಹಲವಾರು ಸಮಸ್ಯೆಗಳಿಗೆ ಕಾರಣೀಕೃತವಾಗಿದೆ ಎಂದು ಭಾವಿಸುತ್ತಾರೆ. ಬ್ರಿಟಿಷರಿಂದ ಅಧಿಕಾರ ಹಸ್ತಾಂತರ ಆದ ನಂತರ ಭಾರತವನ್ನು ಒಕ್ಕೂಟವಾಗಿ ಭಾವಿಸಲಾಯಿತು. ವಿವಿಧ ಪ್ರಾಂತ್ಯಗಳನ್ನು ಭಾಷೆ ಆಧಾರದ ಮೇಲೆ ವಿಂಗಡಿಸಿ ಕೆಲವು ಸ್ವಾಯತ್ತತೆಗಳನ್ನು ಅವುಗಳಿಗೆ ನೀಡಲಾಯಿತು. ಆದರೆ ನಿಜವಾಗಿ ಭಾಷೆ ಆಧಾರದ ಮೇಲೆ ಪ್ರಾಂತ್ಯಗಳನ್ನು ವಿಂಗಡಿಸುವ ಪ್ರಾಯೋಗಿಕ ಕೆಲಸ ಆಗಿರಲಿಲ್ಲ. ನೆಹರೂ ನೇತೃತ್ವದ ಕೇಂದ್ರ ಪ್ರಭುತ್ವ ಈ ವಿಷಯದಲ್ಲಿ ಆಸಕ್ತಿಯನ್ನು ತೋರಿಸದಿದ್ದಾಗ ಮತ್ತೆ ಹಲವೆಡೆ ಹೋರಾಟಗಳಾಗಿ ೧೯೫೬ರಲ್ಲಿ ಭಾಷೆ ಆಧಾರದ ಪ್ರಾಂತ್ಯಗಳು ಅಸ್ತಿತ್ವಕ್ಕೆ ಬಂದವು. ಆದರೆ ಸಣ್ಣಪುಟ್ಟ ಸಮಸ್ಯೆಗಳು ಭಾಷಿಕ ಗಡಿಯನ್ನು ಕುರಿತಂತೆ ಈಗಲೂ ಮುಂದುವರಿದಿವೆ. ಈ ಸಮಸ್ಯೆಗಳು ಮುಖ್ಯವಾಗಿ ಭಾಷಿಕ-ಪ್ರಾಂತ್ಯಗಳ ಸರಕಾರಗಳ ನಡುವೆ ಇದ್ದು ಕೇಂದ್ರದ ಮೇಲೆ ಒತ್ತಡಗಳು ಮುಂದುವರಿದಿವೆ. ಇದಕ್ಕೆ ಸೇರಿದಂತೆಯೆ, ನದಿನೀರಿನ ಹಂಚಿಕೆ ಕುರಿತ ಸಮಸ್ಯೆಗಳು ಮತ್ತಿತರರ ಸಮಸ್ಯೆಗಳೂ ಮುಂದುವರಿದಿವೆ. ಇವುಗಳು ಭಾರತದ ರಾಷ್ಟ್ರೀಯತೆಯನ್ನು ನೇರವಾಗಿ ಪ್ರಶ್ನೆ ಮಾಡದಿದ್ದರೂ, ಈ ಸಮಸ್ಯೆಗಳ ಕಾರಣದಿಂದಾಗಿ ವಿವಿಧ ಭಾಷಿಕ ಸಮುದಾಯಗಳ ನಡುವೆ ಅಪನಂಬಿಕೆ/ಪರಸ್ಪರ ಪೂರ್ವಗ್ರಹಗಳು ಬೆಳೆದಿವೆ ಮತ್ತು ಬೆಳೆಯುತ್ತಿವೆ. ಈ ರೀತಿಯ ಬೆಳವಣಿಗೆ ಮುಂದೊಂದು ದಿನ ಭಾರತದ ರಾಷ್ಟ್ರೀಯತೆಗೆ ಸವಾಲನ್ನು ಒಡ್ಡಬಹುದು.

ಇದರ ಜೊತೆಗೆ ಭಾರತದ ವಿವಿಧ ಭಾಷೆ ಆಧಾರಿತ ಪ್ರಾಂತ್ಯಗಳಲ್ಲಿ ಭಾಷೆ ಆಧಾರಿತ ರಾಷ್ಟ್ರೀಯ ಹೋರಾಟಗಳು ಆರಂಭವಾಗಿವೆ ಕೆಲವು ಉಗ್ರ ಮಾರ್ಕ್ಸ್‌ವಾದಿ ಸಂಘಟನೆಗಳು. ಇವುಗಳ ನೇತೃತ್ವವನ್ನು ವಹಿಸಿವೆ. ಇವುಗಳು ಶಸ್ತ್ರಸಹಿತ ಹೋರಾಟದ ಹಾದಿಯನ್ನು ಹಿಡಿದಿದ್ದರೂ, ಇನ್ನೂ ಉಗ್ರಸ್ವರೂಪವನ್ನು ತಳೆದಿಲ್ಲ. ಇವುಗಳು ಭಾರತವನ್ನು ಸುಂದರ ಬಹುರಾಷ್ಟ್ರೀಯತೆಯ ತೋಟವನ್ನಾಗಿ ಮಾಡುತ್ತೇವೆ ಎಂದು ವಾದಿಸುತ್ತವೆ. ಭಾರತವೆನ್ನುವುದು ಆಗ ಯೂರೋಪಿಯನ್ ಒಕ್ಕೂಟದ ಮಾದರಿಯಾಗುತ್ತದೆ. ಭಾಷಿಕ-ಆಧಾರದ ಪ್ರಾಂತ್ಯಗಳು ಸ್ವತಂತ್ರ ರಾಷ್ಟ್ರಗಳಾಗಿರುತ್ತವೆ, ಪ್ರಸ್ತುತದ ವ್ಯವಸ್ಥೆಗಿಂತ ಹೆಚ್ಚಿನ ಸ್ವಾಯತ್ತತೆ (ಸಂಪೂರ್ಣ ಸ್ವಾಯತ್ತತೆ ?) ಆಗ ಇರುತ್ತದೆ ಎಂದು ಈ ಹೋರಾಟ ಭಾವಿಸುತ್ತದೆ. ಈ ಹೋರಾಟ ಇನ್ನೂ ಜನಪ್ರಿಯವಾಗಿಲ್ಲ, ಜನಪ್ರಿಯವಾದರೆ, ಭಾರತದ ರಾಷ್ಟ್ರೀಯತೆಗೆ ಇದು ಪ್ರಮುಖ ಸವಾಲಾಗಿರುತ್ತದೆ.

ಭಾಷೆ ಎನ್ನುವುದು ಹಲವು ಬಾರಿ ಧರ್ಮ, ಜಾತಿ ಮತ್ತು ಬುಡಕಟ್ಟುಗಳೊಂದಿಗೆ ತಳುಕು ಹಾಕಿಕೊಂಡು ಕಾರ್ಯ ನಿರ್ವಹಿಸುತ್ತದೆ. ಕರ್ನಾಟಕದಲ್ಲಿ ಕೊಡವರು ಸ್ವಾಯತ್ತತೆಯನ್ನು ಬೇಡುವ ಚಳುವಳಿ ನಡೆಸಿದ್ದಾರೆ. ಆದರೆ ಇಲ್ಲಿ ಕೊಡವ ಭಾಷಿಕರೆಲ್ಲ ಕೊಡವ ಜಾತಿ/ಧರ್ಮ/ಬುಡಕಟ್ಟಿಗೆ ಸೇರಿದವರಲ್ಲ. ಕೊಡವೇತರ ಕೊಡವ ಭಾಷಿಕರು ಕೊಡವ ಸ್ವಾಯತ್ತತೆಯನ್ನು ವಿರೋಧಿಸಿದ್ದಾರೆ. ಇದೇ ರೀತಿಯ ಅನೇಕ ಬೆಳವಣಿಗೆಗಳು ಮಧ್ಯಭಾರತ ಮತ್ತು ಈಶಾನ್ಯ ಭಾರತದಲ್ಲಿ ಉಂಟಾಗಿವೆ. ಅಲ್ಲಿಯೂ ಈಗಿರುವ ಪ್ರಾಂತ್ಯದ ಒಳಗಡೆಯೇ ಸ್ವಾಯತ್ತ ಬುಡಕಟ್ಟು ಪ್ರದೇಶವನ್ನು ಕೋರುವ ಹೋರಾಟಗಳು, ಬುಡಕಟ್ಟು ಆಧಾರದ ಮೇಲೆ ಬೇರೆ ಪ್ರಾಂತ್ಯದ ಭಾಗಗಳನ್ನು ಕೋರುವ ಹೋರಾಟಗಳು, ಭಾರತದಿಂದ ಬೇರೆಯಾಗುವ ಸ್ವತಂತ್ರ ಅಸ್ತಿತ್ವ ಸ್ಥಾಪಿಸ ಬಯಸುವ ಹೋರಾಟಗಳು ನಡೆಯುತ್ತಿವೆ. ಇಲ್ಲಿನಷ್ಟು




ಹೋರಾಟಗಳು, ಬುಡಕಟ್ಟುಗಳ ನಡುವಿನ ಸಮರಗಳು, ಭಾಷೆ ಆಧಾರಿತ ಹೋರಾಟಗಳು ಭಾರತದ ಬೇರೆ ಯಾವುದೇ ಭಾಗದಲ್ಲೂ ಕಾಣಬರುವುದಿಲ್ಲ. ಕಾಲ ಕಳೆದಂತೆ ಈ ಸಮಸ್ಯೆಗಳು ಸಂಕೀರ್ಣ ಸ್ವರೂಪವನ್ನು ಧರಿಸುತ್ತಿರುವುದರಿಂದ, ಇದು ಎಂದಿದ್ದರೂ ಭಾರತದ ರಾಷ್ಟ್ರೀಯತೆಗೆ ಪ್ರಮುಖ ಸವಾಲಾಗಿಯೇ ಉಳಿಯಲಿದೆ.

**ಭಾರತ ರಾಷ್ಟ್ರೀಯತೆಗೆ ಅಂಚಿನ ಗುರುತುಗಳ ಸವಾಲುಗಳು**

ಭಾರತದ ರಾಷ್ಟ್ರೀಯತೆಯು ಸೆಕ್ಯುಲರ್ ಎಂದು ಗುರುತಿಸಿಕೊಂಡಿದ್ದರೂ, ಈ ಹಿಂದೆ ಹೇಳಿದಂತೆ, ಅದರಲ್ಲಿ ಪ್ರಮುಖ ಪಾತ್ರ ವಹಿಸಿದ್ದವರು ಹಿಂದೂ ಮೇಲ್ಜಾತಿಗಳಾಗಿದ್ದರಿಂದ, ಮತ್ತು ಈ ಪಂಗಡ ಭಾರತದಾದ್ಯಂತ ಒಂದು ನೆಟ್‌ವರ್ಕ್‌ಅನ್ನು ಆ ಸಂದರ್ಭದಲ್ಲಿ ರೂಪಿಸಿಕೊಂಡಿದ್ದರಿಂದ ಪ್ರಮುಖ ಅಧಿಕಾರ ಸ್ಥಾನಗಳನ್ನು ಮತ್ತು ಆ ಸ್ಥಾನಗಳ ಸ್ವರೂಪವನ್ನು ತನಗೆ ಅನುಕೂಲವಾಗಿ ರೂಪಿಸಿಕೊಂಡಿತು. ಪ್ರತಿಭೆ, ಜಾತೀಯತೆ ಎನ್ನುವುದೆಲ್ಲವೂ ಆ ಗುಂಪಿನ ನಡವಳಿಕೆಗೆ ಅನುಗುಣವಾಗಿ ರೂಪಿಸಲ್ಪಟ್ಟಿದ್ದವು. ಈ ಗುಂಪು ಭಾರತದಾದ್ಯಂತ ಇದ್ದರೂ ಸಂಖ್ಯೆಯ ದೃಷ್ಟಿಯಿಂದ ಬಹಳ ಅಲ್ಪಸಂಖ್ಯಾತ ಗುಂಪಾಗಿತ್ತು. ಆದರೆ ಪ್ರಜಾಪ್ರಭುತ್ವದ ತರ್ಕವು ಬೇರೆಯದೇ ಆಗಿದ್ದರಿಂದ ಮತ್ತು ಇತರ ಬೆಳವಣಿಗೆಗಳಿಂದ ಇಂದು ದಲಿತರು, ಇತರೆ ಹಿಂದುಳಿದ ವರ್ಗಗಳು ಮತ್ತು ಭೂಮಿ ಒಡೆತನ ಹೊಂದಿದ್ದು, ಪ್ರಾಂತ್ಯಗಳಲ್ಲಿ ಬಹುಸಂಖ್ಯಾತರಾಗಿರುವ ಬ್ರಾಹ್ಮಣೇತರ ಯಾಜಮಾನ್ಯ ವರ್ಗಗಳು ಚುನಾವಣೆ ಆಧಾರಿತ ಸ್ಥಾನಗಳಿಗೆ ಇಂದು ಪ್ರವೇಶಾವಕಾಶವನ್ನು ಪಡೆಯುತ್ತಿದ್ದಾರೆ. ಇವರುಗಳ ಪ್ರವೇಶವು ಭಾರತದ ಪ್ರಭುತ್ವ ಮತ್ತಿತರ ಸಂಬಂಧಿತ ಸ್ಥಾನಗಳ ಸ್ವರೂಪವನ್ನು ಬದಲಾಯಿಸುವ ಒತ್ತಾಯವನ್ನು ಹೇರುತ್ತಿದೆ. ಈ ಬದಲಾವಣೆಗೆ ಸಂಬಂಧಿಸಿದಂತೆ ಹಲವಾರು ರೀತಿಯ ಸಂಘರ್ಷಗಳು ಏರ್ಪಟ್ಟಿವೆ. ಇವುಗಳು ಪ್ರತ್ಯೇಕ ಅಸ್ತಿತ್ವದ ಹೋರಾಟಗಳಂತೆ ಭಾರತದ ರಾಷ್ಟ್ರೀಯತೆಯನ್ನು ಪ್ರಶ್ನಿಸದಿದ್ದರೂ, ಅದರ ಸ್ವರೂಪವನ್ನು ಕುರಿತಂತೆ ಬಹು ಮುಖ್ಯ ಪ್ರಶ್ನೆಗಳನ್ನು ಎತ್ತುತ್ತಿರುವುದರಿಂದ ಭಾರತದ ರಾಷ್ಟ್ರೀಯತೆಯ ಸ್ವರೂಪವನ್ನು ಮುಂಬರುವ ದಿನಗಳಲ್ಲಿ ನಿರ್ಧರಿಸುವ ಅಂಶವಾಗಲಿದೆ.

**ಜಾಗತೀಕರಣ ಮತ್ತು ರಾಷ್ಟ್ರೀಯತೆ**

ಇದುವರೆಗೂ ಚರ್ಚಿಸಿದ ಅಂಶಗಳು ಭಾರತದ ಆಂತರಿಕ ಸಾಮಾಜಿಕ ಮತ್ತು ರಾಜಕೀಯ ಸಂಚಲನಗಳನ್ನು ಗಮನದಲ್ಲಿಟ್ಟು ಗುರುತಿಸಿದಂತಹ ಅಂಶಗಳು. ಭಾರತದ ರಾಷ್ಟ್ರೀಯತೆಗೆ ಅದರ ಗಡಿಯಾಚೆಗಿನ ಸವಾಲು ಏನು ಎನ್ನುವುದನ್ನು ಸ್ವಲ್ಪದರಲ್ಲಿ ವಿವರಿಸಲಿದ್ದೇನೆ. ಗಡಿಯಾಚೆಗಿನ ಎಂದರೆ, ಪಾಕಿಸ್ತಾನ, ಚೀನಾ ದೇಶಗಳ ಸವಾಲುಗಳ ಬಗ್ಗೆ ನಾನು ವಿವರಿಸುತ್ತಿಲ್ಲ; ಅವುಗಳು ಆ ರೀತಿಯ ಮಹತ್ವದ ಸವಾಲುಗಳು ಅಲ್ಲ (ನಮ್ಮ ಹಿಂದೂ ಸಂಘಟನೆಗಳು ಎಷ್ಟೇ ದೊಡ್ಡ ಧ್ವನಿಯಲ್ಲಿ ಸಾಧಿಸಿದರೂ). ನಾನು ವಿವರಿಸಲಿರುವ ಈ ಸವಾಲು ಇತರ ಎಲ್ಲಾ ಸವಾಲುಗಳಿಗಿಂತ ಬಹಳ ಮಹತ್ತರವಾದದ್ದು. ಏಕೆಂದರೆ ಕೇವಲ ಭಾರತದ ರಾಷ್ಟ್ರೀಯತೆಗಿರುವ ಸವಾಲು ಇದಲ್ಲ; ಬದಲಿಗೆ ಎಲ್ಲಾ ರಾಷ್ಟ್ರೀಯತೆಗಳಿಗೂ ಮತ್ತು ಅವುಗಳ ಮೂರ್ತರೂಪವಾದ ರಾಷ್ಟ್ರಪ್ರಭುತ್ವಗಳಿಗೂ ಒದಗಿರುವ ಸವಾಲು ಇದು. ನಾನಿಲ್ಲಿ ಕೇವಲ ಭಾರತದ ರಾಷ್ಟ್ರೀಯತೆ ಮತ್ತು ರಾಷ್ಟ್ರಪ್ರಭುತ್ವದ ಮೇಲಿನ ಪರಿಣಾಮಗಳನ್ನು ಹಿಂದೆ ಹೇಳಿದಂತೆ ಬಹಳ ಚಿಕ್ಕದಾಗಿ ವಿವರಿಸುತ್ತೇನೆ.

ಜಾಗತೀಕರಣವನ್ನು ಸ್ಥೂಲವಾಗಿ ನಾನು ರಾಷ್ಟ್ರದ ಗಡಿಗಳನ್ನು ಮೀರಿದ ವ್ಯವಹಾರಗಳು ಎಂದು



ಗುರುತಿಸುತ್ತೇನೆ. ಈ ವ್ಯವಹಾರಗಳು ಆರ್ಥಿಕವಾದದ್ದಾಗಿರಬಹುದು, ಸಾಮಾಜಿಕವಾದದ್ದಾಗಿರಬಹುದು, ಅಥವಾ ರಾಜಕೀಯವಾದದ್ದಾಗಿರಬಹುದು. ಈ ವ್ಯವಹಾರಗಳು ಹಿಂದಿಗಿಂತ ಇಂದು ಹೆಚ್ಚಾಗಿವೆ. ಈ ಹೆಚ್ಚಾಗುವಿಕೆಗೆ ಕಾರಣ ಎರಡು:

೧. ತಂತ್ರಜ್ಞಾನದಲ್ಲಿನ ಬದಲಾವಣೆಗಳು

೨. ಸ್ಥೂಲವಾಗಿ ಆಧುನಿಕೋತ್ತರ ಎನ್ನಬಹುದಾದ ಚಿಂತನೆಗಳು.

ಇಂದು ನಾನು ಕೇವಲ ಒಂದು ರೂಪಾಯಿಯಷ್ಟು ಖರ್ಚಿನಲ್ಲಿ (ಘಂಟೆಗೆ ೧೦ ರೂ.ನಂತೆ, ೬ ನಿಮಿಷಗಳಿಗೆ) ಒಂದು ಇಂಟರ್‌ನೆಟ್ ಕೆಫೆಯಿಂದ ಒಂದು ಇನ್ನೂರು ಪುಸ್ತಕದಷ್ಟು ವಿವರಗಳನ್ನು ಪ್ರಪಂಚದ ಯಾವುದೇ ಮೂಲದಿಂದ ಪಡೆಯಬಹುದು ಅಥವಾ ಅಷ್ಟು ಮಾಹಿತಿಯನ್ನು ಇಲ್ಲಿಂದ ಕಳಿಸಬಹುದು ಕೆಲವೇ ನಿಮಿಷಗಳಲ್ಲಿ. ಇದು ಇಂದು ತಂತ್ರಜ್ಞಾನದಲ್ಲಿ ಆದ ಬದಲಾವಣೆಯಿಂದ ಸಾಧ್ಯವಾಗಿದೆ. ಪ್ರಪಂಚದ ಹಲವಾರು ಪಠ್ಯಗಳನ್ನು ಯಾವುದೇ ಪ್ರಕಟಣಾ ಸಂಸ್ಥೆಗೆ ದುಡ್ಡು ನೀಡದೆ (ಲಾಭದ ಅವಕಾಶ ನೀಡದೆ) ನಾನು ಪಡೆಯಬಹುದು (ಆ ಪುಸ್ತಕಗಳು ಕಾಪಿರೈಟ್ ಅವಧಿಯಿಂದ ಮುಕ್ತಗೊಂಡಿರಬೇಕು ಮತ್ತು ಯಾರಾದರೂ ಅದನ್ನು ವೆಬ್‌ಗೆ ಹಾಕಿರಬೇಕು).

ಪ್ರಭುತ್ವದ ಅಸ್ತಿತ್ವವೇ ಕೆಲವು ಉತ್ಪಾದನೆಗಳ ಮೇಲೆ ತೆರಿಗೆ ಹಾಕಿ ಅವುಗಳನ್ನು ರಾಷ್ಟ್ರದ ಸಾರ್ವಜನಿಕ ಹಿತಕ್ಕೆ ಬಳಸುವುದರ ಮೇಲೆ ಆಧರಿಸಿದೆ. ಅಥವಾ ಆ ೨೦೦ ಪುಟಗಳನ್ನು ಒಂದು ಪ್ರಕಟಣಾ ಸಂಸ್ಥೆ ಕಾಪಿ ಎಡಿಟಿಂಗ್ ಮಾಡಿ ದುಡ್ಡು ಸಂಪಾದಿಸಬಹುದು. ನಾನು ಮನೆಯಲ್ಲಿ ಕೂತು ಇಂಟರ್‌ನೆಟ್ ಮೂಲಕ ಬೇರೊಂದು ದೇಶದ ಕಂಪನಿಗೆ ದುಡಿಯುತ್ತೇನೆ, ಆ ದುಡ್ಡು ನನ್ನ ಅಕೌಂಟ್‌ಗೆ ನೇರ ರವಾನೆಯಾಗುತ್ತದೆ. ಇದು ನಮ್ಮ ದೇಶದ ಪ್ರಭುತ್ವಕ್ಕೆ ಹೇಗೆ ಗೊತ್ತಾಗುತ್ತದೆ? ಅದು ಬೇರೊಂದು ದೇಶದಲ್ಲಿರುವ ಸಂಸ್ಥೆ; ನನ್ನ ದುಡಿಮೆಯಿಂದ ಲಾಭ ಮಾಡಿಕೊಳ್ಳುತ್ತದೆಯಲ್ಲ ಅದರಿಂದ ತೆರಿಗೆ ಹೇಗೆ ವಸೂಲು ಮಾಡುತ್ತದೆ? ನಮ್ಮ ಊಹೆಗೂ ನಿಲುಕದ ಬದಲಾವಣೆಗಳು ನಡೆಯುತ್ತಿವೆ.

ಬಂಡವಾಳವು ರಾಷ್ಟ್ರದ ಗಡಿಗಳನ್ನು ಮೀರಿ ಸುಗಮವಾಗಿ ಚಲಿಸುತ್ತಿದೆ. ಷೇರು ಮಾರುಕಟ್ಟೆಯಲ್ಲಿನ ಏರುಪೇರುಗಳು ಸಹ ಇದಕ್ಕೆ ಸಂಬಂಧಿಸಿದ್ದೆ. ಇಂಟರ್‌ನೆಟ್ ಸಮುದಾಯಗಳು ರೂಪುಗೊಳ್ಳುತ್ತಿವೆ. ಇಂಟರ್‌ನೆಟ್ ಗ್ರೂಪ್‌ಗಳು ಮತ್ತು ಬ್ಲಾಗ್‌ಗಳು ಜೊತೆಗೆ ಆರ್ಕುಟ್‌ನಂತಹ ಸ್ನೇಹ ಗುಂಪುಗಳನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ. ಕಂಪನಿಗಳು ಬಹುರಾಷ್ಟ್ರೀಯ ಅಥವಾ ಟ್ರಾನ್ಸ್‌ನ್ಯಾಷನಲ್ (ರಾಷ್ಟ್ರೇತರ) ಆಗಿವೆ.

ಇದರೊಂದಿಗೆ ಭಾರತದ ರಾಷ್ಟ್ರಪ್ರಭುತ್ವವೇ ತನ್ನೆಲ್ಲ ಹೊಣೆಗಾರಿಕೆಯನ್ನು ಖಾಸಗಿಗೆ ಬಿಟ್ಟುಕೊಡುತ್ತಿದೆ. ಜನರಿಗೆ ಅಗತ್ಯವಾದ ನೀರಿನ ಒದಗಿಸುವಿಕೆ ಇರಬಹುದು, ರಸ್ತೆಗಳನ್ನು ನಿರ್ಮಿಸಿ ನಿರ್ವಹಿಸುವ ಕೆಲಸ ಇರಬಹುದು, ಅವೆಲ್ಲವುಗಳನ್ನು ಖಾಸಗಿಯವರಿಗೆ ವಹಿಸಿ, ಅದಕ್ಕೆ ತಗಲುವ ಖರ್ಚನ್ನು ನೀವೇ ಪ್ರಜೆಗಳಿಂದ ವಸೂಲಿಮಾಡಿ ಎಂದು ಹೇಳುತ್ತಿದೆ. ರಾಷ್ಟ್ರಪ್ರಭುತ್ವದ ವಶದಲ್ಲಿದ್ದ ಕೈಗಾರಿಕೆಗಳನ್ನು ಖಾಸಗಿಯವರಿಗೆ ಮಾರುತ್ತಿದೆ. ಮೊದಲಿಗೆ ನಷ್ಟದಲ್ಲಿದ್ದ ಉದ್ದಿಮೆಗಳನ್ನಷ್ಟೇ ಮಾರುತ್ತೇವೆ ಎಂದವರು, ಈಗ ಎಲ್ಲವನ್ನೂ ಖಾಸಗಿಯವರಿಗೆ ವಹಿಸಿಕೊಡಲು ತುದಿಗಾಲಲ್ಲಿ ನಿಂತಿದ್ದಾರೆ, ಅಧಿಕಾರದ ಚುಕ್ಕಾಣಿ ಹಿಡಿದವರು.

ಸಾಮಾಜಿಕ ಹೊಣೆಗಾರಿಕೆಯನ್ನು, ಸಮಾಜ ಕಲ್ಯಾಣವನ್ನು ಖಾಸಗಿಯವರಿಗೆ ವಹಿಸಿಕೊಡುತ್ತಿದೆ. ವರ್ಲ್ಡ್ ಬ್ಯಾಂಕ್ ಸಮಾಜ ಕಲ್ಯಾಣ ಕಾರ್ಯಗಳಿಗೆ ಹಣ ನೀಡುವಾಗ ಅವುಗಳನ್ನು ಎನ್.ಜಿ.ಓ.ಗಳ ಮೂಲಕ ಖರ್ಚುಮಾಡಿ ಎಂದು ಸರಕಾರಗಳಿಗೆ ನಿರ್ದೇಶನ ನೀಡುತ್ತಿದೆ. ಎನ್.ಜಿ.ಓ.ಗಳೂ ಸಮಾಜ ಕಲ್ಯಾಣ ನಮ್ಮ ಕ್ಷೇತ್ರ, ಸರಕಾರ ಅದರಲ್ಲಿ ಏನನ್ನೂ ಮಾಡಬಾರದು ಎನ್ನುತ್ತಿವೆ. ಅದು ಸರಿಯಾಗಿ ಕಾರ್ಯ ನಿರ್ವಹಿಸುವುದಿಲ್ಲ ಎಂದು ಅವರ ಆರೋಪ. ಮಾಡದಿದ್ದರೆ ಮಾಡಿಲ್ಲ ಎನ್ನುತ್ತಾರೆ, ಮಾಡಿದರೆ ಸರಿಯಾಗಿ ಮಾಡುವುದಿಲ್ಲ ಎನ್ನುತ್ತಾರೆ.

ಹೀಗಿರುವಾಗ ರಾಷ್ಟ್ರಪ್ರಭುತ್ವದ ಸ್ವರೂಪದಲ್ಲಿ ಭಯಂಕರ ಬದಲಾವಣೆ ಆಗುತ್ತಿದೆ. ರಾಷ್ಟ್ರೀಯತೆಯ ಭೌತಿಕ ಸಂಕೇತವಾದ ಇದೇ ಈ ರೀತಿಯಾಗಿ ಬಂಡವಾಳದ ಎದುರು ತನ್ನ ಹೊಣೆಗಾರಿಕೆಯಿಂದ ಹಿಂತೆಗೆಯುತ್ತಿರುವಾಗ ರಾಷ್ಟ್ರೀಯತೆಯ ಸ್ವರೂಪದಲ್ಲಿ ಬದಲಾವಣೆಯಾಗದೆ ಇರುತ್ತದೆಯೇ? ಸಾಂಸ್ಕೃತಿಕ ರಾಷ್ಟ್ರೀಯತೆ ಎನ್ನುವುದು ರಾಷ್ಟ್ರೀಯತೆಯ ಜಾಗವನ್ನು ಆಕ್ರಮಿಸುತ್ತದೆ. ಈ ಸಾಂಸ್ಕೃತಿಕ ರಾಷ್ಟ್ರೀಯತೆ ಇಲ್ಲಿನ ಭೌತಿಕ ಜನಗಳು ಅವರ ಅಗತ್ಯಗಳಿಗಿಂತ ಅದು ರೂಪಿಸಿಕೊಂಡಿರುವ ಸಂಕೇತಗಳಿಗೆ ಹೆಚ್ಚಿನ ಮಾನ್ಯತೆ ನೀಡುತ್ತದೆ. ಈ ರಾಷ್ಟ್ರದ ನೈಜ ಅಗತ್ಯಗಳಿಗಿಂತ ಭಾವನಾತ್ಮಕ ಭಾವನೆಗೆ ಪ್ರಾಮುಖ್ಯತೆ ನೀಡುತ್ತದೆ. ನನ್ನನ್ನು ವಿದ್ಯಾವಂತನನ್ನಾಗಿ ಮಾಡಿದ ಈ ರಾಷ್ಟ್ರಕ್ಕೆ ಮರಳಿ ನಾನು ಏನನ್ನು ನೀಡುತ್ತೇನೆ ಎನ್ನುವುದಕ್ಕಿಂತ, ಬೇರೆ ಯಾವುದೋ ದೇಶಕ್ಕೆ ಹೋಗಿ ಅಲ್ಲಿ ರಾಷ್ಟ್ರದ ಗಡಿಯನ್ನು ಮೀರಿದ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಪರದೇಶಗಳಲ್ಲಿ ದೇವಾಲಯ ನಿರ್ಮಾಣ ಮಾಡುವುದರ ಮೂಲಕ ಪ್ರದರ್ಶಿಸುವ ಜನರು ಹೆಚ್ಚಾಗುತ್ತಿದ್ದಾರೆ. ಅಂತಹವರು ಆ ದೇಶದ ಪ್ರಜೆಗಳಾಗಿ ಅಲ್ಲಿಯೇ ನೆಲೆಸಿದರೂ, ಅವರನ್ನು ಅನಿವಾಸಿ ಭಾರತೀಯರು ಎಂದು ಗೌರವದಿಂದ ನಮ್ಮ ರಾಷ್ಟ್ರ ಪ್ರಭುತ್ವ ನೋಡುತ್ತದೆ. ಅಲ್ಲದೆ ಅವರಿಗೆ ದ್ವಿ-ಪೌರತ್ವವನ್ನು ನೀಡುವ ಮಾತನ್ನೂ ಆಡುತ್ತೇವೆ. ಇಲ್ಲಿ ನೆಲೆಸಿರುವ ಪೌರರಿಗೆ ಅವರಿಗೆ ದಕ್ಕಬೇಕಾದ ಹಕ್ಕುಗಳು ಮತ್ತು ಸವಲತ್ತುಗಳು ಸಿಕ್ಕಿವೆಯೋ ಇಲ್ಲವೋ

ಗೊತ್ತಿಲ್ಲ. ಎಲ್ಲಾ ಸವಲತ್ತುಗಳನ್ನು ಹೊಂದಿ ಬೇರೆ ರಾಷ್ಟ್ರದ ಪ್ರಜೆಗಳಾಗಿರುವವರಿಗೆ ಈ ರಾಷ್ಟ್ರದ ಪೌರತ್ವವನ್ನು ನೀಡಲು ಎಲ್ಲಾ ಸಿದ್ಧತೆಗಳು ನಡೆದಿವೆ.

ಇದೇ ಈ ಹಿಂದೆ ಹೇಳಿದ ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶವನ್ನು ಆಧರಿಸಿದ ರಾಷ್ಟ್ರೀಯತೆಗೂ ಈಗಿನ ರಾಷ್ಟ್ರೋತ್ತರ ರಾಷ್ಟ್ರೀಯತೆಗೂ (ಪೋಸ್ಟ್ ನ್ಯಾಷನಲಿಸ್ಟ್ ನ್ಯಾಷನಲಿಸಂ) ಇರುವ ವ್ಯತ್ಯಾಸ. ಇದು ಇಂದಿನ ರಾಷ್ಟ್ರೀಯತೆಯ ಬಹು ದೊಡ್ಡ ಸವಾಲು. ಇದನ್ನು ನಾನಿಲ್ಲಿ ಬಹಳ ಸೂಚ್ಯವಾಗಿ ಹೇಳಿದ್ದೇನೆ. ಇವುಗಳ ಸ್ವರೂಪವು ಇನ್ನೂ ಹರಳುಗಟ್ಟಬೇಕಾಗಿ ಇರುವುದರಿಂದ ಅದನ್ನು ಎಷ್ಟರ ಮಟ್ಟಿಗೆ ನಾವು ಗುರುತಿಸಿದ್ದೇವೆ, ಅದು ಪೂರ್ಣರೂಪ ಪಡೆದಾಗ ಈ ಸ್ವರೂಪದಲ್ಲಿಯೇ ಇರುತ್ತದೆಯೇ ಹೇಳಲು ಸಾಧ್ಯವಿಲ್ಲ.

ನಾನಿಲ್ಲಿ ಜಾಗತೀಕರಣ ಮತ್ತು ರಾಷ್ಟ್ರೀಯತೆಯನ್ನು ಕುರಿತು ಮಾತನಾಡುವಾಗ ಸಂಸ್ಕೃತಿಯನ್ನು ಕುರಿತು ಮಾತನಾಡಿಲ್ಲ ಎಂದು ಹೇಳಬಹುದು. ಜಾಗತೀಕರಣವು ಏಕರೂಪಿ ಸಂಸ್ಕೃತಿಯನ್ನು ನಮ್ಮ ಮೇಲೆ ಹೇರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಅಮೆರಿಕಾದಲ್ಲೇ ಏಕರೂಪಿ ಸಂಸ್ಕೃತಿ ಇಲ್ಲ. ಇನ್ನು ಕೆಲವು ವರ್ಷಗಳಲ್ಲಿ ಅತ್ಯಂತ ಭವ್ಯವಾದ ಮತ್ತು ಶ್ರೀಮಂತ ದೇವಾಲಯಗಳು ಭಾರತಕ್ಕಿಂತ ಅಮೆರಿಕಾದಲ್ಲೇ ಹೆಚ್ಚಿದ್ದರೆ ಆಶ್ಚರ್ಯ ಪಡಬೇಕಿಲ್ಲ. ಭಾರತದ ಕಂಪನಿಗಳು ಬೇರೆ ದೇಶದ ಕಂಪನಿಗಳನ್ನು ಕೊಳ್ಳುವುದರೊಂದಿಗೆ ಆಗುವ ಬದಲಾವಣೆಗಳನ್ನೂ ಕಾದು ನೋಡಬೇಕಿದೆ. ಸ್ಥಳೀಯತೆ, ಸ್ಥಳೀಯ ಸಂಸ್ಕೃತಿ ಎನ್ನುವುದು ಜಾಗತೀಕರಣದ ಅವಳಿ; ಅದರೊಂದಿಗೇ ಹುಟ್ಟುವಂಥದ್ದು. ಅವುಗಳನ್ನು ಪರಸ್ಪರ ವಿರುದ್ಧವಾಗಿ ನೋಡುವುದು, ಜಾಗತೀಕರಣವನ್ನು ತಪ್ಪು ಅರ್ಥ ಮಾಡಿಕೊಂಡಂತೆ.

ಆದರೆ ನಮ್ಮ ನಿಜವಾದ ಸಮಸ್ಯೆಗಳು ಏನು? ಈ ಬದುಕನ್ನು ಎಲ್ಲರಿಗೂ ಸಹನೀಯವಾಗಿ ಮಾಡುವಂತಹದು ಯಾವುದು? ಎನ್ನುವ ಪ್ರಶ್ನೆಗಳು ಸಾಂಸ್ಕೃತಿಕ ರಾಷ್ಟ್ರೀಯತೆಯ ಮತ್ತು ಗಡಿಗಳನ್ನು ಮೀರಿದ ರಾಷ್ಟ್ರೀಯತೆಯ ಸ್ವರೂಪದಲ್ಲಿ ಎಷ್ಟರ ಮಟ್ಟಿಗಿನ ಮಹತ್ವ ಪಡೆದುಕೊಳ್ಳುತ್ತದೆ ಗೊತ್ತಿಲ್ಲ. ಗೊತ್ತಿಲ್ಲವೆಂದು ಸುಮ್ಮನಿರುವುದಕ್ಕೂ ಆಗುವುದಿಲ್ಲ. ನಮ್ಮ ಪ್ರಯತ್ನ ಏನು ಅನ್ನುವುದರ ಮೇಲೆ ಅದು ಏನಾಗುತ್ತದೆ ಎಂಬುದೂ ನಿರ್ಣಯವಾಗುತ್ತದೆ. ನಮ್ಮ ಪ್ರಯತ್ನವೇ ನಾಳಿನ ದಿಕ್ಕನ್ನು ನಿರ್ಣಯಿಸುತ್ತದೆ.

**ಡಾ|| ತಾರಕೇಶ್ವರ್ ವಿ. ಬಿ.**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

# ರಾಷ್ಟ್ರೀಯತೆ ಭಾಷೆ

**ಭಾ**ಷೆಗೂ ರಾಷ್ಟ್ರ ಕಲ್ಪನೆಗೂ ನಂಟು ಬೆಳೆದದ್ದು ಯೂರೋಪಿನ ದೇಶಗಳ ಸಂದರ್ಭದಲ್ಲಿ. ರಾಷ್ಟ್ರದ ವ್ಯಾಖ್ಯೆಯಲ್ಲಿಯೇ ಭಾಷೆ ಒಂದು ಗುರುತಾಗಬೇಕೆಂಬ ಹಠ ಅಲ್ಲಿ ಎದ್ದು ಕಾಣುತ್ತದೆ. ಏಕಭಾಷಿಕ ಪ್ರದೇಶಗಳಾಗಿದ್ದು ಇನ್ನೊಂದು ಭಾಷೆ ಮತ್ತು ಭಾಷಿಕರ ಬಗೆಗೆ ತೀವ್ರ ಅಸಹನೆಯನ್ನು ಬೆಳೆಸಿಕೊಂಡ ದೇಶಗಳಲ್ಲಿ ಈ ಮಾತು ಮುಖ್ಯವಾಗುತ್ತದೆ. ಆದರೆ ಇಂಡಿಯಾದ ಸಂದರ್ಭಕ್ಕೆ ಅದು ಎಂದೂ ಒಪ್ಪುವ ಮಾತಾಗಿಲ್ಲ. ಪರಂಪರೆಯ ಪುನಾರಚನೆಯಲ್ಲಿ ಸಂಸ್ಕೃತಕ್ಕೆ ಆ ಸ್ಥಾನವನ್ನು ನೀಡಲು ಭಾರತಶಾಸ್ತ್ರಜ್ಞರು ಯೋಜಿಸುತ್ತಿರುವ ಹೊತ್ತಿನಲ್ಲೇ ಭಾರತದ ಹಲವು ಭಾಷಾವಂಶಗಳನ್ನು ಪಾಶ್ಚಾತ್ಯ ಮಿಶನರಿಗಳು ಹುಡುಕಿಕೊಡುತ್ತಿದ್ದರು. ಬಹುಭಾಷಿಕತೆ ಇಲ್ಲಿನ ಲಕ್ಷಣ ಎಂದು ಹೇಳುವಾಗಲೂ ನಮ್ಮ ವಿವರಣೆಯನ್ನು ಮತ್ತಷ್ಟು ಖಚಿತಪಡಿಸಿಕೊಳ್ಳಬೇಕಾದ ಅಗತ್ಯವಿದೆ. ಒಂದು ಪ್ರದೇಶದ ಲಕ್ಷಣವನ್ನು ಹೇಳುವಾಗ ಅಲ್ಲಿನ ಭಾಷೆಯನ್ನು ಉಲ್ಲೇಖಿಸುವ ಕ್ರಮ ಹಿಂದಿನಿಂದಲೂ ಇದ್ದಿತಷ್ಟೇ. ರಾಜಶೇಖರ ತನ್ನ ಕಾವ್ಯಮೀಮಾಂಸಾ ಕೃತಿಯಲ್ಲಿ ಬೇರೆ ಬೇರೆ ದೇಶಭಾಗಗಳ ಭಾಷಾ ಪ್ರಯೋಗ ವ್ಯತ್ಯಾಸಗಳನ್ನು, ಪಾಠ್ಯಭಿನ್ನತೆಗಳನ್ನು ಗುರುತಿಸುತ್ತಾನೆ.

ಆದರೆ ಲಕ್ಷಣಗಳಿಗೂ ಚಹರೆಗಳಿಗೂ ವ್ಯತ್ಯಾಸಗಳಿವೆ. ಭಾಷೆ ಒಂದು ಲಕ್ಷಣವಾಗಬಹುದೇ ಹೊರತು ಚಹರೆಯಾಗಲಾರದು. ಕನ್ನಡವನ್ನು ಕರ್ನಾಟಕದ ಚಹರೆಯನ್ನಾಗಿ ಮಾಡ ಹೊರಟಕೂಡಲೇ ಹಲವಾರು ವೈರುಧ್ಯಗಳು ಎದುರಾಗುತ್ತವೆ. ಮುಖ್ಯವಾಗಿ ಕನ್ನಡ ಮತ್ತು ಕನ್ನಡಿಗ ಸಮೀಕರಣ ಸಾಧ್ಯವಾಗುವುದಿಲ್ಲ. ಕನ್ನಡ ಬಳಸುವವರು ಕನ್ನಡಿಗರೋ? ಅಥವಾ ಕರ್ನಾಟಕದಲ್ಲಿ ಬದುಕುತ್ತಿರುವವರು ಕನ್ನಡಿಗರೋ? ಇವೆರಡೂ ಬೇರೆ ಬೇರೆಯಾಗುವುದರಿಂದ ಕನ್ನಡ ಮತ್ತು ಕರ್ನಾಟಕ ಎಂಬ ಸಮೀಕರಣ ಮಾಡಿದ ಕೂಡಲೇ ಜನವಿರೋಧಿಯಾದ ನಿಲುವುಗಳನ್ನು ತಾಳುವುದು ಅನಿವಾರ್ಯವಾಗುತ್ತದೆ.

ನಾವೆಷ್ಟೇ ವಾದಿಸಿದರೂ ಭಾಷಾವಾರು ರಾಜ್ಯಗಳ ರಚನೆ ಒಂದು ರಾಜಕೀಯ ನಿರ್ಧಾರವಾಗಿತ್ತೆಂಬುದನ್ನು ಅಲ್ಲಗಳೆಯಲು ಬರುವುದಿಲ್ಲ. ಅನಂತರದ ರಾಜ್ಯ ಮರುವಿಂಗಡಣೆಗಳಲ್ಲಿ ಬಳಕೆಯಾದ ಮಾನದಂಡಗಳೇ ಬೇರೆಯಾಗಿವೆ. ರಾಜ್ಯಾಂಗದ ಮನ್ನಣೆ ಪಡೆದ ಎಷ್ಟೋ ಭಾಷೆಗಳಿಗೆ ರಾಜ್ಯಗಳೇ ಇಲ್ಲ (ಉದಾಹರಣೆಗೆ, ಸಂತಾಲಿ, ಮೈಥಿಲಿ, ಬೋಡೋ, ಡೋಗ್ರಿ, ಉರ್ದು, ಸಿಂಧಿ). ಹಾಗೆಯೇ ಎಷ್ಟೋ ರಾಜ್ಯಗಳಿಗೆ ಅವುಗಳದ್ದೇ ಆದ ಭಾಷೆಯೂ ಇಲ್ಲ. ಈಶಾನ್ಯ ರಾಜ್ಯಗಳಿರಲಿ, ಹೊಸದಾಗಿ ನಿರ್ಮಾಣಗೊಂಡ ಚತ್ತೀಸ್‌ಗಢ ಮತ್ತು ಜಾರ್ಖಂಡ್‌ಗಳಿಗೂ ಇದು ಅನ್ವಯವಾಗುವ ಮಾತು. ಇಂಡಿಯಾ ಎಂಬ ರಾಷ್ಟ್ರದೊಳಗೆ ಕರ್ನಾಟಕವೆಂಬ ಉಪರಾಷ್ಟ್ರವನ್ನು ಕಲ್ಪಿಸಿಕೊಳ್ಳುವುದೂ ಉಂಟಷ್ಟೆ. ಇದು ನಿಜವಾದರೆ ರಾಷ್ಟ್ರ – ಉಪರಾಷ್ಟ್ರಗಳ ಸಂಬಂಧದ ವ್ಯಾಖ್ಯೆ ಏನು? ಸಂಯೋಗವೇ ಅಥವಾ ಸಮವಾಯವೇ? ಈಗಂತೂ ಈ ರಾಜ್ಯ ಆಡಳಿತ ವ್ಯವಸ್ಥೆಗೆ ರಾಷ್ಟ್ರ ಆಡಳಿತ ವ್ಯವಸ್ಥೆಯಲ್ಲಿ ಅಧೀನತೆಯ ಸಂಬಂಧ ಮಾತ್ರ ಇದೆ. ಇದು ಭಾಷೆಯ ನೆಲೆಯಲ್ಲೂ ನಿಜಗೊಂಡಿರುವ ಮಾತು. ಕನ್ನಡದ ಸಾರ್ವಭೌಮತ್ವವು ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳ ಚೌಕಟ್ಟಿನಲ್ಲಿ ಮಾತ್ರ ವ್ಯಾಖ್ಯಾನಗೊಳ್ಳಬೇಕಾದ ಸಂಗತಿಯಾಗಿದೆ.

ಭಾಷಿಕ ಸಮುದಾಯಗಳ ಸಂಸ್ಕೃತಿಗೂ ಅವುಗಳ ಭಾಷೆಗೂ ನಿಕಟವಾದ ಸಂಬಂಧವಿದೆಯೆಂಬ ವಾದವನ್ನು ಈಗ ಮರುಪರಿಶೀಲಿಸಬೇಕಾದ ಸಂದರ್ಭ ಒದಗಿ ಬಂದಿದೆ. ಸಮುದಾಯಗಳ ಮಟ್ಟಿಗೆ ನಿಜವೆನ್ನಿಸುತ್ತಿದ್ದ ಮಾತೀಗ ಪೌರಸಮಾಜಗಳಿಗೆ ಎಷ್ಟು ಅನ್ವಯಿಸಬಲ್ಲುದೆಂಬುದನ್ನು ಚರ್ಚಿಸಬೇಕಾಗಿದೆ. ಸಾಮಾಜಿಕ ಅಸಮಾನತೆಗಳನ್ನು ಗುರುತಿಸಲು ಮತ್ತು ಕೆಲವೊಮ್ಮೆ ಕಾಯ್ದುಕೊಳ್ಳಲು ಕೂಡ ಭಾಷೆ ಬಳಕೆಯಾಗುತ್ತಿರುವ ಸಾಧ್ಯತೆಗಳು ಕಾಣತೊಡಗಿವೆ. ಈ ಎಲ್ಲ ಕಾರಣಗಳಿಂದ ನಮ್ಮ ಚರ್ಚೆಗಳನ್ನು ಹೊಸ ಪರಿಭಾಷೆಯಲ್ಲಿ ನಡೆಸುವ ಅಗತ್ಯ ಈಗ ಹೆಚ್ಚಾಗಿದೆ.

**ಡಾ|| ಕೆ. ವಿ. ನಾರಾಯಣ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬



# ಮರಳು ಹೊತ್ತ ಹುಡುಗಿ

Can wisdom be put in a silver Rod ?
or Love in a Golden bowl ?

– ವಿಲಿಯಂ ಬ್ಲೇಕ್

- ಒಂದು -

ದಿನಾ ಇವಳು ಹೀಗೆ,
ಎರಡೂ ಕೈಗಳ ತುಂಬ ಮರಳು ತುಂಬಿಸಿಕೊಂಡು
ಹೀಗೆ ಸಾಗುತ್ತಾಳೆ,
ಸರಹದ್ದು, ಗಡಿಗಳನ್ನು ದಾಟಿ ನಡೆದುಬಿಡುತ್ತಾಳೆ –
ಯಾವುದೋ ಅಜ್ಞಾತ ಕತ್ತಲ ಕಡೆಗೆ

ಮುಡಿಯಲ್ಲಿ ದಾಸವಾಳದ ಕಿಲ ಕಿಲ ನಗೆ,
ಹೆಜ್ಜೆ- ಹೆಜ್ಜೆಗೂ ಸದ್ದು ಚೆಲ್ಲುವ ಗೆಜ್ಜೆಗಳ ತಣಿವು
ಜಡೆಗಂಟೆ ಕುಳಿತು ನಗುವ ಬೆಳ್ಳಿ ನವಿಲುಗಳು
ಹಿಡಿಯೊಳಗೆ ಭದ್ರವಾಗಿ ಕುಳಿತು ಹೊರಬರಲು –
ತವಕಿಸಿ ಇಣುಕಿಣುಕಿ ನೋಡುವ ಮರಳು...

ಇವಳು ದಿನಾ ಹೀಗೆ
ಮಡಿಲು ತುಂಬ ವಾಸಂತಿ ಹೂ ತುಂಬಿಕೊಂಡು
ಮರಳನ್ನು ಕೈಯೊಳಗೆ ಹಿಡಿದು ಬರುವಾಗ ದಾರಿ
ನಗುತ್ತಿರುತ್ತದೆ
ಬಯಲು ಹೊಸರಾಗ ಹಾಡುತ್ತ
ಮೆಲ್ಲನೆ ಇವಳನ್ನು ಕರೆಯುತ್ತದೆ

- ಎರಡು -

ನಾನು ಅಷ್ಟೇ, 'ದಿನಾ ಇವಳಿಗೇಕೆ ಮರಳು ?' ಎಂದು
ಯೋಚಿಸುತ್ತೇನೆ,
ರಾಜಿಯಾಗದ ಪ್ರಶ್ನೆಗಳಿಗೆ ಉತ್ತರಕ್ಕೆ ಹುಡುಕುಡುಕಿ –
ಸುಮ್ಮನಾಗುತ್ತೇನೆ

ಇವಳು ಮರಳಿಂದ ಕಟ್ಟಬಹುದು
'ಗುಡಿ, ಚರ್ಚು, ಮಸೀದಿ, ಮಂದಿರ, ಮಂದಿರ...
ಇಲ್ಲ ಬೆಚ್ಚನೆಯ ಗುಬ್ಬಚ್ಚಿ ಗೂಡು –
ಇಲ್ಲ ಗೋರಿಗಳನ್ನಾದರೂ' ಎಂದು ರಾಜಿಯಾಗುತ್ತೇನೆ

ಆದರೂ ಸಮಾಧಾನವಿಲ್ಲದೆ ಸರಾಗವಾಗಿ
ಹರಿದುಬರುವ ವಕಾಲತ್ತುಗಳ ನಡುವೆ ಕುಬ್ಜನಾಗುತ್ತೇನೆ
ಆದರೆ... ಆದರೆ ಈ ಹಿಡಿ ಮರಳಿಂದ ಇವಳು ಕಟ್ಟುತ್ತಾಳಾ ?
ಒಂದು ಮನಸನ್ನ, ಹೊಡೆದ ಮಾತನ್ನ,
ಕಳೆದುಹೋದ ಗಳಿಗೆ, ಪುಡಿ- ಪುಡಿಯಾದ ಮಡಿಕೆ- ಕುಡಿಕೆ,
ಕಲಾಕೃತಿಯನ್ನ, ಇಲ್ಲ ಒಂದು ಬದುಕನ್ನ...

ಇಲ್ಲ... ಇಲ್ಲ ಇದು ಯಾವುದನ್ನೂ
ಇವಳಿಂದ ಕಟ್ಟಲಾಗುವುದಿಲ್ಲ
ಅಳಿದುಳಿದ ವಿಷಾದಗಳನ್ನು ಬಯಲಲ್ಲಿ ಹೂತು
ಅದರ ಮೇಲೆ ಮರಳು ಚೆಲ್ಲಲು ಹೊರಟಿದ್ದಾಳೆ
ಒಂದು ಸುಂದರ ಆಕಾರವನ್ನು,
ಖುಷಿಯ ಅರ್ಥವನ್ನು ಅಕಾರಣವಾಗಿ ಸಮಾಧಿ-
ಮಾಡಲು ಹೊರಟಿದ್ದಾಳೆ

- ಮೂರು -

ಅಂಗೈಯಲ್ಲಿ ಅಳಿದುಳಿದ ಮರಳ ಕಣಗಳು
ಅಲ್ಲೇ ಗರ್ಭ ಕಟ್ಟಿ ಬಸುರಾಗುತ್ತದೆ
ತನ್ನೊಡಲಲ್ಲಿ ಅಸಂಖ್ಯಾತ ಕಣಗಳನ್ನು ತುಂಬಿಕೊಂಡು
ಪ್ರಸವಕ್ಕೆ ಕಾಯುತ್ತದೆ.
ಕೊನೆಗೆ ಪ್ರಸವಿಸುತ್ತದೆ

ಅವಳ ಮುತುವರ್ಜಿಯಿಂದ ಹೆಣೆದ ಕೌದಿಯೊಳಗೆ
ನವಿಲು ಮರಿಗಳಂತೆ ಓಡಾಡುತ್ತವೆ.
ಹಾಗೆ ಅಂಗೈಯಲ್ಲಿನ ಸಂಧಿಗಳಲ್ಲಿ ಜಾರಿಕೊಳ್ಳುತ್ತವೆ

ಬೆಳಕು ಕರಗುತ್ತಿರುವಂತೆ
ಮರಳನ್ನೊತ್ತ ಹುಡುಗಿ ಸರಿದುಬಿಡುತ್ತಾಳೆ
ಹದಿನಾರಂಕಣದ ಮನೆಯ ಕಿಡಕಿಯಿಂದ
ನಾನು ಕಣ್ಣಗಲಿಸಿ ಅವಳು ದೂರವಾಗುವವರೆಗೂ
ನೋಡುತ್ತೇನೆ,
ಅವಳು ನಡೆಯುತ್ತಲೇ ಇರುತ್ತಾಳೆ
ದೂರಕ್ಕೆ... ಇನ್ನೂ ದೂರಕ್ಕೆ...

ನಾನು ಅವಳು ನಡೆದುಹೋದ ದಾರಿಯಲ್ಲಿನ
ಅಳಿದುಳಿದ ಹೆಜ್ಜೆಗಳನ್ನು ಬಿರಬಿರನೆ
ಬೊಗಸೆ ತುಂಬಿಸಿಕೊಳ್ಳುತ್ತೇನೆ
ಮತ್ತೆ- ಮತ್ತೆ ನಾಳೆಯ ಮುಂಜಾನೆಗೆ
ಕಾಯುತ್ತೇನೆ,
ಅವಳಿಗೂ



**ಲಕ್ಕೂರು ಸಿ. ಆನಂದ**
'ಪದ್ಮಗೌರಿ', ಪೊಲೀಸ್ ಠಾಣೆ ಎದುರು,
ಲಕ್ಕೂರು ಅಂಚೆ, ಮಾಲೂರು ತಾಲ್ಲೂಕು
ಕೋಲಾರ ಜಿಲ್ಲೆ - ೫೬೩ ೧೬೦

ಪ್ರೊ॥ ಜಿ. ವೆಂಕಟಸುಬ್ಬಯ್ಯನವರು (ಜನನ: ೨೩-೮-೧೯೧೩) ಸುಮಾರು ನಾಲ್ಕು ದಶಕಗಳ ಕಾಲ ವಿವಿಧ ಮಟ್ಟದ ವಿದ್ಯಾರ್ಥಿಗಳಿಗೆ ಪಾಠ ಹೇಳಿದ ಅನುಭವಶಾಲಿಗಳು. ತಮ್ಮ ಪಾಂಡಿತ್ಯ, ಸೌಹಾರ್ದ, ಸೌಜನ್ಯಗಳಿಂದ, ಶಿಸ್ತು ಸಂಯಮಗಳ ಬದುಕಿನಿಂದ ಇಂದಿಗೂ ಹಳೆಯ ತಲೆಮಾರಿನ ಅಧ್ಯಾಪಕವೃತ್ತಿಗೊಂದು ಮಾದರಿಯಾಗಿರುವಂಥವರು. ಗ್ರಂಥ ಸಂಪಾದನೆ, ಸಾಹಿತ್ಯ ವಿಮರ್ಶೆ, ಸಂಶೋಧನೆ, ಅನುವಾದ, ಮಕ್ಕಳ ಪುಸ್ತಕಗಳು, ವಿವಿಧ ಬಗೆಯ ನಿಘಂಟುಗಳು, ಶಬ್ದಕೋಶಗಳು – ಹೀಗೆ ಎಲ್ಲ ಒಟ್ಟು ಸೇರಿ ಅರವತ್ತಕ್ಕೂ ಹೆಚ್ಚು ಗ್ರಂಥಗಳು ಪ್ರೊ॥ ವೆಂಕಟಸುಬ್ಬಯ್ಯನವರಿಂದ ರಚನೆಯಾಗಿವೆ. ೧೯೭೬ರಲ್ಲಿ ಪ್ರೊಫೆಸರರ ಶಿಷ್ಯರೂ ಮಿತ್ರರೂ ಸೇರಿ ಅವರಿಗೆ ಅರ್ಪಿಸಿದ ಸಂಭಾವನಾ ಗ್ರಂಥವನ್ನು 'ಸಾಹಿತ್ಯಜೀವಿ' ಎಂದು ಹೆಸರಿಸಿರುವುದು ಅನ್ವರ್ಥವಾಗಿದೆ. ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರತಿವಾರವೂ ಪ್ರಕಟವಾಗುತ್ತ ಬಂದು ಆಮೇಲೆ ಎರಡು ಸಂಪುಟಗಳಲ್ಲಿ ಹೊರಬಂದ 'ಇಗೋ ಕನ್ನಡ'ವು ಹಲವು ಮುದ್ರಣಗಳನ್ನು ಕಂಡಿದೆ. 'ಪತ್ರಿಕಾ ಪದಕೋಶ', 'ಎರವಲು ಶಬ್ದಕೋಶ'ಗಳು ಕನ್ನಡ ಶಬ್ದಭಂಡಾರಕ್ಕೆ ವಿಶೇಷ ಬಗೆಯ ಕೊಡುಗೆಗಳಾಗಿವೆ. ಈ ಗ್ರಂಥಗಳು ಪ್ರಕಟವಾದ ಮೇಲೆ ಶ್ರೀಯುತರನ್ನು ಪರಿಚಯ ಮಾಡಿಕೊಡಲು ಹೆಚ್ಚು ಮಾತು ಬಳಸಬೇಕಾಗಿಲ್ಲ; ನಿಘಂಟುಕಾರ ವೆಂಕಟಸುಬ್ಬಯ್ಯನವರೆಂದೋ, 'ಇಗೋ ಕನ್ನಡ'ದ ವೆಂಕಟಸುಬ್ಬಯ್ಯನವರೆಂದೋ ಹೇಳಿದರೆ ಸಾಕು, ಎಲ್ಲರಿಗೂ ತಿಳಿಯುತ್ತದೆ.

ಇಳಿವಯಸ್ಸಿನಲ್ಲೂ ಪ್ರೊ॥ ಜಿ. ವಿ.ಯವರದು ಪಾದರಸದಂಥ ಚಟುವಟಿಕೆ. ಈ ಹಿರಿಯರ ಜೀವನೋತ್ಸಾಹ, ಕಾರ್ಯಶ್ರದ್ಧೆ, ಚುರುಕಾದ ನೆನಪಿನ ಶಕ್ತಿಗಳು ಯುವಕರನ್ನೂ ನಾಚಿಸುವಂತಿವೆ. ಪ್ರೊ॥ ಜಿ. ವಿ.ಯವರು ಸಾರಸ್ವತಲೋಕಕ್ಕೆ ಸಲ್ಲಿಸಿರುವ ಬಹುಮುಖ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ೧೯೩ನೇ ವರ್ಷದ ಗೌರವ ಪ್ರಶಸ್ತಿಯನ್ನು ನೀಡಿದೆ. ರಾಜ್ಯ ಸರ್ಕಾರವು ೨೦೦೬ರಲ್ಲಿ 'ಸುವರ್ಣ ಕರ್ನಾಟಕ ಏಕೀಕರಣ' ಪ್ರಶಸ್ತಿಯನ್ನು ನೀಡಿದೆ. ಪ್ರೊ॥ ವೆಂಕಟಸುಬ್ಬಯ್ಯನವರಿಗೆ ಮಾಸ್ತಿ ವೆಂಕಟೇಶ ಅಯ್ಯಂಗಾರ್ ನೆನಪಿನ ಪ್ರಶಸ್ತಿಯೂ ಲಭಿಸಿದೆ. ಪ್ರೊ॥ ಜಿ. ವಿ.ಯವರು ಇಂಥ ಪ್ರಶಸ್ತಿಗಳಿಗಿಂತ ಬಹುದೊಡ್ಡವರು. 'ಇವರಿಗೆ ಪ್ರಶಸ್ತಿ ನೀಡುವ ಮೂಲಕ ಸಂಸ್ಥೆಗಳು ತಮ್ಮನ್ನು ತಾವೇ ಗೌರವಿಸಿಕೊಂಡಿವೆ'ಯೆಂಬ ಮಾತು ಕ್ಲೀಷೆಯಾದರೂ ಅದರಲ್ಲಿ ಸತ್ಯವಿದೆ.

ಈ ಹಿರಿಯ ವಿದ್ವಾಂಸರು 'ಹೊಸತು' ಪತ್ರಿಕೆಗೆ ಸಂದರ್ಶನ ನೀಡುವ ಸೌಜನ್ಯ ತೋರಿ ಸುಮಾರು ಎರಡು ಗಂಟೆಗಳಿಗೂ ಹೆಚ್ಚು ಕಾಲ ಆತ್ಮೀಯವಾಗಿ ಸರಸ ಸಂಭಾಷಣೆ ನಡೆಸಿದುದು ನಮ್ಮೆಲ್ಲರಿಗೂ ಬಹು ಹೆಮ್ಮೆಯ ಸಂಗತಿ. ಸಂದರ್ಶನದ ಮುಖ್ಯ ಭಾಗಗಳನ್ನು ಪ್ರಕಟಿಸಲು 'ಹೊಸತು' ಹರ್ಷಿಸುತ್ತದೆ.

ಪ್ರೊ॥ ಜಿ. ವಿ.ಯವರ ಸಂದರ್ಶನಕ್ಕೆ ಹೋದಾಗ ಅಪರಾಹ್ನ ಸರಿಯಾಗಿ ನಾಲ್ಕು ಗಂಟೆ. ಈ ವಯೋವೃದ್ಧರು ವಿಶ್ರಾಂತಿಯಲ್ಲಿ ಇರಬಹುದೆಂಬ ಅಳುಕು ಸಹಜವಾಗಿಯೆ ನಮ್ಮನ್ನು ಬಾಧಿಸುತ್ತಿತ್ತು. ಆದರೆ, ಅವರೆ ಮುಂದೆ ಬಂದು ಬಾಗಿಲು ತೆರೆದು ನಮ್ಮನ್ನು ಸ್ವಾಗತಿಸಿದರು. ಆನಂತರ ಶ್ರೀಮತಿ ಲಕ್ಷ್ಮಿ ವೆಂಕಟಸುಬ್ಬಯ್ಯನವರೂ ಬಂದು ಪಕ್ಕದಲ್ಲಿ ಕುಳಿತರು.

# ಸಾಹಿತ್ಯಜೀವಿಯೊಂದಿಗೆ ಮಾತುಕತೆ

## ಪ್ರೊ॥ ಜಿ. ವೆಂಕಟಸುಬ್ಬಯ್ಯನವರೊಂದಿಗೆ ಸಂದರ್ಶನ



ಪ್ರೊ॥ ಜಿ. ವೆಂಕಟಸುಬ್ಬಯ್ಯನವರು

ಸಂದರ್ಶನಕಾರರು

ಪ್ರೊ॥ ಕೆ. ಎಲ್. ಗೋಪಾಲಕೃಷ್ಣಯ್ಯ, ಡಾ॥ ಜಿ. ರಾಮಕೃಷ್ಣ, ಕೆ. ಎಸ್. ಪಾರ್ಥಸಾರಥಿ ಹಾಗೂ ಸಹನ

ಚಿತ್ರಗಳು

ಕೆ. ಪಿ. ಸ್ವಾಮಿ




Pancharatna Series
Tales of Humour
**Rs. 175/-**

Amar Chitra Katha
Shiva & Parvathi
**Rs. 30/-**






Pancharatna Series
Stories of Krishna
**Rs. 175/-**

Amar Chitra Katha
Swami
Chinmayananda
**Rs. 30/-**







Amar Chitra Katha
Tales Told by
Sri Ramakrishna
**Rs. 75/-**

Amar Chitra Katha
Ganga
**Rs. 30/-**





Amar Chitra Katha
The Matchless Wits
Raman & Gopal
**Rs. 75/-**




IBH Kannada -
Kannada - English
Dictionary
**Rs. 95/-**

TINKLE DIGEST
**Rs. 35/-**







The Elephant
Headed God
Ganesha
**Rs. 95/-**

TINKLE
Where Learning
Meets Fun
**Rs. 20/-**







The Divine
Romance
**Rs. 135/-**

TINKLE
Double Digest
**Rs. 60/-**







IBH English
Kannada
Dictionary
**Rs. 95/-**




Bombay Gothic
**Rs. 395/-**

Great
Diamonds of
India
**Rs. 295/-**






Elephanta
**Rs. 295/-**



The Mumbai
Nature Guide
**Rs. 395/-**

IBH

# INDIA BOOK HOUSE PVT LTD

**Jayadeva Hostel Building, 5th Main Road, Gandhinagar, Bangalore - 560 009.**
**Tel : 22261305/22252385. Fax : 22258104. e-mail : ibhblr@vsnl.net / ibhbangalore@ibhworld.com**

**:: CORPORATE OFFICE ::**
**412, Tulsiani Chambers, 212, Nariman Point, Mumbai - 400 021 Tel : 22840626/78, Fax : 22835099**

**BRANCHES AT : AHMEDABAD, CHENNAI, CHANDIGARH, HYDERABAD, KOLKATTA, MUMBAI, NEW DELHI, PUNE, TRIVANDRUM**

**ಹೊಸತು** : ಸಾರ್, ತಾವು ನಿದ್ದೆ ಮಾಡುತ್ತಿದ್ದಿರೇನೋ ; ಈ ಹೊತ್ತಿನಲ್ಲಿ ಬಂದು ತೊಂದರೆ ಕೊಡುತ್ತಿದ್ದೇವೆ.

**ಜಿ. ವೆಂಕಟಸುಬ್ಬಯ್ಯ** : ಹಾಗೇನಿಲ್ಲ; ನಾಲ್ಕು ಗಂಟೆಗೆ ಬನ್ನಿ ಅಂತ ನಾನೇ ಹೇಳಿದ್ದೆನಲ್ಲ. ನಾನು ಮಧ್ಯಾಹ್ನ ಮಲಗುವುದಿಲ್ಲ (''ಊಟಕ್ಕೆ ಮುಂಚೆ ಸ್ವಲ್ಪ ಹೊತ್ತು ಮಲಗಿ ಏಳುತ್ತಾರೆ'' – ಶ್ರೀಮತಿ ವೆಂಕಟಸುಬ್ಬಯ್ಯನವರು ದನಿಗೂಡಿಸಿದರು.) ಮಧ್ಯಾಹ್ನ ಮಲಗಿದರೆ ರಾತ್ರಿ ನಿದ್ದೆ ಹತ್ತುವುದಿಲ್ಲ. ರಾತ್ರಿ ಒಂಬತ್ತು, ಒಂಬತ್ತೂವರೆಗೆಲ್ಲ ಮಲಗಿಬಿಡುತ್ತೇನೆ. ಮಧ್ಯಾಹ್ನ ಎರಡು, ಎರಡೂವರೆಗೆ ಊಟ. ರಾತ್ರಿಯೂ ಸ್ವಲ್ಪ ಊಟಮಾಡುತ್ತೇನೆ. ಊಟವೇ ಆಗಬೇಕೆಂದಿಲ್ಲ. ಉಪ್ಪಿಟ್ಟು ಮಾಡಿಸಿಕೊಂಡು ತಿಂದರೂ ಆಯ್ತು; ಅದೇ ಊಟ. ಬೆಳಿಗ್ಗೆ ವಾಕಿಂಗ್ ಉಂಟು. I have no problem.



**ಹೊ** : ಸಾಮಾನ್ಯವಾಗಿ ಎಲ್ಲರೂ ಕೇಳುವ ಪ್ರಶ್ನೆ ಇದು. ತಮ್ಮ ಆರೋಗ್ಯ, ದೀರ್ಘಾಯುಷ್ಯಗಳ ಗುಟ್ಟೇನು ?

**ಜಿ. ವಿ.** : ಗುಟ್ಟೇನು ಬಂತು ಅದರಲ್ಲಿ, ನಮ್ಮ ಹಿರಿಯರು ತುಂಬ ವರ್ಷ ಬದುಕಿದ್ದರು. ನಮ್ಮ ತಾಯಿ ೧೦೭ ವರ್ಷ ಬದುಕಿದರು. ನನ್ನ ಆರೋಗ್ಯದ ವಿಚಾರದಲ್ಲಿ ದೇವರು ದೊಡ್ಡವನು.

**ಹೊ** : ನಮ್ಮ ಪತ್ರಿಕೆ 'ಹೊಸತು' ಪರವಾಗಿ ತಮ್ಮನ್ನು ಸಂದರ್ಶಿಸಲು ಬಂದಿದ್ದೇವೆ.

**ಜಿ. ವಿ.** : ಇದು ನನಗೆ ಹೆಮ್ಮೆಯ ವಿಚಾರ; ಹೊಸತು ನಾನು ಮೆಚ್ಚಿಕೊಂಡಿರುವ ಪತ್ರಿಕೆ. ಪ್ರತಿ ತಿಂಗಳು ಮೂವತ್ತನೇ ತಾರೀಖಿಗೆ ಸರಿಯಾಗಿ ಬಂದು ತಲುಪುತ್ತದೆ. ಕನ್ನಡದಲ್ಲಂತೂ ಇಷ್ಟು ಕರಾರುವಾಕ್ಕಾಗಿ ಬಂದು ತಲುಪುವ ಪತ್ರಿಕೆಗಳು ತೀರ ಅಪರೂಪ.

**ಹೊ** : ಈ ವರ್ಷದ ವಿಶೇಷ ಸಂಚಿಕೆಗೆ ವಿಜ್ಞಾನಿಗಳಲ್ಲಿ ಪ್ರೊ|| ಎಂ. ಆರ್. ಶ್ರೀನಿವಾಸನ್ ಅವರನ್ನೂ, ಸಂಗೀತ ವಿದ್ವಾಂಸರಲ್ಲಿ ಶ್ರೀ ಆರ್. ಕೆ. ಶ್ರೀಕಂಠನ್ ಅವರನ್ನೂ ಸಂದರ್ಶಿಸಬೇಕೆಂದಿದ್ದೇವೆ.

**ಜಿ. ವಿ.** : ಅವರೆಲ್ಲ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮಹತ್ವದ ಸಾಧನೆ ಮಾಡಿರುವಂಥವರು. ನನಗೆ ಮಾಸ್ತಿ ಪ್ರಶಸ್ತಿ ಕೊಡಲು ಆರ್. ಕೆ. ಶ್ರೀಕಂಠನ್ ಅವರನ್ನು ಕರೆಸಿದ್ದರು. ನನಗೆ ತುಂಬ ಹೆಮ್ಮೆಯೆನಿಸಿತು. ಅಂಥವರ ಮಟ್ಟಕ್ಕೆ ಏರುವವನಲ್ಲ ನಾನು. ಪತ್ರಿಕೆಗೆ ಸಂದರ್ಶನ ಕೊಡಲು ಹತ್ತಾರು ಜನರಿಗೆ ಉಪಯೋಗವಾಗುವಂಥ ಕೆಲಸ ಮಾಡಿರಬೇಕು; ಜನರ ಪ್ರೀತಿ ವಿಶ್ವಾಸ ಗಳಿಸಿರಬೇಕು.

**ಹೊ** : ಆ ಎಲ್ಲ ಗುಣಗಳು ತಮ್ಮಲ್ಲಿವೆಯೆಂದೇ ಸಂದರ್ಶನಕ್ಕೆ ಬಂದಿದ್ದೇವೆ.

**ಜಿ. ವಿ.** : (ಮೌನ)

**ಹೊ** : ಸರ್, ನಿಮ್ಮ ಪೂಜ್ಯ ತಂದೆಯವರಾದ ಗಂಜಾಂ ತಿಮ್ಮಣ್ಣನವರು ಸಂಸ್ಕೃತ, ಕನ್ನಡಗಳಲ್ಲಿ ದೊಡ್ಡ ವಿದ್ವಾಂಸರಾಗಿದ್ದರೆಂದೂ, ವೇದೋಪನಿಷತ್ತುಗಳಲ್ಲಿ ಪಾರಂಗತರು, ಅನೇಕ ಗ್ರಂಥಗಳನ್ನು ರಚಿಸಿದ್ದಾರೆಂದೂ, ಮೈಸೂರಿನ ಶಿಕ್ಷಕರ ಕಾಲೇಜಿನಲ್ಲಿ ಸೀನಿಯರ್ ಕನ್ನಡ ಪಂಡಿತರಾಗಿ ನಿವೃತ್ತರಾದರೆಂದೂ ಕೇಳಿದ್ದೇವೆ. ನಿಮ್ಮ ಬಾಲ್ಯದ ವಿದ್ಯಾಭ್ಯಾಸ, ಆಟ ಪಾಠಗಳ ಬಗೆಗೆ ತಿಳಿಸುವಿರಾ ?



**ಜಿ. ವಿ.** : ನಾನು ಪ್ರೈಮರಿ ಸ್ಕೂಲ್ ಓದಿದ್ದು ಮಧುಗಿರಿ, ಬನ್ನೂರುಗಳಲ್ಲಿ. ಅಲ್ಲಿ ನಮ್ಮ ತಂದೆ ಹೆಡ್ಮಾಸ್ಟರ್ ಆಗಿದ್ದರು. ಊರ ಪಕ್ಕದಲ್ಲಿ ಒಂದು ದೊಡ್ಡ ಕಾಲುವೆ ಹರಿಯುತ್ತದೆ; ನಾವೆಲ್ಲ ಅಲ್ಲಿ ಈಜಾಡಿಕೊಂಡು, ಆಟವಾಡುತ್ತ ಕಾಲ ಕಳೆಯುತ್ತಿದ್ದೆವು. ನಮ್ಮ ಕಾಲದಲ್ಲಿ ಪ್ರೈಮರಿ ಸ್ಕೂಲಿನಲ್ಲಿ ಇಂಗ್ಲಿಷ್ ಇರಲಿಲ್ಲ. 'ಕನ್ನಡ ಲೋಯರ್ ಸೆಕೆಂಡರಿ' (ಕೆ.ಎಲ್.ಎಸ್.) ಅಂತ. ನಾನು ಅದನ್ನೇ ಪಾಸು ಮಾಡಿದ್ದು. ಆಮೇಲೆ ಇಂಗ್ಲಿಷ್ ಕಲಿತಿಲ್ಲ ಅಂತ ನನ್ನನ್ನು ಹೈಸ್ಕೂಲಿಗೆ ಸೇರಿಸಲಿಲ್ಲ. ಆಗ ನಾನು ಮನೆಯಲ್ಲೇ ಇಂಗ್ಲಿಷ್ ಓದಿಕೊಂಡೆ. Wren and Martin ವ್ಯಾಕರಣವನ್ನು ಇಟ್ಟುಕೊಂಡು ಎಲ್ಲ Exerciseಗಳನ್ನು ಮಾಡಿ ಪೂರೈಸಿದೆ. ನಾಗೇಶರಾವ್ ಅಂತ ಒಬ್ಬ ಪುಣ್ಯಾತ್ಮ ತುಂಬ ಚೆನ್ನಾಗಿ ಇಂಗ್ಲಿಷ್ ಹೇಳಿಕೊಟ್ಟರು. ಆಮೇಲೆ ಹೈಸ್ಕೂಲ್ ಸೇರಿದೆ. VI ಫಾರ್ಮ್‌ಗೆ ಬರುವ ಹೊತ್ತಿಗೆ ಇಂಗ್ಲಿಷ್ ಕಾದಂಬರಿಗಳನ್ನೂ ಓದಲು ಸಮರ್ಥನಾಗಿದ್ದೆ. ಸರ್ ವಾಲ್ಟರ್ ಸ್ಕಾಟ್‌ನ ೭೦೦ ಪುಟಗಳ ಕಾದಂಬರಿ ಓದಿ ಮುಗಿಸಿದ್ದೆ.

ನಮ್ಮ ತಂದೆ ಬನ್ನೂರಿನಲ್ಲಿ ಹೆಡ್ಮಾಸ್ಟರ್ ಆಗಿದ್ದಾಗ ನಡೆದ ಒಂದು ಘಟನೆ ಹೇಳುತ್ತೇನೆ. ಜೊತೆಯ ಹುಡುಗರೆಲ್ಲ ಸೇರಿ ನನಗೆ ಬೀಡಿ ಸೇದಿಸಲು ಪ್ರಯತ್ನಿಸಿದರು. ಇದು ಹೇಗೋ ನಮ್ಮ ತಂದೆಗೆ ತಿಳಿಯಿತು. ಬೀಡಿ ಸೇದುವ ಹುಡುಗರನ್ನೆಲ್ಲ ಸಾಲಾಗಿ ನಿಲ್ಲಿಸಿ ಎರಡೆರಡು ಏಟು ಕೊಟ್ಟರು. ಹಾಗೂ ಒಬ್ಬ ತಪ್ಪಿಸಿಕೊಂಡುಬಿಟ್ಟಿದ್ದ. ನಾನು 'ಅವನೂ ಬೀಡಿ ಸೇದುತ್ತಾನೆ' ಎಂದೆ. ಅವನಿಗೂ ಎರಡೇಟು ಬಿಗಿದರು. ಆಮೇಲೆ ದೋಷಾರೋಪಣೆ ಮಾಡಿದ್ದಕ್ಕಾಗಿ ನನಗೆ ಆರು ಏಟು ಕೊಟ್ಟರು...

ಮಧುಗಿರಿಯಿಂದ ಮೈಸೂರಿಗೆ ಬಂದು ಇಂಟರ್‌ಮೀಡಿಯಟ್ ಮುಗಿಸಿ ಮಹಾರಾಜ ಕಾಲೇಜು ಸೇರಿದೆ.

**ಹೊ** : ನಿಮ್ಮ ಮುಂದಿನ ವಿದ್ಯಾಭ್ಯಾಸಕ್ಕೆ ಕಲಾವಿಭಾಗವನ್ನೇ ಏಕೆ ಆಯ್ಕೆ ಮಾಡಿಕೊಂಡಿರಿ ? ಅಧ್ಯಾಪಕರಾಗಬೇಕೆಂಬ ಆಕಾಂಕ್ಷೆ ಆಗಿನಿಂದಲೂ ಇತ್ತೆ ?

**ಜಿ. ವಿ.** : ನಮ್ಮ ಕಾಲದಲ್ಲಿ ಮುಂದಿನ ಬಾಳಿಗೆ ನೆರವಾಗುವ ಯಾವ ವಿದ್ಯೆಯನ್ನು ಕಲಿಯಬೇಕೆಂದು ಆಯ್ಕೆ ಮಾಡಿಕೊಳ್ಳುವ ಅವಕಾಶ ವಿದ್ಯಾರ್ಥಿಗಳಿಗೆ ಇರಲೇ ಇಲ್ಲ. ವಿಶ್ವವಿದ್ಯಾಲಯದಲ್ಲಿ ಮುಖ್ಯವಾಗಿ ನಾಲ್ಕು ವಿಭಾಗಗಳು; ಮೈಸೂರಿನಲ್ಲಿ ಎರಡು – ಕಲಾ ವಿಭಾಗ ಮತ್ತು ವೈದ್ಯಕೀಯ. ಬೆಂಗಳೂರಿನಲ್ಲಿ ವಿಜ್ಞಾನ ಮತ್ತು ಇಂಜಿನಿಯರಿಂಗ್. ಹಾಸ್ಟಲ್‌ಗಳಲ್ಲಿ ಇದ್ದುಕೊಂಡು ವೈದ್ಯಕೀಯ, ಇಂಜಿನಿಯರಿಂಗ್ ಓದುತ್ತಿದ್ದವರು ಶ್ರೀಮಂತರ ಮಕ್ಕಳು... ನಾನು ಕಲಾ ವಿಭಾಗದಲ್ಲಿ ಪ್ರಾಚೀನ ಚರಿತ್ರೆ, ತರ್ಕ ಮತ್ತು ಸಂಸ್ಕೃತಗಳನ್ನು ಆರಿಸಿಕೊಂಡಿದ್ದೆ. ಆಗ ಇಂಟರ್‌ಮೀಡಿಯಟ್ ತರಗತಿಯಲ್ಲಿ ನಮಗೆ ಕನ್ನಡ ಅಧ್ಯಾಪಕರಾಗಿದ್ದವರಲ್ಲಿ ಕುವೆಂಪು ಮುಖ್ಯರು. ಪ್ರಥಮ ಪರೀಕ್ಷೆಯಲ್ಲಿ ಅವರು ನನ್ನ ಉತ್ತರ ಪತ್ರಿಕೆಗೆ ತರಗತಿಯಲ್ಲಿ ಮೊದಲಸ್ಥಾನ ನೀಡಿ, 'ಬರವಣಿಗೆ ಚೆನ್ನಾಗಿದೆ; ಮುಂದುವರಿಸಿ' ಎಂದು ಹರಸಿದರು. ಇದೇ ನಾನು ಆನರ್ಸ್ ತರಗತಿಗೆ ಸೇರುವಾಗ ಕನ್ನಡವನ್ನು ತೆಗೆದುಕೊಳ್ಳಲು ಪ್ರೋತ್ಸಾಹ ನೀಡಿತು. ಆಗಲೂ ಕನ್ನಡ ಅಧ್ಯಾಪಕನಾಗಬೇಕೆಂಬ ಆಸೆ ಇರಲಿಲ್ಲ. ಎಂ.ಎ. ಪರೀಕ್ಷೆಯಲ್ಲಿ ಚಿನ್ನದ ಪದಕವನ್ನು ಪಡೆದ ಮೇಲೆ, ಕನ್ನಡದಲ್ಲಿ ಹೆಚ್ಚು ಜ್ಞಾನ ಪಡೆಯಬೇಕೆಂಬ ಆಸೆ ತೀವ್ರವಾಯಿತು.

**ಹೊ** : ವಿದ್ಯಾಭ್ಯಾಸಕಾಲದಲ್ಲಿ ನಿಮಗಿದ್ದ ಅನುಕೂಲ ಅನಾನುಕೂಲಗಳು, ನಿಮ್ಮ ಸಹಪಾಠಿಗಳು, ನಿಮ್ಮ ಮೆಚ್ಚಿನ ಅಧ್ಯಾಪಕರ ಬಗ್ಗೆ ತಿಳಿಸುವಿರಾ ?

**ಜಿ. ವಿ.** : ಕನ್ನಡ ಆನರ್ಸ್ ತರಗತಿಯಲ್ಲಿ ಮೊದಲ ವರ್ಷ ನಾನು ಮತ್ತು ದಿ|| ಎಚ್. ಎಂ. ಶಂಕರನಾರಾಯಣರಾವ್ ಇಬ್ಬರೇ ವಿದ್ಯಾರ್ಥಿಗಳು. ಒಂದು ವರ್ಷವಾದ ಮೇಲೆ ಎಸ್. ವಿ. ಪರಮೇಶ್ವರ ಭಟ್ಟರು ಬಂದು ನಮ್ಮನ್ನು ಕೂಡಿಕೊಂಡರು. ಮೂವರೂ ಗಾಢ ಸ್ನೇಹಿತರಾದೆವು. ಮೂವರೂ

ಬಡತನದಲ್ಲಿ ಬೆಳೆದವರಾದುದರಿಂದ ಹೋಟೆಲಿಗೆ ಹೋದರೆ ಒಂದು ಕಪ್ಪು ಕಾಫಿ ತರಿಸಿ ಮೂರು ಜನವೂ ಹಂಚಿಕೊಳ್ಳುತ್ತಿದ್ದ ಕಾಲ ಅದು.

ಹಳಗನ್ನಡ ಪುಸ್ತಕಗಳು ಅಚ್ಚಾಗುತ್ತಿದ್ದುದು ಅಪರೂಪ; ಒಂದು ವೇಳೆ ಮುದ್ರಿತ ಪುಸ್ತಕಗಳಿದ್ದರೂ ಕೊಳ್ಳಲು ನಮ್ಮಲ್ಲಿ ದುಡ್ಡಿರಲಿಲ್ಲ. ಹೀಗಾಗಿ ಪುಸ್ತಕ ಭಂಡಾರದಲ್ಲಿ ಕುಳಿತು, ಇಲ್ಲವೇ ಪುಸ್ತಕಗಳನ್ನು ಎರವಲು ತಂದು ಕೈಯಲ್ಲಿ ಬರೆದುಕೊಳ್ಳುತ್ತಿದ್ದೆವು. ಇದರಿಂದ ನಮ್ಮ ಓದುಬರಹಗಳು ಉತ್ತಮಗೊಳ್ಳಲು ಸಹಾಯವಾಯಿತು. ನಮಗೆ ಟಿ. ಎಸ್. ವೆಂಕಣ್ಣಯ್ಯನವರು, ಸಿ. ಆರ್. ನರಸಿಂಹ ಶಾಸ್ತ್ರಿಗಳು, ತೀ. ನಂ. ಶ್ರೀ. ಮತ್ತು ಡಿ. ಎಲ್. ಎನ್. ಮುಖ್ಯ ಮಾರ್ಗದರ್ಶಕರಾಗಿದ್ದರು.

ಕೆಲವು ವೇಳೆ ನಾವು ಅಧ್ಯಾಪಕರ ಅಪ್ಪಣೆ ಪಡೆದು ಅರ್ಥಶಾಸ್ತ್ರ, ದರ್ಶನಶಾಸ್ತ್ರ, ಪಾಶ್ಚಾತ್ಯ ತತ್ವಶಾಸ್ತ್ರಗಳ ತರಗತಿಗಳಿಗೂ ಹೋಗುತ್ತಿದ್ದೆವು. ಇದರಿಂದ ನಮ್ಮ ಜ್ಞಾನಾರ್ಜನೆಗೆ ತುಂಬ ಸಹಾಯವಾಯಿತು.

ಪ್ರತಿವರ್ಷದ ಕೊನೆಯಲ್ಲಿ ಪ್ರಾಚಾರ್ಯ ಬಿ.ಎಂ.ಶ್ರೀ.ಯವರು ಬೆಂಗಳೂರಿನಿಂದ ಬಂದು ಮೂರು ವಾರ ಕಾಲ ಪಾಠ ಮಾಡುತ್ತಿದ್ದರು. ಅವರ ಉಪನ್ಯಾಸಗಳು, ಅಂತರಂಗದ ಅನುಭವಗಳ ಹೊಳಹು, ಭಾಷಣದ ಸೊಗಸಾದ ಕಾವ್ಯಮಯ ಶೈಲಿ, ವಿಮರ್ಶೆಯ ವ್ಯಾಪ್ತಿ – ಇವೆಲ್ಲ ನಮ್ಮ ಮೇಲೆ ಅಚ್ಚಳಿಯದ ಪ್ರಭಾವ ಬೀರಿದವು. ಇಂಗ್ಲಿಷ್ ಭಾಷೆಯಲ್ಲಿ ವಿ. ಎ. ತ್ಯಾಗರಾಜನ್, ಕೆ. ಅನಂತರಾಮಯ್ಯ ಮತ್ತು ಜೆ. ಸಿ. ರಾಲೋ ಅವರ ತರಗತಿಗಳು ಆಳವಾದ ತಿಳಿವು ನೀಡಿದವು. ಇವರಲ್ಲಿ ಒಬ್ಬೊಬ್ಬರೂ ಒಂದೊಂದು ದಿವ್ಯ ಸಂಸ್ಥೆಯಂತೆ ಉನ್ನತರಾದವರು. ಇಂಥವರ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಿದ ಅನುಭವ ಇಂದಿಗೂ ನನ್ನ ಬಾಳಿನಲ್ಲಿ ಹಸುರಾಗಿ ಉಳಿದಿದೆ.



**ಹೊ:** ನೀವು ವಿದ್ಯಾರ್ಥಿಗಳಾಗಿದ್ದಾಗ ಪ್ರಾಚೀನ ಸಾಹಿತ್ಯ ಮತ್ತು ಭಾಷೆಯ ಅಧ್ಯಯನಕ್ಕೆ ಹೆಚ್ಚು ಒತ್ತು ಕೊಡುತ್ತಿದ್ದರೆಂದು ಕೇಳಿದ್ದೇವೆ. ಆ ದೃಷ್ಟಿಯಿಂದ ನೋಡಿದರೆ ಇಂದಿನ ಪರಿಸ್ಥಿತಿಯ ಬಗೆಗೆ ನಿಮಗೇನನಿಸುತ್ತದೆ?

**ಜಿ. ವಿ.:** ನಮಗೆ ಹಳಗನ್ನಡ ಪಾಠ ಮಾಡುತ್ತಿದ್ದವರು, ಮುಖ್ಯವಾಗಿ ಪ್ರೊ|| ಡಿ.ಎಲ್.ಎನ್.; ಅವರು ಬಹುದೊಡ್ಡ ವಿದ್ವಾಂಸರು. ಹಳಗನ್ನಡದ ವಿಚಾರದಲ್ಲಂತೂ ಒಂದು ನಡೆದಾಡುವ ವಿಶ್ವಕೋಶದಂತಿದ್ದರು. ನಮಗೆ ಆ ವರ್ಷ ನಿಯಮಿತವಾಗಿದ್ದ ವಿಶೇಷ ಕವಿ ಅಭಿನವ ಪಂಪ (ನಾಗಚಂದ್ರ). ಡಿ. ಎಲ್. ಎನ್. ಪಠ್ಯಪುಸ್ತಕವನ್ನಿಟ್ಟುಕೊಂಡು ಬೋಧಿಸುತ್ತಿರಲಿಲ್ಲ. 'ನೀವೆಲ್ಲ ಎಂ.ಎ. ವಿದ್ಯಾರ್ಥಿಗಳು: ಪಠ್ಯಪುಸ್ತಕವನ್ನು ಓದಿಕೊಂಡು, ನಿಮಗೇನು ತೊಂದರೆಯಿದೆ, ಸಂದೇಹವಿದೆ, ಸಮಸ್ಯೆಯಿದೆ ಎಂಬುದನ್ನು ಕೇಳಬೇಕು' ಎಂದು ಹೇಳುತ್ತಿದ್ದರು. ನಾವು ಪ್ರಶ್ನೆಗಳನ್ನೆತ್ತಿಕೊಂಡು ಸಿದ್ಧರಾಗಿ ಹೋದಾಗ ಸದ್ಯದ ಕೃತಿಗೆ ಮೂಲ ಆಕರ ಗ್ರಂಥಗಳನ್ನು (ಉದಾಹರಣೆಗೆ, ನಾಗಚಂದ್ರನ ರಾಮಚಂದ್ರ ಚರಿತ ಪುರಾಣದ ಆಕರವಾದ ಪ್ರಾಕೃತ ಭಾಷೆಯಲ್ಲಿ ವಿಮಲಸೂರಿಯ ಪದ್ಮಪುರಾಣವನ್ನು) ಇಟ್ಟುಕೊಂಡು ಚರ್ಚೆ ಮಾಡುತ್ತಿದ್ದರು. ಈ ಬಗೆಯ ಬೋಧನೆಯಿಂದ ನಮಗೆ ತುಂಬ ಲಾಭವಾಯಿತು. ನಾವು ಶ್ರಮಪಟ್ಟು ಓದುವಂತೆ ಮಾಡಿ ಅವರು ಪುಣ್ಯಕಟ್ಟಿಕೊಂಡರು. ಕೆ. ವಿ. ಪುಟ್ಟಪ್ಪನವರು ನಮಗೆ ಹರಿಶ್ಚಂದ್ರಕಾವ್ಯವನ್ನು ಪಾಠಮಾಡಿದರು. ಮುಂದೆ ನಾನು ಕೂಡ ಪಂಪ ರಾಮಾಯಣ, ನಾಗವರ್ಮನ ಕಾದಂಬರಿಗಳನ್ನು ಪಾಠ ಮಾಡಿದ್ದೇನೆ.

ಈಗಿನ ಪಠ್ಯಕ್ರಮದಲ್ಲಿ ಹೊಸಗನ್ನಡ ಕಾವ್ಯ, ಕಥೆ, ಕಾದಂಬರಿ ಮೊದಲಾದವುಗಳಿಗೆ ಪ್ರಾಧಾನ್ಯ ದೊರೆಯುತ್ತಿದೆ; ಹಳಗನ್ನಡದ ಅಧ್ಯಯನ, ಬೋಧನೆ, ಭಾಷೆಯ ಅಧ್ಯಯನಗಳು ಹಿಂದೆ ಬಿದ್ದಿವೆ...

ನನ್ನ ದೃಷ್ಟಿಯಲ್ಲಿ ಯಾವುದೇ ಸಾಹಿತ್ಯದ, ಭಾಷೆಯ ಸಮಗ್ರ ಅಧ್ಯಯನವು ಸಾಹಿತ್ಯ ಚರಿತ್ರೆ, ಭಾಷೆಯ ಚರಿತ್ರೆಗಳ ಹಿನ್ನೆಲೆಯಲ್ಲಿ ನಡೆಯಬೇಕು. ಆಗ ಮಾತ್ರ ಅಧ್ಯಯನವು ಅರ್ಥಪೂರ್ಣವಾಗುತ್ತದೆ. ಕನ್ನಡ ಅಧ್ಯಾಪಕರಾಗುವವರಿಗಂತೂ ಹಳಗನ್ನಡ ಸಾಹಿತ್ಯ, ಭಾಷೆಗಳ ಕಲಿಕೆ ಅನಿವಾರ್ಯವೆಂಬುದೇ ನನ್ನ ಅಭಿಪ್ರಾಯ.

ಕಾಲೇಜು ಕನ್ನಡ ಅಧ್ಯಾಪಕರನ್ನು ಆಯ್ಕೆಮಾಡುವ ಸಮಿತಿಗಳ ಸದಸ್ಯನಾಗಿ ನಾನು ಹಲವು ಅಭ್ಯರ್ಥಿಗಳನ್ನು ಸಂದರ್ಶಿಸಿದ್ದೇನೆ. ಸಾಮಾನ್ಯವಾಗಿ ನಾನು ಕೇಳುವ ಒಂದು ಪ್ರಶ್ನೆ ಇದು: 'ನೀವು ಎಂ.ಎ. ತರಗತಿಯಲ್ಲಿ ಯಾವ ಹಳಗನ್ನಡ ಕವಿಯನ್ನು ವಿಶೇಷವಾಗಿ ಅಭ್ಯಾಸ ಮಾಡಿದ್ದೀರಿ?' ಎಂದು. ಅವರು ಪಂಪನನ್ನೋ, ರನ್ನನನ್ನೋ ಹೆಸರಿಸುತ್ತಾರೆನ್ನಿ. ಆಗ 'ಆ ಕವಿಯ ಯಾವುದಾದರೊಂದು ಗ್ರಂಥದಿಂದ ನಿಮಗೆ ಇಷ್ಟವಾದ ಒಂದು ಪದ್ಯವನ್ನು ಉದಾಹರಿಸಿ' ಎನ್ನುತ್ತೇನೆ. ಬಹುತೇಕ ಅಭ್ಯರ್ಥಿಗಳು ತಬ್ಬಿಬ್ಬಾಗುತ್ತಾರೆ. ('ಸದ್ಯ ನಾವು ಕೆಲಸಕ್ಕಾಗಿ ನಿಮ್ಮೆದುರಿಗೆ ಸಂದರ್ಶನಕ್ಕೆ ಬರಲಿಲ್ಲವಲ್ಲ; ಎಂದರು, 'ಹೊಸತು' ಬಳಗದವರು. ಎಲ್ಲರೂ ಗಟ್ಟಿಯಾಗಿ ನಕ್ಕರು.)

**ಹೊ:** ವಿದ್ಯಾರ್ಥಿ ದೆಸೆಯಲ್ಲಿ ನಿಮ್ಮ ಪಠ್ಯೇತರ ಚಟುವಟಿಕೆಗಳ ಬಗೆಗೆ ತಿಳಿಸುವಿರಾ?

**ಜಿ. ವಿ.:** ನಾನು ಎಂದೂ 'ಪುಸ್ತಕದ ಹುಳು' ಆಗಿರಲಿಲ್ಲ. ನನಗೆ ಮಹಾರಾಜಾ ಕಾಲೇಜಿನ ಯೂನಿಯನ್ ತುಂಬ ಪ್ರಿಯವಾಗಿತ್ತು. ಚರ್ಚಾಕೂಟಗಳು, ಸಭೆ, ಸಮಾರಂಭಗಳು, 'ಇನ್‌ಡೋರ್' ಆಟಗಳು ಇತ್ಯಾದಿಗಳಲ್ಲಿ ಸಾಕಷ್ಟು ಕಾಲ ಕಳೆಯುತ್ತಿದ್ದೆ. ನಮ್ಮ ಕಾಲದ ಚರ್ಚಾಕೂಟಗಳಲ್ಲಿ ಪರಮೇಶ್ವರ ಭಟ್ಟರು ಮತ್ತು ನಾನು ಮುಂದಾಳುಗಳಾಗಿರುತ್ತಿದ್ದೆವು. ಆಟಗಳಲ್ಲಿ ಚದುರಂಗ, ಪಿಂಗ್‌ಪಾಂಗ್, ಟೆನಿಸ್‌ಗಳಲ್ಲಿ ನಾನೇ ಮುಂದು. ಮೂರು ವರ್ಷ ಸತತವಾಗಿ 'ಇನ್‌ಡೋರ್ ಗೇಮ್ಸ್' ಛಾಂಪಿಯನ್ ಆಗಿದ್ದೆ. ಓದಿನ ಕಡೆ ಜಾಸ್ತಿ ಗಮನಕೊಡುವಂತೆ ಅಧ್ಯಾಪಕರು ಎಚ್ಚರಿಸುತ್ತಿದ್ದರಾದರೂ ನನಗೆ ಯೂನಿಯನ್ ಕಡೆಯ ಸೆಳೆತ ಹೆಚ್ಚಾಗಿತ್ತು. ಸಹ ವಿದ್ಯಾರ್ಥಿಗಳ ಜೊತೆ ಪ್ರವಾಸ, ನಾಟಕ ಪ್ರದರ್ಶನಗಳಲ್ಲಿ ಭಾಗವಹಿಸುವುದು, ವಯಸ್ಕರ ಶಿಕ್ಷಣದ ತರಗತಿಗಳಲ್ಲಿ ಪಾಠಮಾಡುವುದು ಇತ್ಯಾದಿಗಳೆಲ್ಲ ಇದ್ದವು.

**ಹೊ:** ಎಂ. ಎ. ಪಾಸು ಮಾಡಿದ ಮೇಲೆ ಕೆಲವು ಕಾಲ ನೀವು ಮಹಾರಾಜಾ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದು ಆಮೇಲೆ ಹೈಸ್ಕೂಲು ಅಧ್ಯಾಪಕರಾಗಬೇಕಾಯಿತೆಂದು ಕೇಳಿದ್ದೇವೆ. ಅಂದರೆ ಶ್ರೇಷ್ಠದರ್ಜೆಯಲ್ಲಿ (ಚಿನ್ನದ ಪದಕ ಪಡೆದು) ಉತ್ತೀರ್ಣರಾದರೂ ಕಾಲೇಜು ಅಧ್ಯಾಪಕ ವೃತ್ತಿ ಸಿಗುವುದು – ಇಂದಿನ ಹಾಗೆ ಅಂದು ಕೂಡ – ಕಷ್ಟವಾಗಿತ್ತೆಂದು ತಿಳಿಯಬಹುದೇ?

**ಜಿ. ವಿ.:** ಹೌದು, ತುಂಬ ಕಷ್ಟವೇ ಆಗಿತ್ತು. ಮಹಾರಾಜಾ ಕಾಲೇಜಿನಲ್ಲಿ ನಾನು ಉಪನ್ಯಾಸಕನಾಗಿದ್ದುದು 'ಲೀವ್ ವೇಕೆನ್ಸಿ'ಯಲ್ಲಿ. ಕೆ. ವಿ. ರಾಘವಾಚಾರ್ ಅವರು ಡಿಕ್ಷನರಿ ಕೆಲಸಕ್ಕಾಗಿ ದೀರ್ಘ ಅವಧಿಯ ರಜದ ಮೇಲೆ ಹೋಗಿದ್ದರು. ಅವರು ಹಿಂದಕ್ಕೆ ಬಂದುದರಿಂದ ನನಗೆ ಕೆಲಸವಿಲ್ಲವಾಯ್ತು. ಆ ಉದ್ಯೋಗ ಕೈತಪ್ಪಿದ ಮೇಲೆ ನಾನು ಶಿಕ್ಷಕ ತರಬೇತಿ (ಬಿ.ಟಿ. ಪದವಿ) ಪಡೆದಿದ್ದುದರಿಂದ ಮಂಡ್ಯದ ಪುರ ಪ್ರೌಢಶಾಲೆಯಲ್ಲಿ ಉಪಾಧ್ಯಾಯನಾಗುವುದು ಸಾಧ್ಯವಾಯ್ತು. ನಾನು ಮಂಡ್ಯ ಹೈಸ್ಕೂಲಿನಲ್ಲಿ (ಹುಡುಗರು-ಹುಡುಗಿಯರಿಗೆ ಸಹ ವಿದ್ಯಾಭ್ಯಾಸ) ಉಪಾಧ್ಯಾಯನಾದುದರಿಂದ ಇವಳು (ತಮ್ಮ ಪತ್ನಿಯ ಕಡೆ ಕೈತೋರಿಸಿ) ಹೈಸ್ಕೂಲು ವಿದ್ಯಾಭ್ಯಾಸವನ್ನೂ ಬಿಡಬೇಕಾಯ್ತು. ಮಂಡ್ಯದಲ್ಲಿ ಇದ್ದಾಗಲೇ ನಮ್ಮ ಮದುವೆಯಾಯ್ತು. ಅಲ್ಲಿ ಪ್ರೌಢಶಾಲೆಯಲ್ಲಿ ಆರು ತಿಂಗಳು ಕೆಲಸ ಮಾಡಿ ಆಮೇಲೆ ಇಲ್ಲಿಗೆ ಬಂದು 'ಬೆಂಗಳೂರು ಹೈಸ್ಕೂಲ್'ನ

...ಕ್ಕೆ ಸೇರಿದೆ. ಮಹಾರಾಜಾ ಕಾಲೇಜಿನಲ್ಲಿ ಎಂ.ಎ.ಗೆ ...ಮಾಡುತ್ತಿದ್ದ ನನಗೆ ತಿಂಗಳಿಗೆ ೪೦ರೂ. ಸಂಬಳ ...ಡುತ್ತಿದ್ದರು. ಹೈಸ್ಕೂಲಿನಲ್ಲಿ ೪೫ ರೂ. ...ಡಲಾರಂಭಿಸಿದರು! ಆಮೇಲೆ ಬಂದು ...ರಿದುದು ವಿಜಯಾ ಕಾಲೇಜಿಗೆ.

**ಹೊ :** ನೀವು ಕನ್ನಡ ಆನರ್ಸ್, ಎಂ.ಎ. ...ಡುತ್ತಿದ್ದುದು ನವೋದಯ ಸಾಹಿತ್ಯದ ವಸಂತ ...ಲದಲ್ಲಿ. ಬಿ.ಎಂ.ಶ್ರೀ.ಯವರಿಂದ ಆರಂಭವಾಗಿ ...ವೆಂಪು, ತೀ.ನಂ.ಶ್ರೀ., ಎಸ್. ವಿ. ಪರಮೇಶ್ವರ ಭಟ್ಟ ...ದಲಾದವರುಗಳ ಮೂಲಕ ಮುಂದುವರಿದ ...ವಗೀತ ಸಂಪ್ರದಾಯದಲ್ಲಿ ತರುಣರು ತುಂಬ ...ತ್ಸಾಹದಿಂದ ಕವಿತೆಗಳ ಮೂಲಕ ಸಾಹಿತ್ಯಲೋಕ ಪ್ರವೇಶಿಸಿದರು. ನೀವು ಕೂಡ ಕವಿತೆ, ಕತೆ ಮೊದಲಾದವುಗಳನ್ನು ಬರೆದದ್ದುಂಟೆ? ಅಥವಾ ಮೊದಲಿನಿಂದಲೂ ನಿಮ್ಮ ಮನಸ್ಸು ಸಂಶೋಧನೆಯ ಕಡೆಗೆ ಒಲಿಯಿತೋ?

**ಜಿ. ವಿ. :** ಕನ್ನಡ ಸಾಹಿತ್ಯದ ಅಂದಿನ ಎಲ್ಲ ವಿದ್ಯಾರ್ಥಿಗಳಂತೆ ನಾನೂ ಕಾವ್ಯರಚನೆಯಲ್ಲಿ ಕೈಯಾಡಿಸಿದ್ದುಂಟು. ಒಮ್ಮೆ ಎಂ.ಎ. ತರಗತಿಯಲ್ಲಿ ಸ್ವರಚಿತ ಕವಿತೆಯೊಂದನ್ನು ಓದಿದಾಗ ಅಧ್ಯಾಪಕರು ಅದರ ಅರ್ಥ ವಿವರಿಸುವಂತೆ ಹೇಳಿದರು. ನಾನು ವಿವರಣೆ ನೀಡಿದ ಮೇಲೆ ಅವರು ''ನೀನು ಗದ್ಯದಲ್ಲಿ ಹೇಳಿದ ವಿವರಣೆಯೇ ಚೆನ್ನಾಗಿದೆ. ಗದ್ಯದ ಭಾಷೆ ಕೂಡ ಚೆನ್ನಾಗಿದೆ'' ಅಂದರು. ಈ ಮಾತನ್ನು ಕೇಳಿದ ಮೇಲೆ ಕಾವ್ಯದ ಬರವಣಿಗೆ ನನಗೆ ಮಾಡಿಸಿದ್ದಲ್ಲ ಎಂದು ಆ ವಿಚಾರ ಕೈಬಿಟ್ಟೆ. ಆದರೂ ಆಗಾಗ ಮಾಡಿದ ಕೆಲವು ಅನುವಾದಗಳು ನನ್ನ ಹಳೆಯ ಕಾಗದ ಪತ್ರಗಳ ರಾಶಿಯಲ್ಲಿ ಅಡಗಿವೆ.

ಮೂಲತಃ ನಾನು ಸಾಹಿತ್ಯ ವಿಮರ್ಶಕ. ನನ್ನ ಮೊದಲ ಪುಸ್ತಕ 'ಅನುಕಲ್ಪನೆ' ಎಂಬುದು. ಸಾಹಿತ್ಯದ ಅಧ್ಯಯನಕ್ಕೆ ನೆರವಾಗುವ ವಿಮರ್ಶನ ಗ್ರಂಥ. ಓದಿದವರು ಅದನ್ನು ತುಂಬ ಮೆಚ್ಚಿಕೊಂಡರು. ಅದಾದಮೇಲೆ ಕಾಲೇಜಿನ ಪಾಠಪ್ರವಚನ, ಪಠ್ಯೇತರ ಚಟುವಟಿಕೆಗಳು, ಜೊತೆಗೆ ಬೆಂಗಳೂರಿನ ಹಲವು ಕನ್ನಡ ಸಂಘಸಂಸ್ಥೆಗಳನ್ನು ಕಟ್ಟಿ ಬೆಳೆಸುವುದು, ಪ್ರೋತ್ಸಾಹಿಸುವುದು ನನ್ನ ಕಾರ್ಯವ್ಯಾಪ್ತಿಯಾಯಿತು.

## ಶ್ರೀಮತಿ ಲಕ್ಷ್ಮಿ ವೆಂಕಟಸುಬ್ಬಯ್ಯ ಅವರೊಂದಿಗೆ ಮನೆಮಾತು



ಚಿತ್ರ : ಕೆ. ಎಸ್. ಪಾರ್ಥಸಾರಥಿ

ಸಂದರ್ಶನ ಮುಗಿಯುವ ವೇಳೆಗೆ ಮಳೆ ಶುರುವಾಯಿತು. ಮಳೆ ಕಡಿಮೆಯಾದ ಮೇಲೆ ಹೋಗೋಣವೆಂದು ಮನೆಯಲ್ಲಿಯೇ ಉಳಿದೆ. ಅಮ್ಮನನ್ನು ಮಾತಾಡಿಸಲು ಊಟದ ಮನೆಗೆ ಹೋಗಿದ್ದೆ. ಏನು ಓದಿದ್ದೀಯ, ಮನೆ ಎಲ್ಲಿ, ನಿಮ್ಮ ತಂದೆ ತಾಯಿಗೆ ನೀವೆಷ್ಟು ಜನ ಮಕ್ಕಳು ಎಂದೆಲ್ಲ ವಿಚಾರಿಸಿಕೊಂಡರು. ಅವರ ಮೊಮ್ಮಗಳನ್ನು ನೆನಪಿಸಿಕೊಳ್ಳುತ್ತ, ''ಮೊಮ್ಮಗಳಿಗೆ ಮೊನ್ನೆ ಮದುವೆಯಾಯಿತು. ಅಮೇರಿಕಕ್ಕೆ ಹೋದಳು... ನಿನ್ನ ವಯಸ್ಸಿನವಳೇ'' ಎಂದು ಹೇಳಿದರು. ಮೊಮ್ಮಕ್ಕಳೆಲ್ಲ ಓದಿ ದೊಡ್ಡವರಾಗಿದ್ದಾರೆ; ಬೇರೆ ಬೇರೆ ಊರುಗಳಲ್ಲಿದ್ದಾರೆ, 'ಮೂರು ಜನ ಮರಿಮಕ್ಕಳಿದ್ದಾರಮ್ಮ ನನಗೆ' ಅಂತ ಖುಷಿಯಿಂದ, ಹೆಮ್ಮೆಯಿಂದ ಹೇಳಿದರು. ಇನ್ನಿಬ್ಬರು ಮಕ್ಕಳೂ ಬೆಂಗಳೂರಿನಲ್ಲಿಯೇ ಇದ್ದಾರೆ. ಹತ್ತಿರದಲ್ಲೇ ಮನೆ ಮಾಡಿಕೊಂಡಿದ್ದಾರೆ. ನೆನಪಿಸಿಕೊಂಡಾಗಲೆಲ್ಲ ಬಂದು ನೋಡಿಕೊಂಡು ಹೋಗುತ್ತಾರೆ ಅಂತ ತುಂಬ ತೃಪ್ತಿಯಿಂದ ತಿಳಿಸಿದರು.

ನಿಮಗೆ ಮದುವೆಯಾದದ್ದು ಯಾವಾಗ ಎಂದು ಕೇಳಿದೆ. ''ಹನ್ನೊಂದು ವರ್ಷಕ್ಕೇ ಮದುವೆ ಮಾಡಿದರು. ನಮ್ಮ ತಂದೆಯವರು ಅಡ್ವೊಕೇಟ್ ಆಗಿದ್ದರು. ಇವರು ನನಗಿಂತ ಹನ್ನೊಂದು ವರ್ಷಕ್ಕೆ ದೊಡ್ಡವರು'' ಎಂದು ನೆನಪಿಸಿಕೊಂಡರು.

''ಅಷ್ಟು ಚಿಕ್ಕ ವಯಸ್ಸಿಗೇ ಮದುವೆ ಮಾಡಿಬಿಟ್ರ! ನಿಮಗೆ ಅಡುಗೆ, ಮನೆಗೆಲಸ ಎಲ್ಲ ಬರುತ್ತಿತ್ತಾ?!''

''ಆಗೆಲ್ಲಾ ಎಳೆಯ ವಯಸ್ಸಿಗೇ ಮದುವೆ ಮಾಡುತ್ತಿದ್ದರಲ್ಲಮ್ಮ... ಬೇಗ ಮದುವೆ ಮಾಡಿದರೂ ತವರು ಮನೆಯಲ್ಲಿಯೇ ಹದಿನಾರು ವರ್ಷದವರೆಗೂ ಇರಿಸಿಕೊಂಡು ನಂತರ ಕಳುಹಿಸಿದರು. ಅತ್ತೆ ಮನೆಯಲ್ಲಿ ಅಡುಗೆ ಮಾಡುವವರಿದ್ದರು. ಮೊದಲಿಗೆ ಅತ್ತೆಯವರಿಗೆ ಸಣ್ಣಪುಟ್ಟ ಕೆಲಸ ಮಾಡಿಕೊಡುತ್ತಿದ್ದೆ, ಅಡುಗೆಯಲ್ಲಿ ಸಹಾಯ ಮಾಡುತ್ತಿದ್ದೆ. ಆಮೇಲೆ ನಿಧಾನವಾಗಿ ಕಲಿತುಕೊಂಡೆ'' ಎಂದು ಅವರ ಮದುವೆ, ಬಾಲ್ಯವನ್ನು ನೆನಪುಮಾಡಿಕೊಂಡರು.

ವೆಂಕಟಸುಬ್ಬಯ್ಯನವರು ಎಷ್ಟು ಲವಲವಿಕೆಯಿಂದ, ಚಟುವಟಿಕೆಯಿಂದ ಇದ್ದಾರೆ. ಅವರ ಆರೋಗ್ಯದ ಗುಟ್ಟೇನೆಂದು ಕೇಳಿದೆ. ''ಅವರು ಹೊರಗೆಲ್ಲಾ ವಾಕ್ ಹೋಗುತ್ತಾರೆ. ನನಗೇ ಸ್ವಲ್ಪ ಕಾಲುನೋವು. ಮನೆಯ ಸುತ್ತಲೂ ಆವರಣದಲ್ಲಿಯೇ ವಾಕ್ ಮಾಡ್ತೀನಿ'' ಎಂದವರು ವೆಂಕಟಸುಬ್ಬಯ್ಯನವರ ತಾಯಿಯನ್ನು ನೆನಪಿಸಿಕೊಳ್ಳುತ್ತಾ, ''ನಮ್ಮ ಅತ್ತೆಯವರು ೧೦೭ ವರ್ಷ ಬದುಕಿದ್ದರಮ್ಮ. ಕೊನೆಯವರೆಗೂ ಆರೋಗ್ಯವಾಗಿ ಚಟುವಟಿಕೆಯಿಂದಿದ್ದರು. ಒಂದು ವಾರ ಸ್ವಲ್ಪ ಸುಸ್ತೆಂದು ಮಲಗಿದ್ದರಷ್ಟೆ. ಕೊನೆಯ ದಿನ ಬೆಳಿಗ್ಗೆ ಮಾತು ಸ್ವಲ್ಪ ತೊದಲು ಬಂತು. ಸಂಜೆ ಹೋಗಿಬಿಟ್ಟರು'' ಅಂತ ಪ್ರೀತಿಯಿಂದ ಕಳೆದ ದಿನಗಳನ್ನು ಮೆಲುಕು ಹಾಕಿದರು.

''ಇವರನ್ನು ಕಾಣಲು ಮನೆಗೆ ಬರುವವರನ್ನೆಲ್ಲ ನೋಡಿ ಅತ್ತೆಯವರಿಗೆ ತುಂಬ ಸಂತೋಷವಿತ್ತು. 'ಎಷ್ಟು ದೊಡ್ಡ ಮನುಷ್ಯನಾಗಿಬಿಟ್ಟೆಯಪ್ಪ, ನಿನ್ನನ್ನು ಭೇಟಿಯಾಗಲು ಎಷ್ಟೊಂದು ಮಂದಿ ಬರುತ್ತಾರೆ! ಎಷ್ಟೊಂದು ಮಾತಾಡ್ತೀಯ, ಏನೆಲ್ಲ ತಿಳಿದುಕೊಂಡಿದ್ದೀಯ' ಅಂತ ಹೇಳುತ್ತಿದ್ದರು. ಅವರಿರುವಾಗ ವಿಡಿಯೋ ರೆಕಾರ್ಡ್ ಮಾಡಿಕೊಂಡಿದ್ದೆವು. ಅದು ಇದೆ.'' ಅವರ ಕಣ್ಣುಗಳಲ್ಲಿ ತಮ್ಮ ಅತ್ತೆಯವರ ಮತ್ತು ವೆಂಕಟಸುಬ್ಬಯ್ಯನವರ ಬಗೆಗಿನ ಪ್ರೀತಿ, ಅಭಿಮಾನ, ಗೌರವ ತೋರುತ್ತಿತ್ತು.

ಮಳೆ ಕಡಿಮೆಯಾಯಿತು. ನಾನು ಹೊರಡಲು ಅನುವಾದೆ. ಇಬ್ಬರ ಪಾದಗಳಿಗೂ ನಮಸ್ಕರಿಸಿ ಹೊರಟೆ. ಶ್ರೀ ವೆಂಕಟಸುಬ್ಬಯ್ಯನವರು, ''ಕೈಹಿಡಿದ ಸಂಕಲ್ಪ ನೆರವೇರಲಿ'' ಅಂತ ಆಶೀರ್ವದಿಸಿದರು. ಅಮ್ಮ, ''ನಿನ್ನ ಮನೋಭಿಲಾಷೆಯೆಲ್ಲ ಈಡೇರಲಿ'' ಅಂತ ಹರಸಿದರು. ನನಗೆ ಅನಿರೀಕ್ಷಿತವಾಗಿ ದೊರೆತ ಹಿರಿಯರ ಆಶೀರ್ವಾದಕ್ಕೆ ಕಣ್ಣುಗಳು ತುಂಬಿಬಂದವು. ಇವರನ್ನು ಕಾಣುವ, ಮಾತಾಡಿಸುವ ಅವಕಾಶ ಸಿಕ್ಕಿದ್ದಕ್ಕೆ ತುಂಬ ಖುಷಿಯಾಯಿತು.

ನಿನ್ನ ಕೋಟು ತೊಟ್ಟುಕೊ, ಹುಷಾರಾಗಿ ಹೋಗಮ್ಮ, ನಿಧಾನವಾಗಿ ಗಾಡಿ ಓಡಿಸಿಕೊಂಡು ಹೋಗು ಅಂತ ಇಬ್ಬರೂ ಮತ್ತೆ ಮತ್ತೆ ಹೇಳಿ ಬಾಗಿಲವರೆಗೂ ಬಂದು ಬೀಳ್ಕೊಟ್ಟರು. ಸಂದರ್ಶನ, ನನಗೆ ಲಭಿಸಿದ ಆ ದಿನದ ಸದವಕಾಶವನ್ನು ಮೆಲುಕುಹಾಕುತ್ತಾ ನನ್ನ ಗಾಡಿ ಓಡಿಸಿಕೊಂಡು ಮನೆಗೆ ಬಂದೆ. ಮಳೆಯಲ್ಲಿ ಜಯನಗರದಿಂದ ಇಸ್ರೋ ಲೇಔಟ್‌ನವರೆಗೂ ದಾರಿ ಸವೆದದ್ದು ತಿಳಿಯಲೇ ಇಲ್ಲ.

ಸಂದರ್ಶನ, ಸಹನ

ಹೆಚ್ಚೇನನ್ನೂ ಬರೆಯಲಾಗಲಿಲ್ಲ.

೧೯೫೬ರಲ್ಲಿ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ಕನ್ನಡ ನಿಘಂಟು ಸಮಿತಿಯ ಅಧ್ಯಕ್ಷರಾಗಿದ್ದರು. ಆಗಿನಿಂದಲೂ ನಿಘಂಟು ಸಭೆಗಳಿಗೆ ಹೋಗುತ್ತಿದ್ದೆ. ಒಂದು ಬಾರಿ 'ನಿನಗೆ ಈ ಬಗೆಯ ಕೆಲಸದಲ್ಲಿ ಆಸಕ್ತಿ ಇದೆಯೇ ?' ಎಂದು ಕೇಳಿದರು. ಹೌದೆಂದೆ. 'ಆಗಾಗ ಮನೆಗೆ ಬಂದು ಹೋಗುತ್ತಿರು' ಎಂದರು. ಹೋಗಿ ಬರುತ್ತಿದ್ದೆ. ವೈದಿಕ ನಿಘಂಟು, ಯಾಸ್ಕರ ನಿರುಕ್ತ, ಆಕ್ಸ್‌ಫರ್ಡ್ ಡಿಕ್ಷನರಿ ಮೊದಲಾದವುಗಳನ್ನು ಅವಲೋಕಿಸುತ್ತಿರುವಂತೆ ಹೇಳಿದರು. ಹೀಗೆ ಬೆಳೆಯಿತು ನನ್ನ ಮತ್ತು ನಿಘಂಟುಗಳ ನಂಟು.

**ಹೊ :** ಸಾರ್, ನೀವು ಕನ್ನಡ ನಿಘಂಟಿನ ರಚನೆಯಲ್ಲಿ ಮೊದಲಿನಿಂದಲೂ ತೊಡಗಿಸಿಕೊಂಡವರು, ಸ್ವಲ್ಪ ಹೆಚ್ಚು ಕಡಿಮೆ ನಿಘಂಟಿನ ಕೆಲಸ ಮುಗಿಯುವವರೆಗೂ ಇದ್ದವರು ಎಂದು ಕೇಳಿದ್ದೇನೆ. ನಿಘಂಟಿನಲ್ಲಿ ಶಬ್ದಾರ್ಥಗಳ ಸೇರ್ಪಡೆಯ ವಿಧಾನವನ್ನು ಸ್ವಲ್ಪ ವಿವರಿಸುವಿರಾ ? ಹಾಗೆಯೇ ನಿಘಂಟಿನ ಎಲ್ಲ ಸಂಪುಟಗಳು ಮುದ್ರಣವಾಗಿ ಬಿಡುಗಡೆಯಾಗುವ ಮುಂಚೆಯೇ ನೀವು ಸಮಿತಿಯಿಂದ ಹೊರಬಂದ ಕಾರಣವನ್ನು ತಿಳಿಸಬಹುದಲ್ಲ ?

**ಜಿ. ವಿ. :** ೧೯೭೩ರಲ್ಲಿ ನಾನು ಕಾಲೇಜು ಕೆಲಸದಿಂದ ನಿವೃತ್ತನಾದ ಸಮಯದಲ್ಲಿ ನಿಘಂಟಿನ ಪ್ರಧಾನ ಸಂಪಾದಕ ಹಾಗೂ ಸಮಿತಿಯ ಅಧ್ಯಕ್ಷನಿಗಾಗಿ ಹುಡುಕುತ್ತಿದ್ದರು. ಆಸಕ್ತರು ಅರ್ಜಿ ಹಾಕಿಕೊಳ್ಳಬಹುದೆಂದು ಜಾಹೀರಾತು ಕೊಟ್ಟರೆ ಅರ್ಜಿಗಳೇ ಬರಲಿಲ್ಲ. ಆ ವೇಳೆಗೆ ಶ್ರೀಕಂಠಯ್ಯನವರು ಇರಲಿಲ್ಲ; ಡಿ. ಎಲ್. ಎನ್. ಮೈಸೂರಿನಲ್ಲಿದ್ದರು; ಮರಿಯಪ್ಪ ಭಟ್ಟರು ನನ್ನ ಕೈಲಾಗುವುದಿಲ್ಲ ಎಂದರು. ಕೆ. ಪಿ. ರಾಘವಾಚಾರ್ ಆರು ತಿಂಗಳಿದ್ದು ಬಿಟ್ಟುಬಿಟ್ಟರು. ಯಾರೂ ಜವಾಬ್ದಾರಿ ತಗೋಳೋರೆ ಇರಲಿಲ್ಲ. ಒಂದು ಮೀಟಿಂಗ್‌ನಲ್ಲಿ ಮರಿಯಪ್ಪ ಭಟ್ಟರು 'ಇದ್ದಾರಲ್ಲ, ಹಳೆಹುಲಿ ವೆಂಕಟಸುಬ್ಬಯ್ಯ; ಅವರನ್ನೇ ಹಾಕಬೇಕು' ಎಂದರಂತೆ. ಹೀಗೆ ನನಗೆ 'ಹಳೆಹುಲಿ' ಎಂಬ ವಿಶೇಷಣವೂ ಅದರ ಜೊತೆಗೆ ನಿಘಂಟು ಸಮಿತಿಯ ಅಧ್ಯಕ್ಷ ಹಾಗೂ ಪ್ರಧಾನ ಸಂಪಾದಕ ಪದವಿಯೂ ಅಂಟಿಕೊಂಡಿತು.

ನಿಘಂಟಿನಲ್ಲಿ ಸೇರಿಸುವ ಶಬ್ದಾರ್ಥ ನಿರ್ಣಯಕ್ಕೆ ಸಂಬಂಧಿಸಿದ ಒಂದು ಪ್ರಸಂಗ ಹೇಳುತ್ತೇನೆ. ನಿಮಗೆ ಅದರ ಸ್ವಾರಸ್ಯ ಗೊತ್ತಾಗಬಹುದು. ನಿಘಂಟು ಸಮಿತಿಯ ಸಭೆಯಲ್ಲಿ ಪ್ರತಿಯೊಂದು ಶಬ್ದಾರ್ಥವನ್ನೂ ಚರ್ಚೆ ಮಾಡುತ್ತಿದ್ದೆವು. ಒಂದು ಸಭೆಗೆ ನಾನು ಸ್ವಲ್ಪ ತಡವಾಗಿ ಹೋದೆ. ಅಷ್ಟರಲ್ಲಿ ತಯಾರಾದ ಪಟ್ಟಿಯಲ್ಲಿ 'ಖುಬುಕಿ' ಎಂಬ ಒಂದು ಪದ ಸೇರಿಕೊಂಡಿತ್ತು. ನಾನು ಹೋದಮೇಲೆ ಆವರೆಗೆ ತಯಾರಾದ ಪಟ್ಟಿಯನ್ನು ಓದಿ ಹೇಳಿದರು. ಅಲ್ಲಿ 'ಖುಬುಕಿ', ಇದು ಪರ್ಷಿಯನ್ ಭಾಷೆಯಿಂದ ಬಂದ ಪದ. ಒಂದು ಪ್ರಾಣಿ ಎಂದು ಅರ್ಥ ನಮೂದಿಸಿದ್ದರು. ನನಗೇಕೋ ಅದು ಒಪ್ಪಿಗೆಯಾಗಲಿಲ್ಲ. ಪ್ರಯೋಗವನ್ನು ಓದಿಹೇಳಿ ಎಂದೆ. 'ಆ ಖುಬುಕಿಯೊಂದು ತನ್ನ ಮರಿಗಳಂ ಗೂಡಿನೊಳ್...' ಎಂಬ ಪ್ರಯೋಗ ಹೇಳಿದರು. ತಕ್ಷಣ ನಾನು ಆ ಪದವನ್ನು ಹೊಡೆದುಹಾಕಿ ಎಂದಾಗ, ಸಿದ್ಧಯ್ಯ ಪುರಾಣಿಕರು ಪರ್ಷಿಯನ್ ಭಾಷೆಯಲ್ಲಿ 'ಖುಬುಕ್' ಶಬ್ದವಿರುವುದಾಗಿ ಸಮರ್ಥನೆ ಕೊಟ್ಟರೂ ನಾನು ಬಿಡಲಿಲ್ಲ. ನೀವು ಓದಿದ ಪ್ರಯೋಗದಲ್ಲಿ ಅಚ್ಚಿನ ದೋಷವಿದೆ; ವಾಸ್ತವವಾಗಿ 'ಆ ಖುಬುಕಿ' ಅಲ್ಲ; 'ಆಖುಬುಕಿ' ಇರಬೇಕು. ಸಂಸ್ಕೃತದಲ್ಲಿ ಆಖು ಎಂದರೆ ಇಲಿ; ಬುಕ್ ಎಂಬುದು ಭುಜ್ = 'ತಿನ್ನು'ವಿನಿಂದ ಬಂದಿದೆ; ಆಖುಭುಕ್ ಎಂದರೆ ಇಲಿಯನ್ನು ತಿನ್ನುವಂತಹುದು; ಇಲಿಯನ್ನು ತಿನ್ನುವಂತಹವು ಕಾಗೆ ಮತ್ತು ಬೆಕ್ಕು; ಪ್ರಯೋಗದಲ್ಲಿ 'ಗೂಡಿನೊಳ್' ಎಂದಿರುವುದರಿಂದ ಅದು ಬೆಕ್ಕು ಆಗಲಿಕ್ಕಿಲ್ಲ, ಕಾಗೆ ಇರಬೇಕು. 'ಭುಕ್' ಶಬ್ದಕ್ಕೆ ಕನ್ನಡದ ಸ್ತ್ರೀವಾಚಕ ಪ್ರತ್ಯಯ 'ಇ' ಸೇರಿ 'ಭುಕಿ' ಆಗಿದೆ; ಆದ್ದರಿಂದ 'ಆಖುಭುಕಿ' ಎಂದರೆ ಹೆಣ್ಣುಕಾಗೆ ಇರಬೇಕು ಎಂದು ವಿವರಿಸಿದೆ. ಎಲ್ಲರೂ 'ಅಯ್ಯೋ ರಾಮ' ಎಂದು ತಲೆ ತಲೆ ಚಚ್ಚಿಕೊಂಡರು ! (ಈಗ ತಲೆತಲೆ ಚಚ್ಚಿಕೊಳ್ಳುವ ಸರದಿ ಸಂದರ್ಶಕರದಾಯಿತು !)



ನಿಘಂಟಿನ ರಚನೆ ಬಹು ಎಚ್ಚರಿಕೆಯಿಂದ ಮಾಡಬೇಕಾದ ಕೆಲಸ. ಸುಮಾರು ಇಪ್ಪತ್ತು ವರ್ಷಗಳ ಕಾಲ ಸತತವಾಗಿ ನಾನು ದುಡಿದುದು ನಿಜ. ನನಗೆ ಎ. ಆರ್. ಕೃಷ್ಣಶಾಸ್ತ್ರಿಗಳ ಜೊತೆಗೆ ಅಂತರರಾಷ್ಟ್ರೀಯ ಖ್ಯಾತಿಯ ವಿದ್ವಾಂಸರಾದ ಎ. ಎನ್. ಉಪಾಧ್ಯೆಯವರ ಬೆಂಬಲವೂ ಇತ್ತು. ಪ್ರೊ॥ ಡಿ. ಎಲ್. ಎನ್. ಅವರ ನೇತೃತ್ವದಲ್ಲಿ ಮೊದಲ ಸಂಪುಟ ಸಿದ್ಧವಾಯಿತು. ಕಛೇರಿಯ ಕೆಲಸಗಾರರಲ್ಲಿ ಹಲವರು ತಮ್ಮ ಕೆಲಸದಲ್ಲಿ ತುಂಬ ಶ್ರದ್ಧೆ ವಹಿಸಿದುದು ಮಾತ್ರವಲ್ಲದೆ, ಶಬ್ದಗಳಿಗೆ ಅಂತಿಮ ರೂಪ ಕೊಡುವ ಚರ್ಚೆಯಲ್ಲಿ ಭಾಗವಹಿಸಿ ತಮ್ಮ ಜ್ಞಾನವನ್ನು ಹೆಚ್ಚಿಸಿಕೊಂಡರು. ಸರ್ಕಾರವೂ ಉದಾರವಾಗಿ ಹಣದ ಸಹಾಯ ಮಾಡುತ್ತಾ ಬಂತು. ತೀ.ನಂ.ಶ್ರೀ.ಯವರ ಮುಂದಾಳತ್ವದಲ್ಲಿ ೬೬ ಪುಟಗಳ ಮೊದಲ 'ಫ್ಯಾಸಿಕ್ಯೂಲ್' (Fascicule) ಅಚ್ಚಿಗೆ ಹೋಗಿತ್ತು; ಏಳನೇ ಸಂಪುಟ ಮುದ್ರಣಕ್ಕೆ ಸಿದ್ಧವಾಗಿತ್ತು. ಎಂಟನೇ ಸಂಪುಟದಲ್ಲಿ ನೂರಿನ್ನೂರು ಪುಟಗಳ, ಮೂರು ಅಕ್ಷರಗಳ ಕೆಲಸ ಸ್ವಲ್ಪ ಬಾಕಿ ಇತ್ತು...

ಇದ್ದಕ್ಕಿದ್ದಂತೆ ಆಗಿನ ಪರಿಷತ್ತಿನ ಅಧ್ಯಕ್ಷರು ಒಂದು ದಿನ ನನ್ನನ್ನು ಕರೆಸಿ, ''ವೆಂಕಟಸುಬ್ಬಯ್ಯ, ನೀವು ಪ್ರತಿದಿನ ನಿಘಂಟಿನ ಕಛೇರಿಗೆ ಬರುತ್ತಿಲ್ಲ; ನಿಘಂಟಿನ ಕೆಲಸ ಸರಿಯಾಗಿ ನಡೆಯುತ್ತಿಲ್ಲ'' ಎಂದು ಆಕ್ಷೇಪಿಸಿದರು. ಹಾಗೆ ನೋಡಿದರೆ, ಯಾವ ಸಂಪಾದಕರೂ ಪ್ರತಿದಿನ ಕಛೇರಿಗೆ ಬರುತ್ತಿರಲಿಲ್ಲ, ಹೋಗುತ್ತಿದ್ದವ ನಾನೊಬ್ಬನೆ. ಕಛೇರಿಯಲ್ಲಿ ಕೆಲಸವಿಲ್ಲದಿದ್ದಾಗ ಮನೆಯಲ್ಲೇ ಕುಳಿತು ನಿಘಂಟಿಗೆ ಸಂಬಂಧಪಟ್ಟ ಕೆಲಸವನ್ನೇ ಮಾಡುತ್ತಿದ್ದೆ... ಅಧ್ಯಕ್ಷರ ಮಾತಿನಿಂದ ನನಗೆ ತುಂಬ ಮುಜುಗರವಾಯಿತು. ಈ ಕೆಲಸ ಪೂರ್ತಿಯಾಗುವ ಮುಂಚೆ ಹೇಗಾದರೂ ಮಾಡಿ ಈ ಪುಣ್ಯಾತ್ಮನನ್ನು ತೆಗೆದು ಹಾಕಬೇಕೆಂಬ ತರದೂದು ನಡೆದಿರುವಂತೆ ತೋರಿತು.

ಹಾಗೆ ನೋಡಿದರೆ ಪರಿಷತ್ತಿನ ಅಧ್ಯಕ್ಷರಿಗೆ ನನ್ನನ್ನು ತೆಗೆದುಹಾಕುವ ಅಧಿಕಾರವಿರಲಿಲ್ಲ; ಆದರೆ ಅವರ ಮಾತಿನಿಂದ ನನಗೆ ಬೇಜಾರಾಯಿತು. 'ಸಂವಿಧಾನಾತೀತ ಅಧಿಕಾರ ಬಳಸಿ ತೆಗೆದುಹಾಕುವ ಹುನ್ನಾರ ನಡೆಸಿದ್ದಾರೆ' ಎಂದು ರಾಜಿನಾಮೆ ಪತ್ರ ಬರೆದುಕೊಟ್ಟು ಹೊರಟುಬಂದುಬಿಟ್ಟೆ. ಮತ್ತೆ ಆ ಕಡೆ ಮುಖ ಹಾಕಲಿಲ್ಲ.

**ಹೊ :** ಆಮೇಲೇನಾಯಿತು ?

**ಜಿ. ವಿ. :** ಆಗುವುದಿನ್ನೇನು ! ಬಿಟ್ಟು ಹೊರಟು ಹೋದರು, ತುಂಬ ವಿಷಾದವಾಗಿದೆ – ಎಂದು ಷರಾ ಬರೆದರಂತೆ. ನಾನು ಬಿಟ್ಟಮೇಲೆ ಎರಡು ಮೀಟಿಂಗ್‌ಗಳಾದವು. ನಿಘಂಟಿನ ಬಿಡುಗಡೆ ಹೇಗೆ ನಡೆಯಬೇಕೆಂಬ ಬಗೆಗೆ ಯೋಜನೆ ಸಿದ್ಧಪಡಿಸಿದ್ದೆ; ಅಖಿಲ ಭಾರತ ನಿಘಂಟುಕಾರರ ಸಮ್ಮೇಳನ ನಡೆಸಬೇಕೆಂದು ಯೋಚಿಸಿದ್ದೆ. ನಾನು ಗುರುತು ಹಾಕಿಟ್ಟ ಟಿಪ್ಪಣಿಗಳನ್ನೂ ಹರಿದು ಕಸದ ಬುಟ್ಟಿಗೆ ಹಾಕಿದರಂತೆ. ಮುಂದಿನ ಅಧ್ಯಕ್ಷರ ಕಾಲದಲ್ಲಿ ಕಡೆಯ ಸಂಪುಟವನ್ನು ಪರಿಷತ್ತಿನ ಒಂದು ಮೂಲೆಯಲ್ಲಿ ಬಿಡುಗಡೆ ಮಾಡಿಸಿದರು. ಒಂದು ರೀತಿಯಲ್ಲಿ ನಿಘಂಟು ಅಪೂರ್ಣವಾಗಿ ಉಳಿಯಿತು. ಏಕರೂಪತೆ Uniformity – ಬರಲಿಲ್ಲ.

ಹೊ: ಸಾರ್, ಸದ್ಯದ ಶಿಕ್ಷಣ ವ್ಯವಸ್ಥೆಯ ಬಗೆಗೆ, ...ಮ್ಮ ಅನಿಸಿಕೆಗಳನ್ನು ತಿಳಿಯಬೇಕಾಗಿದೆ. ಈಗ ಪ್ರೈಮರಿ ...ಒಂದನೇ ತರಗತಿ ಯಿಂದಲೇ ಇಂಗ್ಲಿಷ್ ಕಲಿಸಬೇಕೆಂಬ ...ಗೆ ವಾದವಿವಾದಗಳು ನಡೆಯುತ್ತ ಇರುವುದು ನಿಮ್ಮ ...ಮನಕ್ಕೆ ಬಂದಿರಬಹುದು. ಈ ವಿಚಾರದಲ್ಲಿ ...ಮಗೇನೆನಿಸುತ್ತದೆ ?

ಜಿ. ವಿ. : ಈ ಕುರಿತು ನನ್ನ ಅಭಿಪ್ರಾಯವನ್ನು ...ಗಾಗಲೇ ಡೆಕನ್ ಹೆರಾಲ್ಡ್ ಪತ್ರಿಕೆಯ ಮೂಲಕ ...ಸಿದ್ದೇನೆ. ಈಗ ಸರ್ಕಾರ ಏನು ಮಾಡಲು ...ಹೊರಟಿದೆಯೋ ಅದು ತಪ್ಪು ನಿರ್ಧಾರ. ಸರ್ಕಾರವು ...ಣತಜ್ಞರೊಡನೆ ಸಮಾಲೋಚನೆ ನಡೆಸಿ, ಪ್ರಯೋಗ ...ವನ್ನು ಮಾಡಿನೋಡಿ ಅನಂತರ ನಿರ್ಧಾರಕ್ಕೆ ...ಬರಬೇಕಾಗಿತ್ತು. ಒಂದನೇ ತರಗತಿಯಿಂದ ಇಂಗ್ಲಿಷ್ ...ಕಲಿಸಲು ಹೊರಟರೆ ಅದನ್ನು ಯಾವ ಭಾಷೆಯ ...ಮೂಲಕ ಕಲಿಸುತ್ತೀರಿ ? ನಮ್ಮಲ್ಲಿ ಕನ್ನಡ ಬೋಧನೆಯೇ ...ಯಾಗಿ ನಡೆಯುತ್ತಿಲ್ಲ; ಇನ್ನು ಸರಿಯಾದ ಇಂಗ್ಲಿಷ್ ಕಲಿಸಬಲ್ಲವರು ಎಲ್ಲಿದ್ದಾರೆ ? ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಸಹೊರಟರೆ ಕನ್ನಡದ ಗತಿ ಏನಾಗುತ್ತೆ ? ...ಕ್ಕಳು ಮನೆಯಲ್ಲಿ ಅರಬರೆ ಕನ್ನಡ-ಇಂಗ್ಲಿಷ್ ಮಾತನಾಡಲಾರಂಭಿಸುತ್ತಾರೆ. ...llection ಎಂಬ ಪದವಿದೆ; ಮನೆಯಲ್ಲಿ 'ಅದನ್ನು Collect ಮಾಡು ಅನ್ನುತ್ತಾರೆ'; ...ಮೇಲೆ Collect ಅನ್ನೋದೇ ಕನ್ನಡ ಪದ ಅಂದುಕೊಳ್ಳುತ್ತಾರೆ, ಅಷ್ಟೆ.

ಹೊ: ಇಂಗ್ಲಿಷ್ ಕಲಿಯುವುದರಿಂದ ಕೆಲಸಗಳು ಸುಲಭವಾಗಿ ಸಿಗುತ್ತೆ; ...ದರಿಂದ ಗ್ರಾಮೀಣ ಜನ, ಕೆಳವರ್ಗಗಳ ಜನರೂ ಮೇಲೆ ಬರುವುದು ...ಧ್ಯವಾಗುತ್ತದೆ ಅಂತಾರಲ್ಲ!

ಜಿ. ವಿ. : ಗ್ರಾಮೀಣ ಜನರಿಗೆ, ಕೆಳವರ್ಗದ ಜನರಿಗೆ ಮೇಲೆ ಬರ ಬೇಕೆಂಬ ...ಕಾಂಕ್ಷೆಗಳು ಇರುವುದು ಖಂಡಿತ ತಪ್ಪಲ್ಲ. ಆದಮಾತ್ರಕ್ಕೆ ಒಂದನೇ ತರಗತಿಯಿಂದ ...ಇಂಗ್ಲಿಷ್ ಕಲಿಸಿದರೆ ಕೆಲಸಗಳು ಸಿಕ್ಕುತ್ತವೆಯೇ? ಎಲ್ಲಿ ಎಂಥ ಕೆಲಸ? ...ಎಂಜನಿಯರಿಂಗ್, ಮೆಡಿಸಿನ್, ಕಂಪ್ಯೂಟರ್ ತಂತ್ರ ಕಲಿಯಲು ಇಂಗ್ಲಿಷ್ ಬೇಕು, ...ಪ್ಪುತ್ತೇನೆ. ಅದಕ್ಕಾಗಿ ಹೈಸ್ಕೂಲಿನಿಂದ ಇಂಗ್ಲಿಷ್ ಕಲಿಸಿದರೆ ಸಾಕು.

ಇನ್ನು ಗ್ರಾಮೀಣ ಜನ ಕೇಳುತ್ತಿರುವುದು ನಮ್ಮೂರಿಗೆ ಶಾಲೆ ಬೇಕು, ಶಾಲೆಗೆ ಕಟ್ಟಡ ...ಬೇಕು, ಒಂದು ಕಡೆ ಕೆಲವಾದರೂ ವರ್ಷ ಕಾಯಂ ಆಗಿ ನಿಲ್ಲುವ ಉಪಾಧ್ಯಾಯರು ...ಬೇಕು ಎಂದು. ಇದನ್ನು ರಾಜಕಾರಣಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನಿಸಿ ...ಕೊಳ್ಳುತ್ತಿದ್ದಾರೆ ಅಷ್ಟೆ.

ಹೊ: ಈಗ ಹೇಗೂ ಮೂರನೇ ತರಗತಿಯಿಂದಲೋ, ನಾಲ್ಕನೇ ತರಗತಿ ...ಯಿಂದಲೋ ಇಂಗ್ಲಿಷ್ ಕಲಿಸಲಾರಂಭಿಸುತ್ತಿದ್ದಾರೆ; ಕೆಲವು ವರ್ಷ ಮುಂಚಿನಿಂದಲೇ ...ಆರಂಭಿಸುವುದರಲ್ಲಿ ತಪ್ಪೇನು ?

ಜಿ. ವಿ. : ಆಗಲೇ ಹೇಳಿದೆನಲ್ಲ, ಅದರಿಂದ ಅತ್ತ ಇಂಗ್ಲಿಷ್ ಬರುವುದಿಲ್ಲ, ಇತ್ತ ಕನ್ನಡವೂ ಬರುವುದಿಲ್ಲ. ಇಷ್ಟರ ಮೇಲೂ ನಿಮಗೆ ಹಳ್ಳಿಗಾಡು ಜನರ ಮೇಲೆ ನಿಜವಾದ ಕಾಳಜಿಯಿದ್ದರೆ, ಗ್ರಾಮೀಣ ಪ್ರದೇಶದ ಹತ್ತು ಶಾಲೆಗಳನ್ನು ಆರಿಸಿಕೊಂಡು ಪ್ರಯೋಗ ಮಾಡಿನೋಡಿ, ಯಶಸ್ಸು ಕಂಡರೆ ಮಿಕ್ಕ ಕಡೆಗಳಿಗೆ ವಿಸ್ತರಿಸಿ, ನನ್ನದೇನೂ ಅಭ್ಯಂತರವಿಲ್ಲ.



ಹೊ: ಕನ್ನಡಕ್ಕೆ ಸಂಬಂಧಿಸಿದ ಮತ್ತೊಂದು ಪ್ರಶ್ನೆ. ಮಾನ್ಯ ಮಂತ್ರಿಗಳೊಬ್ಬರು ಸಾರ್ವಜನಿಕ ಸಭೆಯಲ್ಲಿ 'ಟಿಪ್ಪು ಕನ್ನಡ ದ್ರೋಹಿ' ಎಂದು ಘೋಷಿಸಿದರೆಂಬ ಮಾತನ್ನೆತ್ತಿಕೊಂಡು ವಿದ್ವಾಂಸರಲ್ಲಿ ಬಿರುಸಿನ ಚರ್ಚೆ ನಡೆಯುತ್ತಿದೆ. ಕನ್ನಡದ ಬಗೆಗೆ ಆರಂಭವಾದ ಚರ್ಚೆಯು ಕೋಮುವಾದದ ಕಡೆಗೂ ತಿರುಗುತ್ತಿದೆಯಷ್ಟೆ. ಈ ಬಗೆಗೆ ನೀವು ಹೇಳುವುದೇನಾದರೂ ಇದೆಯೇ ?

ಜಿ. ವಿ. : ನನ್ನನ್ನು ಕೇಳಿದರೆ ಈ ಚರ್ಚೆ ತೀರ ಅಪ್ರಸ್ತುತ. ಟಿಪ್ಪು ಸುಲ್ತಾನ್ ಒಬ್ಬನೇ ಏಕೆ? ಆ ಕಾಲದ ರಾಜಶಾಹಿಯಾಗಲಿ, ಸುಲ್ತಾನ್‌ಶಾಹಿಯಾಗಲಿ, ವಸಾಹತುಶಾಹಿಯಾಗಲಿ ದೇಶವನ್ನಾಳುವವರು ತಮ್ಮ ತಮ್ಮ ಭಾಷೆಗಳ ಮೂಲಕ ಆಡಳಿತ ನಡೆಸುವುದು (ತೀರ ಅನಿವಾರ್ಯವಾಗಿದ್ದಾಗ ಅಲ್ಪಸ್ವಲ್ಪ ಸ್ಥಳೀಯ ಭಾಷೆಗಳನ್ನು ಬಳಸಬಹುದು ಅಷ್ಟೆ), ತಮ್ಮ ಜನರನ್ನು ಪ್ರೋತ್ಸಾಹಿಸುವುದು ಚರಿತ್ರೆಯಲ್ಲಿ ಉದ್ದಕ್ಕೂ ಕಂಡುಬರುವ ಸಂಗತಿ. ಟಿಪ್ಪು ನಾಣ್ಯಗಳ ಮೇಲೆ ಪರ್ಷಿಯನ್ ಭಾಷೆ ಅಚ್ಚು ಹಾಕಿಸಿದ್ದು, ಶಾಸನಗಳನ್ನು ಕೊರೆಸಿದ್ದು, ಇಂಗ್ಲಿಷ್‌ರನ್ನು ಎದುರಿಸುವ ಸಲುವಾಗಿ ಪೋರ್ಚುಗೀಸ ರೊಡನೆಯೊ, ಫ್ರೆಂಚರೊಡನೆಯೊ ವ್ಯವಹಾರ ಮಾಡಿದ್ದು – ಈ ಎಲ್ಲ ವಿಚಾರಗಳನ್ನೂ ಈಗ ಬೆದಕುವುದರಿಂದ ದೇಶದ ಅಥವಾ ಭಾಷೆಯ ಹಿತಕ್ಕೆ ಯಾವ ಪ್ರಯೋಜನವಾಗುತ್ತದೆ ? ಇದಕ್ಕೆ ಬದಲಾಗಿ ಕನ್ನಡಕ್ಕೆ ಈಗ ನಾವೇನು ಮಾಡಬಲ್ಲೆವು ಎಂಬುದನ್ನು ವಿಚಾರ ಮಾಡುವುದೊಳ್ಳೆಯದು. ಇನ್ನು ಭಾಷೆಗೂ ಮತಧರ್ಮಕ್ಕೂ ಗಂಟುಹಾಕು ವುದು ತುಂಬ ಅಪಾಯಕಾರಿ. ಇದರಿಂದ ಕನ್ನಡದ ಹಿತಸಾಧನೆಯಂತೂ ಆಗುವುದಿಲ್ಲ.

ಹೊ: ತಾವು ದೀರ್ಘಕಾಲ ಕನ್ನಡ ಸಾಹಿತ್ಯದ ಅಧ್ಯಯನ, ಅಧ್ಯಾಪನ, ಸಂಶೋಧನೆಗಳಲ್ಲಿ ತೊಡಗಿದವರು. ಹೊಸಕಾಲದ ಕನ್ನಡ ಸಾಹಿತ್ಯ, ಸಾಹಿತ್ಯ ವಿಮರ್ಶೆ ಗಳಲ್ಲಿ ವ್ಯಾಪಕವಾಗಿರುವ ಇಂಗ್ಲಿಷ್ ಪ್ರಭಾವದ ಬಗೆಗೆ ತಮಗೇನನಿಸುತ್ತದೆ ?

ಜಿ. ವಿ. : ಈಚಿನ ಕಾಲದ ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷಿನ ಪ್ರಭಾವ ಹೆಚ್ಚಾಗಿದೆ ಎಂಬುದು ಎಲ್ಲರಿಗೂ ಗೊತ್ತೇ ಇರುವ ಸಂಗತಿ. ಕೆಲವು ವೇಳೆ ಇದು ಸಹಜವಾಗಿದ್ದರೆ ಮತ್ತೆ ಕೆಲವು ವೇಳೆ ಲೇಖಕರು ತಮ್ಮ ಮೇಲೆ ಪಾಶ್ಚಾತ್ಯ ಪ್ರಭಾವವನ್ನು ಆರೋಪಿಸಿ ಕೊಂಡು ಬರೆಯುತ್ತಾರೆ. ಇನ್ನು ನಮ್ಮ ವಿಮರ್ಶೆ ಅಡ್ಡದಾರಿ ಹಿಡಿದುದೇಕೆಂದರೆ ನಮ್ಮಲ್ಲಿ ಸಾಹಿತ್ಯ ವಿಮರ್ಶೆಯನ್ನು ಆರಂಭಿಸಿದವರು, ಕೆಲವೊಂದು ವಿಮರ್ಶೆಯ ಮಾದರಿಗಳನ್ನು ರೂಪಿಸಿದವರು ಇಂಗ್ಲಿಷ್ ಸಾಹಿತ್ಯ ಮತ್ತು ವಿಮರ್ಶೆಗಳನ್ನು ಹೆಚ್ಚಾಗಿ ಓದಿಕೊಂಡಂಥವರು. ಹಿಂದಿನ ಕಾಲದ ನಮ್ಮ ವಿಮರ್ಶೆಯಲ್ಲಿ ಒಂದು ಕೃತಿಯ 'ರಸಸ್ಥಾನ'ಗಳನ್ನು ಮುಖ್ಯವಾಗಿ ಗಮನಿಸುತ್ತಿದ್ದರು. ಈಗ 'ರಸ' ಎಂಬ ಪಾರಿಭಾಷಿಕ ಶಬ್ದವೇ ಮರೆತುಹೋಗುತ್ತಿದೆ. ಸೋಷಿಯಾಲಜಿ, ಆಂಥ್ರೋಪಾಲಜಿ ಮತ್ತು ರಾಜಕೀಯ ಸಿದ್ಧಾಂತಗಳ ಮೂಲಕ ಸಾಹಿತ್ಯ ಕೃತಿಗಳ ವಿಮರ್ಶೆ ನಡೆಯುತ್ತಿದೆ. ಹಾಗೆಂದರೆ ಕೃತಿಯ ವಿಶ್ಲೇಷಣೆಯಲ್ಲಿ ಅನ್ಯಜ್ಞಾನಶಾಖೆಗಳ ತಿಳಿವಳಿಕೆಯನ್ನು ಉಪಯೋಗಿಸಿಕೊಳ್ಳಬಾರದೆಂದು ನನ್ನ ಅಭಿಪ್ರಾಯವಲ್ಲ. ಆದರೆ ಸಾಹಿತ್ಯ ವಿಮರ್ಶಕನ ದೃಷ್ಟಿಯು ಕೃತಿಯ ರಸಬಿಂದುವಿನ ಮೇಲೆ ಕೇಂದ್ರೀಕೃತವಾಗಿರಬೇಕೆಂಬ ಮಾತನ್ನು ಒತ್ತಿಹೇಳಬೇಕಾಗಿದೆ.

ಹೊ: ಸಾರ್, ತಮ್ಮ ಸುದೀರ್ಘ ದಾಂಪತ್ಯ, ಕುಟುಂಬ ಮತ್ತು ತಮ್ಮ ಹಿಂದಿನ ಮತ್ತು ಇಂದಿನ ಸ್ನೇಹಿತರ ಬಗೆಗೆ ಸ್ವಲ್ಪ ಹೇಳುವಿರಾ ?

ಜಿ. ವಿ. : ನನ್ನ ಹೆಂಡತಿ ನನಗಿಂತ ಹತ್ತು ವರ್ಷ ಚಿಕ್ಕವಳು. ನನ್ನ ಮುಂಜಿಯ ದಿನವೇ ನಮ್ಮ ಮದುವೆಯ ನಿಶ್ಚಯವಾಗಿತ್ತು. ನಮ್ಮ ಸೋದರಮಾವ ಆ ದಿನ ಇವಳನ್ನು ನನ್ನ ಪಕ್ಕದಲ್ಲಿ ಕೂರಿಸಿ ಮದುವೆ ನಿಶ್ಚಯ ಮಾಡಿಬಿಟ್ಟರು. ಹೀಗೆ ನಾನು ಸೋದರಮಾವನ ಮಗಳನ್ನೇ ಮದುವೆ ಯಾದೆ. ೧೯೩೭ರಲ್ಲಿ ನಾವು ನಮ್ಮ



ಚಿತ್ರದಲ್ಲಿ: ಪ್ರೊ|| ಜಿ. ವೆಂಕಟಸುಬ್ಬಯ್ಯ, ಪ್ರೊ|| ಕೆ. ಎಲ್. ಗೋಪಾಲಕೃಷ್ಣಯ್ಯ ಕೆ. ಎಸ್. ಪಾರ್ಥಸಾರಥಿ, ಡಾ|| ಬಿ. ರಾಮಕೃಷ್ಣ

ಮದುವೆಯ ವಜ್ರಮಹೋತ್ಸವವನ್ನು ಆಚರಿಸಿದೆವು.

ಬಡವನಾದರೂ ಸದಾ ತುಂಬಿರುತ್ತಿದ್ದ ಮನೆಯನ್ನು ಈಕೆ ನಿಭಾಯಿಸಿ ನನ್ನನ್ನು ರಕ್ಷಿಸದಿದ್ದರೆ ನಾನು ಬರವಣಿಗೆಯಲ್ಲಿ ತೊಡಗುವುದು, ಒಬ್ಬ ವ್ಯಕ್ತಿ ಎನಿಸಿಕೊಳ್ಳುವುದು ಸಾಧ್ಯವೇ ಇರುತ್ತಿರಲಿಲ್ಲ. ನಮಗೆ ನಾಲ್ಕು ಜನ ಮಕ್ಕಳು; ಇಬ್ಬರು ಗಂಡು ಇಬ್ಬರು ಹೆಣ್ಣು; ಎಲ್ಲರೂ ಸುಖವಾಗಿದ್ದಾರೆ. ಇತ್ತೀಚೆಗೆ ಮೊಮ್ಮಗಳ ಮದುವೆ ಮಾಡಿದೆವು. ಈಗ ನಮ್ಮ ಕಿರಿಯ ಮಗ, ಸೊಸೆ ನಮ್ಮನ್ನು ನೋಡಿಕೊಳ್ಳುತ್ತಿದ್ದಾರೆ. ಆರಾಮವಾಗಿದ್ದೇವೆ.

ನನಗೀಗ ತೊಂಬತ್ತನಾಲ್ಕು ನಡೆಯುತ್ತಿದೆ. ನನ್ನ ಹಿಂದಿನ ಗೆಳೆಯರಲ್ಲಿ ಆರ್. ಗುರುರಾಜಾರಾವ್ ಮಾತ್ರ ಉಳಿದಿದ್ದಾರೆ. ಮಿಕ್ಕವರೆಲ್ಲ ಕಳಚಿಕೊಂಡುಬಿಟ್ಟರು. ಬೆಳಿಗ್ಗೆ ವಾಕಿಂಗ್‌ನಲ್ಲಿ ನಾಲ್ಕೈದು ಜನ ನನ್ನನ್ನು ಕೂಡಿಕೊಳ್ಳುತ್ತಾರೆ. ಎಲ್ಲರೂ ನನಗಿಂತ ೧೫-೨೦ ವರ್ಷ ಚಿಕ್ಕವರು. ಅವರೆಲ್ಲ ನನ್ನನ್ನು ತಮ್ಮ ಸಮವಯಸ್ಕನಂತೆಯೇ ನಡೆಸಿಕೊಳ್ಳುತ್ತಾರೆ. ಇದರಿಂದ ನನಗೂ ಹತ್ತಾರು ವರ್ಷ ಚಿಕ್ಕವನಾದೆ ಎನಿಸುತ್ತದೆ! ಸಂತೋಷವಾಗುತ್ತದೆ.




**ಹೊ :** 'ಹೊಸತು' ಓದುಗರಿಗೆ ನಿಮ್ಮ ಸಂದೇಶ...

ಜಿ. ವಿ. : ನಾನು ಕಂಡಹಾಗೆ 'ಹೊಸತು' ವಿಶಿಷ್ಟ ರೀತಿಯ ಪತ್ರಿಕೆಯಾಗಿದೆ. ಪ್ರಾಚೀನ ಭಾರತದ ಸಾಧನೆಗಳ ವಿಮರ್ಶಾತ್ಮಕ ಲೇಖನಗಳಿಂದ ಹಿಡಿದು ಆಧುನಿಕ ಜಾಗತಿಕ ಆಗುಹೋಗುಗಳ ವಿಶ್ಲೇಷಣೆಯವರೆಗೆ ವಿವಿಧ ಬಗೆಯ ಲೇಖನಗಳು ಇಲ್ಲಿ ಬೆಳಕು ಕಾಣುತ್ತಿವೆ. ಯೋಗಾಭ್ಯಾಸ ಪರಿಣತರಿಂದ ಹಿಡಿದು ಖಗೋಳ ವಿಜ್ಞಾನಿಗಳು, ಭೌತವಿಜ್ಞಾನಿಗಳು, ಜೀವಶಾಸ್ತ್ರಜ್ಞರು, ಕಂಪ್ಯೂಟರ್ ತಜ್ಞರು, ಸಮಾಜ ವಿಜ್ಞಾನಿಗಳು, ಅರ್ಥಶಾಸ್ತ್ರ ಪರಿಣತರು, ವಿವಿಧ ರಾಜಕೀಯ ಸಿದ್ಧಾಂತಗಳ ಪ್ರತಿಪಾದಕರು – ಈ ಪತ್ರಿಕೆಯ ಲೇಖಕರ ಬಳಗದಲ್ಲಿದ್ದಾರೆ. ಇಂಥಪರಿ... ಕನ್ನಡದಲ್ಲಿಯೇ ಬರೆಯುತ್ತಿರುವುದು ಬಹು ಹೆಮ್ಮೆಯ ವಿಷಯ. ಈ ಪತ್ರಿಕೆಯ ಮೂಲಕ ನಮ್ಮ ನಾಡಿನ ಜನರ ವಿಚಾರಶಕ್ತಿ ಬೆಳೆಯಬೇಕಾಗಿದೆ. ಜನರು ವಿಚಾರವಂತರಾದರೆ ಸರಿಯಾದ ಮಾರ್ಗದಲ್ಲಿ ಜೀವನ ನಡೆಸುವ ಅವಕಾಶಗಳು ಹೆಚ್ಚುತ್ತವೆ. ಸಮಾಜದ ವಿವಿಧ ಆಗುಹೋಗುಗಳ ಬಗೆಗೆ ಆರೋಗ್ಯಕರವಾದ ಪ್ರಶ್ನೆಗಳನ್ನೆತ್ತುವ ಮನೋಭಾವ ಬೆಳೆಸಿಕೊಳ್ಳುವ ಮೂಲಕ ಓದುಗರು ಈ ಪತ್ರಿಕೆಯ ಸದುಪಯೋಗ ಮಾಡಿಕೊಳ್ಳಲಿ – ಎಂಬುದೇ ನನ್ನ ಆಶಯ.

**ಹೊ :** ಭವಿಷ್ಯದ ಬಗೆಗೆ ನಿಮಗೆ ಆತಂಕವಿದೆಯೇ?

ಜಿ. ವಿ. : ಛೆ, ಛೆ, ಆತಂಕವೇನಿಲ್ಲ. ನಾನು ಯಾವಾಗಲೂ ಆಶಾಜೀವಿ. ತಾತ್ಕಾಲಿಕವಾಗಿ ಸುತ್ತಿನ ರಾಜಕೀಯ, ಸಾಮಾಜಿಕ ಪರಿಸರದಲ್ಲಿ ಅವ್ಯವಸ್ಥೆ ಗೊಂದಲಗಳು ಎದ್ದುಕಾಣುತ್ತಿದ್ದರೂ ತನ್ನ ದೌರ್ಬಲ್ಯಗಳಿಂದಾಗಿ ಇದು ಕುಸಿದುಬಿದ್ದಾಗ ಹೊಸತು ಹುಟ್ಟಲೇಬೇಕಷ್ಟೆ. ಹುಟ್ಟಿಯೇ ಹುಟ್ಟುತ್ತದೆ.

**ಹೊ :** ಕಾರ್ಲ್ ಮಾರ್ಕ್ಸ್ ಹೇಳಿದುದನ್ನೇ ನೀವೂ ಹೇಳುತ್ತಿದ್ದೀರಲ್ಲ!

ಜಿ. ವಿ. : ನಾನು ಮಾರ್ಕ್ಸ್‌ನನ್ನು ಹೆಚ್ಚಾಗಿ ಓದಿಕೊಂಡಿಲ್ಲ. ಪ್ರಾಯಶಃ ಆತ ನನ್ನನ್ನು ಕಾಪಿ ಮಾಡಿರಬೇಕು. Perhaps he has copied me !

**ಹೊ :** ಮಾರ್ಕ್ಸ್‌ಗೆ ಅದನ್ನು ಹೇಳೋಣವಂತೆ. ನಮಸ್ಕಾರ, ನಾವಿನ್ನು ಬರ್ತೀವಿ.

---

ಸಂದರ್ಶನ ಲೇಖನ ಸಿದ್ಧಪಡಿಸಿದವರು : **ಪ್ರೊ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ಎರಡನೇ ಹಂತ, ಬೆಂಗಳೂರು - ೫೬೦ ೦೭೦

# ಚತುಷ್ಪಥ ರಸ್ತೆ ಪುರಾಣವು

ಎಚ್. ಎಲ್. ಕೇಶವಮೂರ್ತಿ

'ಬೆಂಗಳೂರು-ಮೈಸೂರು ಚತುಷ್ಪಥ ರಸ್ತೆಯಲ್ಲಿ ವಾಹನಗಳಲ್ಲಿ ಪ್ರಯಾಣಿಸುವುದು ಸ್ವರ್ಗ... ಸ್ವರ್ಗ ಇದ್ದಂತೆ' ಎಂದು ಹೇಳಿ ಕುಡಿದ ನೀರು ಅಲ್ಲಾಡದಂತೆ ದಾರಿ ಸವೆಸಿದ ಅನುಭವ ವಿವರಿಸುತ್ತಿದ್ದೆ. ಅದನ್ನು ಕೇಳುತ್ತಿದ್ದ ಗೆಳೆಯ 'ಹೂಂ ಸ್ವರ್ಗಕ್ಕೆ ರಹದಾರಿ ಇದ್ದಂತೆ ಅನ್ನು' ಎಂಬುದಾಗಿ ಉದ್ಗರಿಸಿದ. ಅವನ ಮಾತನ್ನು ಮೆಲುಕುಹಾಕಿದೆ.

ಅದು ಹೇಳಿಕೇಳಿ ಚತುಷ್ಪಥ ರಸ್ತೆ. ಹೊಸದಾಗಿ ನಿರ್ಮಿಸಲಾಗಿರುವುದರಿಂದ, ಲಲ್ಲು ಪ್ರಸಾದ್ ಶೈಲಿಯಲ್ಲಿ ವ್ಯಾಖ್ಯಾನಿಸುವುದಾದರೆ ಹೇಮಮಾಲಿನಿ ಗಲ್ಲದಷ್ಟು ನವಿರಾಗಿರುವ ರಸ್ತೆ. ಕುರುಕಲು ರಸ್ತೆಯಲ್ಲೇ ವಾಹನ ಓಡಿಸಿ ಓಡಿಸಿ ಸುಸ್ತಾದವರಿಗೆ ಇಂತಹ ರಸ್ತೆ ರಸಗುಲ್ಲ ಇದ್ದಹಾಗೆ. ವಾಹನಗಳಿರುವುದೇ ವೇಗವಾಗಿ ಚಲಿಸಲು ಎಂಬ ಏಕೈಕ ನಂಬಿಕೆಯಿಂದ ಚಾಲಕರು ತಮ್ಮ ಶಕ್ತಿಮೀರಿ ವೇಗವಾಗಿ ಓಡಿಸಲು ಪ್ರಯತ್ನಿಸುತ್ತಾರೆ. ಹೈಟೆಕ್ ಕಾರುಗಳಂತೂ ಸರಿಯೇ ಸರಿ. ಅತಿವೇಗವಾಗಿ ಚಲಿಸುತ್ತಿದ್ದರೂ ಒಳಗೆ ಕುಳಿತವರಿಗೆ ನಿಧಾನವಾಗಿ ಚಲಿಸುತ್ತಿರುವಂತೆ ಭಾಸವಾಗುತ್ತದಂತೆ. ಅದಕ್ಕೇ ಏನೋ ನಿರ್ಜನ ಪ್ರದೇಶ ಆಗಲಿ, ಜನನಿಬಿಡ ಪ್ರದೇಶ ಆಗಲಿ ಅವರು ಅದೇ ವೇಗದಲ್ಲೇ ಹೋಗುತ್ತಾರೆ. ಈ ಪ್ರಪಂಚದ ಮೇಲೆ ಇನ್ನೂ ಬದುಕಬೇಕು ಅನ್ನುವ ಆಸೆ ಇರುವುದಾದರೆ ದಾರಿಹೋಕರು ಬೆದರಿ ದೂರ ಸರಿಯಬೇಕು.

ಕೆಲವು ಸಲ ವಾಹನ ಚಾಲಕರಲ್ಲಿಯೇ ಸ್ಪರ್ಧೆ ಪ್ರಾರಂಭ ಆಗಿಬಿಡುತ್ತದೆ. ಸ್ಪರ್ಧೆಯಲ್ಲಿರುವ ವಾಹನ ಬಿಟ್ಟು ಉಳಿದ ಯಾವ ವಾಹನಗಳ ಬಗ್ಗೆಯೂ ಗಮನ ಹರಿಸದೆ ತಮ್ಮ ವಾಹನವನ್ನು ಚಾಲಕರು ರಾಕೆಟ್ ವೇಗದಲ್ಲಿ ಓಡಿಸುತ್ತಾರೆ. ಭಾರಿ ವಾಹನಗಳ ನಡುವೆ ಇಂತಹ ಪೈಪೋಟಿ ಬಿದ್ದರೆ ಅದನ್ನು ನೋಡುವುದೇ ಒಂದು ಚಂದ. ಯಾವ ಕ್ರಾಸ್‌ಕಂಟ್ರಿ ರೇಸೂ ಇಂತಹ ಥ್ರಿಲ್ ನೀಡಲಾರದು. ಯಮದೂತನಂತೆ ಎದುರಿನಿಂದ ಬರುತ್ತಿರುವ ವಾಹನಗಳನ್ನು ನೋಡಿ ಚದರಿದ ಕಾರುಗಳು, ದ್ವಿಚಕ್ರವಾಹನಗಳು ರಸ್ತೆಯ ಬದಿಗೆ ಹಾರುವುದನ್ನು ನೋಡಲು ಎರಡು ಕಣ್ಣು ಸಾಲದು.




ಜೀವ ಬೆದರಿಕೆಯಿಂದ ಹೀಗೆ ಓಡಿಹೋಗುವ ವಾಹನಗಳನ್ನು, ತನ್ನ ವಾಹನದೊಳಗೆ ಕುಳಿತ ಅಳ್ಳೆದೆಯ ಪ್ರಯಾಣಿಕರ ಪರದಾಡುವಿಕೆಯನ್ನು ಕಂಡು ಚಾಲಕ ಮಹಾಶಯರು ಅನಿರ್ವಚನೀಯ ಆನಂದವನ್ನು ಅನುಭವಿಸುತ್ತಾರೆ. 'ಶಾಲಾವಲಯ - ನಿಧಾನವಾಗಿ ಚಲಿಸಿ' ಎಂದೋ, 'ರಸ್ತೆ ರಿಪೇರಿಯಲ್ಲಿದೆ - ನಿಧಾನವಾಗಿ ಚಲಿಸಿ' ಎಂದೋ ಫಲಕಗಳನ್ನು ಹಾಕಿರುವುದನ್ನು ನೋಡಿದಾಗ ಇದು ರಣಹೇಡಿಗಳ ಕೆಲಸ ಎಂಬುದಾಗಿ ಪರಿಭಾವಿಸಿ ತಮ್ಮ ರಾಕೆಟ್ ವೇಗವನ್ನು ಯಾವುದೇ ಕಾರಣಕ್ಕೂ ಕಡಿಮೆಮಾಡದ ಸಾಹಸಿ ಚಾಲಕರು ಇವರು. 'ವೇಗಮಿತಿ ೩೦ ಕಿ.ಮೀ.' ಎಂಬ ಫಲಕ ಹಾಕಿರುವುದು ಪೆಯಿಂಟರುಗಳಿಗೆ ಜೀವನ ಆಧಾರಕ್ಕಾಗಿ ಎಂಬುದೇ ಇವರ ಅಭಿಮತ.

ಫಲಕಗಳು ಫಲ ನೀಡುವುದಿಲ್ಲ ಎಂಬುದನ್ನು ಅನುಭವದಿಂದ ಅರಿತ ಘನ ಸರ್ಕಾರವು ಅಲ್ಲಲ್ಲಿ ರೋಡ್ ಹಂಪುಗಳನ್ನು ಹಾಕಿಸಿರುತ್ತದೆ. ಯಾವುದೇ ತಾಂತ್ರಿಕತೆಯ ಅರಿವಿಲ್ಲದೆ ಗುಪ್ಪೆಗಳಂತೆ ಹಾಕಲಾಗಿರುವ ಈ ರೋಡ್ ಹಂಪುಗಳೆಂಬ ಹಂಪುಗಳು ಸಣ್ಣ ವಾಹನಗಳಿಗೆ ಬೆದರಿಕೆ ಒಡ್ಡಬಹುದೇ ಪರಂತು ಭಾರೀ ವಾಹನಗಳಿಗಲ್ಲ. ಅವರು ಬಂದ ವೇಗದಲ್ಲೇ ಮುಂದೆ ಹೋಗುತ್ತಾರೆ – ಹಂಪು ಇಲ್ಲವೇ ಇಲ್ಲ ಎಂಬಂತೆ.

ಕೆಲವೊಮ್ಮೆ ಯಡವಟ್ಟಾಗಿಬಿಡುತ್ತೆ. ಈ ರೋಡ್ ಹಂಪುಗಳು ಹ್ಯಾಗಿರುತ್ತವೆ ಅಂದರೆ... ಮರೆಯಲ್ಲಿ ನಿಂತು ಹೊಂಚುಹಾಕುತ್ತಿದ್ದು ಕಳ್ಳತನ ಮಾಡುವಾಗ ಧುತ್ತನೆ ಪ್ರತ್ಯಕ್ಷವಾಗಿ ಕಳ್ಳನನ್ನು ಹಿಡಿಯುವಂತೆ ಯಾವುದೇ ಮುನ್ಸೂಚನೆ ಇಲ್ಲದಂತೆ ಈ ಹಂಪುಗಳು ಪ್ರತ್ಯಕ್ಷವಾಗುತ್ತವೆ. ಒಂದೇ ಸಾಲಿನ ಹಂಪು ಇದ್ದರೆ ವಾಹನಗಳಿಗೆ ವೇಗ ಮಿತಿಗೊಳಿಸುವುದಿಲ್ಲ ಅಂತ ತಿಳಿದು ೩-೪ ಸಾಲಿನ ಹಂಪುಗಳನ್ನು ಹಾಕಿರುತ್ತಾರೆ. ಮಿತಿಮೀರಿದ ಭಾರ ಹೊತ್ತು ಬಸಿರಿ ಹೆಂಗಸಿನ ತರಹ ಬರುವ ವಾಹನಗಳು ದಿಢೀರನೆ ಕಾಣಿಸಿಕೊಳ್ಳುವ ಹಂಪುಗಳ ಸಾಲಿನ ನಡುವೆ ಸುಸ್ತಾಗಿ ನಿಂತುಬಿಡುತ್ತವೆ... ಹಿಂಬದಿಯಲ್ಲಿ ಚಲಿಸುತ್ತಿದ್ದ ವಾಹನದ ಚಾಲಕನಿಗೆ ಜ್ಯೋತಿಷ್ಯದ ಅರಿವಿಲ್ಲದಿರುವುದರಿಂದಲೂ ಇದನ್ನು ಮೊದಲೇ ಊಹಿಸುವ ಊಹಾ ಶಕ್ತಿ ಇಲ್ಲದಿರುವುದರಿಂದಲೂ ಬಂದ ವೇಗದಲ್ಲಿಯೇ ನಿಂತ ವಾಹನಕ್ಕೆ ತನ್ನ ವಾಹನದಿಂದ ಮುತ್ತು ಕೊಡಿಸುತ್ತಾನೆ. ಸಣ್ಣ ವಾಹನವಾದರೆ ಮುಂದಿನ ವಾಹನದ ಕೆಳಗೆ ಹೋಗಿ ಅಪ್ಪಚ್ಚಿಯಾಗಲೂಬಹುದು. ಇದೆಲ್ಲದರ ಪರಿಣಾಮ ವಾಹನದ ಸಾಲು ಹನುಮಂತನ ಬಾಲದಂತೆ ಬೆಳೆಯುತ್ತದೆ. ಸಾಲುಗಟ್ಟಿ ನಿಂತಿರುವ ವಾಹನಗಳನ್ನು ನೋಡಿದ ಕೆಲವು ವಿದ್ಯಾವಂತ ಚಾಲಕರು ಏನು ಮಾಡುತ್ತಾರೆ ಅಂದರೆ... ಈ ದಡ್ಡ ಶಿಖಾಮಣಿಗಳಿಗೆ ಬುದ್ಧಿ ಇಲ್ಲದೆ ಇಷ್ಟೊಂದು ಜಾಗ ಬಿಟ್ಟಿದ್ದಾರಲ್ಲ ಎಂದು ಯೋಚಿಸಿ ತಮ್ಮ ಮೇಧಾವಿತನ ಪ್ರದರ್ಶಿಸಲು ಖಾಲಿ ಇರುವ ಜಾಗದಲ್ಲಿ ವಾಹನ ತಂದು ಮುಂದೆ ಹೋಗಲಾರದೆ ಅಲ್ಲಿಯೇ ನಿಲ್ಲಿಸುತ್ತಾರೆ. ಕುರಿಗಳಂತೆ ಹಿಂದಿನ ವಾಹನಗಳೂ ಮೇಧಾವಿಯನ್ನು ಅನುಸರಿಸುತ್ತವೆ. ಇದೆಲ್ಲದರ ಪರಿಣಾಮ ಟ್ರಾಫಿಕ್ ಜಾಮ್.

ಪೊಲೀಸರು ಪ್ರವೇಶಿಸಿ ವಾಹನಗಳ ಸುಗಮ ಸಂಚಾರಕ್ಕೆ ವ್ಯವಸ್ಥೆ ಮಾಡುವಲ್ಲಿ ಕೆಲವು ಗಂಟೆಗಳೇ ಕಳೆದುಹೋಗಬಹುದು. ಹೀಗೆ ವ್ಯರ್ಥವಾದ ಸಮಯವನ್ನು, ಜರೂರು ಇರಲಿ ಇಲ್ಲದಿರಲಿ, ಸರಿದೂಗಿಸಲು ವೇಗವಾಗಿ ವಾಹನ ಚಲಿಸದೇ ಇರಲು ಸಾಧ್ಯವೇ ಆಗುವುದಿಲ್ಲ. ಬೆಳಗಿನ ಜಾವದಲ್ಲಿ ಹೀಗಾದರೆ ಕಾಯ್ದ ಬೇಸರ, ಜೊತೆಗೆ ಎಳೆಯುವ ಕಣ್ಣೆವೆಗಳು; ವಾಹನ ಹೇಗೆ ಎಲ್ಲಿ ಚಲಿಸುತ್ತದೆ ಎಂಬುದರ ಅರಿವೇ ಇರುವುದಿಲ್ಲ. ಅನಿವಾರ್ಯವಾಗಿ ಅಪಘಾತಗಳಾಗುತ್ತವೆ. ಸುತ್ತಲಿನ ಜನರು ಸೇರಿ ತಮಗೆ ಇತಿಶ್ರೀ ಹಾಡುವುದು ಖಾತರಿ ಎಂಬುದನ್ನು ಅರಿತಿರುವ ಕೆಲವು ಚಾಲಕರು ವಾಹನವನ್ನು ಅಲ್ಲಿಯೇ ಬಿಟ್ಟು ತಮ್ಮ ಕಾಲಿಗೆ ಬುದ್ಧಿಹೇಳುವುದೂ ಉಂಟು. ಇಂತಹವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿರುವುದರಿಂದ ಸಾರಿಗೆ ಇಲಾಖೆಯವರು ಡ್ರೈವಿಂಗ್ ಲೈಸೆನ್ಸ್ ಕೊಡುವಾಗ ಓಟದ ಸ್ಪರ್ಧೆಯನ್ನು

ಏರ್ಪಡಿಸುತ್ತಾರೆಯೇ ಎಂಬ ಅನುಮಾನ ಹಲವರಿಗಿದೆಯಂತೆ.

ಇದು ಹಾಗಿರಲಿ. ಯಾವುದೇ ಅಪಘಾತಕ್ಕೀಡಾದ ವಾಹನಗಳ ಒಳಗಿರುವ ಜನರ ಸಹಾಯಕ್ಕೆಂದೇ ಕೆಲವರು ಕಂಕಣಬದ್ಧರಾಗಿದ್ದಾರೆ. ಅಪಘಾತ ನಡೆದ ಸ್ಥಳಕ್ಕೆ ಸಂಚಾರಿ ಪೊಲೀಸರು ಬರದೇ ಇರಬಹುದು; ಸಂಚಾರಿ ತುರ್ತು ಚಿಕಿತ್ಸಾ ಘಟಕ ತಲುಪದಿರಬಹುದು. ಇವರು ಮಾತ್ರ ತತ್‌ಕ್ಷಣ ಯಾವ ಮಾಯದಲ್ಲೋ ಪ್ರತ್ಯಕ್ಷರಾಗುತ್ತಾರೆ. ಗಾಯಾಳು ಪ್ರಯಾಣಿಕರಿಗೆ ಭಯಬೀಳಬೇಡಿ ಎಂಬ ಆಶ್ವಾಸನೆ ನೀಡುತ್ತಾರೆ. 'ಆ ಬ್ಯಾಗ್ ಇಲ್ಲಿ ಕೊಡಿ ಸಾರ್' ಅಂತಾನೋ 'ವ್ಯಾನಿಟಿ ಬ್ಯಾಗ್ ಕೊಡಿ ತಾಯಿ' ಎಂಬುದಾಗಿಯೋ ತಾಕೀತುಮಾಡುತ್ತಾರೆ. ಕೆಲವರು ಗಾಯಾಳುಗಳನ್ನು ಹೊರಕ್ಕೆ ತರಲು ಸಹಾಯಹಸ್ತ ನೀಡುತ್ತಾರೆ. ಯಾಕೋ ಏನೋ ಈ ಸಹಾಯಹಸ್ತ ಹೆಂಗಸರ ಕೊರಳಿನ ಚಿನ್ನದ ಸರದ ಕಡೆಯೋ, ಕೈಗೆ ಹಾಕಿರುವ ಚಿನ್ನದ ಬಳೆಯ ಸಮೀಪವೋ ಚಲಿಸುತ್ತದೆ ಎಂಬುದು ಅಲಾಯಿದ ಮಾತು. ಪ್ರಯಾಣಿಕರ ಅಮೂಲ್ಯವಾದ ವಸ್ತುಗಳು ಕಣ್ಮರೆಯಾದರೂ ಈ ಪರೋಪಕಾರಿಗಳಿಂದಾಗಿ ತುರ್ತುಚಿಕಿತ್ಸೆ ದೊರೆಯುತ್ತದೆ ಎಂಬುದು ಮುಖ್ಯ.

ವಾಹನಗಳು ಹರಿದು ಹೇಮಮಾಲಿನಿ ಗಲ್ಲದಷ್ಟು ನುಣುಪಿನ ರಸ್ತೆಯಲ್ಲಿ ಪ್ರಾಣ ಕಳೆದುಕೊಂಡರೂ ಮನೆಯವರಿಗೆ ಲಾಭದಾಯಕವೇ. ಅದು ಹೇಗಪ್ಪಾ ಅಂದರೆ... ಕೆಲವು ನ್ಯಾಯವಾದಿಗಳಿದ್ದಾರೆ. ಅವರು ಸಂಚಾರಿ ನ್ಯಾಯವಾದಿಗಳು. ಅಪಘಾತಗಳು ನಡೆಯುವುದನ್ನು ಚಾತಕ ಪಕ್ಷಿಗಳಂತೆ ಕಾಯುತ್ತಿರುತ್ತಾರೆ. ಅವು ಹೆಚ್ಚು ಹೆಚ್ಚು ನಡೆಯಲಿ ಎಂಬುದಾಗಿ ಮನಸ್ಸಿನಲ್ಲೇ ಹಾರೈಸುತ್ತಾ ನುಣುಪಿನ ರಸ್ತೆಯ ಮೇಲೆ ಆಗಾಗ ಅಡ್ಡಾಡುತ್ತಾರೆ. ಅವರ ಕಣ್ಣುತಪ್ಪಿಸಿ ಅಪಘಾತ ಸಂಭವಿಸಿದರೂ ಅವರ ಕೆಲವು ಏಜೆಂಟರುಗಳಿದ್ದಾರೆ. ಅವರ ಉದ್ಯೋಗವೇ ಈ ರಸ್ತೆಯಲ್ಲಿ ದ್ವಿಚಕ್ರವಾಹನದಲ್ಲಿ ಓಡಾಡುವುದು. ಅಪಘಾತ ನಡೆದ ತಕ್ಷಣ ತಮ್ಮ ಧಣಿಗಳಿಗೆ ವರದಿ ನೀಡುವುದು. ಅವರ ಅರಿವಿಗೇ ಬಾರದ ಅಪಘಾತಗಳು ಇರಲು ಸಾಧ್ಯವೇ ಇಲ್ಲ. ಅಪಘಾತದ ಸುದ್ದಿ ತಿಳಿದ ತಕ್ಷಣ ದಯಾಮಯರಾದ ಈ ನ್ಯಾಯವಾದಿಗಳು ಅಲ್ಲಿಗೆ ದಯಮಾಡಿಸುತ್ತಾರೆ. ಮಾರಣಾಂತಿಕ ಗಾಯ ಆಗಿದ್ದರೆ ತಾವೇ ಎಲ್ಲಾ ಖರ್ಚನ್ನೂ ವಹಿಸಿಕೊಂಡು ಚಿಕಿತ್ಸೆ ನೀಡಿಸುತ್ತಾರೆ. ಮರಣ ಹೊಂದಿದ್ದರೆ ಇನ್ನೂ ಅನುಕೂಲ. ಶವಸಂಸ್ಕಾರದಿಂದ ಹಿಡಿದು ಮುಂದಿನ ಎಲ್ಲಾ ಖರ್ಚುಗಳನ್ನೂ ಅವರೇ ನಿಭಾಯಿಸುತ್ತಾರೆ. ಆದರೆ ಒಂದು. ಅವರು ಹೇಳಿದ ಕಡೆ ಸಹಿ ಹಾಕಿದರೆ ಸಾಕು !

ಇಂತಹ ನ್ಯಾಯವಾದಿಗಳ ಸಹವಾಸ ಮಾಡದೇ ನಿಭಾಯಿಸಲು ಸಾಧ್ಯವಿಲ್ಲವೇ ಎಂದು ಕೇಳಿದರೆ ನಿಮಗೆ ಪ್ರಾಪಂಚಿಕ ಜ್ಞಾನ ಸಾಲದು; ಅನುಭವ ಇಲ್ಲ ಎನ್ನಬೇಕಾಗುತ್ತದೆ. ಅಪಘಾತದಿಂದ ನೀವು ಅಂಗವಿಕಲರಾಗಿದ್ದೀರಿ. ಅಥವಾ ಮರಣವೇ ಮಹಾನವಮಿ ಅಂತ ಹರೋಹರ ಎಂದಿದ್ದೀರಿ ಎಂಬುದನ್ನು ನ್ಯಾಯಾಲಯದಲ್ಲಿ ಸಾಬೀತುಪಡಿಸಬೇಕಲ್ಲ. ಸಾಕ್ಷಿ, ಪುರಾವೆ ಒದಗಿಸಲು ಯಾರು ಯಾರ ಬಾಯಿಗೆ ಎಷ್ಟೆಷ್ಟು ಪಿಂಡಪ್ರದಾನ ಮಾಡಬೇಕೋ ಅದನ್ನ ಯಶಸ್ವಿಯಾಗಿ ನಿರ್ವಹಿಸಬೇಕಾಗುತ್ತದೆ. ಅದು ಎಷ್ಟು ಕಠಿಣದ ಕೆಲಸ ಎನ್ನುವುದು ಈ ಉದಾಹರಣೆಯಿಂದ ಮನದಟ್ಟಾಗಬಹುದು.

ಅಪಘಾತದಲ್ಲಿ ವ್ಯಕ್ತಿ ಪ್ರಾಣ ಕಳೆದುಕೊಂಡ.

ಅಪಘಾತ ಆದದ್ದೇ ಹತ್ತಿರದವರಿಗೆ ಆಘಾತ. ಗಾಯದ ಮೇಲೆ ಬರೆ ಎಳೆದಂತೆ ಪೊಲೀಸರ ತನಿಖೆ. ಸರಿಯಾದ ವರದಿ ನೀಡಲು ಅವರ ಬಾಯಿಗೆ ಹಾಕಬೇಕು. ಹಾಕಲಿಲ್ಲ, ಮರಣ ಹೊಂದಿದ್ದವನದ್ದೇ ತಪ್ಪು ಎಂಬ ರಿಪೋರ್ಟು. ಏನೋ ಬರೆದುಕೊಂಡು ಹಾಳಾಗಲಿ ಅಂದರೆ ಕೂಡಲೇ ಶವ ದೊರೆಯುವುದಿಲ್ಲ. ಅದಕ್ಕೊಂದು ಪೋಸ್ಟ್ ಮಾರ್ಟಂ. ಅದನ್ನು ಮಾಡಲೂ ಲಂಚ. ಹೆಣದ ಮನೆಯಿಂದ ಹೊರತರಲೂ ಹಣ ಪೀಕಬೇಕು.

ಅವನ ವಾರಸುದಾರರು ಮುದ್ದಣ ಗೋತ್ರದವರು. ತಲೆ ಹೊಡೆದರೂ ಮೂರು ಕಾಸು ಇಲ್ಲ. ಮಾರಲು ಒಡವೆ, ಆಸ್ತಿ ಇಲ್ಲ. ಶವಾಗಾರದ ಉಸ್ತುವಾರಿಯವ ಹಣ ನೀಡದೆ ಹೆಣ ಬಿಡೋಲ್ಲ.

''ನೋಡಿ ಸಾ, ಹೆಣ ಕೊಟ್ಬಿಡಿ ಸಾ'' ಗೋಗರೆದರು.

''ಬಿಲ್‌ಕುಲ್ ಆಗಾಕಿಲ್ಲ. ದುಡ್ ಮಡಗಿ ತಗೋಂಡೋಗಿ'' ಜವಾನನ ಖಚಿತ ಮಾತು.

''ವಪ್ನ ಮಾಡ್ಬೇಕು ಸಾ... ಟೇಮಾಯ್ತದೆ ಸಾ...'' ಪರಿಪರಿಯಾದ ಬೇಡಿಕೆ.

''ಅದಕ್ ನಾನೇನು ಮಾಡ್ಲಿ?''

''ಇದೇ ಕೊನೆ ಮಾತ ಸಾ ?'' ರೋಸಿಹೋಗಿ ಕೇಳಿದ.

''ನನ್ದೇನು ಮಾತು ಅನ್ಕಂಡಿದೀಯೋ ಮಿಸ್ಕರಿ ಅನ್ಕಂಡಿದೀಯೋ ?''

''ಹಂಗಾರೆ ಸರಿಸಾ... ಈ ಹೆಣಾನ ನೀವೇ ಮಡಿಕ್ಕಳಿ'' ಎಂದು ಹೇಳುತ್ತಾ ಟವಲ್ ಒದರಿ ಹೊರಟುನಿಂತ.

ಹೆಣ, ಹೆಣದ ಮನೆ ಕಾಯುವ ಜವಾನ, ಈ ಹೆಣವನ್ನಿಟ್ಟುಕೊಂಡು ಏನು ಮಾಡಬೇಕು ? ಇಟ್ಟುಕೊಳ್ಳಲು ಅದು ಆಸ್ತಿ ಅಲ್ಲವಲ್ಲ.

''ಲೇ ಇವನೇ'' ಅಂತ ಕೂಗಿದ ಜವಾನ, ''ಇವನೇ'' ಹೋಗುತ್ತಲೇ ಇದ್ದ. ''ರೀ ಇವರೇ'' ಅಂದರೂ ಕಿವಿಗೊಡಲಿಲ್ಲ. ''ರೀ ಗೌಡರೇ'' ಅಂತ ಕೂಗು ಹಾಕಿದರೂ ಅವನು ಕಿವುಡ ಆಗಿದ್ದ. ''ಗೌಡ್ರೆ ಗೌಡ್ರೆ'' ಅಂತ ಅವನ ಹಿಂದೆ ಓಡಿದ. ಅಡ್ಡಹಾಕಿ ''ಹೆಣ ತಗೊಂಡೋಗಿ ಗೌಡ್ರೆ'' ಅಂತ ಗೋಗರೆದ. ಗೋಗರೆತ ಅದಲುಬದಲಾಗಿತ್ತು.

''ಬ್ಯಾಡ ನೀನೇ ಮಡಿಕ್ಕೊ'' ಅಂತ ಉಚಾಯಿಸಿದ ಅವನು.

ದಿನಕ್ಕೆ ನಾಲ್ಕು ಐದಾದರೂ ಶವಗಳು ಹೆಣದ ಮನೆಗೆ ಬಂದು ಬೀಳ್ತಿದ್ದೊ. ಎಲ್ಲರೂ ಇವನ ತರಹವೇ ಹೇಳಿ ಹೊರ ನಡೆದರೆ...

ಈಗ ಹೇಳಿ. ಅಪಘಾತ ಪರಿಹಾರ ನಿಧಿಯೂ ಬೇಡ ಹೆಣಾನೂ ಬೇಡ ಅನ್ನುವ ಹಾಗಿದ್ದರೆ ಇಂತಹ ನ್ಯಾಯವಾದಿಗಳು ಬೇಕಾಗಿಲ್ಲ. ಇಲ್ಲವಾದರೆ...


ಎಚ್. ಎಲ್. ಕೇಶವಮೂರ್ತಿ
ನಂ. ೨೦೪೪, ೧೨ನೇ ಅಡ್ಡರಸ್ತೆ
ಕಲ್ಲಹಳ್ಳಿ ಬಡಾವಣೆ
ಮಂಡ್ಯ - ೫೭೧ ೪೦೧




# ಸತ್ಯ

ಅಟ್ಟಿಕ್‌ನಲ್ಲಿ ಗೂಗೆ ತೋಟದಲ್ಲಿ ಕೋಗಿಲೆ
ಎರಡೂ ಒಬ್ಬನೊಳಹೊಕ್ಕು ವಸತಿ ಮಾಡಿದರೆ
ಹೇಗೆ ಅವ ಯಾವಾಗ
ಗೂಗು ಅನ್ನುತ್ತಾನೆ ಯಾವಾಗ ಅವನೆ
ಕೂಹು ಅನ್ನುತ್ತಾನೆ
ಯಾವಾಗ ಹಗಲು ಯಾವಾಗ ರಾತ್ರಿ
ಇದು ಸಾಧ್ಯವೇ ಎಂದು ಅಚ್ಚರಿ
ಪಡುತ್ತೇವೆ ಅಚ್ಚರಿಗಿಂತಲೂ ಹೆಚ್ಚು
ಗಾಬರಿ. ವಾಸ್ತವದಲ್ಲಿ ನಾವೂ
ಅದೇ ರೀತಿ ಎನುವುದನು ಮರೆತು.
ನಮ್ಮ ಧ್ವನಿಗಳ ನಾವು ಸರಿಯಾಗಿ
ಕೇಳುವುದೇ ಇಲ್ಲ.

ಸಾಕ್ರೆಟೀಸನ ಕೊನೆಯ ದಿನದ ಬಗ್ಗೆ
ಮಾತಾಡುತ್ತೇವೆ
ಅವನ ನಿರ್ಲಿಪ್ತ ಮನಸ್ಸಿನ ಬಗ್ಗೆ
ಬೆರಗಾಗುತ್ತೇವೆ. ನಾವಾದರೆ
ಹೀಗಿರುತ್ತಿದ್ದೇವೆಯೇ ಇದು
ಋಷಿಚಿತ್ತಕ್ಕೆ ಮಾತ್ರ ಸಾಧ್ಯ
ಎಂದು ಮುಂತಾಗಿ ಕೊಂಡಾಡುತ್ತ ಆದರೆ
ಅವನ ಮೊದಲ ದಿನದ ಕುರಿತಾಗಿ
ನಮಗೇನು ಗೊತ್ತಿದೆ ? ಅಂಥದೊಂದು
ಕಲ್ಪನೆಯೆ ಮನಸ್ಸಿಗೆ
ವಿಚಿತ್ರವೆನಿಸೀತು.
ಮೊದಲ ದಿನ — ಹಾಗೆಂದರೇನು ?
ಏನನುವುದು ನೀವು ?
ಅವನತ್ತೆ ತನ ಮುದ್ದಿನ ಕುವರಿ
ಕ್ಸಾಂತಬೆಯ ಸಿಂಗರಿಸಿ
ಈ ಗುಜ್ಜ ಮಹಾಶಯನಲ್ಲಿಗೆ
ಕಳಿಸಿದ ದಿನವೆ ?
ಅಥವಾ ಒಂದು ದಿನ ಇದೇ ಕ್ಸಾಂತಬೆ ಇವನ
ತಲೆ ಮೇಲೆ
ಒಂದು ಕೊಡ ನೀರೊಡೆದ ದಿನವೆ ?
ಅಥವಾ ಇಂಥದೇ ಇನ್ನೊಂದು ಯಃಕಶ್ಚಿತ್ ದಿನ
ಮನೆಗೆ ಮರಳುವುದಕ್ಕೆ ಇಷ್ಟವಿರದೆ
ಚೌಕದಲ್ಲೆಲ್ಲೊ
ಆಗಂತುಕನೊಬ್ಬನ ತಡೆದು ನಿಲ್ಲಿಸಿ
ಬೇಕೆಂದೇ ಕೆಲವು
ಪ್ರಶ್ನೆಗಳ ಕೇಳಿದ ದಿನ

ಆಮೇಲೆ ಅದೇ ಒಂದು
ಚಟವಾಗಿ ಚಟವೇ ವಿಧಿಯಾಗಿ
ವಿಧಿ ವಿಧಾನವೂ ಆಗಿ



ಸತ್ಯವೆಂದರೆ ಅದು ಮಣ್ಣಿನಲ್ಲಿ
ತಾನಾಗಿ ಇರುವಂತೆ ಚಿನ್ನ ವಿನಾ
ಕಾಯಿಸಿ ಎರೆದು ಆಭರಣ ಮಾಡಿ
ಕೊರಳಿಗೆ ಕಟ್ಟಿಕೊಂಡಂತಲ್ಲ
ಎನ್ನುವುದು ಗೊತ್ತಾಗಿ
ಅವಾಕ್ಯದಲ್ಲಿ

ಸತ್ಯದ ಕುರಿತು ಇಷ್ಟೊಂದು ಕರಾರುವಾಕ್ಕೆ
ಅದು ಯಾಕೆ
ಶುನಶ್ಶೇಪನ ಹಾಗೆ
ಇರಲೊಲ್ಲದು ತನ್ನನು ತಾನೆ
ಸದಾ ತಲುಪಲು ಯತ್ನಿಸುತ್ತ
ಎಂದೂ ತಲುಪದಿರುತ್ತ
ಪ್ರಶ್ನಾರ್ಥಕ

ಇತ್ತ ಮೊಹಮ್ಮದ್ ಬಿನ್ ತುಘಲಕ
ಈ ದಿವಸ ಭಿಕ್ಷುಕ ನಾಳೆ ಮುತ್ತಿನ ವಣಿಜ
ಒಂದೊಂದು ದಿವಸ ಒಂದೊಂದು ವೇಷ
ತನ್ನ ಜನರ ವಿರುದ್ಧ ತಾನೆ ಬೇಹಿನವ
ಸುತ್ತುವನು ದೆಹಲಿಯ ಉದ್ದಗಲ

ನಸುಕಿನಲಿ ರೈತ ನೇಗಿಲ ಕುಳ ತಂದು
ಕಮ್ಮಾರ ಸಾಲೆಯಲಿ ಬಂದು ಕೂಡುವನು
ಕಿಡಿಕಾರುವ ಕುಲುಮೆಯ ಪಕ್ಕ
ಆಹ ಎಂಥ ಚಳಿಯೆಂದು
ಬೆಂಕಿ ಕಾಯಿಸಲೆಂದೆ ಬಂದವನ ಹಾಗೆ
ಕೆದಕಿ ಈ ತಲೆಹೋಕನ ವಿಷಯ

ಅಂತೆಯೇ ಚಿನಿವಾರಕಟ್ಟೆಯಲಿ ವಿದೇಶೀ ವ್ಯಾಪಾರಿ
ಸರಿಯಾಗಿ ಭಾಷೆಯೂ ಬಾರದವ
ಮುತ್ತುರತ್ನಗಳ ಚೌಕಾಸಿ ಕುದುರಿಸುವ ದಾರಿಯಲಿ
ಸದ್ಯದ ನಾಣ್ಯಗಳ ವಿನಿಮಯ ಮೌಲ್ಯ ವಿಚಾರಿಸಿ
ಮಾತಿಗೆಳೆಯುವನು
ಅಮಾಯಕ ಸರಾಫರ

ಆಮೇಲೆ ಒಂದು ದಿನ ಅರಮನೆಯ ಮುಂದೆ
ಯಥಾಸ್ಥಾನದಲಿ ಇವರದೇ ಶಿರಗಳು
ಸೇರುತ್ತವೆ ಶಿರರಾಶಿಯನು
ರಾಶಿಗಿನ್ನೊಂದು ಕಲ್ಲು ಸೇರಿಸಿದಂತೆ
ಆಯಾ ಮುಂಡಗಳಿಂದ
ಬೇರ್ಪಟ್ಟು, ಪ್ರತಿದಿನ
ಸುಲ್ತಾನ ಯೋಚಿಸುತ್ತ ಹೊಸ ಹೊಸ ವೇಷಗಳ
ಅವುಗಳಿಗೆ ತಕ್ಕಂತೆ ವಿನೂತನ ಪ್ರವೇಶಗಳ.

ನದಿ
ನದಿಯಾಚೆ ಬಯಲು
ಬಯಲಾಚೆ ಬೆಟ್ಟ
ಆ ಬೆಟ್ಟದ ಮಗ್ಗುಲಲಿ ಅಸ್ಪಷ್ಟ ರೇಖೆ
ಇರುವೆ ಸಾಲಿನ ಹಾಗೆ ಇರುವೆಗಳಲ್ಲ
ಬಹುಶಃ ಜನ
ತಲೆ ಮೇಲೆ ಹೊರೆ
ಹೊರೆಯಲ್ಲ ಬಹುಶಃ
ಮಕ್ಕಳು ಮರಿಗಳು
ವಲಸೆ ಹೋಗುವವರೊ ಬರುವವರೊ
ಗೊತ್ತಿಲ್ಲ ಸೂರ್ಯನೂ
ಕಂತುವನೊ ಮೂಡುವನೊ
ಚಿತ್ರದಲಿ ಹೇಗೆ ಹೇಳುವುದು ? ಕಾಲವೇ ಇಲ್ಲಿ
ಪೂರ್ವಾಪರವ ಮರೆತಿದೆ.
ನಾನಾದರೂ ಅದನು
ಎಲ್ಲಿಂದ ಹೆಕ್ಕಿದೆನೊ
ಅಲ್ಲಿಯೇ ಹಾಕಿದೆ.

**ಕೆ. ವಿ. ತಿರುಮಲೇಶ್**
೫೦೧, ೫ನೇ ಮಹಡಿ, ಸಿದ್ಧಾರ್ಥ ಆಶಿಯಾನ ಅಪಾರ್ಟ್‌ಮೆಂಟ್ಸ್
೧೨-೧೨-೯ ರವೀಂದ್ರನಗರ, ಸಿಕಂದರಾಬಾದ್ - ೬೧

ಅದೊಂದು ಪುಟ್ಟ ಊರು. ಊರ ಆರಂಭದಲ್ಲೇ ಅಮ್ಮನ ಗುಡಿ. ಅದರ ಎದುರಿಗೇ ಬಸವಣ್ಣನಿಗೆ ಕಟ್ಟಿದ ಗುಡಿ. ಅಲ್ಲಿಂದ ಒಂದು ಫರ್ಲಾಂಗು ಸೀದಾ ನಡೆದರೆ ಬಜಾರದ ಬೀದಿ. ಹಾಗೇ ಮುಂದೆ ಸಾಗಿದರೆ ಎಡಕ್ಕೆ ಬರುವ ದೊಡ್ಡ ಹಾದಿಯಲ್ಲಿ ತಿರುಗಿ ಮತ್ತೊಂದು ಫರ್ಲಾಂಗು ನಡೆದರೆ ಊರ ಅಗಸೆ ಬಾಗಿಲು. ಪ್ರತಿವರ್ಷ ಕಾರ್‌ಹುಣ್ಣಿಮೆಯಂದು ದನಕರುಗಳ ಕರಿ ಹರಿಯುವ ಹಬ್ಬದ ವಿಧಿ ಆರಂಭವಾಗೋದು ಅಲ್ಲಿಂದಲೇ. ಇನ್ನಿಷ್ಟು ಮುಂದೆ ಸಾಗಿದರೆ ಹಾದಿಯ ಇಕ್ಕೆಲಗಳಲ್ಲೂ ಒಂದೊಂದು ಮನೆಗೆ ಅಂಟಿಕೊಂಡಂತೆ ಕಟ್ಟಿದ ಸಾಲು ಸಾಲು ಮನೆಗಳು. ಬಜಾರದ ಬೀದಿಯಲ್ಲಿ ಎಡಕ್ಕೆ ತಿರುಗದೆ ಹಾಗೇ ಮುಂದೆ ನಡೆದರೆ ಬಲಗಡೆ ಸಿಗುತ್ತವೆ ನಾಲ್ಕೈದು ಬೀದಿಗಳು. ಅಲ್ಲಿ ಮೂರನೇ ತಿರುವಲ್ಲಿ ತಿರುಗಿ, ಸಂದಿಗೊಂದಿ ಹಾದು ನಡೆದರೆ, ಅಲ್ಲೇ ಸಿಗುತ್ತದೆ ಅಜ್ಜನ ಮಠ. ಎಂದರೆ ಹಳ್ಳಿಯ ಆ ತುದಿಯಿಂದ ಈ ತುದಿಗೆ ಬಂದಂತಾಯಿತು. ಊರ ಪಶ್ಚಿಮ ದಿಕ್ಕಿನಲ್ಲಿ ಕಾಣುವುದೇ ಹದಿನಾಲ್ಕನೆಯ ಶತಮಾನಕ್ಕೆ ಸೇರಿದ ತುಂಡರಸರು ಕಟ್ಟಿಸಿದ ದೇವಾಲಯದ ಅಳಿದುಳಿದ ಅವಶೇಷ. ಇದು ಹಳ್ಳಿಯ ಇನ್ನೊಂದು ತುದಿ. ಇಡೀ ಊರಿನ ಜನಸಂಖ್ಯೆ ಹೆಚ್ಚೆಂದರೆ ಒಂದು ಸಾವಿರ ಅಷ್ಟೇ. ಇಂತಹ ಸೀದಾ ಸಾದಾ ಯಾವ ಪೌರಾಣಿಕ ಮಹತ್ವವೂ ಇಲ್ಲದ ಊರಿನ ಹೆಸರು ಇಟಗಿ.

# ತುಪ್ಪ ಮೆತ್ತಿದ ಕನ್ನಡಿ

■ ಡಾ|| ಸಬಿಹಾ ಭೂಮಿಗೌಡ



ಅಜ್ಜನ ಮಠ ಎಂದೆನಲ್ಲ , ಈ ಮಠ ಸಾಕಷ್ಟು ದೊಡ್ಡದಾಗೇ ಇದೆ. ಮುಂದುಗಡೆ ವಿಶಾಲ ಬಯಲು. ಒಳಗೆ ಬೃಹತ್ ಪ್ರಮಾಣದ ಸಾಲುಕಂಬಗಳ ಒಳಾಂಗಣ. ಇನ್ನೂ ಒಳಗೆ ಹೋದರೆ ನಂದಿ ವಿಗ್ರಹ, ಶಿವನ ವಿಗ್ರಹ. ಅಪರೂಪಕ್ಕೆ ಒಮ್ಮೆ ಕಾವಿಧಾರಿ ಸ್ವಾಮೀಜಿಗಳ ದರ್ಶನ. ಉಳಿದಂತೆ ಅವರ ಜಗತ್ತು ಲೌಕಿಕರಿಗೆ ಅಪರಿಚಿತ. ಮಠದ ಒಳಗೆ ಅದೆಷ್ಟೋ ಕೋಣೆಗಳು. ಒಂದು ಪುಟ್ಟ ಬಾವಿ. ಭಕ್ತಾದಿಗಳು ನೀಡಿದ ಧಾನ್ಯದಿಂದ ಅವರೇ ಬೇಯಿಸಿಕೊಂಡ ಅಡಿಗೆ. ಎಷ್ಟು ಜನ ಸನ್ಯಾಸಿಗಳು ಇದ್ದರು ಎಂಬುದೂ ಊರ ಹಲವರಿಗೆ ಗೊತ್ತಿಲ್ಲ. ಪಕ್ಕದಲ್ಲೇ ದೈವಾಧೀನರಾದ ಸ್ವಾಮೀಜಿಗಳಿಗೆ ಕಟ್ಟಿಸಿದ ಸಾಲು ಸಾಲು ಗದ್ದಿಗೆಗಳು. ಹಗಲಲ್ಲಿ ಸದ್ದುಗದ್ದಲವಿಲ್ಲದ ಮಠ. ಅಪರೂಪಕ್ಕೊಮ್ಮೆ ಸದ್ದು ಕೇಳಿಬಂದಲ್ಲಿ, ಅದು ಆಟವಾಡುವ ಮಕ್ಕಳದು. ಇಲ್ಲವೇ ಬೇಸಿಗೆ ಬಂದಾಗ ಕೇರಿಯ ಹೆಂಗಳೆಯರು ಸರದಿಯಂತೆ ಕೈಗೊಂಡ ಸೇವಿಗೆ ಕಾಯಕದಿಂದ ಹುಟ್ಟಿದ ಗಲಗಲ ಮಾತು. ಮಕ್ಕಳಿಗಾಗಲೀ ಹೆಂಗಸರಿಗಾಗಲೀ ಅದು ಯಾರದೋ



ಆಸ್ತಿ ಎಂಬ ಅರಿವು ಇದ್ದಂತೆ ಕಾಣುತ್ತಿರಲಿಲ್ಲ. ಏಕೆಂದರೆ ಅವರು ತಮ್ಮ ಮನೆಯ ಕುರಿತು ವಹಿಸುವ ಸಲಿಗೆ, ಪ್ರೀತಿ ಮತ್ತು ಕಾಳಜಿಗಳನ್ನು ಈ ಮಠದ ಬಗೆಗೂ ಹೊಂದಿದ್ದರು. ರಾತ್ರಿಯಾಯಿತೆಂದರೆ, ಊರ ಹಿರಿಯ ಗಂಡಸರು, ಎಳೆಯ ಮಕ್ಕಳು ಮತ್ತು ಪರೂರಿಂದ ಬಂದ ಜನರಿಗೆ ಆ ಮಠವೇ ನಿದ್ರಾದೇವಿಯ ಮಂದಿರ.

ಆ ಮಠದ್ದೇ ಒಂದು ಬಾವಿ. ಹನ್ನೆರಡು ಅಡಿ ವ್ಯಾಸದ ಈ ಬಾವಿ ಸಾರ್ವಜನಿಕರ ಆಸ್ತಿ. ಅದರಲ್ಲಿ ಹತ್ತು ಹನ್ನೆರಡು ಗಡಿಗೆಗಳಲ್ಲಿ ಹಾಕಿದ ಹಗ್ಗ ವಿಶ್ರಾಂತಿಯಿಲ್ಲದೆ ನಸುಕಿನಿಂದ ಸರಿ ರಾತ್ರಿಯವರೆಗೆ ಸದ್ದು ಮಾಡುತ್ತಿರುತ್ತವೆ. ಹೀಗೆ ಊರವರಿಗೆಲ್ಲ ನೀರುಣಿಸುವ ಈ ಬಾವಿ ಎಂಥ ಬೇಸಿಗೆಯಲ್ಲೂ ಬತ್ತಿದ್ದನ್ನು ಕಂಡವರಿಲ್ಲ. ಯಾವ ಪುಣ್ಯಾತ್ಮ ಕಟ್ಟಿಸಿದ ಬಾವಿಯೋ ಗೊತ್ತಿಲ್ಲ. ಹಿರಿಯ ತಲೆಮಾರಿನ ಅಜ್ಜಿ ಹೇಳುವ ಪ್ರಕಾರ ಒಮ್ಮೆ ಮಾತ್ರ ಊರವರು ಅದರ ತಲ ಕಂಡಿದ್ದರಂತೆ. ಆ ಅವಕಾಶ ಒದಗಿದ್ದೂ ವಿಚಿತ್ರ ರೀತಿಯಲ್ಲಿ. ಯಾರದೋ ಮನೆ ಸೊಸೆ ಏನೋ ಮನನೊಂದು ಮಠದ ಬಾವಿಗೆ ರಾತ್ರಿ ಹಾರಿಕೊಂಡಿದ್ದಳಂತೆ. ಹೀಗಾಗಿ ಹತ್ತಾಳುಗಳು ಸರದಿ ಪ್ರಕಾರ ನಲವತ್ತೆಂಟು ಗಂಟೆ ನೀರು ಸೇದಿ ಸೇದಿ, ಹೆಣ ಹೊರಗೆ ತೆಗೆದಿದ್ದರಂತೆ. ಆಗಲೇ ಊರವರ ಹಲವು ಬಿಂದಿಗೆಗಳು, ಕಾಲುಂಗುರ, ಪಿಲ್ಲಿ, ಗಿಂಡಿ ಮುಂತಾದವು ಮತ್ತೆ ನಾಗರಿಕ ಲೋಕಕ್ಕೆ ಬಂದಿದ್ದವು.

ಇಂಥ ಅಜ್ಜನ ಮಠದ ಬಾವಿಯ ಪಕ್ಕದಲ್ಲೇ ಒಂದು ಬೀದಿ. ಇದು ಒಂದು ಅರ್ಥದಲ್ಲಿ ಜಾತ್ಯತೀತ ಭಾರತದ ಸಣ್ಣ ತುಣುಕಿನಂತಿತ್ತು. ಎಲ್ಲರದೂ ಮಣ್ಣಿನ ಮನೆ. ಇರುವುದರಲ್ಲಿ ಅನುಕೂಲಸ್ಥಳಾದ ಹೀರವ್ವನದು ಮಾತ್ರ ಕಲ್ಲಿನ ಗಚ್ಚಿನ ಮನೆ. ಈ ಮನೆಯ ಎಡಗೋಡೆಗೆ ಹೊಂದಿಕೊಂಡಂತೆ ಬುಕುಟಿಗೇರ ಮುದುಕಿಯ ಗುಡಿಸಲು. ಹಲ್ಲೆಲ್ಲ ಉದುರಿ, ಮೈ ಎಲ್ಲ ಸುಕ್ಕುಗಟ್ಟಿದ ಆ ಅಜ್ಜಿ ತನ್ನ ಎಪ್ಪತ್ತರ ಇಳಿ ವಯಸ್ಸಲ್ಲೂ ಬುಟ್ಟಿಯಲ್ಲಿ ಗಂಧ, ಕರ್ಪೂರ, ಊದಿನಕಡ್ಡಿ, ಸಾಂಬ್ರಾಣಿ ಇವೇ ಮೊದಲಾದ ಸಾಮಾನುಗಳನ್ನು ಹೊತ್ತು ಊರೂರು ತಿರುಗಿ, ಮಾರಾಟ ಮಾಡಿ ಬಂದ ಹಣದಲ್ಲಿ ಬದುಕುತ್ತಿದ್ದಳು. ಅವಳ ಗಂಡ ಯಾವಾಗ ಸತ್ತಿದ್ದನೋ ಗೊತ್ತಿಲ್ಲ. ಇದ್ದೊಬ್ಬ ಮಗ ದೂರದ ಊರಿಗೆ ಹೋದವ ಅಲ್ಲೇ ನೆಲೆ ನಿಂತಿದ್ದ. ಈ ಹೀರವ್ವನ ಮನೆಯ ಬಲಕ್ಕೆ ಕಮ್ಮಾರ ಲಚುಮವ್ವನ ಮನೆ. ದಿನ ಬೆಳಗಾದರೆ ಆಕೆಯ ಮಗ ಕುಲುಮೆಯಲ್ಲಿ ಬೆಂಕಿ ಹಾಕಿ, ತಿದಿ ಒತ್ತುತ್ತಾ ಕಪ್ಪಗಾದ

ಸಲಕರಣೆಗಳನ್ನು ಸಜ್ಜುಗೊಳಿಸುವುದರಲ್ಲಿ ನಿರತನಾಗಿ ಇರುತ್ತಿದ್ದ. ಅದರ ಪಕ್ಕಕ್ಕೆ ಹೀರಾಬಾಯಿಯ ಮನೆ. ಆಕೆಯ ಗಂಡ ಊರ ದೇಸಾಯಿಯವರ ಆಳಾಗಿದ್ದು, ಊರ ರಾಜಕೀಯದ ಜಿದ್ದಾಜಿದ್ದಿಯಲ್ಲಿ ನಡು ಹಗಲಲ್ಲೇ ಕೊಲೆಯಾಗಿದ್ದ. ಅದರ ಪಕ್ಕದ್ದೇ ಅಕ್ಕಸಾಲಿಗ ಲಿಂಗಪ್ಪನ ಮನೆ. ಆ ಬೀದಿಯಲ್ಲೇ ಗಂಡು ಯಾಜಮಾನ್ಯದ ಏಕೈಕ ಮನೆ ಎಂದರೂ ಸರಿಯಾದೀತು. ಲಿಂಗಪ್ಪನದು ದೊಡ್ಡ ಸಂಸಾರ. ಹಣೆ ತುಂಬಾ ಕುಂಕುಮ, ಮೈ ಕೈಯಲ್ಲಿ ಹಚ್ಚೆ ಬಿಡಿಸಿಕೊಂಡ ಕಮಲವ್ವ ಆತನ ಮಡದಿ. ಏಳು ಜನ ಮಕ್ಕಳು, ಬಡತನ ಅವರ ಮೈತುಂಬ ಆವರಿಸಿತ್ತು. ಮುಂದಿನ ಸಾಲಿನಲ್ಲಿ ಇದ್ದ ಮನೆ ಹುಸಿನೆವ್ವಳದು. ಆಕೆಯ ಗಂಡ ಇದ್ದರೂ ಎಂದೋ ಬಂದು, ಹೀಗೆ ಇದ್ದು ಹಾಗೆ ಹೋಗುವ ವ್ಯಕ್ತಿ. ಹುಸಿನೆವ್ವ ಅವನನ್ನು ನೆಚ್ಚಿಕೊಂಡದ್ದೇ ಇಲ್ಲ ಎನ್ನಬೇಕು. ತಾನೇ ಮೈ ಮುರಿದು ದುಡಿದು ಗಂಡ, ಮಕ್ಕಳನ್ನು ಸಾಕುತ್ತಿದ್ದಾಕೆ. ಅವಳ ಮನೆ ಮಗ್ಗುಲಲ್ಲಿ ಕುರುಬರ ಚೆನ್ನಮ್ಮನ ಮನೆ. ಹತ್ತಾರು ಕುರಿಗಳೇ ಆಕೆಯ ಆಸ್ತಿ. ಅದರಾಚೆ ಸಕೀನವ್ವ, ಫಕೀರಪ್ಪರ ಮನೆಗಳು. ಹೀಗೆ ಹೇಳುವಾಗಲೇ ಗಮನಕ್ಕೆ ಬಂದ ವಿಚಾರವೆಂದರೆ, ಇಡೀ ಬೀದಿ ಒಂದರ್ಥದಲ್ಲಿ ಪ್ರಮೀಳಾ ರಾಜ್ಯವಾಗಿತ್ತು! ಒಂದೋ ಎರಡೋ ಪುರುಷರ ಯಜಮಾನಿಕೆಯಿಂದ ನಡೆಯುವ ಕುಟುಂಬ ಗಳಿದ್ದರೂ, ಬೀದಿಯಲ್ಲಿ ಯಾವುದೇ ಸಮಸ್ಯೆ ಎದುರಾದಲ್ಲಿ ಮಹಿಳೆಯರ ದನಿಯೇ ಎದ್ದು ಕೇಳುತ್ತಿತ್ತು. ಕೊಂಚ ಆರ್ಥಿಕ ಸ್ಥಿತಿಗತಿ ಅನುಕೂಲಕರವಾಗಿದ್ದ ಹೀರವ್ವಳೇ ಆ ಬೀದಿಗೆ ಯಜಮಾನಿ ಎಂಬಂತೆ ಕಂಡುಬರುತ್ತಿತ್ತು.

ಸಾಮಾನ್ಯವಾಗಿ ಪ್ರಶಾಂತವಾಗಿದ್ದ ಅಲ್ಲಿನ ರಾತ್ರಿಗಳು ಕಲಕುತ್ತಿದ್ದುದು ಕೆಲವೇ ಪ್ರಸಂಗಗಳಲ್ಲಿ. ರಾತ್ರಿ ಎಷ್ಟೋ ಹೊತ್ತಿಗೆ ಹುಸಿನೆವ್ವಳ ಗಂಡ ಪೀರಸಾಬ ಕುಡಿದು ತೂರಾಡುತ್ತಾ ಬಂದು, ಆ ಅಮಲಿನಲ್ಲಿ ಹೆಂಡತಿಯ ಮೇಲೆ ಬಲಪ್ರದರ್ಶನಕ್ಕೆ ಇಳಿದಾಗ ರಾತ್ರಿ ಎಚ್ಚರ ಗೊಳ್ಳುತ್ತಿತ್ತು. ಹಗಲೆಲ್ಲ ಮೈಮುರಿದು ದುಡಿವ ಹುಸಿನೆವ್ವ ದುರ್ಬಲ ಪೀರಸಾಬನ ಏಟಿಗೆ ತಲೆಬಾಗುತ್ತಿದ್ದುದು ಅಚ್ಚರಿಯ ಸಂಗತಿ! ಆಗ ಈ ಹೆಂಗಳೆಯರೆಲ್ಲ ಪೀರ ಸಾಬನನ್ನು ಮನಸಾರೆ ಬಯ್ಯುತ್ತಾ, ಹುಸಿನೆವ್ವಳನ್ನು ಮನೆಯಿಂದ ಹೊರಗೆಳೆದು, ಅವಳನ್ನೂ ಬೈಯ್ಯುತ್ತ ತಮ್ಮಲ್ಲೇ ಒಬ್ಬರ ಮನೆಗೆ ಎಳೆದೊಯ್ಯುತ್ತಿದ್ದರು. ಆಗ ಅವರ‍್ಯಾರಿಗೂ ಮಡಿ-ಮೈಲಿಗೆಯ ಪರಿವೆಯೇ ಕಾಣಿಸುತ್ತಿರಲಿಲ್ಲ. ಅದೇ ರೀತಿ ಆವಾಗೀವಾಗ ಅಕ್ಕಸಾಲಿಗರ ಕಮಲವ್ವನ ಮೈಮೇಲೆ 'ಅಮ್ಮ' ಬರುತ್ತಿದ್ದಳು. ಅದು ಯಾವಾಗಲೂ ಸಂಜೆಯ ವೇಳೆಗೇ ಆಗುತ್ತಿತ್ತು. ದಿನವಿಡೀ ಗಂಡನಿಗೆ ಹೆದರಿ ಸಾಯುವ ಕಮಲವ್ವ ಅಮ್ಮ ಮೈಮೇಲೆ ಬಂದಾಗ, ಅವನನ್ನು ಕೊಸರಿಕೊಂಡು ಬೀದಿಗೆ ಬಂದುಬಿಡುತ್ತಿದ್ದಳು. ಅವಳ ಆವೇಶ, ಆರ್ಭಟಕ್ಕೆ ಕೇರಿಯ ಎಲ್ಲ ಮನೆಯವರೂ ಬಂಡಾರ, ಕುಂಕುಮ ತಂದು ಒಪ್ಪಿಸಿ, ಅವಳ ಕಾಲಿಗೆರಗಿ, ಶಮನವಾಗುವಂತೆ ಕೋರುತ್ತಿದ್ದರು. ಮೈಯನ್ನು ಬಿಲ್ಲಂತೆ ಬಾಗಿಸಿ, ಹಿಡಿವವರ ಕಸುವನ್ನೂ ಮೀರಿ ಆರ್ಭಟಿಸುವ ಕಮಲವ್ವ ತಾಸು ಎರಡು ತಾಸು ಬಲಪ್ರದರ್ಶನಗೈದು, ದೇವರ ನುಡಿ ಹೇಳಿ, ಕೊನೆಗೆ ಬಿಂದಿಗೆ ನೀರು ತಲೆಗೆ ಸುರಿದ ಬಳಿಕ ಸುಸ್ತಾಗಿ ಕೂತರೆ, ಲಿಂಗಪ್ಪ ನೆಮ್ಮದಿಯ ಉಸಿರು ಬಿಡುತ್ತಿದ್ದ. ಮನೆಯಲ್ಲಿ ಏನೋ ಮುಡಚಿಟ್ಟು ಆದದ್ದೇ 'ಅಮ್ಮ' ಬರಲು ಕಾರಣವೆಂದು ಹಲವರು ನಂಬಿದ್ದರೆ, ಹೀರವ್ವ ಮಾತ್ರ ಯಾವತ್ತೂ ಅವಳಿಗೆ ಸೊಪ್ಪು ಹಾಕಿದವಳಲ್ಲ. ಮರುದಿನ ಮಧ್ಯಾಹ್ನದ ಹೊತ್ತಲ್ಲಿ, ಹೀರವ್ವ ಕಮಲವ್ವನನ್ನು ಕೂರಿಸಿಕೊಂಡು ಅಂತರಂಗದ ಮಾತುಕತೆ ನಡೆಸುತ್ತಿದ್ದಳು. ಆಗ ಇತರ ಹಿರಿಯರಿಗಾಗಲೀ, ಮಕ್ಕಳಿಗಾಗಲೀ ಪ್ರವೇಶ ನಿಷಿದ್ಧವಾಗಿತ್ತು.

ಅವರವರೊಳಗಿನ ಮಡಿ-ಮೈಲಿಗೆಗಳ ಆಚರಣೆಗಳೂ ಅಲ್ಲಿ ಇದ್ದೇ ಇದ್ದವು. ಸಾಬರ ಹೀರವ್ವ ಮನೆಯಲ್ಲಿ ಕರೆಯುವ ಎಮ್ಮೆ ಇಲ್ಲದಾಗ ಹಾಲಿಗೆ ಕುರುಬರ ಚೆನ್ನಮ್ಮನನ್ನು ಆಶ್ರಯಿಸಬೇಕಿತ್ತು. ಕುರುಬರ ಹಟ್ಟಿಯ ಅಂಗಣದ ತುಂಬ ತೂರಾಡಿದಂತಿರುವ ಕುರಿ ಹಿಕ್ಕೆಗಳಿಗೆ ಹೇಸುತ್ತ ದಾಟಿ ಒಳಹೋದರೆ, ಚೆನ್ನಮ್ಮ ತನ್ನ ದನಕಟ್ಟುವ ಅಂಕಣದಲ್ಲೇ ನಿಲ್ಲಿಸಿ, ಮೊರಕ್ಕೆ ಜೋಳ ಸುರಿದುಕೊಂಡು, ಎತ್ತರದಿಂದ ಗಿಂಡಿಗೆ ಕುರಿ ಹಾಲು ಸುರಿದು, ತನ್ನ ಮಡಿ ಕಾಪಾಡಿಕೊಳ್ಳುತ್ತಿದ್ದಳು. ಕಮ್ಮಾರರ ಲಚುಮವ್ವ ಕುಲುಮೆಗೆ ತಿದಿ ಒತ್ತುವವರು ಬೇಕಾದಾಗ ಕೇರಿಯ ಮಕ್ಕಳಿಗೆ ಹುರಿಗಾಳ ಲಂಚ ನೀಡಿ ಅವರ ಮೈದಡವುತ್ತಿದ್ದಳು. ಆದರೆ ಅವರ‍್ಯಾರಿಗೂ ಅವಳ ಮನೆಯ ಪಡಸಾಲೆಯಿಂದ ಒಳಕ್ಕೆ ಪ್ರವೇಶವಿಲ್ಲ. ಎರಡೇ ಕೋಣೆಗಳ ಅಕ್ಕಸಾಲಿಗರ ಮನೆಯಲ್ಲಿ ಅಡುಗೆ ಕೋಣೆ ಇತರರಿಗೆ ಅಜ್ಞಾತ ಲೋಕ. ಹುಸಿನೆವ್ವ, ಸಕೀನವ್ವರು

ಬಡವರಾದ ಕಾರಣ ಹೀರವ್ವಳ ಮನೆಯ ಎಲ್ಲೆಡೆಗೂ ಅವರಿಗೆ ಪ್ರವೇಶ ನಿಷಿದ್ಧವಾಗಿತ್ತು. ಪಕ್ಕದ ಓಣಿಯ ಲಿಂಗಾಯತರ ಶಿವಮ್ಮನದು ಎಲ್ಲರಿಗಿಂತ ಹೆಚ್ಚಿನ ಮಡಿ-ಮೈಲಿಗೆ ಆಚರಣೆ. ಮನೆಗೆ ಬಂದ ಪ್ರತಿಯೊಬ್ಬರ ಹೊಟ್ಟೆ ನೆತ್ತಿ ತಂಪಾಗಿಸದೆ ಕಳುಹಿಸದಾಕೆ. ಪಕ್ಕದಲ್ಲೇ ಮೈ ಮುಟ್ಟುವಷ್ಟು ಹತ್ತಿರ ಕೂತು ಕಷ್ಟ-ಸುಖ ವಿಚಾರಿಸುವ ಅವರ ಕುಲಗೋತ್ರಗಳು ಆಕೆಗೆ ನೆನಪಿಗೇ ಬರಲಾರವು. ಚಿಕ್ಕ ಮಕ್ಕಳು, ಬುದ್ಧಿವಂತ ಮಕ್ಕಳನ್ನು ಕಂಡರಂತೂ ಜೀವ ಬಿಡುವಾಕೆ. ಹಾಗಂತ ಒಮ್ಮೆ ಸ್ನಾನ ಮಾಡಿ, ಜಪ-ತಪ ಮುಗಿಯಿತೆಂದರೆ, ಎಲ್ಲರೂ ಆಕೆಗೆ ಮೈಲಿಗೆಯೇ. ಅದನ್ನು ಅರಿಯದೆಯೇ ಅವಳ ಹಿಂದಿನ ಪ್ರೀತಿ, ಸಲುಗೆಯ ನೆನಪಲ್ಲಿ ಅವಳನ್ನು ಮುಟ್ಟಿಬಿಟ್ಟರೆಂದರೆ ಸಹಸ್ರ ನಾಮಾರ್ಚನೆಯಿಂದ ಅವರು ತಪ್ಪಿಸಿಕೊಳ್ಳುವಂತಿಲ್ಲ. ಮನೆಯಲ್ಲಿ ಊಟಕ್ಕೆ ಏನೂ ಇಲ್ಲ ಎಂದರೆ ಇದೇ ಕುರುಬರ, ಕಂಬಾರರ, ಅಕ್ಕಸಾಲಿಗರ ಮನೆಯವರಿಗೆ ಸಾಬರ ಹೀರವ್ವನ ಮನೆ ಮಜ್ಜಿಗೆಗೋ, ಬಿಸಿ ರೊಟ್ಟಿ, ಅನ್ನಕ್ಕೋ ದೋಷ ಕಾಣುತ್ತಿರಲಿಲ್ಲ. ಆದರೆ ಜಾತಿಯ ಹೆಸರಿನಲ್ಲಿ ಹೊಡೆದಾಡಿಕೊಂಡದ್ದು, ಮೂಗು ಮುಖ ತಿರುವಿದ್ದು ಅಲ್ಲಿರಲಿಲ್ಲ.

ಆ ಊರವರು ತಮ್ಮ ಪುಟಪುಟ್ಟ ಮಣ್ಣಿನ ಮನೆಗಳಿಗೆ ಪ್ರತಿ ಅಮಾವಾಸ್ಯೆ, ಹುಣ್ಣಿಮೆ ಬಂದಾಗಲೂ ಇಡೀ ಮನೆಯ ಗೋಡೆಗೆ ಸುಣ್ಣ ಬಳಿದು, ನೆಲಕ್ಕೆ ಸೆಗಣಿ ಸಾರಿಸಿ, ಕೆಮ್ಮಣ್ಣು ಪಟ್ಟಿಹಚ್ಚಿ, ಮೀಸಲು ನೀರು ತಂದು ತುಂಬಿ, ಎಲ್ಲರೂ ಅಡಿಗೆ ಮಾಡಿ ಮುಗಿಸುವಾಗ ಸಂಜೆ ನಾಲ್ಕಾಗುತ್ತಿತ್ತು. ಅಲ್ಲೀವರೆಗೆ ಮನೆಯವರೆಲ್ಲ ಹೊಟ್ಟೆಯನ್ನೇ ಮರೆತಂತೆ ಇರಬೇಕಿತ್ತು. ಇದು ಕೇರಿಯ ಎಲ್ಲ ಜಾತಿಯವರ ಮನೆಗಳ ಸಾಮಾನ್ಯ ದೃಶ್ಯವಾದುದರಿಂದ ಅಲ್ಲಿ ಗೊಣಗಾಟ ಸಿಡಿಮಿಡಿಗೆ ಅವಕಾಶವೇ ಇರಲಿಲ್ಲ. ಅಂಥ ದಿನಗಳಲ್ಲೇ ಮಕ್ಕಳ ದಂಡು ಮಠಕ್ಕೆ ಲಗ್ಗೆ ಇಡುತ್ತಿತ್ತು. ನೈವೇದ್ಯವೆಂದು ನೀಡುತ್ತಿದ್ದ ಮಠದ ತಿಂಡಿಯ ರುಚಿ ಮಕ್ಕಳಿಗೆ ಅಂದಿನಷ್ಟು ಇನ್ಯಾವಾಗಲೂ ಆಪ್ಯಾಯಮಾನವಾಗುತ್ತಿರಲಿಲ್ಲ.

ಅಮ್ಮನ ಗುಡಿ ಮತ್ತು ಅಜ್ಜನ ಮಠಗಳು ಒಂದರ್ಥದಲ್ಲಿ ಆ ಊರಿನ ಕಂಬಗಳಂತಿದ್ದವು. ಅಜ್ಜನ ಮಠದ ವೈಶಾಲ್ಯ ಅಮ್ಮನ ಗುಡಿಗಿಲ್ಲ. ಮಠದ ನಿಶ್ಶಬ್ದ, ನಿರಾಳ ವಾತಾವರಣ ಅಮ್ಮನ ಗುಡಿಯಲ್ಲಿ ಕಾಣಸಿಗದು. ಬಿಸಿಲು ಕಾಲದಲ್ಲೇನಾದರೂ ಅಮ್ಮನ ಗುಡಿಯ ಹೆಬ್ಬಾಗಿಲು ದಾಟಿ ಒಳಗೆ ಪ್ರವೇಶಿಸಿದರೆ, ತಕ್ಷಣ ಕಣ್ಣಿಗೆ ಏನೇನೂ ಕಾಣಸದು. ಸ್ವಲ್ಪ ಪ್ರಯತ್ನಪಟ್ಟರೆ ಮಿಣಿಮಿಣಿ ಬೆಳಗುವ ಕಾಲುದೀಪ ಮಾತ್ರ. ಅನಂತರ ಅದರ ಪಕ್ಕದಲ್ಲೇ ಶೃಂಗರಿಸಿದ ಅಮ್ಮನ ಗಂಭೀರ ಮುಖ ಕಂಡೀತು. ನಿಮ್ಮ ಕಣ್ಣು ಕತ್ತಲೆಗೆ ಇನ್ನಿಷ್ಟು ಹೊಂದಿಕೊಂಡ ಬಳಿಕ ಸುತ್ತಲಿನ ಜನರು ಗೋಚರಿಸಿಯಾರು. ಅಮ್ಮನ ಗುಡಿ ಆಕೆಯ ವಾತ್ಸಲ್ಯಕ್ಕನುಗುಣವಾಗಿ ಸಹಜವಾಗಿಯೇ ತನ್ನ ಭಕ್ತಾದಿಗಳಿಂದ ದಿನವೂ ಗಿಜಿಗುಡುತ್ತಿತ್ತು. ಅಲ್ಲೇ ಬಸ್ ನಿಲ್ದಾಣವೂ ಇದ್ದುದು ಗುಡಿಯ ಸಂದರ್ಶಕರ ಸಂಖ್ಯೆಯ ಹೆಚ್ಚಳಕ್ಕೂ ಕಾರಣವಿದ್ದಿರಬೇಕು. ಪ್ರತಿ ಸೋಮವಾರ ಮತ್ತು ಶುಕ್ರವಾರ ಅಮ್ಮನಿಗೆ ವಿಶೇಷ ಪೂಜೆ. ಅಮಾವಾಸ್ಯೆ, ಹುಣ್ಣಿಮೆಗೆ ವಿಶೇಷ ಅರ್ಚನೆ ತಪ್ಪುವಂತಿಲ್ಲ. ಈ ಎಲ್ಲ ದಿನಗಳಲ್ಲಿ ಊರ ಎಲ್ಲ ಜಾತಿ ಧರ್ಮಗಳ ಮನೆಯವರೂ ಬತ್ತಿ, ಎಣ್ಣೆಯ ಸೇವೆಯನ್ನು ಕಡ್ಡಾಯವೆಂಬಂತೆ ಮಾಡಿಕೊಂಡು ಬರುತ್ತಿದ್ದರು. ಹೀಗಾಗಿ ಈ ಗುಡಿ ಆ ಮಠ ಅಥವಾ ಆ ಮಠ ಈ ಗುಡಿಗಳಿಗೆ ಊರ ಪ್ರತಿಯೊಬ್ಬ ವ್ಯಕ್ತಿಯ ಬದುಕಲ್ಲೂ ವಿಶಿಷ್ಟ ಸ್ಥಾನವಿತ್ತು.

''ಎದ್ದೇನಬೇ''

''ಎದ್ನೆವ್ವ. ನೀನ್ ಎದ್ಯಾ?''

''ಹೂಂ. ಗೆದ್ನೆವ್ವಾ.''

ಬೆಳಗಾಯಿತೆಂದರೆ ಊರ ಮಹಿಳೆಯರ ಗುಡ್ ಮಾರ್ನಿಂಗ್ ಈ ಬಗೆಯದು. ಅಲ್ಲಾ, ಎದ್ದದ್ದು ಕಣ್ಣಿಗೆ ಕಾಣೋದಿಲ್ವಾ? ಎಂದು ಯಾರೂ ಯಾರ ಮೇಲೂ ರೇಗಿದ್ದು ನೆನಪಿಲ್ಲ. ಎಷ್ಟೋ ಬಾರಿ ಉತ್ತರ ಕೊಡುವವರು 'ಗೆದ್ನವ್ವಾ' ಎಂದಾಗ ಅಚ್ಚರಿ. ಯಾವ ಹೋರಾಟದಲ್ಲಿ, ಯಾವ ಸಾಹಸದಲ್ಲಿ ಪಾಲ್ಗೊಂಡು ಇವರು ಗೆದ್ದು ಬಂದವರು ಎಂಬ ಪ್ರಶ್ನೆ ಎದುರಾಯಿತೇ? ಜವರಾಯನೊಂದಿಗಿನ ಯುದ್ಧದಲ್ಲಿ ಗೆದ್ದು, ಇಂದಿನ ಮಟ್ಟಿಗೆ ಸಮಯವನ್ನು ದಕ್ಕಿಸಿಕೊಂಡಿದ್ದೇವೆ ಎಂಬುದೇ ಅದರರ್ಥ! ಈ ಹಳ್ಳಿಗರ ಮಾತು, ಪ್ರತಿಕ್ರಿಯೆ ಹೇಗೆ



ಕಿರಿದರಲ್ಲಿ ಹಿರಿದರ್ಥ ಹೊಂದಿರುತ್ತವೆ ಎಂದು ಅಚ್ಚರಿಯಾಗುತ್ತದೆ. ಇಂತಹುದೇ ಇನ್ನೊಂದು ಸಾಮಾನ್ಯ ದೃಶ್ಯ ಊಟಕ್ಕೆ ಸಂಬಂಧಿಸಿದ್ದು. ಜನರು ಊಟಕ್ಕೆ ಅಡಿಗೆಮನೆಯಲ್ಲೋ ಪಡಸಾಲೆಯಲ್ಲೋ ಕೂರುವುದು ಮನೆಗೆ ಅತಿಥಿಗಳು ಬಂದಾಗ ಅಥವಾ ಮನೆಯಲ್ಲಿ ಹೆಚ್ಚುಗಟ್ಟಲೆ ಆದಾಗ ಮಾತ್ರ. ಉಳಿದಂತೆ ಕೈಯಲ್ಲಿ ಒಂದೆರಡು ರೊಟ್ಟಿ, ಮಧ್ಯೆ ಪಲ್ಯವನ್ನೋ ಚಟ್ನಿಯನ್ನೋ ಹಾಕಿಕೊಂಡು, ಮನೆಯ ಮುಂಬಾಗಿಲಿಗೆ ಹೊಂದಿಕೊಂಡಂತೆ ಇರುವ ಕಟ್ಟೆಯ ಮೇಲೆ ಊಟಕ್ಕೆ ಕೂರುವುದೇ ರೂಢಿ. ಹಾದಿಯಲ್ಲಿ ನೀರಿಗೆಂದೋ, ದನಕರುಗಳನ್ನು ಮೇಯಿಸಲೆಂದೋ ಹೋಗಿ ಬರುವವರನ್ನು ಕಂಡಾಗಲೆಲ್ಲಾ, ''ಉಂಡ್ಯೇನಬೇ, ಬಾ ಉಣ್ಣ್ ಬಾ'' ಎಂದು ಕರೆಯುವುದು, ಅದಕ್ಕವರು ''ಹೂ. ತಗೋಳವ್ವಾ. ಬಾಳ್ ಮಂದಿ ಆಗ್ಲಿ'' ಎಂದು ಉತ್ತರಿಸುವುದು ಮಾಮೂಲು. ಹಾಗಂತ ಅದು ಕೇವಲ ಬಾಯುಪಚಾರದ ಮಾತಲ್ಲ. ಉತ್ತರದ ಧಾಟಿಯಲ್ಲೇ, ಊಟ ಆಗಿದೆಯೋ ಇಲ್ಲವೋ ಎಂಬುದನ್ನು ಗ್ರಹಿಸಿ, ರೊಟ್ಟಿ ತಂದು ಇವರು ಕೊಟ್ಟಾರು. ಅವರೂ ಹಸಿದಾಗ ಬಿಗುಮಾನ ಬಿಟ್ಟು ಉಂಡು ತಮ್ಮ ಕೆಲಸಕ್ಕೆ ಹೊರಟಾರು.

ಮೇಲಿನ ಶಿಷ್ಟಾಚಾರಕ್ಕೆ ಹೀರವ್ವ ಹೇಗೆ ಹೊರಗಾದಾಳು? ಚೆನ್ನಾಗಿ ಕರೆಯುವ ಎಮ್ಮೆ, ದನ-ಕರುಗಳನ್ನು ಹೊಂದಿದ್ದ ಆಕೆಯ ಮನೆಗೆ ಹಾಲಿಗೆಂದು, ಮೊಸರಿಗೆಂದು ಬರುವವರ ಸಂಖ್ಯೆ ಕಡಿಮೆಯಿರಲಿಲ್ಲ. ಇದಾವುದೂ ಬಿಟ್ಟಿಯಾಗಿರದೆ, 'ವಸ್ತು ವಿನಿಮಯ' ಕ್ರಮದಲ್ಲಿ ಜರುಗುತ್ತಿತ್ತು. ಆದರೆ ಅವಳು ಕೇರಿಯವರಿಗೆ ಆಪ್ತಳಾಗಿದ್ದುದು ಬೇರೆಯೇ ಕಾರಣಕ್ಕೆ. ಕೆಲವರು ನುಚ್ಚಿನ ಸಂಗಟಿಯನ್ನೋ, ಕೆಲವರು ಖಾಲಿ ಒಣರೊಟ್ಟಿ ಉಪ್ಪನ್ನೋ ತಟ್ಟೆಯಲ್ಲಿ ಹಾಕಿಕೊಂಡು 'ಆಯೀ ಸ್ವಲ್ಪ ಮಜ್ಜಿಗಿ ಸುರಿ' ಎಂದು ಸೀದಾ ನುಗ್ಗುತ್ತಿದ್ದರು. ಈ ಘಾಟಿ ಮುದುಕಿಯೂ ಸೇರಿಗೆ ಸವ್ವಾಸೇರು. ಮೊದಲೇ ನೀರು ಮಜ್ಜಿಗೆ. ಅದಕ್ಕೆ ಇನ್ನಿಷ್ಟು ನೀರು ಸುರುವಿ ದಾನಶೂರ ಕರ್ಣಳಂತೆ ತಂದು ಅವರಿಗೆ ಬಡಿಸುತ್ತಿದ್ದಳು.

ಹೀರವ್ವನ ಖದೀಮ ಬುದ್ಧಿ ಹಲಬಗೆಯದ್ದು. ತನ್ನ ಉಗ್ರಾಣದಲ್ಲಿ ವರ್ಷಗಟ್ಟಲೆ ಸಾಕಾಗುವ ಅಕ್ಕಿಚೀಲ, ಪೆಂಡೆಗಟ್ಟಲೆ ಬೆಲ್ಲ, ಕ್ಯಾನ್‌ಗಟ್ಟಲೆ ತುಪ್ಪ, ಅರ್ಧ ಚೀಲದಷ್ಟು ಸಕ್ಕರೆ, ಬೇಳೆ, ದವಸಧಾನ್ಯ ಎಲ್ಲ ತುಂಬಿದ್ದರೂ, ಎಲ್ಲಾ ಮುಗೀತಾ ಬಂತು ಎಂಬ ವರಾತಾ ತಪ್ಪಿಸಿದವಳಲ್ಲ. ಗಂಡನಿಗೆಂದೇ ಮೀಸಲಿಟ್ಟ ಡಬ್ಬ ತುಂಬ ಬೇಸನ್ ಉಂಡೆ, ಹಚ್ಚಿದ ಅವಲಕ್ಕಿ, ಚುರುಮುರಿಗಳನ್ನು ಯಾವ ಕಾರಣಕ್ಕೂ ಯಾರಿಗೂ ಕೊಡುತ್ತಿರಲಿಲ್ಲ. ಸ್ವಂತ ಮಗಳಿಗೂ ಮೊಮ್ಮಕ್ಕಳಿಗೂ! ನೆರೆಮನೆಯ ಕಟ್ಟಾ ಸಸ್ಯಾಹಾರಿ ಜನರೆದುರೂ ಮಾಂಸದೂಟ ಮಾಡಿ ದಕ್ಕಿಸಿಕೊಳ್ಳುವಾಕೆ. 'ಅದೇನ್ ಗಮಗಮ ಅನ್ನುತ್ತಲ್ಲಾ?' ಎಂದು ಯಾರಾದರೂ ಕೇಳಿದರೆ 'ಸಂಡಿಗೆ ಪಲ್ಯ' ಎಂಬ ಸಾಂದರ್ಭಿಕ ಸುಳ್ಳು ಸೃಷ್ಟಿಸಿ, ಅದರ ಪರಿಮಳ ಈ ರೀತಿ ಇದ್ದೀತೇ? ಎಂದು ಅವರು ಸಂದೇಹಿಸುವಷ್ಟರಲ್ಲಿ ಬೀದಿ ನಾಯಿಯನ್ನು ಓಡಿಸುವ ನಾಟಕ ಮಾಡುತ್ತ, ತಟ್ಟೆಯಲ್ಲಿಯ ಮೂಳೆಯನ್ನು ಒಗೆಯುವ ಕಲೆಗಾರಿಕೆ ಅವಳದಾಗಿತ್ತು. ಮತ್ತೂ ಯಾರಾದರೂ ಅನುಮಾನಿಸಿದರೆ 'ಮಸಾಲಿ ಸಾಮಾನು ಹಾಕಬೇಕಾದಷ್ಟು ಹಾಕಿ, ಛೋಲೋತ್ನಾಗ ಒಗ್ಗರ್ಣಿ ಹಾಕಿದ್ರ ಇನ್ನ ಹ್ಯಾಂಗ ಆದೀತು. ನಿಮಗ ಮಾಡಾಕ ಬರಬೇಕಲ್ಲ' ಎಂದು ಗದರಿಬಿಡುವಾಕೆ. ಮುಂದೆ ಹೆಚ್ಚು ಕೆದಕಿದರೆ ತಮಗೇ ಕಷ್ಟವೆಂದು ಬಂದವರೂ ಅಮಾಯಕತೆ ನಟಿಸಿ ಹಿಂದಿರುಗುತ್ತಿದ್ದರು.

ಹಾಗಂತ ಈ ಊರು ಆದರ್ಶದ ಊರೇನಲ್ಲ. ಸಣ್ಣಪುಟ್ಟ ಜಗಳ, ಮನಸ್ತಾಪ ಅಲ್ಲೂ ಇದ್ದವು. ಜೊತೆ ಜೊತೆಯಲ್ಲೇ ಮನೆಗಳಿದ್ದರೂ ಅವರವರೇ ಹಾಕಿಕೊಂಡ ಲಕ್ಷ್ಮಣರೇಖೆಗಳು ಕಂಡೂ ಕಾಣದಂತೆ ಹಾಜರಿದ್ದವು.

ಕೇರಿಯ ಹೆಂಗಸರ ಒಗ್ಗಟ್ಟನ್ನು ನಿಯಂತ್ರಿಸುವ ಕಾರ್ಯವನ್ನು ಹಪ್ಪಳದ ಕಾಯಕ ಮತ್ತು ಸೇವಿಗೆಯ ಕಾಯಕಗಳು ಚೆನ್ನಾಗಿ ನಿರ್ವಹಿಸುತ್ತಿದ್ದವು. ಒಂದು ಮನೆಯಲ್ಲಿ ಹಪ್ಪಳದ ಹಿಟ್ಟು ಕಲಸುವುದು ತಮ್ಮ ಅಳವನ್ನು ನೋಡಿ ಅಲ್ಲ. ಹಿಟ್ಟನ್ನು ಕಲಸಿಬಿಟ್ಟು ಅವರೆಲ್ಲ ನಿಶ್ಚಿಂತರಾಗಿರುತ್ತಿದ್ದರು. ಯಾಕೆಂದರೆ ನೆರೆಹೊರೆಯವರು, ಬೀದಿಯಲ್ಲಿ ವಿವಿಧ ಕೆಲಸಕ್ಕೆಂದು ಹೋಗಿ ಬರುವವರು ಹೀಗೆ ಪ್ರತಿಯೊಬ್ಬರೂ ತಮ್ಮ ತಮ್ಮ ಬಿಡುವಿನ ಅವಕಾಶವನ್ನು ನೋಡಿಕೊಂಡು ಹಪ್ಪಳ ಹೊಸೆದು ಹೋಗುತ್ತಿದ್ದರು. ಗೋದಿ ಸೇವಿಗೆಯ ಕಾಯಕವಂತೂ ಸಂಘಟಿತ ದುಡಿಮೆ. ಕುಟ್ಟುವವರು ಬೀಸುವವರು, ಹಿಟ್ಟು ಹದಮಾಡುವವರದು ಒಂದು

ತಂಡ. ನಡು ವಯಸ್ಸಿನವರದು ಮಣೆಯೇರಿ ಸಿಂಹಾಸನಾರೂಢರಾಗಿ ಸೇವಿಗೆ ಹೊಸೆಯುವ ಕಾಯಕ. ಕೇರಿಯ ಎಲ್ಲ ಮಕ್ಕಳೂ ಆ ದಿನಗಳಲ್ಲಿ ಆಟೋಟವನ್ನು ನೆನಪಿಸುವಂತಿರಲಿಲ್ಲ. ಅವರು ಮಣೆಯಿಂದ ಇಳಿದು ಬರುವ ಸೇವಿಗೆಯ ಎಳೆಹಿಡಿದು ಮೊರಗಳ ಮೇಲೆ ಕಸೂತಿ ಹಾಕಬೇಕು ಇಲ್ಲವೇ ಕೋಲಮೇಲೆ ಕಲಾತ್ಮಕವಾಗಿ ಎಳೆ ಹಿಡಿಯಬೇಕು. ಹೀಗೆ ಸೇವಿಗೆಯ ಕಾಯಕಕ್ಕೆ ಒಮ್ಮೆ ತೊಡಗಿದರೆ, ತಿಂಗಳುಗಟ್ಟಲೆ ಮುಂದುವರೆಯುತ್ತಿತ್ತು. ಓಣಿಯ ಒಂದು ಮನೆಯಿಂದ ಕೊನೆಯ ಮನೆವರೆಗೂ ಸಾಕಾಗುವಷ್ಟು ಸೇವಿಗೆ ಹೊಸೆದ ಬಳಿಕವೇ ಅದಕ್ಕೆ ವಿರಾಮ. ಇಂಥ ಸಮಯದಲ್ಲಿ ಯಾವ ಹೆಂಗಸರೂ ಗಂಟುಮೋರೆ ಹಾಕಿದ್ದಿಲ್ಲ. ಈ ಕೆಲಸದಲ್ಲಿ ನಿರತರಾಗುತ್ತ, ತಮ್ಮ ದೈನಂದಿನ ರಗಳೆಗಳನ್ನು ಹಂಚಿಕೊಳ್ಳುತ್ತ, ದುಗುಡ ಗಳನ್ನು ಹಗುರಗೊಳಿಸಿಕೊಳ್ಳುತ್ತಿದ್ದರು. ಯಾರದೇ ಮನೆಯಲ್ಲಿ ಮದುವೆ, ಬೀಗರೂಟ, ಸೀಮಂತ, ಚೌಲ, ಮೀಸಲಡಿಗೆ ಮುಂತಾದ ವಿಶೇಷ ಸಂದರ್ಭಗಳು ಒದಗಿದರೆ, ಮೇಲಿನ ಕೆಲಸಗಳ ಜೊತೆ ದವಸಧಾನ್ಯಗಳನ್ನು ಸಜ್ಜುಗೊಳಿಸುವುದು, ನೂರಾರು ರೊಟ್ಟಿಗಳನ್ನು ತಟ್ಟಿ ಸಿದ್ಧ ಪಡಿಸುವುದು, ಸಾಂಬಾರ ಪದಾರ್ಥಗಳ ಸಿದ್ಧತೆ, ದಿಂಬಿನ ಕವರು, ಕಿಟಕಿ ಬಾಗಿಲು ಪರದೆಗಳಿಗೆ ತರತರದ ಕಸೂತಿ ಹೀಗೆ ಎಲ್ಲವನ್ನೂ ಒಂದೊಂದು ತಂಡದವರು ವಹಿಸಿಕೊಂಡು ನೆರವೇರಿಸುತ್ತಿದ್ದರು.

೨

''ಏನ್ ಮಾಡ್ತಿದ್ದೀ ಅಮ್ಮಾ ?'' ಈಗ ತಾನೇ ಕಾಲೇಜಿಗೆ ಸೇರಿದ್ದ ಮಗಳು ವಿಜಯಾ ಕೋಣೆಯೊಳಗೆ ಬರುತ್ತಾ ಪ್ರಶ್ನಿಸಿದಳು. ಬರೆಯುತ್ತಿದ್ದುದನ್ನು ಪಕ್ಕಕ್ಕಿಟ್ಟು ''ಬಾ... ಬಾ... ಒಬ್ಳೇ ರೂಮ್ನಲ್ಲಿ ಕೂತ್ಕೊಂಡು ಏನ್ಮಾಡ್ತಿದ್ದೆ? ಏನ್ ಹಸಿವೇನಾ ? ಅಡ್ಗೆ ಮನೇಲಿ...'' ಎಂದೆ.

''ಇಲ್ಲಮ್ಮಾ , ಹಸಿವೆ ಇಲ್ಲ, ತುಂಬಾ ಬೇಜಾರು. ರಜೆಯಲ್ಲಿ ಎಲ್ಲೂ ಹೋಗೋಕೆ ಆಗಿಲ್ಲ.. ಓದೋಕೆ ಏನಾದ್ರೂ ಮ್ಯಾಗಝೀನ್ ಇದೆಯಾ ನೋಡೋಣ ಅಂತ ಬಂದೆ... ನೀನ್ ಏನೋ ಬರೀತಿದ್ದೀಯಲ್ಲಾ? ಏನ್ ಲೇಖನಾನಾ ಕಥೇನಾ ? ಅಥ್ವಾ ?''

ವಿಜಯಾಳ ಪ್ರಶ್ನೆಗೆ ಏನು ಉತ್ತರಿಸುವುದೆಂದು ತಿಳಿಯದಾಯಿತು.

''ಹೀಗೇ... ಏನೋ..'' ಎಂದೆ.



''ಇಲ್ಲಿತೋರ್ಸಮ್ಮಾ... ನಾನೂ ಸ್ವಲ್ಪ ನೋಡ್ತೀನಿ.''

''ಇಲ್ಲ ಇಲ್ಲ ಇದಿನ್ನೂ ಬರ್ದು ಪೂರಾ ಆಗಿಲ್ಲ. ಈಗ್ಲೇ ನೀನು ಓದಿದ್ರೆ ಚೆನ್ನಾಗಿರಲ್ಲ. ಪೂರಾ ಆಗ್ಲಿ, ನಾನೇ ಕೊಡ್ತೀನಂತೆ.''

''ಏನೋ ನಾನೂ ಓದಿ, ಸ್ವಲ್ಪ ಸಲಹೆ-ಸೂಚನೆ ಕೊಡೋಣ ಅಂತ ಕೇಳ್ದೆ... ಹೋಗ್ಲಿಬಿಡು... ಬರ್ದು ಮುಗಿದ್ಮೇಲೆ ಹೇಳು...''

ವಿಜಯಾ ತಮಾಷೆ ಮಾಡಿದರೂ, 'ಹೌದಲ್ಲಾ, ಅವಳಿಗೆ ಯಾಕೆ ತೋರಿಸಬಾರದು ? ಈ ಬರವಣಿಗೆಗೆ ಇನ್ನೊಂದು ತಲೆಮಾರಿನ ಸ್ಪಂದನೆ ಹೇಗಿರುತ್ತೆ ಅಂತ ನೋಡಿದ ಹಾಗೂ ಆಗುತ್ತಲ್ವಾ' ಎಂದುಕೊಂಡು, ''ವಿಜಯಾ, ಒಂದು ಕೆಲ್ಸ ಮಾಡು. ಈಗ ನಾನು ಕಾಫಿ ಮಾಡಿ, ನಿನ್ಗ ತಿನ್ನಾಕ ಏನಾದರೂ ಐತಾ ಅಂತ ನೋಡಿ ತರ್ತೀನಂತ. ಅಷ್ಟ್ಯಾಗ ನೀನು ಇದನ್ನ ಓದಿ ಮುಗ್ಸು. ಮತ್ತೆ ಏನಿದ್ರೂ ಮಾತಾಡೂಣಂತ'' ಎಂದು ಬರೆದುದನ್ನು ಅವಳ ಕೈಗಿತ್ತು ಹೊರಟೆ.

ನಾನು ಅಡುಗೆಮನೆಯಿಂದ ಹಿಂದಿರುಗುವಷ್ಟರಲ್ಲಿ ಓದಿ ಮುಗಿಸಿದ್ದ ವಿಜಯಾಳ ತುಟಿಗಳ ಮೇಲೆ ತುಂಟ ನಗುವಿತ್ತು. ಕಣ್ಣುಗಳು ಹೊಳೆಯುತ್ತಿದ್ದವು. ನನ್ನನ್ನು ನೋಡಿದವಳೇ, ''ಅಮ್ಮಾ, ಎಷ್ಟು ಚೆನ್ನಾಗಿದೆ ಈ ಊರು, ಈ ಜನ, ಅವರ ಬದುಕು...! ವಾವ್ ! ರೊಮ್ಯಾಂಟಿಕ್ ಆಗಿ ಬರ್ದಿದ್ದೀಯ. ಓದ್ತಾ ಇದ್ರೆ ಖುಷಿ ಕೊಡುತ್ತೆ. ಒಂದ್‌ವೇಳೆ ನಿಜವಾಗ್ಲೂ ಹೀಗೊಂದು ಊರು, ಜನ, ಪರಿಸರ ಇದ್ದಿದ್ದೇ ಆದ್ರೆ ಎಷ್ಟು ಚೆನ್ನಾಗಿತ್ತು ಅನ್ಸುತ್ತೆ...''

''ಅಂದ್ರೆ... ಇದೊಂದು ಕಥೆ ಅನ್ಕೊಂಡಿಯಾ ?''

''ಹೂಂ...! ಮತ್ತೆ ಕಥೆ ಅಲ್ವಾ ? ನಿಜಾನಾ ? ಹೀಗೊಂದು ಊರು ಅಲ್ಲಲ್ಲ, ಹಳ್ಳಿ ನಿಜವಾಗ್ಲೂ ಇದೇನಾ ?''

''ಇದೆ ಅಲ್ಲ, ಇತ್ತು''

''ಹಂಗಂದ್ರೆ...? ಇದ್ರಲ್ಲಿ ನೀನ್ ಹೇಳಿರೋದು ಎಲ್ಲಾನೂ ನಿಜಾನಾ ? ಆ ಮಠ, ಗುಡಿ, ಹೀರವ್ವ, ಹುಸೆನವ್ವ... ಎಲ್ಲಾನೂ... ಎಲ್ಲಾನೂ...''

''ಹೂಂ... ಇದೊಂದು ಥರಾ ಕತೆ ಅನ್ನಿದ್ರೂ ನಿಜ. ನಿಜ ಅನ್ನಿದ್ರೂ ಕತೆ...''

''ಹೋಗಮ್ಮಾ, ಒಗಟಾಗಿ ಮಾತಾಡ್ತಾ ಇದ್ದೀ... ನನ್ಗ್ ನಿಜಾ ಹೇಳು.''

''ಯಾಕೋ ಹಳೇ ನೆನ್ಪು ಕಾಡ್ತು. ಹಂಗಾಗಿ ಮನ್ಸಿಗೆ ತೋಚಿದ್ದನ್ನ ಬರ್ದೆ ಅಷ್ಟೇ. ಅಲ್ಲಿ ಹೇಳಿರೋದೆಲ್ಲ, ನಾನ್ ಚಿಕ್ಕವಳಿದ್ದಾಗ... ನಿನ್ಗಿಂತ ತುಂಬಾ ಅಂದ್ರೆ ತುಂಬಾನೇ... ಅಂದ್ರೆ ಹತ್ತು-ಹನ್ನೆರಡು ವರ್ಷದವಳಿದ್ದಾಗಿನ ನೆನಪುಗಳನ್ನ, ಬದುಕು, ಪರಿಸರವನ್ನ...''

''ಹಂಗಾದ್ರೆ ಅಮ್ಮಾ , ನೀನ್ ಚಿಕ್ಕೋಳಿದ್ದಾಗಿನ್ ದಿನಗಳು ಎಷ್ಟು ಚೆನ್ನಾಗಿದ್ವು ! ಒಂದು ಮನೆಗೆ ಅಂಟಿಕೊಂಡು ಇನ್ನೊಂದು ಮನೆ! ಅದೂ ಬೇರೆ ಬೇರೆ ಜಾತಿಯವರದ್ದು... ಜಗಳಾ ಇಲ್ಲ, ಗಲಾಟೆ ಇಲ್ಲಾ...''

''ಯಾಕೆ ? ಒಟ್ಗೆ ಇದ್ರೆ ಜಗಳಾ ಆಡ್ಲೇಬೇಕೂಂತ ಇದೆನಾ ?''

''ಅಲ್ಲಮ್ಮಾ, ಈಗ ನೀನೇ ನೋಡು, ನಮ್ ಕ್ವಾರ್ಟರ್ಸ್‌ನಲ್ಲಿ ಒಬ್ರು ಮುಂದಿನ ಬಾಗ್ಲು ತೆಗ್‌ದ್ರೆ ಇನ್ನೊಬ್ಬರ ಮನೆ ಡ್ರಾಯಿಂಗ್ ರೂಂ ಕಾಣುತ್ತೆ, ಅಂತ ನಾವು ಬಾಗ್ಲು ಮುಚ್ಕೊಂಡೇ ಇರ್ತೀವಿ... ಒಬ್ರ ಮನೆಗೆ ಹೋಗ್ಬೇಕು ಅಂದ್ರೆ ಮೀನ ಮೇಷ ಎಣಿಸ್ತೀವಿ, ಇಲ್ಲಾ ಫೋನ್ ಮಾಡಿ ಅವ್ರಿದ್ದಾರಾ ? ಬಿಡುವಾಗಿದ್ದಾರಾ ? ಅಂತೆಲ್ಲ ಕೇಳ್ಕೊಂಡು ಹೋಗ್ತೀವಿ. ಅಷ್ಟೇ ಯಾಕೆ ? ನಾನ್ ಚಿಕ್ಕೋಳಿದ್ದಾಗ ಸಂಜೆ ಆಟಾ ಆಡಾಕೆ ಹೋರಟ್ರೆ, ಎಲ್ಲಿಗೆ ಹೋಗ್ತಿ? ಯಾರ್ ಮನೆಗೂ ಬ್ಯಾಡ, ಪ್ಲೇಗ್ರೌಂಡಲ್ಲೇ ಆಟಾ ಆಡೀ... ಅಂತ ನೂರಾರು ಉಪ್‌ದೇಶ ನೀನ ಕೊಡ್ತಿದ್ದೆ. ಮರ್ತಿಯಾ ? ನೀನ – ನೋಡ್ತ್ಹಂಗೆ ಕ್ವಾರ್ಟರ್ಸ್‌ನವ್ರು ಎಷ್ಟೋ ಮಂದಿ ಕಿಟಕ್ಯಾಗ ಇಣ್‌ಕಿ ನೋಡೋದು; ಮಾತಾಡ್ಲೋಕೆ ಇಷ್ಟ ಇಲ್ಲಾಂದ್ರೆ ಬಾಗ್ಲ್ ಮುಚ್ಕೊಳ್ಳೋದು ಒಂದೊಂದಾ ? ಜೊತೇಲೇ ಇದ್ರೂ ನಮ್ಮಲ್ಲಿ ಕ್ಲೋಸ್‌ನೆಸ್ಸೇ ಇಲ್ಲ!''

ವಿಜಯಾಳ ಮಾತಿಗೆ ಏನು ಹೇಳಬೇಕೆಂದೇ ತಿಳಿಯಲಿಲ್ಲ, ಅಷ್ಟರಲ್ಲಿ ಆಕೆಯೇ, ''ನನ್ನ ಫ್ರೆಂಡ್ ದಿವ್ಯಾ ಮಂಡ್ಯ ಕಡೆಯವ್ಳು. ಅವ್ಳ ಊರಲ್ಲಿ ಬರೀ ಗೌಡ್ರೇ ಇರೋದಂತೆ. ಒಂದೊಂದು ಬೀದಿ ತುಂಬಾ ಅಣ್ಣನ್ ಮನೆ, ತಮ್ಮನ್ ಮನೆ, ಮಾವಂದ್ರ್ ಮನೆ, ಚಿಕ್ ದೊಡ್ಡಪ್ಪನ್ ಮಕ್ಳ್ ಮನೆ... ಅಂತ ಒಂದೊಂದು ಕುಟುಂಬದವರದ್ದೇ ಮನೆಯಂತೆ. ದೃಷ್ಟಿಬೊಟ್ಟಿನ ಹಾಗೆ ಅಲ್ಲೊಂದ್ ಇಲ್ಲೊಂದು ಮಾತ್ರ ಬೇರೆ ಜಾತಿಯವ್ರ್ ಮನೆ ಇದಾವಂತೆ ! ಅದೆಲ್ಲಾ ಏನ್ ಚೆಂದ ? ಒಂಥರಾ ಯೂನಿಫಾರಂ ಹಾಕ್ಕೊಂಡು ಸ್ಕೂಲ್‌ಗೆ ಹೋಗೋ ಮಕ್ಳ ಥರ... ಎಲ್ಲಾ ಒಂದೇ... ಒಂದೇ ಥರ... ನಿನ್ ಕತೇಲಿ ಕಾಣೋದ್ ಕಲರ್‌ಡ್ರೆಸ್ ಹಾಕಿರೋ ಮಕ್ಳ ಥರಾ... ಅಲ್ವಮ್ಮಾ ?''

ಅಷ್ಟರಲ್ಲಿ ನಮ್ಮ ಮಾತಿಗೆ ಸೇರಿಕೊಂಡ ಈತ, ನಮ್ಮ
ತಿನ ರುಚಿ ಹತ್ತಿ ಬರೆದುದನ್ನು ಓದಿದ. ''ಇದು ಕತೆ
ೕಕಲ್ಲ? ಅದ್ರೆ... ನಮ್ ಊರಿನ ಹಳೇ ದಿನಗಳನ್ನು
ಪಿಸ್ಕೊಂಡ್ರೆ... ನನ್ಗೆ ಇದು ತೀರಾ ಅಪರಿಚಿತ
ಸ್‌ದಿದ್ರೂ... ರೊಮ್ಯಾಂಟಿಕ್ ಅನ್ಸುತ್ತೆ. ಅಂದ್ಹಂಗೆ
ು ಕತೇನಾ ?... ನಿಜಾನಾ ?...'' ಎಂದು ಕೇಳಿದ.

''ನಾನೂ ಹಾಗೇ ಅನ್ಕೊಂಡಿದ್ದೆ ಅಪ್ಪಾ, ಆದ್ರೆ ನಿಜಾ ತೆ. ಮೊನ್ನೆ ಏನಾಯ್ತು ಗೊತ್ತಾ? ನನ್ ಫ್ರೆಂಡ್ ಪ್ತಾ ಇದ್ಲು...''

''ಅದೇ ಮಂಡ್ಯದ್ ಫ್ರೆಂಡಾ ?''

''ಅಲ್ಲ ಅಪ್ಪಾ, ಇವ್ಳು ದೀಪ್ತಿ, ಅವ್ಳ್ ಮನೆ ಹಿಂದೆನೇ ಸ್ಲಿಮ್‌ರ ನಾಲ್ಕೈದು ಮನೆ ಇದ್ದಾವಂತೆ,. ಆದ್ರೂ ವರ್ರ‍್ಗೂ ಅವ್ಳು ಒಂದ್ ಸಲಾನೂ ಅವ್ರ ಮನೆಗೇ ೕಗಿಲ್ವಂತೆ! ಅವ್ಳಿಗೆ ಹೋಗ್ಬೇಕು ಅಂತ ಅನ್ನಿದ್ರೂ ಯವ್ರು ಅದಕ್ ಒಪ್ಪಲ್ಲ ಅಂತಿದ್ಲು. ಅದನ್ನ ಕೇಳಿ ಮ್ಮಾ ಅಂತಿದ್ಲು, ಅವ್ಳಿಗೆ ಚರ್ಚಿಗೆ ಹೋಗಿ ಪ್ರೇಯರ್ ಡೋದು ನೋಡೋಕೆ ಇಷ್ಟ ಅಂತೆ. ಆದ್ರೆ ಗೂ ಅಷ್ಟೇ... ಅವ್ರಿಗೇನಾದ್ರೂ ಅಮ್ಮ ಬರ್ದಿದ್ದನ್ನು ದ್ರೆ ಹೀಗೂ ಇರತ್ತಾ ಅಂತ ನಿಜಾ ಬೆರಗಾಗ್ತಾರೆ. ಡಿತಾ ನಂಬಲ್ಲ...''

ಮಾತು ಎತ್ತೆತ್ತಲೂ ಹೊರಟಿತ್ತು. ಅಷ್ಟರಲ್ಲಿ, ಮ್ಮಾ, ನಂಗೊಂದು ಡೌಟು. ಇಷ್ಟೆಲ್ಲ ರೊಮ್ಯಾಂಟಿಕ್ ಆಗಿ ಬರ್ದಿದ್ದೀಯಲ್ಲ... ಆ ಏನದು... ಹಾಂ! ಇಟಗಿ... ಅದು ಈಗ ಹ್ಯಾಗೆ ಹುದು ಅಂತೀಯಾ... ?'' ಎಂಬ ವಿಜಯಾಳ ಪ್ರಶ್ನೆ ನ್ನು ಯೋಚನೆಗೆ ಹಚ್ಚಿತು.

'ಏನೋಪ್ಪ! ಹ್ಯಾಗ್ ಹೇಳೋದು...? ಕಾಲಕ್ಕ ತೆ ಎಲ್ಲಾ ಬದ್ಲಾಗ್ಲೇಬೇಕಲ್ಲ. ಅಲ್ಲೂ ಸಾಕಷ್ಟ ಲಾವಣೆ ಆಗಿರ್ ಬಹುದು...''

'ಒಂದು ಐಡಿಯಾ... ನಾವ್ಯಾಕೆ ಒಂದ್ಸಲ ಆ ಊರ್ಗೆ ೕಗ್‌ಬಾರ್ದು...? ನಾವೆಲ್ಲ ಒಟ್ಗೆ ಹೋಗಿ ಅಲ್ಲೆಲ್ಲ ಡಿ, ಸುತ್ತಾಡಿ, ಆ ಕಾಲದವ್ರು ಯಾರಾದ್ರೂ ಇನ್ನೂ ಮಾತಾಡ್ಸಿ...''

'ಹೂಂ... ಯಾಕ್ ಆಗ್ಬಾರ್ದು... ?'' ಈತನೂ ಕ್ಕು ನೀಡಿದ.

ವಿಜಯಾಳ ಮಾತು ಕೇಳಿ ಒಂದು ಕ್ಷಣ ಅಚ್ಚರಿ ದರೂ ಖುಷಿಯೆನಿಸಿತು. ಮರು ಕ್ಷಣದಲ್ಲಿ ಅದೊಂದು ತ್ತನ ಎನಿಸಿಬಿಟ್ಟಿತು. ಯಾವ ಊರೇ ಆಗಲೀ, ವತ್ತು ನಲ್ವತ್ತು ವರ್ಷಗಳಲ್ಲಿ ಬದಲಾಗದೇ ಹಾಗೇ ತೇ? ಅಥವಾ ಬಾಲ್ಯದ ಹಳವಂಡ ಗಳನ್ನು ಹೀಗೆ ದಲ್ಲಿ ಜೋಪಾನವಾಗಿ ಕಾಪಿಡುವುದರಲ್ಲಿ ಸಿಗುವ ಮತ್ತು ಆನಂದಗಳು ಅವುಗಳನ್ನು ವಾಸ್ತವದಲ್ಲಿ ಧಿಸುತ್ತಾ ಹೋಗುವುದರಲ್ಲಿ ಸಿಕ್ಕೀತೇ? ಎಂದು ಡೆ. ಇಲ್ಲಿಯವರೆಗೆ ಯಾರೊಂದಿಗೂ ಹಂಚಿ ದೆ ಇದ್ದ ಕಾರಣಕ್ಕೇ ಈ ನೆನಪು ಇಷ್ಟೊಂದು ಗಿದೆಯೇ ಅಥವಾ ಇದು ನನಗೆ ವಯಸ್ಸಾಗುತ್ತಾ ುದರ ಸೂಚಕವೋ ಎಂದೂ ಅನ್ನಿಸಿತು. ಯರ್ಯಕ್ಕಾಗಿಯೋ, ಅಳುಕಿನಿಂದಲೋ ಅಥವಾ ೕಚದಿಂದಲೋ ನಾನು ಆ ವಿಚಾರವನ್ನು ಕೈಬಿಟ್ಟರೂ ಾ ಕೈಬಿಡಲಿಲ್ಲ. ಮುಂದಿನ ಕೆಲ ದಿನಗಳಲ್ಲೇ ಪ್ರವಾಸ ಇಟಗಿಯ ಕಡೆ ಎಂದು

> **''ರೆ''**
>
> ಈ ಹಕ್ಕಿಗಳು ನೆಲದ ಮೇಲೆ
> ಮಾಡಿದ್ದರೆ ಮನೆ, ಮನುಷ್ಯ ಮರದ ಮೇಲೆ
> ಮರಮರದ ತುಂಬಾ
> ಹಕ್ಕಿ ಒಣಗಲು ಇಟ್ಟ ಬಟ್ಟೆಗಳು
>
> **ವಾಸುದೇವ ನಾಡಿಗ್**
> ಜವಹಾರ ನವೋದಯ ವಿದ್ಯಾಲಯ
> ವಾಣಿಗವಲೆ - ೫೭೬೨೩೫

ನಿರ್ಧಾರವಾಯಿತು. ನಮ್ಮ ಜೊತೆಗೆ ಸಹೋದ್ಯೋಗಿಯ ಕುಟುಂಬವೂ ಸಂಭ್ರಮದಿಂದ ಸೇರಿಕೊಂಡಿತು.

ಬಾದಾಮಿ, ಐಹೊಳೆ, ಪಟ್ಟದಕಲ್ಲು ಸುತ್ತಾಡಿ, ಬಾಲ್ಯದ ಕನಸಿನ ಊರಾದ ಇಟಗಿಯತ್ತ ವಾಹನ ಮುಖ ಮಾಡಿತು. 'ನಾವು ಎಲ್ಲಿಗ್ ಹೋಗ್ತಾ ಇದ್ದೀವಿ ?', 'ಅಲ್ಲಿಗೆ ಯಾಕ್ ಹೋಗೋದು ?', 'ಈಗ ಅಲ್ಲಿ ಯಾರ‍್ಯಾರ್ ಇದ್ದಾರೆ ?', 'ಅಲ್ಲಿ ಏನೇನ್ ನೋಡ್ಲಿಕ್ಕಿದೆ ?', 'ಅಲ್ಲಿ ಒಳ್ಳೇ ಹೋಟೆಲ್ ಇದೇನಾ ?', 'ಐಸ್‌ಕ್ರೀಂ ಪಾರ್ಲರ್ ಇದೇನಾ ?...' ಮಕ್ಕಳ ಪ್ರಶ್ನೆಗಳ ಭೂಬಾಣಗಳಿಗೆ ಕೊನೆಯಿರಲಿಲ್ಲ. ಅತ್ತ ಗಂಡಸರ ಜಗತ್ತೇ ಬೇರೆ. ಈತನೋ, ತನ್ನಿಂದ ಆಗೀಗ ಕೇಳಿದ ಮತ್ತು ಉತ್ತರ ಕರ್ನಾಟಕದ ತನ್ನ ಒಂದೆರಡು ಭೇಟಿಗಳಲ್ಲಿ ಕಂಡ ಮತ್ತು ಬರಹದ ಓದಿನ ಹಿನ್ನೆಲೆಯಿಂದ ಅಲ್ಲಿಯ ಜನಜೀವನದ ಬಗ್ಗೆ ರನ್ನಿಂಗ್ ಕಾಮೆಂಟರಿ ಆರಂಭಿಸಿದ್ದ.

''ಅದೆಲ್ಲಾ ಅಂದಿನ ಮಾತು. ಈಗಲೂ ಹಾಗೇ ಇರುತ್ತೆ ಅಂತ ತಿಳಿದ್ರೆ ಅದು ಮೂರ್ಖತನ.''

''ಈಗಿನ್ ರಾಜಕೀಯ ಎಷ್ಟ್ ಕೆಟ್ಟ್‌ಹೋಗಿದೆ ಅಂದ್ರೆ ನಮ್ಮ ದೇಶದ, ಯಾವ ಊರಿನ್ ಮೂಲೇನೂ ಕೋಮುವಾದಿ ಬಣ್ಣದಿಂದ ಹೊರ್‌ಗೆ ಉಳ್ದಿಲ್ಲ. ಎಲ್ಲೆಲ್ಲಿ ಸೌಹಾರ್ದತೆ ಇದೆನೋ ಅಲ್ಲೆಲ್ಲ ವಿಷಬೀಜ ಬಿತ್ತೋ ಕೆಲ್ಸಾನ ಕೆಲವು ಗುಂಪು ಬಹಳ ವ್ಯವಸ್ಥಿತವಾಗಿ ಮಾಡ್ತಾ ಬಂದಿವೆ.''

''ಅದೇನೋ ನಿಜ. ಮೊದಮೊದಲು ಈ ಸಿಟಿಗೆ ನಾವು ಬಂದಾಗ, ಇವತ್ತಿನ್ ಪರಿಸ್ಥಿತೀನ ಕಲ್ಪಿಸ್ ಕೊಳ್ಳೋಕೆ ಎಲ್‌ಸಾಧ್ಯ ಇತ್ತು? ಎಲ್ಲೋ ಅಲ್ಲೊಂದು ಇಲ್ಲೊಂದು ಜಾಗದಲ್ಲಿ ಗಲಾಟೆ ನಡೀತಿತ್ತು. ಉಳಿದಂತೆ ನಾವೆಲ್ಲ ಚೆನ್ನಾಗೇ ಇದ್ವಲ್ಲಾ. ಈಗ್ ನೋಡಿ, ಅದೇ ಜಾಗ ಈಗ ಸಣ್‌ಪುಟ್ ಕಾರಣ ಸಿಕ್ರೂ ಹೊತ್ತಿ ಉರೀತಿದೆ.''

''ಈ ಸಿಟಿ ಮಾತ್ರ ಹೀಗಂತಲ್ಲ, ಎಲ್ ನೋಡಿದ್ರೂ ಅದೇ ಕತೆ. ನಮ್ ಜನ್ರಿಗೂ ಏನಾಗಿದೇ ಅಂತ ತಿಳಿಯೋದಿಲ್ಲ. ಅಲ್ಲಾ, ಈಗೀಗ ಕಾವಿ ಧರ್ಸಿ ರಾಮಭಕ್ತ ಸೋಗ್ನಲ್ಲಿ ನಡ್ಯೋ ದಾಂಧ್ಲೇಲಿ ನಮ್ ಶೂದ್ರರೇ ಹೆಚ್ಚಾಗಿರ‍್ತಾರೆ. ಅವ್ರಿಗೆ ವಿವೇಚ್ನೆ ಮಾಡೋ ಶಕ್ತೀನೇ ಈಗ ಕಳ್ದುಹೋಗಿದೆಯಾ ಅಂತನ್ಸುತ್ತೆ.''

''ಅಂಕಲ್, ನಿಮ್ ಮಾತ್ ಕೇಳ್ತಾ ಇದ್ರೆ, ನಾವ್ ಮುಂದೆ ಹೋಗೋ ಅಗತ್ಯಾನೇ ಇಲ್ಲಾ ಅನ್ಸತ್ತೆ. ಆ ಊರಲ್ಲೂ ಹೀಗೇ ಆಗಿರ್ ಬಹುದು. ಹಂಗಾಗಿ ನಾವ್ ಬೇರೆ ಯಾವ್ದಾದ್ರೂ ಟೂರಿಸ್ಟ್ ಪ್ಲೇಸ್‌ಗೆ ಹೋಗೋಣ್ವಾ ಅಂಕಲ್ ?'' ಅರೆ ಮನಸ್ಸಿಂದ ಹರ್ಷ ಪ್ರಶ್ನಿಸಿದ. ತಕ್ಷಣ ವಿಜಯಾ ತಾನು ಓದಿದ ಇಟಗಿಯ ವಿಚಾರವನ್ನು ಆತನಿಗೆ ವಿವರಿಸತೊಡಗಿದಳು.

ಕಣ್ಣುಮುಚ್ಚಿ ಕುಳಿತಿದ್ದ ನನಗೆ, ಇವೆಲ್ಲ ಕೇಳಿಬಂದರೂ ಪ್ರತಿಕ್ರಿಯಿಸಬೇಕು ಎನಿಸಲಿಲ್ಲ. ಯಾಕೆಂದರೆ, ನಾನು ಎಷ್ಟು ಆತಂಕಿತಳಾಗಿದ್ದೆ ಎಂದರೆ, ನನ್ನ ಭಾವನೆಗಳನ್ನು ಹಿಡಿದಿಟ್ಟುಕೊಳ್ಳಲು ಅಸಮರ್ಥಳಾಗಿದ್ದೆ. ಯಾರದೋ ಸಾವಿನ ಸುದ್ದಿಯನ್ನು ಕೇಳಿ ಹೊರಟಂಥವರ ದುಗುಡದ ಸ್ಥಿತಿ ನನ್ನದಾಗಿತ್ತು. ಎದೆಯೊಳಗೆ ಒಂದು ಬಗೆಯ ಕುದಿತ ಆರಂಭವಾಗಿತ್ತು; ಒಳಗಿನ ಜ್ವಾಲಾಮುಖಿ ಊರು ಹತ್ತಿರವಾಗುತ್ತಿದ್ದಂತೆ ಕ್ರಿಯಾಶೀಲವಾಗಿತ್ತು. ಬಹು ವರ್ಷಗಳಿಂದ ಅದರ ಮೇಲೆ ನಾನೇ ಸೃಷ್ಟಿಸಿದ್ದ ಹಿಮಪದರ ಕರಗಿ ಒಳಗಿನ ಲಾವಾ ಕಣ್ಣೀರ ರೂಪದಲ್ಲಿ ಹೊರಸೂಸುತ್ತಿತ್ತು. 'ಇಷ್ಟು ವರ್ಷಗಳ ಕಾಲ ಈ ಒತ್ತಡವನ್ನು, ಹಂಬಲವನ್ನು ಹೇಗೆ ಅದುಮಿಟ್ಟಿದ್ದೆ?' ಎಂಬುದೇ ತಿಳಿಯದಾಗಿತ್ತು. ಮೂರು ದಶಕಗಳಿಂದ ಕಾಣದ ಊರು, ಕಡಿದುಕೊಂಡ ಅಲ್ಲಿಯ ಸಂಬಂಧ ಇಷ್ಟೊಂದು ತೀವ್ರವಾಗಿ ನನ್ನೊಳಗೆ ಆವರಿಸಿತ್ತು ಎಂಬುದು ಅರಿವಾದದ್ದೇ ಆಗ. ಹೀಗಾಗಿ 'ಆನಂದಬಾಷ್ಪ'ದ ಅರಿವನ್ನು ಅಂದು ಅಕ್ಷರಶಃ ಅನುಭವಿಸತೊಡಗಿದ್ದೆ.

೩

ಊರಿನ್ನೂ ನಾಲ್ಕೈದು ಮೈಲು ಇರುವಾಗಲೇ, ಶ್ರೀ ಕ್ಷೇತ್ರ ಇಟಗಿ ಭೀಮವ್ವನ ಪುಣ್ಯಕ್ಷೇತ್ರಕ್ಕೆ ಸ್ವಾಗತ ಎಂಬ ಫಲಕ ಎದುರಾಯಿತು. ''ಏನಮ್ಮಾ...? ನಿನ್ ಕತೇಲಿ ಅಮ್ಮನ್ ಗುಡಿ ಒಂದು ಸಣ್ಣ ಗುಡಿ ಅಂದಿದ್ದಿ. ಇಲ್ಲಿ ನೋಡಿದ್ರೇ... ಶ್ರೀ ಕ್ಷೇತ್ರ, ಪುಣ್ಯಕ್ಷೇತ್ರ ಅಂತೆಲ್ಲ ಬರ್ದಿದೆ ? ನಾವೇನಾದ್ರೂ ದಾರಿ ತಪ್ಪಿದ್ವಾ ?'' ಅಳುಕಿನಿಂದಲೇ ವಿಜಯಾ ಪ್ರಶ್ನಿಸಿದಳು.

''ಊಹೂಂ... ಸಾಧ್ಯವಿಲ್ಲ, ನಾವು ದಾರಿ ತಪ್ಪಿಲ್ಲ... ಅಮ್ಮ ಅಂದ್ರೆ ಭೀಮವ್ವನೇ ಇರ್ಬೇಕು. ನಾನು ಹೆಸರು ಮರ್ತಿದ್ದೆ ಅನ್ಸುತ್ತೆ ಆ ಗುಡೀನೇ ಈಗ ಪ್ರಸಿದ್ಧಿಗೆ ಬಂದಿರ್ಬೇಕು'' ಎಂದೆ.

''ಅಲ್ಲಿ ಯಾರಾದ್ರೂ ವಿಳಾಸ ಏನಾದ್ರೂ ಇದೆನಾ ?'' ಈತನ ಪ್ರಶ್ನೆ.

''ಎಲ್ಲಿಯ ವಿಳಾಸ? ಯಾರ ವಿಳಾಸ? ಕಣ್ಣು ಮುಚ್ಚಿದರೆ, ಕಣ್ಣೆದುರಿಗೆ ಗುಡಿ, ಮಠ, ಬೀದಿ. ಅಲ್ಲಿಯ



ಅಂಗಡಿ, ಮನೆ, ಮನೆಯ ಮಂದಿ ಎಲ್ಲರಿದ್ದಾರೆ. ಅಲ್ಲಿಗೆ ಹೋಗಲು ನನಗೆ ಯಾವ ವಿಳಾಸದ ಅಗತ್ಯವಿದೆ? ಇತ್ತೀಚೆಗೆ ಕ್ಷಣ ಕ್ಷಣವೂ ಅವೆಲ್ಲವನ್ನೂ ಅವರೆಲ್ಲರನ್ನೂ ಮನದಲ್ಲೇ ಮುಟ್ಟಿ ತಟ್ಟಿ ಮಾತನಾಡಿಸಿ, ಊರ ಬೀದಿಯಲ್ಲಿ ಓಡಾಡಿದ ನನಗೆ, ಅಪರಿಚಿತ ಊರಿಗೆ ಹೊರಟಿದ್ದೇನೆ ಎಂದೇ ಅನಿಸಿರಲಿಲ್ಲ. ಹೀಗಾಗಿ ಅವರ ಪ್ರಶ್ನೆಗೆ ನಿರುತ್ತರವೇ ನನ್ನ ಉತ್ತರವಾಗಿತ್ತು.

ಹೆಜ್ಜೆ ಹೆಜ್ಜೆಗೂ ಅಪರಿಚಿತವೆನಿಸಿತು ಊರು. ಊರ ಒಂದು ತುದಿ ಗುಡಿ ಎಂದುಕೊಂಡಿದ್ದೆ. ಈಗ ನೋಡಿದರೆ... ಇದು ಯಾವ ಬೀದಿ? ಇಲ್ಲಿಂದ ಹೇಗೆ ಮುಂದೆ ಹೋಗಬೇಕು? ಊರ ಆರಂಭ ಎಲ್ಲಿ? ಅಮ್ಮನಗುಡಿ ಎಲ್ಲಿ... ಊಹೂಂ... ತಳಬುಡ ತಿಳಿಯದಾಗಿ, ಹೆಜ್ಜೆ ಹೆಜ್ಜೆಗೂ ದಾರಿಗರನ್ನು ಕೇಳುತ್ತಾ ಗುಡಿಯನ್ನು ತಲುಪಿದೆವು. ಗುಡಿಯನ್ನು ಕಂಡದ್ದೇ, ವಿಜಯಾ, ''ಎಲ್ಲರೂ ಕೇಳಿ. ಇನ್ನು ಮುಂದಿನ ನಿಮ್ಮ ಮಾರ್ಗದರ್ಶಿ ನಾನು. ಈ ಊರಿನ ಒಂದೊಂದು ಇಂಚೂ ನನ್ಗೆ ಪರಿಚಿತ'' ಎಂದು ಸಾರಿದಳು. ಮಕ್ಕಳು ಕೇಕೆ ಹಾಕಿ ಅವಳ ಹೊಸ ಹುದ್ದೆಯನ್ನು ಅಂಗೀಕರಿಸಿಬಿಟ್ಟರು. ವಾಹನದಿಂದ ಇಳಿದು ಗುಡಿಯ ಒಳಹೋಗುತ್ತಿದ್ದಂತೆ, ''ಈಗ ಹೊಸಿಲು ದಾಟಿ ಒಳಗೆ ಕಾಲಿಡುವ ಮುನ್ನ, ಎಲ್ಲರೂ ಒಂದು ಕ್ಷಣ ಕಣ್ಮುಚ್ಚಿಕೊಳ್ಳಿ...'' ಮಾರ್ಗದರ್ಶಿಯ ಆದೇಶ ಹೊರಟಿತು.

''ಯಾಕೆ... ?''

''ಯಾಕಂದ್ರೆ, ಒಳಗೆ ತುಂಬಾ ಕತ್ಲಿರುತ್ತೆ. ಆ ಕತ್ಲೆಗೆ ನಮ್ಮ ಕಣ್ಣು ಹೊಂದಿಕೊಳ್ಳಬೇಕಂದ್ರೆ... ಅಂದ್ರೇನೇ ಒಳಗೆ ಇರೋ ಮೂರ್ತಿ ಕಾಣೋಕೆ ಸಾಧ್ಯ.''

ಅಷ್ಟರಲ್ಲೇ ಗುಡಿಯ ಒಳಹೋದ ಚಿರಾಗ್ ಕಿಸಕ್ಕನೆ ನಕ್ಕದ್ದು ಕೇಳಿತು. ಯಾಕೆ? ಎಂಬ ಪ್ರಶ್ನೆ ಹೊರಬೀಳುವ ಮುನ್ನವೇ ಹಲವರು ಅವನನ್ನು ಅನುಸರಿಸಿದ್ದೂ ಆಯಿತು. ವಿಜಯಾಳಂತೆ ನನ್ನ ಮೊಗವೂ ಪೆಚ್ಚಾಯಿತು. ಗುಡಿಯ ಒಳಹೊಕ್ಕ ನಮಗೆ ಕಣ್‌ಕಣ್ ಬಿಡುವಂತಾಯಿತು. ಗುಡಿ ತುಂಬಾ ಕತ್ತಲೆಯನ್ನೇ ನಿರೀಕ್ಷಿಸಿದ್ದ ನಮಗೆ ಕಂಡದ್ದು... ಎಲ್ಲಾ ಬಟ್ಟಾಂಬಯಲು! ಇಳಿ ಸಂಜೆಯ ಹೊತ್ತಲ್ಲೂ ಅಮ್ಮನ ಗುಡಿಯ ಒಳಗೆಲ್ಲಾ ಬೆಳಕೋ ಬೆಳಕು! ನನ್ನ ಪೆಚ್ಚಾದ ಮುಖ ನೋಡಿಯೇ ವಿಜಯಾ ನನ್ನಲ್ಲಿ ಕೇಳಬೇಕೆಂದಿದ್ದ ಪ್ರಶ್ನೆಯನ್ನು ನುಂಗಿಕೊಂಡಳು.



''ನಮ್ಮ ಮಾರ್ಗದರ್ಶಿ ಕೆಲಸಕ್ಕೆ ಹೊಸದಾಗಿ ಸೇರಿದ್ದಾರೆ... ಹಾಗಾಗಿ ಸ್ವ ಎಡವಟ್ಟಾಗಿದೆ... ಟ್ಯೂಬ್‌ಲೈಟ್ ಇಲ್ಲಿ ಉರೀತಿಲ್ಲಾ ಅಂತ ತಿಳ್ಕೊಳ್ಳಿ...'' ಚಿರಾಗ್‌ನ ಕೀಟಲೆ

''ಅಮ್ಮಾ, ಬರೀ ಗುಡಿ ಮಾತ್ರ ಬದಲಾಗಿದೆನಾ? ಅಥವಾ ಪೂರಾ ಹಳ್ಳೀನೇ... ಮುಂದೆ ಏನು ಸಿಗಬಹುದ್ದು ಅನ್ನೋದಕ್ಕೆ ಇದೇ ಸೂಚನೇನಾ? ಹೇಗನ್ಸುತ್ತೆ...?'' ಎಂದ ನನ್ನ ಕಿವಿಯಲ್ಲಿ ಪಿಸುಗುಟ್ಟಿದ ವಿಜಯಾ, ''ಯಾತ್ರಾರ್ಥಿಗಳೇ, ಹಾಗೆಲ್ಲಾ ತಪ್ಪಾಗೋ ಸಹಜ. ಅದೂ ಅಲ್ದೆ, ಈಗ್ಲೂ ಊರು, ಜನ ಬದಲಾಗ್ದೇ ಹಾಗೇ ಇರ್ಬೇ ಅನ್ನೋಕಾಗುತ್ತಾ? ಮುಂದೆ ಇನ್ನೂ ಹೆಚ್ಚೆಚ್ಚು ಅನಿರೀಕ್ಷಿತ ಪ್ರಸಂಗಗಳು ನಿಮ್ಮ ಎದುರ್ಗೊಳ್ಳಲು ಕಾದಿರಬಹುದು... ಅವುಗಳ ಸರ್ವೇಗೆ ನಾವು ಬಂದಿರೋದು... ವಿಜಯಾ ಗಂಭೀರವಾಗಿ ಆದರೆ ಅಷ್ಟೇ ನಾಟಕೀಯವಾಗಿ ಉಸುರಿದಳು.

ನಮ್ಮ ಮಾತುಗಳಿಂದ ಆ ಊರಿಗೆ ನಾವು ಹೊಸಬರೆಂದು ತಿಳಿದ, ಗುಡಿಯೊಳ ಕುಳಿತಿದ್ದ ನಡುವಯಸ್ಸಿನ ಸಂಪ್ರದಾಯಸ್ಥ ಮಹಿಳೆ, ನಮ್ಮ ಪೂರ್ವಾಪ ವಿಚಾರಿಸತೊಡಗಿದಳು. ನಾವೂ ನಮ್ಮ ಪರಿಚಯವನ್ನು ಲೆಕ್ಕಾಚಾರದಲ್ಲಿ ಹೇಳಿದ್ದಾಯ ''ಆ ಭೀಮವ್ವನ - ನಿಮ್ಮನ್ನ ಕರ್ರ್ಕೊಂಡಾಳ, ನಿಮ್ ಇಚ್ಛಾ ಪೂರಾ ಮಾಡ್ತಾಳ ಬಿಡ್ರಿ... ಎಂದು ಆಕೆ ಶಿಫಾರಸ್ಸು ಮಾಡಿದಳು. 'ಇವಳ್ಯಾರೋ ಪಂಡಳಿರಬೇಕು' ಈಗ ಕಿವಿಯ ಉಸುರಿದ. 'ಕ್ಷೇತ್ರವೆಂದ ಬಳಿಕ ಪಂಡರಿರದಿದ್ದರೆ ಹೇಗೆ?' ಎಂಬ ಕಟಕಿಯ ಇನ್ನೊಂದು ದಿಕ್ಕಿನಿಂದ ತೂರಿಕೊಂಡಿತು.

ನಾನು ಬೆರಗುಗಣ್ಣಿಂದ ಗುಡಿಯೊಳಗಿನ ಆಧುನಿಕತೆಯ ಪ್ರವೇಶವನ್ನು, ಲೈಟಿ ಬೆಳಕಿನಲ್ಲಿ ಹೊಳೆಯುತ್ತಿದ್ದ ಭೀಮವ್ವನ ಮೂರ್ತಿಯನ್ನು, ಅವಳಿಗೆ ಹರಸಿಕೊಂಡವ ಸಲ್ಲಿಸಿದ ಪುಟ್ಟಪುಟ್ಟ ತೊಟ್ಟಿಲುಗಳ ಆಕೃತಿಗಳನ್ನು, ಗುಡಿಯಲ್ಲಿ ಹರಡಿದ್ದ ಧೂಪದ ಪರಿಮ ಮತ್ತು ಉರಿವ ಎಣ್ಣೆ ದೀಪದ ಕಂಪನ್ನು ಹೀರಿಕೊಳ್ಳುತ್ತ ನಿಂತಿದ್ದೆ. ''ಅಮ್ಮಾ, ಇಷ್ಟ ನೋಡಿದ್ ಮೇಲೆ ಊರೊಳ್ಗೆ ಹೋಗ್ಬೇಕಾ? ಇಲ್ಲೇ ಇಷ್ಟು ಬದ್ಲಾಗಿರೂವಾಗ, ಊ ಜನರು ಇನ್ನಷ್ಟು ಬದಲಾಗಿರ್ತಾರೋ?...'' ಎಂದು ಆತಂಕ ವ್ಯಕ್ತ ಪಡಿಸಿದರು ವಿಜಯಾಳ ಅನ್ವೇಷಣೆಯ ಕುತೂಹಲ ತಣಿದಿರಲಿಲ್ಲ.

ನಮ್ಮ ವಾಹನ ಮುಂದಕ್ಕೋಡಿತು. ''ಇದು ನೀನ್ ಹೇಳಿದ ಬಜಾರು, ಇಲ್ಲೇ ಸ ನಡೆಯುತ್ತಿದ್ದ ಜಾಗ ಇರಬೇಕು, ಇಲ್ಲಿಂದ ಮುಂದಕ್ಕೆ... ಎಡಕ್ಕೆ ಅಲ್ವಾ ಅ ಬಾಗಿಲು?... ಹಾಂ... ಒಂದು... ಮೂರು... ಇಲ್ಲಿ ಈ ತಿರುವಲ್ಲಿ ತಿರಿಕೋಬೇ ಅನ್ಸುತ್ತೆ ಅಲ್ವಾ?...'' ''ಡ್ರೈವರ್ರೇ, ಸ್ವಲ್ಪ ಮುಂದೆ ಬಲಗಡೆ ಬೀದಿಯಲ್ಲಿ ತಿರು ಕೊಳ್ಳಿ. ಹಾಂ... ಇಲ್ಲೇ... ಇಲ್ಲೇ... ಮುಂದೆ ಇರೋದೇ ಅಜ್ಜನ್ ಮಠ? ಹಾಂ ಹಾಂ... ಅಮ್ಮಾ, ಇಲ್ಲೇ... ಇಲ್ಲೇ.. ನಿಲ್ಸಿ... ನೋಡಿದ್ರಾ? ಎಷ್ಟು ಕರೆಕ್ಟಾಗಿ ನಿಮ ಕರ್ಕೊಂಡು ಬಂದಿದ್ದೀನಿ.''

ವಿಜಯಾಳ ಸಂಭ್ರಮಕ್ಕೆ ಗರಿ ಮೂಡಿತ್ತು. ಹೌದು ಏನೇನೂ ಕಷ್ಟವಾಗಲಿ ಯಾವ, ಯಾರ ವಿಳಾಸವೂ ಬೇಕಾಗಲಿಲ್ಲ. ಊರು ಹೊರಗೆ ಬೆಳೆದಿತ್ತೇ ಹೊರ ಒಳಗೆ ಬೆಳೆದಿರಲಿಲ್ಲ. ಅದು ಬೆಳೆಯುವುದಾದರೂ ಹೇಗೆ ಸಾಧ್ಯ? ಮನೆಗಳನ್ನು ಹಿಂಜಿದಂತೆ ಹಿಂಜಿ ಅಗಲಗೊಳಿಸಲು ಬಂದೀತೇ? ಕೆಲ ಮನೆ ಮಣ್ಣುಗೋಡೆಗಳನ್ನು ಕಳಚಿಕೊಂಡು ಸಿಮೆಂಟು ಮೆತ್ತಿಕೊಂಡಿದ್ದರೆ, ಇನ್ನು ಕೆ ಮಣ್ಣಿನ ಮಾಳಿಗೆಯ ಬದಲು ಹಂಚನ್ನೋ ತಾರಸಿಯನ್ನೋ ಹೇರಿಕೊಂಡಿದ್ದವು. ಅ ಬೀದಿಗಳು, ಅವೇ ಕೇರಿಗಳು, ಜನ ಮಾತ್ರ ಅಪರಿಚಿತರು. ಕಣ್ಣ ಮುಂದೆಯೇ ಅ ಮಠ ನಿಂತಿದೆ, ಅದರೆದುರಿನ ಬಾವಿಯೂ. ಅದರ ಸುತ್ತಮುತ್ತ ಇದ್ದ ಪೌಳಿ, ದ ಗಾತ್ರದ ಹುಣಸೆ ಮತ್ತು ಬೇವಿನ ಮರಗಳು ಮಾತ್ರ ಕಾಣದಾಗಿವೆ. ಮುಂದೇನು?

ಎಲ್ಲರ ಕಣ್ಣುಗಳೂ ನನ್ನತ್ತ. ನನ್ನವು ಮಾತ್ರ ನಿಂತಲ್ಲಿಂದಲೇ ಕಾಣುತ್ತಿದ್ದ ಅಜ್ಜಿ ಮನೆಯತ್ತ. ನನ್ನಜ್ಜಿ ಬಾಳಿದ, ನಾನು ಬಾಲ್ಯವನ್ನು ಸವಿದಿದ್ದ, ಆ ಪ್ರೀತಿಯ ಯಾರಿಗೋ ಮಾರಾಟವಾಗಿದ್ದು ಗೊತ್ತಿತ್ತು. ಆದರೆ... ಅದನ್ನು ಮುಟ್ಟದೆ, ಅ ಒಳಹೊಕ್ಕು ಅದರ ಮೂಲೆ ಮೂಲೆಯನ್ನೂ ಮುಟ್ಟಿ, ತಟ್ಟಿ, ಮೂಸಿ, ಅಲ್ಲಿ ಸ ಅನುಭವಗಳನ್ನು ಹೇಳಿಕೊಳ್ಳದೆ ಒಳಗಿನ ಲಾವಾ ತಣ್ಣಗಾದೀತೇ? ಮ ಅಂಗಳದಲ್ಲಿ ಆಡುತ್ತಿದ್ದ ಮಕ್ಕಳನ್ನು ಕರೆದು, ''ಹುಸಿನೆವ್ವ ಇದ್ರ ಬರಾಕ ಹೇಳ್ರಪ ಎಂದೆ. ''ಎಂಥಾ ಹುಚ್ಚು ನಿನ್ದು? ನಿನ್ನ ಅವ್ವನ ಗೆಳ್ತಿ ಹುಸಿನೆವ್ವ ಇನ್ನೂ ಇದ್ದಾ ನಿನ್ನವ್ವನೇ ಸತ್ತು ವರ್ಷಾ.... ಅಂಥಾದ್ರಲ್ಲಿ..?'' ಈತನ ಪ್ರಶ್ನೆ.

''ಇಲ್ಲ, ಇಲ್ಲ. ಹುಸಿನೆವ್ವ ಸಾಯೋಕ್ ಸಾಧ್ಯ ಇಲ್ಲ. ಅವ್ವ ಇದ್ದಿರ್ಲೇಬೇಕು'' ನನ್ನ

ಹೀಗೆ ಹೋದ ಮಕ್ಕಳು ಹಾಗೆ ಬಂದರು. ಅವರ ಜೊತೆಯಲ್ಲಿ ಒಬ್ಬ ಮುದುಕಿ ''ಯಾರೂ..? ಅಯ್... ನಮ್ ಸುಂದ್ರವ್ವನ್ ಮಗಳಲ್ಲಾ..?'' 'ಇದು ಹುಸಿನೆವ್ವ ಆಗಿ ಬೇರೆ ಯಾರು ಆಗಿರಲು ಸಾಧ್ಯ? ಇಲ್ಲೀವರೆಗೆ ಬಂದುದಕ್ಕೂ ಸಾರ್ಥಕವಾ

ತನ್ನನ್ನು ಗುರುತಿಸುವ ಒಬ್ಬರಾದರೂ ಈ ಊರಲ್ಲಿ
ಇದ್ದಾರಲ್ಲಾ, ಇದಕ್ಕಿಂತ ಬೇರೇನು ಬೇಕು' ಎನಿಸಿದ್ದೇ,
ನನ್ನೇ ಕಂಡ ಸಂತಸದಲ್ಲಿ ಅವಳನ್ನು ಅಪ್ಪಿಕೊಂಡಿದ್ದೆ. ಜೊತೆ
ಕೆಗೆ ನನ್ನ ಪರಿವಾರವನ್ನೂ ಆಕೆಗೆ ಪರಿಚಯಿಸತೊಡಗಿದ್ದೆ.

'ಬಾ... ಬರ್ರಿ... ಇಲ್ಲ್ಯಾಕ ನಿಂತೀರಿ? ಮನೀಗೆ
ಹೋಗೂಣಾಂತ. ನೋಡ್, ಮುಂಜಾಲಿಂದ ಕಣ್
ಡ್ಯೋತಿತ್ತು, ಏನೋ ಸುದ್ದಿ ಐತಿ ಅನ್ಕೊಂಡಿದ್ದೆ. ಬೇಸಿ
ಯವ್ವಾ... ಕಾರು ನೋಡಿ ನಿಮ್ ಅಪ್ಪಾರ ಬಂದ್ರೇನೋ
ದ್ದೆ... ಹೆಣ್ಮಕ್ಳು ಇಳಿಯಾನಾ ಯಾರ ಬ್ಯಾರೇ ಇರ್ಬೇಕು ಬಿಡು
ಅಲ್ಲೇ ಕಟ್ಟೀಗ್ ಕುಂತೆ... ಬಾ... ಬರ್ರಿ ಬರ್ರಿ... ಮನೀಗೆ...''

'ಬ್ಯಾಡ ಹುಸಿನೆವ್ವ... ಆದ್ರ... ಅಜ್ಜೀಮನಿ ನೋಡ್ಬೇಕಿತ್ತು...''

''ಅದನ್ನ ನಿಮ್ಮವ್ವ ಮಾರಾಟ ಮಾಡ್ಯಾಳಲ್ಲ... ಈಗ ಅಲ್ಲೇ....''

''ಗೊತ್ತು ಬಿಡು ಚಿಗವ್ವಾ... ನಾವ್ ಹೊಂಡತೀವಿ'' ನನ್ನ
ತು ಮುಗಿಯುವ ಮೊದಲೇ ವಿಜಯ ಮೊಣಕೈಯಿಂದ
ದಳು.




''ಹಂಗ್ಯಾಕ ಅಂತೀಯಬೇ... ನಿಮ್ ಅಮ್ಮ , ಅವ್ವ ಇರ್ಲಿಲ್ಲ
ತ್ರ ನಾವ್ ಇಲ್ಲಾ... ಈಕಿ ಯಾರು ? ಏನ ಹೇಳಾಕ ಒದ್ದಾಡ್ತಾಳಲ್ಲಾ ?''

''ಏನಿಲ್ಲ... ಏನಿಲ್ಲ...''

''ಅಗ ನೋಡು, ಅಕ್ಕಾಸ್ರ ಸ್ಯಾವಂತಿ ಬಂದ್ಲು. ನೆಪ್ಪೈತಾ ? ನಿನ್ ಗೆಳ್ತೀ ಅಕ್ಕಾ.''

''ಯಾರೂ...''

ಅಷ್ಟರಲ್ಲಿಯೇ ಸೇವಂತಿಯೇ ಬಂದು, ''ನಾನು ನಿನ್ ಗೆಳ್ತಿ ಪ್ರೇಮಾನ ಅಕ್ಕ...
ಅಮ್ಮನ್ ಮನಿ ಬಾಜೂಕ ಇರೂ ಕಮ್ಮಾರ್ರ ಮನೀಗೇ ನನ್ನ ಕೊಟ್ಟದ್ದು...''
ನೆನಪಾಗಿ ಅವಳೊಂದಿಗೆ ಮಾತಾಡುವಷ್ಟರಲ್ಲಿ ಇನ್ನೊಂದು ದನಿ ಕೇಳಿಬಂತು.

''ಬರ್ರಿ ಬರ್ರಿ... ನಿಮ್ಮ ಅಮ್ಮಾರ್ ಮನೀನ ನಾವ ತಗೊಂಡವ್ರು... ಭಾಳ ದೂರ್‌ದಿಂದ
ದಿರ್‍ಬೇಕು ನೀವು... ನಾಕ್ ಹೆಜ್ಜಿ ಬರ್ರಿ... ಚಾ ಮಾಡಸ್ತೀನಂತ. ಮನೀಗೆ ಬರ್ರಿ...''

''ಅಮ್ಮಾ , ಇದೇ ಒಳ್ಳೇ ಚಾನ್ಸ್. ಕರೀತಿದ್ದಾರೆ ಹೋಗೋಣ ಬಾ'' ವಿಜಯಳ
ತ್ಸಾಹ. ಆದರೆ ಈ ಮಾತು ಅಂದವರು ಯಾರೆಂದು ನೋಡಿದರೆ, ಅಜ್ಜಿ
ಯನ್ನು ಕೊಂಡುಕೊಂಡ ದಂಪತಿಗಳು...!

ಅದು ನನಗೆ ತುಂಬ ಪ್ರಿಯವಾದ ಕರೆಯಾಗಿತ್ತು... ಆಸೆಗಣ್ಣಿಂದ ಅವರತ್ತ
ಡಿದಾಗ, ಆಕೆಯ ಹಣೆಯ ಮೇಲಿನ ವಿಭೂತಿ ಪಟ್ಟೆ, ಕಾಸಿನಗಲದ ಕುಂಕುಮ,
ಮೇಲಿನ ಹಚ್ಚೆ ಹಾಗೂ ಆಕೆಯ ಮತ್ತು ಆಕೆಯ ಗಂಡನ ಕೊರಳಿನಲ್ಲಿ
ಗಾಡುತ್ತಿದ್ದ ಲಿಂಗದ ಕರಡಿಗೆ ಕಣ್ಣಿಗೆ ಹೊಡೆದು ಕಂಡು, ಮುಂದಿಡಬೇಕೆಂದಿದ್ದ ನನ್ನ
ತತ್ತರಿಸಿತು. 'ಅಂಥಾ ಮಂದಿ ನಮ್ಮನ್ನು ಮನೆಯೊಳಗೆ ಕರೆದಾರೇ? ಬರಿ
ರಗಿನ ಕಟ್ಟೆ ಮುಟ್ಟಿ ಬರುವುದಕ್ಕೆ ಅಲ್ಲಿಗೆ ಹೋಗಬೇಕೇ? ಒಂದು ವೇಳೆ ಅವರು
ಮಾಡಿಕೊಟ್ಟರೆ, ನಾವು ಕುಡಿದ ಲೋಟಗಳನ್ನು ಗಂಜಳ ಹಾಕಿ ಅವರು
ಳೆಯುವುದನ್ನು ನೋಡಬೇಕೇ?' ಹೀಗೆ ಅಸ್ಪೃಶ್ಯತೆಯ, ಮಡಿ-ಮೈಲಿಗೆಯ
ಳ್ವುಗಳು ಮೈತುಂಬಾ ಎದ್ದುನಿಂತವು. ನನ್ನ ತಳಮಳದ ಯಾವ ಎಳೆಗಳೂ
ಯಾಳನ್ನು ತಟ್ಟುತ್ತಿರಲಿಲ್ಲ. ಉಳಿದವರತ್ತ ನೋಡಿದೆ. ಅವರು ಹೀಗೆ ಬಂದು
ಗಿದ ಸ್ವಾಗತವನ್ನೇ ಜೀರ್ಣಿಸಿಕೊಳ್ಳುತ್ತಿದ್ದಂತೆ ಕಾಣಿಸಿತು. ಇವನತ್ತ ನೋಡಿದೆ,
ಂದೇನೂ ಇಲ್ಲ. ಹೋಗುವ ಅಂತ ನಿನಗೆ ಅನ್ನಿಸಿದ್ರೆ ಹೋಗೋಣ. ಅವ್ರನ್ನ
ಡಿದ್ರೆ... ನೋಡು ನೀನು ನಿರ್ಧಾರ ಮಾಡು'' ಎಂದು ಹಿತವಚನ ಹೇಳಿದ.

ಅಷ್ಟರಲ್ಲಿ ಒಂದು ದೊಡ್ಡ ಗುಂಪೇ ನಮ್ಮ ಸುತ್ತ ನೆರೆದಿತ್ತು. ಅಂತಹ ಪ್ರೀತಿಯ
ತಿಯವನ್ನು ನಿರಾಕರಿಸುವುದು ಕೂಡ ಅವರಿಗೆ ಬಗೆಯುವ ಅಪಮಾನ ಎನಿಸಿ,
ರೂ ಅಜ್ಜಿಯ ಮನೆಯತ್ತ ಹೆಜ್ಜೆ ಹಾಕಿದ್ದೆವು. ಮನೆಯಾಕೆ ಶರಣವ್ವ ಯಾವ
ಜಗರವೂ ಇಲ್ಲದೆ ಮನೆಯೊಳಗೇ ಕರೆದಳು. ಅಷ್ಟೇ ಅಲ್ಲ, ''ಇದ ನೋಡ್ರೀ
ಹಾಕ್ತಾ ಇದ್ದ ಜೋಕಾಲಿ ಜಾಗ. ಈಗ ಜ್ವಾಳದ ಚೀಲ ಒಟ್ಟಬಿಟ್ಟೇವಿ. ಇಲ್ಲೇ
ದಕ್ಕಿ ಇತ್ತು, ನಿಮ್ ಅವ್ವರ ಅದನ್ನ ಕೆಡವ್ಸಿ ಖೋಲಿ ಕಟ್ಸಿದ್ರು. ಇದು ಹಿಂದ ಕಿರಾಣಿ
ಇದ್ದ ಖೋಲಿ, ಇದು ಅಡ್ಗಿಮನಿ. ಇಲ್ಲೇ ಮೊದ್ಲು ಕಟ್ಗೀ ಒಲಿ ಇತ್ತು, ಅದನ್ನ ತಗ್ಸಿ ಕಟ್ಟಿ
ಗ್ಯಾಸ್ ಒಲಿ ಇಟ್ಟೇವಿ. ಇಲ್ಲೇ ಬಚ್ಚಲ ಇತ್ತಲ್ಲ, ಅದನ್ನ ಅವ್ರ ಕೆಡ್ವಿ ಸಂಡಾಸ, ಬಚ್ಲಮನಿ
ರ. ನಾವ ಬಂದ್‌ಮ್ಯಾಲೆ ಹೆಚ್ಗೆ ಏನೂ ಬದ್ಲಾವ್ಣಿ ಮಾಡಿಲ್ಲ. ಬರ್ರಿ ಬರ್ರಿ... ನಿಮ್
ಸೀವ್ ನೋಡಾಕ ಯಾಕ್ ಹಿಂದ ಸರಕೋತೀರಿ... ನಿಮ್ ಮಕ್ಳೀಗೆ, ಮನಿಯವ್ರಿಗೆ
ತೋರ್‌ಸ್ರೀ... ಆ ಪ್ರೀತಿ ಎಲ್ಲ್ ಹೋಗತ್ತ, ಇದು ಹಿತ್ಲ... ಇದು
ಅವ್ರ ಕಟ್ಸಿದ್ದು. ಇಲ್ಲಿಂದ ಮ್ಯಾಲ ಹತಾಕ್ಕೈತಿ. ಮ್ಯಾಲೆ ಒಂದ್ ಖೋಲಿ
ಐತಿ. ಹತ್ತಿ ನೋಡ್ಯಲ್ಲ, ಸಂಕೋಚ ಮಾಡ್ಕೋ ಬ್ಯಾಡ್ರಿ. ಮಾರಿ
ತೊಳ್ಕೊಳ್ರಿ. ಇವತ್ತ ಇಲ್ಲೇ ಉಳ್ಕೊಳ್ಳೀರಂತ... ಭಾಳ್ ದಿವಸ್ಕ
ಬಂದೀರಿ. ನಿಮ್ ಅಮ್ಮನ್ ನೆಪ್ ಹಿಡ್ಕೊಂಡು ಇಷ್ಟ್ ವರ್ಷಕ್
ಬಂದೀರಲ್ಲ, ಅದ ದೊಡ್ಡು, ಎಲ್ಲಾರ್ಗೂ ಇರಾಕ ವ್ಯವಸ್ಥಾ
ಮಾಡ್ತೀವಂತ... ನಿಮ್ದ ಮನೀ ಅಂತ ತಿಳ್ಕೊಳ್ರೀ...''

ಶರಣವ್ವ ಮತ್ತು ಆಕೆಯ ಗಂಡ ಹೇಳುತ್ತ ಹೋದುದನ್ನು
ಎಲ್ಲರೂ ಮೂಕರಾಗಿ ಕೇಳುತ್ತಿದ್ದೆವು. 'ಹೀಗೂ ಉಂಟೆ... ಹೀಗೂ'
ಎಂಬ ಬೆರಗು ನಮ್ಮ ಮನದಲ್ಲಿ ಒಡಮೂಡಿತ್ತು. 'ಯಾರದೋ
ಮನೆಯನ್ನು ಖರೀದಿಸಿ ವರ್ಷಗಳೇ ಉರುಳಿಹೋದ ಬಳಿಕ,
ಹಿಂದಿನ ನೆನಪಿನ ತಂತು ಹಿಡಿದು ಬಂದ ಅಪರಿಚಿತಳನ್ನು, ಅವಳ
ಪರಿವಾರವನ್ನು ಹೀಗೂ... ಹೀಗೂ ಉಪಚರಿಸುವವರು
ಇದ್ದಾರೆಯೇ ?' ಅವರು ನನ್ನ ಭಾವುಕತೆಯನ್ನು ಕ್ಷಣಮಾತ್ರದಲ್ಲಿ
ಗ್ರಹಿಸಿ ಸ್ಪಂದಿಸಿದ ಬಗೆಗೆ ನನ್ನಲ್ಲೂ ಮಾತುಗಳೇ ಇರಲಿಲ್ಲ. ಹುಸಿನೆವ್ವ
ಮನೆಯಿಂದ ಚಹಾ ತರಿಸಿದಳು. ಶರಣವ್ವ ಚೂಡಾ ಕೊಟ್ಟಳು.
ನಾವು ಹೋದ ಸುದ್ದಿ ಹರಡಿ, ಪಕ್ಕದ ಬೀದಿಯಲ್ಲಿದ್ದ ಅಜ್ಜಿಯ ಗೇಣಿದಾರನಾಗಿದ್ದ
ಪರಪ್ಪನ ಮಡದಿ ಬಂದಳು. ''ಮುಂದಿನ ಸೋಮಾರ ನನ್ ಮಗ್ಳ ಲಗ್ನಾ ಐತಿ.
ಹೇಳ್‌ಕಳಿಸ್ಬೇಂಗ ಬಂದೀರಿ... ಇದ್ದು ಲಗ್ನ ನಡಸ್ಕೊಟ್ಟು ಹೋಗ್ಬೇಕು'' ಎಂದಳು. ನಾವು
ಆಗಲೇ ಹೊರಡುವುದು ಖಚಿತ ಎಂದಾಗ, ಮನೆಗೆ ಮಗಳನ್ನು ಕಳಿಸಿ, ಅಕ್ಕಿ ತರಿಸಿ,
''ಇದನ್ನ ಮುಟ್ಟ ಕೊಡ್ರೀ... ಅದಕ್ಕ - ಅರಿಶ್ನ ಕಲ್ಸಿ ಲಗ್ನದ ದಿವ್ಸ ಹಾಕ್ತೀನಂತ'' ಎಂದು
ಅಕ್ಕಿಯನ್ನು ಮುಂದಿಟ್ಟಳು. ಮೊದಲೇ ತೇವಗೊಂಡ ಮನ ಇನ್ನಷ್ಟು ನೆನೆಯಿತು. ನಾವೆಲ್ಲ
ಮುಟ್ಟಿಕೊಟ್ಟ ಅಕ್ಕಿಯನ್ನು ಪರಪ್ಪನ ಮಡದಿ ಸೆರಗಿನ ತುದಿಗೆ ಗಂಟುಕಟ್ಟಿಕೊಂಡಳು.

ಕಾರು ಹೊರಟಾಗ, ''ನಮ್ಮನ್ನು ಮರೀಬ್ಯಾಡವ್ವಾ... ಸೂಟೀ ಬಂದಾಗ ಮತ್ತೆ
ಬರ್ರಿ... ಬಂದು ನಾಕ್ ದಿನ ಇದ್ದ್ ಹೋಗಿ... ನಿಮ್ ಅವ್ವ ಇಲ್ಲಂದ್ರ ಏನಾತು ?
ನಾವೆಲ್ಲ ಅದೀವಲ್ಲ'' ಎಂದಳು ಹುಸಿನೆವ್ವ. ''ನೀವ ನೋಡೀರಲ್ಲ ಮನಿ ಸಾಕಷ್ಟು
ದೊಡ್ಡ ಐತಿ. ನಿಮಗ ಮ್ಯಾಲೆ ಎಲ್ಲಾ ವ್ಯವಸ್ಥಾನೂ ಐತಿ. ಬಂದು ಆರಾಮ ಇದ್ದು
ಹೋಗೀರಂತೆ. ಬರ್ತಾ ಇರ್ರಿ'' ಎಂದಳು ಅಜ್ಜಿಮನೆಯ ಒಡತಿ ಶರಣವ್ವ. ''ಖುಣಾ
ಅನ್ನೂದು ಹ್ಯಾಂಗ್ಯಾಂಗೋ ಇರತ್ತ ಅನ್ನೂದು ಸುಳ್ಳಲ್ಲ... ಹೇಳ್‌ಕಳಿಸ್ದಂಗ
ದೂರಾಬಾರಾದಿಂದ ಬಂದ್ರಿ... ಮತ್ತ ಬರ್ರಿ... ನಮ್ ಮನ್ಯಾಗೂ ಉಣ್ಣೀರಂತ''
ಎಂದಳು ಪರಪ್ಪನ ಮಡದಿ. ಊರಿಂದ ಒಂದಷ್ಟು ದೂರ ಬಂದಾಗ, ''ಅಮ್ಮಾ
ನಿಜ್‌ವಾಗ್ಲೂ ಇದೊಂದು ಒಳ್ಳೇ ಎಕ್ಸ್‌ಪೀರಿಯನ್ಸ್. ನಾವು ಇಲ್ಗೇ ಬಂದದ್ದು ಭಾಳ್
ಛಲೋ ಆಯ್ತು. ಇಲ್ಗೆ ಬಂದಿರ್ಲಿಲ್ಲಾ ಅಂದ್ರೆ, ನಾನಂತೂ ಈ ಥರಾ ಜನಾ ಇರ್ತಾರೆ
ಊರಿರುತ್ತೆ ಅಂತಾ ನಂಬ್ತಾನೇ ಇರ್ಲಿಲ್ಲ. ನಾನು ನನ್ ಫ್ರೆಂಡ್ಸ್‌ಗೆಲ್ಲಾ ಇದ್ರ ಬಗ್ಗೆ
ಹೇಳ್ಲೇಬೇಕು...'' ವಿಜಯಾಳ ಮಾತಿನಲ್ಲಿ ಸಂಭ್ರಮದ ಜೊತೆ ಜೊತೆಯಲ್ಲಿ
ಧನ್ಯತೆಯೂ ಇಣುಕಿತ್ತು. ಉಳಿದವರು ಮೌನವಾಗಿಯೇ ಅವಳ ಮಾತನ್ನು ಒಪ್ಪಿದಂತೆ
ಕೂತಿದ್ದರು. ವಾಹನ ನಿಧಾನವಾಗಿ ಮುಂದೆ ಮುಂದೆ ಸಾಗಿತು.



ಡಾ|| ಸಬಿಹಾ ಭೂಮೀಗೌಡ
ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ - ೫೭೪ ೧೯೯

# ಹೊಲೆಯರ ಗಡಗಡೆ




ಎಂ. ಡಿ. ಒಕ್ಕುಂದ
'ನೆಮ್ಮದಿ', ಮನೆ ಸಂಖ್ಯೆ : ೧೨೪
ಸಿ.ಐ.ಟಿ.ಬಿ. ಕಾಲೋನಿ
ಶ್ರೀನಗರ, ಧಾರವಾಡ


ನನ್ನೂರ ಸಿಹಿನೀರ ಬಾವಿ ಬಲು ಪುರಾತನ
ಅದರ ಸುತ್ತಲು ಕಥನ ನಿತ್ಯನೂತನ

ಸೀತೆಯನು ಹುಡುಕುತ್ತ ಲಂಕೆಗೆ ಹಾರಿದ ಹನುಮ
ಒಂದರಗಳಿಗೆ ಇಲ್ಲಿಳಿದು ನೀರು ಕುಡಿದಿದ್ದನಂತೆ
ಶಂಬೂಕನನು ವಧಿಸಿ ಮರಳಿ ಬರುವಾಗ
ರಾಮನೂ ಈ ನೀರ ಸವಿದಿದ್ದನಂತೆ
ಅಂಗೈ ತುಂಬ ಅಂಟಿದ ಏಕಲವ್ಯನ ಹೆಬ್ಬೆರಳ ರಕುತವ
ಕೋಲಗುರು ಈ ನೀರಲ್ಲಿ ತೊಳೆದಿದ್ದನಂತೆ
ಅರ್ಜುನನ ಅಶ್ವಮೇಧದ ಕುದುರೆ
ಈ ಬಾವಿಕಟ್ಟೆಯ ಮೇಲೆ ತಂಗಿತ್ತಂತೆ
ಬೋಧಿವೃಕ್ಷದ ಕೆಳಗೆ ಬೆಳಕು ಕಂಡ ಮೇಲೆ
ಬುದ್ಧನೂ ಒಮ್ಮೆ ಹಾದುಹೋಗಿದ್ದನಂತೆ
ಕಲ್ಯಾಣಕ್ಕೆ ಬೆಂಕಿಬಿದ್ದು ಬಸವ ಸಂಗಮದ ಪಾಲಾದಾಗ
ಉಳುವಿಕಡೆ ಓಡುತ್ತಿದ್ದ ಚೆನ್ನಬಸವಣ್ಣ
ಒಂದು ತತ್ರಾಣಿ ನೀರು ಒಯ್ದಿದ್ದನಂತೆ
ಲಾರ್ಡ್ ಕ್ಲೈವ್‌ನೆಂಬ ವೈಸ್‌ರಾಯ ಈ ಬಾವಿ ನೀರಲ್ಲಿ
ವಿಸ್ಕಿ ಬೆರೆಸಿ ಕುಡಿದಿದ್ದನಂತೆ
ಗಾಂಧಿ ಈ ಬಾವಿಕಟ್ಟೆಯ ಮೇಲೆ ನಿಂತು
ಭಾರೀ ಭಾಷಣ ಬಿಗಿದಿದ್ದನಂತೆ
ನಡುನಡುವೆ ನೀರ ಗುಟುಕರಿಸಿದ್ದನಂತೆ
ಇತ್ತೀಚೆಗೆ ಪೆಪ್ಸಿ ಕಂಪನಿಯವರು
ಈ ಬಾವಿಯನ್ನು ಕೊಳ್ಳಲು ಬಂದಿದ್ದರಂತೆ

......................................

ನನ್ನೂರ ಸಿಹಿನೀರ ಬಾವಿ ಬಲು ಪುರಾತನ
ಅದರ ಸುತ್ತಲು ಕಥನ ನಿತ್ಯನೂತನ
ಇಂತಪ್ಪ ನನ್ನೂರ ಬಾವಿಗೆ ಹನ್ನೆರಡು ಗಡಗಡೆ
ಹನ್ನೆರಡರಾಚೆ ಒಂದಿಷ್ಟು ಹೊರಗಡೆ
ಇನ್ನೂ ಒಂದಿದೆ ಹೊಲೆಯರ ಗಡಗಡೆ
ನಮ್ಮ ಪಾಲಿಗೆ ಅದು ನಿಷೇಧಿತ ವಲಯ.

ಹರಿಜನರ ಉದ್ಧಾರದ ಬಗ್ಗೆ ಕಣ್ಣೀರಿಡುತ್ತ
ಪಾಠ ಮಾಡುತ್ತಿದ್ದ ಗಾಂಧಿವಾದಿ ಪಾಟೀಲ ಸರ್
ಊರ ಗಡಗಡೆಯಿಂದ ನೀರು ತುಂಬುವಾಗ
ಮಾದಾರ ಸರ್ ಕೊಡ ಹೊಲೆಯರ ಗಡಗಡೆಯಿಂದ
ಬುಡುಬುಡು ಸಪ್ಪಳ ಮಾಡುತ್ತಿತ್ತು
ಇಬ್ಬರೂ ಹೆಗಲ ಮೇಲೆ ಕೊಡ ಹೊತ್ತು
'ಅಂಬೇಡ್ಕರ್ ಜಯಂತಿ'ಯ ಬಗ್ಗೆ ಮಾತಾಡುತ್ತಿದ್ದರು

ಅಂದು ಹೊಲೆಯರ ಹುಡುಗನಿಗೆ
ನಾನು ಕೊಡ ಹೊರಿಸಿದಾಗ ಅಪ್ಪ
ಅದೇ ಬಾವಿಯಿಂದ ಸೇದಿ
ನೀರು ಹನಿಸಿ ಕೈತೊಳೆಯ ಹಚ್ಚಿದ.

ನನ್ನ ಕೊಡ ನೀರು ಮುಟ್ಟಿದಾಗೊಮ್ಮೆ
ಇಣುಕಿ ನೋಡುತ್ತಿದ್ದೆ
ಹೊಲೆಯರ ಕೊಡವು ಬಾವಿಯಲ್ಲಿದೆಯೇ ಎಂದು
'ಅವರ ಕೊಡ ಮುಟ್ಟಿದ ನೀರು
ನನ್ನ ಕೊಡವ ಮಲಿನಗೊಳಿಸದೇ ?
ನನ್ನ ಕೊಡ ತಾಕಿದ ನೀರು
ಅವರ ಕೊಡವ ಶುಚಿಗೊಳಿಸಬಾರದೇಕೆ ?'
ಎಂದೆಲ್ಲ ಯೋಚಿಸಿ ಅಪ್ಪನಿಗೆ ಕೇಳಿಯೂಬಿಟ್ಟೆ
ತಲೆಯ ಮೇಲೊಂದು ರಪ್ಪನೇ ಬಾರಿಸಿ
'ಮುಚಗೊಂಡು ನಡೆ' ಎಂದಾಗ ತೆಪ್ಪಗಾದೆ

ಒಂದು ಮಟಮಟ ಮಧ್ಯಾಹ್ನ
ಮನೆಯಲ್ಲಿ ಸೆರೆ ಮುಕ್ಕು ನೀರಿಲ್ಲ
ಜೋಡಗೊಡ ಹೊತ್ತು ಬಾವಿಗೆ ಧಾವಿಸಿದೆ
ಊರ ಗಡಗಡೆ ಮೇಲೆ ಒಂದೂ ಹಗ್ಗವಿಲ್ಲ
ಹೊಲೆಯರ ಕರಿಯ ನೀರು ಜಗ್ಗುತ್ತಿದ್ದ.

ಸುತ್ತಮುತ್ತ ನೋಡಿ ಯಾರೂ ಇಲ್ಲದ್ದನ್ನು
ಖಾತ್ರಿ ಪಡಿಸಿಕೊಂಡು 'ಹಗ್ಗ ಕೊಡು' ಎಂದೆ
ಆತನೂ ಎಡಬಲ ನೋಡಿ ಯಾರೂ ಇಲ್ಲದ್ದನ್ನು
ಖಾತ್ರಿ ಪಡಿಸಿಕೊಂಡು ನನ್ನತ್ತ ತಿರುಗಿದ.

ಒಮ್ಮೆಲೇ ಅವನ ಮುಖ ಧಿಮಿಧಿಮಿ
ಹೊತ್ತಿ ಉರಿಯತೊಡಗಿತು
ಕೆಂಡಕಾರುವ ಕಣ್ಣು ಹಲ್ಲು ಕಡಿಯುತ್ತಿದ್ದ
ದೇಹವಿಡೀ ನಡಗುತ್ತಿದ್ದ

ಗಹಗಹಿಸಿ ನಗತೊಡಗಿದ
ನಾನು ನಿಂತಲ್ಲೇ ಬೆವರಿದೆ
''ಇದು ಹೊಲೆಯರ ಗಡಗಡೆ
ಈ ಹಗ್ಗ ನಿಮಗ್ಯಾಕೆ ?'' ಎಂದವನೇ
ಕ್ಯಾಕರಿಸಿ ಬಾವಿಕಟ್ಟೆಗೆ ಉಗುಳಿ
ಸರಸರ ಹಗ್ಗ ಸುತ್ತಿ ಕೊಡ ಹೊತ್ತು
ದಡದಡ ನಡೆದುಬಿಟ್ಟ
ನನ್ನ ಕಣ್ಣಲಿ ಆಗ ದಳದಳ ನೀರು !

ಇಂದು 'ಬಂಡಾಯ ಕವಿ' ಎಂದೆಲ್ಲಾ ಕರೆಸಿಕೊಂಡು
ಜಾಗತೀಕರಣದ ವಿರುದ್ಧ ಕವಿತೆ ಬರೆಯುತ್ತಿರುವ
ನಾನು
ಮೊನ್ನೆ ಊರಿಗೆ ಹೋದವ ನೀರಿಗೂ ಹೋಗಿದ್ದೆ
ಕರಿಯನ ಮಗ ಮರಿಯ ನನ್ನ ಸಹಪಾಠಿ
ಅದೇ ಹೊಲೆಯರ ಗಡಗಡೆಯಿಂದ
ನೀರು ಸೇದುವದ ಕಂಡೆ.
ಕರಿಯ ನೆನಪಾಗಿ ಮತ್ತೊಮ್ಮೆ ಕಣ್ಣೀರು
ಊರ ಗಡಗಡೆಗಳ ಗಡಗಡ ಸಪ್ಪಳ
ಹೊಟ್ಟೆಯಲಿ ಒಡಮುರಿಯತೊಡಗಿತು
ಅಲ್ಲೊಬ್ಬ ಊರ ಹಿರಿಯ ಯಾರೋ ಪ್ರವಾಸಿಗರಿಗೆ
ಬಾವಿಯ ಪುರಾಣ ಇತಿಹಾಸಗಳ ಕತೆ ಹೇಳುತ್ತಿದ್ದ
ನಾನು
'ಬುದ್ಧ ಬಸವ ಗಾಂಧಿ ಅಂಬೇಡ್ಕರ್...'
ಎಂದು ಬಡಬಡಿಸುತ್ತ
ಖಾಲಿ ಕೊಡ ಹೊತ್ತು ಮನೆಯ ಕಡೆ ನಡೆದೆ.

ನಾವು ನಮ್ಮ ಬರವಣಿಗೆಯಲ್ಲಿ, ಪಠ್ಯಪುಸ್ತಕಗಳಲ್ಲಿ, ಜ್ಞಾನಸಾಹಿತ್ಯದಲ್ಲಿ ಬಳಸುವ ಕನ್ನಡವು ಎಂತಹ ಕನ್ನಡವಾಗಿದೆ, ಯಾರ ಕನ್ನಡವಾಗಿದೆ ಎನ್ನುವುದು ಆ ಮುಖ್ಯ ಪ್ರಶ್ನೆ. ಅನಕ್ಷರಸ್ಥರ ಮಾತು ಹಾಗಿರಲಿ, ಕನ್ನಡದಲ್ಲಿ ಓದಲು ಬರೆಯಲು ಕಲಿತಿರುವವರಿಗೂ ಅರ್ಥವಾಗದ, ಅವರು ಎಂದಿಗೂ ಓದದ/ಓದಲಾಗದ ಕನ್ನಡವನ್ನು ನಾವು ಏಕಾಗಿ ಬಳಸುತ್ತೇವೆ ? ಅದು ಯಾರನ್ನು ಕಾಪಾಡಿಕೊಳ್ಳುವ ಉಪಾಯವಾಗಿದೆ ? ಹೀಗೆ ಮಾಡಬಾರದೆಂದು ಹೇಳಹೊರಟ ಡಿ.ಎನ್ ಶಂಕರ ಭಟ್ಟರ ಮೇಲೆ ಕರ್ನಾಟಕದ 'ವಿದ್ವಾಂಸ'ರ ಸಮುದಾಯವೇ ಮುಗಿಬಿದ್ದಿತಲ್ಲ, ಯಾಕೆ ? ಇದು ಈಗಾಗಲೇ ಮುಂದುವರೆದಿರುವ ಜಾತಿ ಮತ್ತು ವರ್ಗಗಳ ಹಿತವನ್ನು ಕಾಪಾಡಿಕೊಳ್ಳುವ ಹುನ್ನಾರವಲ್ಲವೇ ?

# ಕರ್ನಾಟಕ v/s ಕನ್ನಡ
## ಕೆಲವು ಅನುಮಾನಗಳು

ಎಚ್.ಎಸ್. ರಾಘವೇಂದ್ರ ರಾವ್

**ಈ** ಬರವಣಿಗೆಯ ತಲೆಬರೆಹವು ಅನೇಕ ...ರುಗರ ಹುಬ್ಬುಗಳು ಮೇಲೇರುವಂತೆ ಮಾಡುತ್ತದೆ. ...ರ್ನಾಟಕ ಮತ್ತು ಕನ್ನಡಗಳು ಒಂದೇ ಎಂದು ...ದವರಿಗೆ, ಇದು ಅಚ್ಚರಿಯನ್ನು ಉಂಟುಮಾಡುತ್ತದೆ. ...ದರೆ ನಮ್ಮ ಈ ನಾಡಿನ ನಿಜವಾದ ಸ್ಥಿತಿಗತಿಗಳನ್ನು ...ಗಮನಿಸಿದಾಗ ಅಂತಹ ಆಶ್ಚರ್ಯಕ್ಕೆ ಕಾರಣವಿರುವಂತೆ ...ತೋರುವುದಿಲ್ಲ. ಕರ್ನಾಟಕ ಎನ್ನುವುದು ಒಂದು ...ಭೌಗೋಳಿಕ ಪ್ರದೇಶ. ಇಲ್ಲಿನ ಬಹುಪಾಲು ಜನರು ...ಬಳಸುವ ಭಾಷೆಯು ಕನ್ನಡ. ಆದರೆ, ಇಲ್ಲಿ ಬೇರೆ ಬೇರೆ ...ಭಾಷೆಗಳನ್ನು ಮಾತನಾಡುವ ಜನರೂ ಇದ್ದಾರೆ. ಅಲ್ಲದೆ, ...ಕನ್ನಡಕ್ಕಿಂತ ಹೆಚ್ಚಾಗಿ ಬೇರೆ ಬೇರೆ ಭಾಷೆಗಳನ್ನು ...ಉಪಯೋಗಿಸುವ ಕೆಲವು ಪ್ರದೇಶಗಳೂ ಇಲ್ಲಿವೆ.



...ವುಗಳಲ್ಲಿ ಕೆಲವು ಭಾಷೆಗಳಿಗೆ, ಕರ್ನಾಟಕದ ಹೊರಗೆ ...ಯಾವ ಅಸ್ತಿತ್ವವೂ ಇಲ್ಲ. ತುಳು, ಕೊಡಗು, ಸೋಲಿಗ ...ಮುಂತಾದ ಹಲವು ಭಾಷೆಗಳು ಈ ಗುಂಪಿಗೆ ಸೇರುತ್ತವೆ. ...ಉರ್ದು, ತಮಿಳು, ಕೊಂಕಣಿ, ತೆಲುಗು ಮುಂತಾದ ...ಭಾಷೆಗಳಿಗೆ ಅಂತಹ ಅಸ್ತಿತ್ವವಿದೆ. ಆದರೆ, ಇಲ್ಲಿ ಆ ...ಭಾಷೆಗಳನ್ನು ಬಳಸುವವರಿಗೆ, ತಮ್ಮ ಮೂಲ ರಾಜ್ಯಗಳ ...ಜೊತೆ ಸಂಪರ್ಕವೇನೂ ಇಲ್ಲ. ಅವರಲ್ಲಿ ಬಹುಪಾಲು ...ಜನರು, ತಲೆಮಾರುಗಳಿಂದ ಕರ್ನಾಟಕದಲ್ಲಿಯೇ ...ಇರುವವರು. ಅವರು ನೂರಕ್ಕೆ ನೂರರಷ್ಟು ಕರ್ನಾಟಕದ ...ಜನಗಳು. ತಾಯಿನುಡಿಯ ಆಗತ್ಯದ ಬಗ್ಗೆ ಇಷ್ಟೆಲ್ಲ

ಮಾತನಾಡುವ ನಮಗೆ, ಅವರ ತಾಯಿನುಡಿಗಳನ್ನು ಕಾಪಾಡುವ ಹೊಣೆಗಾರಿಕೆಯೂ ಇದೆ. ನಾವು ಇಂಗ್ಲಿಷ್, ಹಿಂದಿ, ಸಂಸ್ಕೃತ ಮುಂತಾದ ಭಾಷೆಗಳನ್ನು ಎದುರಿಸುವಾಗ, ಮಾತೃಭಾಷೆಯೆಂಬ ಆಯುಧವನ್ನು ಬಳಸಿದರೆ, ನಮ್ಮೊಳಗೇ ಇರುವ ಇತರ ಭಾಷೆಗಳ ಪ್ರಶ್ನೆ ಬಂದಾಗ ಪ್ರಾದೇಶಿಕ ಭಾಷೆಯ ಪರವಾದ ವಾದವನ್ನು ಮಂಡಿಸುತ್ತೇವೆ. ಕರ್ನಾಟಕದಲ್ಲಿಯೇ ಇರುವ ಅನ್ಯ ಮಾತೃಭಾಷಿಕರ ಬಗ್ಗೆ ಹೆಚ್ಚಿನ ಕಾಳಜಿ ತೋರಿಸುವುದಿಲ್ಲ. ಈಚಿನ ದಿನಗಳಲ್ಲಿ, ಈ ಅನ್ಯಭಾಷಿಕರ ಸಂಸ್ಕೃತಿ ಮತ್ತು ಕಲೆಗಳನ್ನು ನಮ್ಮದಾಗಿ ಮಾಡಿಕೊಳ್ಳುವ ಪ್ರಯತ್ನದಲ್ಲಿ ಕನ್ನಡಿಗರ ಪ್ರಧಾನ ವಾಹಿನಿಯು ಅಷ್ಟೊಂದು ಆಸಕ್ತವಾಗಿಲ್ಲ.

ಇಲ್ಲಿ ಇನ್ನೊಂದು ಪ್ರಶ್ನೆಯೂ ಅಡಕವಾಗಿದೆ. ನಾವು ನಮ್ಮ ಬರವಣಿಗೆಯಲ್ಲಿ, ಪಠ್ಯಪುಸ್ತಕಗಳಲ್ಲಿ, ಜ್ಞಾನಸಾಹಿತ್ಯದಲ್ಲಿ ಬಳಸುವ ಕನ್ನಡವು ಎಂತಹ ಕನ್ನಡವಾಗಿದೆ, ಯಾರ ಕನ್ನಡವಾಗಿದೆ ಎನ್ನುವುದು ಆ ಮುಖ್ಯ ಪ್ರಶ್ನೆ. ಅನಕ್ಷರಸ್ಥರ ಮಾತು ಹಾಗಿರಲಿ, ಕನ್ನಡದಲ್ಲಿ ಓದಲು ಬರೆಯಲು ಕಲಿತಿರುವವರಿಗೂ ಅರ್ಥವಾಗದ, ಅವರು ಎಂದಿಗೂ ಓದದ/ಓದಲಾಗದ ಕನ್ನಡವನ್ನು ನಾವು ಏಕಾಗಿ ಬಳಸುತ್ತೇವೆ? ಅದು ಯಾರನ್ನು ಕಾಪಾಡಿಕೊಳ್ಳುವ ಉಪಾಯವಾಗಿದೆ? ಹೀಗೆ ಮಾಡಬಾರದೆಂದು ಹೇಳಹೊರಟ ಡಿ.ಎನ್ ಶಂಕರ ಭಟ್ಟರ ಮೇಲೆ ಕರ್ನಾಟಕದ 'ವಿದ್ವಾಂಸ'ರ ಸಮುದಾಯವೇ ಮುಗಿಬಿದ್ದಿತಲ್ಲ, ಯಾಕೆ? ಇದು ಈಗಾಗಲೇ ಮುಂದುವರೆದಿರುವ ಜಾತಿ ಮತ್ತು ವರ್ಗಗಳ ಹಿತವನ್ನು ಕಾಪಾಡಿಕೊಳ್ಳುವ ಹುನ್ನಾರವಲ್ಲವೇ? ವಿಚಾರಗಳ, ತಿಳಿವಳಿಕೆಯ ಸೃಷ್ಟಿ ಮತ್ತು ಸಂವಹನಕ್ಕೆ ಯಾವ ಬಗೆಯ ಭಾಷೆಯನ್ನು ಬಳಸಬೇಕು ಎನ್ನುವುದರ ಬಗ್ಗೆ ಇರುವ ಬಿಕ್ಕಟ್ಟುಗಳು ಕೆಲಸಗಾರರನ್ನು, ಕುಶಲಕರ್ಮಿಗಳನ್ನು ಮೌನಿಗಳಾಗಿಸಿಲ್ಲವೇ ? ಕೆಲಸ ಮಾಡುವವರೇ ಬೇರೆ, ಅದರ ಬಗ್ಗೆ ಮಾತನಾಡುವವರೇ ಬೇರೆ ಎಂಬ ವಿದ್ಯಮಾನವು ಇಂದು ಒಟ್ಟು ಜನಪದದ ಬದುಕಿನ ಬಗ್ಗೆಯೇ ಉಂಟಾಗಿದೆಯಲ್ಲ, ಯಾಕೆ ?

ಉದಾಹರಣೆಗೆ, ಈಗ ನಾವು ಕರ್ನಾಟಕದ ಬಂಗಾರದ ಹಬ್ಬವನ್ನು ಧಾಂ ಧೂಂ ಎಂದು ಆಚರಿಸುತ್ತಿದ್ದೇವೆ. ಇದು ಕೇವಲ ಕನ್ನಡದ/ಕನ್ನಡಿಗರ ಹಬ್ಬವೋ? ಅಥವಾ ಕರ್ನಾಟಕದಲ್ಲಿರುವ ಎಲ್ಲರ ಹಬ್ಬವೋ? ಒಂದೇ ಒಂದು ತಮಿಳು, ಮರಾಠಿ, ತೆಲುಗು, ತುಳು ಅಥವಾ ಕೊಡಗು ಭಾಷೆಯ ಪುಸ್ತಕವನ್ನು ಪ್ರಕಟಿಸಬಹುದೆಂದು ನಮಗೆ ಹೊಳೆಯುವುದೇ ಇಲ್ಲವಲ್ಲ, ಈ ಹಬ್ಬದಲ್ಲಿ ಅನ್ಯಭಾಷಿಕರನ್ನು ಸಕ್ರಿಯವಾಗಿ ಸೇರಿಸಿಕೊಳ್ಳುವ ಪ್ರಯತ್ನವನ್ನು ನಾವು ಎಷ್ಟರ ಮಟ್ಟಿಗೆ ಮಾಡಿದ್ದೇವೆ ? ಬದಲಾಗಿ, ಅನ್ಯಭಾಷಿಕರ ಮೇಲೆ ಆಕ್ರಮಣಕಾರಿಯಾದ ನಿಲುವುಗಳನ್ನು ತಳೆಯಲು ಈ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆಯೇ? ಬೆಳಗಾವಿ ನಗರದಲ್ಲಿ ವಿಧಾನಮಂಡಳದ ಅಧಿವೇಶನವನ್ನು ಕರೆಯುವ ನಿರ್ಧಾರ ಮತ್ತು ಮಹಾಜನ ವರದಿಯು ಜಾರಿಯಾಗಬೇಕೆಂದು ಪಟಹಿಡಿಯುವ ಚಳುವಳಿಗಳು ಯಾವ ದಿಕ್ಕಿನ ಚಲನೆಗಳು? ಎಂದರೆ, ಕನ್ನಡಿಗರ ಪರವಲ್ಲದ ನಿಲುವುಗಳೆಲ್ಲವೂ ಕರ್ನಾಟಕಕ್ಕೆ ಪರವಲ್ಲದ ನಿಲುವುಗಳೆಂದು ಹೇಳುವುದು ಹೇಗೆ ?

ಕನ್ನಡದ ಮತ್ತು ಕರ್ನಾಟಕದ ವಿಶಿಷ್ಟ ಅಸ್ತಿತ್ವಕ್ಕೆ ನಿಜವಾಗಿಯೂ ಧಕ್ಕೆ ತಂದಿರುವ/ತರುತ್ತಿರುವ ಇಂಗ್ಲಿಷ್‌ನ ಬಗ್ಗೆ ಮತ್ತು ಅದಕ್ಕೆ ಅಂತಹ ದೈತ್ಯಶಕ್ತಿಯನ್ನು ಕೊಡುತ್ತಿರುವ ಜಾಗತೀಕರಣದ ಒತ್ತಡಗಳ ಬಗ್ಗೆ ತೋರಿಸದ ಪ್ರತಿರೋಧವನ್ನು ಇತರ ದೇಶಭಾಷೆಗಳ ಬಗ್ಗೆ ಯಾಕೆ ತೋರಿಸಬೇಕು ? ಹಾಗೆ ನೋಡಿದರೆ, ತುಳು, ಹಿಂದಿ, ಬಂಗಾಳಿ, ತೆಲುಗು ಮುಂತಾದ ಭಾಷೆಗಳು, ಕನ್ನಡದ ಅಸ್ತಿತ್ವಕ್ಕೆ ಧಕ್ಕೆ ತರುವ ಪ್ರಮಾಣದಲ್ಲಿ ಕರ್ನಾಟಕದಲ್ಲಿ ಬೆಳೆದು ನಿಂತಿವೆಯೇ ? ತಮಿಳಿನವರ ಆಕ್ರಮಣ, ಮರಾಠಿಗರ ದಾಳಿ ಮುಂತಾದ ಮಾತುಗಳನ್ನು ಬಳಸುವ ನಾವು, ಇದನ್ನು ನಮ್ಮದೇ ಆದ ರಚನಾತ್ಮಕ ನಿಲುವಿನಿಂದ ಸರಿಪಡಿಸಿಕೊಂಡಿದ್ದೇವೆಯೇ? ಇಡೀ ಕನ್ನಡ ಸಮುದಾಯವೇ ಇಂಗ್ಲಿಷ್‌ಗೆ ಮುಗಿಬಿದ್ದಿರುವಾಗ, ರಾಜಕೀಯ ಇಚ್ಛಾಶಕ್ತಿಯ ಲವಲೇಶವೂ ಇಲ್ಲದ ನಾವು 'ಗಂಡುಸಾದರೆ ನಿನ್ನ ಬಲಿಕೊಡುವೆಯೇನೋ' ಎಂಬ ಪ್ರಶ್ನೆಗೆ ಹೇಡಿ ಮಾರ್ದನಿಗಳಾಗಿಯೇ ಉಳಿಯುವುದಿಲ್ಲವೇ ? ಬದಲಾಗಿ, ನಮ್ಮ ಸಾಹಿತ್ಯ ಹಾಗೂ ಸಂಸ್ಕೃತಿಗಳು ಆ ಅನ್ಯ ಮೂಲಗಳಿಂದ ಸಾಕಷ್ಟು ಶ್ರೀಮಂತಿಕೆಯನ್ನು ಪಡೆದುಕೊಂಡಿಲ್ಲವೇ? ಈ ಪ್ರಶ್ನೆಗಳು ಇಂದಿಗೂ ಬಹಳ

ಮೌಲಿಕವೆಂದು ನನಗೆ ತೋರುತ್ತದೆ. ಈ ಸ್ಥೂಲ ಹಿನ್ನೆಲೆಯಲ್ಲಿ, ಕೆಲವು ಸಂಗತಿಗಳನ್ನು ಸಾಧ್ಯವಾದಷ್ಟು ವಿವರವಾಗಿ ಪ್ರಸ್ತಾಪಿಸುವುದು ನನ್ನ ಉದ್ದೇಶ.

೧. ಮಗುವು ಭಾಷೆಗಳನ್ನು ಕಲಿಯುವ ವಿಧಾನಗಳನ್ನು ಕುರಿತು, ನಮ್ಮ ಕಾಲದ ವಿದ್ಯಾವಂತರಲ್ಲಿಯೂ ಕೆಲವು ತಪ್ಪು ತಿಳಿವಳಿಕೆಗಳಿವೆ. ಒಂದು ಗೊತ್ತಾದ ವಯಸ್ಸಿನಲ್ಲಿ, ಯಾವುದೇ ಮಗುವಿಗೆ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯಲು ಖಂಡಿತವಾಗಿಯೂ ಸಾಧ್ಯ. ಅನ್ಯ ಭಾಷೆಯ ಕಲಿಕೆಯು ಮಾತೃಭಾಷೆಯ ಕಲಿಕೆಗೆ ಅಡ್ಡಿಯಾಗುವುದಿಲ್ಲ. ಆ ಭಾಷೆಗಳು ಸೂಕ್ತವಾದ ರೀತಿಯಲ್ಲಿ ಅನಾವರಣವಾಗುವುದು ಮುಖ್ಯ. ಮಾತನಾಡುವುದರಲ್ಲಿ ಪರಿಣತಿ ಬರುವುದೆಂದರೆ, ಮಗುವಿನ ಅನುಭವಲೋಕದಲ್ಲಿ ನಡೆಯುವ ವಿಸ್ತರಣಗಳೇ ಆಗಿರುತ್ತವೆ. ಸಮಾಜವು ಭಾಷಾಬಳಕೆಯ ವಿವಿಧ ಬಗೆಗಳ ನಡುವೆ ತೋರಿಸುವ ಪಕ್ಷಪಾತವು, ನಮ್ಮ ನಡುವೆ, ಮಾತುಬಲ್ಲ, ಜಾಣರಾದ, ಹಲವು ವಿಷಯಗಳಲ್ಲಿ ಪರಿಣತರಾದ ಆದರೂ ಕೀಳರಿಮೆಯಿಂದಲೇ ಮೂಕರಾದ ಜನರನ್ನು ಸೃಷ್ಟಿಸುತ್ತದೆ. ತಮ್ಮ ತಮ್ಮ ನಡುವೆ ಲೀಲಾಜಾಲವಾಗಿಯೇ ಮಾತನಾಡುವ ಈ ಸಾಮಾನ್ಯ ಜನರು ಸಾರ್ವಜನಿಕ ಸಂದರ್ಭಗಳಲ್ಲಿ ಮೌನ ತಳೆಯುತ್ತಾರೆ. ಇಂಗ್ಲಿಷ್‌ಅನ್ನು ಬಳಸುವ ಕಡೆ ಎದ್ದುಕಾಣುವ ಈ ಪ್ರವೃತ್ತಿಯು ಕನ್ನಡದ ಶಿಷ್ಟ ಬಗೆಗಳ ಬಳಕೆಯ ಸಂದರ್ಭದಲ್ಲಿಯೂ ಗಂಭೀರವಾಗಿಯೇ ಕಾಡುತ್ತದೆ. ಶಿಕ್ಷಣ, ಮಾಹಿತಿಗಳ ವಿನಿಮಯ ಮತ್ತು ಸಾಂಸ್ಕೃತಿಕವಾದ ಕೊಡುಪಡೆಗಳಲ್ಲಿ, ಎಲ್ಲರಿಗೂ ಸಮಾನವಾಗಿ ಸಂವಹನವಾಗುವ ಪ್ರಮಾಣ ಭಾಷೆಯೊಂದರ ಬಗ್ಗೆ ಎಲ್ಲರೂ ಮಾತನಾಡಿ, ಆ ಮೂಲಕ ಸಂಸ್ಕೃತ ಅಥವಾ ಇಂಗ್ಲಿಷ್‌ನ ಪರಿಭಾಷೆಯನ್ನು ಹೇರಲು ತಯಾರಾಗುತ್ತೇವೆ. ಆದರೆ, ಕನ್ನಡದ ಉಪಭಾಷೆಗಳನ್ನು ಗ್ರಹಿಸುವುದೇ ಬೇರೆ, ಬಳಸುವುದೇ ಬೇರೆ. ಗುಲ್ಬರ್ಗಾ ಪ್ರದೇಶದ ಕನ್ನಡವನ್ನು ಅರ್ಥಮಾಡಿಕೊಳ್ಳಲು, ಅದನ್ನು ಹಾಗೆ ಮಾತನಾಡಲು ಅಗತ್ಯವಾದ ಪರಿಣತಿಯ ಅಗತ್ಯವಿಲ್ಲ. ಆದ್ದರಿಂದಲೇ ಇಂದು ಕನ್ನಡ ಸಾಹಿತ್ಯವು, ಭೌಗೋಳಿಕ ಮತ್ತ ಸಾಮಾಜಿಕ ಉಪಭಾಷೆಗಳ ಬಳಕೆಯನ್ನು ಒಂದು ಮಿತಿಯೆಂದು ತಿಳಿಯದೆ, ಆ ಮೂಲಕವೇ ಹೊಸ ನೆಲೆಗಳನ್ನು ಕಂಡುಕೊಳ್ಳುತ್ತಿರುವುದು. ಇದರ ಜೊತೆಗೆ, ಕನ್ನಡದಲ್ಲಿ ಜ್ಞಾನದ ಸೃಷ್ಟಿಗೆ ಮತ್ತು ಸಂವಹನಕ್ಕೆ ಅಗತ್ಯವೆನಿಸಿದಾಗ, ಸಮುದಾಯಗಳು ಅದಕ್ಕೆ ಅಗತ್ಯವಾದ ಪರಿಭಾಷೆಯನ್ನು ರೂಪಿಸಿಕೊಳ್ಳುತ್ತವೆ. ಈ ಕೆಲಸದಲ್ಲಿ ಮಾಧ್ಯಮಗಳೂ ನೆರವಾಗುತ್ತವೆ.



ತನಗಿರುವ ವ್ಯಾಪಾರೀಕರಣದ ಒತ್ತಡಗಳ ನಡುವೆಯೂ ಇಂದು ಮಾಧ್ಯಮಗಳಿಗೆ ಇರುವ 'ಜನಗಳಿಕೆ'ಯ ಶಕ್ತಿಯು ವಿಶ್ವವಿದ್ಯಾಲಯಗಳಿಗೆ ಇಲ್ಲ. ಈ ಹಿನ್ನೆಲೆಯ ಕರ್ನಾಟಕದ ಜ್ಞಾನವು ಕನ್ನಡದಲ್ಲಿ ಮೈದಳೆಯಬೇಕಾಗಿರುವುದು ಜನಸಮುದಾಯಗಳ ನಡುವೆಯೇ ವಿನಾ, ಆ ಹೊಣೆ ತಮ್ಮದೆಂದು ಬೀಗುತ್ತಿರುವ ಪಂಡಿತವರ್ಗಗಳಿಂದ ಅಲ್ಲ. ಇಂದು ಕರ್ನಾಟಕದಲ್ಲಿ ಅಪಾರವಾದ ಜ್ಞಾನದ ಸೃಷ್ಟಿಯು ಆಗುತ್ತಿದ್ದರೂ ಅದು ಕನ್ನಡದ ಭಾಷಿಕಸಂಪತ್ತಾಗಿ ಪರಿವರ್ತಿಸುವ ಅನಿವಾರ್ಯತೆಯು ಉಂಟಾಗಿಲ್ಲ. ಹಲವು ಬಗೆಯ ತಿಳಿವಳಿಕೆಗಳನ್ನು ಒಡಮೂಡಿಸುತ್ತಿರುವ ಜನರಲ್ಲಿ, ಅದನ್ನು ಕನ್ನಡದಲ್ಲಿ ಹೇಳುವ ಸಾಮರ್ಥ್ಯವನ್ನಾಗಲೀ ಉಮೇದನ್ನಾಗಲೀ ರೂಪಿಸುವುದರಲ್ಲಿ ನಮ್ಮ ಶಿಕ್ಷಣವು ವಿಫಲವಾಗಿದೆ. ಹದಿನೈದು ವರ್ಷಗಳ ಕಾಲ ಭಾಷಾಭ್ಯಾಸ ಮಾಡಿದರೂ ಕನ್ನಡವನ್ನಾಗಲೀ ಇಂಗ್ಲಿಷ್ ಭಾಷೆಯನ್ನಾಗಲೀ ದಿನನಿತ್ಯದ ಕನಿಷ್ಠ ಅಗತ್ಯಕ್ಕಿಂತ ನಸುಮಾತ್ರವೂ ಹೆಚ್ಚಾಗಿ ಬಳಸದ 'ವಿದ್ಯಾವಂತ'ರ ಸೃಷ್ಟಿಯು ಕರ್ನಾಟಕ ಮತ್ತು ಕನ್ನಡಗಳ ನಡುವೆ ವಿಚಿತ್ರವಾದ ವಿರೋಧವನ್ನು ತಂದಿದೆ. ಇಂದಿನ ಸನ್ನಿವೇಶದಲ್ಲಿ, ಒಟ್ಟು ಕರ್ನಾಟಕದಲ್ಲಿ ಅಡಗಿರುವ ತಿಳಿವಳಿಕೆಯು ಯಾವುದೇ ಅಡೆತಡೆಗಳಿಲ್ಲದೆ, ಹೊರಹಾದಿಗಳನ್ನು ಕಂಡುಕೊಳ್ಳದೇ ಇರಲು, ಪಾರಿಭಾಷಿಕತೆಯಲ್ಲಿ ಮುಳುಗಿಹೋಗಿರುವ ಕನ್ನಡವೇ ಕಾರಣವಾಗಿದೆ. ರೈತ, ಬಡಗಿ, ಚಮ್ಮಾರರು, ತಮ್ಮದೇ ಭಾಷೆಯಲ್ಲಿ ತಮ್ಮಂತಹವರಿಗೆ ತಲುಪುವಂತೆ ಹೇಳಿದ್ದನ್ನು ಜ್ಞಾನವೆಂದು ಒಪ್ಪಿಕೊಳ್ಳುವ ಸ್ಥಿತಿಯನ್ನು ನಮ್ಮ ಅಧಿಕಾರ ಕೇಂದ್ರಗಳು ತಲುಪಬೇಕಾಗಿದೆ. ಇಲ್ಲವಾದರೆ ಕರ್ನಾಟಕದಲ್ಲಿ ಜ್ಞಾನ, ಕನ್ನಡದಲ್ಲಿ ಶೂನ್ಯ ಎಂಬ ಸ್ಥಿತಿಯು ಸಹಜವಾಗುತ್ತದೆ.

೨. ಯಾವುದೇ ನಾಡಿನಲ್ಲಿ, ಕಲೆ ಮತ್ತು ಸಂಸ್ಕೃತಿಗಳು ಯಾವ ಒತ್ತಡಗಳಿಂದ ರೂಪಿತವಾಗುತ್ತವೆ ಮತ್ತು ನಿರ್ದೇಶಿತವಾಗುತ್ತವೆ ಎಂಬುದು ಮುಖ್ಯವಾದ ಪ್ರಶ್ನೆ. ವ್ಯಕ್ತಿಗಳ ಸಾಧನೆಯ ಮೂರ್ತ ನೆಲೆಗಳ ಹಿಂದೆ, ಸಾಮಾಜಿಕ ಚಲನವಲನಗಳ ಅಮೂರ್ತ ನೆಲೆಯು ಸದಾ ಜಾಗೃತವಾಗಿರುತ್ತದೆ. ಸಂಸ್ಕೃತಿಯ ಸೃಷ್ಟಿ, ವಿತರಣೆ ಮತ್ತು ಮೌಲ್ಯಮಾಪನಗಳನ್ನು ಯಾವ ವರ್ಗಗಳು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿವೆ ಎನ್ನುವುದು ಬಹಳ ಮುಖ್ಯವಾದ ಸಂಗತಿ. ನಮಗೆ ಕಲಾವಿದರು ಮುಖ್ಯವಾಗಿ, ಕಲೆಯನ್ನು ನಿಯಂತ್ರಿಸುವ ಸಂಗತಿಗಳು ಗೌಣವಾಗಿಬಿಟ್ಟಾಗ, ಮಠಾಧೀಶರುಗಳು, ವಿಜಯ ಮಲ್ಯರಂತಹವರು, ಜ್ಞಾನಪೀಠ ಪ್ರಶಸ್ತಿ ವಿಜೇತರು, ನಟರ ಬದಲಾಗಿ ವಿಜೃಂಭಿಸುವ 'ತಾರೆಯರು' ಇವರೆಲ್ಲರ ಸಹಜೀವನವನ್ನು ರೋಮಾಂಚಿತವಾಗಿ ಒಪ್ಪಿಕೊಳ್ಳುತ್ತೇವೆ. 'ಜನಪ್ರಿಯತೆ'ಯೆಂಬ ಮೃಗಜಲಕ್ಕೂ ಜನಪರತೆಯೆಂಬ ಜೀವಜಲಕ್ಕೂ ಇರುವ ಅಂತರಗಳೇ ಅಳಿಸಿಹೋಗುವ ಸ್ಥಿತಿಯು ಬಹಳ ಅಪಾಯಕಾರಿಯಾದುದು. ಈ ಹಿನ್ನೆಲೆಯಲ್ಲಿ ನೋಡಿದಾಗ, ಈಗ ಕರ್ನಾಟಕದ ಸಂಸ್ಕೃತಿ ಮತ್ತು ಕಲೆಗಳ ಹೆಸರಿನಲ್ಲಿ, ಕನ್ನಡದ ಹೆಸರಿನಲ್ಲಿ ಇಡೀ ಕರ್ನಾಟಕಕ್ಕೆ ಉಣಬಡಿಸುತ್ತಿರುವ ಸರಕುಗಳ ಉಪಯುಕ್ತತೆ ಮತ್ತು ಗುಣದ ಬಗ್ಗೆ ಯೋಚನೆ ಮಾಡುವ ಸಾಧ್ಯತೆಗಳಾದರೂ ಇವೆಯೇ? ಹಾಗೆಯೇ ಜಾನಪದ ಕಲೆಗಳ ಬಗೆಗೆ ಯೋಚನೆ ಮಾಡುವಾಗ, ಕೇವಲ ಗತಕಾಲದ ಪಳೆಯುಳಿಕೆಗಳನ್ನು ಪ್ರದರ್ಶನಕ್ಕೆ ಇಟ್ಟು, ಇಂದು ನಮ್ಮ ನಡುವೆ ದಲಿತ ಶಿಬಿರಗಳಲ್ಲಿ, ಹೋರಾಟದ ಹಾಡುಗಳಲ್ಲಿ, ರಾಜಕಾರಣದ ವಿರುದ್ಧವಾದ ಭ್ರಮನಿರಸನದಲ್ಲಿ ಮೂಡಿಬರುತ್ತಿರುವ ಜನಪರ ಕಲೆಗಳ ಬಗ್ಗೆ ನಿರ್ಲಕ್ಷ್ಯ ತೋರುವುದೇಕೆ? ಜಾನಪದವೆನ್ನುವುದು ವರ್ತಮಾನದ ಬದುಕಿನಲ್ಲಿ ಜೀವಂತವಾಗಿರಬೇಕಾದ ಚಲನಶೀಲ ಸಂಗತಿಯಲ್ಲವೇ? ಇವೆಲ್ಲದರ ಬಗ್ಗೆ ಯೋಚನೆ ಮಾಡುವ ಹೊಣೆಹೊತ್ತ ಜನರೂ ಈ ಜಾಲದ ಭಾಗವೇ ಆಗಿಬಿಟ್ಟರೆ ಮಾಡುವುದೇನು? ಸನ್ನಿವೇಶದ ಬಗ್ಗೆ ಗಂಭೀರವಾದ ನಿಲುವುಗಳನ್ನು ತೆಗೆದುಕೊಳ್ಳಬಹುದಾದ ಮಾಧ್ಯಮಗಳು ಎಲ್ಲವನ್ನೂ ಮನರಂಜನೆಯ ಗರಂ ಮಸಾಲಾ ಆಗಿ ಬದಲಿಸಿಲ್ಲವೇ? ಸಾಹಿತ್ಯ ಸಮ್ಮೇಳನದ, ವಿವಾದಗಳನ್ನು ಬದಿಗಿರಿಸಿ ನೋಡಿದಾಗಲೂ ಅದು ಜನರ ಹಣದ ದುರ್ವ್ಯಯವಲ್ಲವೇ? ಲೈಮ್‌ಲೈಟ್ ಕೆಳಗೆ ಬರುವ ಪ್ರತಿಯೊಬ್ಬರನ್ನೂ ಅವಿಮರ್ಶಕವಾಗಿ ವೈಭವೀಕರಿಸುವುದರ ಹಿಂದೆ ಇರುವ ಹುನ್ನಾರಗಳೇನು? ನಾನು ಕೇವಲ ನೈತಿಕವಾದ, ಭ್ರಷ್ಟಾಚಾರ ವಿರೋಧಿಯಾದ ಮಡಿ ನೆಲೆಯಲ್ಲಿ ನಿಂತು ಮಾತನಾಡುತ್ತಿಲ್ಲ. ಬದಲಾಗಿ, ನಾಡಿನ ನಿಜವಾದ ಹಿತಾಸಕ್ತಿಗಳಿಗೂ ಆಸಕ್ತಹಿತಗಳಿಂದ ಘೋಷಿತವಾದ ಹಿತಾಸಕ್ತಿಗಳಿಗೂ ಇರುವ ವ್ಯತ್ಯಾಸದ ಬಗ್ಗೆ ನನ್ನ ಕಾಳಜಿ ಇದೆ. ಭಾಷಿಕವೆಂದು ಹೇಳಲಾದ ಪ್ರಗತಿಗೂ ಸಾಮುದಾಯಿಕವಾದ ಪ್ರಗತಿಗೂ ಕಂದರಗಳು ಏರ್ಪಟ್ಟಾಗ ನಾವು ಕಟ್ಟೆಚ್ಚರವನ್ನು ತಳೆಯಬೇಕಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಒಂದು ಬಗೆಯ ಭಾಷೆಯ ಮೇಲೆ ಪ್ರಭುತ್ವ ಪಡೆದುಕೊಂಡ ಸಾಹಿತಿಗಳು ಉಳಿದವರೆಲ್ಲರ ಪರವಾಗಿ, ಅಂತೆಯೇ ಸೂರ್ಯನ ಕೆಳಗಿರುವ ಎಲ್ಲ ವಿಷಯಗಳ

, ಮಾತನಾಡಲು ಹಕ್ಕುಪತ್ರ ಪಡೆದವರಂತೆ ವರ್ತಿಸುವುದು ಬಹಳ ಅಪಾಯಕಾರಿಯೆಂದೇ ನನ್ನ ತಿಳಿವಳಿಕೆ. ಹೀಗೆ ಲು, ಭಾಷೆಯ ಸ್ವರೂಪ ಮತ್ತು ಕಲಾತ್ಮಕತೆಗಳ ಬಗ್ಗೆ ಇರುವ ವೈಭವೀಕೃತವಾದ ನಿಲುವುಗಳೇ ಕಾರಣ.

೩. ನನ್ನ ಕುತೂಹಲವನ್ನು ಕೆರಳಿಸಿರುವ ಇನ್ನೊಂದು ಸಂಗತಿಯೆಂದರೆ, ನಮ್ಮ ಭಾಷೆಯು ಬಯಸುವ ಹೊಸ ಗಳನ್ನು ಎಲ್ಲಿಂದ ತೆಗೆದುಕೊಳ್ಳಬೇಕು ಮತ್ತು ಅವುಗಳನ್ನು ಹೇಗೆ ಬಳಕೆಗೆ ತರಬೇಕು ಎನ್ನುವುದು. ಭಾಷೆಗಳಿಂದ ತೆಗೆದುಕೊಳ್ಳುವುದು, ಹೊಸ ಪದಗಳನ್ನು ಸೃಷ್ಟಿಸುವುದು ಸಾಮಾನ್ಯವಾಗಿ ರೂಢಿಯಲ್ಲಿರುವ ಗಳು. ಆದರೆ, ಜನರ ನಡುವೆ ಈಗಾಗಲೇ ಬಳಕೆಯಲ್ಲಿದ್ದರೂ ಪ್ರಮಾಣೀಕೃತವೆನ್ನಲಾದ ಭಾಷೆಯಲ್ಲಿ, ಕೆಯಾಗಿರುವ ಪದಗಳನ್ನು ಮರುಬಳಕೆಗೆ ತರುವುದು ಇನ್ನೊಂದು ಮಾರ್ಗ. ಹಂಪಿಯ ಕನ್ನಡ ವಿದ್ಯಾಲಯದಲ್ಲಿ ಸಿದ್ಧವಾದ 'ವೃತ್ತಿ ಪದಕೋಶ'ವು ಈ ಬಗೆಯ ಉದ್ದೇಶದಿಂದ ಪ್ರೇರಿತವಾಗಿತ್ತು. ಭಾಷೆಯನ್ನು ಸುವವರಿಗೂ ಪರಿಭಾಷೆಯನ್ನು ರೂಪಿಸುವವರಿಗೂ ನಡುವೆ ಉಂಟಾಗಿರುವ ಕಂದರವು ಇಂಥದೊಂದು ಕೆಲಸವು ಸೂತ್ರವಾಗಿ ನಡೆಯಲು ಅಡ್ಡಿಯಾಗಿದೆ. ನಮ್ಮ ವಿದ್ಯಾರ್ಥಿಗಳಿಗೆ, ಕನ್ನಡದ ಪ್ರಾಚೀನ ಹಂತಗಳಿಗೆ ಸೇರಿದ ಅಥವಾ ಸ್ಕೃತಮಯವಾದ ಸಾಹಿತ್ಯಕ ಪಠ್ಯಗಳನ್ನು ಅರೆದು ಕುಡಿಸುತ್ತಿದ್ದರೆ, ಇತ್ತ ಬಳಕೆಯ ಭಾಷೆಯೂ ಬೆಳೆಯುವುದಿಲ್ಲ, ಸಾಹಿತ್ಯಾಸಕ್ತಿಯೂ ಕುದುರುವುದಿಲ್ಲ. ಜನಭಾಷೆ, ಪ್ರಾದೇಶಿಕ ಉಪಭಾಷೆಗಳು ಮತ್ತು ಜಾಹವಾಹಿಯಾದ ಷೆಗಳು ನಮ್ಮ ಪಠ್ಯಪುಸ್ತಕಗಳ ಅನಿವಾರ್ಯ ಭಾಗವಾದ ಹೊರತು ಜಾಹವಾಹಿಯಾದ ಕನ್ನಡದ ಸೃಷ್ಟಿಯು ನ್ಯವಾಗುವುದಿಲ್ಲ. ಹೀಗೆ ಮಾಡುವುದರಿಂದ ಸರ್ವರಿಗೂ ತಲುಪಬಲ್ಲ ಪ್ರಮಾಣ ಭಾಷೆಯೊಂದರ ಬಳಕೆ ಹಾಗೂ ಕೆಗೆ ಅಡ್ಡಿಯಾಗುವುದಿಲ್ಲ. ಮನುಷ್ಯನ ಮನಸ್ಸಿಗೆ, ನಿರ್ದಿಷ್ಟ ಮಾದರಿಗಳ ಮೂಲಕವೇ ಸಾರ್ವತ್ರಿಕ ಆಕೃತಿಗಳನ್ನು ಕೊಳ್ಳುವ ಸಾಮರ್ಥ್ಯವು ಇದ್ದೇ ಇರುತ್ತದೆ. ಸುತ್ತಲಿನ ಜನರು ಆಡುವ ಮಾತುಗಳನ್ನು ಕೇಳಿ ತನ್ನ ಮಾತನ್ನು ಪಿಸಿಕೊಳ್ಳುವಂತೆ, ಶ್ರೇಷ್ಠವಾದ ಬರವಣಿಗೆಯನ್ನು ಓದಿ, ಉತ್ತಮ ಗದ್ಯಶೈಲಿಯನ್ನು ರೂಪಿಸಿಕೊಳ್ಳುವುದು ಸಾಧ್ಯ. ು ನಮ್ಮ ಮಾಧ್ಯಮಗಳಿಂದ, ಅಂತೆಯೇ ಶಿಕ್ಷಣದಿಂದ ಸಾಧ್ಯವಾಗಬೇಕು. ಇಲ್ಲವಾದರೆ ಕರ್ನಾಟಕದಲ್ಲಿ ಇರುವ ಷವು ಕನ್ನಡದಲ್ಲಿಯೇ ಒಡಮೂಡುವುದಿಲ್ಲ.

೪. ಒಂದು ಭೌಗೋಳಿಕ ಪ್ರದೇಶಕ್ಕೆ ಅದರದೇ ಆದ ವಿಶಿಷ್ಟತೆ ಇರುತ್ತದೆಯೇ, ಇದ್ದರೆ ಅದಕ್ಕೂ ಆ ಜನರು ಸುವ ಭಾಷೆಗೂ ಸಂಬಂಧವಿರುತ್ತದೆಯೇ, ಹಾಗಿದ್ದರೆ, ಅದು ಯಾವ ಬಗೆಯದು ಎಂಬುದು ತೂಹಲಕಾರಿಯಾದ ಪ್ರಶ್ನೆ. ಉದಾಹರಣೆಗೆ, ಕರ್ನಾಟಕದ ತುಂಬಾ ಕನ್ನಡವನ್ನೇ ಬಳಸಿದರೂ ಬಯಲುಸೀಮೆ, ಲೆನಾಡು ಮತ್ತು ಕರಾವಳಿಗಳ ಜೀವನಕ್ರಮಗಳು ವಿಭಿನ್ನವಾಗಿವೆ. ಅಷ್ಟೇಕೆ, ಬಯಲುಸೀಮೆಯಲ್ಲಿಯೇ ಮಂಡ್ಯ, ದುರ್ಗ, ಬಿಜಾಪುರ ಮತ್ತು ಕಲಬುರ್ಗಿ ಜಿಲ್ಲೆಗಳ ಜೀವನಶೈಲಿಗಳ ನಡುವೆ ಸ್ಪಷ್ಟವಾದ ವ್ಯತ್ಯಾಸಗಳಿವೆ. ಈ ತ್ಯಾಸವು ಆಯಾ ಪ್ರದೇಶದ ಉಪಭಾಷೆಯಲ್ಲಿ ನಿಕ್ಷಿಪ್ತವಾಗಿದ್ದರೂ ಭಾಷೆಯೇ ಆ ಅಂತರಕ್ಕೆ ಕಾರಣವಲ್ಲ. ಗೋಳಿಕ ಪರಿಸರದಿಂದ ಹುಟ್ಟಿದ, ಸಾಮಾಜಿಕವಾದ ಅಂತೆಯೇ ಐತಿಹಾಸಿಕವಾದ ಹಲವು ಕಾರಣಗಳು ಅಲ್ಲಿ ವೃತ್ತವಾಗಿರುತ್ತವೆ. ಅವುಗಳ ಹುಡುಕಾಟವು ಬೇರೊಂದೇ ಕೆಲಸ. ದ್ವಿಭಾಷಿಕ ಗಡಿನಾಡುಗಳಲ್ಲಿ ಬದುಕಿರುವ ಜನರ ವನಸಾಮ್ಯವನ್ನು ನೋಡಿದಾಗ ಈ ಮಾತು ಸ್ಪಷ್ಟವಾಗುತ್ತದೆ. ಬಾಗೇಪಲ್ಲಿಯ ಜನರು ತೆಲುಗರಾಗಿರಲಿ, ಕನ್ನಡಿಗರೇ ರಲಿ, ಅವರು ಬದುಕುವ ಬಗೆ ಒಂದೇ. ಆದ್ದರಿಂದಲೇ ಇಡೀ ಕರ್ನಾಟಕವನ್ನು ಕನ್ನಡ ಭಾಷೆಯ ಬಳಕೆಯೊಂದೇ ಟ್ಟಾಗಿ ಇಡಬಲ್ಲುದು ಎಂಬ ನಂಬಿಕೆಯನ್ನೇ ಮರುಪರಿಶೀಲನೆ ಮಾಡಬೇಕಾಗಿದೆ. ಭಾಷೆಯು 'ಅನ್ಯರ' ವಿರುದ್ಧ ಮ್ಮವರನ್ನು' ಎತ್ತಿಕಟ್ಟುವ ಅಸ್ತ್ರವಾಗಬಹುದೇ ವಿನಾ ನಮ್ಮ ನಡುವಿನ ವೈಷಮ್ಯಗಳನ್ನು ಕಳೆಯುವ ಉಪಕರಣ ವಾಗಲಾರದು. ಆದ್ದರಿಂದಲೇ ಭಾಷಾವಾರು ರಾಜ್ಯಗಳ ಕಲ್ಪನೆಯ ಹಿಂದೆ ಸಾಂಸ್ಕೃತಿಕ/ಸಾಹಿತ್ಯಕ ಪ್ರೇರಣೆ ಗಳಿರುವಂತೆ ಆರ್ಥಿಕ ಪ್ರೇರಣೆಗಳಿರುವುದಿಲ್ಲ. ಹೆಚ್ಚೆಂದರೆ, ಬಹುಸಂಖ್ಯಾತರ ನಡುವೆ ಅಲ್ಪಸಂಖ್ಯಾತ ರಾಗಿದ್ದವರಿಗೆ ಪದೋನ್ನತಿ ದೊರಕಿ, ಅವರೇ ಬಹುಸಂಖ್ಯಾತರಾಗಿ ಮನ್ನಣೆ ಪಡೆಯಬಹುದು. ಉದಾಹರಣೆಗೆ, ಕೊಡಗು ಪ್ರತ್ಯೇಕ ನಾಡಾಗಿ ರೂಪಿತ ಗೊಂಡರೆ, ಅಲ್ಲಿಯೇ ಇರುವ ಕೊಡಗರು, ವೀರಶೈವರು ಮತ್ತು ಮುಸ್ಲಿಮರ ನಡುವೆ ಶಕ್ತಿ ರಾಜಕೀಯವು ಮೊದಲಾಗುತ್ತದೆ ಎನ್ನುವುದು ಅಂಗೈ ಹುಣ್ಣಿನಷ್ಟು ಸ್ಪಷ್ಟ. ಆದ್ದರಿಂದ ಕರ್ನಾಟಕದ ಏಕತೆ ಮತ್ತು ಕನ್ನಡ ಭಾಷಿಕರ ಏಕತೆಗಳ ನಡುವೆ ಇರುವ ಗಡಿಗೆರೆಗಳನ್ನು ಖಚಿತ ಗೊಳಿಸಿಕೊಳ್ಳಬೇಕಾಗಿದೆ. ಉದಾಹರಣೆಗೆ, ಉತ್ತರ ಕರ್ನಾಟಕ ಮತ್ತು ಹಳೆಯ ಮೈಸೂರುಗಳ ನಡುವಿನ ವೈಷಮ್ಯಕ್ಕೆ, ಪ್ರಮುಖ ಜಾತಿಗಳ ನಡುವಿನ ಜಗಳವು ಭಾಷೆಗಿಂತ ಮುಖ್ಯವಾಗಿದೆ. ಎರಡೂ ಕಡೆ ಹಿಂದುಳಿದ ಜಾತಿಗಳವರ ಮೌನವು ಗಮನೀಯವಾಗಿದೆ. ಖಚಿತವಾಗಿ ಹೇಳುವುದಾದರೆ, ಇಂದು ಬಹುಸಂಖ್ಯಾತರಾದ ಭೂ ಮಾಲಿಕ ಜಾತಿಗಳವರು ಪ್ರದೇಶನಿಷ್ಠವಾದ ರಾಜಕಾರಣ ದಲ್ಲಿ ತೊಡಗಿದ್ದರೆ, ಅಲ್ಪಸಂಖ್ಯಾತರಾದ ಹಿಂದುಳಿದ ಜಾತಿಗಳವರು ಸಮುದಾಯನಿಷ್ಠವಾದ ರಾಜ್ಯಮಟ್ಟದ ಸಂಘಟನೆಗಳಲ್ಲಿ ತೊಡಗಬೇಕಾಗಿದೆ. ದಲಿತರು ವಿಕೇಂದ್ರಿತವಲ್ಲದ ಕಾನೂನು ವ್ಯವಸ್ಥೆಯಲ್ಲಿಯೇ ತಮ್ಮ ಸಮಸ್ಯೆಗಳಿಗೆ ಪರಿಹಾರ ಹುಡುಕಬೇಕಾಗಿದೆ.

ಇವೆಲ್ಲ ಸಂದರ್ಭಗಳಲ್ಲಿಯೂ ಭಾಷೆಯೂ ಒಂದು ಮೌಲ್ಯವಾಗಿಲ್ಲ. ಹೀಗಿರುವಾಗ ನುಡಿಗೂ ನಾಡಿಗೂ ನಡುವೆ ವೈರುಧ್ಯಗಳು ಹುಟ್ಟಿಕೊಳ್ಳುವುದು ಸಹಜ.

ಈ ಕಿರು ಲೇಖನದ ವ್ಯಾಪ್ತಿಯಲ್ಲಿ ಎಲ್ಲ ವಿಷಯ ಗಳನ್ನೂ ಸವಿವರವಾಗಿ ಹೇಳಲಾಗುವುದಿಲ್ಲ. ಇದು ಕನ್ನಡ ಪ್ರೇಮ, ಕನ್ನಡ ಭಾಷೆಯ ಅಸ್ತಿತ್ವಕ್ಕೆ ಬಂದಿರುವ ಅಪಾಯ, ಕನ್ನಡ ಸಂಸ್ಕೃತಿ/ಸಾಹಿತ್ಯಗಳ ಘನತೆ ಮುಂತಾದ ಸಂಗತಿಗಳನ್ನು ಪ್ರತಿಪಕ್ಷವಾಗಿಟ್ಟುಕೊಂಡು ಬರೆದುದೂ ಅಲ್ಲ. ನಮ್ಮ ಈ ನಾಡಿನಲ್ಲಿ ಮನೆ ಮಾಡಿರುವ ಬಹುರೂಪಿ ಭಾಷೆಗಳು ಮತ್ತು ಅವುಗಳಿಗಿಂತ ಬಹುರೂಪಿಯಾದ ಭಾಷಾ ಸಮುದಾಯಗಳ ಆರೋಗ್ಯಕರವಾದ ಬೆಳವಣಿಗೆ ಯನ್ನು ಗಮನದಲ್ಲಿ ಇಟ್ಟುಕೊಂಡು ಇಲ್ಲಿ ಕೆಲವು ಸಂಗತಿಗಳನ್ನು ಮಂಡಿಸಲಾಗಿದೆ. ನಿಜವಾಗಿಯೂ, ಕರ್ನಾಟಕದಲ್ಲಿ ಭಾಷಾಕೇಂದ್ರಿತವಾದ ಸಮೂಹ ಸನ್ನಿಯೇನೂ ಇಲ್ಲ. ಆದರೆ, ಆಸಕ್ತಹಿತಗಳು ಸಮಾಜ ಘಾತಕ ಶಕ್ತಿಗಳ ಸಹಯೋಗದಲ್ಲಿ ಆಗಾಗ ಅಂತಹ ವಾತಾವರಣವನ್ನು ನಿರ್ಮಿಸುತ್ತವೆ. ಹಾಗಿಲ್ಲವಾದರೆ, ಇಡೀ ವರ್ಷವನ್ನೇ ನವೆಂಬರ್ ತಿಂಗಳಾಗಿ ಪರಿವರ್ತಿಸಿ ಕೊಂಡು ಸರ್ಕಾರದ ಎಂದರೆ ಜನತೆಯ ಸಂಪನ್ಮೂಲ ಗಳನ್ನು ಉಂಡುಂಡೆಯಾಗಿ ಕಬಳಿಸುತ್ತಾ ಭಾಷೆಯ ಹೆಸರಿನಲ್ಲಿ ಸ್ವಹಿತಗಳನ್ನು ಸಾಧಿಸಿಕೊಳ್ಳುವ ವ್ಯಕ್ತಿಗಳ, ವರ್ಗಗಳ ಗಹಗಹಿಕೆಯು ಮುಂದುವರಿಯುತ್ತದೆ.

ಎಚ್.ಎಸ್. ರಾಘವೇಂದ್ರ ರಾವ್

# ಪ್ಲೇಟೋ ಮತ್ತು ವೈರಾಣುಗಳು

ಕೆಲವು ವೈರಾಣುಗಳ ಕವಚ ಒಂದೇ ಪ್ರೋಟೀನಿನ ಅನೇಕ ಪ್ರತಿಗಳನ್ನು ಹೊಂದಿದ್ದರೆ, ಇನ್ನು ಕೆಲವು ವೈರಾಣುಗಳಲ್ಲಿ ಎರಡು ಅಥವಾ ಮೂರು ಬಗೆಯ ಪ್ರೋಟೀನ್ ಅಣುಗಳಿರುತ್ತವೆ. ಆದರೆ ಪ್ರತಿ ಬಗೆಯ ಪ್ರೋಟೀನ್ ಅಣುವೂ ೬೦ ಅಥವಾ ಮೇಲಿನ ಸೂತ್ರದಲ್ಲಿ ಲಭಿಸುವ ಸಂಖ್ಯೆಯಾಗಿರಬೇಕು. ಪೋಲಿಯೋ ವೈರಾಣುವಿನಲ್ಲಿ, ಮೂರು ಬಗೆಯ ಪ್ರೋಟೀನ್ ಅಣುಗಳಿದ್ದು, ಮೂರೂ ಪ್ರೋಟೀನ್ ಅಣುಗಳ ೬೦ ಪ್ರತಿಗಳಿರುತ್ತವೆ. ಇದರಿಂದ ಪೋಲಿಯೋ ವೈರಾಣು ಕವಚದಲ್ಲಿ ಒಟ್ಟು ೧೮೦ ಪ್ರೋಟೀನ್ ಅಣುಗಳಿದ್ದಂತೆ [illegible]

**ಪಾ**ಶ್ಚಿಮಾತ್ಯ ತತ್ವಜ್ಞಾನಿಗಳಲ್ಲಿ ಪ್ಲೇಟೋನಿಗಿರುವ ನ ಇನ್ನಾರಿಗೂ ಇರಲಾರದು. ಕ್ರಿಸ್ತಪೂರ್ವ ೪ನೇ ಮಾನದಲ್ಲಿ ಗ್ರೀಸ್ ದೇಶದಲ್ಲಿ ಜನಿಸಿದ ಈತನ ಚಾರಧಾರೆಯ ಪ್ರಭಾವ ನಂತರ ಬಂದ ಅನೇಕ ಶ್ಚಾತ್ಯ ತತ್ವಜ್ಞಾನಿಗಳಲ್ಲಿ ಕಂಡುಬರುತ್ತದೆ. ತನ್ನ ಗುರು ಕ್ರಟೀಸನ ಹೆಸರಿನಲ್ಲಿ ಈತ ಮಂಡಿಸಿರುವ ಚಾರಧಾರೆ ಎರಡು ಸಹಸ್ರ ವರ್ಷಗಳ ಹಿಂದಿನದು ಸುವುದೇ ಇಲ್ಲ. ಈತನ ಪುಸ್ತಕಗಳಲ್ಲಿ ಕಂಡು ರುವ ವಿಚಾರಧಾರೆಗಳಲ್ಲಿ ನಿತ್ಯನೂತನತೆ ಇದೆ. ತತ್ವ ಞಾನಿಯಾಗಿ ಈತ ಸಾರಸ್ವತ ಲೋಕದಲ್ಲಿ ಚಿರಪರಿಚಿತ. ಶ್ಚಿಮಾತ್ಯ ತತ್ವಜ್ಞಾನದ ಮೇಲೆ ಪ್ಲೇಟೋನ ಭಾವದ ಬಗ್ಗೆ ಸಮಕಾಲೀನ ತತ್ವಜ್ಞಾನಿಯೊಬ್ಬರು ಗೆ ಹೇಳಿದ್ದಾರೆ : ''ಪ್ಲೇಟೋನ ನಂತರ ಹೊಮ್ಮಿರುವ ಚಾರಧಾರೆಯಲ್ಲಾ ಆತನ ಪುಸ್ತಕಗಳಿಗೆ ಬರೆದ ಪ್ಪಣಿಗಳಷ್ಟೆ.''

ತತ್ವಜ್ಞಾನಿಯಾಗಿ ಪ್ಲೇಟೋ ಚಿರಪರಿಚಿತನಾಗಿದ್ದರೂ, ತ ಮೇಧಾವಿ ಗಣಿತಜ್ಞನೂ ಆಗಿದ್ದನೆನ್ನುವುದು ಷ್ಟಾಗಿ ಪ್ರಚಲಿತವಾಗಿಲ್ಲ. ಘನಾಕೃತಿಗಳ ರಚನೆಯನ್ನು ಕುರಿತಾದ ಗಣಿತದ ಒಂದು ಸಮಸ್ಯೆಗೆ ಈತ ಸೂಕ್ತ ಪರಿಹಾರ ಸೂಚಿಸಿದನು. ಸಮಬಾಹುಗಳುಳ್ಳ ಬಹು ಭುಜಾಕೃತಿಗಳನ್ನು (equal sided polygons) ಬಳಸಿ ಒಳ ಹೊರಗುಗಳನ್ನು ಬೇರ್ಪಡಿಸಿರುವ ಎಷ್ಟು ಘನಾಕೃತಿಗಳನ್ನು (completely closed objects) ರಚಿಸಬಹುದು? ಎನ್ನುವ ಸಮಸ್ಯೆಗೆ ಪ್ಲೇಟೋ ಸಂಪೂರ್ಣ ಪರಿಹಾರ ಸೂಚಿಸಿದ. ಈತ ರಚಿಸಿದ ಅತ್ಯಂತ ಸರಳ ಘನಾಕೃತಿ ನಾಲ್ಕು ಸಮಬಾಹು ತ್ರಿಭುಜ ಗಳನ್ನುಳ್ಳ ಚತುಷ್ಫಲಕ (tetrahedron). ಇದನ್ನೇ ಕೆಳಗಿನ ಚಿತ್ರದಲ್ಲಿ ತೋರಿಸಿದೆ.

ಮೇಲಿನ ಚಿತ್ರದಲ್ಲಿರುವ ಚತುಷ್ಫಲಕದಲ್ಲಿ (tetrahedron) ನಾಲ್ಕು ಸಮಬಾಹು ತ್ರಿಕೋನ ಗಳಿವೆ. ಈ ಆಕೃತಿಗೆ ಆರು ಬಾಹುಗಳು (six edges) ಹಾಗೂ ನಾಲ್ಕು ಮೂಲೆಗಳೂ (four vertices) ಇವೆ. ಇದೇ ರೀತಿ ನಾಲ್ಕು, ಐದು, ಆರು, ಏಳು ಮುಂತಾದ ಸಮಬಾಹುಗಳುಳ್ಳ ಬಹುಭುಜಾಕೃತಿಗಳನ್ನು ಬಳಸಿ ಎಷ್ಟು ಘನಾಕೃತಿಗಳನ್ನು ರಚಿಸಬಹುದು? ಪ್ಲೇಟೋ ಆರು, ಏಳು ಅಥವಾ ಇನ್ನೂ ಹೆಚ್ಚಿನ ಸಮಬಾಹು ಬಹುಭುಜಾಕೃತಿಗಳನ್ನು ಬಳಸಿ ಘನಾಕೃತಿಗಳನ್ನು (completely closed objects) ರಚಿಸಲಾಗುವುದಿಲ್ಲ ಎಂದು ತೋರಿಸಿದ. ಇಂತಹ ಘನಾಕೃತಿಗಳನ್ನು ಬರಿಯ ಮೂರು, ನಾಲ್ಕು ಮತ್ತು ಐದು ಬಾಹುಗಳುಳ್ಳ ಬಹುಭುಜಾಕೃತಿಗಳನ್ನು ಮಾತ್ರ ಬಳಸಿ ರಚಿಸಬಹುದು. ತ್ರಿಕೋಣಗಳನ್ನೇ ಬಳಸಿ ಇನ್ನೂ ಎರಡು ಬಗೆಯ ಘನಾಕೃತಿಗಳನ್ನು ರಚಿಸಬಹುದು. ಇವೇ ಅಷ್ಟಫಲಕ (octahedron) ಮತ್ತು ವಿಂಶತಿ ಫಲಕ ಅಥವಾ ವಿಂಶತಮುಖಿ (icosahedron). ಈ ಪುಟದ ಬಲಗಡೆ ಚಿತ್ರ ಎಂಟು ತ್ರಿಕೋಣಗಳನ್ನು ಬಳಸಿ ರಚಿಸಿರುವ ಅಷ್ಟಫಲಕವನ್ನು (octahedron) ತೋರಿಸುತ್ತದೆ.



ಆರು ಮೂಲೆಗಳು, ಹನ್ನೆರಡು ಬಾಹುಗಳು ಮತ್ತು ಎಂಟು ತ್ರಿಕೋಣಗಳಿರುವ ಅಷ್ಟಫಲಕ (octahedron)

ಅಷ್ಟಫಲಕದಲ್ಲಿ ಆರು ಮೂಲೆಗಳು (six vertices), ಹನ್ನೆರಡು ಬಾಹುಗಳು (twelve edges) ಹಾಗೂ ಎಂಟು ತ್ರಿಕೋಣಾಕೃತಿಯ ಸಮತಲಗಳೂ (triangular facets) ಇರುತ್ತವೆ. ಸಮಬಾಹು ತ್ರಿಕೋಣಗಳನ್ನು ಬಳಸಿ ಪ್ಲೇಟೋ



ನಾಲ್ಕು ತ್ರಿಕೋಣಗಳು, ಆರು ಬಾಹುಗಳು ಮತ್ತು ನಾಲ್ಕು ಮೂಲೆಗಳಿರುವ ಚತುಷ್ಫಲಕ (tetrahedron)



ಹನ್ನೆರಡು ಮೂಲೆಗಳು, ಮೂವತ್ತು ಬಾಹುಗಳು ಮತ್ತು ಇಪ್ಪತ್ತು ತ್ರಿಕೋಣಗಳಿರುವ ವಿಂಶತಿಫಲಕ ಅಥವಾ ವಿಂಶತಮುಖಿ (icosahedron)

**ಪ್ರೊ॥ ಎಮ್. ಆರ್. ಎನ್. ಮೂರ್ತಿ**

ರಚಿಸಿದ ಅತ್ಯಂತ ಜಟಿಲ ಘನಾಕೃತಿ ವಿಂಶತಿಫಲಕ ಅಥವಾ ವಿಂಶತಮುಖಿ (icosahedron). ಇದನ್ನೇ ಹಿಂದಿನ ಪುಟದ ಬಲಗಡೆ ಕೆಳಗಿರುವ ಚಿತ್ರ ತೋರಿಸುತ್ತದೆ.

ವಿಂಶತಮುಖಿಯಲ್ಲಿ ಹನ್ನೆರಡು ಮೂಲೆಗಳು (twelve vertices), ಮೂವತ್ತು ಬಾಹುಗಳು (thirty edges) ಹಾಗೂ ಇಪ್ಪತ್ತು ತ್ರಿಕೋಣಾಕೃತಿಯ ಸಮತಲಗಳೂ (triangular facets) ಇರುತ್ತವೆ. ವಿಂಶತಿಫಲಕದಲ್ಲಿರುವ ಮೂಲೆಗಳು, ಬಾಹುಗಳು ಹಾಗೂ ತ್ರಿಕೋಣಗಳನ್ನು ಎಣಿಸಲು ಸ್ವಲ್ಪ ಶ್ರಮ ಪಡಬೇಕಾಗಬಹುದು. ಆಯ್ಲರ್ ಎಂಬ ಗಣಿತಜ್ಞ ಒಳ, ಹೊರಗನ್ನು ಬೇರ್ಪಡಿಸುವ ಘನಾಕೃತಿಗಳ ಮೂಲೆಗಳು, ಬಾಹುಗಳು ಮತ್ತು ಸಮತಲಗಳ ನಡುವೆ ಯಾವಾಗಲೂ ಇದ್ದೇ ಇರುವ ಸಂಬಂಧಕ್ಕೆ ಒಂದು ಸಮೀಕರಣವನ್ನು ಸೂಚಿಸಿದ :

*ಸಮತಲಗಳ ಸಂಖ್ಯೆ + ಮೂಲೆಗಳ ಸಂಖ್ಯೆ – ಬಾಹುಗಳ ಸಂಖ್ಯೆ = ೨*

*number of faces + number of vertices – number of edges = 2*

ಈ ಸಮೀಕರಣ ಪ್ಲೇಟೊ ರಚಿಸಿದ ಘನಾಕೃತಿಗಳಿಗೆ ಅನ್ವಯಿಸುವುದನ್ನು ಅವುಗಳಲ್ಲಿರುವ ಸಮತಲ, ಮೂಲೆ ಮತ್ತು ಬಾಹುಗಳನ್ನು ಎಣಿಸಿ ಖಚಿತಪಡಿಸಿಕೊಳ್ಳಬಹುದು.



ಹನ್ನೆರಡು ಬಾಹುಗಳು, ಎಂಟು ಮೂಲೆಗಳು, ಆರು ಚದುರಾಕಾರದ ತಲಗಳು ಇರುವ ಘನಪಂಚಭುಜ

ಪ್ಲೇಟೋ ರಚಿಸಿದ ಇನ್ನೂ ಎರಡು ಘನಾಕೃತಿಗಳು ಘನ (cube) ಮತ್ತು ಪಂಚಭುಜ ದ್ವಾದಶಫಲಕ (pentagonal dodecahedron). ಈ ಎರಡು ಆಕೃತಿಗಳನ್ನು ಮೇಲಿನ ಎರಡು ಚಿತ್ರಗಳಲ್ಲಿ ಕಾಣಬಹುದು.

ಪ್ಲೇಟೋ ರಚಿಸಿದ ಐದು ಘನಾಕೃತಿಗಳೂ (completely closed objects) ಸಮತೆಯನ್ನು (symmetry) ಹೊಂದಿವೆ. ಒಂದೇ ಆಕೃತಿಯ ಭಾಗಗಳಲ್ಲಿ ಪರಸ್ಪರ ಯಾವುದೇ ವ್ಯತ್ಯಾಸ ಇಲ್ಲದಿರುವುದನ್ನು ಸಮತೆ ಎಂದು ಕರೆಯುತ್ತೇವೆ. ಉದಾಹರಣೆಗೆ, ಮಲ್ಲಿಗೆ ಹೂವಿನಲ್ಲಿರುವ ಐದು ದಳಗಳ ಹಂಚಿಕೆಯಲ್ಲಿ ಸಮತೆಯಿದೆ. ಮಲ್ಲಿಗೆ ಹೂವಿನ ತೊಟ್ಟನ್ನು ಹಿಡಿದು, ಅದರ ಸುತ್ತ ೭೨ ಡಿಗ್ರಿ (ಒಂದು ಬಿಂದುವಿನಲ್ಲಿರುವ



ದ್ವಾದಶಫಲಕ (pentagonal dodecahedron): ಪಂಚಭುಜ ದ್ವಾದಶಫಲಕದಲ್ಲಿ ಪಂಚಬಾಹುಗಳುಳ್ಳ ಹನ್ನೆರಡು ಸಮತಲಗಳು (twelve pentagonal faces), ಇಪ್ಪತ್ತು ಮೂಲೆಗಳು (twenty vertices), ಮೂವತ್ತು ಬಾಹುಗಳು (thirty edges) ಇರುತ್ತವೆ.

ಒಟ್ಟು ೩೬೦ ಡಿಗ್ರಿ ಕೋನವನ್ನು ಐದು ಭಾಗಗಳಾಗಿ ಮಾಡಿದರೆ ದೊರೆಯುವ ಕೋನ ೭೨ ಡಿಗ್ರಿ) ತಿರುಗಿಸಿದರೆ ಮಲ್ಲಿಗೆ ಹೂವು ಮೊದಲಿದ್ದ ಹಾಗೆಯೇ ಕಾಣಿಸುತ್ತದೆ. ಸುತ್ತಿಸಿದ ಪ್ರಕ್ರಿಯೆಯಿಂದ ಯಾವ ವ್ಯತ್ಯಾಸವೂ ಆದಂತೆ ಕಾಣುವುದಿಲ್ಲ. ಆದ್ದರಿಂದ ಮಲ್ಲಿಗೆ ಹೂವಿನಲ್ಲಿ ಐದು ಪಟ್ಟು (five-fold) ಸಮತೆ ಇದೆ ಎನ್ನಬಹುದು. ಹಾಗೆಯೇ, ಚತುಷ್ಫಲಕದಲ್ಲಿ (tetrahedron) ಪ್ರತಿ ತ್ರಿಕೋಣವೂ ಸಮನಾಗಿದ್ದು, ಅವುಗಳನ್ನು ತಾಗಿಕೊಂಡಿರುವ ತ್ರಿಕೋಣಗಳ ಸಂಖ್ಯೆ ಮೂರು ಹಾಗೂ ಅವುಗಳ ನಡುವಿನ ಸಂಬಂಧಗಳಲ್ಲಿ (spatial relationship) ಕೂಡ ಯಾವುದೇ ವ್ಯತ್ಯಾಸಗಳಿರುವುದಿಲ್ಲ. ಇದೇ ರೀತಿ ವಿಂಶತಿಫಲಕದಲ್ಲಿ ಪ್ರತಿ ತ್ರಿಭುಜವೂ ಮೂರು ಇತರ ತ್ರಿಭುಜಗಳ ನಡುವೆ ಇರುತ್ತದೆ. ತ್ರಿಭುಜಗಳು ಸಂಧಿಸುವ ಹನ್ನೆರಡು ಮೂಲೆಗಳಿರುತ್ತವೆ. ಈ ಎಲ್ಲ ಮೂಲೆಗಳೂ ಸರಿಸಮವಾಗಿದ್ದು, ಪ್ರತಿ ಮೂಲೆಯಲ್ಲೂ ಐದು ತ್ರಿಭುಜಗಳು ಸಂಧಿಸುತ್ತವೆ.

ಪ್ಲೇಟೋ ಐದು ಆಕೃತಿಗಳನ್ನು ರಚಿಸಿದರೂ, ಅವುಗಳಲ್ಲಿ ತ್ರಿಭುಜಗಳಿಂದಾದ ಚತುಷ್ಫಲಕ (tetrahedron), ಅಷ್ಟಫಲಕ (octahedron), ವಿಂಶತಿಫಲಕ ಅಥವಾ ವಿಂಶತಮುಖಿ (icosahedron) ಬಹು ಮುಖ್ಯವಾದುವು. ಉಳಿದ ಎರಡೂ ಆಕೃತಿಗಳನ್ನು ಅಷ್ಟಫಲಕ (octahedron) ಮತ್ತು ವಿಂಶತಿಫಲಕಗಳಿಂದ (icosahedron) ಪಡೆಯಬಹುದು. ಅಷ್ಟಫಲಕದ (octahedron) ತ್ರಿಭುಜಗಳ (triangular faces) ಮಧ್ಯ ಬಿಂದುಗಳನ್ನು ಸೇರಿಸಿ ಬಾಹುಗಳನ್ನು ರಚಿಸಿದರೆ ಘನಾಕೃತಿ (cube) ದೊರಕುತ್ತದೆ. ಹಾಗೆಯೇ ವಿಂಶತಿ ಫಲಕ ಅಥವಾ ವಿಂಶತಮುಖಿಯ (icosahedron) ತ್ರಿಕೋಣಾಕಾರದ ತಲಗಳ (triangular faces) ಮಧ್ಯ ಬಿಂದುಗಳನ್ನು ಸೇರಿಸಿ ಬಾಹುಗಳನ್ನು ರಚಿಸಿದರೆ ಪಂಚಭುಜ ದ್ವಾದಶಫಲಕ (pentagonal dodecahedron) ದೊರಕುತ್ತದೆ. ಆದ್ದರಿಂದ ಸಮತೆಯ ದೃಷ್ಟಿಯಲ್ಲಿ ಅಷ್ಟಫಲಕವೂ, ಘನವೂ ಸಮವೆನ್ನಬಹುದು. ಹೀಗೆಯೇ ವಿಂಶತಿಫಲಕವ... ಪಂಚಭುಜ ದ್ವಾದಶಫಲಕವೂ ಸಮ ಎನ್ನಬಹುದು.

ಪ್ಲೇಟೋ ತ್ರಿಕೋಣಗಳನ್ನು ಬಳಸಿ ಘನಾಕೃ... ಗಳನ್ನು ರಚಿಸುವ ಗಣಿತ ಸಮಸ್ಯೆಯ ಬ... ಆಲೋಚಿಸುತ್ತಿದ್ದಾಗ, ಇಪ್ಪತ್ತನೆಯ ಶತಮಾನದಲ್ಲಿ ತ... ಸಂಶೋಧನೆಯ ಪ್ರಾಮುಖ್ಯತೆ ಜೀವವಿಜ್ಞಾನದಲ್... ಕಂಡುಬರುತ್ತದೆಂದು ಖಂಡಿತ ಊಹಿಸಿರಲಾರ... ವಿಜ್ಞಾನದಲ್ಲಿ ಪದೇ ಪದೇ ಆಗುವಂತೆ ಶುದ್ಧ ಗಣಿತದ... ಸಮಸ್ಯೆ ಎಂದು ಪರಿಗಣಿಸಿ ಮಾಡಿದ ಕೆಲಸ ವಿಜ್ಞಾನದ... ಇನ್ನೊಂದು ಶಾಖೆಯಲ್ಲಿ ಅನಿರೀಕ್ಷಿತ ಪ್ರಾಮುಖ್ಯತೆ... ಪಡೆಯುತ್ತದೆ. ಹಾಗೆಯೇ, ಪ್ಲೇಟೋನ ಘನಾಕೃತಿಗಳ... ೨೦ನೆಯ ಶತಮಾನದ ಆವಿಷ್ಕಾರವಾದ ವೈರಾಣುಗಳ... ರಚನೆ ತಿಳಿಯುವುದಕ್ಕೆ ಬೇಕಾದ ತಳಹದಿ ಒದಗಿಸಿದವು.

ಪಾಶ್ಚರನ ಆವಿಷ್ಕಾರಗಳಿಂದಾಗಿ ಹತ್ತೊಂಬತ್ತನೆ... ಶತಮಾನದ ಅಂತ್ಯಕಾಲದಲ್ಲಿ ಎಲ್ಲ ಕಾಯಿಲೆಗಳೂ... ಏಕಕೋಶ ಜೀವಿಗಳಿಂದ (bacteria) ಬರುತ್ತ... ಎಂಬ ನಂಬಿಕೆ ಪ್ರಬಲವಾಗಿ ಬೇರೂರಿತ್ತು. ಏಕ... ಕೋಶಗಳ ಅತಿ ಚಿಕ್ಕ ಗಾತ್ರದಿಂದಾಗಿ ಅವುಗಳನ್ನು... ಬರಿಗಣ್ಣಿನಿಂದ ನೋಡುವುದು ಸಾಧ್ಯವಾಗಿರಲಿಲ್ಲ... ಬೆಳಕಿನ ಸೂಕ್ಷ್ಮದರ್ಶಕಗಳು ಲಭ್ಯವಾದಾಗ (light microscope) ಏಕಕೋಶ ಜೀವಿಗಳನ್ನು... ನೋಡುವುದು ಸಾಧ್ಯವಾಯಿತು. ಸೂಕ್ಷ್ಮದರ್ಶಕಗಳು... ಸಣ್ಣ ವಸ್ತುಗಳನ್ನು ದೊಡ್ಡದಾಗಿ ಕಾಣುವಂ... ಮಾಡುತ್ತವೆ. ಏಕಕೋಶ ಜೀವಿಗಳ ಇರುವಿಕೆ ಮತ್ತು... ಅವುಗಳಿಂದ ರೋಗಗಳು ಹರಡಬಹುದು ಎಂದು... ಖಚಿತವಾದ ನಂತರದ ದಿನಗಳಲ್ಲಿ ನೀರಿನ ಶುದ್ಧೀ... ಕರಣಕ್ಕಾಗಿ ಏಕಕೋಶಜೀವಿಗಳು ತೂರಿಕೊಂಡು... ಬರಲಾರದಂತಹ ಸೋಸುಬುಟ್ಟಿಗಳು (filters... ಬಳಕೆಗೆ ಬಂದವು. ತಂಬಾಕು ಗಿಡಗಳಿಗೆ ಬಂದ...



ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ತೆಗೆದ, ತಂಬಾಕಿಗೆ ಮಚ್ಚೆ... ರೋಗ ಬರಿಸುವ ವೈರಾಣುವಿನ ಚಿತ್ರ. ಈ ವೈರಾಣು ಕಣಗಳ... ದಪ್ಪ ೮ ನಾನೋ ಮೀಟರುಗಳು (ಒಂದು ನಾನೋ ಮೀಟರ್ ಒಂದು ಮೀಟರಿನ ನೂರು ಕೋಟಿಯ ಒಂದು ಭಾಗಕ್ಕೆ ಸಮ). ಕಣಗಳ ದಪ್ಪ ಇದಕ್ಕೂ ಹತ್ತು ಸಾವಿರ ಪಟ್ಟು ಹೆಚ್ಚಾದಾಗ ಮಾತ್ರ ಬೆಳಕಿನ ಸೂಕ್ಷ್ಮದರ್ಶಕದಲ್ಲಿ ಕಾಣಿಸುತ್ತದೆ. ವೈರಾಣುಗಳಂತಹ ಅತಿ ಸಣ್ಣ ಕಣಗಳನ್ನು ನೋಡಬೇಕಾದರೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕವೇ ಬೇಕು.

ಗೆಯ ಮಚ್ಚೆ ರೋಗ ಬರುವುದು ಬಹಳ ಸಾಮಾನ್ಯ. ಕಾಯಿಲೆಯೂ ಏಕಕೋಶ ಜೀವಿಗಳಿಂದಲೇ ಂದಿರಬೇಕೆಂದು ಸಹಜವಾಗಿಯೇ ಊಹೆ ಾಡಲಾಗಿತ್ತು. ರೋಗ ಬಂದ ಗಿಡದ ಎಲೆಗಳನ್ನು ರಿನಲ್ಲಿ ಅರೆದಾಗ ದೊರೆಯುವ ತಿಳಿಯನ್ನು ೀಗರಹಿತ ಗಿಡಗಳ ಎಲೆಗಳ ಮೇಲೆ ಸವರಿದರೆ, ಆ ಡಗಳಿಗೂ ರೋಗ ಹರಡುತ್ತಿತ್ತು. ಅಂತಹ ಅರೆದು ಿದ ತಿಳಿಯನ್ನು ಏಕಕೋಶ ಜೀವಿಗಳು ತೂರಿಕೊಳ್ಳ ರದ ಸೋಸುಬುಟ್ಟಿಯ ಮೂಲಕ ಹರಿಸಿ, ಹೊರ ುವ ತಿಳಿಯನ್ನು ರೋಗರಹಿತ ಗಿಡಗಳಿಗೆ ವರಿದಾಗಲೂ ಆ ಗಿಡಗಳಿಗೆ ಕಾಯಿಲೆ ಹರಡುವುದು ಡುಬಂದಿತು. ಇದರಿಂದ ಏಕಕೋಶ ಜೀವಿ ಿಗಿಂತಲೂ ಸಣ್ಣ ಅಥವಾ ಸೂಕ್ಷ್ಮವಾದ ೀವಿಗಳಿಂದ ತಂಬಾಕಿನ ಮಚ್ಚೆ ರೋಗ ಬರುತ್ತದೆ ಂಬ ತೀರ್ಮಾನಕ್ಕೆ ಬರಬೇಕಾಯಿತು. ಇಂತಹ ಅತಿ ಕ್ಷ್ಮ ಜೀವಿಗಳಿಗೆ 'ವೈರಾಣುಗಳು' (viruses) ಎಂಬ ಸರನ್ನು ಇಡಲಾಯಿತು. ಆದರೆ ಈ ವೈರಾಣುಗಳ ರೂಪ ಮಾತ್ರ ತಿಳಿದುಬರಲಿಲ್ಲ. ಇಪ್ಪತ್ತನೆಯ ತಮಾನದ ಪ್ರಾರಂಭದಲ್ಲಿ, ಈ ಜೀವಿಗಳ ಸ್ವರೂಪ ರೀಕ್ಷಿಸಲು ಸೂಕ್ತವಾದ ಉಪಕರಣಗಳೂ ಬಳಕೆಯಲ್ಲಿ ರಲಿಲ್ಲ. ೧೯೪೦ - ೧೯೫೦ರಲ್ಲಿ ಎಲೆಕ್ಟ್ರಾನ್ ಸೂಕ್ಷ್ಮ ರ್ಶಕಗಳು (electron microscope) ಬಳಕೆಗೆ



ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಕಾಣುವ ಅಗಸೆ ಗಿಡಗಳಿಗೆ ತಗಲುವ 'ಸೆಸ್ಬೇನಿಯ ಮೊಸಯಿಕ್' ದುಂಡಾಕಾರದ ರಾಣುವಿನ ಚಿತ್ರ. ಈ ವೈರಾಣು ಆಂಧ್ರಪ್ರದೇಶದ ತಿರುಪತಿ ಸುತ್ತಮುತ್ತ ಇರುವ ಗದ್ದೆಗಳಲ್ಲಿ ಕಂಡುಬಂದದ್ದು.

ಂದವು. ಇವುಗಳನ್ನು ಬಳಸಿ, ಬೆಳಕಿನ ಸೂಕ್ಷ್ಮ ರ್ಶಕದಲ್ಲಿ (optical microscope) ನೋಡ ರದಂತಹ ಅತಿ ಸೂಕ್ಷ್ಮ ಕಣಗಳನ್ನೂ ನೋಡುವುದು ಧ್ಯವಾಯಿತು. ಇಂತಹ ಎಲೆಕ್ಟ್ರಾನ್ ಸೂಕ್ಷ್ಮ ರ್ಶಕದಲ್ಲಿ ತಂಬಾಕಿಗೆ ಮಚ್ಚೆ ರೋಗ ಬರಿಸುವ ಕ್ಷ್ಮಾಣು ಹೇಗೆ ಕಾಣಿಸುತ್ತದೆ ಎನ್ನುವುದನ್ನು ಹಿಂದಿನ ಟದ ಬಲಗಡೆ ಕೆಳಭಾಗದ ಚಿತ್ರ ತೋರಿಸುತ್ತದೆ.

ನಮಗೆ ಪದೇ ಪದೇ ನೆಗಡಿ ಬರುವುದು, ಇನ್ನೂ ರ್ಣ ನಿರ್ವಂಶವಾಗದ ಪೋಲಿಯೋ, ದನ, ರಿಗಳಿಗೆ ಬರುವ ಕಾಲುಬಾಯಿ ರೋಗ ಮುಂತಾದು ಲ್ಲಾ ವೈರಾಣುಗಳಿಂದ ಬರುವ ಕಾಯಿಲೆಗಳೇ. ಈ ಕಾಯಿಲೆಗಳನ್ನು ಬರಿಸುವ ವೈರಾಣುಗಳು ತಂಬಾಕು ಮಚ್ಚೆರೋಗದ ವೈರಾಣುವಿನಂತೆ ಉದ್ದನೆಯ ಕಣಗಳಾಗಿರದೆ, ದುಂಡಾಗಿರುವ ಕಣಗಳಾಗಿರುತ್ತವೆ (spherical or isometric). ಇಂತಹ ಒಂದು ವೈರಾಣುವಿನ ಚಿತ್ರವನ್ನು ಎಡಭಾಗದಲ್ಲಿ ತೋರಿಸಿದೆ.

ವೈರಾಣುಗಳು ಅತಿ ಸಣ್ಣ ಕಣಗಳು. ಒಂದು ದಶಲಕ್ಷ ಪೋಲಿಯೋ ವೈರಾಣುಗಳನ್ನು ಒಂದರ ಪಕ್ಕ ಒಂದಿರುವಂತೆ ಜೋಡಿಸಿದರೆ ಬರಿಯ ೩ ಸೆಂಟೀಮೀಟರ್ ಆಗುತ್ತದೆ. ವೈರಾಣುಗಳು ಇಂತಹ ಸಣ್ಣ ಕಣಗಳಾಗಿದ್ದರೂ ಸೂಕ್ತ ಜೀವಕೋಶದೊಳಗೆ ಸೇರಿದರೆ, ಬಹಳ ಹಾನಿ ಮಾಡುತ್ತವೆ. ಮೊದಲನೆಯದಾಗಿ, ಜೀವಕೋಶ ತನಗಾಗಿ ಮಾಡುತ್ತಿರುವ ಕೆಲಸವನ್ನು ಇವು ನಿಲ್ಲಿಸಿಬಿಡುತ್ತವೆ. ಜೀವಕೋಶದ ಯಂತ್ರಾಗಾರ, ತಮ್ಮಂತಹ ಸಹಸ್ರಾರು ಕಣಗಳನ್ನು ಉತ್ಪಾದಿಸುವಂತೆ ಪ್ರೇರೇಪಿಸುತ್ತವೆ. ಇಂತಹ ಕಣಗಳ ಉತ್ಪಾದನೆಗೆ ಬೇಕಾಗುವ ಕಚ್ಚಾ ವಸ್ತುಗಳಾಗಿ ಜೀವಕೋಶದೊಳಗಿರುವ ಸಾಮಗ್ರಿಯೇ ಬಳಸಲ್ಪಡುತ್ತದೆ. ಇವು ಒಂದು ಜೀವಕೋಶವನ್ನು ಆಕ್ರಮಿಸಿ, ತಮ್ಮದೇ ತದ್ರೂಪದ ಸಹಸ್ರಾರು ಕಣಗಳನ್ನು ನಿರ್ಮಿಸಿ, ಜೀವಕೋಶವನ್ನು ಒಡೆಯುತ್ತವೆ. ಆಗ ಹೊರಸೂಸುವ ವೈರಾಣುವಿನ ಕಣಗಳು ಇತರ ಜೀವಕೋಶಗಳಿಗೆ ಲಗ್ಗೆಯಿಕ್ಕುತ್ತವೆ. ಹೀಗೇ ಒಂದು ಜೀವಕೋಶದಿಂದ ಇನ್ನೊಂದು ಕೋಶಕ್ಕೆ ಲಗ್ಗೆ ಇಡುವುದೇ ಇವುಗಳ ಸಹಜ ಜೀವನ ಚಕ್ರ (life cycle).

ಜೀವಕೋಶದ ಹೊರಗೆ ವೈರಾಣುಗಳಿಗೆ ಜಡ ಹಾಗೂ ನಿರ್ದಿಷ್ಟ ಆಕಾರವಿದೆ. ಯಾವುದೇ ಬದಲಾವಣೆಯನ್ನು ಹೊಂದದ ಈ ಕಣಗಳು ನಿರ್ಜೀವ ವಸ್ತುಗಳಂತೆ ಇರುತ್ತವೆ. ಅದೇ ಸೂಕ್ತ ಜೀವಕೋಶವನ್ನು ಹೊಕ್ಕರೆ, ಸಂತಾನೋತ್ಪತ್ತಿ ಎಂದು ಕರೆಯಬಹುದಾದ, ತಮಗೆ ಸರಿಸಮವಾದ ಕಣಗಳನ್ನು ಉತ್ಪಾದಿಸಲು ತೊಡಗುತ್ತವೆ. ತದ್ರೂಪಿ ಕಣಗಳನ್ನು ನಿರ್ಮಿಸುವುದು ಜೀವಕಣಗಳ ಲಕ್ಷಣ. ಈ ನಿಟ್ಟಿನಲ್ಲಿ ವೈರಾಣುಗಳನ್ನು ಜೀವಂತ ಕಣಗಳು ಎನ್ನಬಹುದು. ಆದ್ದರಿಂದಲೆ ಕೆಲವೊಮ್ಮೆ ವೈರಾಣುಗಳನ್ನು ಜೀವಿಗಳಿಗೂ, ನಿರ್ಜೀವ ವಸ್ತುಗಳಿಗೂ ನಡುವಿರುವ ಕಣಗಳೆಂದು ಕರೆಯುತ್ತಾರೆ (at the threshold of life). ಆದರೆ, ಜೀವಕೋಶಗಳ ನೆರವಿಲ್ಲದೇ ತಮಗೆ ಸರಿಸಮವಾದ ಕಣಗಳನ್ನು ಉತ್ಪಾದಿಸಿಕೊಳ್ಳುವ ಸಾಮರ್ಥ್ಯ ವೈರಾಣುಗಳಿಗಿರುವುದಿಲ್ಲ. ಇದಕ್ಕೆ ಅವುಗಳಿಗೆ ಜೀವಕೋಶಗಳ ಯಂತ್ರಾಗಾರ ಬೇಕೇ ಬೇಕು. ಆದ್ದರಿಂದಲೇ, ಜೀವಕೋಶಗಳಿಲ್ಲದೇ ವೈರಾಣು ಗಳಿರಲಾರವು. ಕೆಲವು ವೈರಾಣುಗಳ ಜೀವನಚಕ್ರ ಇನ್ನೂ ಗೂಢವಾಗಿದೆ. 'ಎನ್ಸಫಲೈಟಿಸ್' (encephalitis) ವೈರಾಣುಗಳು ಮೆದುಳಿನ ಜೀವಕೋಶಗಳಿಗೆ ಲಗ್ಗೆಯಿಡುತ್ತವೆ. 'ಜಪನೀಸ್ ಎನ್ಸಫಲೈಟಿಸ್' ವೈರಾಣು ಅಂಟಿಕೊಂಡರೆ ವಿಪರೀತ ತಲೆನೋವು, ವಾಂತಿ ಕಾಣಿಸಿಕೊಂಡು, ಸೋಂಕಿರುವ ವ್ಯಕ್ತಿ ಸಾಯುವ ಸಂಭವ ಬಹಳ ಹೆಚ್ಚು. ನಮ್ಮ ದೇಶದ ಪೂರ್ವ ಕರಾವಳಿಯಲ್ಲಿ, ಭತ್ತ ಬೆಳೆಯುವ ಜಾಗಗಳಲ್ಲಿ ಇದರ ಸೋಂಕು ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಸೋಂಕು ಇರದಿದ್ದಾಗ, ಈ ವೈರಾಣು ಹಂದಿಗಳಲ್ಲಿ ಇಲ್ಲವೇ ಕೊಕ್ಕರೆಗಳಲ್ಲಿ ನಾಶವಾಗದೇ ಉಳಿದಿರುತ್ತದೆ. ಈ ಪ್ರಾಣಿಗಳನ್ನು ವೈರಾಣು ಪ್ರವೇಶಿಸಿದರೆ, ಸಣ್ಣ ಪ್ರಮಾಣದ ಹಾನಿ ಮಾತ್ರ ಮಾಡುವುದರಿಂದ, ಸೋಂಕು ತಗಲಿದ ಪ್ರಾಣಿ ಸಾಯದೇ, ವೈರಾಣುವಿಗೆ ಆಶ್ರಯ ಸ್ಥಾನವಾಗುತ್ತದೆ. ಸೊಳ್ಳೆಗಳು ಈ ಪ್ರಾಣಿಗಳನ್ನು ಕಚ್ಚಿದಾಗ, ಸೊಳ್ಳೆಯ ಸೊಂಡಿಲುಗಳಿಗೆ ಅಂಟಿಕೊಂಡು, ಅದೇ ಸೊಳ್ಳೆ ಮನುಷ್ಯರನ್ನು ಕಚ್ಚಿದಾಗ ಸಾವು ಸಂಭವಿಸಬಹುದಾದಂತಹ ಗುರುತರ ಸೋಂಕು ತಗಲುತ್ತದೆ.

ಇಪ್ಪತ್ತನೆಯ ಶತಮಾನದಲ್ಲಿ ಎಕ್ಸ್-ಕಿರಣಗಳನ್ನು ಬಳಸಿ ಸ್ಫಟಿಕಗಳ ರಚನೆ ಕಂಡುಕೊಳ್ಳುವ ತಂತ್ರ ಬಹಳ ಪ್ರವರ್ಧಮಾನಕ್ಕೆ ಬಂದಿತು. ವಿಜ್ಞಾನದ ಈ ಭಾಗಕ್ಕೆ ಕ್ಷ-ಕಿರಣ ಸ್ಫಟಿಕ ಶಾಸ್ತ್ರ (X-ray crystallography) ಎಂದು ಕರೆಯುತ್ತಾರೆ. ಈ ತಂತ್ರ ಬಳಸಿ ಸ್ಫಟಿಕದಲ್ಲಿರುವ (crystals) ಅಣು ರಚನೆಯನ್ನು ತಿಳಿಯಬಹುದು. ವೈರಾಣುಗಳಿಗೆ ನಿರ್ದಿಷ್ಟ ರಚನೆಯಿರುವುದರಿಂದ, ಅವುಗಳನ್ನೂ ಸ್ಫಟಿಕೀಕರಿಸಬಹುದು. ಆದ್ದರಿಂದ ಎಕ್ಸ್-ಕಿರಣಗಳನ್ನು ಬಳಸಿ ವೈರಾಣುಗಳ ರಚನೆಯನ್ನು ಅತ್ಯಂತ ವಿಶದವಾಗಿ ಕಂಡುಕೊಳ್ಳಲು ಸಾಧ್ಯವಾಗಿದೆ. ವೈರಾಣುವಿನ ರಚನೆಯೆಂದರೆ ಅದರಲ್ಲಿರುವ ಪ್ರತಿಯೊಂದು ಪರಮಾಣುವೂ ಯಾವ ಸಾಪೇಕ್ಷ ಸ್ಥಾನದಲ್ಲಿದೆ ಎನ್ನುವುದು. ಈಗ ನಮಗೆ ಸುಮಾರು ಮೂವತ್ತು ವೈರಾಣುಗಳ ರಚನೆ ತಿಳಿದಿದೆ.

ಇವುಗಳಲ್ಲಿ ಹೆಚ್ಚಿನ ವೈರಾಣುಗಳ ಆಕಾರ ವಿಂಶತಮುಖಿ ಅಥವಾ ವಿಂಶತಫಲಕವನ್ನು ಹೋಲುತ್ತದೆ. ಇದು ಪ್ಲೇಟೋ ಪ್ರತಿಪಾದಿಸಿದ ಆಕಾರಗಳಲ್ಲಿ ಅತಿ ಹೆಚ್ಚಿನ ತ್ರಿಕೋಣಗಳುಳ್ಳ ಘನಾಕಾರ. ಆದ್ದರಿಂದ ಪ್ಲೇಟೋ ಈ ಆಕೃತಿಗಳನ್ನು ಕಂಡುಕೊಳ್ಳುವುದಕ್ಕಿಂತ ಲಕ್ಷಾಂತರ ವರ್ಷಗಳ ಮೊದಲೇ ವೈರಾಣುಗಳು ಈ ಆಕಾರಗಳನ್ನು ಕಂಡುಕೊಂಡಿದ್ದವು ಎನ್ನಬಹುದು.

ಜೀವಕೋಶಗಳು ಅವುಗಳ ಗುಣಗಳನ್ನು ಅವುಗಳಲ್ಲಿರುವ ನ್ಯೂಕ್ಲಿಯಕ್ ಆಮ್ಲದ (nucleic acid) ದೈತ್ಯಾಣುಗಳಿಂದ (macromolecule) ಪಡೆಯುತ್ತವೆ. ಈ ನ್ಯೂಕಿಯಕ್ ಆಮ್ಲದ ದೈತ್ಯಾಣುಗಳು ಜೀವಕೋಶ ನಿರ್ವಹಿಸಬೇಕಾದ ಸಮಸ್ತ ಸಹಸ್ರಾರು ರಾಸಾಯನಿಕ ಕ್ರಿಯೆಗಳಿಗೆ ಬೇಕಾದ ಮಾಹಿತಿಯನ್ನು ಸಾಂಕೇತಿಕ ರೂಪದಲ್ಲಿ ಸೂಚಿಸುತ್ತವೆ. ಇದೇ ರೀತಿ ವೈರಾಣುಗಳು ಅವುಗಳ ಗುಣಗಳನ್ನು ಅವುಗಳಲ್ಲಿರುವ ನ್ಯೂಕ್ಲಿಯಕ್ ಆಮ್ಲದಿಂದಲೇ ಪಡೆಯುತ್ತವೆ. ವೈರಾಣುಗಳಲ್ಲಿರುವ ನ್ಯೂಕ್ಲಿಯಕ್ ಆಮ್ಲದ ಅಣುಗಳು, ಜೀವಕೋಶಗಳಲ್ಲಿರುವ ಅಣುಗಳಿಗಿಂತ ಬಹಳ ಸಣ್ಣವು. ಆದ್ದರಿಂದಲೇ ವೈರಾಣುಗಳು ಸ್ವತಂತ್ರವಾಗಿ ಬದುಕಿ ಬೆಳೆಯಲಾರವು. ಜೀವಕೋಶವನ್ನು ಪ್ರವೇಶಿಸಿದಾಗ ಜೀವಕೋಶದ ಯಂತ್ರಾಗಾರ ತಮ್ಮದೇ ತದ್ರೂಪಿ ಕಣಗಳನ್ನು ಉತ್ಪಾದಿಸುವಂತೆ ಪ್ರೇರೇಪಣೆ ಮಾಡುವ ಮಾಹಿತಿ ಮಾತ್ರ ವೈರಾಣುಗಳ ನ್ಯೂಕ್ಲಿಯಕ್ ಆಮ್ಲದ ಅಣುಗಳಲ್ಲಿರುತ್ತದೆ. ನ್ಯೂಕ್ಲಿಯಕ್ ಆಮ್ಲದ ಅಣುಗಳು ಜೀವಕೋಶದ ಹೊರಗೆ ಬಹು ಬೇಗ ನಾಶ ಹೊಂದುತ್ತದೆ. ಆದ್ದರಿಂದ, ಒಂದು ಜೀವಕೋಶದಿಂದ



ಫೈಸಾಲಿಸ್ ಮಾಟ್ಲ್ ವೈರಸ್ಸಿನ ಪ್ರೋಟೀನ್ ಕವಚ: ವಿಂಶತ ಫಲಕದ ಆಕಾರ ಹೊಂದಿದೆ. ಉಬ್ಬಿದಂತೆ ಕಾಣುತ್ತಿರುವ ಗುಪ್ಪೆಯಲ್ಲಿ ಐದು ಪ್ರೋಟೀನಿನ ಅಣುಗಳಿರುತ್ತವೆ. ಇದರ ಕವಚದಲ್ಲಿ ಒಟ್ಟು ೧೮೦ ಪ್ರೋಟೀನ್ ಅಣುಗಳಿವೆ.

ಇನ್ನೊಂದು ಜೀವಕೋಶಕ್ಕೆ ಚಲಿಸುವಾಗ, ವೈರಾಣುಗಳು ತಮ್ಮ ನ್ಯೂಕ್ಲಿಯಕ್ ಆಮ್ಲದ ಅಣುಗಳನ್ನು ಹೆಚ್ಚು ದೃಢವಾದ, ಸುಲಭವಾಗಿ ನಾಶವಾಗದ ಪ್ರೋಟೀನ್ ಅಣುಗಳ ಕವಚದಲ್ಲಿ (protein coat) ರಕ್ಷಿಸಿ ಕೊಳ್ಳುತ್ತವೆ. ಈ ಪ್ರೋಟೀನ್ ಕವಚ ಪ್ಲೇಟೋನ ವಿಂಶತಫಲಕವನ್ನು ಹೋಲುತ್ತದೆ. ತಂಬಾಕು ಗಿಡಗಳಿಗೆ ಕಾಯಿಲೆ ಬರಿಸುವ ಇನ್ನೊಂದು ವೈರಾಣು ಫೈಸಾಲಿಸ್ ಮಾಟ್ಲ್ ವೈರಸ್ಸಿನ (physalis mottle virus) ಪ್ರೋಟೀನ್ ಕವಚವನ್ನು ಮೇಲಿನ ಚಿತ್ರ ತೋರಿಸುತ್ತದೆ.

ವೈರಾಣುಗಳ ಕವಚದಲ್ಲಿ ವಿಂಶತಫಲಕದ ಸಮತೆಯನ್ನು ಹೊಂದಲು ವಿಂಶತಫಲಕದ ಪ್ರತಿ ತ್ರಿಭುಜದಲ್ಲೂ ಮೂರು ಪ್ರೋಟೀನ್ ಅಣುಗಳಾದರೂ ಇರಬೇಕಾಗುತ್ತದೆ. ವಿಂಶತಫಲಕದಲ್ಲಿ ೨೦ ತ್ರಿಭುಜಗಳಿರುವುದರಿಂದ, ವೈರಾಣುವಿನ ಕವಚದಲ್ಲಿ ಒಟ್ಟು ೬೦ ಪ್ರೋಟೀನ್ ಅಣುಗಳಾದರೂ ಇರಬೇಕು. ಈ ವ್ಯವಸ್ಥೆ ಯನ್ನೇ ಅನುಸರಿಸಿ, ಕಪ್ಪೆಚಿಪ್ಪಿನಿಂದ ಮಾಡಿದ ವಿಂಶತಿ ಫಲಕದ ಸಮತೆಯನ್ನು ಹೊಂದಿರುವ ಅಂದವಾದ ಜೋಡಣೆಯನ್ನು ಬಲಗಡೆಯ ಚಿತ್ರದಲ್ಲಿ ನೋಡಬಹುದು.

ಮನುಷ್ಯರಿಗೆ ಕಾಯಿಲೆ ಬರಿಸುವ ಹೆಚ್ಚಿನ ವೈರಾಣುಗಳಿಗೆ ಇದೇ ಬಗೆಯ ಆಕಾರವಿದೆ. ಆದರೆ ಎಲ್ಲ ವೈರಾಣುಗಳೂ ಹೀಗೇ ಇರಬೇಕೆಂದಿಲ್ಲ. ಅನೇಕ ವೈರಾಣುಗಳಲ್ಲಿ ಅರವತ್ತು ಪ್ರೋಟೀನ್ ಅಣುಗಳ ಬದಲಾಗಿ ೧೮೦ ಪ್ರೋಟೀನ್ ಅಣುಗಳಿರುತ್ತವೆ. ಈ ವೈರಾಣುಗಳಲ್ಲಿ ವಿಂಶತಫಲಕದ ಪ್ರತಿ ತ್ರಿಕೋಣದಲ್ಲೂ ೯ ಪ್ರೋಟೀನ್ ಅಣುಗಳಿರುತ್ತವೆ. ಹೀಗೆಯೇ ಪ್ರೋಟೀನ್ ಕವಚದಲ್ಲಿ ೨೪೦ ಪ್ರೋಟೀನ್ ಅಣುಗಳಿರುವ ವೈರಾಣುಗಳೂ ಇವೆ. ಯಾವುದೇ ದುಂಡಾಕಾರದ ವೈರಾಣುವಿನಲ್ಲಿ ನಿರ್ದಿಷ್ಟ ಸಂಖ್ಯೆಯ ಪ್ರೋಟೀನ್ ಅಣುಗಳಿರುತ್ತವೆ. ಈ ಸಂಖ್ಯೆ ೬೦ರ ಗುಣಕವಾಗಿರುತ್ತದೆ. ಆದರೆ ೬೦ರ ಎಲ್ಲ ಗುಣಕಗಳೂ ಕಂಡುಬರುವುದಿಲ್ಲ. ಉದಾಹರಣೆಗೆ, ೬೦ ಪ್ರೋಟೀನ್ ಅಣುಗಳಿರುವ ವೈರಾಣುಗಳಿವೆ. ೧೨೦ ಪ್ರೋಟೀನ್ ಅಣುಗಳಿರುವ ವೈರಾಣುಗಳಿಲ್ಲ. ೧೮೦ ಪ್ರೋಟೀನ್ ಅಣುಗಳಿರುವ ವೈರಾಣುಗಳಿವೆ. ವೈರಾಣುಗಳಲ್ಲಿ ಕಂಡುಬರುವ ಪ್ರೋಟೀನ್ ಅಣುಗಳ ನಿರ್ದಿಷ್ಟ ಸಂಖ್ಯೆಗಳನ್ನು ಹೀಗೆ ನಿರ್ಧರಿಸಬಹುದು : ಯಾವುದಾದರೂ ಎರಡು ಸಂಖ್ಯೆಗಳನ್ನು ತೆಗೆದುಕೊಳ್ಳಿ. ಈ ಕೆಳಗಿನ ಸಮೀಕರಣ ಬಳಸಿ.

**೬೦ x (ಒಂದನೇ ಸಂಖ್ಯೆಯ ವರ್ಗ + ಎರಡನೇ ಸಂಖ್ಯೆ ವರ್ಗ)** ಬರುವ ಮೊತ್ತ ವೈರಾಣುಗಳಲ್ಲಿರಬಹುದಾದ ಪ್ರೋಟೀನ್ ಅಣುಗಳ ಸಂಖ್ಯೆಯನ್ನು ಸೂಚಿಸುತ್ತದೆ. ಮೊದಲನೆಯ ಸಂಖ್ಯೆ ೧ ಮತ್ತು ಎರಡನೆಯ ಸಂಖ್ಯೆ ೦ ಆದಾಗ ಮೊತ್ತ ೬೦. ಮೊದಲನೆಯ ಹಾಗೂ ಎರಡನೆಯ ಸಂಖ್ಯೆಗಳು ೧ ಇದ್ದಾಗ, ಮೊತ್ತ ೧೮೦ ಲಭಿಸುತ್ತದೆ. ಮೊದಲ ಹಾಗೂ ಎರಡನೆಯ ಸಂಖ್ಯೆಗಳ ಯಾವ ಆಯ್ಕೆಗೂ ೧೨೦ (೬೦ರ ಇನ್ನೊಂದು ಗುಣಕ) ಲಭಿಸುವುದಿಲ್ಲವೆಂಬುದನ್ನು ಗಮನಿಸಿ. ಈ ನಿಯಮಗಳಿಗೆಲ್ಲಾ ಆಧಾರ ಪ್ಲೇಟೋನ ಘನಾಕೃತಿಗಳೇ. ಆದರೆ ಈ ಆಧಾರವನ್ನು ವಿವರಿಸುವುದು ಈ ಲೇಖನದ ಮಿತಿಯನ್ನು ಮೀರುತ್ತದೆ.

ಏಡ್ಸ್ ಬರುವುದೂ ಒಂದು ವೈರಸ್ಸಿನಿಂದಲೇ. ಆದರೆ ಅದಕ್ಕೆ ಕಾರಣವಾದ ವೈರಾಣು ಇನ್ನೂ ಜಟಿಲ ರಚನೆ ಹೊಂದಿದೆ. ಈ ವೈರಾಣುವಿನ ಪ್ರೋಟೀನ್ ಕವಚವನ್ನು ಇನ್ನೊಂದು ಲಿಪಿಡ್ (ಕೊಬ್ಬು) ಪದರ ಆವರಿಸಿ ಕೊಂಡಿರುತ್ತದೆ. ಕೆಲವು ವೈರಾಣುಗಳ ಕವಚ ಒಂದೇ ಪ್ರೋಟೀನಿನ ಅನೇಕ ಪ್ರತಿಗಳನ್ನು ಹೊಂದಿದ್ದರೆ, ಇನ್ನು ಕೆಲವು ವೈರಾಣುಗಳಲ್ಲಿ ಎರಡು ಅಥವಾ ಮೂರು ಬಗೆಯ ಪ್ರೋಟೀನ್ ಅಣುಗಳಿರುತ್ತವೆ. ಆದರೆ ಪ್ರ[illegible] ಬಗೆಯ ಪ್ರೋಟೀನ್ ಅಣುವೂ ೬೦ ಅಥವಾ ಮೇಲಿನ ಸೂತ್ರದಲ್ಲಿ ಲಭಿಸುವ ಸಂಖ್ಯೆಯಾಗಿರಬೇಕು. ಪೋಲಿಯೋ ವೈರಾಣುವಿನಲ್ಲಿ, ಮೂರು ಬಗೆಯ ಪ್ರೋಟೀನ್ ಅಣುಗಳಿದ್ದು ಮೂರೂ ಪ್ರೋಟೀನ್ ಅಣುಗಳ ೬೦ ಪ್ರತಿಗಳಿರುತ್ತವೆ. ಇದರಿಂದ ಪೋಲಿಯೋ ವೈರಾಣು ಕವಚದಲ್ಲಿ ಒಟ್ಟು ೧೮೦ ಪ್ರೋಟೀನ್ ಅಣುಗಳಿದ್ದಂತೆ ಆಯಿತು. ದುಂಡಾಕಾರದ ವೈರಾಣುಗಳ ರಚನಾವ್ಯವಸ್ಥೆಯನ್ನು ಪ್ಲೇಟೋನ ಘನಾಕಾರಗಳ ಸಹಾಯದಿಂದಲೇ ತಿಳಿಯಬೇಕಾಗಿರುವುದು ಪ್ಲೇಟೋನ ಹಿರಿಮೆಗೆ ಸಾಕ್ಷಿಯಾಗಿದೆ.



ಕಪ್ಪೆ ಚಿಪ್ಪು ಮತ್ತು ನಕ್ಷತ್ರ ಮೀನುಗಳನ್ನು ಬಳಸಿ ನಿರ್ಮಿಸಿದ ಅಂದವಾದ ವಿಂಶತಫಲಕ, ಈ ರಚನೆಯಲ್ಲಿ ೬೦ ಕಪ್ಪೆ ಚಿಪ್ಪುಗಳಿವೆ (ಒಂದು ತ್ರಿಭುಜಕ್ಕೆ ಮೂರರಂತೆ ವಿಂಶತಿ ಫಲಕದ ೨೦ ತ್ರಿಭುಜಗಳಿಗೆ ೬೦) ವಿಂಶತಿಫಲಕದ ಹನ್ನೆರಡು ಮೂಲೆಗಳಲ್ಲಿ ಐದು ಪಟ್ಟು ಸಮತೆಯಿರುವ ೧೨ ನಕ್ಷತ್ರ ಮೀನುಗಳಿವೆ. ಹನ್ನೆರಡು ನಕ್ಷತ್ರ ಮೀನುಗಳ ಬೆರಳುಗಳ ಒಟ್ಟು ಸಂಖ್ಯೆಯೂ ೬೦

ಪ್ರೊ॥ ಎಮ್. ಆರ್. ಎನ್. ಮೂರ್ತಿ
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು - ೫೬೦ ೦೧೨

# ರಾಹುಗೊಂಡು ಕಾಲ ಏಕೆ ?

ನಾವು ಚಿಕ್ಕವರಿದ್ದಾಗ ಅಕ್ಕಪಕ್ಕದವರೊಡನೆ ಬಹಳ ಆತ್ಮೀಯ ಒಡನಾಟ ಇರುತ್ತಿತ್ತು. ಅವರು ಆಗಾಗ್ಗೆ ಬಂದು ಸಲಹೆ, ಸೂಚನೆ, ಸಹಾಯ, ಸಾಮಾನು ... ಪಡೆದುಕೊಂಡು ಹೋಗುವುದು ಸರ್ವೇಸಾಮಾನ್ಯ. ನಮ್ಮ ತಾಯಿಯವರಿಗೆ ಹೊಲಿಗೆ ವಿಷಯ ಚೆನ್ನಾಗಿ ತಿಳಿದಿದ್ದುದರಿಂದ ಅದನ್ನು ಕಲಿಯುವವರೂ ಬಂದು ಹೋಗುತ್ತಿದ್ದರು. ಹೀಗೊಬ್ಬರು ಎಂಟು ತಿಂಗಳು ದಾಟಿದ್ದ ಗರ್ಭವನ್ನು ಹೊತ್ತು ಏದುಸಿರುಬಿಡುತ್ತಾ ಬಂದು ತೆಗೆದೇ ಇದ್ದ (ಬಾಗಿಲು ಹಾಕಿರುತ್ತಿದ್ದುದೂ ಅಪರೂಪವೇ) ಬಾಗಿಲೊಳಗೆ ನುಗ್ಗಿ, ''ಬೇಗ ಬೇಗ ಕತ್ತರಿ ಕೊಡು'' ಎಂದು ಅವಸರಿಸಿದರು. ಕತ್ತರಿಯನ್ನು ಕೊಟ್ಟೆ. ಕೂಡಲೇ ತಮ್ಮ ಕೈಲಿದ್ದ ಬಟ್ಟೆಯ ಮೂಲೆಯನ್ನು ಚೂರೇ ಚೂರು ಕತ್ತರಿಸಿ, ಗಡಿಯಾರವನ್ನು ನೋಡಿ ''ಸಧ್ಯ'' ಎಂದು ನಿಡುಸುಯ್ದು ಧಸಕ್ಕನೆ ಕುಸಿದು ಕುಳಿತರು. ಅಷ್ಟರಲ್ಲಿ ಒಳಗಿನಿಂದ ಬಂದ ನನ್ನಮ್ಮ, ''ಏನಾಯಿತು ? ನೀರು ಕೊಡಲೇ ? ಯಾಕಿಷ್ಟು ಗಾಬರಿ, ಆಯಾಸ ?'' ಎಂದು ಕೇಳಿದರು. ನೀರು ಕೊಟ್ಟರು. ಈಗ ನಿಧಾನವಾಗಿ ಉತ್ತರ ಹೊರಟಿತು.

''ರಾಹುಕಾಲದೊಳಗೇ ಈ ಅಂಗಿ ಹೊಲಿಯೋದು ಶುರು ಮಾಡಿಬಿಡೋಣ ಅಂತ ಬೇಗ ಬೇಗ ಬಂದೆ. ಸಧ್ಯ ! ಈ ಮೂಲೆ ಕತ್ತರಿಸಿ ಶುರು ಮಾಡಿದ್ದೀನಿ. ಈಗ ಮಗೂಗೆ ಅಂಗಿ ಹೊಲಿಯೋದು ಸ್ವಲ್ಪ ಹೇಳಿಕೊಡಿ.''

ಯಾವ ರಾಹು ? ಯಾವ ಕಾಲ ? ಯಾವ ಮಗು ? ಯಾವ ಅಂಗಿ ? ನನಗೆ ತಿಳಿಯಲೇ ಇಲ್ಲ. ಮಗುವೇನೋ ಅವರ ಹೊಟ್ಟೆಯೊಳಗೇ ಇತ್ತು. ಅಂಗಿ ಎಂಬುದು ಅವರ ಕೈಲಿದ್ದ ಅರ್ಧ ಮೀಟರ್ ಬಟ್ಟೆಯ ಭವಿಷ್ಯ ರೂಪ. ಇನ್ನು ರಾಹು ? ಕಾಲ ?... ಅವರು ಅಂಗಿಯನ್ನು ತೆಗೆದುಕೊಂಡು ಹೋದಮೇಲೆ ಅಮ್ಮನನ್ನು ಕೇಳಿದೆ. ಅಮ್ಮನಿಗೆ ಉತ್ತರಿಸಲು ವ್ಯವಧಾನವಿರಲಿಲ್ಲವೋ ಏನೋ... ''ಕ್ಯಾಲೆಂಡರ್‌ನಲ್ಲಿ ಬರೆದಿದೆ ನೋಡು'' ಎಂದರು. ನಾವು ಕ್ಯಾಲೆಂಡರ್ ಅಧ್ಯಯನ ಪ್ರಾರಂಭಿಸಿದೆವು. ಅದರಲ್ಲಿ ರಾಹುಕಾಲ ೩:೦೦ ಗಂಟೆ ಎಂದಿತ್ತು. ಆದ್ದರಿಂದಲೇ ಆಕೆ ಗಡಿಯಾರ ನೋಡಿದ್ದು; ೪:೨೯ ರ ಒಳಗೇ ಕತ್ತರಿಯನ್ನು ಬಟ್ಟೆಗೆ ತಾಗಿಸಿ ಕೆಲಸದ ಆರಂಭ ಮಾಡಿದ್ದು, ಎಂದು ತರ್ಕಿಸಿದೆವು. ಯಮಗಂಡಕಾಲ ಎಂಬುದನ್ನು ಯಮಗುಂಡ ಎಂದು ಓದಿ ಊರಲ್ಲಿದ್ದ 'ಗುಂಡ'ರುಗಳನ್ನೆಲ್ಲಾ ನೆನಪಿಸಿಕೊಂಡೆವು. ರಾಹುಕಾಲ ಏನು ? ಎಂಬುದಕ್ಕೆ ಅಲ್ಲಿ ಉತ್ತರ ಇರಲಿಲ್ಲ, ಅಕ್ಕ ಕತೆ ಹೇಳಿದಳು. ಅಮೃತಮಥನದ ಕತೆ. ಕತೆ ಮುಗಿಯುವಾಗ ರಾಹುಕಾಲದ ವಿಷಯ ಮರೆತುಹೋಗಿತ್ತು.

ರಾತ್ರಿ ಮಲಗುವಾಗ ಮತ್ತೆ ಪ್ರಶ್ನೆ ಎದ್ದಿತು – ರಾಹು ಎಂಬ ರಾಕ್ಷಸನಿಗೆ ದಿನವೂ ಒಂದೂವರೆ ಗಂಟೆ ಏಕೆ ಬೇಕು ?

ಪುನಃ ಆ ಪದ ನನ್ನನ್ನು ಕೆಣಕಿದ್ದು ಆರೇಳು ವರ್ಷಗಳ ನಂತರ. ಸಂಗೀತದ ಮೇಷ್ಟ್ರಿಗೆ ರಾಹುಕಾಲದ್ದೇ ಧ್ಯಾನ. ಅದನ್ನು ನೆನಪಿನಲ್ಲಿಟ್ಟುಕೊಳ್ಳಲು ಅವರು (ಇಂಗ್ಲಿಷ್) ಮಂತ್ರವೊಂದನ್ನು ರಚಿಸಿ, ಕಂಠಸ್ಥ ಮಾಡಿಕೊಂಡಿದ್ದರು. ಈ ಮಂತ್ರವನ್ನು ನಾನು ಕಲಿಯಲಿಲ್ಲ; ಅವಶ್ಯಕತೆಯೂ ಇರಲಿಲ್ಲ. ಅವರು ರಾಹುಕಾಲದಲ್ಲಿ ಹಳೆಯ ಪಾಠ ಮುಗಿಸುತ್ತಿರಲಿಲ್ಲ; ಹೊಸದನ್ನು ಆರಂಭಿಸುತ್ತಿರಲಿಲ್ಲ. ಆದ್ದರಿಂದ ಆ ಕಾಲವನ್ನು ಶಪಿಸುವ ಹಾಗೆ ಆಗುತ್ತಿತ್ತು.

ನನ್ನ ಗೆಳತಿಯರಲ್ಲನೇಕರು ರಾಹುಕಾಲದ ಶಿಸ್ತನ್ನು ಬಹಳ ಅಚ್ಚುಕಟ್ಟಾಗಿ ಪಾಲಿಸುತ್ತಿದ್ದರು. ಸಾಧಾರಣವಾಗಿ ಪರೀಕ್ಷೆ ಗಳೆಲ್ಲಾ ಒಂಬತ್ತಕ್ಕೇ ಆರಂಭವಾಗುತ್ತಿದ್ದುದರಿಂದ ಒಬ್ಬಳ ಪಾಡು ಶೋಚನೀಯವೇ ಆಗಿಬಿಟ್ಟಿತ್ತು. ಒಂಬತ್ತು ಹೊಡೆಯುವವರೆಗೂ ಕೈಗೆ ಉತ್ತರಪತ್ರಿಕೆ ಸಿಗುತ್ತಿರಲಿಲ್ಲ. ಅಂದರೆ ರಾಹುಕಾಲದಲ್ಲೇ ಉತ್ತರ ಬರೆಯಲು ಪ್ರಾರಂಭಿಸಬೇಕು. ಫಲಿತಾಂಶ ಏನಾಗುವುದೋ ? ಏನು ಗತಿ ? ಅವಳು ಟೀಚರ್ ಬಳಿ ಧಾವಿಸಿ ಗಂಗೆ, ಯಮುನೆಯರ ಸಹಾಯ ಪಡೆದು ತನ್ನ ಅಸಹಾಯಕತೆಯನ್ನು ತೋಡಿಕೊಂಡಳು. ಬೆಲ್ ಹೊಡೆಯುವ ಒಂದು ನಿಮಿಷ ಮುಂಚೆ ಉತ್ತರಪತ್ರಿಕೆ ಯನ್ನು ಕೊಡಬೇಕೆಂದು ವಿನಂತಿಸಿಕೊಂಡಳು. ಅವರೂ ಒಪ್ಪಿದ್ದು (ನನಗೆ) ಆಶ್ಚರ್ಯ. ಅವಳಿಗೆ ಉತ್ತರಪತ್ರಿಕೆ ಸಿಕ್ಕಿತು. ಆದರೆ ಪ್ರಶ್ನಪತ್ರಿಕೆ ಸಿಗಲಿಲ್ಲ. ಅವಳೇನೂ ಧೃತಿಗೆಡಲಿಲ್ಲ. ಒಂಬತ್ತು ಗಂಟೆಯ ಒಳಗಾಗಿ ಅದರ ಮೇಲೆ 'ಓಂ' ಎಂದು ಬರೆದು ಬಿಟ್ಟಳು. ಆಹಾ ! ಅವಳ ಮುಖ ನೋಡಬೇಕಿತ್ತು, ಎವರೆಸ್ಟ್ ಏರಿ ಬಂದ ತೇನ್‌ಸಿಂಗನ ಮುಖದ ಮೇಲಿದ್ದ ಧನ್ಯತೆ, ಸಾರ್ಥಕತೆ ಎಲ್ಲವೂ ಅಲ್ಲಿ ನೆಲೆಯಾಗಿದ್ದವು. ಅವಳ ಭಗೀರಥ ಪ್ರಯತ್ನ ಕಂಡ ಇತರರು (ರಾಹುಕಾಲದ ಅನುಯಾಯಿಗಳು) ತಾವು ಪರೀಕ್ಷೆಯಲ್ಲಿ ಫೇಲು ಆಗಿಬಿಡುತ್ತೇವೇನೋ ಎಂದು ಕನಲಿದರು. ಆದರೆ ಆಕೆ ತನ್ನ 'ತಪಸ್ಸಿ'ನ ಫಲವನ್ನು ಉದಾರವಾಗಿ ನಮಗೆಲ್ಲಾ ಹಂಚಿದ್ದಳು. ನಾವೆಲ್ಲರೂ ಪರೀಕ್ಷೆಯಲ್ಲಿ ಪಾಸಾಗಿದ್ದೆವು.

ಈ ಎಲ್ಲ ಚುಟುಕು ಪರಿಚಯಗಳ ನಂತರವೂ ಮೂಲಭೂತ ಪ್ರಶ್ನೆ ಹಾಗೇ ಉಳಿದಿತ್ತು (ಉಳಿದಿದೆ !). ಅದರ ಅರ್ಥ, ವ್ಯಾಪ್ತಿಯ ಪರಿಚಯ ಉಂಟಾಗಿದ್ದು ಮುಂದೆ – ಮದುವೆ, ಗೃಹಪ್ರವೇಶ ಮುಂತಾದ ಸಮಾರಂಭಗಳಲ್ಲಿ. ಮದುವೆ ಮನೆಯ ಗಡಿಬಿಡಿಯಲ್ಲಿ ಜೋಯಿಸರು ಆರಾಮವಾಗಿ ಕಾಫಿ ಕುಡಿಯುತ್ತಾ ಕುಳಿತಿದ್ದರೆ ಅದು ರಾಹುಕಾಲವೇ ! ಯಾವುದೋ ಶಂಕುಸ್ಥಾಪನೆಗೋ, ಉದ್ಘಾಟನೆಗೋ ಬಂದ ಮಂತ್ರಿವರ್ಯರನ್ನು ಬೇಗ ಓಡಿಹೋಗದಂತೆ ತಡೆಯಬಲ್ಲ ಶಕ್ತಿ ಇರುವುದು ರಾಹುಕಾಲಕ್ಕೆ ಮಾತ್ರ. ಹೀಗೆ ಪದೇ ಪದೇ ಎಡತಾಕುತ್ತಿದ್ದ ಈ ಪದಕ್ಕೆ ಏನಾದರೂ ಅರ್ಥವಿರಬಹುದೇ ಎಂದು ಖಗೋಳಶಾಸ್ತ್ರದ ಪುಟಗಳನ್ನೆಲ್ಲಾ ತಿರುವಿಹಾಕಿದ್ದೆ. ಹುಣ್ಣಿಮೆ, ಅಮಾವಾಸ್ಯೆಗಳು ಖಗೋಳೀಯ ಘಟನೆಗಳು. ಆದರೆ ವಾರದ ಹೆಸರು ಗಳಲ್ಲಿ 'ಗ್ರಹ'ಗಳ ಹೆಸರಿರುವುದರ ಹೊರತು ವಾರವಾರಕ್ಕೆ ನಡೆಯುವ ಯಾವ



■ ಡಾ|| ಬಿ. ಎಸ್. ಶೈಲಜಾ

ಖಗೋಳೀಯ ಘಟನೆಯೂ ಇಲ್ಲ, ವಾರಗಳ ಗಣನೆಯ ಮೂಲ ಭಾರತದ್ದಲ್ಲ; ಪಾಶ್ಚಾತ್ಯರಿಂದ ಬಂದದ್ದು ಎನ್ನುತ್ತಾರೆ ಇತಿಹಾಸಜ್ಞರು. ಗುಜರಾತ್‌ನಲ್ಲಿ, ಅಷ್ಟೇ ಏಕೆ ಉತ್ತರಭಾರತದಲ್ಲಿ ರಾಹುಕಾಲ ಎಂಬುದೇ ಇಲ್ಲ!

ಮೊನ್ನೆ ಮೊನ್ನೆ ಒಂದು ಹಳೆಯ ಪುಸ್ತಕ ಸಿಕ್ಕಿತು. ಸುಮಾರು ೧೧ನೆಯ ಶತಮಾನದಲ್ಲಿ ಭಾರತದಲ್ಲಿ ಬಳಕೆಯಲ್ಲಿದ್ದ ರಾಹುಚಕ್ರ ಎಂಬುದರ ವ್ಯಾಖ್ಯೆ ಸಿಕ್ಕಿತು. ರಾಹುಕಾಲಕ್ಕೂ ಇದಕ್ಕೂ ನೇರ ಸಂಬಂಧವೇನೂ ಕಾಣಲಿಲ್ಲ. ಆದರೂ ಸ್ವಾರಸ್ಯವಾಗಿ ಕಂಡಿದ್ದರಿಂದ ಇಲ್ಲಿ ಬರೆದಿದ್ದೇನೆ.

ಜೂಜಾಡುವವರು ಆಟ ಆರಂಭಿಸುವ ಮೊದಲು ತಮ್ಮ ಅದೃಷ್ಟದ ದಿಕ್ಕನ್ನು ಆರಿಸಿಕೊಳ್ಳಲು ಈ ಚಕ್ರ ಬಳಸುತ್ತಿದ್ದರಂತೆ.

ಇದು ಚಕ್ರದಂತಿಲ್ಲ, ರಂಗೋಲಿಯ ಹಾಗೆ ಕಾಣುತ್ತದೆ. ಈ ಚಿತ್ರಕ್ಕೆ ಉತ್ತರ ದಕ್ಷಿಣ ದಿಕ್ಕುಗಳೂ ಸೂಚಿತವಾಗಿವೆ. ದಿಕ್ಕುಗಳಿಗೆ ಗ್ರಹಗಳ ಹೆಸರುಗಳೂ ಇವೆ. ವಾರದ ಆಯಾ ದಿನಕ್ಕೆ ಆಯಾ ಗ್ರಹವೇ ಅಧಿದೇವತೆಯಂತೆ. ಇದನ್ನು ಉಪಯೋಗಿಸುವ ಕ್ರಮವೂ ವಿವರವಾಗಿದೆ. ದಿನವನ್ನು ಎಂಟು ಭಾಗವಾಗಿ ವಿಭಾಗ ಮಾಡಲಾಗುತ್ತಿತ್ತು. ಇದನ್ನು ಉಪಯೋಗಿಸುವ ದಿನದ ಭಾಗ ಯಾವುದು ಎಂದು ತಿಳಿದುಕೊಂಡಿರಬೇಕು. ಆ ದಿನದ ಅಧಿದೇವತೆಯ ಗ್ರಹದಿಂದ ಆರಂಭಿಸಿ ಎಡಭಾಗದ ಮೂಲೆಗೆರೆ ಹೋಗಿ ಮುಟ್ಟುವ ಗೆರೆಯ ಗ್ರಹದ ಹೆಸರನ್ನು ಎರಡು ಎಂದೂ, ಅದರಿಂದ ಹೊರಟು ಮೂಲೆಯಾಗಿ ಸೇರುವ ಗ್ರಹದ ಹೆಸರನ್ನು ಮೂರು ಎಂದೂ ಎಣಿಸುತ್ತಾ ಸಾಗಬೇಕು. ಹೀಗೆ ದಿನದ ಭಾಗದ ಸಂಖ್ಯೆಯನ್ನು ಮುಟ್ಟಿದಾಗ ಬರುವ ದಿಕ್ಕಿಗೆ ರಾಹು ಎಂದು ಹೆಸರಂತೆ. ಆಡುವಾಗ ಆ ದಿಕ್ಕಿಗೆ ಬೆನ್ನು ಹಾಕಿ ಕುಳಿತರೆ ಗೆಲುವು ಖಚಿತವಂತೆ. (ಚಿತ್ರ ನೋಡಿ)

ಈ ವಿವರಣೆ ಅರ್ಥಮಾಡಿಕೊಳ್ಳಲು ಒಂದು ಉದಾಹರಣೆಯೂ ಇದೆ. ಗುರುವಾರ ಆಟ ಆಡಬೇಕಾಗಿದೆ; ದಿನದ ಐದನೆಯ ಭಾಗದಲ್ಲಿ ಎಂದುಕೊಳ್ಳೋಣ. ಚಿತ್ರದಲ್ಲಿ ಗುರುವಿನ ಸ್ಥಾನವನ್ನು ಹುಡುಕಿ. ಅದರ ಎಡಭಾಗದ ಗೆರೆ ವಾಯವ್ಯವನ್ನು ಮುಟ್ಟುತ್ತದೆ. ಅಲ್ಲಿ ಶನಿ ಇದೆ. ಆ ತ್ರಿಕೋಣದ ಇನ್ನೊಂದು ಗೆರೆ ರವಿಯನ್ನು ಮುಟ್ಟುತ್ತದೆ. ರವಿಯ ತ್ರಿಕೋಣದ ಇನ್ನೊಂದು ಗೆರೆ ಚಂದ್ರನನ್ನು ಮುಟ್ಟುತ್ತದೆ. ಇದು ನಾಲ್ಕನೆಯದು. ಮುಂದಿನದು ಐದನೆಯದು ಬುಧ. ಇದರ ದಿಕ್ಕು ಉತ್ತರ. ಆದ್ದರಿಂದ ಆಟ ಆಡುವಾಗ ಉತ್ತರಕ್ಕೆ ಬೆನ್ನು ಹಾಕಿ ಕೂಡಬೇಕಂತೆ.

ಅನೇಕ ಹಳೆಯ ದೇವಸ್ಥಾನಗಳ ಜಗುಲಿಗಳ ಮೇಲೆ ಚೌಕಾಭಾರ, ಹುಲಿಗಟ್ಟಭಾರ, ಹಳಗುಳಿಮಣೆ ಮುಂತಾದ ಆಟಗಳನ್ನು ಆಡಲು ಸೌಕರ್ಯ




ವಿರುವುದನ್ನು ನೀವು ಗಮನಿಸಿರಬಹುದು. ಅವು ಸವೆದು ಸವೆದು ನುಣುಪಾಗಿ ಇರುವುದೇ ಅವು ಎಷ್ಟೊಂದು ಬಳಕೆಯಾಗಿದೆ ಎಂಬುದನ್ನು ಸೂಚಿಸುತ್ತದೆ. (ಅವೆನ್ಯೂ ರಸ್ತೆಯಲ್ಲಿ ಪಾದಚಾರಿಗಳಿಗಾಗಿ ಹಾಕಿರುವ ಚಪ್ಪಡಿಕಲ್ಲುಗಳು ನುಣುಪಾದ ಹಾಗೆ.) ಆ ಚಿತ್ರಗಳ ನಡುವೆ ಇಂತಹದೊಂದು ರಾಹುಚಕ್ರವೂ ಇರಬಹುದು. ನೋಡಿದವರು ರಂಗೋಲಿ ಎಂದುಕೊಂಡಿರಬಹುದು.

ಈ ಚಿತ್ರ ನನಗೆ ದೊರಕಿದ್ದು ಹನ್ನೊಂದನೆಯ ಶತಮಾನದ ಅಲ್ ಬರೂನಿ ಬರೆದ ಗ್ರಂಥದಲ್ಲಿ. ತಾನು ಕಂಡದ್ದನ್ನೆಲ್ಲಾ ಪ್ರಾಮಾಣಿಕವಾಗಿ ವರದಿ ಮಾಡಿರುವುದರಿಂದ ಆತನ ಬಗ್ಗೆ ಸಂಶಯಪಡುವಂತಿಲ್ಲ. (ಮುಲ್ತಾನ್‌ನಲ್ಲಿದ್ದ ಶಿವಲಿಂಗವನ್ನು ಒಯ್ದು ಕಾಬಾದಲ್ಲಿ ಕಾಲ್ದಿರಿಸು ಮಾಡಿರುವುದನ್ನೂ ಆತ ಖೇದದಿಂದ ಬರೆದಿದ್ದಾನೆ.)

ಈ ವಿಚಿತ್ರ ಅದೃಷ್ಟ ಪರೀಕ್ಷೆಯ ಮೂಲವನ್ನು ಕೆದಕುವುದರಲ್ಲಿ ಅರ್ಥವಿಲ್ಲ. ಏಕೆಂದರೆ ಇದು ಗಿಣಿಶಾಸ್ತ್ರ ಅಥವಾ ಕವಡೆ ಶಾಸ್ತ್ರದಷ್ಟೇ ಅಸಂಬದ್ಧ. ದಿನದ ಐದು ಭಾಗವನ್ನು ಲೆಕ್ಕ ಮಾಡಬಲ್ಲವರು, ಈ ಡೊಂಕುಡೊಂಕಾದ ತರ್ಕವನ್ನು ಮುಂದಿಟ್ಟು ಮನವೊಲಿಸಬಲ್ಲವರು, ಈ ಉಪಾಯ ಹುಡುಕಿಕೊಂಡರು ಎಂದು ಸುಲಭವಾಗಿ ಊಹಿಸಬಹುದು.

ಈ ಚಕ್ರವನ್ನು ಯಾರಾದರೂ ಕಂಪ್ಯೂಟರ್‌ಗೆ ಹಾಕಿ 'ಪ್ರಾಚೀನ ಭಾರತದ ಅದೃಷ್ಟ ಚಕ್ರ' ಎಂದು ಹೆಸರಿಟ್ಟು ಲಾಟರಿಯವರಿಗೆ, ಕುದುರೆಯ ಬಾಲ ಹಿಡಿಯುವವರಿಗೆ ಮತ್ತು ಒಂದಂಕಿಯವರಿಗೆ 'ಸೇವೆ' ಸಲ್ಲಿಸಲು ಆರಂಭಿಸಿಬಿಟ್ಟರೆ ಆಶ್ಚರ್ಯವೇನೂ ಇಲ್ಲ. ಹರಿದ್ವಾರ-ಹೃಷೀಕೇಶಗಳಂತಹ ಊರುಗಳಲ್ಲಿ 'ಅತಿ ಪ್ರಾಚೀನ' ಎಂಬ ಬೋರ್ಡು ತಗುಲಿಸಿಕೊಂಡ ನೂರಿನ್ನೂರು ದೇವಾಲಯಗಳ ಹುಂಡಿಗಳೇ ಈ ಪದದ ಯಶಸ್ಸಿಗೆ ಸಾಕ್ಷಿ.

ಈ ಆಟದ ಬಗ್ಗೆ ಬರೆದ ಅಧ್ಯಾಯದ ಕೊನೆಯಲ್ಲಿ ಅಲ್ ಬರೂನಿ ಬರೆದ ವಾಕ್ಯಗಳು ಇಂದಿಗೂ ಪ್ರಸ್ತುತ –

''ಹೀಗೆ ತಾನು ದಾಳ ಎಸೆಯುವುದನ್ನು ಶಕುನ, ದಿಕ್ಕುಗಳಿಂದ ಸಮರ್ಥಿಸಿಕೊಳ್ಳುವ ಜೂಜುಕೋರನ ಬಗ್ಗೆ ಯೋಚಿಸಬೇಕೇ ಬೇಡವೇ ಎಂಬುದನ್ನು ವಾಚಕರೇ ನಿರ್ಧರಿಸಲಿ. ಆತನ ಆಟದ (ಬೇ) ಜವಾಬ್ದಾರಿಯನ್ನು ಅವನಿಗೇ ಹೊರಿಸೋಣ.''*

* Suffice it to leave to him the responsibility of his dice-playing.

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

## 'ಹನಿ'ಗಳು

**ನೆರಳು**

ಭೂತದ ನೆರಳು
ಬೀಳುತ್ತದೆ
ವರ್ತಮಾನದ ಮೇಲೆ ;
ಹಾಗೆಯೆ,
ವರ್ತಮಾನದ ನೆರಳು
ಬೀಳಬಹುದು
ಭೂತದ ಮೇಲೆ !

**ಬಿಳಲು**

ನಾನು ಬೇರಲ್ಲ,
ಬಿಳಲು;
ಹೂವು ಹಣ್ಣಿಲ್ಲದ ಗಿಡ !
ಸೃಷ್ಟಿ ವೈವಿಧ್ಯಮಯ :
ಕಂಡವರಾರು ದಡ ?

**ಒಳಗೆ**

ನಮ್ಮೊಳಗೆ
ಗಾಂಧಿಯಿದ್ದಾನೆ ;
ಅಂತೆಯೆ, ಇದ್ದಾರೆ
ಗಾಂಧಾರಿ ಪುತ್ರರು !

ಸಿ.ಪಿ.ಕೆ.
ಮೈಸೂರು

# ಶುದ್ಧ ಸಂಗೀತದ ತತ್ತ್ವವೇ ಬದುಕನ್ನು ಸಮಚಿತ್ತದಿಂದ ಎದುರಿಸೋದು...

## –ಆರ್. ಕೆ. ಶ್ರೀಕಂಠನ್



*ವಿದ್ವಾನ್ ಆರ್. ಕೆ. ಶ್ರೀಕಂಠನ್*

೧೯೨೦ರ ಸಂಕ್ರಾಂತಿಯಂದು (ಜನವರಿ ೧೪) ಜನಿಸಿದ ಆರ್. ಕೆ. ಶ್ರೀಕಂಠನ್ ಅವರು ಜೀವಮಾನದುದ್ದಕ್ಕೂ 'ಗೀತ ಸಂಕ್ರಾಂತಿ'ಗೆ ಹೆಸರಾಗಿ ಶೋಭಿಸಿದ್ದಾರೆ. ಮಾತಾಮಹರಾದ ಬೆಟ್ಟದಪುರ ನಾರಾಯಣಸ್ವಾಮಿಯವರು ವೈಣಿಕರು ಹಾಗೂ ಗಾಯಕರು. ಸದಾಶಿವರಾಯರ ಸಮಕಾಲೀನರಾದ ಮೂಗೂರು ಸುಬ್ಬಣ್ಣನವರು ಇವರ ಗುರುಗಳು ಮತ್ತು ವೀಣಾ ಪದ್ಮನಾಭಯ್ಯನವರಿಗೂ ನಾರಾಯಣಸ್ವಾಮಿಯವರಿಗೂ ಪರಮ ಸ್ನೇಹ. ತಾಯಿ ಸಣ್ಣಕ್ಕನವರೂ ಸೊಗಸಾಗಿ ಹಾಡುತ್ತಿದ್ದರು. ತಂದೆ, ರುದ್ರಪಟ್ಣಂ ಕೃಷ್ಣಶಾಸ್ತ್ರಿಗಳಂತೂ ಪ್ರಬುದ್ಧ ಕಲಾವಿದರಷ್ಟೇ ಅಲ್ಲದೆ ಹರಿಕಥಾ ವಿದ್ವಾಂಸರೂ ಆಗಿದ್ದು, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಅಸಾಧಾರಣ ಪಾಂಡಿತ್ಯ ಉಳ್ಳವರಾಗಿದ್ದರು. 'ಪಂಡಿತರಾಜ' ಎಂಬ ಬಿರುದಾಂಕಿತರಾಗಿದ್ದರು. ಉತ್ತಮ ಪ್ರವಚನಕಾರರು. ಸಂಗೀತದಲ್ಲಿ ಎ. ಕೆ. ಸುಬ್ಬರಾವ್ ಮುಂತಾದವರು ಶಿಷ್ಯರು. ಶ್ರೀಕಂಠನ್ ಸೋದರರಾದ ವೆಂಕಟರಾಮಾಶಾಸ್ತ್ರಿ, ನಾರಾಯಣಸ್ವಾಮಿ ಮತ್ತು ರಾಮನಾಥನ್ ಎಲ್ಲರೂ ಸಂಗೀತ ಸಾಧಕರೇ. ಏಳೆಂಟನೇ ವಯಸ್ಸಿನಲ್ಲಿ ಆರಂಭದ ಶಿಕ್ಷಣವನ್ನು ತಂದೆಯವರಿಂದಲೂ ಹಿರಿಯಣ್ಣ ಹಾಗೂ ಖ್ಯಾತ ನಾಮರಾದ ಪಿಟೀಲು ವಿದ್ವಾನ್ ಆರ್. ಕೆ. ವೆಂಕಟರಾಮಾಶಾಸ್ತ್ರಿಗಳಿಂದಲೂ ಪಡೆದುಕೊಂಡ ಮೇಲೆ ಮುಂದೆಲ್ಲ ನಿರಂತರ ಸಾಧನೆ, ಜೊತೆಜೊತೆಗೆ ಮುಂದುವರೆದ ಸಾಮಾನ್ಯ ವಿದ್ಯಾಭ್ಯಾಸ. ಸದ್ವಿದ್ಯಾ ಪಾಠಶಾಲೆ, ಬನುಮಯ್ಯ ಪ್ರೌಢಶಾಲೆಗಳ ನಂತರ ಇಂಟರ್‌ಮೀಡಿಯೇಟ್ ಕಾಲೇಜ್ ಮತ್ತು ಮಹಾರಾಜ ಕಾಲೇಜಿನಲ್ಲಿ ವ್ಯಾಸಂಗ, ಬಿ.ಎ. ಪದವಿ ಗಳಿಕೆ.

ಮೈಸೂರಿನಲ್ಲಿ ಬಿಡಾರಂ ಕೃಷ್ಣಪ್ಪ ರಾಮಮಂದಿರದ ರಾಮೋತ್ಸವ ಕಚೇರಿಗಳ ರಸದೌತಣ. ಅಲ್ಲಿ ಕೇಳಿದ ಪಲ್ಲಡಂ ಸಂಜೀವರಾವ್, ಪಾಲ್ಘಾಟ್ ರಾಮ ಭಾಗವತರ್, ಚಂಬೈ, ಅರಿಯಾಕುಡಿ, ವಿಶ್ವನಾಥಯ್ಯರ್, ಮುಸಿರಿ, ಚಿಕ್ಕರಾಮರಾಯರು, ಬಿಡಾರಂ ಕೃಷ್ಣಪ್ಪ (ಗಾಯನ), ಕಾರೈಕುಡಿ ಸಹೋದರರು (ವೀಣೆ), ಪರೂರು ಸುಂದರಂ ಅಯ್ಯರ್, ಪಾಲ್ಘಾಟ್ ಮಣಿ ಅಯ್ಯರ್ (ಮೃದಂಗ), ಕೋದಂಡರಾಮ ಅಯ್ಯರ್ (ಘಟಂ), ರಾಜರತ್ನಂ ಪಿಳ್ಳೈ (ನಾಗಸ್ವರ), ಮೀನಾಕ್ಷಿ ಸುಂದರಂ ಪಿಳ್ಳೈ (ಡೋಲು), ಸರಸ್ವತಿ ಬಾಯಿ, ಕನಕಾಂಬುಜಂ, ಯದುಗಿರಿ ಕುಮಾರಿ (ಹರಿಕಥೆ), ಬಾಲ ಸರಸ್ವತಿ (ನೃತ್ಯ), ಅವರ ತಾಯಿ ಜಯಮ್ಮನವರು (ಹಾಡುಗಾರಿಕೆ), ಈ ಎಲ್ಲ ಕಲಾವಿದರ ಕಲಾವಂತಿಕೆಯ ಗಾಢ ಪರಿಣಾಮ ಎಳೆಯ ಶ್ರೀಕಂಠನ್‌ರ ಮೇಲೆ. ಇದರ ಜೊತೆಯಲ್ಲಿ ಮನೆಗೆ ಬರುತ್ತಿದ್ದ ವಾಸುದೇವಾಚಾರ್ಯರು, ವೀಣಾ ವೆಂಕಟಗಿರಿಯಪ್ಪನವರು, ರಾಳ್ಳಪಲ್ಲಿ ಅನಂತಕೃಷ್ಣ ಶರ್ಮಾ, ಟೈಗರ್ ವರದಾಚಾರ್ಯರು, ಗಮಕಿ ರಾಮಕೃಷ್ಣ ಶಾಸ್ತ್ರಿಗಳಂಥ ವಿದ್ವಾಂಸರ ಸಂಪರ್ಕದಿಂದ ಕುದುರಿದ ಶಾಸ್ತ್ರ ಜಿಜ್ಞಾಸೆ. ಆರ್.ಕೆ.ಎಸ್. ಶ್ರೀಕಂಠನಾಗಲು ಇದಕ್ಕಿಂತ ಬೇಕೇನು ?

ಮೈಸೂರು ಸಂಸ್ಥಾನ ರೇಡಿಯೋ ಕೇಂದ್ರದಲ್ಲಿ ಸಂಗೀತ ಮೇಷ್ಟರೆಂದು ಗುರುವಾಗಿಯೇ ಪ್ರವೇಶ. ಬಳಿಕ ಆಕಾಶವಾಣಿಯು ಬೆಂಗಳೂರಿಗೆ ಸ್ಥಳಾಂತರಗೊಂಡು ಶ್ರೀಕಂಠನ್ ೧೯೫೪ರಲ್ಲಿ ಬೆಂಗಳೂರಿಗೆ ಬಂದು ನೆಲೆಸಿದರು. ಅವರ ಜ್ಞಾನವೃದ್ಧಿಗೆ, ಯಶಸ್ಸಿಗೆ, ಅನುಭವಕ್ಕೆ ಆಕಾಶವಾಣಿ ಬಹುಮಟ್ಟಿಗೆ ಕಾರಣ.

ಬಾನುಲಿಯಲ್ಲಿ ಆಗ ಪ್ರಸಾರಗೊಂಡ – ಅವರು ಹಾಡಿದ, ನಿರ್ದೇಶಿಸಿದ, ನಿರ್ಮಿಸಿದ – ಕಾರ್ಯಕ್ರಮಗಳು ಅಗಣಿತ. ಅನೇಕ ಪರಿಚಿತ - ಅಪರಿಚಿತ ಕೃತಿ, ಅನೇಕ ಸ್ತೋತ್ರಗಳು, ರಾಗ, ತಾಳಗಳನ್ನು ಕುರಿತು ರೂಪಕಗಳಷ್ಟೇ ಅಲ್ಲದೆ ಸ್ವತಃ ರಾಗ ಸಂಯೋಜನೆ ಮಾಡಿದ ಹಾಡುಗಳೆಷ್ಟೋ !

ನಮ್ಮ ರಾಜ್ಯದ ಹಿರಿಯ ಸಂಗೀತ ವಿದ್ವಾಂಸರಾದ ಶ್ರೀ ಆರ್. ಕೆ. ಶ್ರೀಕಂಠನ್ ಅವರನ್ನು ಸಂದರ್ಶಿಸಲು 'ಹೊಸತು'ಗೆ ಹೆಮ್ಮೆ ಎನಿಸುತ್ತದೆ. ಅದಕ್ಕೆ ಅವಕಾಶ ಕಲ್ಪಿಸಿಕೊಟ್ಟ ಶ್ರೀಯುತರಿಗೆ ನಾವು ಗೌರವದಿಂದ ತಲೆಬಾಗಿಸುತ್ತೇವೆ. ಸಂದರ್ಶನಕ್ಕೆ ಶ್ರೀ ಆರ್.ಕೆ.ಎಸ್. ಅವರ ಶಿಷ್ಯೆ ಡಾ|| ಟಿ. ಎಸ್. ಸತ್ಯವತಿಯವರು ಅನೇಕ ವಿಧಗಳಲ್ಲಿ ಸಹಾಯ ಮಾಡಿದ್ದಾರೆ. ಅವರ ಮನೆಯಲ್ಲೇ ಸಂದರ್ಶನವನ್ನು ಏರ್ಪಡಿಸಿ, 'ಹೊಸತು' ಬಳಗಕ್ಕೆಲ್ಲಾ ಆತಿಥ್ಯ ನೀಡಿ, ಸಂದರ್ಶನದಲ್ಲಿ ಪ್ರಮುಖವಾಗಿ ಭಾಗವಹಿಸಿ 'ಹೊಸತು' ಓದುಗರಿಗೆ ತಮ್ಮ ಗುರುಗಳ ಪರಿಚಯವನ್ನು ಮಾಡಿಸಿಕೊಟ್ಟಿದ್ದಾರೆ. ಅವರಿಗೆ 'ಹೊಸತು' ಋಣಿಯಾಗಿದೆ. ಸ್ವತಃ ಖ್ಯಾತ ಗಾಯಕರಾದ ಡಾ|| ಟಿ. ಎಸ್. ಸತ್ಯವತಿಯವರು ಸಂಸ್ಕೃತ ಪ್ರಾಧ್ಯಾಪಕರಾಗಿ ವಿದ್ಯಾವರ್ಧಕ ಪ್ರಥಮ ದರ್ಜೆ ಮಹಿಳಾ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದಾರೆ. ಅಪಾರ ಪಾಂಡಿತ್ಯಕ್ಕೆ ಹೆಸರಾದ ಇವರು ಸುಶ್ರಾವ್ಯವಾಗಿ, ಶಾಸ್ತ್ರೀಯವಾಗಿ, ಶುದ್ಧವಾಗಿ, ಹಾಡುವುದಲ್ಲದೆ ಅತ್ಯುತ್ತಮ ಉಪನ್ಯಾಸಕರು ಹಾಗೂ ಬೋಧಕರೂ ಆಗಿದ್ದಾರೆ. ಅವರೊಡನೆ 'ಹೊಸತು' ಪರವಾಗಿ ಡಾ|| ವಿಜಯಾ, ಡಾ|| ಜಿ. ರಾಮಕೃಷ್ಣ, ಪ್ರೊ|| ಎಂ. ಎಚ್. ಕೃಷ್ಣಯ್ಯ ಮತ್ತು ಶ್ರೀ ಕೆ. ಪಿ. ಸ್ವಾಮಿ ಭಾಗವಹಿಸಿದ್ದರು. ಸಂದರ್ಶನ ಲೇಖನವನ್ನು ಸಿದ್ಧಪಡಿಸಿ ಸಹಕರಿಸಿರುವವರು ಡಾ|| ವಿಜಯಾ. ಛಾಯಾಚಿತ್ರಗಳು : ಕೆ. ಪಿ. ಸ್ವಾಮಿ

ಶಿವಶರಣರ ವಚನಗಳಿಗೂ ಹರಿದಾಸರ ಪದಗಳಿಗೂ ನಾರಾಯಣತೀರ್ಥರ 'ಕೃಷ್ಣ ಲೀಲಾ ತರಂಗಿಣಿ'ಯ ರುಕ್ಮಿಣೀ ಕಲ್ಯಾಣಕ್ಕೆ ಸಂಬಂಧಿಸಿದ ತರಂಗಗಳಿಗೂ ಮಾತ್ರವಲ್ಲದೆ ಕುವೆಂಪು, ಬೇಂದ್ರೆ, ಡಿ. ವಿ. ಗುಂಡಪ್ಪ, ಮಾಸ್ತಿ, ಪು.ತಿ.ನ., ಎಸ್. ವಿ. ಪರಮೇಶ್ವರ ಭಟ್ಟರಂತಹ ಸಮಕಾಲೀನ ಕವಿದಿಗ್ಗಜಗಳ ಕವಿತೆಗಳಿಗೂ ಶ್ರೀಕಂಠನ್ ರಾಗ ತಾಳಗಳ ಜರತಾರಿ ಶಾಲು ಹೊದಿಸಿ ಮೆರೆಸಿದ್ದಾರೆ. ಅವರ ಜ್ಞಾನದಾಹವನ್ನು ತಣಿಸುವ, ಸಾಮರ್ಥ್ಯಕ್ಕೆ ಸವಾಲೆನಿಸುವ ಇಂತಹ ಸಂದರ್ಭಗಳಿಂದ ವಿಸ್ತೃತಗೊಂಡ ಅಧ್ಯಯನ ಶೀಲತೆ ಹಾಗೂ ಅನುಭವದ ಫಲವೆಂಬಂತೆ ಅವರ ಉಪನ್ಯಾಸಗಳೂ ಪ್ರಾತ್ಯಕ್ಷಿಕೆಗಳೂ ಶಿಕ್ಷಣ ಶಿಬಿರಗಳೂ ಎಂದೂ ಯಾರನ್ನೂ ನಿರಾಸೆಗೊಳಿಸಿಲ್ಲ. ಜೊತೆಗೆ, ಆ ಕಾಲದ ಪದವೀಧರರಾದ್ದರಿಂದ ಅವರದು ನಿರ್ದುಷ್ಟ ಕನ್ನಡ ಹಾಗೂ ಇಂಗ್ಲಿಷ್. ಭಾರತೀಯ ಸಂಗೀತ, ಕಲೆ, ಸಂಸ್ಕೃತಿಯ ಎಲ್ಲ ಆಯಾಮಗಳೂ ಅವರಿಗೆ ಆಡುಂಬೊಲ. ಅಸ್ಖಲಿತವಾಗಿ, ಅಧಿಕಾರಯುತವಾಗಿ ನುಡಿಯಬಲ್ಲ ವಾಗ್ಮಿತೆ ಒಂದು ವಿಶೇಷ ಶಕ್ತಿ.

ಕೆಲವರು ಉತ್ಕೃಷ್ಟವಾದ ಕಲಾರೂಪವನ್ನು ಪ್ರದರ್ಶಿಸಬಲ್ಲರು ಮಾತ್ರ. ಮತ್ತೆ ಕೆಲವರು ಇತರರಿಗೆ ಹೇಳಿಕೊಡಲು ಮಾತ್ರ ಸಮರ್ಥರು. ಯಾರಲ್ಲಿ ಈ ಎರಡು ಗುಣಗಳೂ ಸಂಗಮಿಸಿವೆಯೋ ಅವರೇ ಶಿಕ್ಷಕರ ಮುಂಚೂಣಿಯಲ್ಲಿರತಕ್ಕವರು. ''ತಿಳಿದು ಪೇಳಲಿ ಬೇಕು'' ಎಂಬ ಮಾತು ಆರ್. ಕೆ. ಎಸ್. ಅಂಥವರಿಂದಲೇ ಹುಟ್ಟಿರಬೇಕು.

ಶಿಕ್ಷಕರಾಗಿ ಅವರ ಶಿಸ್ತು, ಸಮಯಪಾಲನೆ ಸ್ಥಾಣುವಿನಂತೆ ಅಚಲ. ಶಿಷ್ಯಪ್ರೇಮ ಅನ್ಯಾದೃಶ. ಎಲ್ಲದರಲ್ಲೂ ಅತಿರೇಕವೆನಿಸದ ಅಂಶಗಳನ್ನು ಹದಪ್ರಮಾಣದಲ್ಲಿ ಹೊಸೆಯಬಲ್ಲ ಸಮನ್ವಯಾಚಾರ್ಯ.

ಹಿಂದೆ ರೇಡಿಯೋದಲ್ಲಿ ಸುದೀರ್ಘ ಕಾಲದವರೆಗೂ ಪ್ರಸಾರವಾಗುತ್ತಿದ್ದ ಅವರ 'ಗಾನ ವಿಹಾರ' ಸಂಗೀತ ಪಾಠ ಕಾರ್ಯಕ್ರಮ ಎಷ್ಟು ಜನಪ್ರಿಯವಾಯಿತೆಂದರೆ ನಾಡಿನ ಎಲ್ಲ ಸಂಗೀತ ವಿದ್ಯಾರ್ಥಿಗಳೂ ಅವರ ಶಿಷ್ಯರೆ. ಆದರೆ ಅವರ ಅಪರೋಕ್ಷ ಶಿಷ್ಯರಾಗುವ ಭಾಗ್ಯ ಗಳಿಸಿದವರಲ್ಲಿ ಅನೇಕರು ಇಂದಿನ ಪ್ರಸಿದ್ಧ ವಿದ್ವಾಂಸ ವಿದುಷಿಯರಾಗಿದ್ದಾರೆ. ಶ್ರೀ/ಶ್ರೀಮತಿ ಆರ್. ಎಸ್. ರಮಾಕಾಂತ್ (ಪುತ್ರ), ರತ್ನಮಾಲಾ ಪ್ರಕಾಶ್ (ಪುತ್ರಿ, ಖ್ಯಾತ ಸುಗಮ ಸಂಗೀತ ಗಾಯಕಿ), ಎಂ. ಎಸ್. ಶೀಲಾ, ಶಾಂತಾ ನರಸಿಂಹನ್, ರಾಜಮ್ಮ ಕೇಶವಮೂರ್ತಿ, ಡಾ|| ಟಿ. ಎಸ್. ಸತ್ಯವತಿ, ವಿದ್ಯಾಭೂಷಣ, ಸುಮಾ ಸುಧೀಂದ್ರ, ಎಸ್. ಕೆ. ವಸುಮತಿ, ಎಚ್. ಕೆ. ನಾರಾಯಣ, ಡಾ|| ಸರ್ವಮಂಗಳಾ ಶಂಕರ್, ನಳಿನಾ ಮೋಹನ್, ಯಶ್ವ... ಅಮಿತ್ ಮುಂತಾದವರು ಅವರಲ್ಲಿ ಕೆಲವರು.

ವಿದ್ವಾನ್ ಶ್ರೀಕಂಠನ್ ಅವರಿಗೆ ಲಭಿಸಿರುವ ಪ್ರಶಸ್ತಿಗಳು ಅಸಂಖ್ಯ. ೧೯೪೭ರಲ್ಲಿ 'ಗಾನ ಭಾಸ್ಕರ'ದಿಂದ ಆರಂಭವಾದದ್ದು 'ನಾದನಿಧಿ'ಯವರೆಗೆ ಹರಿದುಬಂದಿದೆ. ಅವುಗಳಲ್ಲಿ ಕೆಲವು ಇವು :

ಶ್ರೀ ಪಾರ್ಥಸಾರಥಿ ಸಭಾ ಹಾಗೂ ಸರಸ್ವತಿ ಗಾನ ಸಭಾದಿಂದ ಕರ್ನಾಟಕ ಸಂಗೀತ ರತ್ನ, ೧೯೮೧: ಬೆಂಗಳೂರು ಗಾಯನ ಸಮಾಜದ ೧೩ನೇ ಸಂಗೀತ ಸಮ್ಮೇಳನದಲ್ಲಿ ಅಧ್ಯಕ್ಷತೆ, ಸಂಗೀತ ಕಲಾರತ್ನ ಪ್ರಶಸ್ತಿ, ೧೯೮೩: ತಿರುವನಂತಪುರದ ತುಳಸೀವನ ಸಂಗೀತ ಪರಿಷತ್ ವತಿಯಿಂದ ಗಾಯಕ ಚೂಡಾಮಣಿ ಹಾಗೂ ಟಿ.ಟಿ.ಕೆ. ಸ್ಮಾರಕ ಪ್ರಶಸ್ತಿ, ೧೯೮೫: ಮೈಸೂರಿನಲ್ಲಿ ಶ್ರೀ ಜಯಚಾಮರಾಜ ಒಡೆಯರ್ ಸ್ಮಾರಕ ಪ್ರಶಸ್ತಿ, ೧೯೯೨ : ಬೆಂಗಳೂರು ತಾಳವಾದ್ಯ ಕಲಾಕೇಂದ್ರ ದಿಂದ ಪಳನಿ ಸುಬ್ರಹ್ಮಣ್ಯ ಪಿಳ್ಳೈ ಪ್ರಶಸ್ತಿ ಹಾಗೂ ಲಯ ಕಲಾ ನಿಪುಣ ಬಿರುದು, ೧೯೯೪ : ಅಕಾಡೆಮಿ ಆಫ್ ಮ್ಯೂಸಿಕ್, ಬೆಂಗಳೂರು, ಇವರಿಂದ ಚೌಡಯ್ಯ ಸ್ಮಾರಕ ರಾಷ್ಟ್ರ ಮಟ್ಟದ ಪ್ರಶಸ್ತಿ ಹಾಗೂ ಕರ್ನಾಟಕ ಸರಕಾರದಿಂದ ರಾಜ್ಯ ಸಂಗೀತ ವಿದ್ವಾನ್ ಪ್ರಶಸ್ತಿ, ೧೯೯೬ : ಮದ್ರಾಸ್ ಮ್ಯೂಸಿಕ್ ಅಕಾಡೆಮಿಯಿಂದ ಪ್ರತಿಷ್ಠಿತ ಸಂಗೀತ ಕಲಾನಿಧಿ ಪ್ರಶಸ್ತಿ, ೧೯೯೭ : ರಾಜ್ಯ ಸರಕಾರದ ಪ್ರತಿಷ್ಠಿತ ರಾಜ್ಯೋತ್ಸವ ಪ್ರಶಸ್ತಿ ಹಾಗೂ ಅತ್ಯುನ್ನತ ಪ್ರಶಸ್ತಿಯಾದ ಕನಕ ಪುರಂದರ ಪ್ರಶಸ್ತಿ, ೧೯೯೯ ಗಣಪತಿ ಸಚ್ಚಿದಾನಂದ ಸ್ವಾಮಿಗಳಿಂದ ನಾದನಿಧಿ ಬಿರುದು ಗೌರವ.

ಇವರ ಎಪ್ಪತ್ತೈದನೇ ಹುಟ್ಟುಹಬ್ಬದ ಅಂಗವಾಗಿ ಬೆಂಗಳೂರಿನ ಕಲಾರಸಿಕರು, ಶಿಷ್ಯವೃಂದ ಹಾಗೂ ಅಭಿಮಾನಿಗಳಿಂದ ಅದ್ದೂರಿ ಸನ್ಮಾನ ಹಾಗೂ ಒಂದು ಲಕ್ಷ ರೂ.ಗಳ ಹಮ್ಮಿಣಿ ಸಮರ್ಪಣೆ, ಪದ್ಮಭೂಷಣ ಡಾ|| ಶೆಮ್ಮಂಗುಡಿ ಶ್ರೀನಿವಾಸ ಅಯ್ಯರ್ ಅವರ ಘನ ಅಧ್ಯಕ್ಷತೆಯಲ್ಲಿ, ಜೊತೆಗೆ 'ಸಿರಿಕಂಠ'ವೆಂಬ ಅಭಿನಂದನಾ ಗ್ರಂಥದ ಬಿಡುಗಡೆ.

ಜನವರಿ ಹದಿನಾಲ್ಕಕ್ಕೆ ಎಂಬತ್ತೈದು ವಸಂತಗಳನ್ನು ದಾಟಿ ಎಂಬತ್ತಾರಕ್ಕೆ ಪದಾರ್ಪಣೆ ಮಾಡಿರುವ ಈ ಮಹಾನ್ ಕಲಾತಪಸ್ವಿಯ ಇಂಥ ಅಪರಿಮಿತ ಸಾಧನೆಯನ್ನೂ ಅವಗಣಿಸಿರುವ ಕೇಂದ್ರ ಸರ್ಕಾರವು (ಪದ್ಮ ಪ್ರಶಸ್ತಿಗಳಲ್ಲೇ ಅತ್ಯುನ್ನತ ಪ್ರಶಸ್ತಿಗೆ ಅರ್ಹವಾಗಿದ್ದರೂ ನೀಡಿಲ್ಲದಿರುವುದನ್ನು ಸ್ಮರಿಸಬೇಕು) ಕಣ್ತೆರೆಯುವ ಕಾಲವೆಂದೋ ?

**ಟಿ. ಎಸ್. ಸತ್ಯವತಿ**

''**ಶಾ**ಸ್ತ್ರಿಗಳೇ, ಈ ಹುಡುಗ ನಿಮ್ಮ ಮಗನೇನು ?''

''ಹೌದು, ನನ್ನ ಕೊನೆಯ ಮಗ ಇವನು.''

''ಸಂಗೀತದಲ್ಲಿ ತುಂಬ ಆಸಕ್ತಿ ಅನ್ನಿಸುತ್ತೆ. ಇಂಥ ವರಿಗೇ ನೋಡಿ ಸಂಗೀತ ಸಿದ್ಧಿಸೋದು. ಮೊದಲು ಆಸಕ್ತಿ, ಅನಂತರ ಅನುಭವಿಸುವ ರಸಿಕತೆ, ಆಮೇಲೆ ತಾನೇ ಕಲಿಕೆ. ಬಹಳ ಮುಂದಕ್ಕೆ ಬರ್ತಾನೆ ಇವನು.''

ಬಿಡಾರಂ ಕೃಷ್ಣಪ್ಪನವರಿಗೂ ಆರ್. ಕೆ. ಶ್ರೀಕಂಠನ್ ಅವರ ತಂದೆಯವರಿಗೂ ನಡೆದ ಸಂಭಾಷಣೆ ಇದು. ಶ್ರೀಕಂಠನ್ ಅವರ ತಂದೆ ಹರಿಕಥಾ ವಿದ್ವಾಂಸರೂ ಆಗಿದ್ದರು. ಬಿಡಾರಂ ಕೃಷ್ಣಪ್ಪನವರ ರಾಮಮಂದಿರದಲ್ಲಿ ರಾಮೋತ್ಸವ ಸಂದರ್ಭದಲ್ಲಿ ಶ್ರೀಕಂಠನ್ ತಂದೆ ಯವರು ರಾಮಾಯಣ ಪ್ರವಚನ ಮಾಡಿದ ಸಂದರ್ಭ. ಪ್ರತಿದಿನ ರಾಮೋತ್ಸವದ ಸಂಗೀತ ಕಛೇರಿಗಳಿಗೆ ತನ್ನ ಅಣ್ಣನ ಕೈಹಿಡಿದುಕೊಂಡು ಬರುತ್ತಿದ್ದ ೬-೭ ವರ್ಷದ ಬಾಲಕ ಶ್ರೀಕಂಠನ್ ಮುಂದಿನ ಸಾಲಿನಲ್ಲಿ ಕೂತು ತದೇಕಚಿತ್ತದಿಂದ ಆಲಿಸುತ್ತಿದ್ದುದನ್ನು ಬಿಡಾರಂ ಅವರು ಗಮನಿಸಿದ್ದರು. ತಂಟೆ - ಚೇಷ್ಟೆ ಮಾಡುವ ವಯಸ್ಸಿನಲ್ಲಿ ಈ ಏಕಾಗ್ರತೆ- ಆಸಕ್ತಿ ಕಂಡು ಬೆರಗಾಗಿ ವಿಚಾರಿಸಿದ್ದರು.

''ಅಂಥ ಹಿರಿಯರ ಆಶೀರ್ವಾದವೇ ಇವತ್ತೂ ನನ್ನನ್ನು ಈ ಮಟ್ಟಕ್ಕೆ ಬೆಳೆಸಿದೆ'' ಎಂಬ ವಿನೀತ ಭಾವ ಶ್ರೀಕಂಠನ್ ಅವರದ್ದು.

ಶ್ರೀಕಂಠನ್ ಅವರಿಗೆ ಚಿಕ್ಕ ವಯಸ್ಸಿನಿಂದಲೇ ಸಂಗೀತ ಪಾಠ ಪ್ರಾರಂಭವಾಯಿತು. ಅಣ್ಣ ವೆಂಕಟರಾಮಾಶಾಸ್ತ್ರಿಗಳೇ ಪ್ರಾರಂಭದ ಗುರು. ಬಾಲಕ ಸಂಗೀತವನ್ನು ಕೇಳುತ್ತ, ಅಭ್ಯಾಸ ಮಾಡುತ್ತ ಏಕಲವ್ಯನ ಹಾಗೆ ಸಂಗೀತವನ್ನು ಅರಗಿಸಿಕೊಳ್ಳತೊಡಗಿದ. ರೇಡಿಯೋ ಆಡಿಶನ್‌ಗೆಂದು ಬರುತ್ತಿದ್ದ ಸಂಗೀತ ವಿದ್ವಾಂಸರು, ರಾಮೋತ್ಸವದ ಕಛೇರಿಗೆ ಬಂದವರು ಇವರ ಮನೆಯಲ್ಲೇ ಉಳಿದುಕೊಳ್ಳುತ್ತಿದ್ದರು. ಅವರೆಲ್ಲರ ಬಹುತೇಕ ಒಂದು ವಾರದ ವಾಸ್ತವ್ಯದಲ್ಲಿ ಈ ಬಾಲಕ ಅವರ ಸಂಗೀತ ಕೇಳುತ್ತ, ಈ ಕೀರ್ತನೆ ಹೇಳಿಕೊಡಿ ಎಂದು ದುಂಬಾಲು ಬಿದ್ದು, ಅವರು ಹೇಳಿದ್ದನ್ನು ಬರೆದುಕೊಂಡು ಅಭ್ಯಾಸ ಮಾಡುತ್ತಿದ್ದ. ತಪ್ಪಿದರೆ ಹಾಗಲ್ಲ ಹೀಗೆ ಎಂದು ಅವರೇ ತಿದ್ದಿ ಹೇಳಿ ಕೊಡುತ್ತಿದ್ದರು. ಹೀಗೆ ಶ್ರೀಕಂಠನ್ ಅವರು ಸ್ವಂತ ಪರಿಶ್ರಮದಿಂದಲೇ ತಮ್ಮದೇ ಆದ ಶೈಲಿ (ಬಾನಿ) ಯನ್ನು ರೂಪಿಸಿಕೊಂಡರು.

''ವಿದ್ವಾಂಸರ ಸಂಪರ್ಕ, ನನ್ನ ತಿಳಿವಳಿಕೆ, ವಿಮರ್ಶಾತ್ಮಕ ಗುಣ, ಕೃತಿಗಳ ಸಂಗ್ರಹ ಮಾಡುತ್ತ ನನ್ನದೇ ಆದ ಶೈಲಿ ರೂಢಿಸಿಕೊಳ್ಳುವ ಪ್ರಯತ್ನ ಮಾಡಿದೆ. ಆ ಮಟ್ಟಿಗೆ ಯಶಸ್ವಿಯೂ ಆಗಿದ್ದೇನೆ.''

ಪ್ರ : ತಾವು ಸಂಗೀತ ಕಛೇರಿ ಮಾಡಿದ್ದು ಯಾವ ಪ್ರಾಯದಲ್ಲಿ? ಅದರ ಹಿಂದೆ ಇದ್ದ ಅಡೆತಡೆಗಳೆಂಥವು ?

ಉ : ನಾನು ಅಂಥ ಶ್ರಮ ಪಡಲಿಲ್ಲ. ಮನೇಲಿ ಮೂರು ಹೊತ್ತೂ ಸಂಗೀತ ಇತ್ತು. ಗೋಡೆಗಳೂ ಹಾಡ್ತಿದ್ದವು. ಕೇಳ್ತಾ ಕೇಳ್ತಾನೆ ಬಹಳಷ್ಟು ಕಲಿತುಬಿಟ್ಟೆವು. ನನ್ನ ಹದಿಮೂರನೇ ವಯಸ್ಸಿಗೆ ಪುಟ್ಟದಾಗಿ ಕಛೇರಿ ಮಾಡುತ್ತಿದ್ದೆ. ಆದರೆ ದೊಡ್ಡವರ ಕಛೇರಿ ಕೇಳಿ ಇನ್ನೂ ಇನ್ನೂ ಸಾಧನೆ ಮಾಡಬೇಕು, ಅದು ತಪಸ್ಸು ಅಂತ ತಿಳಿದಿದ್ದೆ. ಪ್ರಯತ್ನದಲ್ಲೇ ಪ್ರತಿಕ್ಷಣವೂ ಸರಿದು ಹೋಗುತ್ತಿತ್ತು. ಅದೊಂದು ಋಷಿಸದೃಶ ಜಗತ್ತು, ಗುರಿ ಮುಟ್ಟುವ ಹಂಬಲದ್ದು.

ಪ್ರ : ಸಾಮಾನ್ಯವಾಗಿ ಒಂದು ರಾಗದ ಸಿದ್ಧಿಗಾಗಿ ನಿರಂತರ ಪ್ರಯತ್ನ ಮಾಡುತ್ತಾರೆಂದು ಕೇಳಿದ್ದೇವೆ. ತಮ್ಮ ಪ್ರೀತಿಯ ಸಿದ್ಧಿಯ ರಾಗ ಯಾವುದು ?

ಉ : ನನ್ನ ಮಟ್ಟಿಗೆ ಹಾಗೆ ಒಂದು ಗೊತ್ತಾದ ರಾಗ



ಂತ ಇಲ್ಲ. ಎಲ್ಲ ರಾಗಗಳೂ ಪ್ರಿಯವೇ. ಹಾಡುವಾಗ ಆ ಕ್ಷಣದ ಮನೋಧರ್ಮಕ್ಕೆ ಂದೊಂದು ರಾಗ ಸಿದ್ಧಿಸಿದ ಹಾಗೆ ಸೊಗಸಾಗಿ ಮೂಡಿಬಿಡುತ್ತೆ. ನನ್ನದೂ ಅಂತ ಂದು ಮಾಸ್ಟರ್ ರಾಗ ಇಲ್ಲ. ನಾನೂ ಕೇಳಿದೇನೆ ತೋಡಿ ಸೀತಾರಾಮಯ್ಯ , ಭೈರವಿ ಂಕಟಸುಬ್ಬಯ್ಯ ಹೀಗೆಲ್ಲ. ನನಗೆ ಅದರ ಅನುಭವ ಆಗಿಲ್ಲ.

ಪ್ರ : ನೀವು ನಿಮ್ಮ ಅಭ್ಯಾಸದ ಬಗ್ಗೆ ಮಾತಾಡುತ್ತಾ ಎದುರುಬದುರು ರೂಮು ಳಲ್ಲಿ ಮೂರು ಜನ ಅಭ್ಯಾಸ ಮಾಡ್ತಿದ್ದುದನ್ನು ಹೇಳಿದಿರಿ. ನೀವು ಮೂವರಲ್ಲಿ ್ವಂದ್ವಗಾನದ ಸಂದರ್ಭಗಳು ಬಂದಿಲ್ಲವೆ ?

ಉ : ಅಣ್ಣಂದಿರಿಬ್ಬರು ರಾಮನಾಥನ್ - ನಾರಾಯಣಸ್ವಾಮಿ ಹಾಡ್ತಿದ್ದರು. ನಂತರ ನಾನು-ರಾಮನಾಥನ್ ದ್ವಂದ್ವಗಾಯನ ಮಾಡಿದ್ದುಂಟು. ರಾಮಸೇವಾ ಂಡಳಿಯಲ್ಲಿಕೂಡಾ ಹಾಡಿದ್ದೆವು.

ಪ್ರ : ಹೊಸ ಪ್ರಯೋಗಗಳು ಈಗ ಹೆಚ್ಚಾಗ್ತಿವೆ. ರಾಗದಲ್ಲೇ ಒಂದು ವಿಶೇಷ ಂಚಾರ ತರುವುದು ಸೃಜನಶೀಲ ಕಲಾವಿದನ ಮುಖ್ಯ ಲಕ್ಷಣ ಅಂತಾರೆ. ಇದರಿಂದ ಂಗೀತಕ್ಕೆ ಎಷ್ಟುಪ್ರಯೋಜನವಾಗುತ್ತೆ ?

ಉ : ಸೃಜನಶೀಲತೆ ಔಚಿತ್ಯಪೂರ್ಣವಾಗಿದ್ದಾಗ ಮಾತ್ರ ಪ್ರಯೋಜನಕಾರಿ. ಅದು ಪರೀತವಾದರೆ ಹುಚ್ಚಾಟವಾಗುತ್ತೆ.

ಪ್ರ : ಸಾಮಾನ್ಯ ಜನರಿಗೆ ಅದು ರಂಜಕವಾಗಿದೆಯಲ್ಲ...

ಉ : ತಿಳಿವಳಿಕೆ ಇಲ್ಲದವರಿಗೆ ದೊಂಬರಾಟವೇ ಒಳ್ಳೇ ನಾಟ್ಯ ಅನ್ನಿಸಬಹುದು. ಾಸ್ತ್ರಮರ್ಯಾದೆ ಮೀರಿದ ಯಾವ ಸಂಗೀತವೂ ಔಚಿತ್ಯವಲ್ಲ.

ಪ್ರ : ಶಾಸ್ತ್ರಮರ್ಯಾದೆ ಅನ್ನೋದನ್ನು ಪ್ರಿಸ್ಕ್ರೈಬ್ ಮಾಡೋದು ಟೆಕ್ಸ್ಟೊ? ರಂಪರೇನೊ ?

ಉ : ಪರಂಪರೆ ಮತ್ತು ಲಕ್ಷಣ ಗ್ರಂಥಗಳು. ಶಾಸ್ತ್ರ ಮರ್ಯಾದೆ ಅಂದರೆ ರಾಗ ಕ್ಷಣ. ಆ ರಾಗದ ಇತಿ-ಮಿತಿ, ಸಾಧ್ಯತೆ ಕೂಡಾ. ಆ ಸಾಧ್ಯತೆಯ ವ್ಯಾಪ್ತಿಯೊಳಗೇ ಲ್ಪನೆ, ಸೃಜನಶೀಲತೆ ಬಳಸಿ ವಿಸ್ತಾರ ಮಾಡಬಹುದು. ಬೌಂಡರಿ ಬಿಟ್ಟು ೋಗಬಾರದು. ನಿನಗೆ ಬುದ್ಧಿ ಓಡಿದರೆ ಆ ಸಾಧ್ಯತೆ ಬಳಸಿಕೊಳ್ಳುತ್ತೀ. ತ್ಯಾಗರಾಜರು ೋಡಿರಾಗದಲ್ಲಿ ಮೂವತ್ತೆರಡು ಕೃತಿಗಳನ್ನು ಮಾಡಿದ್ದಾರೆ. ಅದು ದೊಡ್ಡ ಕಲ್ಪನೆ ಲ್ಲವೆ ? ಅಲ್ಲೆ ಎಷ್ಟು ಮುಖಗಳಿವೆ ನೋಡಿ. ಶಂಕರಾಭರಣದಲ್ಲೂ ಹೀಗೇ ಇದೆ. ಟ್ಟುಕಟ್ಟಿನೊಳಗೆ ಕಲ್ಪನೆ ಬರೋದಾದರೆ ಮಾಡಲಿ. ಯಾವ್ಯಾವುದೋ ಛಾಯೆ ಸೇರಿಸಿ ನು ಸೃಜನಶೀಲನಾಗಿ ಹಾಡಿದೇನೆ ಅಂದರೆ ತಪ್ಪಾಗುತ್ತೆ. ಹಾಗೆ ಮಾಡಿದರೆ ಆ ಾಗದ ಸ್ವರೂಪವೇ ಕೆಟ್ಟುಹೋಗುತ್ತದೆ.

ಪ್ರ : ಶಾಸ್ತ್ರೀಯ ಸಂಗೀತವನ್ನು ಜನಪ್ರಿಯಗೊಳಿಸಲು ಇಂಥ ಮಾರ್ಗ ನುಸರಿಸೋದುಂಟು. ಇದು ಬಿಟ್ಟು ಬೇರೆ ಯಾವ ಮಾರ್ಗ ಇದೆ? ನಾಭಿಮುಖವಾಗಿ ಸಂಗೀತವನ್ನು ಒಯ್ಯಬೇಕೆಂದರೆ ಏನು ಮಾಡಬೇಕು ?

ಉ : ಶಾಸ್ತ್ರೀಯತೆಯನ್ನು ಜನಪ್ರಿಯಗೊಳಿಸೋದು ಕಷ್ಟಸಾಧ್ಯ. ಶಾಸ್ತ್ರದ ಗಂಧವೇ ಲ್ಲದವರಿಗೆ ಶಾಸ್ತ್ರದ ಮಹತ್ವವನ್ನು ಮನವರಿಕೆ ಮಾಡೋಕಾಗೋಲ್ಲ. 'ಇದು ಾಸ್ತ್ರೀಯತೆ' ಅಂದರೆ ಅದು ರುಚಿಸದವನಿಗೆ ತಿಳಿಸಿ ಹೇಳೋದು ಕಷ್ಟ. ಯಾವುದು ೇಗಿರಬೇಕು, ಅದು ಬಿಟ್ಟು ಬೇರೆ ಆದಾಗ ಅಶಾಸ್ತ್ರೀಯ ಆಗುತ್ತೆ ಅನ್ನೋದನ್ನು ರಸ ಹಣ ಶಿಬಿರಗಳನ್ನು ಮಾಡಿಯಾದರೂ ತಿಳಿಸಿಕೊಡಬೇಕಾಗುತ್ತೆ. ಶಾಸ್ತ್ರೀಯ ಸಂಗೀತ, ಶಾಸ್ತ್ರೀಯತೆಯಲ್ಲಿ ಆಸಕ್ತಿ ಇದ್ದು, ಕೇಳಬೇಕು ಅನ್ನಿಸಿದವರು ಮೇಲಿಂದ ಮೇಲೆ ಶುದ್ಧ ಸಂಗೀತ ಕೇಳ್ತಾ ಇದ್ದರೆ ಮಾತ್ರ ಯಾವುದು ಅಶಾಸ್ತ್ರೀಯ, ಅದು ಯಾಕೆ ಒಪ್ಪೋಲ್ಲ ಅನ್ನೋ ವಿವೇಚನೆ ಬರುತ್ತೆ. ಹೆಚ್ಚು ಜನರಿಗೆ ಒಪ್ಪಿಗೆಯಾದ್ದೇ ಸರಿದಾರಿ, ಅದೇ ಶಾಸ್ತ್ರೀಯ ಅಂದುಕೊಂಡರೆ ಅದು ಕೇವಲ ಭ್ರಮೆ.

ಪ್ರ : ಮೊದಲಿಗಿಂತ ಈಗ ಹೆಚ್ಚು ಜನ ಕಛೇರಿಗಳಿಗೆ ಬರ್ತಿದಾರೆ, ಅವರಿಗೆ ಅರ್ಥ ಆಗ್ತಿದೆ ಎಂಬುದು ಕಲಾ ವಿಮರ್ಶಕರ ಅಭಿಪ್ರಾಯ. ನಿಮಗೇನನ್ನುತ್ತೆ ?

ಉ : ಕಲೀತಿದಾರೆ; ಆಸಕ್ತಿ ಇದೆ. ಆದರೆ ಅಲ್ಲಿ ಡೆಪ್ತ್ ಇದೆಯಾ ? ಗೌರವ ಇದೆಯಾ ? ಆ ವ್ಯತ್ಯಾಸ ತಿಳಕೋಬೇಕು. ಅಭ್ಯಾಸ ಕ್ರಮ, ವಾಯ್ಸ್ ಕಲ್ಚರ್, ವಾದಕರಿಗೆ ಸೂಕ್ತ ತರಬೇತಿ, ಯಾವ ಪರಂಪರೆ, ಗುರು ಯಾರು, ಇವೆಲ್ಲ ಗಮನಿಸಿದಾಗಲೇ ಆ ಸಂಗೀತದ ಶ್ರೇಷ್ಠತೆ ಗೊತ್ತಾಗೋದು.

ಪ್ರ : ಜನಪ್ರಿಯಗೊಳಿಸೋ ಪ್ರಯತ್ನದಲ್ಲಿ ಸಂಗೀತದಲ್ಲಿ ಎರಡು ವಿಧಾನ ಇವೆ ಅಂತಾರೆ. ಒಂದು ಪ್ರತಿಪಾದನಾತ್ಮಕ (ರೆಪ್ರೆಸೆಂಟೆಟಿವ್), ಸಹಜತೆಗೆ ಹತ್ತಿರವಾದ್ದು. ಇನ್ನೊಂದು ಅಮೂರ್ತವಾದ್ದು, ಸಾಂಕೇತಿಕವಾದ್ದು. ಜನಪ್ರಿಯಗೊಳಿಸೋವಾಗ ಒಂದು ರಾಗದ ಸಂಚಾರದಲ್ಲಿ ಸಾಂಕೇತಿಕವಾದ ಸಂಗೀತವನ್ನೇ ಕೊಂಚ ಪ್ರತಿಪಾದನಾತ್ಮಕವಾಗಿಸೋ ಪ್ರಯತ್ನ ಇರಬಹುದು. ಕೇವಲ ಅನುಕರಣೆಯಲ್ಲದ್ದು...

ಉ : ಇಲ್ಲಿ ಸಹೃದಯ ಮುಖ್ಯ. ಒಂದು ಸರಳವಾದ ರಚನೆಯ ಕಾದಂಬರಿಗೆ ಹೋಲಿಸಿದರೆ ಕಾಳಿದಾಸನ ನಾಟಕ, ಕಾವ್ಯ ಎಷ್ಟು ಜನಪ್ರಿಯವಾಗಿವೆ? ಶೇಕ್ಸ್‌ಪಿಯರ್‌ನನ್ನೋ, ಮತ್ತೊಬ್ಬ ಕವಿಯನ್ನೋ ಅರ್ಥಮಾಡಿಕೊಳ್ಳೋಕೆ ಸಂಸ್ಕಾರ ಬೇಕಲ್ಲವೇ ? ಸಾಮರ್ಥ್ಯ ಬೇಕಲ್ಲವೇ ? ರಸಿಕತೆಯೂ ಬೇಡವೇ ?

ಪ್ರ : ಹಿರಿಯ ಸಾಹಿತಿಯೊಬ್ಬರು ಒಂದು ಸಭೆಯಲ್ಲಿ ಸಣ್ಣಕತೆಯ ರಚನೇಲಿ ಹೊಸತನ್ನ ಆವಿಷ್ಕಾರ ಮಾಡಿದರೆ ಮಾತ್ರ ಜೀವಂತವಾಗಿರುತ್ತೆ, ಇಲ್ಲದಿದ್ದರೆ ಉಪಯೋಗವಿಲ್ಲ ಎನ್ನುತ್ತ ಒಂದು ಉದಾಹರಣೆ ಕೊಟ್ರು : 'ಜಗದೋದ್ಧಾರನ...' ಅಂತ ಕರ್ನಾಟಕ ಸಂಗೀತದಲ್ಲಿ ತೊಡೆ ತಟ್ಟಿಕೊಂಡು ಹಾಡ್ತಾ ಇರ್ತಾರೆ... ಅದನ್ನೇ ಪುನರಾವರ್ತಿಸ್ತಾರೆ. ಇಲ್ಲಿ ಆವಿಷ್ಕಾರ ಏನಿದೆ? ಅದರಿಂದ್ಲೇ ಅದು ಕಲೆ ಅಲ್ಲ, ಅಂದಿದ್ರು. ಇದಕ್ಕೆ ನಿಮ್ಮ ಅಭಿಪ್ರಾಯ ಏನು ? ಸಂಗೀತದಲ್ಲಿ ಹೊಸ ಆವಿಷ್ಕಾರ ಹೇಗೆ ಪ್ರಕಟವಾಗಬೇಕೂಂತೀರಿ ?

ಉ : ಎಲ್ಲ ಸಾಹಿತಿಗಳಿಗೂ ಸಂಗೀತ ಜ್ಞಾನ ಇರಬೇಕೂಂತಿಲ್ಲ. ಸಾಹಿತ್ಯದಲ್ಲಿ ದೊಡ್ಡವರು ಹೇಳಿದರೆಂದರೆ ಎಲ್ಲಕ್ಕೂ ಅನ್ವಯ ಆಗೋಲ್ಲ. ರಸಾಸ್ವಾದನೆ ಗೊತ್ತಿರೋ ರಸಿಕನಿಗೆ ಇದು ಹಳತು - ಇದು ಹೊಸತು ಅನ್ನಿಸೋದಿಲ್ಲ. ಕಾಳಿದಾಸನ ಕಾವ್ಯ ಓದೋವಾಗ ಹೀಗೇ ಹೇಳತೀವೇನು ? ಒಳ್ಳೇ ಸಾಹಿತ್ಯ ಆದಾಗ ಯಾಕೆ ಮತ್ತೆ ಮತ್ತೆ ಓದುತೀವಿ? ಇಲ್ಲಿ ರಸಾಸ್ವಾದನೆ ಮಾಡೋನಿಗೆ ರಸ ಉತ್ಪತ್ತಿಯಾಗುತ್ತಿದೆಯೇ ಅನ್ನೋದು ಮುಖ್ಯ. ಕಾವ್ಯ ಪದೇ ಪದೇ ಓದ್ತೀವಿ, ರಾಮಾಯಣ ನೂರು ಸಲ ಓದ್ತೀವಿ. ಪ್ರತಿಸಲವೂ ರಸೋತ್ಪತ್ತಿ ಆಗ್ತಿರೋಲ್ವೆ ?

ಪ್ರ : ಸಾಹಿತಿಗಳ ಮಾತಿರಲಿ. ಖ್ಯಾತ ಹಿಂದೂಸ್ತಾನಿ ಸಂಗೀತಗಾರ ಭೀಮಸೇನ ಜೋಶಿ ಅವರನ್ನು 'ನೀವು ಕರ್ನಾಟಕ ಸಂಗೀತವನ್ನು ಅಷ್ಟೇ ಇಷ್ಟ ಪಡ್ತೀರಾ ?' ಅಂತ ಸಂದರ್ಶಕರು ಕೇಳಿದ ಪ್ರಶ್ನೆಗೆ ''ತುಂಬಾ. ಆದರೆ ಆ ಪರಂಪರೆಯಲ್ಲಿ ಧ್ವನಿ ಸಂಸ್ಕೃತಿ



ಚಿತ್ರದಲ್ಲಿ ಎಡದಿಂದ ಬಲಕ್ಕೆ : ಪ್ರೊ|| ಎಂ. ಎಚ್. ಕೃಷ್ಣಯ್ಯ, ಡಾ|| ಜಿ. ರಾಮಕೃಷ್ಣ ವಿದ್ವಾನ್ ಆರ್. ಕೆ. ಶ್ರೀಕಂಠನ್, ಡಾ|| ಟಿ. ಎಸ್. ಸತ್ಯವತಿ ಮತ್ತು ಡಾ|| ವಿಜಯಾ

ಬಗ್ಗೆ ಹೆಚ್ಚು ಗಮನ ಕೊಡೋದಿಲ್ಲ. ಆ ಪರಂಪರೇನ ನೋಡೋ ದೃಷ್ಟಿಕೋನವೂ ಸಾಮಾನ್ಯವಾಗಿ ತುಂಬ ಮಡಿವಂತಿಕೆಯದು. ಸಾಂಪ್ರದಾಯಿಕ ಚೌಕಟ್ಟಿನಲ್ಲೇ ಕೈಗೊಂಡರೂ ಯಾವುದೇ ವಿಶ್ವಸನೀಯ ನೂತನ ಪ್ರಯೋಗವೂ ಗಂಭೀರ ವಿರೋಧವನ್ನು ಎದುರಿಸಬೇಕಾಗುತ್ತೆ'' ಅಂತ ಉತ್ತರಿಸಿದ್ದಾರೆ ['ದಿ ಗ್ರೇಟ್ ಮಾಸ್ಟರ್ಸ್', ಲೇಖಕರು : ಪ್ರಸಿದ್ಧ ವಿಮರ್ಶಕ ಮೋಹನ ನಾಡಕರ್ಣಿ. (೧೯೯೯ ಮತ್ತು ಮೂರನೆಯ ಮುದ್ರಣ ೨೦೦೫)]

ಉ : ಅದಕ್ಕೆ ಹೇಳೋದು ಹೊಸತು-ಹಳೇದು ಅಂತಲ್ಲ, ನಾನು ಹಾಡಿದರೂ ಇವತ್ತಿನ ಹಾಗೆ ನಾಳೆಗೆ ಇರೋದಿಲ್ಲ. ಹೊಸತನ ಇದ್ದೇ ಇರುತ್ತೆ. ಹೊಸ ನಿಷ್ಪತ್ತಿ ಅದು.

ಪ್ರ : ಕರ್ನಾಟಕ ಸಂಗೀತದಲ್ಲಿ ವಾಯ್ಸ್ ಕಲ್ಚರ್‌ಗೆ ಒತ್ತು ಕೊಡೋದಿಲ್ಲ ಅಂತಾರಲ್ಲ.

ಉ : ಅದು ಸ್ವಲ್ಪ ನಿಜ. ಆದರೆ ಅದನ್ನು ಸ್ವರಕಲ್ಪನೆಯಲ್ಲಿ ಕಾಂಪನ್ಸೇಟ್ ಮಾಡ್ತೀವಿ. ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಬೇಕಾಗುವ ಕಂಠ ಪರಿಷ್ಕರಣದ ಅಗತ್ಯ ಹಿಂದೂಸ್ತಾನಿ ಸಂಗೀತಕ್ಕಿಂತ ಭಿನ್ನವಾದದ್ದು. ಏಕೆಂದರೆ, ಅಲ್ಲಿಯ ಸ್ವರಗಳಲ್ಲಿ ನಿಲ್ಲುವ ವಿಶ್ರಾಂತಿಯಿಂದ ಕಂಠಕ್ಕೆ ನೆಮ್ಮದಿ ಸಿಗುತ್ತೆ. ತಾರಕಕ್ಕೆ ಹೋದಾಗಲೂ ಶ್ರಮ ವಾಗೋದಿಲ್ಲ. ಏಕೆಂದರೆ, ಅಲ್ಲಿ ದೀರ್ಘ ಸ್ವರಗಳನ್ನೇ ಮಾಡಿಕೊಂಡು ಬರ್ತಾರೆ. ನಮ್ಮಲ್ಲಿ ಗಮಕದ ಪ್ರಕ್ರಿಯೆ ಹೆಚ್ಚು ಮತ್ತು ಸೂಕ್ಷ್ಮ ಸ್ವರಗಳ ಬಳಕೆ ಆಗುತ್ತೆ. ಕಂಠ ಇದನ್ನು ನುಡಿಸಲು ನಾವು ಮಾಡಿಕೊಳ್ಳುವ ತಾಲೀಮೇ ಬೇರೆ ತರಹ. ಇದರ ಅಭ್ಯಾಸ ಕ್ರಮವೇ ಬೇರೆ. ಆದ್ದರಿಂದ ಇವುಗಳನ್ನು ಹೋಲಿಸಲೇಬಾರದು. ಹಿಂದೂಸ್ತಾನೀ ಕ್ರಮದಲ್ಲಿ ನಮ್ಮ ರಾಗಗಳನ್ನು ಹಾಡಿದರೆ ಕೇಳೋಕ್ಕಾಗೋಲ್ಲ. ನಮ್ಮ ಹಾಗೆ ಅವರು ಹೆಚ್ಚು ಗಮಕಗಳನ್ನು ಬಳಸೋದಿಲ್ಲ. ನಮ್ಮದು ಸಾಹಿತ್ಯ ಪ್ರಧಾನ, ಥೀಮ್ಯಾಟಿಕ್ ಸಂಗೀತ; ಅವರದು ದರ್ಬಾರಿ ಸಂಗೀತ...

ಪ್ರ : ಎ. ಎನ್. ಮೂರ್ತಿರಾಯರು ಸಂಗೀತಕ್ಕೆ ಸಾಹಿತ್ಯ ಚಿಮ್ಮೋಹಲಗೆ ಇದ್ದ ಹಾಗೆ, ನೆಪಮಾತ್ರಕ್ಕೆ ; ಇಲ್ಲಿ ಶುದ್ಧ ಸಂಗೀತವೇ ಹೋಗತಕ್ಕದ್ದು ಅಂತಾರೆ. ತಾವು ಸಾಹಿತ್ಯ ವಿಲ್ಲದೆ, ಅಂದರೆ ಕಥೆ ಇಲ್ಲದೆ ಸಂಗೀತವಿಲ್ಲ ಅನ್ನೋ ಅರ್ಥ ಬರೋಹಾಗೆ ಹೇಳ್ತಿದೀರಿ ?

ಉ : ರಾಮಾಯಣ ಕಥಾ ಪ್ರಸಂಗವನ್ನು ತ್ಯಾಗರಾಜರು ಹಾಡಿದಾರೆ. ಅದನ್ನ ಸಾಹಿತ್ಯ ಅಂತೀರೋ ? ಕಥಾ ಓರಿಯೆಂಟೆಡ್ ಅಂತೀರೋ ? ಸಂಗೀತಕ್ಕೆ ಸಾಹಿತ್ಯದ ನೆರವು ಇದ್ದರೆ ರಸನಿಷ್ಪತ್ತಿ ನಿರ್ದಿಷ್ಟವಾಗಿರುತ್ತದೆ.

ಪ್ರ : ತಿಲ್ಲಾನ ಮೊದಲಾದ ಕೆಲವು ಕಡೆ ಸಾಹಿತ್ಯ ಇಲ್ಲ. ಶುದ್ಧ ಭಾವ - ಸಂಚಾರ ಇರುತ್ತೆ.

ಉ : ನೀವು ಹೇಳ್ತಿರೋದು ಜತಿಗಳನ್ನು ಕುರಿತು. ಮೃದಂಗದ ಜತಿಗಳು. ಇಲ್ಲೂ ಒಂದು ರೀತಿಯ ಸಾಹಿತ್ಯದ ಭಾಗ ಇದೆ. ಅದು ನೃತ್ಯಕ್ಕೆ ಉಪಯೋಗವಾಗತಕ್ಕಂಥ ರಚನೆ.

ಪ್ರ : ಸಂಗೀತಕ್ಕೆ ಅದರದೇ ಆದ ಅಸ್ತಿತ್ವ ಇದೆ. ಅದು ನಾದ ಪ್ರಧಾನವಾದ್ದು, ಆಬ್ಸಲ್ಯೂಟ್ ಮ್ಯೂಸಿಕ್. ತಾವು ಹೇಳೋ ರೀತಿ ನೋಡಿದರೆ ಸಂಗೀತ ಡಿಪೆಂಡೆಂಟ್ ಅನ್ನೋ ಭಾವನೆ ಬರುತ್ತಲ್ಲ ?

ಉ : ಬರೀ ಆಬ್ಸಲ್ಯೂಟ್ ಮ್ಯೂಸಿಕ್ ಅಂತ ಇಟ್ಟುಕೊಂಡರೆ ರಸೋತ್ಪತ್ತಿ ಗೌಣ ವಾಗಿರುತ್ತೆ, ಸ್ಫುಟವಾಗಿರೋದಿಲ್ಲ. ಸಾಹಿತ್ಯ ಸೇರಿದರೆ ರಸ ಉತ್ಪತ್ತಿ ಸ್ಪಷ್ಟವಾಗುತ್ತೆ. ಆ ದೃಷ್ಟಿಯಿಂದ ಸಂಗೀತಕ್ಕೆ ಸಹಚಾರಿಯಾಗಿ ಸಾಹಿತ್ಯ ಇರಲೇಬೇಕು. ಬರೀ ರಾಗ ಎಷ್ಟು ಹೊತ್ತು ಕೇಳ್ತೀರಿ ? ಅದಕ್ಕೆ ಸ್ಥಾಯಿತ್ವ ಬೇಡವೇ ? ಸಾಹಿತ್ಯ ಅದಕ್ಕೆ ಸೇರಿದಾಗ ಒಂದು ಸಂಸ್ಕಾರವನ್ನು ಉಂಟುಮಾಡುತ್ತೆ.

ಪ್ರ : ಭಕ್ತಿ ಭಾವ ಬಿಟ್ಟು ಸಂಗೀತ ಸಾಧ್ಯವಾ ?

ಉ : ಭಕ್ತಿ, ಜ್ಞಾನ, ವೈರಾಗ್ಯ ಈ ಮೂರೂ ಇರೋದ್ರಿಂದಲೇ ಕರ್ನಾಟಕ ಸಂಗೀತದ ಮೀಡಿಯ ಬೇರೆ; ಹಿಂದೂಸ್ತಾನೀ ಮೀಡಿಯಾ ಬೇರೆ. ನಮ್ಮ ಸಂಗೀತದಲ್ಲಿ ಭಕ್ತಿಯಲ್ಲದೆ ಪ್ರಾಪಂಚಿಕ ವ್ಯವಹಾರಜ್ಞಾನವೂ ತುಂಬಿದೆ.

ಪ್ರ : ಕರ್ನಾಟಕ ಸಂಗೀತದಲ್ಲಿ ಆಸಕ್ತಿ ಬೆಳೆಸಿಕೊಂಡು, ಅದರ ಜೊತೆಗೆ ಇರೋ ಸಾಹಿತ್ಯ ಪ್ರಚೋದಿಸುವ ಭಕ್ತಿ ಭಾವ ಬಿಟ್ಟರೂ ಸಂತೋಷ ಸಿಗುವುದಿಲ್ಲವೇ ?

ಉ : ಸಂಗೀತದಲ್ಲಿ ಆಸಕ್ತಿ ಬೆಳೆಸಿಕೊಳ್ಳೋದೇ ಭಕ್ತಿ ಅಲ್ಲವೇ ?

ಪ್ರ : ಸಂಗೀತದಲ್ಲಿ ಭಕ್ತಿ ಇರಬಹುದು. ನೀವು ಶಿವ... ಶಿವ ಅಂತ ಹಾಡಿದಾಗ

ನಗೆ ಶಿವ ಬೇಡ, ಅಲ್ಲಿರೋ ಸಂಗೀತ ಬೇಕು ಅನ್ಸುತ್ತೆ.

ಉ : ಹಾಗೆ ಒಳ್ಳೇ ಸಂಗೀತ ಕೇಳ್ತಿದ್ರೆ ಶಿವನಲ್ಲೂ ತಾನಾಗೇ ಭಕ್ತಿ ಬರಬಹುದು. ಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿ ಅಂತ ಒಬ್ಬ ವಿದ್ವಾಂಸರಿದ್ದರು. ಆತ ಸ್ವಲ್ಪ ಈ ರಹಾನೇ ಸಂಗೀತ ಪ್ರಿಯರು, ಆದರೆ ಭಕ್ತಿಯನ್ನು ಅಷ್ಟಾಗಿ ಒಲ್ಲರು. ಅವರು ತುಂಬ ನಾರೋಗ್ಯದಲ್ಲಿದ್ದಾಗೊಮ್ಮೆ ಮುಸುರಿ ಸುಬ್ರಹ್ಮಣ್ಯ ಅಯ್ಯರ್ ಅವರು ಯದುಕುಲ ಂಬೋಧೀಲಿ ಒಂದು ಮುದ್ದಾದ ತ್ಯಾಗರಾಜ ಕೀರ್ತನೆ ಹಾಡಿದ್ದುದನ್ನು ಕೇಳಿದರು. ಸ್ತಿಕನೂ ಭಕ್ತನಾಗಿಬಿಡೋಂಥ ಕೃತಿ ಅದು. ಶಾಸ್ತ್ರಿಗಳು ಮುಂದೆಂದೋ ಮೃತ್ಯು ನ್ನಿಹಿತವಾದಾಗ ಕೂಡಾ ಆ ರೆಕಾರ್ಡ್ ಹಾಕಿ ಕೇಳಿಸಿಬಿಡೀಪ್ಪಾ ಅಂದರಂತೆ. ಹಾಗೆ ವಿ.ಜಿ.ಯವರೂ ಮಾಡಿದಾರೆ.

ಪ್ರ : ಕರ್ನಾಟಕ ಸಂಗೀತಕ್ಕೆ ಭಕ್ತಿ ಬಿಟ್ಟು ಬೇರೆ ಇಲ್ಲ ಅನ್ಸುತ್ತೆ. ಅದು ಸೆಕ್ಯುಲರ್ ಮ್ಯೂಸಿಕ್ ಆಗಿಲ್ಲ ಅನ್ನೋ ಆಕ್ಷೇಪಣೆ ಇದೆ.

ಉ : ಯಾಕೆ ? ನಮ್ಮ ಜಾವಳಿ ಮೊದಲಾದ ಕಡೆ ಶೃಂಗಾರ ಇದೆ. ತ್ಯಾಗರಾಜರ, ರಿದಾಸರ ಸಾಹಿತ್ಯದಲ್ಲಿ ಸಮಾಜ ಸುಧಾರಣೆ, ನೀತಿ, ಉಪದೇಶ, ಒಳ್ಳೆಯದು ಟ್ಟದರ ವಿವೇಚನೆ ಇದೆ, ಎಚ್ಚರಿಕೆ ಇದೆ. ಬರೀ ಭಕ್ತಿ ಒಂದೇ ಅಲ್ಲ ಜ್ಞಾನ, ಸಮಾಜ ೀತಿ ಎಲ್ಲ ಇದೆಯಲ್ಲ. ಶುದ್ಧ ಸಂಗೀತದ ತತ್ವವೇ ಬದುಕನ್ನು ಸಮಚಿತ್ತದಿಂದ ಎದುರಿ ೋದು ಅನ್ಸುತ್ತೆ. ಅದೇ ಸಂಗೀತದ ಮಹತ್ವ, ಗುರಿ. ಭಕ್ತಿ ಅನ್ನೋದು ಏಕಾರ್ಥದ್ದಲ್ಲ. ಕ್ತಿ ಇಲ್ಲದಿದ್ದರೆ ಅಭ್ಯಾಸ ಆಗುತ್ತೆಯೆ ? ಸಂಸ್ಕೃತ ಎಂ.ಎ. ಮಾಡಬೇಕು ಅಂದರೆ ದರಲ್ಲಿ ಭಕ್ತಿ ಇರಬೇಕಲ್ಲವೆ ? ಭಕ್ತಿ ಇಲ್ಲದೆ ಸಾಹಿತ್ಯವೂ ಇಲ್ಲ. ಯಾವುದು ಶ್ರದ್ಧೆಯೋ ದೇ ಭಕ್ತಿ. ಶಬ್ದಗಳನ್ನು ಬಳಸೋದರಲ್ಲಿ, ಗ್ರಹಿಸೋದರಲ್ಲಿ ರ್ಥಾಂತರಗಳಿರುತ್ತವೆ.



ಪ್ರ : ಭೀಮಸೇನ ಜೋಶಿ ಅವರು ಂದು ಕಡೆ 'ಕರ್ನಾಟಕ ಸಂಗೀತವು ಯಕ್ಕೆ ಹೆಚ್ಚು ಪ್ರಾಧಾನ್ಯ ನೀಡಿದ್ದರಿಂದ ತಿಮೆ ಮಟ್ಟದಲ್ಲಿ ಉಳೀತು. ಕೇಳುಗನಿಗೆ ಂಜನೆ ನೀಡೋದು ಕಡಿಮೆ' ಅಂತಾರೆ. ತ್ತೀಚೆಗೆ ಮನೋಹರ ಗ್ರಂಥಮಾಲೆ ಕಟಿಸಿರುವ ಮರಾಠಿ ಅನುವಾದಿತ ಕೃತಿ, ೀಖಕ : ವಸಂತ ಪೋತದಾರ್.)

ಉ : ಲಯಕ್ಕೆ ಒತ್ತು ಕೊಟ್ಟಿರೋದು ಜ. ಆದರೆ ಭಾವ ಏನೂ ಕಡಿಮೆ ಆಗಿಲ್ಲ. ಯವಿನ್ಯಾಸದಲ್ಲೂ ಭಾವ ಇರಬೇಕು, ಲ್ಪನೆ ಇರಬೇಕು. ಆ ಕಲ್ಪನೆಯೇ ಬೇರೆ : ತಿಯನ್ನು ಹಾಡೋವಾಗ, ರಾಗ ಸ್ತರಿಸೋವಾಗ, ಆರಾಧನೆ ಮಾಡುವಾಗಿನ ಭಕ್ತಿಯೇ ಬೇರೆ. ಎರಡೂ ನಮ್ಮಲ್ಲಿವೆ. ಯ ಪ್ರಧಾನ ನಿಜ. ಆದರೆ ಈ ಲಯ ಅವರಿಗೆ ಅರ್ಥ ಆಗೋಲ್ಲ. ಅವರು ಇದರ ತ್ತಿರಕ್ಕೂ ಬರಲಾರರು.

ಪ್ರ : ಈಚೆಗೆ ಆಕಾಶವಾಣಿ ಸಂಗೀತ ಕಛೇರಿಗಳಲ್ಲಿ ಕೂಡ ಕರ್ನಾಟಕ ಶಾಸ್ತ್ರೀಯ ಂಗೀತ ಹಾಡುವ ಮುನ್ನ ಕೃತಿಯ ಅರ್ಥ ವಿವರಣೆ ನೀಡ್ತಾರೆ. ಹಿಂದುಸ್ತಾನೀಲಿ ದೆಲ್ಲ ಇರೋದಿಲ್ಲ. ಈ ಕೀರ್ತನ ಸಾರಾಂಶ ಹೇಳೋ ಪೀಠಿಕೆ ಯಾಕೆ ಬೇಕು ಮಗೆ ?

ಉ : ಇರಲಿ ಬಿಡಿ. ಅರ್ಥ ತಿಳಿದು ಕೇಳಿದಾಗ ಸಂಗೀತ-ಸಾಹಿತ್ಯಗಳ ಸಂಬಂಧವನ್ನು ನ್ನಷ್ಟು ಸುಲಭವಾಗಿ ಗ್ರಹಿಸಬಹುದು. ಜನ ಅದನ್ನು ಅಪೇಕ್ಷಿಸುತ್ತಿದ್ದಾರೆ. ಕೃತಿಯ ಂತರಾರ್ಥ ತಿಳಿದುಕೊಂಡು ರಾಗವನ್ನು ಮತ್ತು ಸ್ವರಸಂಯೋಜನೆಯ ಧಾಟಿಯನ್ನು ನುಭವಿಸೋ ವಿಧಾನ ಅದು.

ಪ್ರ : ವೀಣೆ ಮೊದಲಾದ ವಾದ್ಯಗಳ ಮೂಲಕ ಕೃತಿ ನುಡಿಸೋವಾಗ ಈ ಪೀಠಿಕೆ ಡೋಕಾಗುತ್ತಾ? ಅಲ್ಲಿ ಸ್ವರ ರಾಗ ದೃಷ್ಟಿಯಿಂದಲೇ ವಿವರಣೆ ಇರಬೇಕಾಗುತ್ತಲ್ಲ?

ಉ : ಪರಿಚಿತ ಕೃತಿಗಳನ್ನು ವೀಣೆಯಲ್ಲಿ ನುಡಿಸಿದಾಗ ವಿವರಣೆ ಬೇಕಿಲ್ಲ. ಕೇಳಿ ಕೇಳಿ ಭ್ಯಾಸ ಆಗಿರುತ್ತೆ. ಹೊಸ ಕೃತಿ ಆಗಿದ್ದರೆ ವಿವರಣೆಯಿಂದ ಸಹಾಯವೂ ಆಗಬಹುದು.

ಪ್ರ : ವಾಗ್ಗೇಯಕಾರ ಒಂದು ನಿರ್ದಿಷ್ಟ ವಾಕ್ಯವನ್ನೇ ಗಮನದಲ್ಲಿಟ್ಟುಕೊಂಡು ಕೃತಿ ಚನೆ ಮಾಡಿರೋದುಂಟು... ಗಾಯಕರಿಗೆ ಕೃತಿ ರಚನೆ ಬೇರೆ, ವಾದ್ಯಗಳಿಗೆ...

ಉ : ವಾದ್ಯಗಳಿಗೆ ಬೇರೆ ವಾಗ್ಗೇಯಕಾರರೇ ಬೇಕು ಅಂತಿಲ್ಲ. ಹಾಡಿಕೆ - ವಾದ್ಯ ಎರಡಕ್ಕೂ ಒಬ್ಬರೇ ವಾಗ್ಗೇಯಕಾರರು. ಅವರ ರಚನೆಗಳಲ್ಲಿ ಕೆಲವು ವಾದ್ಯಕ್ಕೆ ಚೆನ್ನಾಗಿ ಒಗ್ಗುತ್ತವೆ, ಉಳಿದವು ಧ್ವನಿಗೆ. ಅಷ್ಟೇ.

ಪ್ರ : ತಾವು ಹಿಂದೆ ಒಂದು ಸಭೆಯಲ್ಲಿ ಸಂಗೀತದ ಬಗ್ಗೆ ಮಾತನಾಡುತ್ತಾ ಸಂಸ್ಕೃತ ಕಾವ್ಯದಲ್ಲಿ ಮಹಾಕಾವ್ಯಗಳಿದ್ದ ಹಾಗೆ ಸಂಗೀತ ಪ್ರಪಂಚದಲ್ಲಿ ಕೆಲವು ಮಹಾಕೃತಿಗಳಿವೆ ಎಂದು 'ಕ್ಷೀರಸಾಗರ ಶಯನ' ಮೊದಲಾದವುಗಳನ್ನು ಉದಹರಿಸಿದಿರಿ. ಸಾಹಿತ್ಯದಲ್ಲಿ ಮಹಾಕಾವ್ಯಗಳನ್ನು ನಿಖರವಾಗಿ ಗುರುತಿಸ್ತೀವಿ. ಇಲ್ಲಿ ಹೇಗೆ ಗುರುತಿಸ್ತೀರಿ ?

ಉ : ನವಾವರಣ ಕೃತಿಗಳು, ನವಗ್ರಹ ಕೃತಿಗಳು, ನೀಲೋತ್ಪಲಾಂಬಿಕಾ ಮೊದಲಾಗಿ ಎಷ್ಟು ಬೇಕು ನಿಮಗೆ ? ಮುಖ್ಯವಾಗಿ ಇಂಥ ಕೃತಿಗಳಲ್ಲಿ ಕೆಲವು ವಿಶೇಷಗಳಿವೆ. ರಾಗವಿನ್ಯಾಸ ಉನ್ನತವಾದ ಮಟ್ಟದಲ್ಲಿವೆ. ಈ ಸಾಹಿತ್ಯದಲ್ಲಿ ಲಲಿತಾ ಸಹಸ್ರನಾಮದ ಬೀಜಾಕ್ಷರೀ ಮಂತ್ರಗಳು ಸೇರಿವೆ. ನವಗ್ರಹ ಕೃತಿಗಳಲ್ಲಿ ನವಗ್ರಹಗಳ ಎಲ್ಲ ಲಕ್ಷಣಗಳೂ ಸೇರಿವೆ. ಈ ದೃಷ್ಟಿಯಿಂದ ಸಾಹಿತ್ಯದ ಮಹಾಕಾವ್ಯಗಳ ಹಾಗೆ ಇಲ್ಲೂ ಮಹಾಕೃತಿಗಳಿವೆ. ಈ ಮಹಾಕೃತಿಗಳಿಗೆ ಇರಬೇಕಾದ ಲಕ್ಷಣವೆಂದರೆ ರಾಗದ ಸ್ವಾರಸ್ಯ. ಪ್ರಾರಂಭ ಮಾಡಿದ ಕೂಡಲೆ ರಾಗದ ಸ್ವರೂಪ ಮತ್ತು ಪಲ್ಲವಿ ಹಾಗೂ ಅನುಪಲ್ಲವಿ ಚರಣಗಳಲ್ಲಿ ಆ ರಾಗ ವಿಸ್ತಾರಗೊಳ್ಳುವ ರೀತಿ, ಅಲ್ಲಿ ಯಾವ್ಯಾವ ರೀತಿಯ ಸಂಚಾರ ಗಳಿವೆ, ಸಾಹಿತ್ಯದ ಘನತೆ, ಗಾಂಭೀರ್ಯ, ಪದಪ್ರಯೋಗ ಇತ್ಯಾದಿ. ಪಂಚರತ್ನ ಕೃತಿಗಳಲ್ಲದೆ 'ಕ್ಷೀರಸಾಗರ ಶಯನ' ಅಂತೆಯೇ ತ್ಯಾಗರಾಜರ ಬೇರೆ ಕೃತಿಗಳಲ್ಲಿಯೂ ಬಹಳಷ್ಟಿವೆ. 'ಭೋಗೀಂದ್ರ ಶಾಯಿನಂ', ಓ ರಂಗಶಾಯೀ, 'ಚಕ್ಕನಿ ರಾಜ ಮಾರ್ಗಮು' ಮೊದಲಾದವು. ಇಲ್ಲೆಲ್ಲ ರಾಗ, ರಾಗದ ಬೆಳವಣಿಗೆ ಮತ್ತು ಸಾಹಿತ್ಯ ಮಹೋನ್ನತವಾದ್ದು ಅನ್ನಿಸುತ್ತೆ.

ಪ್ರ : ಸಂಗೀತ ವಿಮರ್ಶೆಯ ಬಗ್ಗೆ ತಮ್ಮ ಅಭಿಪ್ರಾಯ ? ಈ ವಿಮರ್ಶೆಗಳು ಸಂಗೀತದ ಬಗ್ಗೆ ಅಭಿರುಚಿ ಬೆಳೆಸ್ತಿವೆಯಾ ?

ಉ : ವಿಮರ್ಶೆಯಲ್ಲಿ ಹಲವು ವಿಧಗಳಿವೆ. ಈಗ ಇರುವ ಅರ್ಥದಲ್ಲಿ ವಿಮರ್ಶೆ ಒಂದು ವರದಿ ಮಾತ್ರ. ವರದಿ ಮಾಡುವಾಗಲೂ ಒಂದು ಸಾಮಾನ್ಯ ಜ್ಞಾನ ಇರಬೇಕು. ಸಂಗೀತ ಕಛೇರಿ ವಿಮರ್ಶೆ ಮಾಡುವವರು ಗಾಯಕ, ಅವನ ಮನೋಧರ್ಮ, ಅವತ್ತಿನ ಸನ್ನಿವೇಶ, ಪಕ್ಕವಾದ್ಯದ ಸಹಕಾರ, ಯಾವ ರೀತಿ ಪ್ರೆಸೆಂಟ್ ಮಾಡ್ತಿದ್ದಾರೆ ಇವೆಲ್ಲ ಗಮನಿಸಬೇಕು. ಸಂಗೀತದ ಭಾವ, ಅಂತರಾರ್ಥ, ರಹಸ್ಯಾರ್ಥ ಗ್ರಹಿಸಿ ವಿಮರ್ಶಿಸಬೇಕು. ಮುಖ್ಯವಾಗಿ ಯಾರ ಬಗ್ಗೆ ವಿಮರ್ಶೆ ಮಾಡ್ತೀರೋ ಅವರಿಗಿಂತ ಹೆಚ್ಚಿನ ಯೋಗ್ಯತೆ ಇದ್ದರೆ ಮಾತ್ರ ವಿಮರ್ಶೆ ಸಾಧ್ಯ. ಸಾಹಿತ್ಯ ಜ್ಞಾನವೇ ಇಲ್ಲದವರು ಕಾಳಿದಾಸನ ಬಗ್ಗೆ ಏನು ಹೇಳಿಯಾರು ? ಡಾ|| ರಾ. ಸತ್ಯನಾರಾಯಣ ಅವರು 'ಮ್ಯೂಸಿಕ್ ಕ್ರಿಟಿಸಿಸಂ' ಅಂತಲೇ ಒಂದು ಪುಸ್ತಕ ಬರೆದು ಪ್ರಕಾಶಿಸಿದ್ದಾರೆ. ವಿಮರ್ಶೆ ಹೇಗಿರಬೇಕು ಅಂತ ಬಹಳ ಸೊಗಸಾಗಿ ಹೇಳ್ತಾರೆ. ಡಾ|| ವಿ. ರಾಘವನ್ ಸಹ ಅಂಥ ವಿದ್ವಾಂಸ ವಿಮರ್ಶಕರು. ನಾನು ಗಮನಿಸಿರೊ ಹಾಗೆ ಸಾಹಿತ್ಯದಲ್ಲಿ ವಿಮರ್ಶೆ ಬೆಳೆದ ಹಾಗೆ ಕಲೆಗಳ ಬಗ್ಗೆ ಆಗಿಲ್ಲ. ಆಗ ಈಗ ಚಿತ್ರಕಲೆ, ನಾಟಕ, ಸಿನಿಮಾಗಳ ಬಗ್ಗೆ ಅದರ ಸಿಮಿಯಾಟಿಕ್ಸ್ ಗ್ರಹಿಸಿ ವಿಮರ್ಶೆ- ವಿಶ್ಲೇಷಣೆ ಮಾಡೋದು ಕಂಡಿದೀನಿ. ಆ ಪ್ರಮಾಣದಲ್ಲಿ ನೃತ್ಯ-ಸಂಗೀತಗಳ ವಿಮರ್ಶೆ ಬೆಳೆದಿದೆ ಅನ್ನಿಸ್ತಿಲ್ಲ.

ಪ್ರ : ಈಗ ಕಾಲ ಬದಲಾಗಿದೆ. ಓಡ್ತಿದೀವಿ. ಹಿಂದಿನ ಕಾಲದ ಹಾಗೆ ಕಲೆಗಳ ಕಲಿಕೆಗೆ ಗುರುಕುಲ ಪದ್ಧತಿ ಅನುಸರಿಸೋದು ಸಾಧ್ಯ ಆಗ್ತಿಲ್ಲ. ಇವತ್ತಿನ ಕಾಲಕ್ಕೆ ತಕ್ಕಂತೆ ಕಲಿಕೆಗೊಂದು ಮೆಥಡ್ ಅನ್ನು ರೂಪಿಸಲು ಸಾಧ್ಯವೇ ?

ಉ : ಸಂಗೀತಕ್ಕೆ ಒಂದು ಡೆಪ್ತ್ ಬರಬೇಕಾದರೆ ಗುರುಗಳ ಜೊತೆಗಿದ್ದು ಶಿಕ್ಷಣ ತಗೋಬೇಕು. ಅದು ಸಾಧ್ಯ ಆಗ್ತಿಲ್ಲ. ನೂರಕ್ಕೆ ಒಬ್ಬ ಸತ್ಯವತಿಯಂಥ ಶ್ರದ್ಧಾವಂತೆ ಸಿಗಬಹುದು. ಆಕೆಗಿರುವ ಶ್ರದ್ಧೆ, ಆಸಕ್ತಿ ಎಲ್ಲರಿಗೂ ಇದ್ದಿದ್ದರೆ ಸಂಗೀತ ಇವತ್ತು ಬಹಳ



ಮೇಲ್ಮಟ್ಟದಲ್ಲಿರ್ತಿತ್ತು. ಈಗಿನ ಕಾಲಕ್ಕೆ ಒಳ್ಳೆಯ ಪರಂಪರೆಯಲ್ಲಿ ಶಿಕ್ಷಣ ಪಡೆದಿರುವ ಗುರುವಿನ ಮಾರ್ಗದರ್ಶನ ಮುಖ್ಯ.

**ಪ್ರ** : ತಮ್ಮ ಕಾಲದಲ್ಲಿ ಮೈಸೂರಿನಲ್ಲಿ ಪ್ರಯೋಗ, ಶಾಸ್ತ್ರ ಎರಡೂ ಇತ್ತು, ತಾವು ಪ್ರಯೋಗದ ಬಗ್ಗೆ ಹೇಳಿದಿರಿ. ಶಾಸ್ತ್ರದ ಬಗ್ಗೆ ಕೊಂಚ ಹೇಳಿ. ಲಕ್ಷ್ಯ-ಲಕ್ಷಣ ಗ್ರಂಥಗಳು, ಸಂಸ್ಕೃತದ ಜ್ಞಾನ ಇತ್ಯಾದಿ...

**ಉ** : ಲಕ್ಷ್ಯ-ಲಕ್ಷಣ ಎರಡೂ ಒಟ್ಟಿಗೆ ಹೋಗಬೇಕು. ಪುರಾತನ ಸಂಗೀತ ಈಗ ಇಲ್ಲವೇ ಇಲ್ಲ ಎಂಬಷ್ಟು ಕಡಿಮೆ. ಅನೇಕ ಗ್ರಂಥಗಳು ಲಭ್ಯವೂ ಇಲ್ಲ. ಪುಂಡಲೀಕ ವಿಟ್ಠಲರ ಕೃತಿ ಹಾಗೂ ಶಾರ್ಙದೇವನ 'ಸಂಗೀತ ರತ್ನಾಕರ' ಇತ್ಯಾದಿ ಅಧ್ಯಯನ ಮಾಡಿ, ಲಕ್ಷಣವನ್ನು ಅರ್ಥ ಮಾಡಿಕೊಳ್ಳೋದು ಮುಖ್ಯ. ಈಗ ರೂಢಿಯಲ್ಲಿರೋ ಸಂಗೀತದ ಲಕ್ಷಣವೇ ಬೇರೆ. ಈಗ ಅನೇಕ ರಾಗಗಳ ರಚನೆಯೂ ಹಿಂದೆ ಇದ್ದ ಹಾಗೆ ಇಲ್ಲ, ವ್ಯತ್ಯಾಸವಾಗಿಬಿಟ್ಟಿವೆ. ನಮ್ಮ ಪೂರ್ವಾಚಾರ್ಯರು ಪ್ರತಿಪಾದಿಸಿದ ಸಂಗೀತದ ಲಕ್ಷಣಗಳೇ ಬೇರೆ. ಅವು ಪುರಾತನ ಎಂಬ ಕಾರಣಕ್ಕೇ ವರ್ಜ್ಯ ಆಗಬಾರದು. ಈ ಹುಟ್ಟು, ಬೆಳವಣಿಗೆ, ಶಾಸ್ತ್ರಗ್ರಂಥಗಳು ಮೊದಲಾದುವನ್ನು ತೌಲನಿಕವಾಗಿ ಅಧ್ಯಯನ ಮಾಡುವ ಅಗತ್ಯ ಇದೆ. ಈ ಬಗ್ಗೆ ನಾನು ಹಲವು ಬಾರಿ ಪ್ರಸ್ತಾಪಿಸಿದೇನೆ. ಯಾರ ಲಕ್ಷ್ಯವೂ ಇತ್ತ ಹರಿಯುತ್ತಿಲ್ಲ. ಸಂಗೀತ ಪಾಠ ಹೇಳುವಾಗ ಆ ಪ್ರಮಾಣದಲ್ಲಿ ಶಾಸ್ತ್ರವನ್ನು ಪಾಠ ಮಾಡುವುದಿಲ್ಲ. ಎಷ್ಟು ಬೇಕೋ ಅಷ್ಟು ಹೇಳ್ತೀವಿ, ಅಷ್ಟೇ. ಕಲಿತಿದ್ದು ತೃಣದಷ್ಟೂ ಅಲ್ಲ, ಆದರೂ ಪಂಡಿತರೆಂಬ ಅಹಂ ಹೆಚ್ಚಿದೆ. ವ್ಯಾಖ್ಯಾನಗಳನ್ನು ಮಾಡ್ತಾರೆ!

**ಪ್ರ** : ಮೈಸೂರು ಪರಂಪರೆಯ ಬೆಳವಣಿಗೆ ಬಗ್ಗೆ ಹೇಳಿದಿರಿ. ಮೈಸೂರು ಬಾನಿಯ ಬಗ್ಗೆ ಬಹಳ ಕೇಳಿದೇವೆ...

**ಉ** : ಮೈಸೂರು ಬಾನಿ, ತಂಜಾವೂರು ಬಾನಿಯ ತರಹ ಹೆಚ್ಚು ಗಮಕಯುಕ್ತ ವಾಗಿರಲಿಲ್ಲ, ಷಾರ್ಟ್ ನೋಟ್ಸ್ ಹೆಚ್ಚು. ತಂಜಾವೂರು ಬಾನಿಯಲ್ಲಿ ಗಮಕದ ಪ್ರಯೋಗ ತುಂಬ ಸೊಗಸು. ಅದು ವಿನಾ ಇನ್ನೆಲ್ಲ ಒಂದೇ. ಆದರೆ ಅದೇ ಒಂದು ವಿಶೇಷ ಪರಂಪರೆ ಅಂತ ಹೇಳಿಕೊಂಡು ಬರ್ತಾರೆ ಅನ್ನೋದು ನಿಜ. ಆದರೆ ವಾದ್ಯಗಳಿಗೆ ಮೈಸೂರು ಬಾನಿಯೇ ಚೆನ್ನ. ಗಮಕ ಕಡಿಮೆ ನೋಡಿ. ತಂಜಾವೂರು ಬಾನೀಲಿ ಹಾಡಿದ ಹಾಗೇ ವಾದ್ಯಗಳನ್ನು ನುಡಿಸಬೇಕು. ಅಷ್ಟೇ ವ್ಯತ್ಯಾಸ.

**ಪ್ರ** : ಸಂಗೀತದಲ್ಲಿ ಸ್ಪರ್ಧೆ - ಸವಾಲು ಇರುತ್ತಾ?

**ಉ** : ಓಹೋ... ಇದೆ. ಯಾಕಿಲ್ಲ? ಪಲ್ಲವಿ ಇದೆ ನೋಡಿ, ರಾಗಂ-ತಾನಂ-ಪಲ್ಲವಿ. ಆ ಪಲ್ಲವಿಗಾಗಿ ಸವಾಲಿರುತ್ತೆ. ನಾನು ಹಾಡಿದ ಪಲ್ಲವೀನೇ ನೀನು ಹಾಡಬೇಕು; ನೀನು ಹಾಡಿದ್ದು ನಾನು ಹಾಡಬೇಕು, ಅನ್ನುವ ಛಾಲೆಂಜ್ ಕಲಾವಿದರಿಗೆ. ಕಷ್ಟವಾದ ಪಲ್ಲವೀನ ಚೆನ್ನಾಗಿ ಅಭ್ಯಾಸ ಮಾಡಿ ಕರಗತ ಮಾಡಿಕೊಂಡು ಹಾಡಿದರೆ, ಅದನ್ನ ಇನ್ನೊಬ್ಬ ಸ್ಥಳದಲ್ಲೇ ಗ್ರಹಿಸಿ ಹಾಡೋದು ಸುಲಭ ಅಲ್ಲ. ನಾನು ವಿನ್ಯಾಸ ಮಾಡಿದ ಮೇಲೆ ಅವನು, ನಾನು ಸ್ವರ ಹಾಕಿದ ಮೇಲೆ ಅವನು, ನಾನು ಏನಾದ್ರೂ ಚಮತ್ಕಾರ ತೋರಿಸಿದರೆ, ಅದನ್ನು ಮೀರಿದ ಚಮತ್ಕಾರ ಅವನೂ ತೋರಿಸುವುದು. ಹೀಗೆ... ಇಂಥ ಸ್ಪರ್ಧೆ-ಸವಾಲು ಆಗೀಗ ನಡೆಯುತ್ತೆ.

**ಪ್ರ** : ಸಂಗೀತಕ್ಕೆ ಬಣ್ಣ ಇದೆಯೆ ?

**ಉ** : ಸಂಗೀತಕ್ಕೆ ಬಣ್ಣ ಇಲ್ಲ. ಅದೊಂದು ಬಗೆಯ ಸಂತೋಷ- ಆನಂದ. ಆನಂದ ಅನ್ನೋದು ಉಂಟಾಗುವಂಥದ್ದು. ಉಂಟಾಗಬೇಕು. ಮನಸ್ಸಿಗೆ ಶಾಂತಿ- ಸಮಾಧಾನ ಉಂಟಾಗಬೇಕು. ಅದೇ ಕಲೆಯ ಗುರಿ. ಸಂಗೀತ ಅದನ್ನು ಮಾಡಬಲ್ಲುದು. ಇದು ಮನೋರಂಜನೆಗಿಂತ ಭಿನ್ನವಾದ್ದು. ಕೇವಲ ಅನುಭವಕ್ಕೆ ದಕ್ಕುವಂಥದ್ದು, ವಿವರಣೆಗೆ ಸಿಗದ್ದು, ಆದರೆ ಆ ಅನುಭವ ನನ್ನಲ್ಲಿ ಮಾತ್ರ ಅಲ್ಲ, ನಿಮ್ಮಲ್ಲೂ ಆಗಬೇಕು. ತನ್ಮಯ ಭಾವ ಹೇಳುವ - ಕೇಳುವ ಇಬ್ಬರಲ್ಲೂ ಇರಬೇಕು.

**ಪ್ರ** : ಅದು ಉಂಟಾಗಿರುವುದು ಸಂಗೀತಗಾರನ ಶಾರೀರದಿಂದಲೊ ಶಾಸ್ತ್ರದಿಂದಲೋ ?

**ಉ** : ಶಾರೀರ, ಅವನ ತೊಡಗುವಿಕೆ, ಶ್ರದ್ಧೆ ಅವನ ನಿರೂಪಣಾ ಕ್ರಮದಲ್ಲಿ ಉಂಟಾಗುವಂಥದ್ದು. ನೀವು ಅವನಲ್ಲಿ, ಅವನು ನಿಮ್ಮಲ್ಲಿ ಅಂತಾಗಬೇಕು. ನಾನು ಸಂಗೀತ ಕಛೇರಿಗಾಗಿ ಕಷ್ಟಪಡಲಿಲ್ಲ, ಆದರೆ ಅದಷ್ಟೇ ಅಲ್ಲ, ಅದರ ಒಳಹೊಕ್ಕು ಕಷ್ಟ-ಸುಖ ಅರ್ಥ ಮಾಡಿಕೊಳ್ಳೋಕೆ ಕಷ್ಟಪಟ್ಟೆ. ಸ್ವಾಧೀನ ಮಾಡಿಕೋಬೇಕು ಅಂತ ದಿವಾರಾತ್ರಿಗಳಲ್ಲಿ ದುಡಿದೆ.

**ಪ್ರ** : ತಮಗೆ ಸ್ಫೂರ್ತಿ ಯಾರು ?

**ಉ** : ಹಿರಿಯ ವಿದ್ವಾಂಸರೆಲ್ಲರೂ. ನಾನು ಆಗಲೇ ಹೇಳಿದ ರಾಮಮಂದಿರ, ರಾಮೋತ್ಸವಗಳಲ್ಲಿ ಕಛೇರಿಗೆ ಎಲ್ಲ ವಿದ್ವಾಂಸರು ಬರ್ತಿದ್ರು. ಚೆಂಬೈ ವೈದ್ಯನಾಥ ಭಾಗವತರು ಅಂದ್ಕೊಳ್ಳಿ. ಅವರ ಶಾರೀರ ಬಹು ಚೆನ್ನ. ನಮ್ಮ ಮನೆಗಳಿಗೆ ಬರೋರು, ಹಾಡೋರು. ಅವರು ಹಾಡಿದ ತೋಡಿ ರಾಗ ಅಥವಾ ಮತ್ತಾವುದೊ ಮನನ ಮಾಡಿಕೊಂಡು ಅದನ್ನ ಹಾಡಲು ಪ್ರಯತ್ನಿಸ್ತಿದ್ದೆ. ಇಂಥ ಸ್ಫೂರ್ತಿ- ಪ್ರೇರಣೆಗೆ ಆದವರು 'ಎಂದರೋ ಮಹಾನುಭಾವುಲು'. ಮೊದಲ ಸಲ ನಾನು ಮ್ಯೂಸಿಕ್ ಅಕಾಡೆಮಿಯಲ್ಲಿ ಹಾಡಿದ್ದೆ. ಅದು ನಡೆದದ್ದು ೧೯೫೭ರಲ್ಲಿ, ಮದರಾಸಿನ ಪಿ. ಎಸ್. ಹೈಸ್ಕೂಲಿನಲ್ಲಿ ನಡೆದದ್ದು. ನಾಡಿನ ಎಲ್ಲ ವಿದ್ವಾಂಸರೂ ಸೇರಿದ್ದ ಸಭೆ ಅದು. ರಾಮನಾಡ್ ಕೃಷ್ಣನ್, ಅನಂತಕೃಷ್ಣ ಶರ್ಮ, ಪಾಪನಾಶಂ ಶಿವಂ ಮೊದಲಾದ ವಿದ್ವಜ್ಜನರಿಂದ ತುಂಬಿದ ಸಭೆ. ಆ ಸಮ್ಮೇಳನದ ಕಾರ್ಯದರ್ಶಿ ಡಾ|| ವಿ. ರಾಘವನ್. ಭಯ-ಸಂಕೋಚ, ಹಿಂಜರಿಕೆಯಲ್ಲಿ ಆತಂಕಗೊಂಡಿದ್ದೆ. ಕಛೇರಿ ನಡೆಸಿಬಿಟ್ಟೆ. ಮೆಚ್ಚು ನುಡಿ ಆಡಿದ ರಾಘವನ್ ಅಂಥವರು, ''ಶ್ರೀಕಂಠನ್, ಯು ಹ್ಯಾವ್ ಕ್ಯಾರೀಡ್ ದಿ ಡೇ. ಐ ಆ್ಯಮ್ ರಿಯಲಿ ವೆರಿ ಹ್ಯಾಪಿ, ಕೀಪ್ ಇಟ್ ಅಪ್'' ಅಂದರು. ಮರುದಿನ ಸಭೆಗೆ ಹೋಗೋವಾಗ ಮುಸಿರಿ ಅಯ್ಯರ್ ಅವರು, ''ಏನು ನಿನ್ನೆ ನೀನು ದರ್ಬಾರ್ ಮಾಡಿಬಿಟ್ಟೆಯಂತೆ ? ಭಲೆ ಭಲೆ, ಸಂತೋಷ ಕಣಯ್ಯ, ತುಂಬ ಸಂತೋಷ'' ಅಂದರು. ಹಿಂದಿನ ದಿನದ ಕಛೇರೀಲಿ ನಾನು ಹಾಡಿದ್ದು ದರ್ಬಾರಿ ರಾಗವನ್ನ. ಹೀಗೆ ಎಲ್ಲರೂ ನನ್ನನ್ನ ಹರಸಿ ಮುಂದೆ ಹೋಗು ಅಂದಿದಾರೆ. ಅದೇ ನನ್ನ ಭಾಗ್ಯ.

**ಪ್ರ** : ಸಂಗೀತದಿಂದ ವ್ಯಕ್ತಿತ್ವ ನಿರ್ಮಾಣ ಆಗುತ್ತೆಯೆ ?

**ಉ** : ವಿದ್ಯಾಭ್ಯಾಸದ ಗುರಿ ವ್ಯಕ್ತಿತ್ವದ ಸಂಪಾದನೆಯೇ ಅಲ್ಲವೇ ? ಸಂಗೀತದಲ್ಲಿ ಕೂಡ ಕೇವಲ ನಾದ-ಲಯ ಮಾತ್ರವಲ್ಲ, ಉತ್ತಮ ಸಾಹಿತ್ಯ ಇದೆ. ಆ ಸಾಹಿತ್ಯದ ನೀತಿ ಮನಮುಟ್ಟುವುದೇ ರಾಗದ ಮೂಲಕ. ಆ ಆಪ್ತ ವಾಕ್ಯಗಳೇ ವ್ಯಕ್ತಿತ್ವ ಸುಧಾರಣೆ ಮಾಡುತ್ತವೆ; ಭವ್ಯವಾಗಿ ರೂಪಿಸುತ್ತವೆ. ವ್ಯಕ್ತಿತ್ವ - ಕಲೆ ಕೆಲವೊಮ್ಮೆ ವ್ಯಕ್ತಿಯಲ್ಲಿ ಬೇರೆ ಬೇರೆಯಾಗೇ ಇರೋದುಂಟು. ಆದರೆ ಕಲೆಯಲ್ಲಿ ನೈಪುಣ್ಯ ಪಡೆಯುವುದರ ಜೊತೆಗೆ ವ್ಯಕ್ತಿತ್ವ ಸುಧಾರಣೆಗೂ ಗಮನ ಕೊಡಬೇಕಾದ್ದು ಮುಖ್ಯ.

**ಪ್ರ** : ಸಂಗೀತಕ್ಕೆ ಪ್ರಕೃತಿಯನ್ನು ನಿಯಂತ್ರಿಸುವ ಶಕ್ತಿ ಇದೆ ಅಂತಾರೆ. ನಿಜವೆ ?

**ಉ** : ಇಂಥ ಸಂದರ್ಭದಲ್ಲೇ ವ್ಯಕ್ತಿತ್ವದ ಪ್ರಶ್ನೆ ಬರುತ್ತೆ. ನನ್ನ ವ್ಯಕ್ತಿತ್ವ ಮಹತ್ತಾದದ್ದಾದರೆ, ಘನವಾಗಿದ್ದರೆ ಪ್ರಕೃತಿಯನ್ನು ನಿಯಂತ್ರಿಸಬಹುದು. ತಾನ್‌ಸೇನ್, ದೀಕ್ಷಿತರು, ಶಾಮಶಾಸ್ತ್ರಿಗಳು ಇಂಥ ಮಹಾನುಭಾವರು. ನಮಗೆ ಕಟ್ಟುಕತೆ, ಪವಾಡ, ಅನ್ನಿಸುವಂಥ ಸಿದ್ಧಿ ಇತ್ತಂತೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ನಿಸರ್ಗವನ್ನು ನಿಯಂತ್ರಿಸ್ತೀನಿ ಅನ್ನುವ ಅಹಂ ಅಲ್ಲ, ನಿಸರ್ಗದ ಜೊತೆಗೆ ಸಂಗೀತವನ್ನು ಒಂದು ಭಾಗವಾಗಿ ತೆಗೆದುಕೊಳ್ಳುವುದು. ಉದಾಹರಣೆಗೆ, ಋತುಗಳಿಗೆ ತಕ್ಕಂತೆ ಹಾಡುವುದು. ಬೆಳಗು, ಬೈಗು, ಅಪರಾಹ್ನಗಳ ಹಿನ್ನೆಲೇಲಿ ಕೆಲವು ರಾಗಗಳನ್ನು ಗುರುತಿಸೋದು ಇತ್ಯಾದಿ ಇದೆ ನೋಡಿ. ದೀಪಕ ರಾಗ ಹಾಡುವಾಗ ಅನುಭವಿಸುವ ಮನಸ್ಸಿನೊಳಗೆ ಒಂದು ಬಗೆಯ ಬೆಳಕಿನ ಅನುಭವ ಆಗಬಹುದಲ್ವೆ ? ಈ ಹಿಂದೆ ನಾವು ಚರ್ಚಿಸಿದ

ನ್ನದ ಪರಿಕಲ್ಪನೆ ಇದಕ್ಕೆ ಹೋಲಿಸಬಹುದು. ಭಾವದಿಂದ ಪ್ರಭಾವಿತಗೊಂಡ ಮನಸ್ಸಿನಲ್ಲಿ ಮೂಡುವ ್ಯಗಳು. ಆದರೆ ಸಂಗೀತದಿಂದ ಸುನಾಮಿ ತಡೆಯಲಾದೀತೆ? ಭೂಕಂಪ, ಅಗ್ನಿಪರ್ವತದ ಕ್ಕುವಿಕೆ ನಿಲ್ಲಿಸಬಲ್ಲವೆ? ಪ್ರಕೃತಿ ದೊಡ್ಡದು. ಅದನ್ನು ನಿಯಂತ್ರಿಸೋದು ಎಂಬ ಅಹಂ ಬಂದರೆ ವೇ ನಾಶವಾಗಿಹೋದೇವು. ಸಂಗೀತವು ವಿನಯ, ವಿನಮ್ರತೆ, ಶಾಂತಿ, ಸಮಾಧಾನ ವಂಥದ್ದು. ಅದು ಸ್ಟೈಲೈಜ್ಡ್ ಆದಾಗ ರಾಗಮಾಲಿಕಾ ಚಿತ್ರಗಳ ರೀತಿಯ ಪರಿಕಲ್ಪನೆ ಸಾಧ್ಯ ಗಬಹುದು.

ಪ್ರ : ಸಂಗೀತಗಾರರು ಮಹಾರಸಿಕರು ಅಂತ ಹೇಳ್ತಾರೆ. ತಮ್ಮ ಬದುಕಿನಲ್ಲಿ ಅಂಥ ತುಂಟತನ...

ಉ : ಓ...ಹೋ...ಹೋ... ಕೆಲವನ್ನೆಲ್ಲ ಹೇಳಬಾರದು. ಗೌಪ್ಯವೇ ಚಂದ. ತುಂಟತನವೇ ು, ಚಟಗಳೂ ಇರುತ್ವೆ. ಕಳ್ಳನಿಗೆ ಕದೀದೆ ಇದ್ರೆ ಆಗಲ್ವಂತೆ... ಹಾಗೆ.

ಪ್ರ : ಎ. ಎನ್. ಮೂರ್ತಿರಾಯರು ಯಾವಾಗಲೂ ಒಂದು ಅನೆಕ್‌ಡೋಟ್ ಹೇಳೋರು. ಂತಕೃಷ್ಣ ಶರ್ಮರ ಜೊತೆ ಒಂದು ಕಛೇರಿಗೆ ಹೋದರು. ತನಿಯಾವರ್ತನೆ ಪ್ರಾರಂಭ ಆದಾಗ ಂತಕೃಷ್ಣ ಶರ್ಮರು, "ನಡಿಯಪ್ಪಾ ಈಗ ಮ್ಯಾಥಮ್ಯಾಟಿಕ್ಸ್ ಶುರು ಆಗುತ್ತೆ... ನಾವು ಾರಡೋಣ" ಅಂದರಂತೆ. ಅಂದರೆ ಈ ತನಿಯಾವರ್ತನೆ ಸಂಗೀತದ ಒಂದು ವಾರ್ಯವಾದ ಭಾಗ ಅಲ್ಲ ಅನ್ನೋ ಅರ್ಥದಲ್ಲಿ ಹೇಳೋರು. ಇದಕ್ಕೆ ತಮ್ಮ ಅಭಿಪ್ರಾಯ?

ಉ : ಅದು ಒಪ್ಪತಕ್ಕಂಥ ಮಾತಲ್ಲ. ಮೂರ್ತಿರಾಯರು ಸಂಗೀತ ತಿಳಿದವರಲ್ಲ. ತಿಳಿದಿದ್ದ ರ್ಮರು ಹಾಗೆ ಹೇಳಬಾರದಿತ್ತು. ತನಿಯಾವರ್ತನದಲ್ಲಿ ಸ್ವಾರಸ್ಯ ಇದೆ. ಲಯ ವ್ಯವಹಾರ ಯಾವ ತಿ ಮಾಡ್ತಾನೆ ಅನ್ನೋದು ಗಮನಿಸಿ ಮೆಚ್ಚಿಕೋಬೇಕಲ್ಲವೆ? ಅದು ಗ್ರಹಿಸದಿದ್ದರೆ ್ಯಾಥಮ್ಯಾಟಿಕ್ಸ್ ಅನ್ನಿಸಿಬಿಡುತ್ತೆ. ಈಚೆಗೆ ನನಗೆ ಸ್ವರಮೂರ್ತಿ ವಿ. ಎನ್. ರಾವ್ ಪ್ರಶಸ್ತಿ ಪ್ರದಾನ ಾಡಿದ ಸಂದರ್ಭ, ಸಂಜೆ ಕಛೇರಿ. ಗುರುವಾಯೂರು ದೊರೆ ಮೃದಂಗ ಇತ್ತು. ಅದೇನು ೇಗಸಾಗಿ ನುಡಿಸಿದ ಕಂಡಿರಾ... ವರಸೆಗಳನ್ನು ಕೇಳೋದೆ ಒಂದು ಆನಂದ. ಒಳ್ಳೇ ನೆರವಲ್ ಾಡಿದ ಹಾಗಿತ್ತು ಆ ವರಸೆಗಳು, ವಿಧ ವಿಧ ಶಬ್ದಗಳು. ಅದನ್ನು ಮ್ಯಾಥಮ್ಯಾಟಿಕ್ಸ್ ಅಂದು ಟ್ಟುಬಿಡೋದೆ? ಶರ್ಮರು ಕೃಷ್ಣಪ್ಪನವರ ಶಿಷ್ಯರು. ಕೃಷ್ಣಪ್ಪನವರದು ಸರಳರೇಖಾತ್ಮಕ ಸಂಗೀತ. ಮಕ ಇಲ್ಲ. ಹನ್ನೆರಡು ಸ್ವರ ಸ್ಥಾನಗಳನ್ನು ಶುದ್ಧವಾಗಿ ಹಿಡಿದು ಹಾಡೋದು ಮುಖ್ಯ, ಗಮಕ ಕಿಲ್ಲ ಅನ್ನೋದೇ ಅವರ ಸಿದ್ಧಾಂತ. ಆದರೆ ಅವರು ಲಯದಲ್ಲಿ ನಿಸ್ಸೀಮರಾಗಿದ್ರು. ಸೊಗಸಾದ ೀರ. ಅವರ ದೇವರನಾಮಗಳಲ್ಲಿಯ ಭಾವಪೂರ್ಣತೆ ಕೇಳಿದವರ ಭಾಗ್ಯ. ಶರ್ಮರು ಹಿತ್ಯ-ಸಂಗೀತ ಎರಡೂ ದೋಣಿಯಲ್ಲಿ ಕಾಲಿಟ್ಟರು. ಲಯಕ್ಕಾಗಿ ಶ್ರಮಪಟ್ಟದ್ದು ಕಡಿಮೆ. ಾಗಿ ಪ್ರಾಯಃ ಅವರಿಗೆ ತನಿಯಾವರ್ತ ಮ್ಯಾಥಮ್ಯಾಟಿಕ್ಸ್ ಅನ್ನಿಸಿಬಿಟ್ಟಿರಬೇಕು.

ಪ್ರ : ಈಚೆಗೆ ಸಂಗೀತ-ನೃತ್ಯಗಳ ಮೂಲಕ ಥೆರಪಿ ಮಾಡ್ತಾರಲ್ಲ?

ಉ : ನಾನೂ ಹಾಗೆಂದು ಕೇಳಿದೇನೆ. ಆಯ್ದ ಕೆಲವು ರಾಗಗಳನ್ನ ಬಳಸ್ತಾರಂತೆ ವಿದೇಶಗಳಲ್ಲಿ. ಶ್ಚಾತ್ಯ ಸಂಗೀತ ಮೊಝಾರ್ಟ್, ಪಿಯಾನೊ ಕಾನ್ಸರ್ಟ್‌ಗಳನ್ನು ಲೇಬರ್ ವಾರ್ಡ್‌ನಲ್ಲಿ ಮೆಲ್ಲಗೆ ಕಿಸ್ತಾರಂತೆ. ಇದರಿಂದ ಸುಲಭವಾಗಿ ಹೆರಿಗೆ ಆಗುತ್ತೆ ಅಂತಾರೆ. ಇಲ್ಲಿ ಸಂಗೀತ, ಅದಕ್ಕೆ ಸ್ಪಂದಿಸುವ ಕ್ತಿ ಮುಖ್ಯ. ಆ ಸಂಸ್ಕಾರ ಇದ್ದವನಿಗೆ ಭಾವ ಸ್ಪಂದನ ಉಂಟಾಗುತ್ತೆ. ಕೊಂಚಮಟ್ಟಿಗೆ ಮಧುರ ದ ಸಂಗೀತ ಉದ್ವೇಗವನ್ನು ಉಪಶಮನ ಮಾಡುತ್ತ ಅನ್ನಬಹುದು. ಸುಸ್ವರ ನರಗಳ ಮೇಲೆ ಭಾವ ಬೀರುತ್ತೆ. ಶಾಂತಿ ಸಮಾಧಾನ ಉಂಟಾಗುತ್ತೆ ಅನ್ನೋದು ಸಹಜ. ಅದೇ ರಸಾನುಭವ.

ಪ್ರ : ಆಕಾಶವಾಣಿ ಮೊದಲಾದ ಮಾಧ್ಯಮಗಳಲ್ಲಿ ಹೊಸ ಪ್ರತಿಭೆಗಳಿಗೆ ಅವಕಾಶ ಇಲ್ಲ. ಗೀತ ಅಂದರೆ ಭಂಡಾರದಲ್ಲಿರೋ ಹಳೆಯ ಧ್ವನಿಮುದ್ರಿಕೆ ಹಾಕ್ತಾರೆ. ಅರ್ಧ ಗಂಟೇಲಿ ೫ ಷ ಜಾಹೀರಾತಿಗೆ. ಇದನ್ನೆಲ್ಲ ಸರಿಮಾಡೋದು ಹೇಗೆ? ಸಂಗೀತಗಾರರೆಲ್ಲ ಸೇರಿ ಸರಿಯಾದ ್ತಡ ತರಬೇಕಲ್ವೆ?

ಉ : ಪ್ರಸಾರಭಾರತಿ ಬರುವ ಮೊದಲು ಇದ್ದಂಥ ವಿಧಾನ ಬಂದರೆ ಸಾಧ್ಯ. ಬಹುತೇಕ ೋರ್ಡ್ ಮೆಂಬರ್ಸ್‌ಗೆ ಸಂಗೀತವೇ ತಿಳಿಯದು, ರೂಪಾಯಿಗೆ ಎಷ್ಟು ಕೆ.ಜಿ. ಅಂತ ಕೇಳೋ ದೋರು. ಏನಾದರೂ ತಿಳಿಸಿ ಹೇಳಿದರೆ ಬಡಜನ ಹೊಟ್ಟೆಗಿಲ್ದೆ ಸಾಯ್ತಿದಾರೆ ಈ ಸಂಗೀತದಿಂದ ರ ಹೊಟ್ಟೆ ತುಂಬುತ್ತಾ? ಆಫ್ರಿಕಾದಲ್ಲಿ ಎಷ್ಟೋಂದು ಜನ ಸಾಯ್ತಿದಾರೆ ಗೊತ್ತ ಎಂದೆಲ್ಲಾ ಭಾಷಣ ೀತಾರೆ. ಈ ಸಂಗೀತ ಕೇಳದೆ ಹೋದರೆ ಆಫ್ರಿಕಾದವರೆಲ್ಲ ಬದುಕೋದಾದರೆ, ಟ್ಟೆಗಿಲ್ಲದವರ ಹೊಟ್ಟೆ ತುಂಬೋದಾದರೆ ಸಂಗೀತವೇ ಬೇಡ ಅನ್ನೋಣ. ಹಾಗಾಗುತ್ತಾ ಳ? ಒಟ್ಟಿನಲ್ಲಿ ನಮ್ಮ ಕಲ್ಚರಲ್ ಹೆರಿಟೇಜ್ ಬಗ್ಗೆ ಯಾರಿಗೂ ಗೌರವಾನೇ ಇಲ್ಲ.

ಪ್ರ : ಇವತ್ತಿನ ಸಂಗೀತಾಭ್ಯಾಸ-ಸಂಗೀತಗಾರರ ಬಗ್ಗೆ ತಮ್ಮ ಕಾಲಕ್ಕೆ ಹೋಲಿಸಿದಾಗ ನ್ನಿಸುತ್ತೆ?

ಉ : ಹಿಂದಿನ ಸಂಗೀತದ ದೊಡ್ಡತನ ಈಗಿನ ಸಂಗೀತದಲ್ಲಿ ಇಲ್ಲ. ಗಾಯಕರು ಚೆನ್ನಾಗಿ ಡ್ತಾರೆ. ಬುದ್ಧಿವಂತರು, ಒಳ್ಳೆಯ ಶಾರೀರ – ತಿಳಿವಳಿಕೆ ಇದೆ. ಆದರೂ ಏನೋ ಸಾಲದು... ಕ ಅನ್ಸುತ್ತೆ. ಒಂದು ಕಛೇರಿಗೆ ಹೋದರೆ ಮನಸ್ಸು ಅದರಲ್ಲಿ ತೊಡಗಿಲ್ಲ, ಸಮಾಧಾನ ಸಿಗ್ತಿಲ್ಲ.



ವಿಚಿತ್ರ ಅಬ್ಬರ, ಆಡಂಬರ ಅನ್ನಿಸಿಬಿಡ್ತಿದೆ. ಅಲ್ಲಿ ತಾದಾತ್ಮ್ಯ ಇಲ್ಲ. ಯು ಶುಡ್ ಗೆಟ್ ಇನ್‌ಟು ದಿ ಶೂಸ್ ಆಫ್ ದಿ ವಾಗ್ಗೇಯಕಾರ ಅಂಡ್ ದೆನ್ ದಿ ಸಾಂಗ್... ನಾನೇ ತ್ಯಾಗರಾಜ ಅಂದುಕೋಬೇಕು; ಆಗಬೇಕು. ಆಗ ಭಾವ ಬರುತ್ತೆ, ಚಪ್ಪಾಳೆಗಾಗಿ ಗಿಮಿಕ್ಸ್ ಮಾಡಿದರೆ ಭಾವಶೂನ್ಯವಾಗುತ್ತೆ. ಡ್ರಿಲ್ ಅಧಿಕ ಆದರೆ ಬರೀ ಥ್ರಿಲ್ ಇರುತ್ತೆ. ಥ್ರಿಲ್‌ನಿಂದ ಧ್ಯಾನಸ್ಥ ಸ್ಥಿತಿ ಸಿಗೋದಿಲ್ಲ.

ಪ್ರ : ಈಚೆಗೆ ಅಧಿಕವಾಗಿ ಪ್ರಚಾರದಲ್ಲಿರೋ ಫ್ಯೂಷನ್ ಮ್ಯೂಸಿಕ್ ಬಗ್ಗೆ ಏನನ್ನುತ್ತೆ? ಸಂಗೀತಗಾರರೆಲ್ಲ ಅತ್ತ ವಾಲ್ತಿದಾರೆ, ಜನಪ್ರಿಯವೂ ಆಗ್ತಿದೆ...

ಉ : ಅದೆಲ್ಲ ಬರೀ ಕನ್‌ಫ್ಯೂಷನ್ ಮ್ಯೂಸಿಕ್, ಕನ್‌ಫೌಂಡೆಡ್ ಅಂದ್ಕೊಳ್ಳಿ. ಹುಚ್ಚುಚ್ಚಾಗಿ ಹಾಡಿದ್ರೂ ಹೆಸರು ಬರುತ್ತೆ, ಎಷ್ಟು ಚೆನ್ನಾಗಿ ಹುಚ್ಚುಚ್ಚಾಗಿ ಹಾಡ್ತಾನೆ ಅಂತ. ಫ್ಯೂಷನ್ ಸಂಗೀತದಿಂದ ಏನು ಸಾಧಿತ ವಾಗಿದೆ ಹೇಳಿ? ಇದರ ಗಮ್ಯ ಯಾವುದು? ಜನ ಮುಗಿಬೀಳೋದೇ ಉದ್ದೇಶವಾ? ಜಾಸ್ತಿ ಜನ ಬಂದ್ರೆ ಮಾತ್ರ ಸಂಗೀತವಾ? ಲಯ ಪ್ರಧಾನ ಅಂದುಬಿಡ್ತಾರೆ. ಅದಕ್ಕೇನಾದರೂ ಒಂದು ಪರಂಪರೆ ಇದೆಯಾ? ಶಾಸ್ತ್ರಾಧಾರ ಇದೆಯಾ? ಮುಂದಿನ ಪೀಳಿಗೆಗೆ ಹಿಂದುಸ್ತಾನೀ, ಕರ್ನಾಟಕ ಸಂಗೀತ ಹೇಳಿಕೊಡೋ ಹಾಗೆ ಇದನ್ನು ಹೇಳಿಕೊಡಕ್ಕಾಗುತ್ತಾ? ಇವೆಲ್ಲ ಕ್ಷಣಿಕವಾದವು. ಬೆಲೆ ಯಾವಾಗಲೂ ಶಾಶ್ವತವಾದ್ದಕ್ಕೆ. ಸಂಗೀತ ಸನಾತನವಾದ್ದು. ಅದೊಂದು ಶಾಸ್ತ್ರ ಅನ್ನೋದು ಮುಖ್ಯ. ಈ ಪಾಶ್ಚಾತ್ಯ ಸಂಗೀತದೊಂದಿಗೆ ನಮ್ಮ ಸಂಗೀತ ಬೆರೆಸೋ ವಿಧಾನದಿಂದ ಪಾಶ್ಚಾತ್ಯ ಸಂಗೀತಶಾಸ್ತ್ರವೂ ಬೆಳೆಯೋದಿಲ್ಲ; ನಮ್ಮ ಭಾರತೀಯ ಸಂಗೀತವೂ ಬೆಳೆಯೋದಿಲ್ಲ.

ಪ್ರ : ಶಾಸ್ತ್ರೀಯ ಪದ್ಧತಿ ಕಲಿತವರು ಮಾತ್ರ ಜನಪದ ಸಂಗೀತವನ್ನು ಸೇರಿಸಿ ಹೊಸ ರೂಪದಲ್ಲಿ ಕೊಡ್ತಾರೆ. ಅದು ಸಿನಿಮಾಗಳಲ್ಲಿ ಕಾಣಿಸುತ್ತೆ, ಅವು ಸೊಗಸಾಗೂ ಇರುವುದುಂಟು.

ಉ : ಅಂಥ ಕೆಲವನ್ನು ನಾವೂ ಮೆಚ್ಚುತ್ತೇವೆ. ಅವು ಈ ಫ್ಯೂಷನ್ ಥರದವಲ್ಲ. ಪರಿಶ್ರಮದಿಂದ ಹುಟ್ಟಿದಂಥವು.

ಪ್ರ : ನಿಮ್ಮ ಕಾಲದಲ್ಲಿ ಪಾಶ್ಚಾತ್ಯ ಸಂಗೀತವನ್ನು ಕಲಿಯುವವರು ಇದ್ದರೆ? ಮೈಸೂರಿನಲ್ಲಿ ಬ್ಯಾಂಡ್ ಸಂಗೀತ ಇತ್ತು. ಬೆಂಗಳೂರಿನಲ್ಲೂ ಆ ಸಂಗೀತದ ಶೋಕಿ ಇತ್ತು.

ಉ : ಹಿಂದೆ ಮೈಸೂರಿನ ಮಹಾರಾಜರು ಈ ಬ್ಯಾಂಡ್ ಇಟ್ಟಿದ್ದರು.

ಶ್ಚಾತ್ಯ ವಾದ್ಯಗಳನ್ನು ಆಸ್ಥಾನ ವಿದ್ವಾಂಸರು ಕಲಿತಿರಲೇಬೇಕೆಂಬ ನಿಯಮ ಮಾಡಿದ್ದರು. ದನ್ನು ಜಯಚಾಮರಾಜ ಒಡೆಯರು ಮುಂದುವರಿಸಿದರು.

ಸ್ವತಃ ಅವರೇ ಪಿಯಾನೊ ವಾದಕರಾಗಿದ್ದರು. ಅವರ ಸಹೋದರಿ ವಿಜಯಾದೇವಿ ಸಹ ತ್ತಮ ಪಿಯಾನೊ ಕಲಾವಿದೆ. ಈಚಿಗೆ ತೀರಿಕೊಂಡರು.

ಪ್ರ : ಸರ್, ಒಂದು ತುಂಟತನದ ಪ್ರಶ್ನೆ ಇದೆ. ಮಹಾರಾಜರೇ ರಚಿಸಿದ ಕೃತಿಗಳೂಂತ ಇವೆ. ಜಕ್ಕೂ ಅವೆಲ್ಲ ಅವರೇ ರಚಿಸಿದ್ದಾ?

ಉ : ಅರಸರಿಗೆ ಸಂಗೀತದಲ್ಲಿ ಒಲವಿತ್ತು, ಪ್ರತಿಭೆ ಇತ್ತು. ವಾಸುದೇವಾಚಾರ್ಯರ ಸಹಾಯ ಗೋತಿದ್ರು. ಸಾಮಾನ್ಯವಾಗಿ ಆಸ್ಥಾನದಲ್ಲಿದ್ದ ವಾಗ್ಗೇಯಕಾರರು ತಾವು ರಚನೆ ಮಾಡಿ ಹಾರಾಜರ ಅಂಕಿತ ಕೊಟ್ಟ ಸಂದರ್ಭಗಳೂ ಇವೆ. ಅದು ರಾಜರ ಬಗ್ಗೆ ಇದ್ದ ಗೌರವದ ಕೇತ. ಈ ವಿಷಯದಲ್ಲಿ ಒಬ್ಬರು ಮಹಾಪ್ರಬಂಧ ಬರೆದು ಡಾಕ್ಟರೇಟ್ ತಗೊಂಡಿದ್ದಾರೆ. ವರು ಒಡೆಯರ ರಚನೆಗಳ ಬಗ್ಗೆ ಎಲ್ಲ ವಿವರಗಳನ್ನೂ ಕೊಟ್ಟಿದ್ದಾರೆ. ಒಡೆಯರಿಗೆ ಕರ್ನಾಟಕ ಗೀತದಲ್ಲಿ ತಿಳುವಳಿಕೆ ಇತ್ತು. ವಾಸುದೇವಾಚಾರ್ಯರೇ ಅವರ ಗುರುಗಳು. ಅವರಿಗೆ ಅಷ್ಟೇ ತಿ ಪಿಯಾನೋದಲ್ಲೂ ಇತ್ತು.

ಪ್ರ : ತಮ್ಮ ಮಕ್ಕಳಲ್ಲಿ ಸಂಗೀತಾಸಕ್ತಿ?

ಉ : ಕಲಿತಿದಾರೆ. ಮಗ ರಮಾಕಾಂತ ನನ್ನ ಹಾಗೆ ಕಛೇರಿ ಮಾಡಬಲ್ಲ. ಮಗಳು ರತ್ನಮಾಲಾ ಗಮ ಸಂಗೀತಕ್ಕೆ ಒಲಿದಳು. ಅವಳಿಗೆ ಶಾಸ್ತ್ರೀಯವೂ ಗೊತ್ತು. ಸುಬ್ಬುಲಕ್ಷ್ಮಿ ಅವರು ನಮ್ಮ ನೆಗೆ ಬಂದಾಗ ಅವರ ಮೆಚ್ಚಿನ ಕೀರ್ತನೇನೇ ಹಾಡಿ, 'ನನ್ನ ಹಾಗೇ ಹಾಡ್ತೀಯ' ಅಂತ ಚ್ಚಿಕೊಂಡಿದ್ದರು. ಸುಗಮ ಸಂಗೀತದಲ್ಲಿ ರತ್ನಮಾಲಾ ದೊಡ್ಡ ಹೆಸರಾಗಿದ್ದಾಳೆ. ವಿದೇಶಕ್ಕೂ ೋಗಿಬಂದಳು.

ಪ್ರ : ನಿಮ್ಮ ಮೊದಲ ವಿಮರ್ಶಕರು ಯಾರು?

ಉ : ನನ್ನಾಕೆ. ಆಕೆ ನನ್ನನ್ನು ತನ್ನ ಚಿಕ್ಕ ಪ್ರಾಯದಲ್ಲೇ ವರಿಸಿದಳು. ಮಾವನವರು ನನ್ನ ದ್ಯಾಭ್ಯಾಸಕ್ಕೂ ನೆರವಾದರು. ಮನೆಯ ಯಾವ ಕಷ್ಟ-ಕಾರ್ಪಣ್ಯವನ್ನೂ ನನ್ನ ಗಮನಕ್ಕೆ ತರದೆ ಾಯಿಸುವ ಇಚ್ಛೆಯನರಿತ ಹೆಂಡತಿ. ಕಛೇರಿ ಮುಗಿದ ಮೇಲೆ ಇದು ಚೆನ್ನ, ಇದು ಸುಮಾರು ತ ಹೇಳೋದೂ ಆಕೇನೆ. ಎಷ್ಟೋ ಸಲ ನಾನೇ ಚೆನ್ನ ಅಂದುಕೊಂಡದ್ದೂ ಅವಳಿಗೆ ಸುಮಾರು ನಿಸಿದೆ! ಸ್ಪಷ್ಟವಾಗಿ ಹೇಳಿಬಿಡ್ತಾಳೆ. ನನ್ನ ಬದುಕಿನ ಎಲ್ಲ ಏರಿಳಿತಗಳಿಗೆ ಆಸರೆಯಾಗಿ ನಿಂತವಳು. ನ್ನೆಲ್ಲ ಕೀರ್ತಿ-ಸಾಧನೆಗಳ ಜೊತೆಗೆ ತಾನೂ ಹೆಜ್ಜೆ ಹಾಕಿದಾಳೆ. ಕೌಟುಂಬಿಕ ಸಂತೃಪ್ತಿಯ ಷಯದಲ್ಲಿ ನಾನು ಧನ್ಯನೇ ಸರಿ.

ಪ್ರ : ಮುಂದಿನ ಯೋಜನೆಗಳೇನು?

ಉ : ಹರಿದಾಸರ ರಚನೆಗಳನ್ನು ಮನಸ್ಸಿಗೆ ಬಂದ ರಾಗಗಳಲ್ಲಿ ಹಾಡುವುದು ರೂಢಿಯಾಗಿ ದರ ಗೌರವವೇ ಹಾಳಾಗಿಹೋಗಿದೆ. ಸಿನಿಮಾ ಮಟ್ಟುಗಳೂ ಈ ಸಾಹಿತ್ಯವನ್ನು ಆಕ್ರಮಿಸಿವೆ. ವುಗಳಿಂದ ದಾಸರ ರಚನೆಗಳ ಸ್ವರೂಪವೇ ನಾಶವಾಗಿಹೋಗುವುದರಲ್ಲಿ ಸಂದೇಹವೇ ಇಲ್ಲ.

ಸಂಗೀತದ ಭಾವಪುಷ್ಟಿಗೆ, ಅರ್ಥವ್ಯಕ್ತಿ ರಸಾನುಭೂತಿಗೆ ಸಾಹಿತ್ಯದ ಸಾಂಗತ್ಯ ಅಗತ್ಯ ಮತ್ತು ನಿವಾರ್ಯ. ಸಾಹಿತ್ಯವೆಂದರೆ ಶಬ್ದಾರ್ಥಗಳ ರಸಾತ್ಮಕವಾದ ಮಿಶ್ರಣ; ಅಂದರೆ ಭಾಷೆಯ ಎಲ್ಲ ಂಶಗಳ, ಎಲ್ಲ ಶಕ್ತಿಗಳ ಬಳಕೆ. ಸಾಹಿತ್ಯದಲ್ಲಿ ಮುಖ್ಯವಾಗಿ ಎರಡು ಭಾವಗಳು ಸ್ಫುರಿಸುತ್ತವೆ. ಂದು ಅಕ್ಷರಭಾವ, ಇನ್ನೊಂದು ಅರ್ಥಭಾವ. ಇದಲ್ಲದೆ ಭಾಷೆಯಲ್ಲಿಯೇ ಸಹಜವಾದ ನಾದ ಾಧುರ್ಯವುಂಟು. ಈ ಮಾಧುರ್ಯ ವ್ಯವಸ್ಥಿತವಾಗಿರಬೇಕು. ಈ ವ್ಯವಸ್ಥೆ ಪದಗಳ ಪಯೋಗದಲ್ಲೂ ವಾಕ್ಯರಚನೆಯಲ್ಲೂ ಕಂಡುಬರುತ್ತದೆ. ಸಂಗೀತಕ್ಕೆ ಮೊದಲು ಬೇಕಾದ್ದು ಕ್ಷರಭಾವ ಅಥವಾ ವರ್ಣಗುಣ. ಅಂದರೆ ಅಕ್ಷರದ ನಾದವು ಸಂಗೀತಕ್ಕೆ ಹೊಂದಿಕೊಳ್ಳು ವಾಗಬೇಕು. ಅರ್ಥ ಸಾಮಾನ್ಯವಾದರೂ ಚಿಂತೆಯಿಲ್ಲ. ಪ್ರಾಸ, ಪದಮೈತ್ರಿ, ಪ್ರತ್ಯಯಗಳು, ವು ಸಂಯೋಗವಾಗುವ ಬಗೆ, ಪದಗಳ ಔಚಿತ್ಯಪೂರ್ಣ ಆಯ್ಕೆ, ವಾಕ್ಯರಚನಾ ವೈಶಿಷ್ಟ್ಯ ಇವು ೊದಲು ಕಿವಿಗೆ ಸೊಗಸೆನಿಸಬೇಕು. ಅನಂತರ ಮೆಚ್ಚುಗೆ. ಕವಿ ಹೃದಯಕ್ಕೆ ಸಮಾನವಾದ ದಯ ಮತ್ತು ಸಂವೇದನೆಗಳನ್ನು ನಾವು ಹೊಂದಿದ್ದರೆ ಕವಿತೆಯ ಅಂತಸ್ಸತ್ವದ ಅನುಭವ ದೀತು. ಇದರಿಂದ ನಿಜವಾದ ಆಸ್ವಾದನಾನಂದ ಉಂಟಾಗುತ್ತದೆ.

''...ಗೇಯ ರಚನೆಗಳಲ್ಲಿ ಶಬ್ದಾನುಶಾಸನ ಜ್ಞಾನವೂ ಕವಿ ಹೃದಯವೂ ಭಾವ ಪರಿಜ್ಞಾನವೂ ರಬೇಕಾದುದು ಅಗತ್ಯ. ಕಾಲದೇಶ ಸ್ಥಿತಿಗಳ ಪ್ರಜ್ಞೆಯೂ ವಾಗ್ಗೇಯಕಾರನಿಗೆ ಇರಬೇಕಾದ ಣ. ರಚನೆಗಳಲ್ಲಿ ಕಲಾತ್ಮಕವಾದ ಹೊಸತನ ಮತ್ತು ಕಾವ್ಯತೆ ಸಹಜವಾಗಿಯೇ ಮೂಡಿ ರಬೇಕು. ತನ್ನದೇ ಆದ ಪ್ರತಿಭೆ ಮತ್ತು ಕಲ್ಪನೆಗಳಿಂದ ಗೇಯ ರಚನೆಗಳನ್ನು ಅಲಂಕರಿಸುವ ಮರ್ಥ್ಯ ಅತಿಶಯವಾಗಿ ಇರಬೇಕಾದ ಗುಣ...''

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮೊಟ್ಟಮೊದಲು ಬಳಕೆಯ ಭಾಷೆ, ಅಂದರೆ ಜನರು ಆಡುವ ಾತಿನ ಬಳಕೆಯನ್ನು ಮಾಡಿಕೊಂಡವರು ಶಿವಶರಣರು, ಮುಖ್ಯವಾಗಿ ವಚನಕಾರರು. ಆದರೆ ಈ ಜನಪದ ಭಾಷೆಯು ನಿಜಸ್ವರೂಪವನ್ನು ಕಳೆದುಕೊಳ್ಳದಂತೆ ಕಾಪಾಡಿಕೊಂಡು ಬಂದವರು ಹರಿದಾಸರು. ಇದು ಅವರ ಶಬ್ದ ಸಂಗ್ರಹದಿಂದಲೂ ಪದಪ್ರಯೋಗದಿಂದಲೂ ತಿಳಿದುಬರುತ್ತದೆ. ಸಂಧಿ, ಸಮಾಸ, ಪದಗಳ ರೂಪನಿಷ್ಪತ್ತಿ ಇತ್ಯಾದಿಗಳಲ್ಲಿ ವಿಶಿಷ್ಟ ವ್ಯಾಕರಣ ನಿಯಮಗಳನ್ನು ಅನುಸರಿಸಿಲ್ಲವೆಂಬುದು ಗೊತ್ತಾಗುತ್ತದೆ. ಹಾಡಿದ ಪದಬಂಧಕ್ಕೆ ತಕ್ಕಂತೆ, ರಾಗ ಸಂಚಾರಕ್ಕನುಗುಣವಾಗಿ ಭಾಷೆಯನ್ನು ಹೊಂದಿಸಿಕೊಂಡಿರುವುದು ದಾಸಸಾಹಿತ್ಯದ ವೈಶಿಷ್ಟ್ಯ. ಶಬ್ದಾಲಂಕಾರಗಳಲ್ಲಿ ಪ್ರಾಸ, ಅನುಪ್ರಾಸ, ಆದಿ, ಮಧ್ಯ ಮತ್ತು ಅಂತ್ಯ ಪ್ರಾಸ, ಯಮಕ ಮತ್ತು ಚಿತ್ರಾಲಂಕಾರಗಳು ವಿಶೇಷವಾಗಿ ಉಪಯೋಗವಾಗಿವೆ. ಅಲಂಕಾರಗಳು ಸುಳಾದಿಗಳಲ್ಲಿ ಬಹು ಆಕರ್ಷಕವಾಗಿ ಬರುತ್ತವೆ.

ದಾಸರ ಕೀರ್ತನೆಗಳನ್ನು ತ್ಯಾಗರಾಜ ಕೃತಿಗಳ ಧಾಟಿಯಲ್ಲಿ ಹಾಡಬೇಕೆಂಬ ಚಪಲದಿಂದ ಅದಕ್ಕೆ ಧಕ್ಕೆಯುಂಟಾಗಿದೆಯೇ ಹೊರತು ಅವುಗಳನ್ನು ಪೋಷಿಸಿದಂತಾಗುತ್ತಿಲ್ಲ. ಸಂಗೀತ ಹಿತಮಿತವಾಗಿದ್ದರೇನೇ ಅವುಗಳ ಸೊಬಗು ಎದ್ದುಕಾಣುವುದು. ಅನಾವಶ್ಯಕವಾಗಿ ಅವುಗಳ ಸಂಗೀತವನ್ನು ವೃದ್ಧಿಸುವುದರಿಂದ ಅದರ ಮೂಲ ಉದ್ದೇಶವೇ ನೆರವೇರುವುದಿಲ್ಲ.

''...ಕಲೆ ಪ್ರತಿಭಾ ಪ್ರಧಾನವಾದದ್ದು; ವಿದ್ಯೆ ಅಭ್ಯಾಸ ಪ್ರಧಾನವಾದದ್ದು. ಕಲೆಯಲ್ಲೂ ಪ್ರಾರಂಭಿಕ ಶಿಕ್ಷಣ ಮತ್ತು ಅಭ್ಯಾಸ ಅನಿವಾರ್ಯ. ಆದರೆ ಕಲಾಭ್ಯಾಸಿಯು ಕಲಾಪ್ರಪೂರ್ಣನಾಗಬೇಕಾದರೆ ಸ್ವಯಂ ಪ್ರತಿಭೆ, ಕಲ್ಪನೆ, ನೈಪುಣ್ಯ ಮತ್ತು ಅನ್ಯೈಪುಣ್ಯಗಳ ರಂಜನೀಯ ಪ್ರಕಟನಾ ಸಾಮರ್ಥ್ಯ– ಇವು ಬಹುಮುಖ್ಯ. ಇಂತಹ ಶ್ರೇಷ್ಠ ಕಲಾವಿದನನ್ನು, ಆತನ ಕಲೆಯನ್ನು ಗುರುತಿಸುವ ದೃಷ್ಟಿಯನ್ನು ನಾವು ಬೆಳೆಸಿಕೊಳ್ಳುವುದು ಮೊದಲನೆಯ ಕರ್ತವ್ಯ. ಪ್ರತಿಯೊಂದು ಕಲೆಗೂ ಅದರದೇ ಭಾಷೆ, ಅಂದರೆ ಅಭಿವ್ಯಕ್ತಿಸುವ ರೀತಿ ಇರುತ್ತದೆ. ಇದನ್ನು ನಾವು ಅರ್ಥಮಾಡಿಕೊಳ್ಳಬೇಕು. ಆಗಲೇ ಆ ಕಲೆಯ ರಸಗ್ರಹಣಕ್ಕೆ ದಾರಿಯಾದೀತು. ಜೊತೆಗೆ ವಿಮರ್ಶಾತ್ಮಕವಾದ ಚಿತ್ತವೃತ್ತಿಯನ್ನು ಬೆಳೆಸಿಕೊಳ್ಳುವುದು ಅಗತ್ಯ.''

ಜೀವನವು ಅನ್ವೇಷಣಾ ಪರಂಪರೆ; ಅಂದರೆ ಹುಡುಕುವುದು ಜೀವನದ ನಿತ್ಯವಿಧಿ. ಮನುಷ್ಯನೂ ಪ್ರಾಣಿಗಳೂ ತಮ್ಮ ಗುಣ ಕರ್ಮಗಳಿಗನು ಸಾರವಾಗಿ ಅವಸ್ಥಾಭೇದಗಳಿಗೆ ತಕ್ಕಂತೆ ಏನನ್ನಾದರೂ ಹುಡುಕುತ್ತಲೇ ಇರುವುವು. ಜೀವನವೂ ಅದರ ದೃಷ್ಟಿಯೂ ವಿಶಾಲವಾದಂತೆಲ್ಲಾ ಜೀವಿಗಳ ಅನ್ವೇಷಣೆಗಳೂ ದೃಷ್ಟಿಧ್ಯೇಯಗಳೂ ಬೆಳೆಯುವುವು...



ಶಾಸ್ತ್ರೀಯ ಸಂಗೀತದಲ್ಲಿ ಮತ್ತೆಲ್ಲ ಕಲೆಗಳಂತೆ ಬುದ್ಧಿಯಿಂದ ಗ್ರಹಿಸಬೇಕಾದ್ದನ್ನು ಮೊದಮೊದಲು ಮಾಡಲೇಬೇಕು. ಈ ಅವಧಿಯಲ್ಲಿ ರಸಾನುಭೂತಿ ಅಲ್ಪವೆ. ಇದು ಅಕ್ಷರಾಭ್ಯಾಸದ ಹಂತ ಇದ್ದ ಹಾಗೆ. ಬುದ್ಧಿಯಿಂದ ತಿಳಿಯಬೇಕಾದ್ದನ್ನು ತಿಳಿದು ಅರಗಿಸಿಕೊಂಡು ಸೌಂದರ್ಯೋಪಾಸನೆಯ ಮಾರ್ಗದಲ್ಲಿ ಮುಂದುವರಿಯಲು ಪ್ರಯತ್ನಿಸಿದರೆ ಕಲೆಯಲ್ಲಿಯ ರಸಾನುಭೂತಿಗೆ ಬೇಕಾದ ಅಂಶಗಳೆಲ್ಲಾ ಸ್ಫುರಿಸುತ್ತವೆ. ಮಸುಕಾಗಿದ್ದ ವಿಷಯಗಳೆಲ್ಲ ಮಿಂಚುತ್ತವೆ. ಸಪ್ಪೆಯಾಗಿ ಕಂಡುಬಂದವೆಲ್ಲಾ ರಸಮಯವಾಗುತ್ತವೆ. ಸಂಗೀತವು ಸ್ವತಂತ್ರವಾದ ನಾದಭಾಷೆ. ಶ್ರೇಷ್ಠ ಸಂಗೀತದ ಲಕ್ಷಣಗಳೆಂದರೆ – ಸುಸ್ವರ, ಸುರಸ, ಸುರಾಗ, ಮಧುರಾಕ್ಷರ, ಸಾಲಂಕಾರ-ಸಪ್ರಮಾಣ ಇತ್ಯಾದಿ. ಈ ಕಲೆಯ ಶರೀರವೇ ನಾದ, ಲಯವೇ ಜೀವ, ಭಾವವೇ ಅದರ ಹೃದಯ. ಸಂಗೀತದಲ್ಲಿ ನಾದ ರಚನೆಯ ಸೊಗಸೇ ಮುಖ್ಯಾಂಶ. ಸಂಗೀತವಾಗಲಿ, ನೃತ್ಯವಾಗಲಿ ಕಾಲದ ಹಿನ್ನೆಲೆಯಲ್ಲಿ ಹಾಗೂ ಒಂದು ಸಹಜವಾದ ಅನುಕ್ರಮಣಿಕೆಯಲ್ಲಿ ಮೂಡಿಬರುವ ಕಲೆ. ಸ್ವಲ್ಪ ಹೊತ್ತಿನವರೆಗೆ ಮೂಡಿದ ನಂತರ ಹಾಗೆಯೇ ಮಾಯವಾಗುವ ಸ್ವಭಾವವುಳ್ಳದ್ದು. ಆದರೆ ನಮ್ಮ ಸಂಸ್ಕಾರದಿಂದಾಗಿ ಈ ಕಲೆಗಳು ಒಂದು ಅನುಭವ ಕ್ಷೇತ್ರವನ್ನು ನಿರ್ಮಿಸಿಕೊಡುತ್ತವೆ.



ಸ್ವರವಿನ್ಯಾಸ ಪ್ರಧಾನವಾಗಿರುವ ಇಂದಿನ ಕಛೇರಿಗಳಲ್ಲಿ ಕೀರ್ತನೆಗಳನ್ನು ಅಚ್ಚುಕಟ್ಟಾಗಿ ಭಾವಪೂರಿತವಾಗಿ ಹಾಡುವ ಪದ್ಧತಿಯೇ ನಶಿಸಿಹೋಗುತ್ತಿದೆ. ಇದಕ್ಕೆ ಸ್ವಯಂ ಆಚಾರ್ಯಮನೋಭಾವವೇ ಕಾರಣವೋ? ಅಥವಾ ದುರ್ಲಭವಾಗುತ್ತಿರುವ ಸದ್ಗುರುವಿನ ಅನುಗ್ರಹವೋ? ವರ್ಣ, ಕೀರ್ತನೆ, ಪದ ಮೊದಲಾದ ರಚನೆಗಳ ಗಾಯನ ನೀರಸವಾಗಿ ದೋಷಗಳುಳ್ಳದ್ದಾಗಿಯೇ ಇರುವುದರಿಂದ ರಾಗಾಲಾಪನೆಯ ಕ್ರಮವೂ ಕೆಡುತ್ತಿದೆ. ನ್ಯಾಸಕ್ಕೆ ಯೋಗ್ಯವಲ್ಲದ ಸ್ವರಗಳನ್ನ ಹಿಡಿದು ರಾಗಾಲಾಪನೆ ಮಾಡುವುದು, ಅನೇಕ ಜನ್ಯ ರಾಗಗಳ ಸಂಚಾರವ್ಯಾಪ್ತಿ ಸೀಮಿತವಾಗಿದ್ದರೂ ತ್ರಿಸ್ಥಾಯಿಗಳಲ್ಲೂ ವಿಸ್ತರಿಸುವುದು, ರೂಪರಹಿತವಾಗಿ, ಅಖಂಡ ವಿಸ್ತರಣಕ್ಕೆ ಒದಗದ, ಹಾಡಲು ತೊಡಕಾಗಿರುವ ರಾಗಗಳಿಗೆ ಪ್ರಾಧಾನ್ಯ, ಇವೇ ಮೊದಲಾದ ಪ್ರವೃತ್ತಿಗಳು ಬಲಿಯುತ್ತಿವೆ. ಈ ಸ್ವೇಚ್ಛಾಚಾರ ಹೆಚ್ಚಿದಷ್ಟೂ ಅತ್ಯಲ್ಪ ಕಾಲದಲ್ಲೇ ನಮ್ಮ ಸಂಗೀತದ ಸುಸ್ವರೂಪ ಗುರುತು ಹಿಡಿಯಲಾಗದಷ್ಟು ವಿರೂಪವನ್ನು ಹೊಂದುವುದರಲ್ಲಿ ಸಂಶಯವೇ ಇಲ್ಲ.

**ಪ್ರ :** ಕೊನೆಯದಾಗಿ, ಇನ್ನೂ ಮುಂದೆ ನೀವು ಸಾಧಿಸಲೇಬೇಕೆಂದದ್ದು ಏನಾದರೂ ಇದೆಯೆ? ಸಂಗೀತ ಕ್ಷೇತ್ರದಲ್ಲಿ ಮಾತ್ರವಲ್ಲ, ಇತರ ಕ್ಷೇತ್ರಗಳಲ್ಲಿ ಸಹ.

**ಉ :** ಮೊದಲಿಗೆ ಸಂಗೀತದಲ್ಲಿ ಇನ್ನೂ ಹೆಚ್ಚಿನ ಮಟ್ಟಕ್ಕೇರಬೇಕೆಂಬ ಆಸೆ ಇದೆ. ಇರಲಿ. ಸಮಾಜದಿಂದ ನಾನು ಇಷ್ಟೊಂದು ಮಾನ್ಯತೆ ಪಡೆದಿರುವಾಗ, ಜನರು ನನ್ನನ್ನು ಇಷ್ಟು ಪ್ರೀತಿಯಿಂದ ಆದರಿಸಿರುವಾಗ ಸಮಾಜಕ್ಕೆ ನಾನು ಕೊಟ್ಟಿದ್ದೇನು? ಸಮಾಜಕ್ಕೆ ನನ್ನ ಕೈಲಾದ ಕಿಂಚಿತ್ ಕಾಣಿಕೆ ನೀಡಬೇಡವೇ? ಈ ದೃಷ್ಟಿಯಿಂದ ನನ್ನ ಟ್ರಸ್ಟ್‌ನಲ್ಲಿ ನನ್ನ ಹುಟ್ಟುಹಬ್ಬದ ದಿನ ನಾಲ್ಕು - ಐದು ಮಂದಿ ವಿದ್ವಾಂಸರಿಗೆ, ಸಮಾಜ ಸೇವಕರಿಗೆ, ಶಿಕ್ಷಣ ಕ್ಷೇತ್ರದಲ್ಲಿರುವವರಿಗೆ ಗೌರವ, ಸನ್ಮಾನ, ಹಾಗೆಯೇ ಮೈಸೂರಿನಲ್ಲಿರುವ ವೇದಶಾಸ್ತ್ರ ಪರಿಪಾಲನ ಸಭಾದಲ್ಲಿ ನನ್ನ ತಂದೆಯವರ ಹೆಸರಿನಲ್ಲಿ ಐದು ಮಂದಿ ವಿದ್ಯಾರ್ಥಿಗಳಿಗೆ ಊಟ ವಸತಿ ನೀಡಲು ನಿರ್ದಿಷ್ಟ ನಿಧಿಯನ್ನು ಇರಿಸಿದ್ದೇನೆ.

ಬೆಂಗಳೂರಿನಲ್ಲಿ ಒಂದು ವೃದ್ಧಾಶ್ರಮವಿದೆ. ಅಲ್ಲಿ ಐವತ್ತು ಅರುವತ್ತು ಮಂದಿ ಅನಾಥ ಮಕ್ಕಳಿದ್ದಾರೆ. ಹತ್ತು ಮಂದಿ ಹಿರಿಯರಿದ್ದಾರೆ. ಅವರಿಗೆ ವರಮಹಾಲಕ್ಷ್ಮಿ ಹಬ್ಬದ ದಿನ ಊಟ ನೀಡುವ ವ್ಯವಸ್ಥೆ ಇದೆ. ಮತ್ತು ನಮ್ಮ ಸಂಕೇತಿ ಸಂಘದಲ್ಲಿ ಐದು ಮಂದಿ ವಿದ್ಯಾರ್ಥಿಗಳಿಗೆ ನನ್ನ ಹುಟ್ಟುಹಬ್ಬದ ದಿನ ಊಟದ ವ್ಯವಸ್ಥೆ ಮಾಡಿದ್ದೇನೆ.

ಸಂಗೀತ ಕ್ಷೇತ್ರದಲ್ಲಿ ನನ್ನ ಹೆಸರಿನಲ್ಲಿ ಒಂದು ಪ್ರಶಸ್ತಿ ಸ್ಥಾಪಿಸಬೇಕೆಂಬ ಆಸೆ ಇದೆ. ಆದರೆ ಅದಕ್ಕೆ ಹೆಚ್ಚಿನ ಮೊತ್ತ ಅಗತ್ಯವಾಗುತ್ತದೆ. ಆಸೆ ಇದೆ.

'ನಮ್ಮಿಬ್ಬರದ್ದೂ ಯಾವುದಕ್ಕೂ ಹೆಚ್ಚು ತಲೆ ಕೆಡಿಸಿಕೊಳ್ಳೋ ಸ್ವಭಾವ ಅಲ್ಲದ್ದರಿಂದಲೋ ಏನೋ ಇಷ್ಟು ದೊಡ್ಡ ಸಂಸಾರ ನಿಭಾಯಿಸೋದು ಹೇಗಪ್ಪಾ ಅಂತ ನಾವು ಇವತ್ತಿನವರೆಗೂ ಎಂದೂ ತಲೆಮೇಲೆ ಕೈಹೊತ್ತು ಕೂರಲೇ ಇಲ್ಲ...'

ಸಂಗೀತಗಾರರ ಕೈ ಹಿಡಿದವಳಲ್ಲವಾ? ನಂಗೆ ಎಲ್ಲ ರಾಗಗಳ ಪರಿಚಯ ಇದೆ. ಸಂಗೀತವನ್ನು ಆಲಿಸಿ, ಅನುಭವಿಸಬಲ್ಲೆ. ಇವರ ಜೊತೆ ಎಲ್ಲ ಕಛೇರಿಗಳಿಗೂ ಹೋಗ್ತೀನಿ. ತಿರುವಾಂಕೂರು – ಮಧುರೆ, ಮುಂಬಯಿ, ಹೈದರಾಬಾದ್, ದೆಹಲಿ – ಹೀಗೆ ಇವರೆಲ್ಲಿಗೆ ಕಾರ್ಯಕ್ರಮಗಳನ್ನು ನೀಡಲು ಹೊರಟರೂ, ನಾನೂ ಅವರ ಹಿಂದೆ. ತಿರುಪತಿ ದೇವಸ್ಥಾನದಲ್ಲಿ ಇವರಿಗೆ 'ಆಸ್ಥಾನ ವಿದ್ವಾನ್' ಪ್ರಶಸ್ತಿ ನೀಡಿದಾಗ ನಂಗೆ ಸಂತೋಷದಿಂದ ಹೃದಯ ತುಂಬಿತ್ತು. ನಾಲ್ಕು ತಿಂಗಳ ಕಾಲ ಪೀಟ್ಸ್‌ಬರ್ಗ್‌ಗೆ ಹೋಗಿದ್ದಾಗಲೂ ನಾನವರನ್ನು ಹಿಂಬಾಲಿಸಿದ್ದೆ. ಮನೆಗೆ ಬಂದ ಮೇಲೆ 'ಇವತ್ತು ಕಛೇರಿ ಹೇಗಿತ್ತು' ಅಂತ ನನ್ನನ್ನೇ ಕೇಳ್ತಾರೆ. ಸಾಕಷ್ಟು ವಿಮರ್ಶೆ ಮಾಡ್ತೀನಿ. ಕೆಲವು ಚೆನ್ನ ಅನ್ನಿಸುತ್ತೆ. ಕೆಲವು ಸಲ ಸುಮಾರು ಅನ್ನಿಸುತ್ತೆ. ಆದರೆ ನಾನು ಏನೇ ಅಂದರೂ ಇವರಿಗೆ ಕೋಪವಿಲ್ಲ. ಸರಿಯಾದ ಭಾವನೆಯಿಂದಲೇ ನನ್ನ ಅಭಿಪ್ರಾಯಗಳನ್ನು ತಾಳ್ಮೆಯಿಂದ ಕೇಳಿಸಿಕೊಂಡು, ವಿವರಣೆಗಳನ್ನು ನೀಡುತ್ತಾರೆ. ಆದರೆ ಇವರ ಒಳ್ಳೆಯತನವನ್ನು ನಾನೆಂದೂ ದುರುಪಯೋಗಪಡಿಸಿಕೊಂಡಿಲ್ಲ...

ಇಷ್ಟೆಲ್ಲ ಇದ್ದರೂ ಇವರಿಗೆ ರಾಷ್ಟ್ರಮಟ್ಟದಲ್ಲಿ ಇನ್ನೂ ಹೆಚ್ಚಿನ ಮಾನ್ಯತೆ ದೊರೆಯಬೇಕಾಗಿತ್ತೇನೋ ಅಂತ ನನಗೆ ವೈಯಕ್ತಿಕವಾಗಿ ಅನ್ನಿಸದೆ ಇಲ್ಲ. ಇವರೆಂದೂ ಆಡಿ ತೋರಿಸಿಲ್ಲ. ನಮ್ಮನ್ನು ಕಂಡು ಕರುಬುವ ಜನ ಸಾಕಷ್ಟಿದ್ದಾರೆ ಅನ್ನೋದೂ ನನಗೆ ಗೊತ್ತಿದೆ... ನಮಗೂ ನೋವುಗಳು ಇಲ್ಲವೇ ಇಲ್ಲ ಅಂತೇನಿಲ್ಲ. ಆದರೆ ಅವು ನಮ್ಮನ್ನು ಆವರಿಸಿಕೊಂಡು ಹತಾಶೆಯುಂಟುಮಾಡಲು ನಾವು ಅವಕಾಶ ನೀಡಿಲ್ಲ, ಅಷ್ಟೆ.

– ಶ್ರೀಮತಿ ಮೈತ್ರೇಯಿ ಶ್ರೀಕಂಠನ್

# ರೈತರು, ಆತ್ಮಹತ್ಯೆಗಳು ಹಾಗೂ ಕೃಷಿ ದಿವಾಳಿತನ

## – ಒಂದು ಆತ್ಮಾವಲೋಕನ

■ ಡಾ॥ ರಾಜೇಂದ್ರ ಪೋದ್ದಾರ

**ಭಾ**ರತ ಹಾಗೂ ಕರ್ನಾಟಕ ರಾಜ್ಯದಲ್ಲಿ ಸಾವಿರಾರು ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ...ರ ಆತ್ಮಹತ್ಯೆಗಳನ್ನು ತಡೆಗಟ್ಟುತ್ತೇವೆಂದು ಸರಕಾರಗಳು ಮೇಲಿಂದ ಮೇಲೆ ಪ್ಯಾಕೇಜಗಳನ್ನು ...ೋಷಣೆ ಮಾಡುತ್ತಿದ್ದಾಗ್ಯೂ, ರಾಷ್ಟ್ರದ ಪ್ರಧಾನ ಮಂತ್ರಿಗಳು ಆತ್ಮಹತ್ಯೆಗಳ ಸ್ಥಳಗಳಿಗೆ ಖುದ್ದಾಗಿ ...ಟಿ ನೀಡಿದ ಮರುಕ್ಷಣದಲ್ಲೇ ಅನಾಹುತಗಳು ನಿಲ್ಲುತ್ತಿಲ್ಲ. ಕಾರಣಗಳೇನು ? ಈ ದುಃಸ್ಥಿತಿಯ ...ರಿತು ಆತ್ಮಾವಲೋಕನ ಇದೀಗ ಅತ್ಯವಶ್ಯಕವಾಗಿದೆ.

ಈ ಕಳವಳಕಾರಿ ಘಟನೆಯನ್ನು ಗಮನಿಸಿ. "ದಿನಾಂಕ ೧೪-೧೧-೨೦೦೬ ರಂದು ಸಿಂದಗಿ ...ಲೂಕಿನ ತಿಳಗುಳ ಗ್ರಾಮದ ಬಡ ರೈತ ಪ್ರಭುಗೌಡ ಭೀಮಪ್ಪ ಪಾಟೀಲ (೪೨) ಕೃಷಿ ಸಾಲದ ...ಧೆ ತಾಳಲಾರದೇ ಆತ್ಮಹತ್ಯೆ ಮಾಡಿಕೊಂಡಿದ್ದು, ವಿಜಾಪುರದ ರೈತ ಜಾಗೃತಿ ವೇದಿಕೆಯ ...ದಸ್ಯರು ಮೃತನ ಕುಟುಂಬಕ್ಕೆ ಭೇಟಿ ನೀಡಿ ವಸ್ತುಸ್ಥಿತಿಯನ್ನು ಅರಿತು, ಕುಟುಂಬಕ್ಕೆ ಧೈರ್ಯ ...ಂಬಿದರು. ಪತ್ನಿ, ಕುಟುಂಬ ಸದಸ್ಯರು ಹಾಗೂ ಗ್ರಾಮದ ಕಾರ್ಯಕರ್ತರ ಅಭಿಪ್ರಾಯ ...ಡೆಯಲಾಗಿ ಪ್ರಭುಗೌಡ ಮೂಲತಃ ಮುದ್ದೇಬಿಹಾಳ ತಾಲೂಕಿನ ಬಂಟನೂರ ...ಮದವರಾಗಿದ್ದು ಅವರಿಗೆ ಮೂರು ಎಕರೆ ಒಣ ಬೇಸಾಯದ ಭೂಮಿ ಇದೆ. ತಂದೆ, ತಾಯಿ, ...ಹೋದರರು ಹಾಗೂ ಸಹೋದರಿಯರ ದೊಡ್ಡ ಸಂಸಾರದ ಖರ್ಚಿನಿಂದ ತತ್ತರಿಸಿದ ಪ್ರಭುಗೌಡ ... ವರ್ಷಗಳ ಹಿಂದೆ ಪತ್ನಿಯ ತವರೂರಿಗೆ ಬಂದು ಬಾಡಿಗೆ ಮನೆಯಲ್ಲಿ ನೆಲೆಸಿ ಕೃಷಿ ಕೂಲಿ ...ಮಾಡಿಕೊಂಡಿದ್ದರು. ಪತ್ನಿ ಮಹಾದೇವಿಯ ತವರುಮನೆ ಇನ್ನೂ ಕಷ್ಟದ ಪರಿಸ್ಥಿತಿಯಲ್ಲಿದ್ದು ಮೂರು ...ಣ್ಣುಮಕ್ಕಳ ತಂದೆ ಚಹಾ ಅಂಗಡಿ ಮಾಡಿಕೊಂಡು, ಇಬ್ಬರು ವಿಧವೆ ಹೆಣ್ಣುಮಕ್ಕಳ ಜೀವನಕ್ಕೂ ...ಧಾರವಾಗಬೇಕಾದ ದುಃಸ್ಥಿತಿ. ಪ್ರಭುಗೌಡ ಮತ್ತು ಪತ್ನಿ ಮಹಾದೇವಿಗೆ ಕಾಸೀನಾಥ ಹತ್ತನೇ ...ರಗತಿಯಲ್ಲಿ ಓದುತ್ತಿರುವ ಒಬ್ಬನೇ ಮಗ ತನ್ನ ಹತ್ತನೆ ವಯಸ್ಸಿನಿಂದ ಹೃದಯ ಸಂಬಂಧೀ ...ರೋಗದಿಂದ ಬಳಲುತ್ತಿದ್ದಾನೆ. ಜೀವನೋಪಾಯಕ್ಕಾಗಿ ಪತ್ನಿ ಮಹಾದೇಪಿ ಒಂದು ಎಮ್ಮೆಯನ್ನು ...ಕಿಕೊಂಡಿದ್ದರೂ ಅದರಿಂದ ಹೆಚ್ಚಿನ ಆದಾಯವಿಲ್ಲ.

ಬಂಟನೂರಿನ ಮೂರು ಎಕರೆ ಭೂಮಿಯಲ್ಲಿ ನಾಲ್ಕು ವರ್ಷಗಳಿಂದ ಬೆಳೆಯಿಲ್ಲ. ಈ ವರ್ಷ ...ಳೆಯಾಗಿದ್ದರಿಂದ ಸಮಪಾಲಿನಂತೆ ಹಿಂಗಾರಿನಲ್ಲಿ ಕಡಲೆಯನ್ನು ಬಿತ್ತಲಾಗಿದೆ. ಬಂಟನೂರಿನಲ್ಲಿರುವಾಗಲೇ ಮೃತ ರೈತ ಸಹಕಾರಿ ಬ್ಯಾಂಕಿನಿಂದ ರೂ. ೨೦,೦೦೦ ಖಾಸಗೀ ಮೂಲಗಳಿಂದ ಸುಮಾರು ರೂ. ೨೫,೦೦೦ ಸಾಲ ಮಾಡಿಕೊಂಡಿದ್ದ. ತಿಳಗುಳಕ್ಕೆ ಬಂದ ನಂತರ ಅಲ್ಲಿಯೂ ಸುಮಾರು ರೂ. ೩೦,೦೦೦ ಖಾಸಗೀ ಸಾಲ ಪಡೆದಿದ್ದ. ಹೆಚ್ಚುತ್ತಿರುವ ಕೌಟುಂಬಿಕ ವೆಚ್ಚ ಒಂದೆಡೆ, ಆದಾಯವಿಲ್ಲದೇ ಭಾರವಾಗಿರುವ ಕೃಷಿ ಇನ್ನೊಂದೆಡೆ – ಈ ಸಂಕಷ್ಟದಲ್ಲಿ ಖಾಸಗೀ ಸಾಲಗಾರರ ಕಿರುಕುಳ. ಕೊನೆಗೆ, ಸಾಲ ತೀರಿಸಲು ತನ್ನ ಸ್ವಂತ ಜಮೀನನ್ನೇ ಮಾರಿ ಸಾಲ ತೀರಿಸುವುದಾಗಿ ಮಾವ ಹಾಗೂ ಪತ್ನಿಯೊಂದಿಗೆ ಪ್ರಸ್ತಾಪ ಮಾಡಿದ್ದ. ಒಣ ಜಮೀನಿಗೆ ಹೆಚ್ಚಿನ ಕಿಮ್ಮತ್ತು ಬರಲಾರದ ಅತಂತ್ರ ಪರಿಸ್ಥಿತಿ, ಜಮೀನು ಮಾರಿದರೂ ಸಾಲ ತೀರಲಾರದ ಭಯ, ಭಯ ಅತಂತ್ರಗಳ ತೊಳಲಾಟದ ಮಧ್ಯೆ ಬಂಟನೂರಿನ ಹೊಲದಲ್ಲಿಯ ಕಡಲೆ ಬೆಳೆಗೆ ಸಿಂಪಡಿಸಲು ತಂದ ಮೊನೊಕ್ರೊಟೊಫಾಸ್ ಕೀಟನಾಶಕವನ್ನು ಬೆಳೆಗೆ ಸಿಂಪಡಿಸುವ ಬದಲು ದಿನಾಂಕ ೧೪-೧೧-೨೦೦೬ ರಂದು ಮುಂಜಾನೆ ೧೧.೦೦ ಗಂಟೆಗೆ ತಾನೇ ಕುಡಿದು ಮಲಗಿದ್ದಾನೆ. ಬೆಳೆಯಲಾರದ ಹೊಲ, ನಿರಕ್ಷಕ ವಿಧವೆ, ಅನಾರೋಗ್ಯದಿಂದ ಬಳಲುತ್ತಿರುವ ಮಗ, ತೀರಲಾರದ ಸಾಲಗಳನ್ನು ತೊರೆದು ಭಾರತದ ಕೃಷಿ ಹಾಗೂ ಗ್ರಾಮೀಣ ಪ್ರದೇಶಗಳ ದಿವಾಳಿತನಗಳಿಗೆ ಸಾಂಕೇತಿಕ ಪ್ರತಿಭಟನೆಯನ್ನು ತೋರಿದ್ದಾನೆ ಈ ದೇಶದ ಮತ್ತೊಬ್ಬ ದುರ್ದೈವಿ ರೈತ. ಕೃಷಿ ಹಾಗೂ ಗ್ರಾಮೀಣ ಬದುಕಿನ ದಿವಾಳಿತನಕ್ಕೆ ಇದೊಂದು ನಿದರ್ಶನ ಮಾತ್ರ.

ಇಂತಹ ರೈತರ ಆತ್ಮಹತ್ಯೆಗಳಿಗೆ ಸಂಬಂಧಿಸಿದಂತೆ ಅನೇಕ ಸಂಶಯಾಸ್ಪದ ಪ್ರಶ್ನೆಗಳು ಉದ್ಭವಿಸುವುದು ಸಹಜ. ಕೃಷಿ ದುಃಸ್ಥಿತಿಯೇ ರೈತರ ಆತ್ಮಹತ್ಯೆಗಳಿಗೆ ನೈಜ ಕಾರಣವೇ ಅಥವಾ ಇನ್ನಾವುದೇ ಸಾಮಾಜಿಕ ಮನೋವೈಜ್ಞಾನಿಕ ಕಾರಣಗಳಿರಬಹುದೇ ಅಥವಾ ಇದೊಂದು ರಾಜಕೀಯ ಹುನ್ನಾರವಾಗಿರ ಬಹುದೇ ? ಅತೀ ಉನ್ನತ



ಮಟ್ಟದ ನೀತಿ ನಿರೂಪಕರೂ ಕೂಡ ಸಮಸ್ಯೆಗೆ ಮೂಲ ಕಾರಣವೇನೆಂಬುದು ತಮಗೆ ಅರ್ಥವಾಗುತ್ತಿಲ್ಲವೆಂದಾಗ ಅವರ ತಾತ್ಸಾರದ ಮನೋಧರ್ಮ ಎದ್ದುಕಾಣುತ್ತದೆ. ಅಂಗೈ ಹುಣ್ಣಿಗೆ ಕನ್ನಡಿ ಬೇಕೆ ? ಪಟ್ಟಣ ಪ್ರದೇಶಗಳಲ್ಲಿ ಐಷಾರಾಮೀ ಜೀವನಶೈಲಿಯ ಜನ ಇಂತಹ ಘಟನೆಗಳನ್ನು ಕಂಡು ಮೂಗು ಮುರಿದದ್ದುಂಟು. ಆದರೆ ಸತ್ಯ ಏನೆಂದು ತಿಳಿದು ನೋಡಲು ಅವರು ಹಳ್ಳಿಗಳಿಗೆ ಬರಲಿ.

ಹತ್ತು ಯಶಸ್ವೀ ಪಂಚವಾರ್ಷಿಕ ಯೋಜನೆಗಳನ್ನು ಪೂರೈಸಿ ಹನ್ನೊಂದನೇ ಯೋಜನೆಯ ಕರಡನ್ನು ಕೈಯಲ್ಲಿ ಹಿಡಿದಿರುವ ಇಂಡಿಯಾ ದೇಶ ತನ್ನ ಗ್ರಾಮೀಣ ಪ್ರದೇಶದ ಬಡ ರೈತನನ್ನು ಕಂಡದ್ದು ಹೇಗೆ ? ರಾಷ್ಟ್ರದಲ್ಲಿಯೇ ಪ್ರಗತಿಪರ ರಾಜ್ಯಗಳಲ್ಲೊಂದಾದ ಕರ್ನಾಟಕದಲ್ಲಂತೂ ೧೯೯೦ರಿಂದ ರೈತರ ಆತ್ಮಹತ್ಯೆ ಪ್ರಕರಣಗಳು ಹೈದರಾಬಾದ್-ಕರ್ನಾಟಕದಲ್ಲಿ ಬೆಳಕಿಗೆ ಬಂದಿದ್ದರೂ ಅವುಗಳನ್ನು ನಿರ್ಲಕ್ಷಿಸಲಾಯಿತು. ಈ ಪ್ರಕರಣಗಳು ೧೯೯೭-೯೮ರ ನಂತರವೇ ಸರಕಾರ, ಶಾಸನಸಭೆ ಹಾಗೂ ಮಾಧ್ಯಮಗಳ ಲಕ್ಷ್ಯ ಸೆಳೆದವು. ಅಲ್ಲಿಂದ ೨೦೦೬ರಲ್ಲಿ ಪ್ರಭುಗೌಡ ಪಾಟೀಲರ ಆತ್ಮಹತ್ಯೆಯವರೆಗೆ ಸಾವಿರಾರು ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಕರ್ನಾಟಕದಲ್ಲಿ ರೈತ ಆತ್ಮಹತ್ಯೆಗಳ ಅಧ್ಯಯನ ಮಾಡಲು ನೇಮಿಸಿದ ಡಾ|| ವೀರೇಶ ವರದಿಯ ಪ್ರಕಾರ ೧೯೯೬-೨೦೦೦ ಅವಧಿಯಲ್ಲಿ ರಾಜ್ಯದಲ್ಲಿ ಒಟ್ಟು ೧೦,೯೫೯ ರೈತರು ಸಾವನ್ನಪ್ಪಿದ್ದಾರೆ (೮,೭೨೮ ಗಂಡು ಹಾಗೂ ೨,೨೩೧ ಹೆಣ್ಣು). ೨೦೦೦-೨೦೦೩ರ ಮಾಧ್ಯಮ ವರದಿಗಳ ಪ್ರಕಾರ ಕನಿಷ್ಠ ೩,೦೦೦ ರೈತರು ಆತ್ಮಹತ್ಯೆಗೆ ಶರಣಾಗಿದ್ದರು. ವರ್ಷ ೨೦೦೩ ಅತೀ ನಿಕೃಷ್ಟ ಪರಿಸ್ಥಿತಿಯಾಗಿದ್ದು ಪ್ರತಿ ವಾರಕ್ಕೆ ನಾಲ್ಕು ಜನ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದರು. ವಿಶೇಷವಾಗಿ ೨೦೦೩ರ ಆಗಸ್ಟ್ - ಸೆಪ್ಟೆಂಬರ್ ಅವಧಿ ತೀರಾ ಕಳವಳಕಾರಿಯಾಗಿತ್ತು. ಮೊದಮೊದಲು ರೈತ ಆತ್ಮಹತ್ಯೆಗಳು ಕೃಷಿಗೆ ಸಂಬಂಧಿಸಿದ್ದವುಗಳಲ್ಲ ಎಂದು ವಾದ ಮಾಡಿದ ಸರಕಾರ ೨೦೦೩-೦೪ರ ಹೊತ್ತಿಗೆ ಸತ್ಯವನ್ನು ಒಪ್ಪಿಕೊಳ್ಳಲೇಬೇಕಾಯಿತು. ಸರ್ಕಾರದ ಅಂಕಿಅಂಶಗಳ ಪ್ರಕಾರ ೨೦೦೩-೦೪ರಲ್ಲಿ ೭೦೮, ೨೦೦೪-೦೫ರಲ್ಲಿ ೨೭೧, ೨೦೦೫-೦೬ರಲ್ಲಿ ೧೪೩ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆಂಬ ಸತ್ಯವನ್ನು ಸರಕಾರವೇ ಹೊರಗೆಡಹಬೇಕಾಯಿತು. ೨೦೦೨ರಲ್ಲಿ ರೈತ ಆತ್ಮಹತ್ಯೆಗಳನ್ನು 'ವೈಜ್ಞಾನಿಕವಾಗಿ' ಅಧ್ಯಯನ ಮಾಡಲು ನೇಮಕಗೊಂಡ ಡಾ|| ವೀರೇಶ ಸಮಿತಿ ''typical social factors like family composition, failure of social institutions, habits, alcoholism, introvert nature and intra family problems were some of the ulcerating issues that have affected the victims to take to such an extreme step'' ಎಂದು ವರದಿ ಮಾಡಿತ್ತು.

ರೈತಾಪಿ ದಿವಾಳಿತನಕ್ಕೆ ಸಾಂಕೇತಿಕವಾದ ರೈತ ಆತ್ಮಹತ್ಯೆಗಳನ್ನು ಈ ರೀತಿ ಪರಿಗಣಿಸಿದ್ದ ವರದಿಯು ರೈತ ವಿರೋಧಿ ಎಂದು ಸಾರ್ವಜನಿಕರ ಆಕ್ರೋಶಕ್ಕೆ ಗುರಿಯಾಗಬೇಕಾಯಿತು. ನಂತರದ ದಿನಗಳಲ್ಲಿ ಆತ್ಮಹತ್ಯೆಗಳು ರಾಷ್ಟ್ರಾದ್ಯಂತ ಹೆಚ್ಚಿದಾಗ ವಿಶೇಷವಾಗಿ ಆಂಧ್ರಪ್ರದೇಶ, ಕೇರಳ ಹಾಗೂ ಮಹಾರಾಷ್ಟ್ರ ರಾಜ್ಯಗಳಲ್ಲಿ ನಡೆದ ಅಧ್ಯಯನಗಳ ನಂತರ ಅನೇಕ ತಜ್ಞರು ರೈತರ ಆತ್ಮಹತ್ಯೆಗಳು ಕೃಷಿ ದಿವಾಳಿತನದ ನೇರ ಅಭಿವ್ಯಕ್ತಿ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ರೈತರ ಆತ್ಮಹತ್ಯೆಗಳು ಕೇವಲ ಕರ್ನಾಟಕಕ್ಕೆ ಸೀಮಿತವಾಗಿರದೇ ರಾಷ್ಟ್ರದ 'ಅನ್ನದ ತಟ್ಟೆ' ಎಂದೇ ಹೆಸರಾಗಿದ್ದ ಪಂಜಾಬನ್ನೂ ಪೀಡಿಸಿರುವುದು ನೀತಿ ನಿರೂಪಕರಿಗೆ ಎಚ್ಚರಿಕೆಯ ಗಂಟೆಯಾಗಬೇಕಾಗಿದೆ. ಕೇಂದ್ರ ಸರಕಾರದ ಗೃಹ ಖಾತೆಯು ಸಂಸತ್ತಿನಲ್ಲಿ ತಿಳಿಯಪಡಿಸಿರುವಂತೆ ೧೯೯೫ ಹಾಗೂ ೨೦೦೩ರ ಅವಧಿಯಲ್ಲಿ ದೇಶದಲ್ಲಿ ಒಟ್ಟಾರೆ ೯.೨೬ ಲಕ್ಷ ರೈತರು ಅಸು ನೀಗಿದ್ದಾರೆ. ೨೦೦೫-೦೬ರಲ್ಲಿ ಕರ್ನಾಟಕದಲ್ಲಿ ೫,೯೧೦, ಆಂಧ್ರ ಪ್ರದೇಶದಲ್ಲಿ ೧,೮೩೫, ಮಹಾ ರಾಷ್ಟ್ರದಲ್ಲಿ ೯೮೧, ಕೇರಳದಲ್ಲಿ ೨೦೧ ಜನ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. ರೈತ ಆತ್ಮಹತ್ಯೆಗಳು ಜಗತ್ತಿನಾದ್ಯಂತವೂ ಘಟಿಸಿವೆ. ಈ ಪ್ರಕರಣಗಳು ಜಾಗತಿಕವಾಗಿದ್ದರೂ ಅವುಗಳ ಸ್ವರೂಪ ಹಾಗೂ ಪ್ರಮಾಣ ರಾಷ್ಟ್ರದಿಂದ ರಾಷ್ಟ್ರಕ್ಕೆ ಭಿನ್ನವಾಗಿದೆ. ೧೯೩೦ರ ಗ್ರೇಟ್ ಡಿಪ್ರೆಶನ್ ಅವಧಿಯಲ್ಲಿ ಅಮೆರಿಕಾದಲ್ಲಿ ಅನೇಕ ರೈತರು ಸಾವನ್ನಪ್ಪಿದ್ದಾರೆ. ೧೯೮೦ರ ದಶಕದಲ್ಲಿ ಇಂಗ್ಲೆಂಡಿನಲ್ಲಿ ಕೃಷಿ ದುಃಸ್ಥಿತಿಯಿಂದಾಗಿ ರೈತರು ಆತ್ಮಹತ್ಯೆ ಮಾಡಿಕೊಂಡ ವರದಿಗಳಿವೆ. ಅದೇ ರೀತಿ ಚೀನಾ, ಮಲೇಶಿಯಾ, ಬಾಂಗ್ಲಾ ದೇಶ, ಪಾಕಿಸ್ತಾನಗಳಲ್ಲೂ ರೈತರ ಆತ್ಮಹತ್ಯೆ ಪ್ರಕರಣಗಳು ದಾಖಲಾಗಿವೆ. ಶ್ರೀಲಂಕಾ ದೇಶವಂತೂ ಗರಿಷ್ಠ ದರದ ರೈತ ಆತ್ಮಹತ್ಯೆಗಳಿಗಾಗಿ ಕುಖ್ಯಾತಿಯನ್ನು ಪಡೆದಿದೆ.

ಈ ಹಿನ್ನೆಲೆಯಲ್ಲಿ ರೈತರ ಆತ್ಮಹತ್ಯೆಗಳನ್ನು ಸಮಗ್ರವಾಗಿ ಗ್ರಾಮೀಣ, ಕೃಷಿ ಬಡಜನತೆಯ ದಿವಾಳಿತನದ ಸಂಕೇತವೆಂದು ಪರಿಗಣಿಸಿ ಅಧ್ಯಯನ ಮಾಡಿ, ಪರಿಹಾರ ಕಂಡುಕೊಳ್ಳುವ ಅವಶ್ಯಕತೆ ಇದೆ. ವಿವಿಧ ಅಧ್ಯಯನ ತಂಡಗಳು ವಿವಿಧ ರೀತಿಯ ಅಭಿಪ್ರಾಯಗಳನ್ನು ಮಂಡಿಸಿವೆ. ವಿದ್ಯಾಸಾಗರ ಹಾಗೂ ಸುಮನಚಂದ್ರ ಎಂಬುವರು ತಮ್ಮ ೨೦೦೪ರ ಆಂಧ್ರ ಹಾಗೂ ಕರ್ನಾಟಕ ರಾಜ್ಯಗಳ ಅಧ್ಯಯನದ ಪ್ರಕಾರ ರೈತರ ಆತ್ಮಹತ್ಯೆಗಳಿಗೆ ಸಾಲದ ಹೊರೆಯೇ ಮೂಲ ಕಾರಣವೆಂದು ಆರೋಪಿಸಿದ್ದಾರೆ. ವಿಜಯಕುಮಾರ (೨೦೦೫) ಅವರು ಬೆಳೆಹಾನಿ ಹಾಗೂ ಕೃಷಿ ಉತ್ಪನ್ನಗಳಿಗೆ ಸೂಕ್ತ ಬೆಲೆ ದೊರೆಯದಿರುವುದೇ ರೈತರ ಆತ್ಮಹತ್ಯೆಗಳಿಗೆ ಕಾರಣಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಅಸಾದಿ (೨೦೦೫)ಯವರು ರಾಜನೀತಿ ದೃಷ್ಟಿಕೋನದಿಂದ ರೈತರ ಆತ್ಮಹತ್ಯೆಗಳನ್ನು ವಿಶ್ಲೇಷಿಸಿ ಕೃಷಿ ದಿವಾಳಿತನಕ್ಕೆ ಹತಾಶ ರೈತನ ಪ್ರತಿಭಟನೆ ಎಂದು ಬಣ್ಣಿಸಿದ್ದಾರೆ. ಕೇರಳದ ರೈತಾಪಿ ಸಮಸ್ಯೆಗಳ ಅಧ್ಯಯನ ನಡೆಸಿದ ಕುಮಾರ ಮತ್ತು ಶರ್ಮಾ (೨೦೦೫) ಕೃಷಿ ದುಃಸ್ಥಿತಿಯೇ ರೈತರು ಆತ್ಮಹತ್ಯೆಗಳಿಗೆ ಮೂಲ ಕಾರಣ ಎಂದು ತಿಳಿಸಿದ್ದಾರೆ. ಮಹಾರಾಷ್ಟ್ರದ ವಿದರ್ಭ ಇತ್ತೀಚೆಗಂತೂ ರೈತರ ಆತ್ಮಹತ್ಯೆಗಳ ತಾಣವಾಗಿದೆ. ಮೊಹಾಂತಿಯವರ ಅಧ್ಯಯನ ವರದಿಯ ಪ್ರಕಾರ ವಿದರ್ಭದಲ್ಲಿ ಬೆಳೆ ಹಾನಿ, ಹೆಚ್ಚಾದ ಉತ್ಪಾದನಾ ವೆಚ್ಚ ಹಾಗೂ ಕೃಷಿ ಸಾಲಗಳೇ ಪ್ರಮುಖ ಕಾರಣಗಳು. ಕೃಷಿ ಸಮೃದ್ಧಿಯ ತಾಣವಾಗಿದ್ದ ಪಂಜಾಬಿನಲ್ಲಿ ಐಯರ್ ಹಾಗೂ ಮಾಣಿಕ್ (೨೦೦೦) ಅವರ ಅಧ್ಯಯನದ ಪ್ರಕಾರ ಕೃಷಿ ಸಾಲವೇ ಪ್ರಮುಖ ಆರೋಪಿ. ಇದೇ ರೀತಿ ಕೃಷ್ಣಪ್ರಸಾದ ಮತ್ತು ಜಾರ್ಜ್ (೨೦೦೫), ಮಿಶ್ರಾ (೨೦೦೬), ನಾಗರಾಣ ಹಾಗೂ ಪೋದ್ದಾರ (೨೦೦೬) ಇವರುಗಳ ವೈಜ್ಞಾನಿಕ ವಿಶ್ಲೇಷಣೆಗಳು ರೈತರ ಆತ್ಮಹತ್ಯೆಗಳಿಗೆ ಕೃಷಿ ಸಾಲ ಹಾಗೂ ಕೃಷಿ ದಿವಾಳಿತನಗಳೇ ಕಾರಣಗಳೆಂಬ ವಾದವನ್ನು ಸಮರ್ಥಿಸಿವೆ.

ಈ ಅಧ್ಯಯನ ವರದಿಗಳ ಸಾರವನ್ನು ವಿಶ್ಲೇಷಿಸಿದಾಗ ಬೆಳೆ ಹಾನಿ, ಹೆಚ್ಚಾದ ಉತ್ಪಾದನಾ ವೆಚ್ಚ, ಲಾಭದಾಯಕವಲ್ಲದ ಉತ್ಪನ್ನ ಬೆಲೆಗಳು ರೈತನ ಸಾಲವನ್ನು ಹೆಚ್ಚಿಸಿವೆ ಎಂದು ಎದ್ದುಕಾಣುತ್ತದೆ. ನಾವೀಗ ಕೃಷಿ ಸಾಲ ಒಟ್ಟಾರೆ ಸಮಸ್ಯೆಯ ಮೂಲವೆಂದು ನಿರ್ಧರಿಸಬಹುದು. ಆದರೆ ರೈತ ಸಾಲವನ್ನೇಕೆ ಮಾಡುತ್ತಾನೆ ಎಂಬ ಪ್ರಶ್ನೆ ಪ್ರಮುಖವಾಗುತ್ತದೆ. ತಲೆತಲಾಂತರಗಳಿಂದ ಬಂದ ಸಾಂಪ್ರದಾಯಿಕ ಕೃಷಿ ವ್ಯವಸ್ಥೆ ಸ್ಥಾನಪಲ್ಲಟವಾಗಿ ಅತೀ ಲಾಭದ ಆಮಿಷದಿಂದ ಆಧುನಿಕ ಕೃಷಿ ತಂತ್ರಜ್ಞಾನವನ್ನು ಕೃಷಿಕನ ತಲೆ ಮೇಲೆ ಹೇರಿದಂತಾಗಿದೆ. ಆಧುನಿಕ ಕೃಷಿ ತಂತ್ರಜ್ಞಾನ ಸ್ವತಃ ದೋಷಪೂರಿತವೇನಲ್ಲದಿದ್ದರೂ ತಂತ್ರಜ್ಞಾನದ ಒಡೆತನ ಯಾರದು ಎಂಬ ಪ್ರಶ್ನೆ ಬಹು ಮುಖ್ಯ. ಆಧುನಿಕ ಕೃಷಿ ತಂತ್ರಜ್ಞಾನದ ಅನ್ವೇಷಣೆಯ ಮೂಲ ಆಶಯ ರೈತಸಮುದಾಯದ ಕಲ್ಯಾಣವಾಗಿದ್ದರೂ ನಾವದನ್ನು ಸಾಧಿಸಿದ್ದೇವೆಯೇ ?

ಆಧುನಿಕ ತಂತ್ರಜ್ಞಾನದಲ್ಲಿ ಬಳಕೆಯಾಗುವ ಮಾನವ ನಿರ್ಮಿತ ಪರಿಕರಗಳ ಸರಬರಾಜು ಇಂದು ರೈತಾಪಿ ವರ್ಗವನ್ನು ಶೋಷಣೆ ಮಾಡುವವರ ಹಾಗೂ ಬಹುರಾಷ್ಟ್ರೀಯ ಕಂಪನಿಗಳ ಕೈಯಲ್ಲಿ ಭದ್ರವಾಗಿದೆ. ಸಾಂಪ್ರದಾಯಿಕ ಸಂಪನ್ಮೂಲಗಳನ್ನು ನಾಶಮಾಡಿ ಕೃತಕ ಸಂಪನ್ಮೂಲಗಳು ಹಾಗೂ ವಿಧಾನಗಳ ಬಳಕೆಯ ಮೂಲಕ ರೈತ ಸದಾಕಾಲ ಧಣಿಗಳು ಮತ್ತು ಕಂಪನಿಗಳ ಅಡಿಗಳಲ್ಲಿ ನರಳುವಂತಹ ವ್ಯವಸ್ಥೆ ನಿರ್ಮಾಣ



ದೆ. ಕೃಷಿ ಹಾಗೂ ಗ್ರಾಮೀಣ ಪ್ರದೇಶಗಳ ದಿವಾಳಿತನಕ್ಕೆ ನಿರಂತರವಾಗಿ ರ್ತನಿರತವಾದ 'ವಿಷವರ್ತುಲ'ವೊಂದಿದೆ. ಈ ವಿಷವರ್ತುಲದಲ್ಲಿ ಒಂದೆಡೆ ದಲ್ಲಿ ಹೆಚ್ಚಾಗುತ್ತಿರುವ ಕೃಷಿ ಉತ್ಪಾದನಾ ವೆಚ್ಚ, ಇನ್ನೊಂದೆಡೆ ತಗ್ಗುತ್ತಿರುವ ವರಿ, ಉತ್ಪಾದನೆ ಹಾಗೂ ಆದಾಯಗಳಿವೆ. ಕೃಷಿಯಲ್ಲಿ ಸಾಕಷ್ಟು ಪ್ರಗತಿಯನ್ನು ಸಿದಂತಹ ಪಂಜಾಬಿನಲ್ಲೂ ಕೂಡ ಕೃಷಿ ಇಳುವರಿ ಕುಂಠಿತವಾಗಿ ರೈತರ ವಾಂತ ಶೀಘ್ರವಾಗಿ ಇಳಿಮುಖವಾಗುತ್ತಿದೆ ಎಂದು ಸಿಂಗ್ ಮತ್ತು ಕಾಲಾರ ೦೦೧) ಎಂಬುವರು ವಾದ ಮಾಡುತ್ತಾರೆ. ಕುಂಠಿತ ಕೃಷಿ ಉತ್ಪಾದನಾ ವಟಿಕೆಗಳಿಂದ ನಿವ್ವಳ ಲಾಭ ದೊರೆಯದೇ ಕೃಷಿ ಉದ್ದಿಮೆ ಋಣಾತ್ಮಕ ುತ್ತದೆ. ಈ ಕೊರತೆಯನ್ನು ತುಂಬಿಕೊಳ್ಳಲು ರೈತ ಸಾಲದ ಮೊರೆಹೋಗ ಾಗುತ್ತದೆ. ಸಾಂಸ್ಥಿಕ ಮೂಲಗಳಿಂದ ಸಾಲ ಕಷ್ಟಸಾಧ್ಯವಾದಾಗ ಖಾಸಗಿ ಸಾಲ ಯಬೇಕಾಗುತ್ತದೆ. ಖಾಸಗಿ ಸಾಲದ ಅನಾಹುತಕಾರಿ ಬಡ್ಡಿ ದರ (ಶೇ. ೬೦ರಷ್ಟು), ಬಡ್ಡಿ ಇವೆಲ್ಲವುಗಳಿಂದ ಸಾಲ ತೀರಿಸಲಾಗದೇ ತೊಳಲಾಡಬೇಕಾಗುತ್ತದೆ.

೨೦೦೫ರ ಎನ್‌ಎಸ್‌ಎಸ್‌ಓ ಅಂಕಿಅಂಶಗಳ ಪ್ರಕಾರ ರಾಷ್ಟ್ರದಲ್ಲಿ ರೈತರ ತಲಾವಾರು ಸುಮಾರು ರೂ. ೧೨, ೫೮೫ ಇದ್ದು ಇದು ಪಂಜಾಬಿನಲ್ಲಿ (ರೂ. ೪೧,೫೭೬), ಳದಲ್ಲಿ (ರೂ. ೩೩,೯೦೭), ಹರ್‍ಯಾಣದಲ್ಲಿ (ರೂ. ೨೬,೦೦೭), ಆಂಧ್ರಪ್ರದೇಶ (ರೂ. ೨೩,೯೬೫). ಅದರಂತೆ, ಕರ್ನಾಟಕದ ಪ್ರತಿ ರೈತನ ಸಾಲ ಸುಮಾರು ೧೮,೧೩೫. ದೇಶದ ಬೇರೆ ಬೇರೆ ರಾಜ್ಯಗಳಲ್ಲಿಯ ಕೃಷಿ ಸಾಲದ ಪ್ರಮಾಣವನ್ನು ನಿಸಿದಾಗ ಆಂಧ್ರಪ್ರದೇಶದಲ್ಲಿ ಪ್ರತಿಶತ ೮೨ರಷ್ಟು, ತಮಿಳುನಾಡಿನಲ್ಲಿ ಶೇ. ೭೫, ಜಾಬಿನಲ್ಲಿ ಶೇ. ೬೫, ಕೇರಳದಲ್ಲಿ ಶೇ. ೬೭ ರೈತರು ಸಾಲಗಾರರಾಗಿದ್ದಾರೆಂದು ದುಬರುತ್ತದೆ. ಕರ್ನಾಟಕದಲ್ಲಿಯೂ ಕೂಡ ಸುಮಾರು ೬೨ ಪ್ರತಿಶತದಷ್ಟು ರೈತರು ದ ಹೊರೆಯನ್ನು ಹೊತ್ತಿದ್ದಾರೆ. ರಾಷ್ಟ್ರೀಯ ಸರಾಸರಿ ಸಾಲಗಾರರ ಪ್ರಮಾಣ ಶೇ. ರಷ್ಟಿದೆ. ಈ ಎಲ್ಲ ಅಂಕಿಅಂಶಗಳು ಸರಕಾರಿ ಮೂಲಗಳಿಂದಿದ್ದು ಇನ್ನು ಯಾವುದೇ ಮೀಣ ಪ್ರದೇಶದ ಸರ್ಕಾರೇತರ ಪ್ರತ್ಯಕ್ಷದರ್ಶಿ ವರದಿಗಳು ತಿಳಿಸುವಂತೆ ಈ ಮಾಣ ಇನ್ನೂ ಹೆಚ್ಚಿನ ಪ್ರಮಾಣದಲ್ಲಿದೆ.

ಇದಲ್ಲದೆ ಕೃಷಿ ದಿವಾಳಿತನಕ್ಕೆ ಪೂರಕವಾದ ಇನ್ನೂ ಅನೇಕ ಕಾರಣಗಳುಂಟು. ಶದಲ್ಲಿ ಹಾಗೂ ಕರ್ನಾಟಕದಲ್ಲಿ ಕೃಷಿ ಹಾಗೂ ಗ್ರಾಮೀಣ ಮೂಲಭೂತ ಡವಾಳ ಹೂಡಿಕೆ ವರ್ಷದಿಂದ ವರ್ಷಕ್ಕೆ ಇಳಿಮುಖವಾಗಿದೆ. ಅದರಲ್ಲೂ ರ್ವಜನಿಕ ಬಂಡವಾಳ ಹೂಡಿಕೆ ಪ್ರಮಾಣ ಶೀಘ್ರಗತಿಯಲ್ಲಿ ಇಳಿದಿದೆ. ತಂತ್ರ್ಯಾನಂತರದಿಂದ ೭೦ರ ದಶಕದವರೆಗೆ ಹೆಚ್ಚಾಗುತ್ತ ಹೋದ ಬಂಡವಾಳ ಡಿಕೆ ೧೯೮೦ರ ಈಚೆಗೆ ಶೀಘ್ರಗತಿಯಲ್ಲಿ ಇಳಿದಿದೆ. ೧೯೮೦-೮೧ರಲ್ಲಿ ಕೃಷಿಯಲ್ಲಿ ಡವಾಳ ಹೂಡಿಕೆ ದೇಶದ ಒಟ್ಟಾರೆ ಬಂಡವಾಳ ಹೂಡಿಕೆಯ ಶೇ. ೧೫.೩ರಷ್ಟು ದ್ದು ೧೯೯೨-೯೩ರಲ್ಲಿ ಕೇವಲ ಶೇ. ೬ಕ್ಕೆ ಕುಸಿದಿದೆ. ಇದರಿಂದಾಗಿ ಸುಲಭವಾಗಿ ರೆಯಬಹುದಾದ ಮೂಲಭೂತ ಸೌಲಭ್ಯಗಳಾದ ನೀರು, ರಸ್ತೆ, ಸಾರಿಗೆ, ಗ್ರಹಣೆ ವ್ಯವಸ್ಥೆಗಳು ದುಬಾರಿಯಾಗುತ್ತವೆ.

ಅದೇ ರೀತಿ ಆಧುನಿಕ ಕೃಷಿ ತಂತ್ರಜ್ಞಾನವನ್ನು ಸಮರ್ಪಕ ರೀತಿಯಲ್ಲಿ ಬಳಸಲು ಕ್ಕೆ ತಕ್ಕುದಾದ ವಾತಾವರಣವನ್ನು ನಿರ್ಮಿಸುವುದು ಬಹಳ ಅಗತ್ಯ. ಸಮಾಜವಾದಿ ದಡಿಯಲ್ಲಿ ಭೂಸುಧಾರಣೆಗಳನ್ನು ಅಳವಡಿಸಿಕೊಂಡಿದ್ದರೂ ಅವುಗಳ ಅನುಷ್ಠಾನ ರ್ಪಕವಾಗಿಲ್ಲ. ಅರೆಮನಸ್ಸಿನಿಂದ ಮಾಡಿದ ಸುಧಾರಣೆಗಳಿಂದಾಗಿ ಸರಾಸರಿ ವಳಿ ಗಾತ್ರ ಆರೋಗ್ಯಪೂರ್ಣ ಕೃಷಿಗೆ ಪೂರಕವಾಗಿಲ್ಲ. ನಿರಂತರ ಭೂಮಿ ಾಗುವಿಕೆ ಹಾಗೂ ವಂಶಪಾರಂಪರಿಕ ನಿಯಮಗಳಿಂದಾಗಿ ಭೂ ಹಿಡುವಳಿಗಳು ವಾಗಿ ಸಾಗುವಳಿಗೆ ಅಸಮರ್ಪಕವಾಗುತ್ತಿವೆ. ೧೯೮೦-೮೧ರಲ್ಲಿ ದೇಶದ ಸರಿ ಹಿಡುವಳಿ ಕ್ಷೇತ್ರ ೧.೮ ಹೆಕ್ಟೇರ್ ಇದ್ದದ್ದು ಇದೀಗ ೦.೨ ಹೆಕ್ಟೇರಿಗೆ ಇಳಿದಿದೆ. ಶದಲ್ಲಿ ಸುಮಾರು ೧೭೦ ಹೆಕ್ಟೇರ್ ನಿವ್ವಳ ಸಾಗುವಳಿ ಭೂಮಿ ಇದ್ದಾಗ್ಯೂ, ಚಿನ ಅಂಕಿಅಂಶಗಳ ಪ್ರಕಾರ ಭೂಹೀನರಿಗೆ ವಿತರಿಸಲಾದ ಒಟ್ಟಾರೆ ಭೂಮಿಯ ಮಾಣ ನಿವ್ವಳ ಸಾಗುವಳಿ ಪ್ರದೇಶದ ಶೇ. ೧.೫ ಮಾತ್ರ. ಈ ವಿತರಣೆಯು ಪ್ರತಿಶತ ಕ್ಕಿಂತ ಕಡಿಮೆ ಪ್ರಮಾಣದ ಬಡಜನತೆಯನ್ನೊಳಗೊಂಡಿದೆ ಎಂಬ ಸತ್ಯ ಯಾಗಿ ಕಂಡುಬರುತ್ತದೆ.

ಸಾಮಾಜಿಕ-ಮನೋವೈಜ್ಞಾನಿಕ ಅಂಶಗಳೂ ಕೂಡ ಆತ್ಮಹತ್ಯೆಗಳಿಗೆ ಕಾರಣ ಗಿರಬಹುದಾದರೂ, ಮೂಲ ಸಮಸ್ಯೆ ರೈತನ ಆರ್ಥಿಕತೆಯನ್ನು ಆಧರಿಸುತ್ತದೆ ಸತ್ಯದ ಅರಿವಾಗುವುದು ಕಠಿಣ. ರೈತನಿಗೂ ಕೂಡ ಇತರ ಜನಸಾಮಾನ್ಯರಂತೆ



ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಆರೋಗ್ಯದ ಖರ್ಚುವೆಚ್ಚಗಳಿರುತ್ತವೆ. ಸಂಘಟಿಕ ಕ್ಷೇತ್ರಗಳಲ್ಲಿರುವಂತೆ ತುಟ್ಟಿಭತ್ಯೆ, ಆರೋಗ್ಯ ಭತ್ಯೆ, ಪಿಂಚಣಿ ಇರುವುದಿಲ್ಲ. ಇಂತಹ ಸಾಮಾಜಿಕ ಭದ್ರತೆಗಳ ಅನುಪಸ್ಥಿತಿಯಲ್ಲಿ ರೈತ ತನ್ನ ಜೀವನೋಪಾಯಕ್ಕಾಗಿ ಸಾಲ ಮಾಡಲೇಬೇಕಾಗುತ್ತದೆ. ಕೃಷಿ ಭಾರತೀಯ ರೈತನ ಜೀವನ ವಿಧಾನವೇ ಆಗಿರುವುದರಿಂದ ಅಂತಹ ಸಾಲವನ್ನು ಕೃಷಿ-ಕೃಷಿಯೇತರ ಎಂದು ವಿಂಗಡಿಸಲು ಅಸಾಧ್ಯ. ಒಟ್ಟಾರೆ ಅವನ ನಿವ್ವಳ ಲಾಭಾಂಶ, ಉಳಿತಾಯ ಕಡಿಮೆ ಇರುವುದರಿಂದ ಅವನು ಸಾಲಕ್ಕೆ ಶರಣಾಗಲೇಬೇಕಾಗುತ್ತದೆ. ರೈತರೇಕೆ ಅತಿಯಾದ ಸಾಲ ಮಾಡಿಕೊಳ್ಳಬೇಕೆಂದು ಕೇಳುವ ಐಷಾರಾಮಿ ಜೀವನ ನಡೆಸುವ ನಮ್ಮ ಶಹರೀ ಬುದ್ಧಿಜೀವಿಗಳು ಆ ಮೂಲಕ ತಮ್ಮ ಅವಿವೇಕವನ್ನು ಮಾತ್ರ ತೋರಿಸುತ್ತಾರೆ.

ರೈತರು ಕೆಲವು ದುಶ್ಚಟಗಳಿಗೆ ಬಲಿಯಾಗಿ, ಕೌಟುಂಬಿಕ ಕಲಹಗಳಿಂದಾಗಿ ಪ್ರಾಣ ಕಳೆದುಕೊಳ್ಳುತ್ತಾರೆಂಬ ವಾದ ಕೆಲವು ವರದಿಗಳಿಂದಲೂ, ಸತ್ಯಾಂಶಗಳನ್ನು ಅರಿಯದ, ಅರಿಯಲು ಪ್ರಯತ್ನ ಮಾಡಲಿಚ್ಛಿಸದ ಕೆಲ ಬುದ್ಧಿಜೀವಿಗಳು, ಜನಸಾಮಾನ್ಯರಲ್ಲದೇ ಅಮಾಯಕ ರೈತರಿಂದಲೂ ಮೂಡಿದೆ. ಕೆಲವು ಪ್ರಕರಣಗಳು ಮಾತ್ರ ಕೃಷಿಗೆ ಸಂಬಂಧವಿಲ್ಲದೇ ರಾಜಕೀಯ ಪ್ರೇರಿತವಾಗಿರಬಹುದು. ಆದರೆ ಎಲ್ಲ ಪ್ರಕರಣಗಳೂ ಇದೇ ವರ್ಗಕ್ಕೆ ಸಂಬಂಧಿಸಿದ್ದವು ಎಂದು ವಾದಿಸುವುದು ಅಕ್ಷಮ್ಯ ಅಪರಾಧವಾದೀತು.

ಕೆಲವು ಸಲ ನೈಸರ್ಗಿಕ ವಿಕೋಪಗಳಿಂದ ಬೆಳೆ ಹಾನಿಯಿಂದಲೂ ರೈತ ಕಷ್ಟ ಅನುಭವಿಸುತ್ತಾನೆ. ಆತ್ಮಹತ್ಯೆಗಳು ಕೇವಲ ಬೆಳೆಹಾನಿಯಿಂದ ಉಂಟಾಗುತ್ತಿವೆ ಎಂದು ಅತೀ ಸರಳೀಕರಿಸುವುದೂ ಕೂಡ ತಪ್ಪಾಗುತ್ತದೆ. ಕೃಷಿ ಉತ್ಪಾದನೆ ಸಂಪೂರ್ಣವಾಗಿ ನಿಸರ್ಗವನ್ನು ಅವಲಂಬಿಸಿರುವುದರಿಂದ ಬೆಳೆ ಹಾನಿ ಆಗುವುದು ಸಹಜ. ಇಂತಹ ಹಾನಿಯನ್ನು ತಡೆದುಕೊಳ್ಳುವ ಶಕ್ತಿ ರೈತನಲ್ಲಿಯೂ ಇದೆ ಹಾಗೂ ಪರಿಹಾರಕ್ಕಾಗಿ ಬೆಳೆ ವಿಮೆಯಂತಹ ಅನೇಕ ಸರಕಾರಿ ಕಾರ್ಯಕ್ರಮಗಳೂ ಕೂಡ ಇವೆ. ಒಮ್ಮೆ ಬೆಳೆ ಹಾನಿಯಾದರೆ ಇನ್ನೊಂದು ಋತುಮಾನದಲ್ಲಿ ಬೆಳೆ ಬಂದೇಬರುತ್ತದೆ ಎಂಬ ಭರವಸೆಯ ಮೇಲೆ ರೈತ ಬದುಕುತ್ತಾನೆ. ಆದರೆ, ತನ್ನ ಜೀವನೋಪಾಯ ಹಾಗೂ ಸಾಮಾಜಿಕ ಪ್ರತಿಷ್ಠೆಯ ಮೂಲ ಭೂಮಿಯೇ ಕಳೆದುಹೋಗುವ ಸಾಧ್ಯತೆಗಳು ಎದುರಾದಾಗ ರೈತ ಧೃತಿಗೆಡುತ್ತಾನೆ.

'ಕೃಷಿತೋ ನಾಸ್ತಿ ದುರ್ಭಿಕ್ಷಂ' ಎಂದ ದೇಶದಲ್ಲಿ ಇಂತಹ ಅವಘಡಗಳಿಗೆ ಒಂದು ಸಮಗ್ರವಾದ ಕೃಷಿ ನೀತಿಯ ಕೊರತೆಯೇ ಮೂಲಕಾರಣವೆನ್ನಬಹುದು. ಈ ನಿಟ್ಟಿನಲ್ಲಿ ಕೇಂದ್ರ ಸರಕಾರವಾಗಲೀ, ರಾಜ್ಯ ಸರಕಾರಗಳಾಗಲೀ, ದೇಶೀ ಸಂಸ್ಕೃತಿ, ಅವಕಾಶಗಳು, ವೈಜ್ಞಾನಿಕ ಸಾಧ್ಯತೆ ಬಾಧ್ಯತೆಗಳನ್ನಾಧರಿಸಿದ, ದೇಶದ ಪ್ರತಿಯೊಬ್ಬ ರೈತನಿಗೂ ಆರೋಗ್ಯಪೂರ್ಣ ನೆಮ್ಮದಿಯ ಜೀವನ ನಡೆಸಲು ಅವಕಾಶಗಳನ್ನು ಒದಗಿಸಿಕೊಡುವ ಸಮಗ್ರ ಸುಸ್ಥಿರ ಕೃಷಿ ನೀತಿಯನ್ನು ಜಾರಿಗೊಳಿಸಬೇಕು. ರೈತರು ಸ್ವಾವಲಂಬಿಗಳಾಗಲು, ಕೃಷಿ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಸಾರ್ವಜನಿಕ ಬಂಡವಾಳ ಹೂಡಿಕೆಯಾಗಬೇಕು. ದೇಶದ ಒಟ್ಟಾರೆ ಬಂಡವಾಳ ಹೂಡಿಕೆಯ ಕನಿಷ್ಠ ಶೇ. ೫೧ರಷ್ಟಾದರೂ ಆ ಕ್ಷೇತ್ರಗಳಿಗೆ ಮೀಸಲಿಡಬೇಕು. ಭೂಸುಧಾರಣೆಯ ಮರು ವಿಶ್ಲೇಷಣೆ ನಡೆಸಿ ಸಮರ್ಪಕವಾದ ಬಂಡವಾಳ ಹೂಡಿಕೆಗೆ, ಉಳುಮೆಗೆ ಹಾಗೂ ಕನಿಷ್ಠ ನಿವ್ವಳ ಲಾಭ ಗಳಿಸಲು

ಯೋಗ್ಯವಾದ ಹಿಡುವಳಿಗಳ ಸೃಷ್ಟಿಯಾಗಬೇಕು. ಆಧುನಿಕ ಕೃಷಿ ತಂತ್ರಜ್ಞಾನದ ಮೂಲಕ ರೈತನ ಪರಾವಲಂಬನೆ ಹೆಚ್ಚಾಗಿ ಆ ಮೂಲಕ ನಿರಂತರವಾಗಿ ಅವನ ಶೋಷಣೆ ನಡೆಯುತ್ತಿದೆ. ರೈತನ ಸ್ವಾವಲಂಬನೆಯ ಅಂಶಗಳನ್ನು ಗುರುತಿಸಿ, ಉತ್ಪಾದನೆಗೆ ಬೇಕಾಗುವ ಸ್ಥಾನೀಯವಾಗಿ ದೊರೆಯುವ ಪರಿಸರ ಪರ ಪರಿಕರಗಳ ಪೂರೈಕೆಯನ್ನು ಏಕ ಗವಾಕ್ಷ ವ್ಯವಸ್ಥೆಯ ಮೂಲಕ ಮಾಡಲು ಸಾಧ್ಯವಿದೆ. ಅದಕ್ಕೆ ರಾಜಕೀಯ ಇಚ್ಛಾಶಕ್ತಿ ಬೇಕಾಗಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಾತ್ವಿಕವಾಗಿ ಕೃಷಿ ಉತ್ಪಾದನೆಗೆ ಬೆಂಬಲ ಬೆಲೆ ಘೋಷಿಸುತ್ತಿದ್ದರೂ ಅವು ಕೆಲವೇ ಪ್ರದೇಶಗಳು ಹಾಗೂ ಬೆಳೆಗಳಿಗೆ ಮಾತ್ರ ಸೀಮಿತವಾಗಿವೆ. ಬೆಂಬಲ ಬೆಲೆಗಳು ಮುಕ್ತ ಮಾರುಕಟ್ಟೆ ಬೆಲೆಗಳಿಗಿಂತ ಕಡಿಮೆ ಇರುವುದರಿಂದ ಅವುಗಳಿಂದ ರೈತರಿಗೆ ಯಾವುದೇ ಲಾಭವಾಗುತ್ತಿಲ್ಲ. ಕೃಷಿ ಉತ್ಪಾದನಾ ಖರ್ಚು-ವೆಚ್ಚಗಳನ್ನಾಧರಿಸಿ ರೈತನ ನಿರ್ವಹಣಾ ಸಾಮರ್ಥ್ಯಕ್ಕನುಗುಣವಾಗಿ ನಿವ್ವಳ ಲಾಭಾಂಶವನ್ನು ಒಳಗೊಳ್ಳುವಂತಹ ವೈಜ್ಞಾನಿಕ ಬೆಲೆ ನೀತಿ ಜಾರಿಗೊಳ್ಳ ಬೇಕು. ದೇಶದಲ್ಲಿ ಹಾಗೂ ರಾಜ್ಯದಲ್ಲಿ ಕೃಷಿ ಅಭಿವೃದ್ಧಿಗಾಗಿ ನೂರಾರು ಯೋಜನೆಗಳು ಜಾರಿಯಲ್ಲಿದ್ದರೂ ದೂರದೃಷ್ಟಿ ಹಾಗೂ ಹಣಕಾಸಿನ ಕೊರತೆಯಿಂದ ಅವು ಸಾಧನೆಯ ಘೋಷಣೆಗಳಾಗಿ ಮಾತ್ರ ಉಳಿದಿವೆ. ಇವುಗಳ ಅನುಷ್ಠಾನದ ಸತ್ಯಾಸತ್ಯೆಯನ್ನು ಅರಿಯಲು ಹಳ್ಳಿಯ ಬಡವನ ಗುಡಿಸಲಲ್ಲಾಗಲೀ ಅಥವಾ ಅವನ ಬದುಕಿನ ಮೇಲಾದ ನೈಜ ಪರಿಣಾಮಗಳಲ್ಲಿ ಹುಡುಕಬೇಕೇ ಹೊರತು ಹವಾನಿಯಂತ್ರಿತ ಕೋಣೆಗಳಲ್ಲಿ, ಕಂಪ್ಯೂಟರಗಳಲ್ಲಿ ಅಥವಾ ವರದಿಗಳಲ್ಲಿ ಅಲ್ಲ.




ಕೃಷಿ ಸಾಲವೇ ರೈತ ಆತ್ಮಹತ್ಯೆಗಳಿಗೆ ಮೂಲ ಕಾರಣವಾಗಿರುವಾಗ ೧೯೫೧-೫೨, ೧೯೬೧-೬೨ರಲ್ಲಿ ನಡೆದ ಅಖಿಲ ಭಾರತ ಗ್ರಾಮೀಣ ಋಣ ಹಾಗೂ ಬಂಡವಾಳ ಹೂಡುವಿಕೆಯ ಸಮೀಕ್ಷೆಯ ಮಾದರಿಯಲ್ಲಿ ರಾಷ್ಟ್ರಮಟ್ಟದ ಸಮೀಕ್ಷೆ ನಡೆಸಬೇಕು ಹಾಗೂ ಕೃಷಿ ನೀತಿಯಲ್ಲಿ ಕೃಷಿ ಸಾಲಕ್ಕೆ ಸಂಬಂಧಿಸಿದ ದೀರ್ಘಕಾಲೀನ ನೀತಿ ನಿರೂಪಣೆಯಾಗಬೇಕು. ರೈತರು ಸಾರಾಯಿ, ಒಂದಂಕಿ, ಆನ್‌ಲೈನ್ ಲಾಟರಿಗಳ ಆಮಿಷಕ್ಕೆ ದಾಸರಾಗುತ್ತಿರುವ ಹಿನ್ನೆಲೆಯಲ್ಲಿ ಅವುಗಳನ್ನು ನಿಷೇಧಿಸುವುದರಿಂದ ಸರ್ಕಾರಗಳಿಗೆ ನಷ್ಟವೇನಾಗಲಿಕ್ಕಿಲ್ಲ.

ಜಗತ್ತಿಗೇ ಮಾದರಿಯಾಗಬಲ್ಲ ಗ್ರಾಮ ಸ್ವರಾಜ್ಯ ವ್ಯವಸ್ಥೆಯನ್ನು ನಾವು ಅನುಷ್ಠಾನಗೊಳಿಸಿದ್ದರೂ ಅದರಿಂದ ನಿರೀಕ್ಷಿತ ಪರಿಣಾಮಗಳು ದೊರೆಯುತ್ತಿಲ್ಲ. ಇದಕ್ಕೆ ಕಾರಣ, ವ್ಯವಸ್ಥೆಯ ಮೂಲೋದ್ದೇಶ ಹಾಗೂ ಸಾಧ್ಯತೆ ಬಾಧ್ಯತೆಗಳ ಬಗ್ಗೆ ಜನರಲ್ಲಿ ಸೂಕ್ತ ತಿಳುವಳಿಕೆ ಇಲ್ಲದಿರುವುದು. ಗ್ರಾಮ ಸ್ವರಾಜ್ಯ ವ್ಯವಸ್ಥೆ ಯನ್ನು ಅಸ್ತ್ರವಾಗಿಸಿಕೊಂಡು ತಳಮಟ್ಟದ ವೈಜ್ಞಾನಿಕ ಯೋಜನೆ, ಸಮರ್ಪಕವಾದ ಅನುದಾನ ಹಾಗೂ ಸೂಕ್ತ ಜಾಗ್ರತಿಯ ಮೂಲಕ ಭಾರತದ ಕೇಂದ್ರಬಿಂದುವಾದ ಹಳ್ಳಿಗಳ ಸ್ವಾವಲಂಬನೆ, ಸ್ವಾತಂತ್ರ್ಯ ಹಾಗೂ ಘನತೆಗಳನ್ನು ಕಾಪಾಡಲು ಸಾಧ್ಯ.

ಕೃಷಿ ದಿವಾಳಿತನ ರಾಷ್ಟ್ರಗಳ ರಾಜಕೀಯ ಬಿಕ್ಕಟ್ಟಿನಲ್ಲಿ ಪರ್ಯವಸಾನಗೊಂಡಿರುವುದಕ್ಕೆ ಇತಿಹಾಸದ ಪುಟಗಳು ಸಾಕ್ಷಿ ಯಾಗಿವೆ. ಇದನ್ನರಿತೂ ಇಂದಿನ ಜವಾಬ್ದಾರಿ ಸಮಾಜ ಜಾಣ ಕಿವುಡನಂತೆ ವರ್ತಿಸಿದ್ದೇ ಆದರೆ ಇತಿಹಾಸ ಪುನರಾವರ್ತನೆ ಯಾಗುವುದರಲ್ಲಿ ಸಂಶಯವಿಲ್ಲ. ಈ ಪುನರಾವರ್ತನೆಯ ಮೊದಲೇ ಜಾಗತೀಕರಣ ಹಾಗೂ ಉದಾರೀಕರಣ ಪ್ರಕ್ರಿಯೆಗಳು ದಿವಾಳೀ ಸಾಮಾಜಿಕ-ಆರ್ಥಿಕ-ರಾಜಕೀಯ ಪರಿಣಾಮಗಳನ್ನು ಬೀರುವ ಮುನ್ನ ಯುವ ಜನರು, ರೈತರು, ಪ್ರಜ್ಞಾವಂತ ಜನಪ್ರತಿನಿಧಿಗಳು ಹಾಗೂ ಪ್ರಗತಿಪರ ಸಂಘಟನೆಗಳು ರೈತರಲ್ಲಿ ಜಾಗ್ರತಿ ಮೂಡಿಸಬೇಕಾಗಿದೆ. *

* ಈ ನಿಟ್ಟಿನಲ್ಲಿ ರೈತ ಜಾಗೃತಿ ವೇದಿಕೆ, ವಿಜಾಪುರ, ಜನಾಂದೋಲನ, ಸರಕಾರಗಳಿಗೆ ಮನವರಿಕೆ ಮಾಡಿಕೊಡುವುದು, ರೈತ ಕುಟುಂಬಕ್ಕೆ ಸಾಂತ್ವನ, ರೈತ ಸಮುದಾಯಕ್ಕೆ ಆತ್ಮ ಸ್ಥೈರ್ಯದ ಸಂದೇಶಗಳ ಮೂಲಕ ಸಮಸ್ಯೆಯ ಪರಿಹಾರಕ್ಕೆ ನಿರಂತರ ಪ್ರಯತ್ನಗಳನ್ನು ನಡೆಸುತ್ತಿದೆ.

**ಡಾ|| ರಾಜೇಂದ್ರ ಪೋದ್ದಾರ**
ಸಂಚಾಲಕರು, ರೈತ ಜಾಗೃತಿ ವೇದಿಕೆ ಹಾಗೂ
ಸಹ ಪ್ರಾಧ್ಯಾಪಕರು (ಕೃಷಿ ಅರ್ಥಶಾಸ್ತ್ರ), ಕೃಷಿ ಮಹಾವಿದ್ಯಾಲಯ, ವಿಜಾಪೂರ - ೫೮೬ ೧೦೧

# ಬನ್ನಿ ಕನಸುಗಳೆ ಬನ್ನಿ

ಬನ್ನಿ ಕನಸುಗಳೆ ಬನ್ನಿ
ಸಂತಸದ ಎಲ್ಲೆ ಮೀರಿ
ನನ್ನೊಡನೆ ಉರಿವ ದೀಪಗಳೂ
ಆರಿ ಹೋಗಿವೆ ಈಗ ಎಣ್ಣೆ ತೀರಿ
ಮಲಗಲೆತ್ನಿಸುವೆ ನಾನಿನ್ನು ಬನ್ನಿ
ಬನ್ನಿ ಕನಸುಗಳೆ ಬನ್ನಿ
ಸಂತಸದ ಎಲ್ಲೆ ಮೀರಿ

ಜಂಜಡದ ಬದುಕ ಜಡತೆಯನು ಕೊಡವಿ
ಸಂತಸದ ಹಾಯಿ ದೋಣಿಯಲಿ ಬಿಡಿಸಿ
ದುಃಖ ದುಮ್ಮಾನ ದಾರಿದ್ರ್ಯವನೆ ಗುಡಿಸಿ
ತೀರ ಕಾಣದ ತೆರೆಯಲೀಜೋಣ ಬನ್ನಿ
ಬನ್ನಿ ಕನಸುಗಳೆ ಬನ್ನಿ
ಸಂತಸದ ಎಲ್ಲೆ ಮೀರಿ

ಸೂರೆಗೊಳ್ಳುವ ಸುಖ ಸಮೃದ್ಧಿ
ಬರಲಿ ನಿಮ್ಮೊಡಗೂಡಿ ಸಿದ್ಧಿ
ಎಬ್ಬಿಸುವ ಕಿರುಗಂಟೆ ಕಿರುಗುಡುವ ಮುನ್ನ
ಹಕ್ಕಿಗಳು ಉಲಿದುಲಿದು ಬೆಳಕ ನೇಯುವ
ಮುನ್ನ

ಬನ್ನಿ ಕನಸುಗಳೆ ಬನ್ನಿ
ಸಂತಸದ ಎಲ್ಲೆ ಮೀರಿ

**ಮಾಧವಿ ಭಂಡಾರಿ**
ನಂ. ೩ – ೧೧೩ (ಡಿ), ಪದ್ಮನಾಭನಗರ
ಉಡುಪಿ - ೫೭೬ ೧೦೧



ಅರಿತಿರುವ ಹಾಗೂ ಸದಾ ರೈತ ಪರ ಚಿಂತಕರಾದ ಪ್ರೊ॥ ಬಿ. ವಿ. ವೆಂಕಟರಾವ್ ಅವರು ಮೊದಲಿಗೆ ಕೃಷಿ ಇಲಾಖೆ ಅನಂತರ ಕೃಷಿ ಕಾಲೇಜು ಪ್ರಾರಂಭ ವಾದಾಗಿನಿಂದಲೂ ಬೋಧನೆ, ಸಂಶೋಧನೆಗಳಂತಹ ಕೃಷಿ ಕುರಿತ ಸಂವಹನದಲ್ಲಿ ತೊಡಗಿಸಿ ಕೊಂಡಂಥವರು. ತಮ್ಮ ಜೀವಮಾನದುದ್ದಕ್ಕೂ ಕೃಷಿ ವಿಜ್ಞಾನಿಯಾಗಿ ಹಲವು ರೀತಿಯ ವಿಜ್ಞಾನ, ವಿದ್ಯಾದಾನ ಬರವಣಿಗೆಗಳಲ್ಲಿ ತೊಡಗಿಸಿಕೊಂಡಿರುವ ಈ ವಯೋವೃದ್ಧರು, ಜ್ಞಾನವೃದ್ಧರೊಡನೆ ಸಂವಾದದಲ್ಲಿ ತೊಡಗಿದವರು ಶ್ರೀ ಎ. ಎನ್. ಎಲ್ಲಪ್ಪರೆಡ್ಡಿಯವರು. ಇವರಿಬ್ಬರಿಗೂ 'ಹೊಸತು' ಋಣಿಯಾಗಿದೆ.

ಎಲ್ಲಪ್ಪರೆಡ್ಡಿಯವರು ತಮ್ಮ ಗುರು ಪ್ರೊ॥ ವೆಂಕಟರಾವ್ ಅವರಷ್ಟೇ ಪರಿಸರ, ಕೃಷಿ ಕುರಿತ ವಿಷಯಗಳಲ್ಲಿ ಆಳವಾದ ಅಧ್ಯಯನ ನಡೆಸಿ ಕನ್ನಡಿಗರಿಗೆ ಹತ್ತಿರವಾಗಿದ್ದಾರೆ. ಕನ್ನಡನಾಡಿನಾದ್ಯಂತ ಪರಿಸರವಾದಿಯೆಂದೇ ಕೀರ್ತಿವೆತ್ತಿರುವ ಶ್ರೀಯುತರು ಕರ್ನಾಟಕ ಸರ್ಕಾರದ ಜೀವಿಪರಿಸರ ಇಲಾಖೆಯಲ್ಲಿ ಹಿರಿಯ ಹುದ್ದೆಯಲ್ಲಿ ಇದ್ದವರು. ಪರಿಸರದ ಬಗ್ಗೆ ಅತ್ಯಂತ ಕಾಳಜಿ ಇರಿಸಿಕೊಂಡವರು. ಈ ಇಬ್ಬರು ಹಿರಿಯರ ಕಾಳಜಿಗಳನ್ನು ಓದುಗರಿಗೆ ಪರಿಚಯ ಮಾಡಿಕೊಡುವ ದೃಷ್ಟಿಯಿಂದ 'ಹೊಸತು' ಬಳಗದ ಡಾ॥ ಜಿ. ರಾಮಕೃಷ್ಣ, ಕೆ. ಎಸ್. ಪಾರ್ಥಸಾರಥಿ, ಕೆ. ಪಿ. ಸ್ವಾಮಿ, ಕುಮಾರಿ ಸಹನ ಮತ್ತು ಲೇಖಕ ಶ್ರೀ ಎನ್. ಗೋಪಾಲಕೃಷ್ಣ ಅವರು ಸಂದರ್ಶಿಸಿದರು.

ಕರ್ನಾಟಕ ಸರ್ಕಾರವೂ ಕೃಷಿ ನೀತಿಯೊಂದನ್ನು ಘೋಷಿಸುವುದಾಗಿ ಈಗಷ್ಟೇ ಹೇಳಿದೆ. ಈ ಬಗ್ಗೆಯೂ ಇಬ್ಬರು ಅನುಭವೀ ತಜ್ಞರ ಖಚಿತವಾದ ನಿಲುವು ಓದುಗರಿಗೆ ಪರಿಚಯಮಾಡುವುದು ಈ ಸಂದರ್ಶನದ ಉದ್ದೇಶವಾಗಿದೆ.



ಪ್ರೊ॥ ಬಿ. ವಿ. ವೆಂಕಟರಾವ್

ಭೂಮಿ ಯಾವತ್ತಿಗೂ ಜೀವಂತ ಎನಿಸಿದರೂ ಲನೆ – ಪಾಲನೆ ಪೋಷಣೆಗಳಿಂದ ವಂಚಿತ ಂಡಿದೆ. ಮಣ್ಣಿನ ಕೊಚ್ಚಣೆ ಮತ್ತು ಗೋಡು ಬ್ಬರಗಳನ್ನು ಕಾಣದ, ಮಳೆಯನ್ನೇ ನಂಬಿದ ಹೊಲಗಳ ಭೂಮಿ ಸತ್ವಹೀನವಾಗಿದೆ. ಅದನ್ನೇ ನಿರುವ ಶೇಕಡ ೭೦ರಷ್ಟು ರೈತರ ಬಾಳೂ ತ್ರ. ಶ್ರದ್ಧಾವಂತ ಬೇಸಾಯಗಾರ ಸಗಣಿ – ಳ, ಕೊಟ್ಟಿಗೆ ಹಾಸು ಹುಲ್ಲು, ಉದುರೆಲೆ ವನ್ನೂ ಕೂಡಿಸಿ ಒಪ್ಪಮಾಡಿ, ಕೊಳೆಸಿ, ಕಳಿಸಿ ಮಿಗೆ ಗೊಬ್ಬರ ಒದಗಿಸುತ್ತಿದ್ದ. ಹಾಗೆ ಸಾಕಷ್ಟು ಾಂತ – ಫಲವತ್ತಿನಿಂದ ಕೂಡಿದ್ದ, ಹದವಾಗಿದ್ದ ಮಿ ಸಮೃದ್ಧ ಬೆಳೆಗೆ ಆಧಾರವಾಗಿತ್ತು.

ನಮ್ಮ ದೇಶವನ್ನು ಕಾಪಾಡಿಕೊಂಡು ಬಂದಿರುವ ಪಾರಂಪರಿಕ ವ್ಯವಸಾಯ ಪದ್ಧತಿಯೇ ಆಧುನಿಕ ಸಾಯ ಪದ್ಧತಿಯಂತೆ ರಾಸಾಯನಿಕ ಗೊಬ್ಬರ, ೀಗ-ಕೀಟಗಳ ಬಳಕೆ, ಒಂದೇ ಬೆಳೆಯನ್ನು ರಿಗೆ ಶಿಫಾರಸು ಮಾಡಿದ್ದರ ಫಲವಾಗಿ ಮಿಯ ಫಲವತ್ತತೆ ಕುಂಠಿತಗೊಂಡಿದೆ. ಜೊತೆಗೆ ನಿಗೆ ಸಬ್ಸಿಡಿಯ ಆಮಿಷವನ್ನೊಡ್ಡಿ ರೈತನು ಗಾರನಾಗುವಂತೆ ಮಾಡಲಾಯಿತು.

ಕಳೆದ ಐವತ್ತು ವರ್ಷಗಳಿಂದಲೂ ಈ ದುರಂತ ರವಿಸುತ್ತಿದೆ. ಇದಕ್ಕೆ ಹೊಣೆಯಾಗಿರುವವರಿಗೆ ಸ್ತಿಗಳ ಸುರಿಮಳೆಯಾಗುತ್ತಿದೆ.

ಕೃಷಿ, ಗ್ರಾಮೀಣಾಭಿವೃದ್ಧಿ ಬಗೆಗೆ ಅತ್ಯಂತ ಕಾಳಜಿ ಂದಿರುವ ಸಣ್ಣ, ಮಧ್ಯಮ ರೈತರ ಜೀವನ ಾಹಣೆಯೇ ಕಷ್ಟವಾಗಿರುವುದನ್ನು ಸ್ಪಷ್ಟವಾಗಿ

# ಕೃಷಿಯ ಸ್ಥಿತಿ-ಗತಿ ಅಂದು, ಇಂದು, ಮುಂದು

**ಪ್ರೊ॥** ಬಿ. ವಿ. ವೆಂಕಟರಾವ್ : ವಿಶ್ವಬ್ಯಾಂಕ್ ತಜ್ಞರ ಪ್ರಕಾರ ಕೃಷಿ ಒಂದು ವ್ಯವಹಾರ. ಅಮೆರಿಕಾದಲ್ಲಿ ವ್ಯವಸಾಯದಲ್ಲಿ ನಿರತರಾದ ಜನ ಕೇವಲ ಶೇಕಡ ೨ರಷ್ಟು ಅಲ್ಲಿ ಒಂದು ಫಾರ್ಮ್ ೫೦೦ ಎಕರೆಯಷ್ಟು ಇಲ್ಲದಿದ್ದರೆ ಅದು ಉದ್ಯಮವೆನಿಸಿಕೊಳ್ಳುವುದಿಲ್ಲ. ಬೃಹತ್ ಯಂತ್ರೋಪಕರಣಗಳ ಸಹಾಯದಿಂದ ನೂರಾರು ಎಕರೆಗಳನ್ನು ಬೇಸಾಯ ಮಾಡಬೇಕಾದರೆ ಅದು ಬಿಸಿನೆಸ್ ರೀತಿಯಲ್ಲೇ ಆಗಲೇಬೇಕು. ಇಲ್ಲವಾದರೆ ಅಲ್ಲಿಯ ರೈತ ಬದುಕಲಾರ.

ಭಾರತದ ಸಂದರ್ಭದಲ್ಲಿ ನೋಡುವುದಾದರೆ, ದೇಶದ ೧೦೦ ಕೋಟಿ ಜನರಲ್ಲಿ ಶೇ. ೭೦ರಷ್ಟು ಜನರು ಮಳೆಯನ್ನೇ ನಂಬಿದ, ೧-೨ ಎಕರೆ ಭೂಮಿಯನ್ನು ಮಾತ್ರ ಹೊಂದಿರುವ ಅತಿ ಸಣ್ಣ ಪ್ರಮಾಣದ ರೈತರು ಗ್ರಾಮೀಣ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಇವರದು ಸುಮಾರು ೭೦೦-೮೦೦ ದಶಲಕ್ಷ ದಷ್ಟಿರುವ ಬೃಹತ್ ಜನ ಸಮೂಹ. ಇವರ ಜೀವನ ದುಃಸಹನೀಯ. ಇವರು ಅಭಿವೃದ್ಧಿ ಹೊಂದ ಬೇಕೆಂಬ ಮಾತನ್ನು ಇನ್ನೂ ಆಡುತ್ತಲೇ ಇದ್ದೇವೆ. ಅಮೆರಿಕಾದ ಶೇಕಡ ೨ರಷ್ಟಿರುವ ಜನರು ಮಾಡುವ ಉತ್ಪಾದನೆ ವಿದೇಶಗಳಿಗೆ ರಫ್ತಾಗುತ್ತದೆ. ಅಲ್ಲಿನ ರೈತರು ಬಡವರಲ್ಲ. ಅವರು ಸುಶಿಕ್ಷಿತ ರೈತರು, ಕೃಷಿ ಉದ್ಯಮಿಗಳು.

ಒಂದು ಕಾಲಕ್ಕೆ ರೈತನೇ ಇರಲಿಲ್ಲ. ಜಮೀನು ದಾರ ಇರುತ್ತಿದ್ದ. ಅವನು ಜನರಿಗೆ ಅಲ್ಪಸ್ವಲ್ಪ ಜಮೀನು ಕೊಟ್ಟು ದುಡಿಸಿಕೊಳ್ಳುತ್ತಿದ್ದ. ಅವರನ್ನು ಮಾನವೀಯ ದೃಷ್ಟಿಯಿಂದ ಕಾಣುತ್ತಿರಲಿಲ್ಲ. ರೈತನಿಗೆ ಜಮೀನು ಎಂಬುದು ಇರಲಿಲ್ಲ. ಜನ ಸಂಖ್ಯೆಯೂ ಕಡಿಮೆ ಇತ್ತು. ನೀರಾವರಿ, ಅಣೆಕಟ್ಟು ಇವುಗಳಿಗೆ ರಾಜ ಮಹಾರಾಜರ ಕಾಲದಲ್ಲಿ ಒಂದಷ್ಟು ಒತ್ತು ದೊರೆಯಿತು. ಮುಂದೆ ರೈತರ ಮತ್ತು



ಶ್ರೀ ಎ. ಎನ್. ಎಲ್ಲಪ್ಪರೆಡ್ಡಿ

ಸರ್ಕಾರದ ನಡುವೆ ನೇರ ಸಂಪರ್ಕ ಆಯಿತು. ರೈತರಿಗೆ ಅವರ ಸಾಗುವಳಿ ಜಮೀನಿನ ದಾಖಲೆ ದೊರೆಯುವಂತಾಯಿತು. ಸರ್ವೆ ಅಂಡ್ ಸೆಟ್ಲ್‌ಮೆಂಟ್ ಪದ್ಧತಿ ಜಾರಿಗೆ ಬಂದಿತು. ಕಂದಾಯ ವಸೂಲಿ ವ್ಯವಸ್ಥೆ ಪ್ರಾರಂಭವಾಯಿತು.

ನೀರಾವರಿ ಬಗ್ಗೆ ನಮ್ಮ ಜನಕ್ಕೆ ಇದ್ದ ಅರಿವು ಚೀನಾ ದೇಶದವರಿಗೆ ಇರಲಿಲ್ಲ. ೧೮೭೦ರಲ್ಲಿ ಭೀಕರ ಕ್ಷಾಮ ತಲೆದೋರಿತು. ಆಗ ಬ್ರಿಟಿಷ್ ಸರ್ಕಾರ ಕೃಷಿಯ ಕಡೆ ಲಕ್ಷ್ಯ ಹರಿಸಿತು. ಆನಂತರ ಕೃಷಿ ಇಲಾಖೆ ಸ್ಥಾಪನೆಯಾಯಿತು. ಪೂನಾದಲ್ಲಿ ಮೊದಲ ಕೃಷಿ ಕಾಲೇಜು ಪ್ರಾರಂಭವಾಯಿತು. ಮುಂದೆ ನಾಗಪುರ, ಕೊಯಮತ್ತೂರುಗಳಲ್ಲಿಯೂ ಕೃಷಿ ಕಾಲೇಜುಗಳು ಸ್ಥಾಪಿತವಾದವು.

೧೮೯೯ರಲ್ಲಿ ಮೈಸೂರಿಗೆ ಜರ್ಮನಿಯ ಲೇಮನ್ ಎಂಬ ಕೃಷಿ ವಿಜ್ಞಾನಿ ಬಂದ. ಆಗಲೇ ಕೃಷಿ ಲ್ಯಾಬರೇಟರಿಯನ್ನು ಸ್ಥಾಪಿಸಲಾಯಿತು. ಅಂದಿನ ದಿನಗಳಲ್ಲಿ ಜರ್ಮನಿಯು ವಿಜ್ಞಾನ ಕ್ಷೇತ್ರದಲ್ಲಿ ಮುಂದುವರೆದಿತ್ತು. ೧೯೦೮ರಲ್ಲಿ ಹೆಬ್ಬಾಳದ ಕೃಷಿ ಪ್ರಯೋಗ ಕ್ಷೇತ್ರವು ೧೮೦ ಎಕರೆ ವಿಸ್ತೀರ್ಣದ ಪ್ರದೇಶದಲ್ಲಿ ಪ್ರಾರಂಭವಾಯಿತು.

**ಹೊ :** ಹಾಗಾದರೆ ಕರ್ನಾಟಕದಲ್ಲಿ ಕೃಷಿ ಶಿಕ್ಷಣ ಪ್ರಾರಂಭ ಯಾವಾಗ ಆಯಿತು ?

**ಬಿ.ವಿ.ವೆಂ. :** ೧೯೧೩ರ ವೇಳೆಗೆ ಕೃಷಿಶಾಲೆ - Agricultural School ಹೆಬ್ಬಾಳದಲ್ಲಿ ಪ್ರಾರಂಭವಾಯಿತು. ಆನಂತರ ಕೃಷಿ ಕಾಲೇಜು, ಕೃಷಿ ವಿಶ್ವವಿದ್ಯಾನಿಲಯ ಪ್ರಾರಂಭವಾಗಿ ಅಲ್ಲಿ ಬಿ.ಎಸ್‌ಸಿ. (ಕೃಷಿ)ಯಂತಹ ಹಲವು ಬಗೆಯ ವಿಷಯಗಳನ್ನು ಅಧ್ಯಯನ ಮಾಡಬಹುದಾಗಿದೆ. ಅನೇಕ ವಿಭಾಗಗಳಲ್ಲಿ ಪಿಎಚ್.ಡಿ. ಅಧ್ಯಯನವನ್ನೂ ಮಾಡಲಾಗುತ್ತಿದೆ. ಈಗಂತೂ ಬೆಂಗಳೂರು ಮತ್ತು ಧಾರವಾಡ ಎರಡು ನಗರಗಳಲ್ಲೂ ಕೃಷಿ ವಿಶ್ವವಿದ್ಯಾನಿಲಯಗಳಿವೆ.

**ಎ. ಎನ್. ಎಲ್ಲಪ್ಪರೆಡ್ಡಿ :** ನಮ್ಮ ರಾಜ್ಯದಲ್ಲಿ ಅತ್ಯಂತ ಸುಧಾರಿತ ವ್ಯವಸಾಯ ಪದ್ಧತಿ ಜಾರಿಯಲ್ಲಿತ್ತು. ಗ್ರಾಮಗಳಲ್ಲಿ ಜೈವಿಕ ವಿಘಟನೆಯಾಗಬಲ್ಲ ವ್ಯವಸ್ಥೆ ಇತ್ತು. ಕಾಂಪೋಸ್ಟ್ ಗೊಬ್ಬರ, ಪ್ರಾಣಿ- ಮನುಷ್ಯರ ತ್ಯಾಜ್ಯ ವಸ್ತುಗಳನ್ನು ಯಾವ ರೀತಿಯಾಗಿ ಪ್ರಕೃತಿಯಲ್ಲಿ ಬಳಸಿಕೊಂಡು ಕೃಷಿ ಮಾಡುತ್ತಿದ್ದುದು ರಾಜ್ಯಕ್ಕೆ ಅರಣ್ಯ ಕೃಷಿಯ ಬಗ್ಗೆ ಸಲಹೆ ನೀಡಲು ಬಂದ ವಿದೇಶಿ ತಜ್ಞ ಬುಕ್ಯಾರಿನ್ ಅವರಿಗೆ ಆಶ್ಚರ್ಯವುಂಟು ಮಾಡಿತು. ಆಯಾ ಸ್ಥಳಕ್ಕೆ ಅಗತ್ಯವಿರುವ ರೀತಿಯ ವ್ಯವಸಾಯವನ್ನು ಮಾಡುವಂಥ ವೈಜ್ಞಾನಿಕ ಪ್ರಜ್ಞೆ ಆಗಿನ ಜನರಲ್ಲಿತ್ತು. ಪುನರ್‌ಬಳಕೆ, ಧಾನ್ಯಸಂಗ್ರಹಣೆ, ಬಿದಿರು ಬುಟ್ಟಿಯಲ್ಲಿ ಮತ್ತು ಹಗೇವುಗಳಲ್ಲಿ ಧಾನ್ಯ ಸಂಗ್ರಹ ಇವೆಲ್ಲವೂ ಜಾರಿಯಲ್ಲಿತ್ತು. ಹಳೇ ಮೈಸೂರಿನ ೧೮,೦೦೦ ಗ್ರಾಮಗಳಲ್ಲಿ ೧೮,೦೦೦ ಗುಂಡು ತೋಪುಗಳಿದ್ದವು. ಈ ತೋಪುಗಳಲ್ಲಿ ಯಾರೂ ಮರಗಳನ್ನು ಕಡಿಯುತ್ತಿರಲಿಲ್ಲ. ಇವುಗಳಿಂದಾಗಿ ಒಂದು ನೈಸರ್ಗಿಕ ಜೀವಿಪರಿಸರ ವ್ಯವಸ್ಥೆ ಇದ್ದಿತು. ಇಲ್ಲಿ ಪಕ್ಷಿಗಳು ಗೂಡು ಕಟ್ಟುತ್ತಿದ್ದವು. ಪಕ್ಷಿಗಳಿಂದಾಗಿ ಜಮೀನುಗಳಲ್ಲಿ ಕೀಟ ಬಾಧೆ ಇರುತ್ತಿರಲಿಲ್ಲ. ಎಲೆ ಗೊಬ್ಬರವನ್ನೂ ಜಮೀನಿನಲ್ಲಿ ಉಪಯೋಗಿಸುವ, ಕೊಡುವ ವ್ಯವಸ್ಥೆ ಇತ್ತು. ಇದರಿಂದಾಗಿ ಪೋಷಕಾಂಶದ ಅಸಮ ತೋಲನವನ್ನು ನೈಸರ್ಗಿಕವಾಗಿ ಸರಿಪಡಿಸಲಾಗುತ್ತಿತ್ತು. ನೈಸರ್ಗಿಕ ಜೀವಿ ಪರಿಸರಗಳ ನಡುವೆಯೂ ಇದ್ದು ಸಮಸ್ಥಿತಿಯಿಂದ ಹಾವುಗಳು ಜಮೀನಲ್ಲಿರುತ್ತಿದ್ದ ಇಲಿ, ಹೆಗ್ಗಣಗಳನ್ನು ತಿಂದು ರೈತರಿಗೆ ಉಂಟಾಗುತ್ತಿದ್ದ ಉಪಟಳಗಳನ್ನು ತಪ್ಪಿಸುತ್ತಿದ್ದವು. ಇದರಿಂದಾಗಿ ಒಂದು ರೀತಿಯ ಸಮತೋಲವನ್ನು ಕಾಯ್ದುಕೊಂಡಂತಾಗಿತ್ತು.

**ಹೊ :** ಅಂದಿನ ಜೀವಿಪರಿಸರ ಸ್ಥಿತಿಯನ್ನು ಇಂದು ಪುನಃ ಸೃಷ್ಟಿಸಿಕೊಳ್ಳಬಹುದೇ ?

**ಎ.ಎನ್.ಎ. :** ಪ್ರತಿ ಗ್ರಾಮಗಳಲ್ಲಿ ೫ರಿಂದ ೧೦ ಚದರ ಕಿಲೋ ಮೀಟರ್ ವಿಸ್ತೀರ್ಣದಲ್ಲಿ ನಿರ್ಜನ ಕಾಡುಗಳನ್ನು (wilderness area) ನಿರ್ಮಾಣ ಮಾಡಬೇಕು. ಇದರಿಂದ ಬೆಳೆಗಳಲ್ಲಿ ಪರಾಗಸ್ಪರ್ಶ ಉಂಟಾಗಲು ಅನುಕೂಲ. ೧ ಜೇನುಗೂಡು ಇರುವೆಡೆ ಜೇನುಹುಳುಗಳು ೩.೭ ಚದರ ಕಿ.ಮೀ. ವಿಸ್ತಾರದಿಂದ ಗಿಡ, ಮರ, ಹೂವುಗಳಿಂದ ಮಧು ಸಂಗ್ರಹ ಮಾಡುತ್ತವೆ. ಹತ್ತಿರದಲ್ಲಿ ಕೆರೆಯೊಂದು ಇರಬೇಕು. ಇದು ಉತ್ತಮ ಜೀವಿಪರಿಸರ ಸ್ಥಿತಿ. ಇಂಥಾ ವ್ಯವಸ್ಥೆ ಈಗ ಇಲ್ಲ.



**ಹೊ :** ರೈತರು ಸೂರ್ಯಕಾಂತಿ ಬೆಳೆಗೆ ಪರಾಗಕ್ಕಾಗಿ ಕೈಗೆ ಬ... ಸುತ್ತಿಕೊಂಡು ಒಂದೊಂದು ಹೂವನ್ನೂ ಮುಟ್ಟುತ್ತಾ ಹೋಗುತ್ತಾರಲ್ಲ. ಇದು ಎಲ್ಲ ರೀತಿಯ ಬೆಳೆಗೂ ಸಾಧ್ಯವೇ ?

**ಎ.ಎನ್.ಎ. :** ಇಂಥಾ ಸ್ಥಿತಿ ಗಿಡಗಳ ವಿಷಯದಲ್ಲಿ ಸಾಧ್ಯವಾದರೂ ಎತ್ತರದ ಮಾವಿನ ಮರದಲ್ಲಿ ಪರಾಗವಾಗಲು ಈ ರೀತಿ ಮಾಡಲು ಸಾಧ್ಯವಿಲ್ಲ. ಪಕ್ಷಿಸಂಕುಲಗಳ ಮೂಲಕ ನೈಸರ್ಗಿಕವಾಗಿ ಇಂಥಾ ಕೆಲಸ ಆಗಬೇಕು. ಇಲ್ಲಿ ಜೇನುಗಳ ಪಾತ್ರ ಬಹಳ ಮುಖ್ಯ.

**ಹೊ :** ಬಗೆಬಗೆಯ ಗಿಡ, ಸೊಪ್ಪುಗಳಲ್ಲಿ ದೊರೆಯುವ ಪೋ... ಅಂಶಗಳೂ ರಾಸಾಯನಿಕ ಗೊಬ್ಬರಗಳಲ್ಲಿ ದೊರೆಯುತ್ತವೆಯೇ ?

**ಎ.ಎನ್.ಎ. :** ಇಲ್ಲ, ದೊರೆಯುವುದಿಲ್ಲ. ಅಮೋನಿಯ ಗೊಬ್ಬರಗಳಿಂದ ಸಾರಜನಕ ಮಾತ್ರ ದೊರೆಯುತ್ತದೆ. ರಂಜಕಕ್ಕೆ ಫಾಸ್ಫೇಟ್ ಮತ್ತು ಪೊಟ್ಯಾಷಿಯಂಗೆ ಮ್ಯೂರಿಯೇಟ್ ಒದಗಿಸಬೇಕು. ನಿಸರ್ಗದತ್ತವಾದ ಜೀವಿಪರಿಸ್ಥಿತಿಯನ್ನು ಉಳಿಸಿಕೊಂಡರೆ, ತಾನೇ ತಾನಾಗಿ ಎಲ್ಲ ಪೋಷಕಾಂಶಗಳೂ ದೊರೆಯುತ್ತವೆ. ನಿಸರ್ಗದಲ್ಲಿ ಅತ್ಯಗತ್ಯವಾದ ೧೬ ಮುಖ್ಯ ಪೋಷಕಾಂಶಗಳು ದೊರೆಯುತ್ತವೆ. ಪ್ರಕೃತಿಯಲ್ಲಿ ಸಹಜವಾಗಿ ದೊರೆಯುವ ಸಾರಜನಕವು ಬೆಳೆಗಳಿಗೆ ಅಗತ್ಯ. ನಮ್ಮ ಜಮೀನುಗಳಲ್ಲಿ ಇತರೆ ಬೆಳೆಗಳ ಜೊತೆ ಅಂತರ ಬೆಳೆಗಳನ್ನು ಬೆಳೆಸುವ ಪದ್ಧತಿಯಿರಬೇಕು. ಉದಾಹರಣೆಗೆ, ದ್ವಿದಳ ಧಾನ್ಯಗಳನ್ನು ಬೆಳೆಸಿದರೆ ಶೇಕಡ ೨೫ರಷ್ಟು ಸಾರಜನಕವು ಮಿಕ್ಕ ಸುತ್ತಮುತ್ತಲ ಬೆಳೆಗೂ ದೊರೆಯುತ್ತದೆ.

**ಬಿ.ವಿ.ವಿ.ರಾವ್ :** ಮಳೆ ಬಿದ್ದಾಗ ವಾತಾವರಣದಿಂದ ಎಕರೆಗೆ ೧೦ರಿಂದ ೨೦ ಕಿ.ಗ್ರಾಂ ಸಾರಜನಕ ಭೂಮಿಯನ್ನು ತಲಪುತ್ತದೆ. ಪುನರಾವರ್ತನೆ ಸ್ವಾಭಾವಿಕ ಪ್ರಕೃತಿ ಕ್ರಿಯೆ. ನಾವು ಈ ವ್ಯವಸ್ಥೆಯ ವಿರುದ್ಧ ಕೈಹಾಕಿ ಪ್ರಕೃತಿಯನ್ನು ಹಾಳುಮಾಡಿದ್ದೇವೆ.

**ಹೊ :** ಹಾಗಾದರೆ ನಾವು ಹಿಂದಿನ ವ್ಯವಸಾಯ ಪದ್ಧತಿಗೆ ಹಿಂತಿರುಗಬೇಕೆನ್ನುತ್ತೀರಾ ? ಪ್ರಸ್ತುತ ಸ್ಥಿತಿ ಏಕೆ ನಿರ್ಮಾಣವಾಯಿತು ?

**ಬಿ.ವಿ.ವಿ.ರಾವ್ :** ನಮ್ಮ ದೇಶದಲ್ಲಿ ಸ್ವಾತಂತ್ರ್ಯಾನಂತರ ಕ್ಷಾಮವನ್ನು ಕಂಡೆವು. ಅಧಿಕ ಆಹಾರೋತ್ಪನ್ನ ಆಂದೋಲನ ಪ್ರಾರಂಭವಾಯಿತು. ಆಹಾರದ ಕೊರತೆ ಉಂಟಾದುದರಿಂದ ರಾಸಾಯನಿಕಗಳನ್ನು ಬಳಸಿ ಹೆಚ್ಚು ಬೆಳೆಯಬೇಕಾದ ಸ್ಥಿತಿ ಬಂದಿತು. ಇದರಲ್ಲಿ ಅರ್ಧಭಾಗ ಸೊಪ್ಪು, ಕೊಟ್ಟಿಗೆ ಗೊಬ್ಬರದ ಸಾರಜನಕ ಸರಬರಾಜು. ಇದರೊಡನೆ ರಾಸಾಯನಿಕಗಳನ್ನು ಬೆಳೆಗಳಿಗೆ ಒದಗಿಸಬೇಕೆಂದು ಸಲಹೆ ಮಾಡಲಾಯಿತು.

**ಎ.ಎನ್.ಎ. :** ದೇಶದಲ್ಲಿ ಆಹಾರದ ಅಭಾವ ತೀವ್ರವಾದಾಗ ಅಂದರೆ, ೧೯೬೦ರ ಸುಮಾರಿಗೆ ಹೈಬ್ರಿಡ್ ತಳಿಗಳನ್ನು ಬೆಳೆಯಬೇಕಾದ ಅನಿವಾರ್ಯತೆ ಉಂಟಾಯಿತು. ಈ ಹೈಬ್ರಿಡ್ ತಳಿಗಳಲ್ಲಿ ರಾಸಾಯನಿಕಗಳನ್ನು ಬಳಸಲೇಬೇಕಾದ ಮತ್ತು ಈ ತಳಿಗಳು ಕ್ರಿಮಿ-ಕೀಟಾದಿಗಳ ಹಾವಳಿಗೆ ಸುಲಭವಾಗಿ ತುತ್ತಾಗುವಂಥ ಜೀನ್‌ಗಳನ್ನು ಹೊಂದಿರುತ್ತವಾಗಿ ರಾಸಾಯನಿಕಗಳ ಬಳಕೆ ಅನಿವಾರ್ಯವಾಗುತ್ತದೆ. ಇದರಿಂದ ಉಂಟಾದ ಇನ್ನೊಂದು ದುರಂತ ಎಂದರೆ, ಯಾವ ರೈತ ೨೫ ಟನ್ ರಾಸಾಯನಿಕ ಗೊಬ್ಬರ ಹಾಕುತ್ತಾನೆಯೋ, ಅಂದರೆ ವಿಪರೀತ ರಾಸಾಯನಿಕ ಗೊಬ್ಬರ ಬಳಸಿ, ಯಾವ ರೈತ ಹೆಚ್ಚು ಇಳುವರಿ ಪಡೆಯುತ್ತಾನೆಯೋ ಅವನನ್ನು ಪ್ರಗತಿಪರ ರೈತ ಎಂಬುದಾಗಿ ಗುರುತಿಸುವ ಪದ್ಧತಿ ಬೆಳೆದುಬಂತು. ಈ ರೀತಿ ಒಬ್ಬ ರೈತ ಇಳುವರಿಯನ್ನೇನೋ ಪಡೆಯುತ್ತಾನೆ, ಸರಿ. ಆದರೆ ೨-೩ ವರ್ಷಗಳು ಈ ರೀತಿ ಬೆಳೆದಾಗ ಮುಂದೆ ಆ ರೈತನ ಭೂಮಿ ಬರಡಾಗಿ, ಅಲ್ಲಿ ಬೆಳೆ ಬೆಳೆಯಲು ಸಾಧ್ಯವಿಲ್ಲದಂತಾಗುತ್ತದೆ. ಇಂಥಾ ಬೆಳೆ ಪದ್ಧತಿಗಳಿಂದಾಗಿ ಹಾಗೂ ಅಗತ್ಯಕ್ಕೆ ಮೀರಿದ ಹೆಚ್ಚಿನ ನೀರು ಒದಗಿಸಿದ ಪರಿಣಾಮವಾಗಿ ಜೌಗುಗಳುಂಟಾಗುತ್ತದೆ. ಇಂದು ಮಂಡ್ಯ ಸುತ್ತಮುತ್ತಲ ಶೇಕಡ ೧೫-೨೦ರಷ್ಟು ಭೂಮಿ ಬೇಸಾಯಕ್ಕೆ ಯೋಗ್ಯವಲ್ಲ.

**ಹೊ :** ಈ ಬಗ್ಗೆ ಪ್ರೊ॥ ವೆಂಕಟರಾವ್ ಅವರು ಏನನ್ನುತ್ತಾರೆ ?

**ಬಿ.ವಿ.ವಿ. ರಾವ್ :** ಹೆಬ್ಬಾಳದ ಪ್ರಯೋಗಗಳಿಂದ ಐದಾರು ವ... ಸಾಲಿನಲ್ಲಿ ಹೆಚ್ಚಿನ ಸಾರಜನಕ ಕೊಟ್ಟಾಗ, ಮಣ್ಣಿನ pH ೭ ರಿಂದ ೪.೫ರ...

ಇಳಿಯಿತು. ಇದು ಹೀಗೇ ನಡೆದರೆ ಭೂಮಿ ಬರಡಾಗುವುದು ಖಚಿತ.

ಎ.ಎನ್.ಎ. : ಇತ್ತೀಚಿನ ಸಮೀಕ್ಷೆಯ ಪ್ರಕಾರ ನಮ್ಮ ದೇಶದಲ್ಲಿ ಡ ೧೬ರಷ್ಟು ಜನಸಂಖ್ಯೆ ಮಧುಮೇಹ ರೋಗದಿಂದ ನರಳುತ್ತಿರು ಕ್ಕೆ ಇಂದು ನಾವು ಸೇವಿಸುತ್ತಿರುವ ಆಹಾರದ ಗುಣಮಟ್ಟವು ಕಾರಣ ರುವುದನ್ನೂ, ಈ ಆಹಾರಗಳಲ್ಲಿ ಪೋಷಕಾಂಶಗಳ ಕೊರತೆ ವುದನ್ನೂ ಸಂಶೋಧಕರು ಕಂಡುಕೊಂಡಿದ್ದಾರೆ. ಅದೇ ರೀತಿ ಲ್ಲಿ ಶೇಕಡ ೪೦ರಷ್ಟು ಸಂಖ್ಯೆಯ ರೈತರು ಬಡವರಾಗುತ್ತಿದ್ದಾರೆ.

**ಹೊ** : ಹೆಚ್ಚಿನ ಭೂಮಿ ಬೇಸಾಯ ಯೋಗ್ಯವಲ್ಲ ಎನ್ನುತ್ತೀರಿ. ರೆ, ಈಗ ಇಳುವರಿ ಹೆಚ್ಚುತ್ತಿರುವುದು ವಾಸ್ತವವಾಗಿದೆಯಲ್ಲವೆ ?

ಎ.ಎನ್.ಎ. : ಭಾರತದಲ್ಲಿ ಶೇಕಡ ೫೬ರಷ್ಟು ಭೂಮಿ ಬೇಸಾಯ ೋಗ್ಯವಲ್ಲ. ರಾಸಾಯನಿಕ ಗೊಬ್ಬರಗಳ ಬಳಕೆಯಿಂದ ಹೆಚ್ಚು ಾಣದ ಇಳುವರಿ ಬರುತ್ತಿದ್ದಾಗ್ಯೂ, ಗುಣಮಟ್ಟದಲ್ಲಿ ಅದು ಕಳಪೆ. ೀಚೆಗೆ ಪಂಜಾಬ್ ರೈತರಿಂದ ಅನೇಕ ಹೈಬ್ರಿಡ್ ಬೆಳೆ ರೂವಾರಿಗಳ ೀನು ಕ್ರಮೇಣ ಉತ್ಪಾದಕತೆಯನ್ನು ಕಳೆದುಕೊಳ್ಳುತ್ತಿದೆ.

**ಹೊ** : ಬೇಸಾಯವನ್ನು ಕಾರ್ಪೊರೇಟ್ ಸಂಸ್ಥೆಗಳಿಗೆ ವಹಿಸುವುದು ಟ್ಟಸರಿ ?

ಎ.ಎನ್.ಎ. : ಈ ಬಗೆಯ ಚಿಂತನೆ ಒಂದು ಅತೀವ ದುರಂತ. ನನ್ನು ಅವನ ಜಮೀನಿನಿಂದ ಹೊರಹಾಕಿ, ಆತ ವಲಸೆ ಹೋಗುವಂತೆ ಡಿ, ಪಟ್ಟಣಗಳ ಕೊಳೆಗೇರಿ ವಾಸಿಯಾಗುವ ಸ್ಥಿತಿಗೆ ದೂಡಲಾಗುತ್ತಿದೆ. ಜನ ವಿರೋಧಿ. ಬಲಾಢ್ಯ ಶಕ್ತಿಗಳ ತಾಂಡವ ನೃತ್ಯ ಇದು.

ಬಿ.ವಿ.ವಿ.ರಾವ್ : ಇಂಥಾ ಸ್ಥಿತಿ ಒಂದು ರಾವಣ ರಾಜ್ಯ. ಸುವರೆಲ್ಲ ಅರೆಮಾನವರಾಗುತ್ತಾರೆ, ಅಷ್ಟೆ.

ಎ.ಎನ್.ಎ. : ನಮ್ಮ ಸಂಸ್ಕೃತಿಯಲ್ಲಿ ಗರಿಕೆ ಹುಲ್ಲಿಗೆ ಎಂಥಾ ವಿದೆ ?! ಗರಿಕೆ ಹುಲ್ಲು ಪೂಜನೀಯವಾಗಿದ್ದದ್ದು. ಗರಿಕೆ ಹುಲ್ಲನ್ನು ುರ್ವೇದದಲ್ಲಿ Green Blood ಎನ್ನುತ್ತಾರೆ! ಈ ಕಾರ್ಪೊರೇಟ್ ಸ್ಕೃತಿ ಬರಲಾಗಿ ಗರಿಕೆಯನ್ನು ಕಳೆ ಎಂದು ಪರಿಗಣಿಸಿ ಅದನ್ನು ರ್ಮೂಲನ ಮಾಡಲು ನಿರ್ಧರಿಸಿದ್ದಾರೆ. ಅದಕ್ಕಾಗಿ ರೈತರಿಗೆ ಬೈನೂರರಿಂದ ಸಾವಿರದ ಐನೂರು ರೂ.ವರೆಗೆ ಸಬ್ಸಿಡಿ ಡಲಾಗುತ್ತಿದೆ. ಕಳೆನಾಶಕಗಳನ್ನು ಬಳಸಿ ಗರಿಕೆ ಹುಲ್ಲನ್ನು ರ್ಮೂಲನ ಮಾಡುವ ಪ್ರಯತ್ನ ನಡೆಯುತ್ತಿದೆ. ಗರಿಕೆಯು ಮಣ್ಣಿನ ಕಳಿಯನ್ನು ತಡೆಯುತ್ತೆ, ಅದು ದನಗಳಿಗೆ ಮೇವು ಕೂಡ ಆಗಿತ್ತು.

ಬಿ.ವಿ.ವಿ. ರಾವ್ : ಬೆಳೆಗೂ ಗರಿಕೆಗೂ ಪೈಪೋಟಿಯಾಗುತ್ತೆ. ಬೆಳೆ ನ್ನಾಗಿ ಬರೋದಿಲ್ಲ ಮತ್ತು ಗರಿಕೆಯು ಕೇವಲ ಒಂದು 'weed' ಬುದು ಈಗಿನ ವಿಜ್ಞಾನಿಗಳ ವಾದ.

ಎ.ಎನ್.ಎ. : ಬರಿ ಇಂಥ ಕೆಲಸಕ್ಕೆ ಕೋಟಿ ಕೋಟಿ ಹಣ ಖರ್ಚು ಡಿದ್ರು ನಮ್ಮ ದೇಶದಲ್ಲಿ. ಒಂದು ಕಡೆ ಗರಿಕೆ ಕಳೆಯಲಿಕ್ಕೆ ಹಣ ರ್ಚು. ಇನ್ನೊಂದು ಕಡೆ ಗಾಲ್ಫ್ ಕೋರ್ಸ್‌ಗಳಿಗೆಂದು ಹುಲ್ಲನ್ನು ದು ಮಾಡಲಿಕ್ಕೆ, ಪ್ರವಾಸಿಗಳನ್ನು ಆಕರ್ಷಿಸಲಿಕ್ಕೆ ಖರ್ಚು.

**ಹೊ** : ಯಾರು ಹೀಗೆಲ್ಲ ಮಾಡಿದ್ದು? ಸಾಮಾನ್ಯ ಜನರಾ ? ಕೃಷಿ ನಿಗಳಾ ? ಅಧಿಕಾರಿಗಳಾ ? ಕೃಷಿ ಕಾಲೇಜುಗಳಲ್ಲಿ ಓದಿದ ನಮ್ಮ ವಿದ್ಯಾರ್ಥಿಗಳೆ ಯಾರೋ ಇರಬೇಕಲ್ಲವೆ ?

ಎ.ಎನ್.ಎ. : ಜಮೀನಿನಲ್ಲಿರುವ ಮರದ ನೆರಳು ಬೆಳೆಯ ಮೇಲೆ ಳುವುದರಿಂದ ಇಳುವರಿ ಕಡಿಮೆಯಾಗುತ್ತದೆ; ಜಮೀನಿನಲ್ಲಿರುವ ರಗಳನ್ನು ಕಡಿದು ಹಾಕಿ ಎಂದು ಶಿಫಾರಸು ಮಾಡುತ್ತಾರೆ.

**ಹೊ** : ಇಂಥದನ್ನೆಲ್ಲ ಕೃಷಿ ಕಾಲೇಜುಗಳಲ್ಲಿ ಹೇಳಿಕೊಡುತ್ತಾರೆಯೆ ?

ಎ.ಎನ್.ಎ. : ಉದಾಹರಣೆಗೆ ನೋಡಿ, ಬಗಿನಿ ಮರಕ್ಕೆ ಇಪ್ಪತ್ತೈದು ತ್ರಿಯ ಇರುವೆಗಳು ಹತ್ತುತ್ತವೆ. ಈ ಇರುವೆಗಳು ಜಮೀನಿನಲ್ಲಿ ಗಳನ್ನು ಕಾಡುವ ಜೇಸೀಡ್ಸ್, ಏಫಿಡ್‌ಗಳನ್ನು ಭಕ್ಷಿಸಿ ರೈತರ ಬೆಳೆಗೆ ವ ನಷ್ಟವನ್ನು ತಡೆಯುತ್ತವೆ. ಇಂದು ಜೇಸೀಡ್ಸ್, ನೆಮಟೋಡ್ಸ್, ಡ್‌ನ ಹತ್ತಿಕ್ಕಲು ನೂರಾರು ರೂಪಾಯಿ ಸಬ್ಸಿಡಿ ಕೊಡುತ್ತಾ ಇದ್ದಾರೆ.



ಎಡದಿಂದ ಬಲಕ್ಕೆ : ಎನ್. ಗೋಪಾಲಕೃಷ್ಣ, ಸಹನ, ಬಿ. ವಿ. ವೆಂಕಟರಾವ್, ಎ. ಎನ್. ಎಲ್ಲಪ್ಪ ರೆಡ್ಡಿ
ಕೆ. ಎಸ್. ಪಾರ್ಥಸಾರಥಿ ಮತ್ತು ಜಿ. ರಾಮಕೃಷ್ಣ

**ಹೊ** : 'ಮಾನ್ಸಾಂಟೊ ಸೀಡ್ಸ್‌ನ ಸ್ಟೋರಿ' ಇದೆಯಲ್ಲ ?

ಎ.ಎನ್.ಎ. : Terminator Technology ಬಂದಾಗ ಮಾಧ್ಯಮಗಳಲ್ಲಿ ಭಾರಿ ಪ್ರಚಾರ ಆಯಿತು. ಅದು ಜೀವವೈವಿಧ್ಯತೆಯನ್ನು ನಾಶಮಾಡುತ್ತದೆ ಎಂದು ಪ್ರಮಾಣಿಸಿ ತೋರಿಸಿದಾಗ ಮಾಧ್ಯಮದಲ್ಲಿ ಪ್ರಚಾರ ದೊರೆಯುವುದಿರಲಿ, ಅವರ ಗಮನಕ್ಕೇ ಬಾರದೆ ಹೋಯಿತು.

**ಹೊ** : ಈ ತಂತ್ರಜ್ಞಾನಗಳೆಲ್ಲ ವಿದೇಶೀಯವೆ ? ಹೀಗೆಲ್ಲ ನಿರ್ಧರಿಸುವವರಾರು ?

ಎ.ಎನ್.ಎ. : Multinational Companies lobbying with...

**ಹೊ** : Political interests ?

ಎ.ಎನ್.ಎ. : ...with scientists.

**ಹೊ** : ಓ! ನಮ್ಮ ವಿಜ್ಞಾನಿಗಳೆ!? ನಾವೇ ನಮ್ಮ ಕಾಲೇಜುಗಳಲ್ಲೇ ಹೀಗೆ ಪಾಠ ಹೇಳಿಕೊಟ್ಟಿರಬೇಕಲ್ಲವೆ ?

ಎ.ಎನ್.ಎ. : ರಾಕ್‌ಫೆಲ್ಲರ್ ಇನ್‌ಸ್ಟಿಟ್ಯೂಟ್‌ನವರು ಎಚ್ಚರಿಕೆ ಕೊಡುವವರೆಗೂ ಹಿಂತೆಗೆದುಕೊಳ್ಳಲಿಲ್ಲ. ಆಮೇಲೆ 'ನಾವು Terminatior Technologyನ promote ಮಾಡಲ್ಲ' ಎಂದು ಹೇಳಿ ಮುಗಿಸಿಬಿಟ್ಟರು.

**ಹೊ** : ಚೆನ್ನಾಗಿ ಸಿಗರೇಟುಗಳನ್ನು ಪೂರೈಕೆ ಮಾಡಿ ಎಲ್ಲೋ ಕೆಳಗೆ, ಸಣ್ಣಕ್ಷರಗಳಲ್ಲಿ 'ಧೂಮಪಾನ ಆರೋಗ್ಯಕ್ಕೆ ಹಾನಿಕರ' ಎಂದು ಬರೆದ ಹಾಗೆ.

ಎ.ಎನ್.ಎ. : ಹಳೆಯ ಕೃಷಿ ಪದ್ಧತಿಗಳನ್ನೆಲ್ಲ ಸಂಪೂರ್ಣ ಕೈಬಿಟ್ಟಿದ್ದೀವಿ ಈಗ...

**ಹೊ** : ನಮ್ಮ ಶೈಕ್ಷಣಿಕ ವ್ಯವಸ್ಥೆಯಲ್ಲಿಯೇ ತಪ್ಪಿದೆ ಎಂದಾಯಿತಲ್ಲವೆ ? ಈ ಸುಳಿಯಿಂದ ಹೊರಬರುವುದು ಹೇಗೆ ?

ಬಿ.ವಿ.ವಿ. ರಾವ್ : ಯಾಕೆ ಹೀಗಾಗ್ತಾ ಇದೆ ಎಂದರೆ, ಈಗ ನಮ್ಮ ಕೃಷಿ western modern technologyನ ಸಂಪೂರ್ಣವಾಗಿ ಅನುಸರಿಸಲು ಹೊರಟಿದೆ. 'Lab to Land' ಎಂಬ ಮಾತು ಕೇಳಿಬರುತ್ತಿದೆ. Land ನಿಂದ Labಗೆ ಸಮಸ್ಯೆ ಬರಬೇಕು. ಜಮೀನುಗಳಿಂದ ರೈತರ ಸಮಸ್ಯೆ ಕೃಷಿ ವಿಜ್ಞಾನಿಯತ್ತ ಪರಿಶೀಲನೆಗೆ, ಪರಿಹಾರಕ್ಕೆ, ಸಂಶೋಧನಾಲಯಗಳಿಗೆ ಬರಬೇಕು. ಜನಪರ ಅಧ್ಯಯನ ಶೀಲತೆಗೆ ಮನ್ನಣೆ ದೊರೆಯಬೇಕು. ನಮ್ಮ ಶಿಕ್ಷಕರು ವಿದೇಶೀ ಪುಸ್ತಕಗಳನ್ನು ಓದಿಕೊಂಡು ಪಾಠ ಮಾಡುತ್ತಾರೆ. ಕೃಷಿ ಸಂಶೋಧನೆ ವಿದೇಶೀ ನಿಯತಕಾಲಿಕೆಗಳಿಂದ ಕಂಡುಕೊಂಡದ್ದಾಗಿರದೆ ಸ್ಥಳೀಯ ಸಮಸ್ಯೆಗಳ ಪರಿಹಾರಕ್ಕೆ, ಸ್ಥಳೀಯ ಸಂಪ್ರದಾಯಗಳನ್ನು ಮೈಗೂಡಿಸಿಕೊಂಡ ಅಧ್ಯಯನ ಆಗಿರಬೇಕು.

ಎ.ಎನ್.ಎ. : ಆಯಿಲ್ ಪಾಮ್ ಬೇಸಾಯ ಮಾಡಲು ರೈತರಿಗೆ ಸಬ್ಸಿಡಿ ಕೊಟ್ಟು, ರೈತರ ಜಮೀನು ಹೋಯಿತು. ರೈತ ಸಾಲಗಾರನಾದ. ರಬ್ಬರ್‌ಗೆ ಸಬ್ಸಿಡಿ ಕೊಡುತ್ತಿದ್ದಾರೆ. ರೈತರಿಗೆ ಇಂಥಾ ಆಸೆ ಹುಟ್ಟಿಸಿದವರು ಸರಕಾರದವರೆ. ರೈತರಲ್ಲಿದ್ದ ಪಾರಂಪರಿಕ ವ್ಯವಸಾಯ ಜ್ಞಾನವನ್ನು ನಾಶಮಾಡಲಾಯಿತು. ಇದೀಗ ನಮಗೆ ಅಗತ್ಯ ಇರುವುದು ಜೀವರಕ್ಷಕ ಕಾನೂನು ಅಥವಾ ಬಯೋಸೇಫ್ಟಿ.

**ಹೊ** : ಇದಕ್ಕೆಲ್ಲ ತಡೆಯೊಡ್ಡಬೇಕು. ಕಿರಿಯರಿಗೆ ಯಾವುದು ಸರಿಯಾದ ಕೃಷಿ ಪದ್ಧತಿ ಎಂದು ತಿಳಿಸುವ ಜವಾಬ್ದಾರಿ ಹಿರಿಯರದು. ಕೃಷಿ ನೀತಿಯಲ್ಲಿ ಯಾವ ಬದಲಾವಣೆಗಳು ಅಗತ್ಯವಿದೆ ?

ಬಿ.ವಿ.ವಿ. ರಾವ್ : ರಾಗಿ ಬಡವರ ಧಾನ್ಯ ಎಂಬ ಮಾತಿದೆ. ಅದು ಅತ್ಯಂತ ಹೆಚ್ಚಿನ ಪೌಷ್ಟಿಕಾಂಶ ಉಳ್ಳದ್ದು. ಅದರ ಬಗ್ಗೆ ಹೆಚ್ಚು ಸಂಶೋಧನೆ ಆಗಿರಲಿಲ್ಲ. ಅದು ಮಳೆ ಆಧಾರಿತ ಧಾನ್ಯ. ರಾಗಿಯಲ್ಲಿ



ಬೇರೆ ಬೇರೆ ತಳಿಗಳನ್ನು ತಂದರು. ಐದು ಕ್ವಿಂಟಾಲಿದ್ದದ್ದು ಹನ್ನೆರಡು ಕ್ವಿಂಟಾಲ್‌ನಷ್ಟು ಇಳುವರಿ ಬರುವಂಥ 'Indo-African' ತಳಿಗಳು, 'Soft' ತಳಿಗಳನ್ನು ತಂದರು. ಲಕ್ಷ್ಮಣಯ್ಯನವರು ಒಳ್ಳೆಯ ಕೆಲಸ ಮಾಡಿದರು. ರಾಗಿಗೆ ಪ್ರಾಧ್ಯಾನ್ಯತೆ ದೊರೆಯಿತು. ನೀರಾವರಿ ಇಲ್ಲದ ಪ್ರದೇಶಗಳಲ್ಲಿ, ಮಳೆಯನ್ನೇ ಆಧರಿಸಿದ ರೈತರು ರಾಗಿ ಬೆಳೆ ಬೆಳೆಯಬಹುದು ಎಂದಾಯಿತು.

ಎ.ಎನ್.ಎ. : ಅಂತೆಯೇ ಕಳೆದುಹೋಗಿರುವ ನವಣೆ, ಸಜ್ಜೆಯಂಥ ಧಾನ್ಯಗಳನ್ನು ಪುನಃ ಬೆಳೆಯುವಂತಾಗಬೇಕು.

**ಬಿ.ವಿ.ವಿ. ರಾವ್** : ಕೃಷಿಗೆ ಕೈಗಾರಿಕಾ ಸ್ಥಾನಮಾನ ಸಿಗಬೇಕು. ನೈಸರ್ಗಿಕ ಸಂಪನ್ಮೂಲಗಳ ಸದ್ಬಳಕೆಯಾಗಬೇಕು. Capital intensive ಕೃಷಿ ಆಗಬೇಕು. ಕೃಷಿಯಲ್ಲಿ ಹೆಚ್ಚು ಬಂಡವಾಳ ಹೂಡಿಕೆಯಾಗಬೇಕು. ಬಂಡವಾಳ ವಿತರಣೆ ಸರಿಯಾಗಿ ಆಗಬೇಕು. ರೈತರಿಗೆ ನಿಗದಿತ ಸಮಯದಲ್ಲಿ ಸಾಲ ಸೌಲಭ್ಯಗಳು, ಬೀಜ, ಬಿತ್ತನೆ ಸಾಮಗ್ರಿ, ಗೊಬ್ಬರ ದೊರೆಯಬೇಕು. ಮುಖ್ಯವಾಗಿ ಗ್ರಾಮೀಣ ಮಹಿಳೆಯರಿಗೆ ಸ್ಥಾನಮಾನ ದೊರಕಬೇಕು.

ಎ.ಎನ್.ಎ. : ಬಯೋಸೇಫ್ಟಿ ಒಂದು. ಎರಡನೆಯದು ಯಾವುದೇ ಹೊಸ ಆವಿಷ್ಕಾರ, ತಂತ್ರಜ್ಞಾನ, ವಿದೇಶೀ ಬೀಜವನ್ನು ತರುವಾಗ one should scrupulously scrutinize and make that scientist accountable. ಅದರ ಬಗ್ಗೆ ಸಂಪೂರ್ಣ ಸಂಶೋಧನೆ, ಅಧ್ಯಯನದ ನಂತರವೇ ಬಳಕೆಗೆ ತರಬೇಕು. ಇದು ಜನರ ಜೀವನ, ನಮ್ಮ ರೈತರ ಜೀವನ, ಮುಂದಿನ ಪೀಳಿಗೆಗಳ ಜೀವದ ಪ್ರಶ್ನೆ.

ಬಿ.ವಿ.ವಿ.ರಾವ್ : ಮಾರುಕಟ್ಟೆ ಸುಧಾರಣೆಯಾಗಬೇಕು. ಸರಕಾರದ ಸವಲತ್ತುಗಳು -ವಿದ್ಯುಚ್ಛಕ್ತಿ, ನೀರು ಎಲ್ಲ ಶ್ರೀಮಂತ ಮತ್ತು ದೊಡ್ಡ ರೈತರಿಗೆ ಒದಗಿಸಲಾಗುತ್ತಿದೆ. ಶೇಕಡ ಎಪ್ಪತ್ತರಷ್ಟಿರುವ ಸಣ್ಣ ರೈತರಿಗೆ ಈ ಸೌಲಭ್ಯಗಳು ಉಪಯೋಗವಾಗಬೇಕು. ಸಣ್ಣ ರೈತನ ಉತ್ಪಾದನಾ ಸಾಮರ್ಥ್ಯ ಹೆಚ್ಚು ಮಾಡಬೇಕು. ರೈತರಿಗೆ ಸಹಾಯ ಮಾಡುವ ನೆಪದಲ್ಲಿ ಸರಬರಾಜು ಮಾಡುವ ಬೀಜಗಳು ಕಳಪೆಯಾಗಿರಬಾರದು.

'Agro Forestry' ಮತ್ತು 'Integrated Farming', ಮರಗಿಡ ಎಲ್ಲ ಒಟ್ಟಿಗೆ ಬೆಳೆಯುವಂಥಾದ್ದು. ರೈತ ತನ್ನ ಆಹಾರದ ಅಗತ್ಯಗಳನ್ನು, ತನಗೆ ಬೇಕಾದ ಧಾನ್ಯಗಳನ್ನು ಅಂತೆಯೇ ಕಾಳುಗಳು, ತರಕಾರಿಗಳನ್ನು ಬೆಳೆದುಕೊಳ್ಳುವಂತಾಗಬೇಕು.

ಎ.ಎನ್.ಎ. : ನಾಗಾಲೋಟದಿಂದ ಏರುತ್ತಿರುವ ಪರಿಸರ ಮಾಲಿನ್ಯ ಮತ್ತು ವಾತಾವರಣದಲ್ಲಿನ ಅಪಾಯಕಾರಿ ಬದಲಾವಣೆಗಳಿಗೆ ತಡೆಯೊಡ್ಡುವಂಥ ಬಲವಾದ ಕಾನೂನು, ನಿಯಮ ಜಾರಿಗೆ ಬರಬೇಕು.

**ಹೊ** : ಸಾಕಷ್ಟು ಸಮಯ ತೆಗೆದುಕೊಂಡ್ವಿ. ನಿಮ್ಮಿಂದ ತಿಳಿಯುವುದು ಇನ್ನೂ ಸಾಕಷ್ಟಿದೆ. ಮತ್ತೊಮ್ಮೆ ಭೇಟ್ಟಿಯಾಗೋಣ. ನಮಸ್ಕಾರ.

ಲೇಖನ ಸಿದ್ಧಪಡಿಸಿದವರು : **ಎಸ್. ಗೋಪಾಲಕೃಷ್ಣ**
ನಂ. ೧೧೧, ೪ನೇ ಕ್ರಾಸ್, ಬಿ.ಎಚ್.ಇ.ಎಲ್. ಎದುರು
ಕೆ. ಎಚ್. ರಂಗನಾಥ ಕಾಲೋನಿ, ಮೈಸೂರು ರಸ್ತೆ ಬೆಂಗಳೂರು - ೫೬೦ ೦೨೬



**ಸೂತ್ರ ಕಳೆದುಕೊಂಡ ಗೊಂಬೆಗಳು**

ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ದುಮ್ಮಿ ಹೋಬಳಿಯ ಚಿಕ್ಕಗಂಗೂರು ನೂರಿನ್ನೂರು ಮನೆಗಳ ಒಂದು ಪುಟ್ಟ ಗ್ರಾಮ. ಆ ಗ್ರಾಮದಲ್ಲಿ ಒಂದು ಮನೆ ಸಂಪೂರ್ಣ ಶಿಥಿಲಾವಸ್ಥೆಯಲ್ಲಿತ್ತು. ಆ ಮನೆಯಲ್ಲಿ ೧೯೩೦-೪೦ರ ಸುಮಾರಿನಲ್ಲಿ ನರಸಿಂಹ ಭಾಗವತ ರೆಂಬುವರು ಬದುಕಿದ್ದರು. ಆ ಕಾಲಕ್ಕೆ ಅವರು ತಕ್ಕಮಟ್ಟಿಗೆ ವಿದ್ಯಾಭ್ಯಾಸ ಮಾಡಿದ್ದವರಾಗಿ ಆ ಹಿನ್ನೆಲೆಯಲ್ಲಿ ...ಮಾಯಣ, ಮಹಾಭಾರತ, ಭಾಗವತ ಈ ಗ್ರಂಥಗಳನ್ನು ಬಲ್ಲವರಾಗಿದ್ದರು. ಇವರ ...ಗ ಕನ್ನಡ, ಇಂಗ್ಲಿಷ್, ಕಲಿತ ಪ್ರಾಥಮಿಕ ಶಾಲೆಯ ಉಪಾಧ್ಯಾಯರಾಗಿ, ಮದುವೆ ...ಕ್ಕಳು ಆದನಂತರ ಅಕಾಲ ಮರಣಕ್ಕೆ ತುತ್ತಾದರು.

ಮುಖ್ಯವಾಗಿ ಇಲ್ಲಿ ಪ್ರಸ್ತಾಪಿಸಬೇಕಾಗಿರುವುದು ನರಸಿಂಹ ಭಾಗವತರ ವಿಚಾರ. ...ಊರಿಗೆಲ್ಲ ವೈದ್ಯ ಮಾಡುತ್ತಿದ್ದ ಭಾಗವತರು ಮನರಂಜನೆಯನ್ನು ಒದಗಿಸುವವ ...ಗಿದ್ದರು, ಅದೂ ಸೂತ್ರದ ಗೊಂಬೆಯಾಟದ ಮೂಲಕ. ಕೇವಲ ಚಿಕ್ಕಗಂಗೂರು ...ಮಾತ್ರವಲ್ಲದೆ ಆ ಸುತ್ತಿನ ಎಲ್ಲ ಗ್ರಾಮ ತಾಲ್ಲೂಕುಗಳಲ್ಲೂ ಅವರ ಗೊಂಬೆಯಾಟದ ...ಳವಿರುತ್ತಿತ್ತು. ಡಿಸೆಂಬರ್ ತಿಂಗಳಲ್ಲಿ ಸೂತ್ರದ ಗೊಂಬೆಗಳ ದೊಡ್ಡ ಗಾತ್ರದ ...ಟ್ಟಿಗೆ, ಇತರ ಪರಿಕರಗಳ ಪೆಟ್ಟಿಗೆಯೊಡನೆ ಗಾಡಿ ಹೊಡೆಸಿಕೊಂಡು ಹೊರಟರೆ ...ಪಸು ಬರುವುದು, ಬೇಸಿಗೆ ಕಳೆದ ನಂತರವೇ. ಅಂದರೆ ಯುಗಾದಿ ಹೊತ್ತಿಗೆ.

ದಸರಾ ಸಂದರ್ಭದಲ್ಲಿ ನರಸಿಂಹ ಭಾಗವತರು ಸೂತ್ರದ ಗೊಂಬೆಗಳನ್ನೆಲ್ಲ ...ನೆಯ ಮುಂದಣ ಜಗುಲಿಯಲ್ಲಿರಿಸಿ ಅದಕ್ಕೆ ಪೂಜೆ ಸಲ್ಲಿಸಿ ಊರಿಗೆಲ್ಲ ಪರ ...ಾಡಿಸುತ್ತಿದ್ದರು. ಭಾಗವತರಿಗೆ ಮತ್ತು ಗ್ರಾಮಸ್ಥರಿಗೆ ಸೂತ್ರದ ಗೊಂಬೆಗಳೆಂದರೆ ...ವು ಕೇವಲ ಮರದ ಗೊಂಬೆಗಳಲ್ಲ. ಅವು ಮಹಾಭಾರತ, ರಾಮಾಯಣದ ...ೀವಂತ ಪಾತ್ರಗಳೇ. ಯಾಕೆಂದರೆ, ಆಟದ ಸಮಯದಲ್ಲಿ ಅವು ರಾಮಾಯಣ, ...ಹಾಭಾರತಗಳ ಮಹಾಮಹಾ ಪಾತ್ರಗಳನ್ನೇ ಪ್ರತಿನಿಧಿಸುತ್ತವೆ ಎಂಬುದು ಎಲ್ಲರ ಬಲವಾದ ನಂಬಿಕೆ. ನರಸಿಂಹ ಭಾಗವತರು ತೀರಿಕೊಂಡು ಆ ಗೊಂಬೆಗಳನ್ನು ಆಡಿಸುವ ವಾರಸುದಾರ ಕಲಾವಿದರು ಇಲ್ಲದಂತಾಗಿ ಸುಮಾರು ಮೂವತ್ತು ವರ್ಷಗಳ ಕಾಲ ಮರದ ಪೆಟ್ಟಿಗೆಯಲ್ಲಿಯೇ ಮಲಗಿದ್ದು ಮೊನ್ನೆ ಮೊನ್ನೆ ಅವು ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ವಸ್ತುಸಂಗ್ರಹಾಲಯವನ್ನು ಸೇರಿದವು. ಚಿಕ್ಕಗಂಗೂರು ಗ್ರಾಮದ ಆ ಮನೆಯಲ್ಲಿ ಯಾರೂ ವಾಸವಿಲ್ಲದೆ, ಭದ್ರಾವತಿಯಲ್ಲಿದ್ದ ವಾರಸುದಾರರು ಪದ್ಮಾವತಿಯವರು ಬಂದು ಆ ಗೊಂಬೆಗಳನ್ನು ತಮ್ಮ ಜೀವಂತ ಮಕ್ಕಳಂತೆ ಭಾವುಕತೆಯಿಂದ ಕಳಿಸಿಕೊಟ್ಟರು.

ನಲವತ್ತು ಐವತ್ತು ದಶಕಗಳ ಹಿಂದೆ ಸುತ್ತೇಳು ಗ್ರಾಮಗಳಿಗೆ ಪ್ರಾಚೀನ ಕಾವ್ಯ ಕಥಾಭಾಗಗಳನ್ನು ಆರಾಧನೆ ಮತ್ತು ಭಕ್ತಿಯ ಹಿನ್ನೆಲೆಯಲ್ಲಿ ಪ್ರಚಾರ ಮಾಡುತ್ತಿದ್ದ ಗೊಂಬೆಗಳು ಇಂದು ಕೇವಲ ವಸ್ತು ಸಂಗ್ರಹಾಲಯದ ಪ್ರದರ್ಶನ ಗೊಂಬೆಗಳಾಗಿವೆ. ಇದರರ್ಥ, ಈ ಹೊತ್ತು ಜನಪದ ಕಲೆಗಳು ತಮ್ಮ ನಿಜ ಸ್ವರೂಪ ಮತ್ತು ಮೂಲ ಅರ್ಥಗಳನ್ನು ಕಳೆದುಕೊಳ್ಳುತ್ತಿವೆ ಎಂಬುದೇ ಆಗಿದೆ.

**ಆಧುನಿಕ ಮನರಂಜನಾ ಮಾಧ್ಯಮಗಳು**

ಭಕ್ತಿ, ಆರಾಧನೆ, ಜ್ಞಾನ ಮತ್ತು ಮನರಂಜನೆಯ ಹಿನ್ನೆಲೆಯಲ್ಲಿದ್ದ ಜನಪದ ಕಲೆಗಳು ಇಂದು ನಶಿಸುತ್ತ ಆ ಜಾಗದಲ್ಲಿ ಮಾಧ್ಯಮಗಳು ಮತ್ತು ನಗಿಸುವ ಗೋಷ್ಠಿಗಳ ಪ್ರಾಬಲ್ಯ ಹೆಚ್ಚುತ್ತಲಿರುವುದು ಇದೀಗ ಎಲ್ಲರೂ ಬಲ್ಲ ಸಂಗತಿಯಾಗಿದೆ. ಏಕೆ ಹೀಗಾಯಿತು, ಜನ ಬದಲಾದದ್ದು ಹೇಗೆ ಎಂದುಕೊಳ್ಳುವುದಾದರೆ, ಸಾಮಾಜಿಕ ಸ್ಥಿತಿಗತಿ ಕಳೆದ ಶತಮಾನಗಳಿಗಿಂತ ಹೆಚ್ಚು ಅನುಕೂಲ ಸ್ಥಿತಿಯಲ್ಲಿದೆ. ಉದ್ಯೋಗ ಮತ್ತು ಅರ್ಥ ಗಳಿಕೆಯಲ್ಲಿ ವ್ಯಾಪಾರದ ಭಾವನೆ ಊರ್ಜಿತವಾಗುತ್ತಿದೆ. ವ್ಯವಸಾಯ ಮತ್ತು ಕೇವಲ ಆಹಾರ ಪದಾರ್ಥಗಳ ವಿನಿಮಯದ ಬದುಕಿನ ಹಿನ್ನೆಲೆಯಲ್ಲಿ ಹುಟ್ಟಿದ ಕಲೆಗಳು ಐಹಿಕ ಸಂಪತ್ತಿಗೆ ಹೆಚ್ಚು ಬೆಲೆ ಕೊಟ್ಟಿರಲಿಲ್ಲ. ಇದು ಭಾರತೀಯ ಜೀವನ ಕ್ರಮದ ಒಂದು ಪದ್ಧತಿಯಾಗಿದ್ದಿತು. ಆದರೆ

# ...ಜನಪದ ಕಲೆಗಳು - ಪುನರುಜ್ಜೀವನ

ಡಾ|| ಕೃಷ್ಣಮೂರ್ತಿ ಹನೂರು







ಕೈಗಾರಿಕೀಕರಣ ಮತ್ತು ಜಾಗತೀಕರಣದ ನಂತರ ವ್ಯಾಪಾರ ಮತ್ತು ಹಣ ಮುಖ್ಯವಾಗಿ; ಭಕ್ತಿ, ಆರಾಧನೆ, ಜಾತ್ರೆಗಳು ಮತ್ತು ಅದರ ಭಾಗವೆನಿಸುವ ಜನಪದ ಕಲೆಗಳು ಕಳೆಗುಂದುತ್ತಲಿವೆ. ಹಣ ಮತ್ತು ಅಧಿಕಾರಕ್ಕೆ ಎಲ್ಲವನ್ನೂ ಕೀಳಾಗಿ ನೋಡುವ ಒಂದು ಪರಿಪಾಠವಿರುತ್ತದೆ. ಅದಕ್ಕೆ ಒಟ್ಟು ಪ್ರಕೃತಿಯೇ ಒಂದು ವ್ಯಾಪಾರದ ಗಣಿಯಾಗಿ ಕಾಣಿಸುತ್ತದೆ. ವ್ಯವಸಾಯ ಮತ್ತು ಆರಾಧನೆಯ ನೆಲೆಯಲ್ಲಿ ಹುಟ್ಟಿ ಬೆಳೆದುಕೊಂಡು ಬಂದ ಕಲಾ ಸಮೂಹ ಸಮಯವ್ಯರ್ಥದ್ದು ಅಥವಾ ಏನೂ ಲಾಭ ತರುವಂಥದಲ್ಲವೆನ್ನಿಸುವುದಾಗಿಬಿಡುತ್ತದೆ. ಜತೆಗೆ ಜನಪದ ಪ್ರದರ್ಶನ ಕಲೆಗಳು ನಿಧಾನಗತಿಯ ಮನರಂಜನಾ ಸಾಧನಗಳಾಗಿರುತ್ತವೆ.

ದೇವರ ಮುಂದೆ ನಂದಿ ಧ್ವಜ ಕುಣಿಸುವುದು ಅಥವಾ ಕೋಲು ಹಾಕುವುದು ಕೇವಲ ಮನರಂಜನೆಯ ಸಂಗತಿಗಳಲ್ಲ. ಮಂಟೇಸ್ವಾಮಿ, ಮಹದೇಶ್ವರರ ಕಾವ್ಯ ಭಾಗಗಳನ್ನು ನೀಲಗಾರರು ಇಲ್ಲವೇ ಗುಡ್ಡರು ಹಾಡಿ ಮುಗಿಸಲು ಏಳೆಂಟು ರಾತ್ರಿಗಳನ್ನಾದರೂ ತೆಗೆದುಕೊಳ್ಳುತ್ತಾರೆ. ಬದಲಾದ ವಿದ್ಯಮಾನಗಳಲ್ಲಿ ನಗರ ಹಾಗೂ ತಾಲ್ಲೂಕು ಪ್ರದೇಶದ ಜನಸಮೂಹಕ್ಕೆ ಜನಪದ ಕಲೆಗಳು ಬೇಡುವಷ್ಟು ಸಮಯವನ್ನು ನೀಡಲಾಗುತ್ತಿಲ್ಲ. ಇದರಿಂದ ಮನರಂಜನೆಗೆ ಬೇರೊಂದು ಮಾರ್ಗ ಹಿಡಿಯುತ್ತ ಇದೀಗ ದೂರದರ್ಶನವೇ ಅಲ್ಲದೆ ಇನ್ನಿತರ ಮಾಧ್ಯಮಗಳು ಹಾಸ್ಯ ಗೋಷ್ಠಿಗಳನ್ನು ಅವಲಂಬಿಸಿವೆ. ಈ ಹೊತ್ತಿನ ಹಗುರ ಜೀವನಕ್ಕೆ ಅವು ಪೋಷಕವಾಗುವಂತೆಯೂ ಇವೆ. ಇಂದಿನ ಮನರಂಜನಾ ಗೋಷ್ಠಿಗಳಿಗೆ ಮಾತೇ, ದೃಶ್ಯವೇ ಮುಖ್ಯವಾಗಿರುವುದರಿಂದ ಇದಕ್ಕಾಗಿ ಯಾವುದೇ ಸಂದರ್ಭಕ್ಕೆ ಕಾಯಬೇಕಾಗಿಲ್ಲ. ಜನಪದ ಕಲೆಯ ಪ್ರದರ್ಶನಕ್ಕೆ ಬೇಕಾದ ತಯಾರಿಯೇ ಬೇರೆ! ಅದಕ್ಕೆ ಒಂದು ಆವರಣವೇ ಸೃಷ್ಟಿಯಾಗಬೇಕು. ಅದು ಅರಳುವುದು, ಜೀವಂತಗೊಳ್ಳುವುದು ಅಂಥ ಸಂದರ್ಭಗಳಲ್ಲೇ. ಬೆಳದಿಂಗಳಪ್ಪನ ಪೂಜೆಗೆ ಹುಣ್ಣಿಮೆಯೇ ಆಗಬೇಕು. ಅಂಥ ಬೆಳದಿಂಗಳಲ್ಲಿ ಊರ ಹೆಣ್ಣುಮಕ್ಕಳೆಲ್ಲ ನೆರೆದು, ಅಂಗಳ ಗುಡಿಸಿ, ರಂಗೋಲಿಯಿಟ್ಟು ಬೆಳದಿಂಗಳನ್ನು ಪುರುಷನನ್ನಾಗಿ ಆಹ್ವಾನಿಸುತ್ತಾರೆ. ಹೆಣ್ಣುಮಕ್ಕಳೆಲ್ಲ ಪಾಲುಗೊಳ್ಳುವ ಆ ಪ್ರದರ್ಶನದಲ್ಲಿ ಬೆಳದಿಂಗಳನ್ನು ಪುರುಷನನ್ನಾಗಿ ಆಹ್ವಾನಿಸಿ ಹಾಡುವುದು, ಅವರು ಹೊಂದಬಹುದಾದ ಮಾನಸಿಕ ಸಂತೋಷದ ಸ್ವರೂಪ ಯಾವ ಮಟ್ಟದ್ದೆಂದು ಊಹಿಸಲಾಗದು.

ಮಲೆಯ ಮಹದೇಶ್ವರನ ಬೆಟ್ಟಕ್ಕೆ ಮೂರು ದಿನದ ನಡಿಗೆ. ಬರುವಲ್ಲಿ ಮೂರು ದಿನದ ನಡಿಗೆ, ಮಹದೇಶ್ವರ ಸಂತನ ನೆಲೆಯಲ್ಲಿ ಮೂರ್‍ನಾಲ್ಕು ದಿನ ಉಳಿದು ಕೊಳ್ಳುವುದು, ಆ ನಡುವೆ ಒಟ್ಟು ಪಾರಮ್ಯದ ನೆನಪು, ಹಾಡುಗಾರಿಕೆ, ವಾದ್ಯ ಸಾಧನಗಳು ಇವೆಲ್ಲ ಜನಪದ ಸಮೂಹವನ್ನು ಮತ್ತಷ್ಟು ವರ್ಷ ಬದುಕಲು ಅನುವು ಮಾಡಿಕೊಡುವಂತಿರುತ್ತವೆ. ಆದರೆ ಆಧುನಿಕ ಸಂದರ್ಭದ ಯಾವುದೇ ಗೋಷ್ಠಿಗಳು ಮನುಷ್ಯನಿಗೆ ಬದುಕುವ ಚೈತನ್ಯವನ್ನು ತುಂಬುತ್ತಿಲ್ಲ ಎಂಬುದನ್ನು ಗಮನಿಸಬೇಕು. ಜಾಗತೀಕರಣ, ಉದ್ಯೋಗ, ವೇತನ ಇವು ಮನುಷ್ಯನಿಗೆ ಒಂದಿಷ್ಟು ಭೌತಿಕ ಸಂತೋಷವನ್ನು ನೀಡುತ್ತಿವೆ ನಿಜ. ಆದರೆ ಅಂತರಂಗದ ವಿಕಾಸ ಮತ್ತು ಅದರ ಆರೋಗ್ಯಕ್ಕೆ ಯಾವ ರೀತಿಯ ನೆರವನ್ನೂ ಅದು ನೀಡುತ್ತಿಲ್ಲ. ವಿಜ್ಞಾನದ ಅನುಕೂಲ ಏನಿದ್ದರೂ ಭೌತಿಕ ಬೆಳವಣಿಗೆಯ ಸಾಧನೆಗಳು. ಆ ಸಾಧನೆಗಳು ಅಂತರಂಗದ ಸುಖವನ್ನೂ ಅದರ ಬೆಳವಣಿಗೆಯನ್ನೂ ತಡೆಯುವಂತಾಗಬಾರದು. ಆದರೆ ಆಧುನಿ ಮನರಂಜನಾ ಮಾಧ್ಯಮಗಳು ಸಂಸ್ಕೃತಿ ಸಂದರ್ಭದ ಅವಿಭಾಜ್ಯ ಅಂಗಗಳಾಗದೆ ಅವು ಹಗುರ ಮನರಂಜನೆಯನ್ನು ಒದಗಿಸುತ್ತಿವೆಯಷ್ಟೆ.

### ಕರ್ನಾಟಕದ ವೈವಿಧ್ಯಮಯ ಜನಪದ ಕಲೆಗಳು

ಈಗಾಗಲೇ ಪ್ರಸ್ತಾಪಿಸಿರುವಂತೆ ಕರ್ನಾಟಕದಲ್ಲಿ ಜನಪದ ಕಲೆಗಳನ್ನು ಪ್ರಮುಖ ವಿಭಾಗಗಳಲ್ಲಿ ಅಳವಡಿಸಲಾಗದಷ್ಟು ವಿಪುಲ ಸಂಖ್ಯೆಯ ಕಲಾಪ್ರಕಾರಗಳಿವೆ. ದಕ್ಷಿ ಕರ್ನಾಟಕದಲ್ಲಿ ಅಪಾರ ಸಂಖ್ಯೆಯಲ್ಲಿರುವ ನೀಲಗಾರರು ಮತ್ತು ಕಂಸಾಳೆಯವರ ಉತ್ತರ ಕರ್ನಾಟಕದಲ್ಲಿಲ್ಲ. ಉತ್ತರ ಕರ್ನಾಟಕದಲ್ಲಿ ಸಮೃದ್ಧವಾಗಿ ದೊರಕುವ ಕಲ್ಗಿತುರಾ, ಸವಾಲ್ ಜವಾಬ್, ಸಣ್ಣಾಟ ದೊಡ್ಡಾಟ, ರಾಧಾನಾಟ ಇತರ ಪ್ರಕಾರಗಳ ದಕ್ಷಿಣ ಕರ್ನಾಟಕದಲ್ಲಿಲ್ಲ. ಮಧ್ಯ ಕರ್ನಾಟಕವೆನಿಸುವ ಬಳ್ಳಾರಿ ಮತ್ತು ಚಿತ್ರದುರ್ಗದ ವಿಶೇಷವಾಗಿ ಗೊಂಬೆಯಾಟದ ಕಲಾವಿದರಿದ್ದು, ದಕ್ಷಿಣ ಮತ್ತು ಉತ್ತರ ಕನ್ನ ಜಿಲ್ಲೆಗಳಲ್ಲಿ ಹೆಚ್ಚು ಪ್ರಚಲಿತವಿರುವ ಯಕ್ಷಗಾನ ಪ್ರಕಾರ ಆ ಪ್ರದೇಶಕ್ಕೆ ಅತ್ಯಂ ವಿಶಿಷ್ಟವಾದುದಾಗಿದೆ. ಅಲ್ಲಿ ಆ ಜನಪದ ಕಲೆ ಶಿಷ್ಟ ಸಾಹಿತ್ಯ, ಶಿಷ್ಟಜನ ಸಮೂಹವನ ಒಳಗೊಂಡು ಜತೆಗೆ ಎಲ್ಲ ಆಧುನಿಕ ವಿದ್ಯಮಾನಗಳನ್ನೂ ಸೇರಿಸಿಕೊಳ್ಳುತ್ತ ಬೆಳೆಯ ತ್ತಿರುವ ಕಲೆಯಾಗಿದೆ. ಸಮೂಹ ಮಾಧ್ಯಮಗಳ ಹಾವಳಿ ಕರಾವಳಿಯ ಕಲೆಗೆ ಮಾ ತಟ್ಟಿಲ್ಲ. ಅನೇಕಾನೇಕ ತಂಡಗಳು ಕರಾವಳಿಯಾದ್ಯಂತ ಹುಟ್ಟಿಕೊಂಡು ಅವು ದೇ ವಿದೇಶಗಳಲ್ಲೂ ತಮ್ಮ ಕಲೆಯ ಹಿರಿಮೆಯನ್ನು ಮೆರೆಸುತ್ತಲಿವೆ. ಈ ವೈಶಿಷ್ಟ್ಯ ಕರ್ನಾಟಕದ ಬೇರಾವ ಕಲೆಗಳಿಗೂ ಒದಗಿಬಂದಿಲ್ಲ.

ದಕ್ಷಿಣ ಕರ್ನಾಟಕದಲ್ಲಿ ಕಂಸಾಳೆ ಮತ್ತು ನೀಲಗಾರರ ಪರಂಪರೆಯ ಜನಪ ಕಲೆಗಳು ಹೇರಳ ಇದ್ದು, ಬಯಲಾಟ ಮಾತ್ರ ಕ್ವಚಿತ್ತಾಗಿರುತ್ತದೆ. ಮಧ್ಯ ಕರ್ನಾಟಕ ಶಿವಮೊಗ್ಗ, ಚಿತ್ರದುರ್ಗಗಳಲ್ಲಿ ಡೊಳ್ಳುಮೇಳ, ಕರಡಿಮಜಲು, ವೀರಭದ್ರನ ಕುಣಿ ಅಂಟಿಗೆಪಂಟಿಗೆ ಈ ಮುಂತಾದುವೇ ಅಲ್ಲದೆ ಹಗಲುವೇಷ, ಚೌಡಿಕೆ, ಚಿಟ್‌ಮೇ ಮುಖವೀಣೆ, ಗಂಟೆ ಬಾರಿಸಿಕೊಂಡು ಮನೆಮನೆಯ ಪೂರ್ವಜರ ಕಥೆ ಹೇ ಕೊಂಡು ತಿರುಗುವ ಹೆಳವರು, ಕರಪಾಲದವರು, ಕವಲೆತ್ತಿನವರು ಹೀಗೆ ಅಸಂಖ್ಯಾ ಕಲಾವಿದರಿದ್ದಾರೆ. ನಗರ ಪ್ರದೇಶದವರ ಜೀವನ ತೀವ್ರಗತಿಯಲ್ಲಿ ಬದಲಾಗುತ್ತಿರು ಈ ಸನ್ನಿವೇಶದಲ್ಲಿ ಜನಪದ ಕಲೆಗಳು ಇಂದು ನಗೆಪಾಟಲಿಗೆ ಈಡಾಗುತ್ತಿವೆ.

ಹಗಲುವೇಷದ ನಟರು ತಮ್ಮ ಪ್ರತಿಭಾ ಪ್ರದರ್ಶನಕ್ಕೆ ರಾತ್ರಿಯನ್ನು ಕಾಯ ಹಗಲು ಹೊತ್ತಿನಲ್ಲೇ ಎಲ್ಲೆಂದರೆ ಅಲ್ಲಿ ನಾಟಕದ ಯಾವುದೋ ಭಾಗವ ಪ್ರದರ್ಶಿಸುತ್ತಾರೆ. ಒಂದು ಪುಟ್ಟ ಸಂಸಾರ, ರಾಮಾಯಣ ಇಲ್ಲವೇ ಮಹಾಭಾರತ

ಇದೀಗ ಕರ್ನಾಟಕ ಸರ್ಕಾರ 'ಜನಪದ ಜಾತ್ರೆ' ಎಂಬ ಪ್ರಾಯೋಗಿಕ ಯೋಜನೆ ಹಾಕಿಕೊಂಡು ಜನಪದ ಕಲೆಗಳ ಹಿನ್ನೆಲೆಯ ಉತ್ತಮ ಕಲಾವಿದರ ಪ್ರದರ್ಶನಗಳನ್ನು ವಿಧಾನಸೌಧದಿಂದ ಆರಂಭಿಸಿ ಕರ್ನಾಟಕದ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ ಏರ್ಪಡಿಸುವ ವ್ಯವಸ್ಥೆ ಮಾಡಿರುತ್ತದೆ. ಅದರ ಪ್ರಯೋಗ ಕಳೆದ ಅಕ್ಟೋಬರ್‌ನಲ್ಲಿ ವಿಧಾನಸೌಧದ ಮುಂದೆ ಜರುಗಿ ಯಶಸ್ವಿಯೂ ಆಗಿದೆ. ಈ ಯೋಜನೆ ಹೀಗೆಯೇ ಕರ್ನಾಟಕದ ಜಿಲ್ಲೆ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಯಶಸ್ವಿಯಾಗುವ ಎಲ್ಲ ಸಾಧ್ಯತೆಗಳೂ ಇವೆ. ಯುವ ಕಲಾವಿದರೂ ಈ ಪರಂಪರೆಯನ್ನು ತಮ್ಮದಾಗಿಸಿಕೊಂಡು ಅದರ ಬೇರೆಬೇರೆಯ ಸಾಧ್ಯತೆಗಳನ್ನು ಮುಂದೆಯೂ ಪ್ರದರ್ಶಿಸುತ್ತ ಹೋಗುವುದಾದರೆ, ಯಾವುದೇ ಜಾಗತೀಕರಣದ ಬದಲಾವಣೆಯ ನಡುವೆಯೂ ನಮ್ಮ ಪಾರಂಪರಿಕ ಜನಪದ ಕಲೆಗಳನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ.



ಒಂದು ಕಥಾಭಾಗವನ್ನು ತೋರಿಸಿಬಿಡುತ್ತದೆ. ಮಕ್ಕಳು ಸಂಗೀತದ ಹಿನ್ನೆಲೆಯಲ್ಲಿದ್ದರೆ ಸಂಸಾರದ ಹಿರಿಯ ವ್ಯಕ್ತಿ ಇತ್ತ ರಾಮ, ರಾವಣರ ವೇಷವನ್ನು ಹಾಕುತ್ತ, ಹೆಂಡತಿ ಸೀತೆ, ಮಂಡೋದರಿಯಾಗಿ ಕಾಣಿಸಿಕೊಂಡು ಜನರನ್ನು ರಂಜಿಸಿಬಿಡುತ್ತಾರೆ. ಹೀಗೆ ಸಂಭಾಷಣೆ, ಸಂಗೀತ, ಒಂದು ಕಾವ್ಯ ಕಥಾಭಾಗದ ಅಭಿನಯ, ಹೀಗೆ ಎಲ್ಲವೂ ಒಂದೇ ಸಂಸಾರದ ವೃತ್ತಿಯಾಗಿದ್ದುದು, ಇಂದು ಅದು ಕೇವಲ ಹೊಟ್ಟೆ ಹೊರೆಯುವ ಭಿಕ್ಷೆಯ ಆಟವಾಗಿಬಿಟ್ಟಿದೆ. ಹಗಲುವೇಷದ ಕಲಾವಿದರು ಕೀಳರಿಮೆ ಅನುಭವಿಸುವಂತಾಗಿಬಿಟ್ಟಿದೆ.

ನಾಟಕಕ್ಕಿಂತಲೂ ಅತ್ಯಂತ ಪ್ರಾಚೀನ ಕಲೆ ತೊಗಲುಗೊಂಬೆ ಮತ್ತು ಸೂತ್ರದ ಗೊಂಬೆಯಾಟ. ಈ ಎರಡು ಪ್ರದರ್ಶಕ ಕಲೆಗಳ ಹಿನ್ನೆಲೆಯಲ್ಲಿ ಮಧ್ಯ ಕರ್ನಾಟಕದಲ್ಲಿ ಅನೇಕಾನೇಕ ಸಂಸಾರಗಳು ಅತ್ಯಂತ ಹೆಮ್ಮೆಯಿಂದ ಬದುಕಿದ್ದು, ಜನರ ಗೌರವಕ್ಕೆ ಪಾತ್ರವಾಗಿದ್ದು, ಇಂದು ಆ ಕಲೆಯ ನಿರ್ವಹಣೆಯಿಂದ ಬದುಕು ಸಾಧ್ಯವಿಲ್ಲ ದಂತಾಗಿದೆ. ತೊಗಲುಗೊಂಬೆ ಮತ್ತು ಸೂತ್ರದ ಗೊಂಬೆಗಳು, ಲೇಖನದ ಆರಂಭಕ್ಕೇ ಹೇಳಿದಂತೆ ಒಂದು ಕಾಲಕ್ಕೆ ನಮ್ಮ ಪೂರ್ವ ಕಥಾನಕಗಳನ್ನು ಜೀವಂತ ಗೊಳಿಸುವ ಸಾಧನೆಗಳಾಗಿದ್ದು ಇಂದು ಜೀವ ಕಳೆದುಕೊಂಡು ಸಂಗ್ರಹಾಲಯ ಸೇರುವ ವಸ್ತುಗಳಾಗುತ್ತಿವೆ.

ಕರ್ನಾಟಕದ ಅರಣ್ಯ ಪ್ರದೇಶಗಳೆನಿಸುವ ಕೊಡಗಿನಲ್ಲಿಯೂ ವ್ಯವಸಾಯದ ಹಿನ್ನೆಲೆಯಲ್ಲಿ ಹುತ್ತರಿ ಕುಣಿತವಿದೆ. ಮಳೆ-ಬೆಳೆ ಆಧಾರಿತ ವ್ಯವಸಾಯದ ಹಿನ್ನೆಲೆಯಲ್ಲೇ ನಮ್ಮ ಎಲ್ಲ ಆಚರಣೆ ಆರಾಧನೆ ಮತ್ತು ಕಲೆಗಳು ಬೆಳೆದು ಬಂದಿರುವು ದೆಂಬುದನ್ನು ಈಗಾಗಲೇ ಗಮನಿಸಲಾಗಿದ್ದು, ಇದೀಗ ಕೈಗಾರಿಕೀಕರಣಗಳ ಹಿನ್ನೆಲೆಯಲ್ಲಿ ಯಂತ್ರ ಪ್ರಾಬಲ್ಯ ಹೆಚ್ಚುತ್ತ ಮನುಷ್ಯನ ಕೈಗೆ ಕೆಲಸ ಕಡಿಮೆಯಾಗುತ್ತಿದೆ. ಜತೆಗೆ ಬೇಸಾಯದಲ್ಲೂ ಯಂತ್ರ ಪ್ರಾಬಲ್ಯ ಹೆಚ್ಚಿ ರೈತ ಮತ್ತು ಆತನ ಸಹವರ್ತಿಯಾದ ದನಕರುಗಳಿಗೂ ದುಡಿಮೆಯಿಲ್ಲದಂತಾಗಿದೆ. ರೈತ ಮತ್ತು ದನಕರುಗಳ ವೃತ್ತಿ ಹೀನಸ್ಥಿತಿಯನ್ನು ಇನ್ನಷ್ಟು ವಿಷಾದ ಧ್ವನಿಯಲ್ಲಿ ಹೇಳುವುದಾದರೆ ಇಂದು ರೈತರನ್ನು ಆತ್ಮಹತ್ಯೆಯ ಅಂಚಿನಲ್ಲೂ ದನಕರುಗಳನ್ನು ಮಾಂಸದ ರುಚಿಯ ವಾಸನೆಯಲ್ಲೂ ನೋಡಲಾಗುತ್ತಿದೆ.

ವೇದಪೂರ್ವ ಯುಗದಲ್ಲೇ ಬಸವನ ವಿಗ್ರಹವನ್ನು ಕಾಣಬಹುದಾಗಿದ್ದು ತದನಂತರದ ಗ್ರಂಥಗಳಲ್ಲಿ ವೃಷಭ ಎಂಬ ಹೆಸರು ಹೆಚ್ಚು ಚಾಲ್ತಿಯಲ್ಲಿರುತ್ತದೆ. ಅತ್ಯಂತ ಪ್ರಾಚೀನ ಕಾಲದ ದೇವತೆ ರುದ್ರ ಅಥವಾ ಶಿವನ ಎತ್ತರಕ್ಕೆ ವೃಷಭ ಅಥವಾ ನಂದಿಯನ್ನು ನಿಲ್ಲಿಸಲಾಗಿದೆ. ಶಿವನನ್ನು ಬಿಟ್ಟರೆ ಉಳಿದ ಯಾವ ದೇವತೆಗಳಿಗೂ ನಂದಿಯ ಮೇಲೆ ಕೂರುವ ಅಧಿಕಾರವಿಲ್ಲ. ತದನಂತರದ ಶತಮಾನಗಳಲ್ಲಿ ಬಂದ ಕೃಷ್ಣ ದನಕರುಗಳನ್ನು ಪರಿಪಾಲಿಸುವವನಷ್ಟೆ. ಮನುಷ್ಯ ಸಮೂಹ ಬದುಕಲು ಬೇಕಾದ ಜೀವದ್ರವ್ಯಕ್ಕೆ ಸಂಪೂರ್ಣ ಕಾರಣೀಭೂತವಾಗಿದ್ದ ದನಕರು ಸಮೂಹ ಮತ್ತು ಭೂಮಿ ಜನಪದ ಜಗತ್ತಿನಲ್ಲಿ ಅತ್ಯಂತ ಪವಿತ್ರವೆನಿಸಿಕೊಂಡು, ಕೊನೆಗೆ ವ್ಯಕ್ತಿ ಸತ್ತ ಮೇಲೂ ವೈತರಣೀ ನದಿಯನ್ನು ದಾಟಿಸುವ ಜೀವ ಹಸುವೇ ಎಂಬ ಕಲ್ಪನೆಯಿದೆ. ಹಾಗಾಗಿ ಎಲ್ಲ ಜನಪದ ಕಲೆಗಳಲ್ಲಿ ನಂದಿ ಅಥವಾ ಬಸವ ಮೊದಲು ಸಿಂಗಾರಗೊಂಡು ನಿಲ್ಲಬೇಕು. ಎಲ್ಲ ದೇವಾಲಯಗಳ ಒಳಗೂ ಹೊರಗೂ ಬಸವನ ವಿಗ್ರಹವಿರಬೇಕು. ಈ ನಿಟ್ಟಿನಲ್ಲೇ ಬಸವನ ಹೆಸರು ಕರ್ನಾಟಕದಾದ್ಯಂತ ವ್ಯಕ್ತಿನಾಮವಾಗಿಯೂ ಪರಿವರ್ತಿತವಾಗಿರುತ್ತದೆ. ಎಲ್ಲ ಜಾತ್ರೆಗಳಲ್ಲೂ ಬಸವ ಮುಂಚೂಣಿಯಲ್ಲಿದ್ದು ಆತನ ಹಿನ್ನೆಲೆಗೆ ಕಲೆಗಳ ಗುಂಪು ಇರುತ್ತದೆ. ಆದರೆ ವ್ಯವಸಾಯ ಜೀವನದ ನಾಶದ ಹಿನ್ನೆಲೆಯಲ್ಲಿ ಹೇಗೆ ದನಕರುಗಳು ಬಾಯಿ ರುಚಿಯ ಸಂಗತಿಯಾಗಿಬಿಟ್ಟಿವೆಯೋ ಹಾಗೆಯೇ ಜನಪದ ಪ್ರದರ್ಶಕ ಕಲೆಗಳೂ ತಾತ್ಸಾರದಿಂದ ನೋಡಬಹುದಾದ ಅಥವಾ ಕೇವಲ ಮನರಂಜನೆಯ ಮಾತಾಗಿಬಿಟ್ಟಿವೆ.

**ಅಭಿಮಾನ ತಾಳುವ ಬಗೆ**

ಈಗ್ಗೆ ಸುಮಾರು ಹತ್ತಿಪ್ಪತ್ತು ವರ್ಷಗಳ ಹಿಂದೆ ರಷ್ಯಾದಿಂದ ಬಂದ ತೊಗಲು ಗೊಂಬೆಯಾಟದ ಸಮೂಹ ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ ಒಂದು ಪ್ರದರ್ಶನ ಏರ್ಪಡಿಸಿದ್ದಿತು. ಆ ಪ್ರದರ್ಶನ ನೋಡಲು ಕರ್ನಾಟಕದ ಮುಖ್ಯಮಂತ್ರಿಗಳೇ ಆದಿಯಾಗಿ ಬೆಂಗಳೂರಿನ ಅಧಿಕಾರಿ ಮತ್ತು ನಾಗರಿಕವರ್ಗವೆಲ್ಲ ಸೇರಿದ್ದಿತು. ಆ ಪ್ರದರ್ಶನದ ವ್ಯವಸ್ಥೆ ನಮ್ಮ ಸೂತ್ರಗೊಂಬೆ ಇಲ್ಲವೇ ತೊಗಲು ಗೊಂಬೆಯ ಆಟದಂತೆ ಇತ್ತು. ಆದರೆ ಆ ಪ್ರದರ್ಶನದ ಕಥೆ ಬೇರೆಯಿತ್ತು. ರಷ್ಯನ್ ಮೂಲದ ಜನಪದ ಕಥೆ. ಸುಮಾರು ಎರಡು ಘಂಟೆಯ ಪ್ರದರ್ಶನದ ನಂತರ ಸೂತ್ರದ ಗೊಂಬೆ ಪ್ರದರ್ಶನ ನೀಡಿದವರೆಲ್ಲ ವೇದಿಕೆಯ ಮೇಲೆ ಬಂದು ನಿಂತರು. ಅವರೆಲ್ಲಾ ಅತ್ಯಾಧುನಿಕವಾಗಿ ಸೂಟುಬೂಟು ಧರಿಸಿದ್ದು, ಕೊನೆಗೆ ನೆಕ್‌ಟೈಯನ್ನೂ ಸುತ್ತಿಕೊಂಡವರಾಗಿದ್ದರು. ಜಗತ್ತಿನಾದ್ಯಂತ ಇಂದು ಜನಪದ ಸಾಹಿತ್ಯ ಮತ್ತು ಕಲೆಗಳ ಬಗ್ಗೆ ಕುತೂಹಲಕರ ಅಧ್ಯಯನ ನಡೆಯುತ್ತಿದೆ ನಿಜ. ಜನಪದ ಪ್ರದರ್ಶಕ ಕಲೆಗಳ ಹಿನ್ನೆಲೆಯಲ್ಲಿ ಜನಪದ ಸಾಹಿತ್ಯವನ್ನು ಅಧ್ಯಯನ ಮಾಡಬೇಕಾದ ನೆಲೆಯಲ್ಲಿ ಅನೇಕ ಸಿದ್ಧಾಂತಗಳು ಹುಟ್ಟಿಕೊಂಡಿವೆ. ಆದರೆ ಭಾರತದಲ್ಲಿ ಇನ್ನೂ ಜನಪದ ಸಾಹಿತ್ಯ ಮತ್ತು ಕಲೆಯನ್ನು ಕುರಿತು ನಿಜವಾದ ಅಭಿಮಾನ ಮತ್ತು ಅಧ್ಯಯನ ಬೆಳೆದುಬಂದಿಲ್ಲ. ಜನಪದ ಕಲೆ ಅದು ಮುಂದೆಯೂ ಉಳಿದು ಬೆಳೆಯಬೇಕಾದ, ಬೇರೆಬೇರೆ ಸ್ವರೂಪವನ್ನು ತಾಳಬೇಕಾದ, ಯುವಕರೂ ಕಲಿತು ಬದುಕಬಹುದಾದ ಸಂಗತಿಯಾಗಿ ತೋರುತ್ತಿಲ್ಲ. ಜನಸಮೂಹ ಅಭಿಮಾನದಿಂದ ಆರಾಧನೆ ಮತ್ತು ಭಕ್ತಿಯ ಹಿನ್ನೆಲೆಯಲ್ಲಿ ನೋಡುವವರೆಗೆ ಅದು ತನ್ನದೇ ವಿಶಿಷ್ಟತೆ ಮತ್ತು ಶಕ್ತಿಯಿಂದ ನಿಂತಿತ್ತು. ಈಗ ಅದೇ ಜನಸಮೂಹದ ನಿರ್ಲಕ್ಷ್ಯದಿಂದ ಕೀಳರಿಮೆ ಮತ್ತು ಬಡತನವನ್ನು ಅನುಭವಿಸುತ್ತಿದೆ. ಈ ನಿಟ್ಟಿನಲ್ಲಿ ಸರ್ಕಾರ ಮಾಡಬಹುದಾದ ಮೊದಲ ಕೆಲಸವೆಂದರೆ ಕರ್ನಾಟಕದ ಯಾವ್ಯಾವ ಭಾಗದಲ್ಲಿ ಯಾವ್ಯಾವ ಬಗೆಯ ಜನಪದ ಕಲಾಪ್ರದರ್ಶನ ಕೊಡುವ ತಂಡಗಳು ಇವೆಯೋ ಅವನ್ನು ಮೊದಲು ಗುರುತಿಸಬೇಕು. ಗಾಯಕರನ್ನು ಗಮನಿಸಬೇಕು. ಇಲ್ಲಿ ಇನ್ನೊಂದು ಮುಖ್ಯ ಸಂಗತಿಯೆಂದರೆ, ಕರ್ನಾಟಕದಲ್ಲಿ ಒಂದೇ ಕಲಾಪ್ರಕಾರವನ್ನು ನಂಬಿಕೊಂಡು ಬರುತ್ತಿರುವ ಅಸಂಖ್ಯಾತ ಕಲಾವಿದರಿದ್ದಾರೆ. ಇಂಥ ಸಮೂಹದಲ್ಲಿ ಪ್ರತಿಭಾವಂತರನ್ನು ಆಯ್ಕೆಮಾಡಿ ಅವರಿಗೆ ತಕ್ಕ ಅನುಕೂಲ ವಾತಾವರಣವನ್ನು ನಿರ್ಮಾಣ ಮಾಡಿ ಅಲ್ಲಿ ಅವರ ಕಲೆಯನ್ನು ನಿಗದಿತ ಸಮಯದಲ್ಲಿ ಪ್ರದರ್ಶಿಸುವಂತೆ ಮಾಡಬೇಕು. ಅದನ್ನು ಆಯಾ ಪ್ರದೇಶದ ಶ್ರೀಮಂತರು, ಆಸಕ್ತರು ಮತ್ತು ಸರ್ಕಾರ ನೋಡಿಕೊಳ್ಳುವಂತಾಗಬೇಕು. ತಾವು ನಂಬಿದ ಕಲೆಯಿಂದ ಬದುಕಬಹುದು ಎಂಬ ಭರವಸೆ ಬರುವುದಾದರೆ ಜನಪದ ಕಲೆಯ ಉತ್ತಮ ಭಾಗಗಳು ಬದುಕಿ ಉಳಿಯುವಂತಾಗುತ್ತವೆ. ಹಾಗೆಯೇ ಉದ್ಯೋಗವನ್ನೇ ಅರಸಿ ಬದುಕು ಸಾಗಿಸುವ ಈ ಹೊತ್ತಿನಲ್ಲಿ ಕಲೆಗಳನ್ನು ಅಭ್ಯಾಸ ಮಾಡುವುದರ ಮೂಲಕ ತಮ್ಮ ಗ್ರಾಮದಲ್ಲೇ ತಾವು ಉಳಿದು ಬದುಕಲು ಸಾಧ್ಯ ಎಂಬ ಭರವಸೆ ಬರುವುದಾದರೆ,



ಯುವಕರೂ ಜನಪದ ಕಲೆಯನ್ನು ಕಲಿಯಲು ಮುಂದೆ ಬರುತ್ತಾರೆ. ಒಂದು ವೇಳೆ ಭಕ್ತಿ, ಆರಾಧನೆಯ ಹಿನ್ನೆಲೆಯನ್ನು ಕಳೆದುಕೊಂಡರೂ ಕಲೆಗಳು ತಮ್ಮ ಸ್ವರೂಪ ದಲ್ಲಾದರೂ ಉಳಿಯಬಹುದಾದ ಸಾಧ್ಯತೆ ಇರುತ್ತದೆ. ಎಲ್ಲ ಜನಪದ ಕಲೆಗಳ ಶ್ರೇಷ್ಠ ಕಲಾವಿದರನ್ನಾದರೂ ಬದುಕಿಸಿ ಕೊಳ್ಳುವ ಅಗತ್ಯ ಇಂದು ಇದೆ. ಇದಕ್ಕೆ ಮಾದರಿ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಯ ಯಕ್ಷಗಾನ ಕಲಾವಿದರೇ. ಸರ್ಕಾರದ ಯಾವು ಪ್ರೋತ್ಸಾಹವೂ ಇಲ್ಲದೆ ಆ ಭಾಗದಲ್ಲಿ ಕಲಾವಿದರು ತಮ್ಮ ಜೀವನವನ್ನು ನಡೆಸುವಷ್ಟು ಸಮರ್ಥರಿರುತ್ತಾರೆ. ಅದಕ್ಕೆ ಆ ಸುತ್ತಿನ ಶ್ರೀಮಂತರು, ಧಾರ್ಮಿಕ ಸಂಸ್ಥೆಗಳೂ ನೆರವನ್ನು ನೀಡುತ್ತಿವೆ.

ಇದೀಗ ಕರ್ನಾಟಕ ಸರ್ಕಾರ 'ಜನಪದ ಜಾತ್ರೆ' ಎಂಬ ಪ್ರಾಯೋಗಿಕ ಯೋಜನೆ ಹಾಕಿಕೊಂಡು ಜನಪದ ಕಲೆಗಳ ಹಿನ್ನೆಲೆಯ ಉತ್ತಮ ಕಲಾವಿದರ ಪ್ರದರ್ಶನಗಳನ್ನು ವಿಧಾನಸೌಧದಿಂದ ಆರಂಭಿಸಿ ಕರ್ನಾಟಕದ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ ಏರ್ಪಡಿಸುವ ವ್ಯವಸ್ಥೆ ಮಾಡಿರುತ್ತದೆ. ಅದರ ಪ್ರಯೋಗ ಕಳೆದ ಅಕ್ಟೋಬರ್‌ನಲ್ಲಿ ವಿಧಾನಸೌಧದ ಮುಂದೆ ಜರುಗಿ ಯಶಸ್ವಿಯೂ ಆಗಿದೆ. ಈ ಯೋಜನೆ ಒಂದುವೇಳೆ ಕರ್ನಾಟಕದ ಜಿಲ್ಲೆ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಯಶಸ್ವಿಯಾಗುವ ಎಲ್ಲ ಸಾಧ್ಯತೆಗಳೂ ಇವೆ. ಯುವ ಕಲಾವಿದರೂ ಈ ಪರಂಪರೆಯನ್ನು ತಮ್ಮದಾಗಿಸಿಕೊಂಡು ಅದರ ಬೇರೆ ಬೇರೆಯ ಸಾಧ್ಯತೆಗಳನ್ನು ಮುಂದೆಯೂ ಪ್ರದರ್ಶಿಸುತ್ತ ಹೋಗುವುದಾದರೆ, ಯಾವುದೇ ಜಾಗತೀಕರಣದ ಬದಲಾವಣೆಯ ನಡುವೆಯೂ ನಮ್ಮ ಪಾರಂಪರಿಕ ಜನಪದ ಕಲೆಗಳನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ. ಒಂದು ವೇಳೆ ಮರೆತರೆ ಅವನ್ನು ಮತ್ತೆ ನೆನಪಿಸಿಕೊಳ್ಳುವುದು ಸಾಧ್ಯವೇ ಆಗುವುದಿಲ್ಲ. ಹಳೆಯ ದನ್ನು ಕಳೆದುಕೊಂಡು ಎಲ್ಲ ಹೊಸ ತರಲ್ಲೇ ಸಂತೋಷ ಕಾಣುವುದು ಕಷ್ಟ. ಯಾಕೆಂದರೆ, ಪರಂಪರೆಯನ್ನು ನೆನಪಿಸುವ ಸಂಗತಿಗಳು ಯಾವಾಗಲೂ ಹೆಚ್ಚು ಸಮಾಧಾನವನ್ನು ಸಂತೋಷವನ್ನು ನೀಡುತ್ತವೆ.



ತತ್ವಪದಕಾರರು

ಡಾ|| ಕೃಷ್ಣಮೂರ್ತಿ ಹನೂರು
ನಂ. ೨, 'ಎಚ್' ಬ್ಲಾಕ್, ರಾಮಕೃಷ್ಣನಗರ, ಮೈಸೂರು - ೫೭೦ ೦೨೨

# ಹಾದಿ ಬೀದಿಯ ಹುಡುಕಿ ಕರೆತಾರೋ ಜಾನಪದ ಹಾಡ ಎದೆಗೆ





ಸ. ರಘುನಾಥ

**ಜಾ**ನಪದ ಕಲೆಗಳ ಕುರಿತು ಮಾತಿಗೆ ತೊಡಗುವುದಾದರೆ ಮನಸ್ಸಿನಲ್ಲಿ "ಒಂದಾನೊಂದು ಕಾಲದಲ್ಲಿ..." ಎಂಬ ಮಾತುಗಳು ಮೂಡುತ್ತವೆ. ಅವುಗಳ ರೂಪ, ವಿನ್ಯಾಸ, ಲಾವಣ್ಯಗಳು ಕಾಣಿಸಿಕೊಳ್ಳುವುದು ಅಂದಿನಿಂದಲೇ. ಅಂದಿನಿಂದ ಬಂದಾಗಲೇ ಇಂದು ಅದರ ಸಾರಸರ್ವಸ್ವ ರೂಪ ದರ್ಶನವಾಗುವುದು. ಅದು ತಿರುಗಾಟವಾಗಿದ್ದಾಗ ಜಂಗಮವಾಗಿತ್ತು. ಆಧುನಿಕತೆ ತಂದ ಪರಿವರ್ತನೆಯಲ್ಲಿ ಅನೇಕ ಜಾನಪದ ಕಲೆಗಳು ಹೊಟ್ಟೆಪಾಡಿನ ಆಟಗಳಾಗುತ್ತ ಕಡೆ ಕಡೆಗೆ ಸ್ಥಾವರಗೊಂಡವು. ಹೀಗೆ ಸ್ಥಾವರಗೊಂಡವು ಅಳಿಯುತ್ತ ಹೋದವು. ಉಳಿಸಿಕೊಳ್ಳಲು ಹೋರಾಡಿಯೂ ಉಳಿಸಿಕೊಳ್ಳಲಾಗದ ಕಲಾಕಾರರು ವಲಸೆ ಹೋದದ್ದು ಇಲ್ಲವೆ ಜೀವನಕ್ಕೆ ಅನ್ಯ ವೃತ್ತಿ ಎತ್ತಿಕೊಂಡಿದ್ದು ಅವರ ಕೈ ಬಿಡಿಸಿದ ಕಲೆಗಳ ಅವಸಾನಕ್ಕೆ ಕಾರಣವಾಯಿತು.

ಅಳಿವಿನ ಹಾದಿ ಹಿಡಿದು ಕಲೆಗಳ ಉಳಿವಿಗೆ ಭೀಷ್ಮಪ್ರತಿಜ್ಞೆಯಂತಹ ಪ್ರಜ್ಞಾ ಸಂಸ್ಕೃತಿಯನ್ನು ಮೈಗೂಡಿಸಿಕೊಂಡವರು ನಡೆಸಿದ ಹೋರಾಟದಿಂದಾಗಿ ಆ ಕಲೆಗಳು ದಾಖಲೆ ಮತ್ತು ಅಧ್ಯಯನಕ್ಕೆ ಸಿಕ್ಕುವಂತಾದವು. ಅಂಥ ಕಲಾವಿದರು ಆ ಪ್ರಕಾರದ ಕೊನೆ ಕೊಂಡಿಯಾಗಿಹೋದರು. ಇಂದಿಗೂ ಇಂಥ ಕೊನೆಯ ಕೊಂಡಿಗಳು ಅಲ್ಲಲ್ಲಿ ಜೀವಂತವಿವೆ. ಅವೂ ಕಳಚಿಕೊಳ್ಳುವ ದಿನಗಳನ್ನು ಎಣಿಸುತ್ತಿವೆ. ಭಾಗ್ಯವಿದ್ದವರು ಕಲಿತರೆ ಉಳಿದುಕೊಳ್ಳುತ್ತವೆ.

ಸಾಮಾನ್ಯವಾಗಿ ಜಾನಪದ ಕಲೆಯ ಯಾವುದೇ ಪ್ರಕಾರ ಅಥವಾ ವಿಭಾಗ ಸಂಗೀತ, ಗಾಯನಗಳಿಂದ ಹೊರಗಿಲ್ಲ. ಅನೇಕ ಆಟಗಳೂ ಹಾಡಿನೊಂದಿಗೇ ಇರುತ್ತವೆ. ಗಾಯನವು ಕೂಡ ಪ್ರದರ್ಶನವನ್ನು ಒಳಗೊಂಡಿರುವುದುಂಟು. ಸಂಗೀತ, ಗಾಯನ ಜಾನಪದದ ಅಂಗಸತ್ವಾಂಶ. ಮಕ್ಕಳು ಆಡುವ ಆಟಗಳಿಂದ ಹಿಡಿದು ಹಿರಿಯರು ಆಡುವ ಆಟಗಳ ತನಕ ಹಾಡು ಜೊತೆಗಿದ್ದು ಆಡಿಸುತ್ತದೆ. ಕೂಸನ್ನಾಡಿಸುವ ದೂರಿದೂರಿ, ಏತೇತೊ, ಮಕ್ಕಳು ಆಡುವ ರತ್ತೋ ರತ್ತೋ, ಅಪ್ಪಾಲೆ ತಿಪ್ಪಾಲೆ ಮುಂತಾದವುಗಳಂತೆಯೆ ಅನೇಕ ಆಟಗಳು ಹಾಡುಗಳ ಜೊತೆ ಜೊತೆಗೆಯೇ ಆಡಿಸಿಕೊಳ್ಳುತ್ತವೆ. ಹೀಗೆ ಗಾಯನ ಸಂಗೀತದೊಂದಿಗೆ ಇರುವುದರಿಂದಾಗಿಯೇ ಹಾಡುವ, ಆಡುವ, ನೋಡುವ, ಕೇಳುವ ಎಲ್ಲರ ಮನಸುಗಳಲ್ಲಿ ಆರೋಗ್ಯ, ಸಹನೆ, ಸಂತಸಗಳನ್ನು ತುಂಬಿವೆ. ಹಾಗಾಗಿಯೇ ಇದು ಜೀವನದೆತ್ತರಕ್ಕೆ, ಬದುಕಿನ ವಿಸ್ತಾರಕ್ಕೆ ಹಂಬು ಹರಿದು ಹಬ್ಬಿಕೊಂಡಿತ್ತು. ಹೀಗೆ ಹಬ್ಬಿಕೊಂಡ ಹಂದರದ ಕಂಬಗಳನ್ನು ಕಿತ್ತದ್ದರಿಂದ ಹಂಬುಗಳು ನೆಲ ಕಂಡವು. ಈಗ ಬಳ್ಳಿ, ಕುಡಿಗಳು ಮುರಿಯದಂತೆ ಚಪ್ಪರವನ್ನು ಎತ್ತಬೇಕಿದೆ. ಎತ್ತುವುದರೊಂದಿಗೆ ನಿಂತು ಹಂಬು ಹರಿಯಲು ಬಿಡಬೇಕಿದೆ. ಇಷ್ಟು ಮಾಡಿದರೆ ಬೆಳೆದು ಹಂಬರಿಯುವ ಶಕ್ತಿ ಜಾನಪದ ಕಲೆಗಿದೆ.

ಜಾನಪದ ಪ್ರದರ್ಶನ ಕಲೆಗಳಿಗಿಂತ ಗಾಯನ ಕಲೆ ಕೊಂಚ ಹೆಚ್ಚಿನ ಆದರಣೆಯನ್ನು ಅಪೇಕ್ಷಿಸುತ್ತದೆ. ಇದಕ್ಕೆ ಕಣ್‌ಹಿತದ ರಂಗಿನಾಟವಿರುವುದಿಲ್ಲ. ಇದಕ್ಕಿರುವುದು ಕಿವಿ ಮತ್ತು ಮನಸ್ಸಿಗೆ ಹಿತವೀಯುವ ಗುಣ. ಇದನ್ನು ಗಾಯಕ ತುಂಬಬೇಕಾಗುತ್ತದೆ. ಒಂದು ವೇಳೆ ಗಾಯಕ ಸಮರ್ಥನಿದ್ದಾಗ್ಯೂ ಅಕ್ಕರೆ ಇಲ್ಲದಿದ್ದರೆ ಅವನ ಗಾಯನ ಯಶಸ್ವಿಯಾಗುವುದಿಲ್ಲ. ಆಗ ಹಾಡುವ ಕೊರಳು ಮೂಕವಾಗುತ್ತದೆ. ಕಳೆದ ಶತಮಾನದಲ್ಲಿ ಹೊಸ ನೀರಾಗಿ ಬಂದ ಸಿನೆಮಾ ಹಾಡುಗಳು ಜಾನಪದ ಗಾಯನದ ದನಿಯನ್ನು ಕುಗ್ಗಿಸಿದ ನಂತರದ ಸರದಿಯಲ್ಲಿ ಬಂದ ಕೆಸೆಟ್ಟು ಇನ್ನಷ್ಟು ಕುಗ್ಗಿಸಿತು. ಸುಗಮ ಸಂಗೀತದ ಗಾಯಕರು ಜಾನಪದ ಗೀತೆಗಳನ್ನು ಹಾಡಲು ಎತ್ತಿಕೊಂಡರಾದರೂ ಅದರಲ್ಲಿ ಸುಗಮ ಸಂಗೀತದ ಛಾಯೆಯನ್ನು ಉಳಿಸಿಕೊಂಡರು. ಇದು ಅವರ ಮಟ್ಟಿಗೆ ಸಹಜವೇ. ಆದರೆ ಅಂಥ ಗಾಯನ ಜಾನಪದ ಹಾಡುಗಳ ಗಾಯನವಷ್ಟೇ ಆಗಲು ಸಾಧ್ಯ. ಜಾನಪದ ಗಾಯನವಲ್ಲ. ಇಲ್ಲಿ ಅವರಿಗೂ ಗ್ರಾಮೀಣ ಗಾಯಕರಿಗೂ ನಡುವಿನ ಅಂತರ ಸ್ಪಷ್ಟವಾಗುತ್ತದೆ.

ಯುವಜನ ಮೇಳಗಳು ಹುಟ್ಟಿಕೊಂಡವು. ಅವುಗಳಲ್ಲಿ ಜಾನಪದ ಗಾಯನವೂ ಒಂದು ಭಾಗ. ಇಲ್ಲಿ ಹಾಡುವವರು ಇಂಬುಕೊಟ್ಟಿದ್ದು ಸುಗಮ ಸಂಗೀತ ಗಾಯಕರು ಹಾಡಿಕೊಟ್ಟ ಮಾದರಿಗಳಿಗೇ. ಇವರಲ್ಲಿ ಗ್ರಾಮೀಣ ಹಿನ್ನೆಲೆ ಇದ್ದವರು ಸ್ಪರ್ಧಿಸಿದರೂ ಕೂಡ ಇವರು ತಮ್ಮ ಮನೆ ಮತ್ತು ನೆರೆಯ ಮೂಲ ಜಾನಪದ ಗಾಯಕರನ್ನು ನೋಡಲೇ ಇಲ್ಲ. ಇವರು ಧ್ವನಿ ತೆರೆಯುವಾಗ್ಗೆ ಕೇಳಿಸಿಕೊಂಡಿದ್ದು ಹಳ್ಳಿ

ಮಡಿಲಿನ ಪ್ರಕೃತಿದತ್ತ ಹಾಡುಗಾರಿಕೆಯನ್ನಲ್ಲ, ಸಂಸ್ಕೃತೀಕೃತ ಹಾಡುಗಾರಿಕೆಯನ್ನು. ಹೀಗಾಗಲು ಕಾರಣ ಇವರು ಭಾಗವಹಿಸಿದ್ದು ಸ್ಪರ್ಧೆಗಾಗಿ. ತೀರ್ಪುಗಾರರು ಸಂಸ್ಕೃತೀಕರಣಗೊಂಡ ಸಂಗೀತದ ಹಿನ್ನೆಲೆ ಇದ್ದವರು. ಅವರಿಗಾಗಿಯೇ ಇವರು ಹಾಡುವಂತಾಯಿತು. ಶಾಲೆಗಳಲ್ಲಿ ಆರಂಭವಾದ ಪ್ರತಿಭಾ ಕಾರಂಜಿಯಲ್ಲೂ ಇದೇ ಗತಿ ಸ್ಥಿತಿಯಾಯಿತು. ಇವರು ಈ ಹಂತದಲ್ಲೆ ತಮ್ಮವರಾದ ಗ್ರಾಮೀಣರಲ್ಲಿದ್ದ ಮೂಲ ಗಾಯನ ಸಂಸ್ಕೃತಿಯಿಂದ ದೂರ ಉಳಿದು ಅದರ ಉದ್ದೀಪನ ಶಕ್ತಿಯನ್ನು ಕಂಡುಕೊಂಡು ಸಾಧಿಸುವಲ್ಲಿ ವಿಫಲರಾದರು. ಒಂದು ಮಹತ್ತರ ಸಂಸ್ಕೃತಿಯನ್ನು ತಮಗರಿವಿಲ್ಲದೆಯೇ ಕಳೆದುಕೊಂಡವರಾದರು. ಈ ಕಳೆದುಕೊಳ್ಳುವಿಕೆ ಇವರ ಅರಿವಿನ ಕಿಟಕಿಯ ಬಳಿಗೂ ಬರದೆಹೋಯಿತು. ಹಾಗೆ ಬರುವಾಗ್ಗೆ ಅದನ್ನು ಹಿಡಿದುಕೊಳ್ಳಲಾಗದಷ್ಟು ದೂರಕ್ಕೆ ಸಾಗಿದ್ದರು. ಇಷ್ಟು ಹಿನ್ನೆಲೆಯಲ್ಲಿ ಹಳ್ಳಿಗಾಡಿನ ಗಾಯನ ಸಂಸ್ಕೃತಿಯ ಮಹಮನೆಯನ್ನು ಪ್ರವೇಶಿಸಬೇಕಾಗುತ್ತದೆ.

ಬಹುಜನ ಸಮಾಜದ ಬದುಕಿನ ಬಹುದೊಡ್ಡ ಸಂಸ್ಕೃತಿ ನಮ್ಮ ಕಣ್ಣೆದುರೇ ನಮ್ಮ ಸುತ್ತಲೇ ಹೀಗೆ ಕ್ರಮ ಕ್ರಮೇಣ ಕುಷ್ಠ ಹಿಡಿದಂತೆ ಒಂದೊಂದೇ ಅಂಗವನ್ನು ಉದುರಿಸಿಕೊಳ್ಳುತ್ತಿರುವಾಗ ನಾವು ಯಾವ ಅಂಗ ಕಳಚಿಕೊಳ್ಳುತ್ತಿದೆಯೆಂದು ನೋಡಲು ಹೊರಟಿದ್ದೇವೆ, ತಡಮಾಡಿ. ರೋಗ ಕಾಣುತ್ತಿದೆ, ಅದರ ಪರಿಣಾಮವನ್ನು ನೋಡುತ್ತಿದ್ದೇವೆ. ನೋಡುವ ಈ ನೋವಿನಲ್ಲಿ ಪರಿಹಾರಕ್ಕಾಗಿ ಹುಡುಕಾಟ ನಡೆಸುತ್ತಿದ್ದೇವೆ. ಯಂತ್ರ ತಂತ್ರಗಳ ದೊಡ್ಡಾಟದಲ್ಲಿ ಜಾನಪದ ಗಾಯನ ಪ್ರಕಾರದಲ್ಲಿ ನಾವು ಅನೇಕ ಹಾಡುಗಳನ್ನು ಕಳೆದುಕೊಂಡಿದ್ದೇವೆ. ಬೀಸಿ ಕುಟ್ಟುವಂಥವೆಲ್ಲ ಮಿಲ್ಲೀಕರಣಗೊಂಡು ಬೀಸೋ ಪದಗಳನ್ನು ಕುಟ್ಟೋಪದಗಳನ್ನು ಹಲವು ಸಾಂಪ್ರದಾಯಿಕ ಹಾಡುಗಳನ್ನು ಇದ್ದುವೇ ಎಂಬಂತೆ ಮಾಡಿಕೊಂಡಿದ್ದೇವೆ. 'ಕಣ' ಸಂಸ್ಕೃತಿಯು ಕ್ಷೀಣಿಸುತ್ತ ಕುಯ್ಲಾದ ಅರಿ, ತಾಳು, ತೆನೆಗಳಿಗೆ ಕೀಲು ರೋಡುಗಳು ಕಣಗಳಾಗುತ್ತಿವೆ. ಹಂತಿ, ಗುಂಡುಗಳಾಗಿ ವಾಹನಗಳ ಚಕ್ರಗಳು ಕಾಳುಕಡ್ಡಿಗಳನ್ನು ವಿಂಗಡಿಸುತ್ತಿವೆ. ಅಂದಮೇಲೆ ಹಂತಿ ಹಾಡೆಲ್ಲಿ? ಅಳಿದುಳಿದವುಗಳಲ್ಲಿ ನಾಟಿಯ ಪದ ಮುಂತಾದವು ಆಗೀಗ ಕಿವಿಗಳ ಮೇಲೆ ಬೀಳುತ್ತಿರುತ್ತವೆಯಷ್ಟೆ. ಲಾಲಿಯ ಪದಗಳು ವಿರಳದಲ್ಲಿ ವಿರಳವಾಗಿ ಕೇಳಿಸುತ್ತವೆಯಷ್ಟೆ. ಆಚರಣೆಯ ಪದಗಳ ಪಾಡೂ ಇವಕ್ಕಿಂತ ಭಿನ್ನವಾಗಿಲ್ಲ. ಈ ಎಲ್ಲವನ್ನು ಎದೆಗೆ ಕಟ್ಟಿಕೊಂಡು ತಿರುಗಾಡುತ್ತಿರುವಾಗ ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕಿನ ಹೊದಲಿ ಗ್ರಾಮದ ಕೋನಿಗ ಹನುಮಪ್ಪ ತಲಾಷಿಗೆ ಸಿಕ್ಕಿದರು. ಇವರು ಜಾನಪದ ವೃತ್ತಿ ಗಾಯಕರು. ಆದಿ ಕರ್ನಾಟಕ ಜಾತಿಗೆ ಸೇರಿದ, ತೊಂಬತ್ತು ದಾಟಿದ ವಯಸ್ಸು. ಎಂಬತ್ತು ವರ್ಷಗಳ ತನ್ನ ನಿಡಿದಾದ ಗಾಯನ ವೃತ್ತಿಯಲ್ಲಿ ಎಲ್ಲ ಋತುಗಳನ್ನು ಅನುಭವಿಸಿದ ಜೀವ.

ಉತ್ತಮ ಶಾರೀರದ ಹನುಮಪ್ಪ ಶ್ರೇಷ್ಠ ಮಟ್ಟದಲ್ಲಿ ಹಾಡುತ್ತಾರೆ. ಎರಡೂ ಕಯ್ ಬೆರಳುಗಳ ನಡುವೆ ಮೂರು ಮೂರು ಚಿಟಿಕೆಯನ್ನು ಹೋಲುವ ತಾಳಗಳು. ಇದೇ ವಾದ್ಯ ಪರಿಕರ. ಮೇಲ್ಭಾಗ ಇಂಗ್ಲಿಷಿನ ಎಲ್ ಅಕ್ಷರದಂತಿದ್ದು, ಎರಡು ಮೊಳದುದ್ದಕ್ಕೆ ಕೆಳಮುಖವಾಗಿ ಬಾಗಿಕೊಂಡ ಕೋಲು. ಇದನ್ನು 'ಕೋನಿಗಕಟ್ಟ' (ಕೋನಿಗಕೋಲು) ಅನ್ನುವರು. ಇದನ್ನು ಗಾಯನದ ನಡುವೆ ಪೀಠವಾಗಿ ಹನುಮಪ್ಪ ಬಳಸುತ್ತಾರೆ. ಹಾಡುತ್ತ ಇದರ ಮೇಲೆ ಕುಳಿತು ಗಿರಗಿರ ತಿರುಗುತ್ತಾರೆ. ಇದು ಕ್ಲಿಷ್ಟ ಸಾಧನೆ.

ತಲೆಗೊಂದು ಸಿಂಗರದ ರುಮಾಲು, ಪೂರ್ತಿ ತೋಳಿನ ಅಂಗಿ, ಕಚ್ಚೆ ಬಿಗಿದ ಧೋತರ ಕೋನಂಗಿಯವರ ದಿರಿಸು. ಎರಡೂ ಕೈಗಳ ನಾಲ್ಕೂ ಬೆರಳುಗಳ ನಡುವೆ ಮೂರು ಮೂರು 'ತಾಳದ ಚಕ್ಕೆ'. ಇದೊಂದೇ ವಾದ್ಯಪರಿಕರ. ಗಾಯಕನೇ ನುಡಿಸಿಕೊಂಬ ವಾದ್ಯವಿದು. ನುಡಿಕೆಯಲ್ಲಿ ಚಿಟಿಕೆ ವಾದ್ಯದಂತೆ.

ಹನುಮಪ್ಪ ಗಾಯನಕ್ಕೆ ನಿಲ್ಲುವುದರೊಂದಿಗೆ 'ಚಕ್ಕೆ'ಗಳು ಆತನ 'ದರುವು' ಧಾಟಿಗಳಿಗೆ ತಕ್ಕಂತೆ ಬೆರಳುಗಳ ನಡುವೆ ನುಡಿಯುತ್ತವೆ. ಗಂಟೆಗಟ್ಟಲೆ ನುಡಿಸಿದರೂ ಬೆರಳುಗಳು ದಣಿವುದಿಲ್ಲ. ಜಾನಪದ ಸಾಹಸಿ ಬಿಸ್ಸೇಗೌಡನ ಕತೆ ಈತ ಹಾಡುವ ಕಥನ ಗೀತೆಗಳಲ್ಲಿ ಪ್ರಮುಖ ಹಾಗೂ ಪ್ರಸಿದ್ಧವಾದುದು. ಹಾಡುತ್ತ ಹಾಡುತ್ತ ಗತಿ ವೇಗಕ್ಕೆ ತಕ್ಕ ಹಾಗೆ ಕೋನಿಗ ಕೋಲಿಗೆ ಪೃಷ್ಠ ಊರಿ ಕುಳಿತು ಗಿರಗಿರ ತಿರುಗುತ್ತಾ ನೋಡುಗರ ಮನಸ್ಸಿಗೆ ಮುದ ತುಂಬುತ್ತಾರೆ. ಇವರು ಸನ್ನಿವೇಶಕ್ಕೆ ತಕ್ಕಂತೆ ರಸ ಪೋಷಣೆ ಮಾಡುವ ಕೌಶಲ ಪರಿಣತಿ ಅದ್ಭುತ. ವೀರರಸ ಪ್ರದರ್ಶನ ಮಾಡುವಾಗಿನ ಧ್ವನಿ ರೋಮಾಂಚನ ತರುತ್ತದೆ.

'ಕೋನಿಗ' ಎಂಬುದು ಒಂದು ಜನಪದ ಗಾಯನ ಕಲೆ ಎಂದು ಹನುಮಪ್ಪ ಸಂಪರ್ಕಕ್ಕೆ ಬರುವ ತನಕ ತಿಳಿದದ್ದಲ್ಲ. ಇದು ಈತನಿಗೆ ವಂಶಪರಂಪರೆಯಿಂದ ಬಂದ ಕೊಡುಗೆ. ಈ ಕಲೆಯ ಹುಟ್ಟು ಪೂರ್ವೋತ್ತರ ಈತನಿಗೆ ತಿಳಿಯದು. ಇದರ ಬಗ್ಗೆ ನಾನು ಬಲ್ಲ ಜಾನಪದ ವಿದ್ವಾಂಸರನ್ನು ಕೇಳಿ ನೋಡಿದೆ. ಯಾವ ಮಾಹಿತಿಯೂ ಸಿಗಲಿಲ್ಲ. ಸಂಪರ್ಕಿಸಿದ ತೆಲುಗು ಜಾನಪದ ವಿದ್ವಾಂಸರೂ ಏನೂ ಹೇಳಲಿಲ್ಲ. ಈ ಕುರಿತು ಆಳವಾದ ಸಂಶೋಧನೆಯೇ ನಡೆಯಬೇಕಿದೆ.

ಈ ಗಾಯನ ಕಲೆ ಎಲ್ಲೆಲ್ಲಿ ಇದ್ದೀತೆಂದು ನಡೆಸಿದ ಪ್ರಯತ್ನವೂ ಫಲಕಾರಿಯಾಗಲಿಲ್ಲ. ಎಲ್ಲಿ ತಿರುಗಿದರೂ ಹಿಂದಿರುಗುವಂತಾದುದು ಹನುಮಪ್ಪನವರಲ್ಲಿಗೇ. ಹಾಗಾಗಿ ಕೊನೆಯ ವ್ಯಕ್ತಿ ಹನುಮಪ್ಪನವರೆಂದೇ ಸದ್ಯಕ್ಕೆ ಭಾವಿಸಬೇಕಾಗಿದೆ. ಇದಕ್ಕೆ ಕಾರಣವೇನೆಂದರೆ ಈವರೆಗೆ ಯಾರೊಬ್ಬರೂ, ಇವರ ಮಕ್ಕಳೂ ಸೇರಿ, ಇವರಿಂದ ಇದನ್ನು ಕಲಿತಿಲ್ಲ. ಮುಪ್ಪಿಗೆ ಸಹಜವಾದ ಮರೆವು. ಮಧುಮೇಹದ ಬಳುವಳಿಯಾದ ಕುರುಡು, ಬಡತನ ಇವರ ಎಲ್ಲ ಕಸುವನ್ನು ನುಂಗಿ ನೀರು ಕುಡಿದಿದೆ. ಇಲ್ಲಿನ ಈ ಪ್ರಸ್ತಾಪ ಪ್ರಾಸಂಗಿಕವಲ್ಲ. ಇಂಥ ಎಲ್ಲದಕ್ಕೂ ಪ್ರಾತಿನಿಧಿಕ.

ಇಂಥ ಹನುಮಪ್ಪನವರಿಗೆ ಸಿಕ್ಕಿರುವ ಏಕೈಕ ಪ್ರಶಸ್ತಿ ಎಂದರೆ ೨೦೦೬ರ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾದೆಮಿಯ ಪ್ರಶಸ್ತಿಯಷ್ಟೆ.

* * *

ಕೋನಿಗ ಹನುಮಪ್ಪನವರಂಥ ಗಾಯಕರನ್ನು ಹುಡುಕುತ್ತ ಹೊರಟಾಗ ಆದ ಅನುಭವವೆಂದರೆ, ಲೇಖನದ ಮೊದಲಲ್ಲಿ ಪ್ರಸ್ತಾಪಿಸಿದ ಗಾಯನ ಪ್ರಕಾರಗಳ ಹೊರತಾಗಿ ನಾಟಿಯ ಪದಗಳು ಮುಂತಾದವು ಅಳಿದಿಲ್ಲ. ಗ್ರಾಮ ನಗರಗಳ ಹಂಗಿಗೆ ಒಳಗಾಗುತ್ತ ಕ್ಷೀಣಿಸುತ್ತಿವೆ. ಕೃಷಿಯು ಯಂತ್ರ ಸಂಸ್ಕೃತಿಯ ಹಿಡಿತಕ್ಕೆ ಸಿಕ್ಕಿದ ಹಾಗೆಲ್ಲ, ತುಂಡು ಭೂಮಿ ಬೇಸಾಯ ಕೈ ಜಾರಿದಂತೆಲ್ಲ, ಚಕ್ಕಡಿ ಒಲೆಯಲ್ಲಿ ಉರಿದು ಬೂದಿಯಾದಂತೆಲ್ಲ, ಬೇಸಾಯದ ಜಾನುವಾರುಗಳು ಬರ, ಆರ್ಥಿಕ ಮುಗ್ಗಟ್ಟು ಇತ್ಯಾದಿ ಕಾರಣಗಳಲ್ಲಿ ಕೊಟ್ಟಿಗೆಯಿಂದ ಸಂತೆ ಪರಿಷೆಗಳಲ್ಲಿ ಬಿಕರಿಯಾದಂತೆಲ್ಲ ಇವಕ್ಕೆ ಸಂಬಂಧಿಸಿದ ಹಾಡುಗಳು ಎದೆಗಳಿಂದಲೇ ಹಾರಿಹೋದವು. ಇಲ್ಲವೆ ಮರೆವೆಯ ಮೊರೆಹೊಕ್ಕವು.

ಹುಡುಕಾಟದ ದಾರಿಯಲ್ಲಿ ಆಡವಿಯಲ್ಲಿ ದನಗಾಹಿಯೊಬ್ಬ ಎದುರಾದ. 'ಎಲಡಿಕೆ' ವಿನಿಮಯದ

> ಸಾಮಾನ್ಯವಾಗಿ ಜಾನಪದ ಕಲೆಯ ಯಾವುದೇ ಪ್ರಕಾರ ಅಥವಾ ವಿಭಾಗ ಸಂಗೀತ, ಗಾಯನಗಳಿಂದ ಹೊರಗಿಲ್ಲ. ಅನೇಕ ಆಟಗಳೂ ಹಾಡಿನೊಂದಿಗೇ ಇರುತ್ತವೆ. ಗಾಯನವು ಕೂಡ ಪ್ರದರ್ಶನವನ್ನು ಒಳಗೊಂಡಿರುವುದುಂಟು. ಸಂಗೀತ, ಗಾಯನ ಜಾನಪದದ ಅಂಗಸತ್ವಾಂಶ. ಮಕ್ಕಳು ಆಡುವ ಆಟಗಳಿಂದ ಹಿಡಿದು ಹಿರಿಯರು ಆಡುವ ಆಟಗಳ ತನಕ ಹಾಡು ಜೊತೆಗಿದ್ದು ಆಡಿಸುತ್ತದೆ. ಕೂಸನ್ನಾಡಿಸುವ ದೂರಿದೂರಿ, ಏತೇತೊ, ಮಕ್ಕಳು ಆಡುವ ರತ್ತೋ ರತ್ತೋ, ಅಪ್ಪಾಲೆ ತಿಪ್ಪಾಲೆ ಮುಂತಾದವುಗಳಂತೆಯೆ ಅನೇಕ ಆಟಗಳು ಹಾಡುಗಳ ಜೊತೆ ಜೊತೆಗೆಯೇ ಆಡಿಸಿಕೊಳ್ಳುತ್ತವೆ. ಹೀಗೆ ಗಾಯನ ಸಂಗೀತದೊಂದಿಗೆ ಇರುವುದರಿಂದಾಗಿಯೇ ಹಾಡುವ, ಆಡುವ, ನೋಡುವ, ಕೇಳುವ ಎಲ್ಲರ ಮನಸ್ಸುಗಳಲ್ಲಿ ಆರೋಗ್ಯ, ಸಹನೆ, ಸಂತಸಗಳನ್ನು ತುಂಬಿವೆ. ಹಾಗಾಗಿಯೇ ಇದು ಜೀವನದೆತ್ತರಕ್ಕೆ, ಬದುಕಿನ ವಿಸ್ತಾರಕ್ಕೆ ಹಂಬು ಹರಿದು ಹಬ್ಬಿಕೊಂಡಿತ್ತು. ಹೀಗೆ ಹಬ್ಬಿಕೊಂಡ ಹಂದರದ ಕಂಬಗಳನ್ನು ಕಿತ್ತದ್ದರಿಂದ ಹಂಬುಗಳು ನೆಲ ಕಂಡವು. ಈಗ ಬಳ್ಳಿ, ಕುಡಿಗಳು ಮುರಿಯದಂತೆ ಚಪ್ಪರವನ್ನು ಎತ್ತಬೇಕಿದೆ. ಎತ್ತುವುದರೊಂದಿಗೆ ನಿಂತು ಹಂಬು ಹರಿಯಲು ಬಿಡಬೇಕಿದೆ. ಇಷ್ಟು ಮಾಡಿದರೆ ಬೆಳೆದು ಹಂಬರಿಯುವ ಶಕ್ತಿ ಜಾನಪದ ಕಲೆಗಿದೆ.

ಸಂಪರ್ಕದಲ್ಲಿ ವಿಶ್ವಾಸ ಗಳಿಸಿ ಹಾಡು ಹಾಡ್ತೀಯ ಅಂದಾಗ ಓ ಎಂದು ಒಪ್ಪಿದ. ಒಪ್ಪಿದ್ದಕ್ಕೆ ಖುಷಿಯಾಗಿ ಹಾಡೆಂದೆ. ಹಾಡತೊಡಗಿದ. ಒಂದೆರಡು ನುಡಿಗಳಿಗೇ ನಿಲ್ಲಿಸಿ 'ಓಯ್' ಎಂದು ಅಲ್ಲೆಲ್ಲೋ ದನ ಮೇಸುತ್ತಿದ್ದವನಿಗೆ ಕೂಗು ಹಾಕಿ ''ಹಾಡಿದ್ದು ಸರೀಗೈತೇನ್ಲೆ'' ಎಂದು ಕೂಗಿ ಕೇಳುತ್ತಿದ್ದ. ಅವನು 'ಸರೀಗೇ ಐತಣ್ಣೋ' ಅಂತಿದ್ದ. ಇವನು ಹಾಡಬೇಕು ಅಂತಲೇ ಇದ್ದ. ಆದರೆ ಆಗುತ್ತಿದ್ದುದಿಲ್ಲ. ''ಇದ್ರ ಮನೆ ಕಾಯ್ವಾಗ ಮರ್ತ್ವಿ ನೋಡು. ಕೇಳ್ತೀವಿ ಅನ್ನೋರಿಲ್ದ ಮ್ಯಾಕ ಎಲ್ಲ ಮರ್ತೋಗೋದೆ'' ಅಂದ. ಇಂದು ಜಾನಪದ ಸಾಹಿತ್ಯ, ಗಾಯನ ಏನಾಗುತ್ತಿದೆ, ಹೇಗಾಗುತ್ತಿದೆ ಅನ್ನುವುದಕ್ಕೆ ಆತನ ಮಾತುಗಳು ಪ್ರಾತಿನಿಧಿಕವೂ ವಾಸ್ತವವೂ ಆಗಿವೆ.

ಹಳ್ಳಿಹಾಡುಗಳ ಹಾಡುಗಾರರ ಬಗ್ಗೆ ವಿಚಾರಿಸಿದಾಗ ಹಿರಿಯರೊಬ್ಬರು ಆಡಿದ ಮಾತು ಮಾರ್ಮಿಕವಾದುದು. ''ಈಗ ಹಳ್ಳೀಲೆಲ್ಲ ಹಾಡೆಲ್ಲ ಬಂತು ಮೇಷ್ಟ್ರೇ, ಹೊಲೀರು, ಮಾದಿಗ್ರು ಅಟ್ಟೀಲಿ ಕಾಲ್ಮುರ್ಕಂಡು ಬಿದ್ದೈತೆ. ಇನ್ನೊಂದಾಸು ದಿನಗಳಾದ್ರೆ ಅಲ್ಲೇ ಸತ್ತೂ ಓತದೆ.'' ಆತನ ಮಾತು ಜಾನಪದ ಸಾಹಿತ್ಯ ಹಾಗೂ ಗಾಯನದ ಬಗೆಗಿನ ಭವಿಷ್ಯ ವಾಣಿ.

ಈ ಕೊರಗೇ ನಮ್ಮದಾಗಿ ಬಿಡುವುದೆ ?

ಹೀಗೇ ಮುಂದುವರೆದರೆ ಅಷ್ಟೇ. ಮುಂದೇನು ಎಂದು ಯಾರನ್ನೋ ಹುಡುಕಿಕೊಂಡು ಹೋಗಿ ಕೇಳಬೇಕಿಲ್ಲ. ಹಾಗೆ ಕೇಳುವುದೇ ನಾಚಿಕೆಗೇಡು. ಎಲ್ಲ ಒತ್ತಡ, ದಾಳಿಗಳ ನಡುವೆಯೂ ದಾರಿಯಿದೆ. ಇವಕ್ಕಾಗಿ ಕಿವಿ ತೆರೆಯಬೇಕು. ಎದೆಗೊಡಬೇಕು. ಇವನ್ನು ಉಳಿಸಿಕೊಳ್ಳುವುದು ಸಂಕಲ್ಪಕೃತ ದೀಕ್ಷೆಯ ಕೆಲಸ. ಅವಿದ್ದಲ್ಲಿಗೆ ಹೋಗುವುದೇ ಇರುವ ಏಕೈಕ ಮಾರ್ಗ. ಇದು ಜಾನಪದ ಗೀತೆಗಳ ಸಂಗ್ರಹದ ಕಾಲವಲ್ಲ. ಗಾಯಕರ ಬಳಿಗೆ ಹೋಗಿ ಕುಳಿತು, ಕಲಿತು ಬಂದು ಹಾಡುತ್ತ ಉಳಿಸಿಕೊಳ್ಳುವ ಕಾಲ.

ಜಾನಪದ ಗೀತೆಗಳು ಇರುವುದು ಇಂದು ಖಂಡುಗದಷ್ಟು ಎಂದು ಭಾವಿಸಿಕೊಂಡರೆ ಸಂಗ್ರಹವಾಗಿರುವುದು ಅರ್ಧ ಖಂಡುಗದಷ್ಟೆ. ಉಳಿದರ್ಧವಿನ್ನೂ ಹಾಗೆಯೇ ಉಳಿದಿದೆ. ಈ ಮಾತನ್ನು ಈ ಮುಂಚೆ ಹೇಳಿದ ''ಇದು ಸಂಗ್ರಹ ಕಾಲವಲ್ಲ'' ಎಂಬ ಮಾತಿನೊಂದಿಗೆ ಗೊಂದಲಗೊಳ್ಳಬೇಕಿಲ್ಲ. ಈ ಉಳಿದದ್ದು ಅವರ ಬಳಿ ಕುಳಿತು ಕಲಿಯುವಾಗ ಸಂಗ್ರಹಗೊಳ್ಳುತ್ತದೆ. ಈಗ ನಾವು ಹೇಗೂ ಅಕ್ಷರ ಸಂಪ್ರದಾಯದವರೇ ತಾನೆ !

ಇನ್ನು ಗಾಯನದ ಮಾತು : ಮೂಲ ಗ್ರಾಮೀಣ ಗಾಯನದ ಸ್ಮೃತಿಯಲ್ಲಿ ಹಾಡುವವರಿರುವುದನ್ನು ಖಂಡುಗದಲ್ಲೊಂದು ಬಳ್ಳವೆಂದು ಭಾವಿಸಬಹುದು. ಹಾಗಾಗಿ ಮೂಲ ಸ್ಮೃತಿ, ಧ್ವನಿ ವಿನಿಕೆಯೊಂದಿಗೆ ಕಲಿಕೆಗೆ ಬರಬೇಕಿದೆ. ಇವೆಲ್ಲ ಮಾಡೋರು ಯಾರು, ಹೇಗೆಂಬ ಮಾತಿನಲ್ಲೇ ಕುಳಿತರೆ ''ಗೌಡ ಬಂದ ಮೊದಲಿಂದ ಸುರು ಮಾಡು'' ಅನ್ನೊ ಗಾದೆಯಂತಾಗುತ್ತೆ.

ಈಗ ಗ್ರಾಮೀಣ ಮಟ್ಟದಲ್ಲಿ ಪದವಿಪೂರ್ವ ಕಾಲೇಜುಗಳಿವೆ. ಅಲ್ಲಿಂದ ಆರಂಭಿಸಬಹುದು. ಇನ್ನೂ ಕೇಳಹಂತವೆಂದರೆ ಸರ್ವಶಿಕ್ಷಾ ಅಭಿಯಾನದ ಮೂಲಕವೂ ಸಾಧ್ಯವಿದೆ. ವಿಶ್ವವಿದ್ಯಾಲಯಗಳು, ವಿಶೇಷವಾಗಿ ಕನ್ನಡ ವಿಶ್ವವಿದ್ಯಾಲಯ, ದ್ರವಿಡ ವಿಶ್ವವಿದ್ಯಾಲಯಗಳು ಸಹಯೋಗ ನೀಡಬಹುದು. ಮತ್ತೆ ಜನಪದರ ಮಾತಿಗೇ ಹೋಗೋದಾದರೆ 'ಮನಸ್ಸಿದ್ದರೆ ಮಾರ್ಗ'.

ಇನ್ನು ಸಂಕರದ ಮಾತು : ಇದು ಸಹಜ. ಆದರೆ ಇದೇ ಅಂತಿಮ ಪರ್ಯಾಯವಲ್ಲ, ಆಯ್ಕೆಯಲ್ಲಿ ಇದೂ ಇರಬಹುದಷ್ಟೆ. ಮೂಲದೊಂದಿಗೆ ಇದು ಇದ್ದರೆ ಇದಕ್ಕೆ ಬೆಲೆ.

### ಭಾಗ - ೨

*ಚಿಂತಿ ಮಾಡಲಿ ಬ್ಯಾಡ ಛೀ ಹುಚ್ಚಿ ಹಡೆದವ್ವ*
*ಚಿಂತ್ಯಾಗ ಕಾಯ ಇಳಿತಾರ। ಪಾಂಡವರ*
*ಅಂಥವರಿಗುಂಟು ವನವಾಸ॥*

ಜಾನಪದರ ಈ ಎತ್ತರದ ಹೃದಯ ಸಾಂತ್ವನ ಅವರ ಅನುಭವದಷ್ಟೇ ಎತ್ತರದ್ದು. ಇದು ಕಳೆದುಕೊಂಬ ಕೊರಗಿರುವ ಯಾರಿಗೂ ಸಾಂತ್ವನವೇ. ಈ ಸಾಂತ್ವನದ ಮೂಲಕವೇ ನಾವು ಉಳಿದುಕೊಂಡಿರುವ ಜಾನಪದ ಗಾಯನ ಸಿರಿಯನ್ನು ಎದೆಗೆ ತಂದುಕೊಂಡು ತುಂಬಿಕೊಳ್ಳಬೇಕು. ತುಂಬಿಕೊಳ್ಳದ್ದಾವುದೂ ನಮ್ಮದಲ್ಲ. ತುಂಬಿಕೊಳ್ಳದೆ ಹೋದದ್ದೇ ನಮ್ಮೆಲ್ಲ ಕೊರಗು, ನೋವಿಗೆ ಕಾರಣ. ಸಾವಿರದ ಪದವುಂಟು ನೂರಿನ್ನೂ. ಈ ನೂರು ಆರಾಗಿ ಆರುವ ಮೊದಲು ಮೊರ ತುಂಬಿ ಬಾಗಿನವ ಕೊಡುವ.


ಮಂಟೇಸ್ವಾಮಿ ಭಕ್ತರು

ಬಾಗಿನ ಕೊಡುವುದರಲ್ಲಿ ಮಂಗಳದ ಕಾಮನೆ, ಗೌರವ ಮರ್ಯಾದೆಗಳ ಸಲ್ಲಿಕೆ ಇದೆ. ಕನ್ನಡ ನಾಡಿನ ಯಾವುದೇ ಭಾಗದ ಜಾನಪದ ಕಲೆಗಳ ಆಂತರ್ಯ ಹದುಳತನದಲ್ಲಿ ಅರಳಿರುವುದನ್ನು ಕಾಣುತ್ತೇವೆ. ಬಾಳಿನ ಹದುಳತನವನ್ನೇ ದೇನಿಸುವ ಸಂಸ್ಕೃತಿಯನ್ನು ಹೃದಯಕ್ಕೆ ಕಲಿಸುವ ಚಿರ ಚೇತನದ ಚಿಲುಮೆಗಳಿವು. ಬದುಕು ಮನಗಳ ನೋವುಗಳನ್ನು ಮೀರುವ ಗುಣ ಪಾಠಗಳು ಜಾನಪದ ಗೀತೆಗಳಲ್ಲಿ ಸ್ವಯಂ ದೀಪಕತೆ ಪಡೆದಿವೆ. ಹಾಡುಗಾರರು ಅನುಭವವನ್ನೇ ಅನುಭವಿಸಿ ಹಾಡುತ್ತಾರೆ. ಹೀಗೆ ಹಾಡುವುದರಿಂದ ಆರ್ದ್ರತೆ ತಾನೇ ತಾನಾಗಿ ತುಂಬಿಕೊಳ್ಳುತ್ತದೆ. ಆರ್ದ್ರತೆ ಹಾಡುತ್ತಿರುವಷ್ಟು ಹೊತ್ತು ಗುಪ್ತಗಾಮಿನಿಯಾಗಿ ಎದೆಯಿಂದಲೆದೆಗೆ ಹರಿಯುತ್ತಿರುತ್ತದೆ. ಕೇಳಿದ ಮೇಲೆಂದೂ ಇದರ ಹರಿವು ಬತ್ತುವುದಿಲ್ಲ, ಆರುವುದಿಲ್ಲ. ಪ್ರತಿಯೊಂದು ಹಾಡೂ ನೀರ ದೀವಿಗೆಯೇ. ನೀರದೀವಿಗೆ ಎಂದಿಗೆ ಆರಬೇಕು !

ಇವೆಲ್ಲ ಜಾನಪದ ಗೀತೆ, ಹಾಡುಗಾರಿಕೆಯ ಬಗೆಗಿನ ಭಾವ ಲಹರಿಗಳು. ಹಾಡಿನ ಸಾಹಿತ್ಯ ಹಾಗೂ ಹಾಡುಗಾರರ ಹಿಂದೆ ಬಿದ್ದಾಗ ಈ ಭಾವ ಲಹರಿಗಳ ನಡಿಗೆಯೇ ಬೇರಾಗುತ್ತದೆ. ವೃತ್ತಿಯಾಗಿಸಿಕೊಂಡು ಅದರಿಂದ ಸ್ಥಾನ ಮಾನ ಪಡೆದವರಿಗೂ ಕಾರ್ಯಕ್ಕೆ ಕರೆಸಿಕೊಂಡು ಹಾಡುವವರಿಗೂ ನಡುವೆ ಬಹಳ ವ್ಯತ್ಯಾಸ ಕಂಡುಬರುತ್ತದೆ. ಅವರು ಸಂಪ್ರದಾಯದ ಸುಧಾರಣೆಯಲ್ಲಿ ಹಾಡುತ್ತಾರೆ. ಕೇಳುಗ ವರ್ಗ ಮತ್ತು ಮನಸುಗಳ ಮಿಡಿತ ಹಿಡಿದು ಹಾಡುತ್ತಾರೆ. ಅದರಂತೆ ಸಾಹಿತ್ಯ ಪರಿಷ್ಕರಣೆ, ಅದರ ನೀಳತೆಗೆ ಕತ್ತರಿ ಎಲ್ಲ ಬೀಳುತ್ತದೆ. ಇಲ್ಲಿ ಹಾಡುಗ, ಕೇಳುಗ ಇಬ್ಬರ ಭೌತಿಕ ಹಾಗೂ ಮನೋಕಾಲ ಪೂರ್ವ ನಿರ್ಧಾರದಲ್ಲಿ ಒಂದೇ ಆಗಿರುತ್ತೆ. ಅಂದರೆ ಇಷ್ಟು ಸಮಯದಲ್ಲಿ ಇಂತಿಂಥ ಇಷ್ಟು ಹಾಡು ಎಂದು. ಇದಿಷ್ಟು ಮುಗಿಯುತ್ತಲೇ ವೇದಿಕೆಯೂ ಬರಿದು, ಕೇಳುಗರೂ ಹೊರಡುವರು. ಅಲ್ಲಿಗೆ ಇಬ್ಬರ ನಡುವಿನ ಸಂಪರ್ಕ ನಿಲ್ಲುವುದು. ಆದರೆ ಕಾರ್ಯಕ್ಕಾಗಿ ಹಾಡುವವರು ಸಂಪ್ರದಾಯದಲ್ಲೇ ಹಾಡುತ್ತಾರೆ. ಇಲ್ಲಿ ಕೇಳುಗ ಹಾಡುಗ ಇಬ್ಬರಿಗೂ ಭೌತಿಕ (ಗಡಿಯಾರ, ಮನೆ ಸೇರುವ ತವಕ, ನಿದ್ದೆ, ನಾಳೆ ಇತ್ಯಾದಿ) ಕಾಲ ಇರುವುದಿಲ್ಲ. ಇರುವುದೆಲ್ಲ ಇಬ್ಬರದೂ ಒಂದಾದ ಮನೋಕಾಲ. ಹೀಗೆ ಮನೋಕಾಲದ ತೆಕ್ಕೆಯಲ್ಲಿ ಹಾಡು ಮತ್ತು ವಿನಿಕೆ ಹ್ರಸ್ವವಲ್ಲ. ಧಾರ್ಮಿಕ, ಸಾವು ಈ ಸಂದರ್ಭಗಳನ್ನು ಬಿಟ್ಟರೆ ಉಳಿದೆಲ್ಲಾ ಸಮಯ ಸಂದರ್ಭಗಳಲ್ಲಿ ಎಲ್ಲ ಬಗೆಯ ಹಾಡುಗಳೂ ಹಾಡಲು ಮತ್ತು ಕೇಳಲು ಯೋಗ್ಯವೇ. ಸಾಹಿತ್ಯದ ಭಾಷೆಯೂ ಅಷ್ಟೆ. ಪರಿಷ್ಕರಣೆಯಿಲ್ಲ, ಕೃತಕ ವೈಯ್ಯಾರ, ಮೆರುಗುಗಳಿಲ್ಲ. ಇದೇ ಅಸಲೀ ಹಳ್ಳಿ ಹಾಡು ಹಾಗೂ ಗಾಯನ. ಹೀಗೆ ಹಾಡುವವರೇ ಜಾನಪದ ಗಾಯಕರು. ಕೇಳುವವರೇ ನಿಜದಲ್ಲಿ ಜನಪದರು.

ಈ ಮನೋಭೂಮಿಕೆಯಲ್ಲಿ ನಿಂತಾಗ ಎದುರಾಗುವುದು ಸಿದ್ಧ ಆಕರಗಳಿಂದ ಉಲ್ಲೇಖಗಳನ್ನು ಆಯುವುದೆ ಅಥವಾ ಇನ್ನೂ ಕೊರಳುಗಳಲ್ಲೇ ಜೀವಂತವಿರುವುವನ್ನು ಹುಡುಕಿಕೊಳ್ಳುವುದೆ ಎಂಬ ಪ್ರಶ್ನೆ. ಆಕರಗಳಿಂದ ಯಾರೂ ಯಾವಾಗಲಾದರೂ ಪಡೆದುಕೊಳ್ಳಬಹುದು. ಆದ್ದರಿಂದ ಕೊರಳಲ್ಲಿ ನಿಂತವನ್ನ ಅಂದರೆ ನಾಳೆಗೆ ಸಿಗದವನ್ನ ಹಿಡಿಯೋಣವೆಂದೇ ನಡೆಸಿದ ಹಾಡ ಯಾನವಿದು.

ಯಾನದ ಗುಣವನ್ನು ನಾವು ಬಲ್ಲೆವು. ಅದು ನಮ್ಮ ಬೇಡಿಕೆಗಳನ್ನೆಲ್ಲ ಪೂರೈಸದು. ನಿರೀಕ್ಷೆಗಳನ್ನೆಲ್ಲ ಈಡೇರಿಸದು. ಇಲ್ಲಿ ಜಾನಪದರ ನಂಬಿಕೆಯ ಋಣವಿದ್ದಷ್ಟು ಎಂಬ ಮಾತು ಹೃದಯವನ್ನು ತೆರೆಯುತ್ತದೆ. ಒಂದು ಕತೆಯೂ ನೆನಪಾಗುತ್ತದೆ.

ಒಬ್ಬ ಶ್ರೀಮಂತನಾಗಬೇಕೆಂಬ ಬಯಕೆಯ

ಬಡವನಿದ್ದ. ಒಂದು ದಿನ ಅವನಿಗೆ ಭಾಗ್ಯದೇವತೆ ಒಲಿದುಬಂದಳು. ಇಂದು ನಟ್ಟಿರುಳಿನಲ್ಲಿ ಭಾರೀ ಹಾವೊಂದು ನಿನ್ನ ಮನೆಗೆ ನುಗ್ಗಿ ಬರುತ್ತೆ. ನೀನದನ್ನು ಗಟ್ಟಿಯಾಗಿ ತಬ್ಬಿಕೊಂಡುಬಿಡು, ಶ್ರೀಮಂತನಾಗಿ ಬಿಡುವೆ. ಹೀಗೆ ಹೇಳಿ ಭಾಗ್ಯದೇವತೆ ಮಾಯವಾದಳು. ಇವನು ಕಾದ. ಸರಿಹೊತ್ತಿಗೆ ಘಟಸರ್ಪ ಬುಸುಗುಟ್ಟುತ್ತ ನುಗ್ಗಿ ಬಂತು. ಇವನು ಭಯಗೊಂಡು ನಡುಗಿ ಕಣ್ಣ ಮುಚ್ಚಿ ಕೊಂಡ. ಮನೆಗೆ ನುಗ್ಗಿದ ಹಾವು ಗೋಡೆ ಪಕ್ಕದಲ್ಲಿದ್ದ ಬಿಲದೊಳಕ್ಕೆ ನುಸುಳಿತು. ಇವನು ಕಣ್ಣು ತೆರೆದು ನೋಡಿದ. ಬಾಲ ಮಾತ್ರ ಬಿಲದಿಂದ ಹೊರಕ್ಕೆ ಕಾಣಿಸುತ್ತಿತ್ತು. ಓಡಿ ಹೋಗಿ ಆ ಬಾಲವನ್ನು ಹಿಡಿದು ಕೊಂಡ. ಅದು ತುಂಡಾಗಿ ಕೈಗೆ ಬಂದಿತು. ಅದು ವಜ್ರ ಖಚಿತ ಬಂಗಾರದ ತುಂಡಾಗಿತ್ತು.

ಇಲ್ಲಿಯೂ ಹೀಗೆಯೇ. ಕೊಂಚ ಹಿಂಜರಿದರೂ ಧ್ವನಿ ಸಹಿತ ಹಾಡು ಎದೆ ತಪ್ಪಿ ಹೋಗುತ್ತದೆ. ಹೀಗೆ ತಪ್ಪಿಸಿಕೊಂಡದ್ದು ಬಿಟ್ಟು ಸಿಕ್ಕಿದವನನ್ನು ಹಿಡಿದಿದೆ. ಜೊತೆಗೆ ಮುದ್ರಿತವಾದವುಗಳನ್ನೂ ಬಳಸಿಕೊಂಡಿದೆ.

ಕೆಂಚಮ್ಮ ಎಂಬುವಳ ಮಗಳಿಗೆ ಮದುವೆಯ 'ವಸಗೆ'. ಅಂಗಳದಿಂದ ಹೆಂಗಸರ ಧ್ವನಿ :

*ಹಿಂದೆ ಇನ್ನೂರು ದಂಡು*
*ಮುಂದೆ ಮುನ್ನೂರು ದಂಡು*
*ಅವ್ನು ಹೊಂಟಾನೆ ಸೂಳೀಯ ಮನೆಗೆ.*

ಅವನು ಹೋಗದಂತೆ ತಡೆದು, ತನ್ನೊಂದಿಗೇ ಇರಿಸಿ ಕೊಳ್ಳಲು ಏನು ಮಾಡಬೇಕೆಂಬುದೇ ಮುಂದಿನ ನುಡಿ :

*ಹುಲಿ ರಂಗು ಸೀರೆನುಟ್ಟು*
*ಹುಲಿ ರಂಗು ರವ್ಕೆ ತೊಟ್ಟು*
*ಯೇಳು ಸುತ್ತ ಮಲ್ಗೆ ಮುಡಿದು...*

ಹೀಗೆ ಸಿಂಗರಗೊಂಡು, ಆಚೆಯಾಡೆ ಹೊರಟ ವನನ್ನು ತಡೆದು ಸೆಳೆದು ಸಂಸಾರ ನಡೆಸುವ 'ಕೀಲ'ನ್ನು ಹಸೆಯ ಮೇಲಿರುವಾಗಲೆ ಹೇಳಿಕೊಡುತ್ತಾರೆ.

ಇದೇ ಹಾಡು ಗಂಡಸಿನ ಧ್ವನಿಯಲ್ಲಿ ಕೇಳಿ ಬರುವುದು ಹೀಗೆ :

*ಹಿಂದೆ ಇನ್ನೂರು ದಂಡು*
*ಮುಂದೆ ಮುನ್ನೂರು ದಂಡು*
*ಅವನು ಹೊರಟಾನೋ*
*ಸೂಳೇಯ ಮನೆಕ*

*ಒಂದು ಮಲ್ಲೀಗೆ ದಂಡೆ*
*ಒಂದು ಸಂಪಂಗಿ ದಂಡೆ*
*ಅವಳು ಬಂದಾಳೋ*
*ರಾಜಾನ ಕಡಿಕ*

ಆದರೆ ಸಂದರ್ಭ ಸಮಯ ಒಂದೇ ಅಲ್ಲ. ಅದು ಒಸಗೆ ಇಕ್ಕುವಾಗಿನ ಹಾಡಾದರೆ, ಇದು ಬಂಡಿ ಹೊಡೆಯುವಾಗ, ಹೊಲ ಉಳುಮೆ ಮಾಡುವಾಗ ಹಾಡಿಕೊಂಬ ಹಾಡು. ಇಲ್ಲಿ ಸ್ತ್ರೀ ಪುರುಷರ ಮನೋ ಭಾವ ಸ್ಪಷ್ಟವಿದೆ. ವಿಶ್ಲೇಷಣೆಯ ಅಗತ್ಯವಿಲ್ಲ.

ಹಾಡುಗಾರಿಕೆಯ ಧಾಟಿ ಒಂದೆ. ಗಂಡಸು ಹಾಡುವ ಈ ಹಾಡನ್ನು ಆರ್. ವಿಜಯರಾಘವನ್ ತಮ್ಮ 'ಅಪರಿಮಿತದ ಕತ್ತಲೊಳಗೆ' ಎಂಬ ನೀಳ್ಗತೆಯಲ್ಲಿ ಬಳಸಿಕೊಂಡಿದ್ದಾರೆ.

ನಾನು ಅಡ್ಡಗಲ್ಲಿನಲ್ಲಿದ್ದಾಗ ರಾಜಮ್ಮ ಎಂಬಾಕೆಯ ಪರಿಚಯವಿತ್ತು. ಆಕೆ ಅದ್ಭುತ ಹಾಡುಗಾತಿಯಾಗಿದ್ದಳು. ಆಕೆಯ ಹಾಡುಗಾರಿಕೆಗಾಗಿಯೇ ಕೂಲಿಗೆ ಕರೆಯು ವವರೂ ಇದ್ದರು. ಈ ಕಾರಣದಿಂದ ಆಕೆ ಮಾಡುವಷ್ಟು ಕೆಲಸ ಮಾಡಬಹುದಾಗಿತ್ತು.

ಜೊತೆಯವರು ''ನೀ ಕುಂತು ಹಾಡು ರಾಜಮ್ಮ... ನಿನ್ ಕೆಲ್ಸ ನಾವ್ ಮಾಡ್ತೀವಿ'' ಅನ್ನೋರು. ಇದಕ್ಕೆ ಯಜಮಾನ ರೈತನೂ ಒಪ್ಪುತ್ತಿದ್ದ. ಏಕೆಂದರೆ ಅವನೂ ಜನಪದನಲ್ಲವೇ! ಆದರೆ ರಾಜಮ್ಮ ಕೆಲಸ ಬಿಟ್ಟು ಹಾಡುತ್ತಿರಲಿಲ್ಲ. ಕೂಲಿ ಕೊಡುವುದು ತನ್ನ ಕೆಲಸಕ್ಕೆ ಎಂಬುದು ನಿಯತ್ತು. ಕೆಲಸ ತನಗಾಗಿ, ಹಾಡುವುದು ಎಲ್ಲರಿಗಾಗಿ ಎಂಬುದು ಆಕೆಯ ಮನೋಧರ್ಮ ವಾಗಿತ್ತು.

ಇಲ್ಲಿ ರಾಜಮ್ಮ ಜಾನಪದ ಗಾಯಕರ ಕಾಯಕ ಹಾಗೂ ಕಲೆಯ ಗುಣ ಶೀಲಗಳನ್ನು ಒಟ್ಟಿಗೆ ಆವಿಷ್ಕರಿಸುತ್ತಾಳೆ. 'ನೀ ಕುಂತು ಹಾಡು' ಅನ್ನುವುದರಲ್ಲಿ ಗುಪ್ತ ಸಂಸ್ಕಾರವಿದೆ. ಅದೆಂದರೆ ಆ ಬಡ ಜನ ಆ ಬಡ ಗಾಯಕಿಗೆ ಸಲ್ಲಿಸುವ ಗೌರವ. 'ನಿನ್ ಕೆಲ್ಸ ನಾವ್ ಮಾಡ್ತೀವಿ' ಅನ್ನೋದು ಹೊತ್ತು ಹೊತ್ತಿಗೆ ತುತ್ತು ಗಳಿಸಲು ದುಡಿಯುವವರು ನೀಡುವ ಪುರಸ್ಕಾರ. ಇದು ಎಷ್ಟು ದೊಡ್ಡದಲ್ಲವೆ ?

ಬಿಡುವಿನ ವೇಳೆಯಲ್ಲಿ ಹೋಗಿ ಹಾಡೆಂದು

ಕೇಳಿದಾಗ ರಾಜಮ್ಮ ಹೇಳಿದ ಮಾತು ನಮ್ಮ ಶ್ರದ್ಧಾವಂತ ಶಾಸ್ತ್ರೀಯ ಸಂಗೀತಗಾರರು ಹೇಳುವಂಥ ಮಾತಿನಂತೆಯೇ ಇತ್ತು. ಇಂಥ ಹೊತ್ತಿನಲ್ಲಿ ಇಂಥಾ ರಾಗವನ್ನೇ ಹಾಡಬೇಕೆಂದು ಅವರು ಹೇಳುತ್ತಾರೆ. ರಾಜಮ್ಮನ ಮಾತೂ ಹಾಗೆಯೇ ಇತ್ತು. "ಕೆಲಸದ ಹಾಡನ್ನು ಕೆಲಸ ಮಾಡುವಾಗಲೇ ಹಾಡಬೇಕು. ಆಗ ಹಾಡು ಎದೆ ತುಂಬಿ ಬರುತ್ತೆ. ಕೆಲಸದಲ್ಲೇ ಅಲ್ಲವ ಅದು ಬಂದಿದ್ದು" ಎಂತಹ ಪ್ರಜ್ಞಾವಂತಿಕೆ! ರಾಜಮ್ಮ ಪೈರು ನಾಟಿ ಮಾಡುತ್ತ ಹಾಡಿದ್ದನ್ನು ಕೇಳಿಸಿಕೊಂಡ ಹಾಡಿದು :

ಬಳ್ಳಾ ಬಳ್ಳ ರಾಗಿ ಕೊಡ್ತೀವ್
ರಾಗಿ ಹುವ್ವಿನ್ ಸೀರೆ ಕೊಡ್ತೀವ್
ಬರ್ತೀರೇನಮ್ಮ ಪೈರು ಊಣೋಕ್
ನನ್ನಕ್ಕದೀರ ಬರ್ತೀರೇನಮ್ಮ.

ಬಳ್ಳ ಬಳ್ಳ ರಾಗಿ ಬ್ಯಾಡ
ರಾಗಿ ಹುವ್ವಿನ್ ಸೀರೆ ಬ್ಯಾಡ
ಬರೋದಿಲ್ಲಪ್ಪ ಪೈರು ಊಣೋಕ್
ನನ್ನಣ್ಣದೀರ ಬರೋದಿಲ್ಲಪ್ಪ

ಬಳ್ಳ ಬಳ್ಳ ರಾಗಿ ಬ್ಯಾಡ
ಅವರೆ ತೊಗರಿ ಎಳ್ಳು ಬ್ಯಾಡ
ಇನ್ನೇನು ಬೇಕಮ್ಮ ಪೈರು ಊಣೋಕ್ಕ
ನನ್ನಕ್ಕದೀರ ಇನ್ನೇನ್ ಬೇಕಮ್ಮ ?

ಬಳ್ಳ ಬಳ್ಳ ನೆಲ್ಲು ಕೊಟ್ರು
ಸಾಲೀಗಾಗೊ ಪೈರು ಕೊಟ್ರೆ
ಬತ್ತೀವ್ ಕಾಣಣ್ಣ ಪೈರು ಊಣಲು
ನನ್ನಣ್ಣದೀರ ಬತ್ತೀವ್ ಕಾಣಣ್ಣ

(ಊಣಲು=ಹೂಳಲು, ನಾಟಿ ಮಾಡಲು. ಹಾಡು ದೀರ್ಘವಾದುದರಿಂದ ಮೊದಲ ಮತ್ತು ಕಡೆಯ ನುಡಿಗಳನ್ನು ಮಾತ್ರ ತೆಗೆದುಕೊಂಡಿದೆ.)

ತಮ್ಮ ಗದ್ದೆಗಾಗಿ ಪೈರು ಕೇಳಿರುವುದು ಸರಿ. ಆದರೆ ನೆಲ್ಲು (ಬತ್ತ) ಕೇಳಿದ್ದೇಕೆ ? ಇಲ್ಲಿ ಒಂದು ಸ್ವಾರಸ್ಯವಿದೆ. ನೆಲ್ಲು ಬಡವರ ದಿನ ದಿನದ ಆಹಾರವಲ್ಲ. ಹಬ್ಬವೋ ಇನ್ನೇನಾದರು ವಿಶೇಷವೋ ಇದ್ದ ದಿನಗಳಲ್ಲಿ ಮಾತ್ರ ಇವರಲ್ಲಿ ಅನ್ನದೂಟ. ಅದಕ್ಕೂ ಅವರಲ್ಲಿ ನೆಲ್ಲಿಲ್ಲ. ಈ ಸಂದರ್ಭದಲ್ಲಾದರೆ ರೈತ ಒಪ್ಪಿ ಕಣಜ ತೆರೆದು ಕೊಟ್ಟಾನು. ಇಲ್ಲವೆಂದರೆ ನಾಟಿ ಕೆಲಸ ಸಾಗದು. ಈ ಬಗ್ಗೆ ಒಂದು ಗಾದೆಯೇ ಇದೆ. "ಹೊಟ್ಟೆ ತುಂಬ ಹಿಟ್ಟು, ಬಾಯಿ ತುಂಬ ಅನ್ನ ಅಂತೆ" ಅಂತ. ಇಷ್ಟು ಅನ್ನಕ್ಕಾಗಿ ಅಷ್ಟೊಂದು ರಾಗ.

ಬೇಕಿದ್ದು ಕೊಟ್ಟು ಕೆಲಸ ಮಾಡಿಸಿಕೊಳೋರು ಇದ್ದ ಹಾಗೆಯೇ ಕೊಡುತೀನಂತ ನಂಬಿಸಿ ದುಡಿಸಿಕೊಂಡು ಕೈ ಕೊಡೋರೋ ಇರೋದೆ. ಮೋಸ ಹೋದರೂ ತಾಳಿಕೊಳ್ಳೋದೆ ಇವರ ಅಸಹಾಯಕತೆ. ಈ ಅಸಹಾಯಕತೆಯಲ್ಲಿ ಎದೆ ಕಟ್ಟಿದ ಹಾಡನ್ನು ಹಾಡುವಾಗ, ಜೀವನದಾವುದೋ ಒಂದು ದಿನದಲ್ಲಿ ಈ ಸ್ಥಿತಿಯಲ್ಲಿದ್ದುದನ್ನು ನೆನೆಯುತ್ತ ಈ ದಿನವೂ ಹಾಗೆಯೇ ಇರುವಂತೆ ನೋವೇ ಹಾಡುತ್ತಿರುವಂತೆ ಹಾಡುತ್ತಾರೆ. ಆಗ ಇದರ ರಾಗ ಯಾವುದೆಂದು ಕೇಳುವಂತಿಲ್ಲ. ಏಕೆಂದರೆ ಅದರ ರಾಗ ನೋವೇ ಆಗಿರುತ್ತದೆ. ನೋವೇ ಹಾಡು ಹಾಗೂ ರಾಗವಾದ ಪದವನ್ನು ಹಾಡಿದವರು ಕೋನಮ್ಮ ಎಂಬ ಗಾಯಕಿ. ಹಾಡನ್ನು ಕೇಳುತ್ತಿದ್ದಾಗ ನಾವೇ ಹಸಿದಿರುವಾಗ ಬಾಯಿಗಿಟ್ಟ ತುತ್ತನ್ನು ಕಿತ್ತುಕೊಂಡಂತೆ ನೋವಾಗುತ್ತದೆ ಎದೆಗೆ. ಇದೂ ನಾಟಿಯ ಪದವೆ.

ಗದ್ದೇಲಿ ಪಯಿರಂದೆಯೋ ಅಣ್ಣಯ್ಯ
ಹೂಳೋರು ಇಲ್ಲೆಂದೆಯೋ
ನಂಬೀಸಿ ಬಾರೆಂದೆಯೋ ಅಣ್ಣಯ್ಯ
ನಾಮಾನ ಹಾಕಿಬಿಟ್ಟೆಯೋ.

ಅವನ ಏನೇನು ಕೊಡ್ತೀನಂದು ನಾಮಾ ಹಾಕಿದನೆಂಬೋದು ನೋಡಿ :

ಮಕ್ರೀಲಿ ಹಿಟ್ಟೆಂದೋ ಅಣ್ಣಯ್ಯ
ತಿನ್ನೋರು ಇಲ್ಲೆಂದೆಯೋ
ತಿತ್ತೀಲಿ ಯಲಡಿಕೆಂದೆಯೋ ಅಣ್ಣಯ್ಯ
ಹಾಕೋರು ಇಲ್ಲೆಂದೆಯೋ
ಮರ ತುಂಬ ರಾಗಂದೆಯೋ ಅಣ್ಣಯ್ಯ
ಕೇಳೋರು ಇಲ್ಲೆಂದೆಯೋ.

**ಭಾಗ - ೩**

ಹಾಡುಗಾರಿಕೆಯನ್ನೇ ಬರಹಕ್ಕಿಳಿಸುವುದು ಸಾಧ್ಯವಿಲ್ಲ. ಹಾಡುಗಾರಿಕೆಯ ಪದ್ಧತಿ, ರೀತಿಗಳನ್ನಷ್ಟೆ ಬರಹದಲ್ಲಿಡಲು ಸಾಧ್ಯ. ಹಾಡು (ಸಾಹಿತ್ಯ) ಸಂಗೀತದ ಸಹವಾಸದಲ್ಲಿ ನಾದದಲ್ಲಿ ಧ್ವನಿಯಾಗಿ ಪಿನಿಕೆಗೆ ಸಿಗುತ್ತದೆ. ಕಿವಿ, ಮನಸ್ಸುಗಳು ಏಕಶ್ರುತಿಗೆ ಬಂದಾಗ ರಸಗ್ರಾಹಿಯಾಗುತ್ತದೆ. ಭಾವರಸಗ್ರಹಣವೇ ಜಾನಪದ ಹಾಡುಗಳ ರಸಸ್ಥಾನ. ಸಂಗೀತ ಭಾವರಸದ ಸಂವಾಹಿಯಷ್ಟೆ. ಹಾಗಾಗಿ ಗೀತೆ (ಭಾಷೆ, ಶಬ್ದ, ನುಡಿ) ಸರಳ. ಕೇಳುತ್ತಲೇ ಗ್ರಹಿಸಿ ಹಾಡುವುದು ಸುಲಭ.

ಸಹಜ ಜಾನಪದ ಗಾಯಕರು ತಾವು ಹಾಡುವ ಹಾಡಿನ ರಾಗ ಯಾವುದೆಂದು ತಿಳಿಯದೆಯೇ ವಿವಿಧ ಧಾಟಿ, ದರುವುಗಳಲ್ಲಿ ಹಾಡುವಷ್ಟು ಪ್ರತಿಭಾವಂತರು. ತಮ್ಮವರು ಕಟ್ಟಿದ ಹಾಡಿನ ಭಾಷೆ, ಬಂಧ, ರಾಗಗಳು ಸ್ಖಲನವಾಗದಂತೆ ಸರಾಗವಾಗಿ ಹಾಡಿಬಿಡಬಲ್ಲರು.

ತಮ್ಮ ಪಾಡುಗಳಲ್ಲಿ ತಿಂಗಳುಗಟ್ಟಲೆ ಹಾಡದೆ ಇದ್ದಾಗ್ಯೂ ಥಟ್ಟೆಂದು ನಿರಂತರ ತಾಲೀಮಿನಲ್ಲಿ ಇದ್ದವರಂತೆ ಹಾಡಿಬಿಡುವರು. ಹಾಡುಗಾರಿಕೆಯಲ್ಲಿ ಇವರ ಕೊರಳು ಎಷ್ಟೊಂದು ಬಲಗೊಂಡಿರುತ್ತದೆಂದರೆ ಗುಂಡು ಹಾಕಿಯೂ ತಂಬಾಕು ಜಗಿದೂ ಎಲ್ಲೆಂದರಲ್ಲಿ ಯಾವ ನೀರೆಂದರದನ್ನು ಕುಡಿದೂ ಇವರ ಗಂಟಲು ಕೆಡುವುದಿಲ್ಲ ಪ್ರಕೃತಿಯೇ ಕೊಟ್ಟ ಕೊರಳು. ಕೋಗಿಲೆಗಳಲ್ಲವೆ ಇವರು.

ಹಳ್ಳೀ ಹಾಡುಗಾರರು ನಮ್ಮ ನಾಜೂಕೀ ಹಾಡು ಗಾರರಂತೆ ಮಾಮೂಲಿ ರೋಗ ರುಜಿನಗಳಿಗಂಜಿ ಹಾಡದೆ ಕೂರುವವರಲ್ಲ. ಅದೇ ಓಡಿಹೋಗುವಂತೆ ಹಾಡುತ್ತ ಕೂರುತ್ತಾರೆ. ಇಂಥವರನ್ನು ಇಂದಿಗೂ ನೋಡಬಹುದು. ಇಂಥ ಪ್ರಾಕೃತಿಕ ಕಸುವು ಕಾಳಿಂಗರಾಯರಂಥ ಗಾಯಕರು ಪಡೆದಿದ್ದರು.



ಜಾನಪದರು ಸಂಗೀತಾಭ್ಯಾಸ ಮಾಡದಿದ್ದರೂ ಅದರ ಲಯ ಧಾಟಿಗಳನ್ನು ಕಲಿತವರಂತೆಯೇ ಹಿಡಿದಿದ್ದರು. ಅವರು ಹಾಡುವುದರಲ್ಲೇ ಹೆಸರು ಕೊಡದ ರಾಗ ಒಲಿದಿರುತ್ತಿತ್ತು. ಎಂಥ ಭಾಗ್ಯ !

ಜಾನಪದ ಗೀತೆಗಳ ರಾಗಧಾಟಿ ಕೆಲವು ಹೊಸ ರಾಗಗಳನ್ನು ಕಟ್ಟಲು ಒದಗಿಬಂದುದಾಗಿ ಸಂಗೀತ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹಾಗೆಯೇ ಜಾನಪದ ಗೀತೆಗಳು ಬಹುವಾಗಿ ಮೋಹನ, ಆನಂದ ಭೈರವಿ, ಎದುಕುಲ ಕಾಂಭೋಜಿ, ಜುಂಜೂಟಿ, ಕುರಂಜಿ, ನಾದನಾಮ ಕ್ರಿಯೆ, ಪುನ್ನಾಗವರಾಳಿ ಮೊದಲಾದ ರಾಗಗಳನ್ನು ಹೋಲುವುದಾಗಿ ಹೇಳಿದ್ದಾರೆ.

ಹಳ್ಳಿಗಳಲ್ಲೂ ಈವೊತ್ತು ಈ ಹಾಡುಗಳ ಹಸುರು ಪರಿಸರ ಒಳಗುತ್ತಿದ್ದರೂವೆ ಇದರಲ್ಲಿ ಹಸುರು ತುಂಬುವಲ್ಲಿ ನಿರತರವಾಗಿರುವುದು ತತ್ವಪದಗಳ ಗಾಯಕರು. ಇವರು ನಾಮಾಂಕಿತ ತತ್ವಪದಕಾರರ ಪದಗಳೊಂದಿಗೆ ಜಾನಪದ ತತ್ವಪದಗಳನ್ನೂ ಅಷ್ಟೇ ಭಕ್ತಿ ಶ್ರದ್ಧೆಗಳಿಂದ ಹಾಡುತ್ತ ಅಪ್ರಜ್ಞಾಪೂರ್ವಕವಾಗಿ ಅವುಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಇಂಥ ಪ್ರಜ್ಞೆ ಜಾಗೃತವಾದರೆ ಸಾಕು.

ಹೀಗೆಯೇ ಉಳಿದಿರುವ ಇನ್ನೊಂದು ಮುಖ್ಯ ಪ್ರಕಾರವೆಂದರೆ ಫಂಡರಿ ಭಜನೆ. ಇದರ ಅನೇಕ ತಂಡದವರು ಉತ್ಸವ, ಜಾತ್ರೆಗಳೆಂದರೆ ಸಾಕು ಕರೆಸಿಕೊಳ್ಳದೆಯೇ ಹೋಗಿ ಹಾಡಿ ಬರುವುದುಂಟು. ಇದು ದಾಸ ಮನಸ್ಸಿಗಷ್ಟೇ ಸಾಧ್ಯ. ಇದು ಮಾತುಗಳಿಂದಾಗುವ ಕೆಲಸವಲ್ಲ. ದುಡಿಮೆ ಮಾತ್ರ ಈ ಎಲ್ಲದನ್ನು ಆಗಿಸುವುದು.

ಸ. ರಘುನಾಥ
ಶ್ರೀ ಲಕ್ಷ್ಮೀ ಪ್ರಾವಿಷನ್ ಸ್ಟೋರ್ಸ್ ರಸ್ತೆ
ರಾಮಕೃಷ್ಣ ಬಡಾವಣೆ, ಶ್ರೀನಿವಾಸಪುರ - ೫೬೩ ೧೩೫
ಕೋಲಾರ ಜಿಲ್ಲೆ



# ಜಾನಪದದ ಸ್ಥಿತಿ - ಗತಿ

ಸನಾತನ ಪರಂಪರೆಯ ಭಾರತ ದೇಶದಲ್ಲಿ ಸಮೃದ್ಧವಾದ ಜಾನಪದವಿದೆ ಭಾರತ ಜಾನಪದದ ತೌರು ಎಂಬ ವಿಶೇಷಣಕ್ಕೂ ಪಾತ್ರವಾಗಿದೆ. ಇದಕ ಕರ್ನಾಟಕವೂ ಹೊರತಾಗಿಲ್ಲ. ಜಾಗತಿಕ ಮಟ್ಟದ ಜಾನಪದದ ಎಲ್ಲಾ ಪ್ರಕಾರ ಗಳಿಗೂ ಕರ್ನಾಟಕ ಜಾನಪದದಲ್ಲಿ ಉದಾಹರಣೆಗಳು ದೊರೆಯುತ್ತವೆ. ಭಾಷಿಕ ಸಾಹಿತ್ಯಕ, ವೈಜ್ಞಾನಿಕ, ಕ್ರಿಯಾತ್ಮಕ, ಭೌತಿಕ, ಸಾಮಾಜಿಕ ಮೊದಲಾದ ಜಾನಪದ ಪ್ರಕಾರಗಳು ರಾಜ್ಯಾದ್ಯಂತ ಹಾಸುಹೊಕ್ಕಾಗಿವೆ. ಭಾರತದಂತೆ ಕರ್ನಾಟಕದಲ್ಲೂ ಜಾನಪದ ಸಮಸ್ತ ಜನಮನದ ಅವಿಭಾಜ್ಯ ಅಂಗವಾಗಿದೆ. ಜಾನಪದದ ಪ್ರಭಾವಕ್ಕೆ ಒಳಗಾಗದ ಜನರಿಲ್ಲ, ಜನಾಂಗವಿಲ್ಲ.

ಅನಾದಿಕಾಲದಿಂದ ತಲೆಮಾರಿನಿಂದ ತಲೆಮಾರಿಗೆ ಮೌಖಿಕ ಪರಂಪರೆ ಯಲ್ಲಿ ಹರಿದುಬರುವ ಸಮಸ್ತ ಜೀವನ ವಿಧಾನದ ಅನುಭವಸಾರ ಜಾನಪದ. ನಿರ್ದಿಷ್ಟ ಜನಸಮುದಾಯದಲ್ಲಿ, ನಿರ್ದಿಷ್ಟ ಕಾಯಕದ ಜೊತೆಯಲ್ಲಿ, ಸಾಮೂಹಿಕವಾಗಿ ಹುಟ್ಟಿಕೊಂಡ ಜಾನಪದ ಮನುಕುಲದ ವಿಕಾಸವಾದಂತೆ ತಾನೂ ವಿಕಾಸವಾಗಿ, ಅಖಂಡ ಜನಸಮುದಾಯವನ್ನು ಆವರಿಸಿಕೊಂಡಿದೆ ಬುಡಕಟ್ಟು ಮಟ್ಟದಲ್ಲಿದ್ದ ಜಾನಪದ ರಾಜ್ಯ ಹಾಗೂ ರಾಷ್ಟ್ರದವರೆಗೆ ಹರಡಿದೆ. ಇಂದು ಜಾಗತಿಕ ಮಟ್ಟದಲ್ಲಿ ಗಮನ ಸೆಳೆಯುತ್ತಿದೆ. ಜನಪದದಿಂದಲೇ ಬಂದ ಶಿಷ್ಟರು ಜನಪದವನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿದರೂ ಉದ್ದೇಶಪೂರ್ವಕವಾಗಿ ಅಲಕ್ಷಿಸಿದರೂ ಶಿಷ್ಟಕ್ಕೆ ಪರ್ಯಾಯವಾಗಿ ಜಾನಪದ ಉಳಿದುಕೊಂಡು, ಬೆಳೆದುಕೊಂಡು ಬಂದಿದೆ. ಶಿಷ್ಟಪದದಂತೆ ಜಾನಪದ ಶಿಷ್ಟಪದವನ್ನು ತಿರಸ್ಕರಿಸಿಲ್ಲ, ಅಲಕ್ಷಿಸಿಲ್ಲ, ಬಾಯಿಮಾತಿಗಾದರೂ ಟೀಕಿಸಿಲ್ಲ ಕೊಳುಕೊಡೆಯ ಔದಾರ್ಯವನ್ನು ಮೆರೆದಿದೆ. ತಾನೂ ಬದುಕಿ ಅನ್ಯವೂ ಬದುಕಲು ಅನುವುಮಾಡಿದೆ; ಸಮ ಮನುಕುಲದ ಸ್ವಾಸ್ಥ್ಯಕ್ಕೆ, ಜೀವನೋತ್ಸಾಹಕ್ಕೆ ಸ್ಫೂರ್ತಿಯಾಗಿದೆ; ಶಿಷ್ಟ ಸೃಜನಶೀಲತೆಗೆ ಆಕರವಾಗಿದೆ. ಬುಡಕಟ್ಟು ಪ್ರಜ್ಞೆಯಲ್ಲಿದ್ದ ಜಾನಪದ ರಾಷ್ಟ್ರಪ್ರಜ್ಞೆಯವರೆಗೆ ಬೆಳೆದಿದೆ.

ನಿಜ. ಕನ್ನಡ ಜಾನಪದ ಹಲವು ಸವಾಲುಗಳನ್ನು ಎದುರಿಸಿದೆ. ಅನ್ಯ ಭಾಷೆಯಿಂದ, ಅನ್ಯ ಕಲೆಯಿಂದ, ಅನ್ಯ ಜೀವನ ವಿಧಾನದಿಂದ, ಅನ್ಯ ನಾಗರಿಕತೆಯಿಂದ ಏರುಪೇರಿಗೆ ಒಳಗಾಗಿದೆ. ಪ್ರಾರಂಭದ ಹಂತದಲ್ಲಿ ತಾನೇ ತಾನಾ ತುಂಬು ನದಿಯಂತೆ ಪ್ರವಹಿಸುತ್ತಿದ್ದದ್ದು, ಒಮ್ಮೊಮ್ಮೆ ಬೇಸಿಗೆಯ ನದಿಯಂತೆ ಸೊರಗಿದೆ; ಬರಗಾಲಕ್ಕೆ ಸಿ ಬತ್ತಿಹೋದಂತೆ ಭಾಸವಾಗಿದೆ. ಬೇಸಿಗೆಯಲ್ಲಿ ಬಾಡಿ, ಭೂಮಿಯಲ್ಲಿ ಹುದುಗಿದ ಗರಿಕೆಯ ಬೇರು, ಮಳೆಹ ಬಿದ್ದಕೂಡಲೇ ಚಿಗುರುವಂತೆ; ಜಾನಪದ ಅವಕಾಶ ದೊರೆತಾಗ, ಜನ ಬಯಸಿದಾಗ, ಪ್ರೋತ್ಸಾಹ ಸಿಕ್ಕಾಗ ಚಿಗುರಿದೆ, ಪಲ್ಲವಿಸಿದೆ, ಫಲಬಿಟ್ಟಿದೆ. ಫೀನಿಕ್ಸ್ ಪಕ್ಷಿಯಂತೆ, ಶಾಪಗ್ರಸ್ತ ಅಹಲ್ಯೆಯಂತೆ ಮರುಹುಟ್ಟು ಪಡೆದಿದೆ. ಸಾಯದ ಜೀವಂತ ಪಳೆಯುಳಿಕೆ ಎಂಬುದನ್ನು ಸಾಬೀತುಪಡಿಸಿದೆ. ನಿಷ್ಪಕ್ಷಪಾತವಾಗಿ ಅಧ್ಯಯನ ಮಾಡಿದರೆ ಜಾನಪದದ ಅವಿನಾಶಿಯಾದ ಸಾಚಾತನ ವೇದ್ಯವಾಗುತ್ತದೆ.

ಪ್ರಾಚೀನ ಹಾಗೂ ಅರ್ವಾಚೀನ ಪದ್ಯ ಗದ್ಯ ನಾಟಕ ಸಾಹಿತ್ಯದಲ್ಲಿ, ಸಂಗೀತ ನೃತ್ಯ ಅಭಿನಯ ಲಲಿತ ಕಲೆಯಲ್ಲಿ, ಸಂಪ್ರದಾಯ ಆಚರಣೆಯಲ್ಲಿ, ವೇಷಭೂಷಣ, ಆಹಾರ ಪಾನೀಯದಲ್ಲಿ, ಔಷಧೋಪಚಾರದಲ್ಲಿ, ಮನೆಮಠದಲ್ಲಿ, ಬದುಕಿನ ವಿಧಾನದಲ್ಲಿ ಜಾನಪದದ ಛಾಪಿದೆ. ವಿಶ್ವದ ಫಿನ್ಲೆಂಡ್, ಜರ್ಮನಿ, ಇಂಗ್ಲೆಂಡ್, ರಷ್ಯಾ ಮೊದಲಾದ ದೇಶಗಳಲ್ಲಿ ಒಂದುನೂರ ಐವತ್ತು ವರ್ಷಗಳ ಹಿಂದೆಯೇ ಜನಪದ ಸಂಗ್ರಹ, ವೈಜ್ಞಾನಿಕ ಅಧ್ಯಯನ ಪ್ರಾರಂಭವಾಗಿದೆ. ನಮ್ಮಲ್ಲಿ ಸುಮಾರು ಒಂದುನೂರು ವರ್ಷದಿಂದ ಸಂಗ್ರಹ, ಕೇವಲ ನಲವತ್ತು ವರ್ಷಗಳಿಂದ ವೈಜ್ಞಾನಿಕ ಅಧ್ಯಯನ ಆರಂಭವಾಗಿದೆ. ಕನ್ನಡದಲ್ಲಿ ಜನಪದ ಕಥೆ, ಕಾವ್ಯ, ನಾಟಕ, ಗಾದೆ, ಒಗಟು, ಒಡಪು, ಸಂಪ್ರದಾಯ, ಆಚರಣೆ, ಹಬ್ಬ



*ಯಾವುದೇ ದೇಶವಾಗಲೀ, ಜನಾಂಗವಾಗಲೀ ಕಲೆಯಿಲ್ಲದೆ ಬದುಕಲಾರದು. ವಿದೇಶಿ ಕಲೆಗಳಿಗಿಂತ ಸ್ವದೇಶಿ ಕಲೆಗಳು ಸುಲಭವಾಗಿ ರಕ್ತಗತವಾಗುತ್ತವೆ; ಅರ್ಥಪೂರ್ಣವಾಗುತ್ತವೆ. ಆದ್ದರಿಂದ ಆಧುನಿಕ ಪರಿಸರದಲ್ಲಿ ಜನಪದ ಕಲೆಗಳನ್ನು ಸಮಸ್ತರೂ ತಮ್ಮದಾಗಿಸಿಕೊಳ್ಳುವುದು ಸೂಕ್ತ. ಶಿಷ್ಟ ಕಲೆ, ಶಿಷ್ಟ ಸಂಗೀತದಂತೆ ಜನಪದ ಕಲೆ ಜನಪದ ಸಂಗೀತಗಳನ್ನು ಸಮಾನ ಪ್ರೀತಿ ಗೌರವದಿಂದ ಕಾಣುವುದು ಇಂದಿನ ತುರ್ತಾಗಿದೆ; ಭವಿಷ್ಯದ ಜವಾಬ್ದಾರಿಯೂ ಆಗಿದೆ. ಕರ್ನಾಟಕ ಹಾಗೂ ಭಾರತದ ಸಂದರ್ಭದಲ್ಲಿ ಆಧುನಿಕರೆಲ್ಲರೂ ಜನಪದ ಮೂಲದವರೇ. ಹಾಗಾಗಿ ಜಾನಪದದ ಸ್ಥಿತಿಗತಿ ಸುಧಾರಣೆ, ಸಂಯೋಜನೆ ಸಮಸ್ತರಿಗೆ ಸೇರಿದ್ದು.*

**ಪ್ರೊ|| ಡಿ. ಲಿಂಗಯ್ಯ**

ಹರಿದಿನ, ಕಲೆ, ವೇಷಭೂಷಣ ವಿಶ್ಲೇಷಣೆ ವಿಧಿವಿಧಾನಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಮಂಥನ ನಡೆದಿದೆ. ಸಾಕಷ್ಟು ಗ್ರಂಥಗಳು ಪ್ರಕಟವಾಗಿವೆ. ಪ್ರಪಂಚದಲ್ಲಿ ನಡೆದಿರುವ ಕೆಲಸಕ್ಕೆ ಹೋಲಿಸಿದರೆ ನಮ್ಮ ಸಾಧನೆ ಏನೇನೂ ಸಾಲದು. ನಾವು ಜಾನಪದದ ಜೊತೆಯಲ್ಲೇ ಬದುಕುತ್ತಿದ್ದೇವೆ. ಅದನ್ನು ಪ್ರತ್ಯೇಕಿಸಿ ಪರಿಶೀಲಿಸುವ ಅಗತ್ಯ ಕಂಡುಬಂದಿರಲಿಲ್ಲ. ಇತ್ತೀಚೆಗೆ ಜಾನಪದವನ್ನು ವಿಂಗಡಿಸಿ ಅಧ್ಯಯನಕ್ಕೆ ತೊಡಗುವುದರಿಂದ ಅದರ ವಿರಾಡ್ರೂಪದ ದರ್ಶನವಾಗುತ್ತಿದೆ. ಅದು ಬದುಕಿಗೆ ಅನಿವಾರ್ಯವೆಂಬ ಅರಿವು ಮೂಡುತ್ತಿದೆ.

ಕರ್ನಾಟಕದಲ್ಲಿ ಗೀತಗಾಯನ, ವಾದ್ಯವಾದನ, ಪ್ರದರ್ಶನಕ್ಕೆ ಸಂಬಂಧಿಸಿದಂತೆ ವೈವಿಧ್ಯಮಯವಾದ ನೂರಾರು ಜನಪದ ಕಲಾ ಪ್ರಕಾರಗಳಿವೆ. ಇವುಗಳ ಜೊತೆಗೆ ಕರಕುಶಲಕಲೆ, ಚಿತ್ರಕಲೆಗಳಿಗೂ ಲೆಕ್ಕವಿಲ್ಲ. ಇಷ್ಟೊಂದು ಅನನ್ಯತೆಯ ವರ್ಣರಂಜಿತ ಕಲೆಗಳು ಜಗತ್ತಿನ ಯಾವ ದೇಶದಲ್ಲೂ ಇದ್ದಂತಿಲ್ಲ. ಸ್ತ್ರೀ ಪುರುಷರಾದಿಯಾಗಿ ಹಿರಿಯ ಕಿರಿಯರೆಲ್ಲರೂ ಭಾಗವಹಿಸುವ ಅವಕಾಶವಿರುವುದು ನಮ್ಮ ಕಲೆಗಳ ಹೆಚ್ಚುಗಾರಿಕೆಯಾಗಿದೆ. ಹೆಚ್ಚೂ ಕಡಿಮೆ ಎಲ್ಲಾ ಕಲೆಗಳೂ ಧಾರ್ಮಿಕ ಹಿನ್ನೆಲೆ ಹೊಂದಿವೆ; ಸಮಾಜ ಮುಖಿಯಾಗಿ ಬೆಳೆದಿವೆ. ಒಂದೆರಡನ್ನು ಬಿಟ್ಟರೆ ಎಲ್ಲವೂ ಸರ್ವಸಮ್ಮತವಾಗುತ್ತವೆ; ಸರ್ವಕಾಲಕ್ಕೂ ಸಲ್ಲುತ್ತವೆ. ಇತ್ತೀಚೆಗೆ ಧಾರ್ಮಿಕತೆ ಹಿಂದಾಗಿ, ಕಲೆ ಮುಂದಾಗಿ, ಮನೋರಂಜನೆ ಪ್ರಧಾನವಾಗುತ್ತಿದೆ. ಸರಕಾರದ 'ಮರಳಿ ಹಳ್ಳಿಗೆ' ಘೋಷಣೆಯ 'ಜಾನಪದ ಜಾತ್ರೆ'ಗಳು ನವನಾಗರಿಕತೆಯ ಪಟ್ಟಣಿಗರಿಗೂ ಪ್ರಿಯವಾಗುತ್ತಿವೆ. ಜಾನಪದ ಇಂದಿಗೂ ಅಗತ್ಯವೆಂಬುದಕ್ಕೆ ಇದು ಸಾಕ್ಷಿಯಾಗಿದೆ. ಈ ಪ್ರವೃತ್ತಿ ಇನ್ನೂ ಹಸುರಾಗಿರುವಂತೆ, ಪರಿಣಾಮಕಾರಿಯಾಗುವಂತೆ ನೋಡಿಕೊಳ್ಳಬೇಕು.

ಎಲ್ಲಿಯವರೆಗೆ ಮನುಕುಲಕ್ಕೆ ಕಲೆಯ ಹಂಬಲವಿರುತ್ತದೋ ಅಲ್ಲಿಯವರೆಗೆ ಜನಪದ ಕಲೆಗಳು ಜೀವಂತವಾಗಿರುತ್ತವೆ. ಹಿಂದಿನಂತೆ ಇಂದೂ ಮುಂದೂ ಜನಪದ ಕಲೆಗಳು ಪ್ರಸ್ತುತವಾಗುತ್ತವೆ. ಇವುಗಳನ್ನು ಜನಸಮುದಾಯಕ್ಕೆ ಮುಟ್ಟಿಸಲು ಕೈಗೊಳ್ಳುವ ಕ್ರಿಯಾತ್ಮಕ ಚಟುವಟಿಕೆಗಳಿಗೆ ಮಾಡುವ ವೆಚ್ಚ ವ್ಯರ್ಥವಲ್ಲ. ಹಣವನ್ನು ಖರ್ಚು ಮಾಡದೆ ಜಾನಪದದ ಯಾವ ಕೆಲಸವನ್ನೂ ಮಾಡಲಾಗು ವುದಿಲ್ಲ. ಆದರೆ ಆಡಳಿತ ವ್ಯವಸ್ಥೆಯಲ್ಲಿ ಹಣ ಅಪವ್ಯಯವಾಗದಂತೆ ಮುತುವರ್ಜಿವಹಿಸಬೇಕು.

ಕರ್ನಾಟಕ ರಾಜ್ಯಾದ್ಯಂತ ಕಾಣಸಿಗುವ ಕೆಲವು ಜನಪದ ಪ್ರದರ್ಶನ ಕಲೆಗಳು ಹೀಗಿವೆ : ರಂಗದ ಕುಣಿತ, ಸುಗ್ಗಿ ಕುಣಿತ, ಪೂಜಾ ಕುಣಿತ, ಸೋಮನ ಕುಣಿತ, ಜೋಗತಿ ಕುಣಿತ, ವೀರಭದ್ರ ಕುಣತ, ಡೊಳ್ಳು ಕುಣಿತ, ವೀರಗಾಸೆ ಕುಣಿತ, ಈರ ಮಕ್ಕಳ ಕುಣಿತ, ಕಂಸಾಳೆ ಕುಣಿತ, ಮೊಹರಂ ಕುಣಿತ, ಕೀಲುಕುದುರೆ ಕುಣಿತ, ಕೊಡವರ ಕುಣಿತ, ಹಾಲಕ್ಕಿ ಒಕ್ಕಲಿಗರ ಕುಣಿತ, ಕೊರಗರ ಕುಣಿತ, ಕುಡುಬಿಯರ ಕುಣಿತ, ಸಿದ್ದಿಯರ ಕುಣಿತ, ಲಂಬಾಣಿ ಕುಣಿತ, ಕರಪಾಲ ಮೇಳ, ಚಿಟ್ ಮೇಳ, ಕಿನ್ನರಿಜೋಗಿ ಮೇಳ, ಗಾರುಡಿಗೊಂಬೆ, ಕರಗ, ಕೋಲಾಟ, ನಂದಿಧ್ವಜ, ಕರಡಿಮಜಲು, ತಮಟೆ, ಜಗ್ಗಲಿಗೆ, ಹೆಬ್ಬಾರೆ, ಬೆಂಕಿ ಭರಾಟೆ, ಹುಲಿವೇಷ, ಪಾಳೆಯಗಾರರ ವೇಷ, ಯಕ್ಷಗಾನ, ತೊಗಲು ಗೊಂಬೆ, ಸೂತ್ರದ ಗೊಂಬೆ, ತಾಳಮದ್ದಳೆ, ಸಣ್ಣಾಟ, ನಾಗಮಂಡಲ, ಭೂತದ ಕೋಲ, ವೃತ್ತಿಗಾಯಕರ ಗಾಯನ ಮೇಳ ಇತ್ಯಾದಿ.

ಕರ್ನಾಟಕದ ಕೆಲವು ಕಲೆಗಳು ರಾಷ್ಟ್ರಮಟ್ಟದಲ್ಲಿ, ಜಾಗತಿಕ ಮಟ್ಟದಲ್ಲಿ ಹೆಸರಾಗಿವೆ. ಉದಾಹರಣೆಗೆ, ತೊಗಲುಗೊಂಬೆ, ಸೂತ್ರದಗೊಂಬೆ, ಯಕ್ಷಗಾನ, ಡೊಳ್ಳುಕುಣಿತ, ವೀರಗಾಸೆ, ಗಾರುಡಿಗಗೊಂಬೆ, ತಮಟೆವಾದನ. ಕಂಸಾಳೆಯವರ ಮಲೆಮಾದೇಶ್ವರ ಕಾವ್ಯ ಇಂಗ್ಲಿಷಿಗೆ ಭಾಷಾಂತರ ವಾಗಿ ಕಡಲು ದಾಟಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ, ಆನ್ವಯಿಕ ಪರಿವೇಷದಲ್ಲಿ, ಇನ್ನಷ್ಟು ಕಲೆಗಳು ವಿಶ್ವಜನಮನಕ್ಕೆ ಲಗ್ಗೆಹಾಕಿದರೆ ಆಶ್ಚರ್ಯವಿಲ್ಲ. ಕನ್ನಡ ಜಾನಪದ ಕನ್ನಡ ಭಾಷೆ, ಸಾಹಿತ್ಯ, ಸಂಗೀತ, ಕಲೆ, ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಪ್ರಮುಖಪಾತ್ರ ವಹಿಸಿದೆ; ತನ್ನ ಅಸ್ತಿತ್ವವನ್ನು ಪ್ರಸ್ತುತ ಗೊಳಿಸುವಲ್ಲಿ ಹೆಣಗಿದೆ; ಸನಾತನ ಜೀವನ ವಿಧಾನವನ್ನು ಸಾಕ್ಷಾತ್ಕರಿಸಿದೆ; ಕನ್ನಡತನವನ್ನು ನೆಲೆಯೂರಿಸಲು ನೆರವಾಗಿದೆ.

ಜನಪದ ಗೀತಸಾಹಿತ್ಯದಲ್ಲಿ ಪ್ರಕೃತಿ ಪ್ರೇಮವಿದೆ; ಜೀವನ ಪ್ರೀತಿಯಿದೆ; ಧರ್ಮ ಜಾತಿ ಮತ ವರ್ಗಭೇದ ಮೀರಿದ ಅರಿವಿದೆ; ಹುಟ್ಟುಸಾವುಗಳ ಸಮಾನ ಸಮಾಲೋಚನೆಯಿದೆ; ನೈತಿಕಸಾರವಿದೆ; ಮಿಗಿಲಾಗಿ ಮಾನವೀಯತೆ ಮಡುಗಟ್ಟಿದೆ. ಜನಪದ ಸಂಗೀತದಲ್ಲಿ ವಿಶ್ವಮೋಹಕತೆಯಿದೆ; ಸ್ವಸ್ಥ ಮನಸ್ಸಿನ ಸುಸ್ಥಿತಿಯ ಸಂಜೀವಿನಿಯಿದೆ. ಜನಪದ ಕಲಿಕೆ ಪ್ರದರ್ಶನಗಳಿಂದ ಜೀವನೋತ್ಸಾಹ ಪುಟಿಯುತ್ತದೆ; ದೇಹದಾರ್ಢ್ಯ ವರ್ಧಿಸುತ್ತದೆ; ಮೈಮನ ಮುದಗೊಳ್ಳುತ್ತದೆ; ಸಾಮೂಹಿಕ ಜೀವನ ಬೆಸೆಯುತ್ತದೆ; ಸಮಸ್ತ ಬದುಕು ಸಾರ್ಥಕವಾಗುತ್ತದೆ. ಆಂಶಿಕವಾಗಿ ಆರ್ಥಿಕ ಏಳಿಗೆಗೂ ನೆರವಾಗುತ್ತದೆ; ಕನ್ನಡಿಗರ ಅನನ್ಯತೆಗೆ ಕೋಡು ಮೂಡುತ್ತದೆ; ವಿಶ್ವಕಲಾವೇದಿಕೆಯಲ್ಲಿ ತಲೆಯೆತ್ತಿ ಮೆರೆಯುವ ಹಮ್ಮು ಬಿಮ್ಮು ಚಿಮ್ಮುತ್ತದೆ. ಸಮೃದ್ಧವಾಗಿರುವ ಪ್ರಾಚೀನ ಜನಪದ ಕಲೆಗಳನ್ನು ಕಲಿತು ಉಳಿಸಿಕೊಳ್ಳುವ, ಪ್ರಸ್ತುತ ಸಂದರ್ಭಕ್ಕೆ ಅನ್ವಯಿಸಿಕೊಳ್ಳುವ, ಅಗತ್ಯಕ್ಕೆ ತಕ್ಕಂತೆ ದುಡಿಸಿಕೊಳ್ಳುವ ಹೊಣೆ ಆಧುನಿಕರದಾಗಿದೆ.

ಯಾವುದೇ ದೇಶವಾಗಲೀ, ಜನಾಂಗವಾಗಲೀ ಕಲೆಯಿಲ್ಲದೆ ಬದುಕಲಾರದು. ವಿದೇಶಿ ಕಲೆ ಗಳಿಗಿಂತ ಸ್ವದೇಶಿ ಕಲೆಗಳು ಸುಲಭವಾಗಿ ರಕ್ತಗತವಾಗುತ್ತವೆ; ಅರ್ಥಪೂರ್ಣವಾಗುತ್ತವೆ. ಆದ್ದರಿಂದ ಆಧುನಿಕ ಪರಿಸರದಲ್ಲಿ ಜನಪದ ಕಲೆಗಳನ್ನು ಸಮಸ್ತರೂ ತಮ್ಮದಾಗಿಸಿಕೊಳ್ಳುವುದು ಸೂಕ್ತ. ಶಿಷ್ಟ ಕಲೆ, ಶಿಷ್ಟ ಸಂಗೀತದಂತೆ ಜನಪದ ಕಲೆ ಜನಪದ ಸಂಗೀತಗಳನ್ನು ಸಮಾನ ಪ್ರೀತಿ ಗೌರವದಿಂದ ಕಾಣುವುದು ಇಂದಿನ ತುರ್ತಾಗಿದೆ; ಭವಿಷ್ಯದ ಜವಾಬ್ದಾರಿಯೂ ಆಗಿದೆ. ಕರ್ನಾಟಕ ಹಾಗೂ ಭಾರತದ ಸಂದರ್ಭದಲ್ಲಿ ಆಧುನಿಕರೆಲ್ಲರೂ ಜನಪದ ಮೂಲದವರೇ. ಹಾಗಾಗಿ ಜಾನಪದದ ಸ್ಥಿತಿಗತಿ ಸುಧಾರಣೆ, ಸಂಯೋಜನೆ ಸಮಸ್ತರಿಗೆ ಸೇರಿದ್ದು.



ಜಾಗತೀಕರಣ ಭೂತ ಭಾರತವನ್ನು ಪ್ರವೇಶಿಸಿದೆ; ಭಾರತೀಯರನ್ನು ಹಿಂಡುತ್ತಿದೆ; ಬಕಾಸುರನಂತೆ ಎಲ್ಲವನ್ನೂ ತಿಂದು ತೇಗುತ್ತಿದೆ. ಎಂದೂ ಯಾವುದರ ವಿರುದ್ಧವೂ ಹೋರಾಟಕ್ಕೆ ಮುನ್ನುಗ್ಗದೆ, ತನ್ನಷ್ಟಕ್ಕೆ ತಾನು ನಿರುಮ್ಮಳವಾಗಿ ಬದುಕುತ್ತಿದ್ದ ಜಾನಪದ ಕಣ್ಮರೆ ಯಾಗುವ ಭಯಂಕರ ಪರಿಸ್ಥಿತಿ ಉಂಟಾಗುತ್ತಿದೆ. ನಮ್ಮ ಜನಪದ ಕಲೆಗಳನ್ನು ಭೂಗತಮಾಡಿ ವಿದೇಶಿ ಕಲೆಗಳು ಕುಣಿಯುವ ವೇದಿಕೆ ಸಿದ್ಧಗೊಳ್ಳುತ್ತಿದೆ. ಈ ಹಿನ್ನೆಲೆಯಲ್ಲಿ ನಮ್ಮ ಸನಾತನ ಸಂಸ್ಕೃತಿಯ ಕಲೆ ಗಳನ್ನು ಕಳೆದುಕೊಂಡು, ಆಕ್ರಮಣಕಾರಿ ವಿದೇಶಿ ಕಲೆಗಳನ್ನು ಸ್ವಾಗತಿಸ ಬೇಕೇ ಎಂಬುದರ ಬಗೆಗೆ ಪ್ರಾಜ್ಞರು ವಿಚಾರಮಾಡಬೇಕಾಗಿದೆ.

ಜಾಗತೀಕರಣ ಪೆಡಂಭೂತದ ಸವಾಲುಗಳನ್ನು ಸಮರ್ಥವಾಗಿ ಎದುರಿಸಲು ನಮ್ಮ ಜಾನಪದ ಸಡ್ಡು ಹೊಡೆದು ಎದ್ದುನಿಲ್ಲಬೇಕು; ಮರುಹುಟ್ಟು ಪಡೆಯಬೇಕು; ಆಧುನಿಕ ಯಂತ್ರ ತಂತ್ರ ಮಂತ್ರವನ್ನು ಮೈಗೂಡಿಸಿಕೊಂಡು, ಸ್ವಂತಿಕೆಯನ್ನು ಪ್ರದರ್ಶಿಸಬೇಕು. ಇದಕ್ಕಾಗಿ ಸಮಸ್ತ ಜನಸಮೂಹ ಒಕ್ಕೈಯಾಗಿ, ಒಮ್ಮೈಯಾಗಿ ಜಾನಪದವನ್ನು ಆವಾಹನೆ ಮಾಡಿಕೊಳ್ಳಬೇಕು. ಹಿಂದಿನ ಜನಪದ ವೃತ್ತಿ ಕಲಾಕಾರರ ಸ್ಥಾನವನ್ನು ಇಂದು ಹವ್ಯಾಸಿ ಕಲಾಕಾರರು ತುಂಬಬೇಕು.

ಇದಕ್ಕಾಗಿ ಕೆಲವು ಎಚ್ಚರಿಕೆಗಳನ್ನೂ ಆನ್ವಯಿಕ ಚಟುವಟಿಕೆಗಳನ್ನೂ ಕೈಗೊಳ್ಳುವುದು ಅಗತ್ಯ. ಅವುಗಳನ್ನು ಹೀಗೆ ಕಂಡರಿಸಬಹುದು :

೧. ಜಾಗತೀಕರಣದ ಭ್ರಮೆಯಲ್ಲಿ ಜಾನಪದಕ್ಕೆ ಸಂಬಂಧಿಸಿದ ಯಾವುದೇ ಸಂಪನ್ಮೂಲವನ್ನು 'ಪೇಟೆಂಟ್' ಕಾಯ್ದೆಗೆ

ಒಳಪಡಿಸಬಾರದು. ೨. ಜಾಗತೀಕರಣದ ಸವಾಲನ್ನು ಎದುರಿಸಲು ಜಾನಪದ ಸ್ಪರ್ಧಾತ್ಮಕವಾಗಿ ಸಿದ್ಧತೆ ಮಾಡಿಕೊಳ್ಳಬೇಕು. ಮನೋರಂಜನೆಯ ಹಿನ್ನೆಲೆಯಲ್ಲಿ ಪ್ರದರ್ಶನ ತಂತ್ರಗಾರಿಕೆ, ಕಲಾತ್ಮಕತೆ, ವೈಜ್ಞಾನಿಕತೆ, ಸಮಯಪಾಲನೆಯನ್ನು ರೂಢಿಸಿಕೊಳ್ಳಬೇಕು. ೩. ಅನ್ವಯಿಕತೆಯ ಹೆಸರಿನಲ್ಲಿ ಮೂಲ ಸತ್ವವನ್ನು ಸಾಯಿಸಬಾರದು. ಸ್ವಂತಿಕೆಯನ್ನು ಉಳಿಸಿಕೊಳ್ಳಬೇಕು. ಪ್ರಾದೇಶಿಕ ವಿಶಿಷ್ಟತೆಯಿಂದಲೇ ವಿಶ್ವದ ಗಮನವನ್ನು ಸೆಳೆಯಬೇಕು. ೪. ಶಾಲಾ ಕಾಲೇಜುಗಳ ಪಠ್ಯದಲ್ಲಿ, ವ್ಯಾಯಾಮ ಕ್ರೀಡೆಯಲ್ಲಿ ಜನಪದ ವಿಷಯಗಳನ್ನು ಸೇರಿಸಿ, ಕಲಿಸಿ ವಿದ್ಯಾರ್ಥಿಗಳಲ್ಲಿ ಆಸಕ್ತಿ ಹುಟ್ಟಿಸಬೇಕು. ೫. ಶಾಲೆಗಳಲ್ಲಿ ಜನಪದ ಕಲಾ ಶಿಕ್ಷಕರನ್ನು ನೇಮಿಸಬೇಕು. ೬. ಮೂಲ ಜನಪದ ಕಲಾವಿದರಿಂದ ಅಥವಾ ಹಿರಿಯ ಜನಪದ ಕಲಾವಿದರಿಂದ ತರಬೇತಿ ಪಡೆದ ಮಕ್ಕಳ ಜನಪದ ಕಲಾಮೇಳವನ್ನು ನಡೆಸಬೇಕು. ಇದರಿಂದ ಜನಪದ ಕಲೆ ಮುಂದುವರಿಯುತ್ತದೆ. ಕಿರಿಯರಲ್ಲಿ ಕ್ರಿಯಾತ್ಮಕತೆ ಬೆಳೆಯುತ್ತದೆ; ಕಲಾಪ್ರದರ್ಶನದಲ್ಲಿ ಆತ್ಮಾಭಿಮಾನ ಹೆಚ್ಚುತ್ತದೆ. ೭. ಹಳ್ಳಿಗರು ಪಟ್ಟಣಿಗರು ಎನ್ನದೆ ಎಲ್ಲಾ ವಯಸ್ಕರೂ ವಿದ್ಯಾವಂತರೂ ಜನಪದ ಕಲೆಗಳನ್ನು 'ಅಕ್ಷರ ಕಲಿಯದವರಿಂದ ಕಲಿತು' ಕರಗತ ಮಾಡಿಕೊಳ್ಳಬೇಕು. ೮. ನಾಗರಿಕ ವಿದ್ಯಾವಂತರು ಜನಪದ ಕಲೆಗಳನ್ನು ಕಲಿತು ಆನ್ವಯಿಕ ರೀತಿಯಲ್ಲಿ, ಪ್ರಸ್ತುತ ಸಾಮಾಜಿಕ ಪರಿಸರದಲ್ಲಿ, ಪ್ರದರ್ಶಿಸಲು ಮುಂದಾಗಬೇಕು. ೯. ವಿದೇಶಿ ಹಾಡು, ಹಾಡುಗಾರಿಕೆ ಕಲೆಗಳಲ್ಲಿ ಮೈಮರೆಯುವ ಯುವಕ ಯುವತಿಯರು, ಪಾರಂಪರಿಕ ಜನಪದ ಹಾಡು, ಹಾಡುಗಾರಿಕೆ ಕಲಾ ಪ್ರದರ್ಶನಗಳನ್ನೂ ಮೈಗೂಡಿಸಿಕೊಳ್ಳಬೇಕು. ೧೦. ಜನಪದ ಕಲೆ, ಕಲಾವಿದರಿಗೆ ಗರಿಷ್ಠ ಪ್ರಮಾಣದಲ್ಲಿ ಪ್ರೋತ್ಸಾಹ ನೀಡಬೇಕು; ಆರ್ಥಿಕ ಸಹಾಯ ಮಾಡಬೇಕು. ೧೧. ಜನಪದ ಕಲಾವಿದರ ಅವಕಾಶಗಳನ್ನು, ಆರ್ಥಿಕ ನೆರವನ್ನು ಸಮಯಸಾಧಕ ಮಧ್ಯವರ್ತಿಗಳು ದೋಚಿಕೊಳ್ಳಬಾರದು. ೧೨. ನಶಿಸಿಹೋಗುತ್ತಿರುವ ಜನಪದ ಕಲೆಗಳನ್ನು ಆದ್ಯತೆಯ ಮೇರೆಗೆ ಧ್ವನಿಮುದ್ರಣ, ಚಿತ್ರೀಕರಣದ ಮೂಲಕ ಸಂರಕ್ಷಿಸಬೇಕು. ೧೩. ಜಿಲ್ಲೆ ಹಾಗೂ ರಾಜ್ಯಮಟ್ಟದ ಆಡಳಿತದಲ್ಲಿ ಜನಪದ ಕಲೆ ಕಲಿಕೆ ಬಳಕೆ ಪ್ರದರ್ಶನಗಳಿಗೆ ನಿಗಾವಹಿಸಬೇಕು. ಸಂರಕ್ಷಣೆ ಸಂವರ್ಧನೆಗೆ ಮುಂದಾಗಬೇಕು. ಇದಕ್ಕಾಗಿ ವಾರ್ಷಿಕ ಆಯವ್ಯಯದಲ್ಲಿ ಸಾಕಷ್ಟು ಹಣವನ್ನು ಮಂಜೂರು ಮಾಡಬೇಕು. ೧೪. ಜಾನಪದ ವಿಚಾರ ಸಂಕಿರಣ, ಕಮ್ಮಟ, ಸಂವಾದ, ಸಮಾಲೋಚನ, ಪ್ರದರ್ಶನ, ಪ್ರಾತ್ಯಕ್ಷಿಕೆ, ಪ್ರಚಾರೋಪನ್ಯಾಸಗಳ ಮೂಲಕ ಜಾನಪದದ ಜಾಗೃತಿ ಮೂಡಿಸಬೇಕು. ಅನ್ಯ ಶಿಸ್ತುಗಳೊಡನೆ ಅಧ್ಯಯನಕ್ಕೆ ಚಾಲನೆ ನೀಡಬೇಕು. ೧೫. ಜಾನಪದ ಸಂಘ ಸಂಸ್ಥೆಗಳಿಗೆ ಉದಾರವಾಗಿ ಧನಸಹಾಯ ಮಾಡಬೇಕು. ೧೬. ಜಾನಪದ ವಸ್ತು ಸಂಗ್ರಹಾಲಯಗಳು ನಾಡಿನ ಅವಿಭಾಜ್ಯ ಅಂಗವಾಗಬೇಕು. ೧೭. ಜಾನಪದ ಮಾಹಿತಿ ಕೇಂದ್ರದ ಸ್ಥಾಪನೆಯಾಗಬೇಕು. ೧೮. ಭೌತಿಕ ಮತ್ತು ಅಭೌತಿಕ ಜಾನಪದ ಸಂಪತ್ತು ರಾಜ್ಯದ ಮತ್ತು ರಾಷ್ಟ್ರದ ಸ್ವತ್ತೆಂದು ಪರಿಗಣಿಸಬೇಕು. ೧೯. ಜನಪದ ಕಲೆಗಳನ್ನು ರಾಷ್ಟ್ರಪ್ರಜ್ಞೆ ಬೆಳೆಸಲು, ಸರಕಾರದ ತುರ್ತು ವಿಷಯಗಳನ್ನು ಹರಡಲು ವೈಜ್ಞಾನಿಕವಾಗಿ ಬಳಸಿಕೊಳ್ಳಬೇಕು. ಉದಾಹರಣೆಗೆ, ವಯಸ್ಕರ ಶಿಕ್ಷಣ, ಕುಟುಂಬ ಯೋಜನೆ, ಮಾರಕ ರೋಗ ಜಾಗೃತಿ, ಧೂಮಪಾನ ಮದ್ಯಪಾನ ನಿಷೇಧ, ಆಧುನಿಕ ಕೃಷಿ, ಗಿಡಮರ ನೀರು ರಕ್ಷಣೆ ಇತ್ಯಾದಿ. ೨೦. ಆಧುನಿಕ ಜೀವನ ವಿಧಾನಕ್ಕೆ ಸಮರಸವಾಗಿ ಜನಪದ ಜೀವನ ವಿಧಾನ ಅಳವಡುವಂತೆ ಕಾರ್ಯೋನ್ಮುಖರಾಗಬೇಕು.

ಕನ್ನಡ ಜಾನಪದ ವಿಶ್ವದ ಯಾವ ಜನಾಂಗದ ಜಾನಪದಕ್ಕೂ ಕಡಿಮೆಯಾಗಿಲ್ಲ. ಸತ್ವದಲ್ಲಿ, ಸ್ವಂತಿಕೆಯಲ್ಲಿ, ಸಂರಚನೆಯಲ್ಲಿ, ಸಾರ್ಥಕ್ಯದಲ್ಲಿ, ವೈವಿಧ್ಯದಲ್ಲಿ, ಸದಭಿರುಚಿಯಲ್ಲಿ, ಪ್ರಯೋಗದಲ್ಲಿ, ಪ್ರಯೋಜನದಲ್ಲಿ ಕನ್ನಡ ಜಾನಪದಕ್ಕೆ ಅನನ್ಯತೆಯಿದೆ. ಕರ್ನಾಟಕ ಜಾನಪದ ಅಖಂಡ ಕರ್ನಾಟಕ ವಾಸಿಗಳ ಸ್ವತ್ತು. ಇದರ ಅಳಿವು ಉಳಿವು ಎಲ್ಲರಿಗೂ ಸೇರಿದ್ದು. ಹಿಂದೆ ಜನಪದರು ಜಾನಪದವನ್ನು ಉಳಿಸಿಕೊಳ್ಳುತ್ತಿದ್ದರು. ಇಂದು ಶಿಷ್ಟಪದರು ಜಾನಪದವನ್ನು ಉಳಿಸಿಕೊಳ್ಳಬೇಕು. ಇದು ಕಾಲದ ಕೊಡುಗೆ.

**ಪ್ರೊ|| ಡಿ. ಲಿಂಗಯ್ಯ**
೬೯೦, ೭ನೇ ಬ್ಲಾಕ್, ೨ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

ಕಲ್ಲಿನ ದೊಡ್ಡಮನೆಯ ಪಡಸಾಲೆಯಲ್ಲಿ ಹಾಕಿದ್ದ ಒಂದೂವರೆ ಮಾರಗಲದ ಪಲ್ಲಂಗದಲ್ಲಿ ಶರಭನಗೌಡ ಸಲುಪೊತ್ತು ಮಕ್ಕಳ್ಳೋದು, ಒರಗಿಕೊಳ್ಳೋದು, ಕುಂದ್ರೋದು ಮತ್ತ ಸಲುಪೊತ್ತು ಕೆಳಗಿಳಿದು ಅಡ್ಡಾಡೋದು ಮಾಡುತ್ತಿದ್ದರೂ ಅದೇನೂ ಮಾಡಿದ್ರೂ ಜೀವಕ್ಕ ನಿರುಮ್ಮಳ ಇರಲಿಲ್ಲ. ಒಂದು ನಿರ್ಧಾರಕ್ಕೆ ಬಂದಿದ್ದರೂ ಅದು ಕಾರ್ಯದೊಳಗೆ ಬರೋದನ್ನ ಗೌಡ ದಾರಿ ಕಾಯುತ್ತಿದ್ದ. ಅದು ದಿನೇದಿನೇ ಮುಂದಕ್ಕೆ ಹೋಗುತ್ತಿತ್ತು. ಆದರಿಂದ ಎದ್ಯಾಗ ಧೈರ್ಯ ಅಂಬೋದು ಬಾಳ ಹೊತ್ತು ನಿಲ್ತಿದ್ದಿಲ್ಲ. ಅದು ಬತ್ತಿ ಹೋದಂಗ ಅನಸ್ತಿತ್ತು. ಗೌಡ ರಾತ್ರಿ ಬಹಳೊತ್ತಾಗಿದ್ರೂ ನಿದ್ದೆಯಿಲ್ಲದೆ ಭಯದಾಗ ನರಳುತ್ತಿದ್ದ. ಅರೆನಿದ್ದೆ, ಅರೆ ಎಚ್ಚರದಾಗ ಕೆಟ್ಟ ಕೆಟ್ಟ ಕನಸುಗಳು ಬ್ಯಾರೆ ಕಾಣಿಸಿ, ಅವುಗಳ ಮರ್ಮ ಏನಂತ ಚಿಂತೆ ಮಾಡಿ ಮಾಡಿ ಬೆಯ್ದುಹೋಗುತ್ತಿದ್ದ. ಹಿಂಗಾಗಿ ಯಾವಾಗ ನಿದ್ದೆ ಬಂತು, ಯಾವಾಗ ಎಚ್ಚರಿತ್ತು, ಎಂಥ ಕನಸುಗಳು ಕಾಣಿಸಿದವು ಅಂಬೋದು ನಿಚ್ಚಳವಾಗಿ ಅರಿವಿಗೆ ನಿಲಕಲಿಲ್ಲ. ಎಡವಿ ಕೆಸರಾಗ ಬಿದ್ದು ಎದ್ದಂತಾಗಿತ್ತು. ಗೌಡನ ಜೀವನದಲ್ಲಿ ಖರೇ ಅಂದ್ರ ಇಂಥ ಕಷ್ಟ ಎಂದೂ ಬಂದಿರಲಿಲ್ಲ. ಮಕ್ಕಳು ಹುಟ್ಟಿ ಬೆಳೆದ ಊರು ಬಿಟ್ಟು, ಆಸ್ತಿ ಬಗ್ಗೆ ಕಾಳಜಿ ಮಾಡದೆ ನಗರಗಳಲ್ಲಿದ್ದರೂ ಗೌಡ ಚಿಂತೆ ಹಚ್ಚಿಕೊಂಡಿರಲಿಲ್ಲ. ಹೆಂಡತಿಯೂ ಮಕ್ಕಳ ಜತೆಗಿದ್ದುದ್ದು ಕೂಡ ಗೌಡನಿಗೆ ಬಾಧೆ ಅನ್ನಿಸಿಲ್ಲ. ಆದರೆ ಈಗ್ಯ ವರ್ಷಾರು ತಿಂಗಳಿಂದ ಗುಡ್ಡಗಾಡಿನಲ್ಲಿ ತಳ ಊರಿದ್ದ ಚಳುವಳಿಗಾರರ ಗುಂಪಿನಿಂದ ಗೌಡನ ಅಸ್ತಿತ್ವಕ್ಕೆ ಧಕ್ಕೆ ಬಂದಿತ್ತು. ಅದರಿಂದ ಗೌಡನ ಎದ್ಯಾಗ ಧೈರ್ಯ ಅಂಬೋ ಸೆಲೆ ಬತ್ತಿದಂಗ ಆಗಿತ್ತು. ಮಕ್ಕಳ ಮ್ಯಾಲೆ ಗೌಡರಿಗೆ ಈಚೆಗೆ ಸಿಟ್ಟು ಹೆಚ್ಚಾಗಿತ್ತು. ಒಂಟಿಯಾಗಿದ್ದ ಗೌಡ ಕುಸಿದೇ ಹೋಗಿದ್ದ. ತನ್ನ ಈ ಅವಸ್ಥೆ ನೆನಸಿಕೊಂಡು 'ಛೇ! ಇವನಪ್ಪನ ತಂದು' ಅಂತ ಮೈ ಝಾಡಿಸಿಕೊಂಡು ನಿಶ್ಚಿಂತೆಯಿಂದಿರಲು ಹೆಣಗಿದರೂ ಆಗುತ್ತಿರಲಿಲ್ಲ.

ಪಡಸಾಲೆ ಮ್ಯಾಲಿನ ಬೆಳಕಿಂಡಿಯಿಂದ ಬೆಳಕಿನ ಸುಳಿವು ಕಂಡಿತು. ಗೌಡ ಗೋಣೆತ್ತಿ ನೋಡಿದ. ಬೆಳಕು ಒಳಗಿಳಿಯತೊಡಗಿತ್ತು. ಎಂಥದೋ ಸಂತಸದ ಎಳೆ ಮೈಯಾಗ ಹರಿದಂತಾಯ್ತು. ಬೆಳಕಿಂಡಿಯ ಮೂಲಕ ಹೊರಗೆ ಹಕ್ಕಿಪಕ್ಷಿಗಳ ಗದ್ದಲ ಕೇಳಿತು. ಮಹಡಿ ಮ್ಯಾಲೆ ಗುಟುರುವ ಪಾರಿವಾಳ ಬಳಗವು ಬಾಳೇವು ಶುರು ಮಾಡಿದ್ದವು. 'ಇವನಪ್ಪನ ತಂದು! ಅಂತೂ ಬೆಳಕಾಯ್ತು!' ಅಂತಂದುಕೊಂಡು ಎದ್ದು ಅಂಗಿ, ಪಂಚೆ ಸರಿಮಾಡಿಕೊಂಡು, ''ದಸ್ತಗಿರೀ...'' ಅಂತೇಳಿ ಕರೆದ. ಒಂದೇ ಕರೆಗೆ, 'ಹ್ಞೂರ್ರೀ' ಅಂತ ಧಾವಿಸಿ ಬರುತ್ತಿದ್ದ ದಸ್ತಗಿರಿ ದನಿ ಕೇಳಿಸಲಿಲ್ಲ. ''ದಸ್ತಗಿರೀ... ಲ್ಹೇ... ದಸ್ತಗಿರೀ...'' ಅಂತೇಳಿ ಸಲುಪು ಸಿಟ್ಟಿನಿಂದ ಕೂಗಿದ, ಗೌಡ. ಮಹಡಿ ಮ್ಯಾಲಿದ್ದ ಪಾರಿವಾಳ ಬಳಗ ಹೆದರಿ ಪಟ ಪಟ ಎದ್ದು ಹಾರಿದವು! 'ಇವನಪ್ಪನ, ಈ ಪಾರಿವಾಳ ಕುಲ ಪುಕ್ಕ ಕುಲ. ನಾನು ಸೀನಿದ್ರು ಹೆದರ್ತಾವ, ಕೆಮ್ಮಿದ್ರೂ ಹೆದರ್ತಾವ!' ಅಂತಂದು, ''ಲ್ಹೇ ದಸ್ತಗಿರೀ'' ಅಂತ ಗಟ್ಟಿಯಾಗಿ ಕೂಗಿದ. ಆತನ ಸುಳಿವಿಲ್ಲ. 'ಹ್ಹಾ! ಎಲ್ಲಿ ಹ್ವಾದ ಸಾಯಿಲ್ಕ್ಕೆ?' ಅಂತನ್ನುತ್ತ ಸಿಟ್ಟಿನಿಂದ ಇಳದು, ಅಂಕಣ ದಾಟಿ, ತಲಬಾಗಿಲಿಗೆ ಬಂದ. ತಲಬಾಗಿಲ ಒಳಗೆ ಬಲಗಡೆ ಬಂಕದಾಗ ದಸ್ತಗಿರಿಯ ಹಾಸಿಗೆ ಇತ್ತು. ರಾತ್ರಿ ಮಲಗಿದ್ದ. ಗೌಡ ಚಿಲಕ ಹಾಕದ ದೊಡ್ಡ ಬಾಗಿಲನ್ನು ಸಲುಪು ಹೆದರಿಕೆಯಿಂದಲೇ ತೆಗೆದ. ದೊಡ್ಡ ಹೊಸ್ತಿಲು ದಾಟಿ ಹೊರ ನಿಂತು ನೋಡಿದ. ಹೊರಗೆ ಇನ್ನೂ ಬಿಸಿಲು ಕಾಣಲಿಲ್ಲ. ಅಂಗಳ ಖಾಲಿಯಿತ್ತು. ದೂರದಾಗ ಟ್ರ್ಯಾಕ್ಟರ್, ಜೀಪು ನಿಂತಿದ್ದವು. ಅಂಗಳದ ಹೆಮ್ಮರಗಳು ಮುನಿಸಿಕೊಂಡಂತೆ ಕಂಡವು. ದಸ್ತಗಿರೀ ಅಂತ ಕೂಗಿದ. ಹತ್ತಾರು ಮಾರು ದೂರದ ಕಾಂಪೌಂಡಿನ ಒಳಗೆ ಯಾರೋ ಒಬ್ಬ ಕಂಡ. 'ಅಂವ ದಸ್ತಗಿರಿ ಅಲ್ಲ, ಡ್ರೈವರ್ ಅಲ್ಲ... ಮತ್ಯಾರವನು?' ಅಂದುಕೊಂಡ ಗೌಡ. ಒಳಗಿದ್ದ ಆತ ಮೆಲ್ಲಕ ಗೌಡನ ಕಡೆ ಬರುತ್ತಿದ್ದ.



ಅಮರೇಶ ನುಗಡೋಣಿ

# ಪಕ್ವಕಲ್ಲದೆ ಪರಿಣಾಮ ಕಾಣಿಸದು

ಪ್ಯಾಂಟು, ಅಂಗಿ ಹಾಕ್ಕೊಂಡಿದ್ದ. ಗೌಡನಿಗೆ ಭಯ ಹುಟ್ಟಿತು. ಆದ್ರೂ ಒಳಗೆ ಹೋಗಲು ಮನಸ್ಸಾಗಲಿಲ್ಲ. ಆತ ಬಂದ. ಮಾರೆಮ್ಯಾಲೆ ಚೂರುಚೂರು ಗಡ್ಡ, ಮೀಸೆ, ತಲೆ ಕೂದಲೂ ಸಣ್ಣ, ಕಣ್ಣುಗಳಲ್ಲಿ ಕಳೆ ಇರಲಿಲ್ಲ, ಪೂರಾ ತೆಳ್ಳಗಿದ್ದ.

''ನಮಸ್ಕಾರ ಗೌಡ್ರೇ'' ಅಂದ ಆತ ಕೈ ಮುಗಿದ.

''ನಮಸ್ಕಾರ ತಮ್ಮಾ...'' ಗಾಬರಿಯಿಂದ ಗೌಡ ಅಂದ.

''ಈಗ ಎದ್ದೀರಿಯಂತ ಕಾಣ್ತದ?'' ಸಲುಪು ನಗುಮುಖ ಮಾಡಿ ಕೇಳಿದ. ಆತನ ದನಿಯಲ್ಲಿ ನಂಟುತನ ಇತ್ತು.

''ಹೌದು ತಮ್ಮಾ, ಅಂದಂಗ ನೀನು ಯಾರು? ಯಾರ ಪೈಕಿ? ನಿನ್ನ ಹೆಸ್ರು...'' ಗೌಡನ ಮಾತಿನ್ಯಾಗೂ ಕಕ್ಕುಲಾತಿ ಮೂಡಿತ್ತು.

''ಚಂದ್ರಪ್ಪ! ಚಂದ್ರಪ್ಪಾಂತ!'' ಅಂದ ತುಸು ನಗುತ್ತ, ಆತ.

'ಹ್ಹಾಂ! ಚಂದ್ರಪ್ಪಾ...?' ಅಂದ ಗೌಡನ ಎದೆ ಧಸ್ ಅಂತು! ಒಳ ಸರಿಯಲು ದೊಡ್ಡ ಹೊಸ್ತಿಲು ಅಡ್ಡಯಿತ್ತು.

- ೨ -

ಹೊತ್ತು ಮುಳಗಿ ಮೂರು ತಾಸು ಮೀರಿ ಹೋಗಿತ್ತು. ಇಷ್ಟತ್ತಿಗೆ ಶರಭನಗೌಡ ಮಲಗಿ ನಿದ್ದೆ ಮಾಡಬೇಕಿತ್ತು. ಆದ್ರೆ ಮೈತುಂಬ ಚಿಂತೆ ತುಂಬಿಕೊಂಡು ಪಲ್ಲಂಗದಲ್ಲಿ ಕುಂತಿದ್ದ. ಗೌಡ ನಿದ್ದೆಯ ಸುಖವನ್ನು ಕಳಕೊಂಡಂತಾಗಿತ್ತು. ಮನೆಕೆಲಸಗಾರ ದಸ್ತಗಿರಿಗೆ ನಿದ್ದೆ ಬಂದಿತ್ತು. ಗೌಡನ ಜತೆಗಿದ್ದ ಆತಗೂ ಹೆದ್ರಿಕೆಯಿತ್ತು. ಮೂರು ನಾಕು ತಿಂಗಳ ಹಿಂದೆಯೆ ಗೌಡನ ಸೆಕ್ಯೂರಿಟಿ ಗಾರ್ಡ್ ಕೆಲಸ ಬಿಟ್ಟು ಓಡಿಹೋಗಿದ್ದ. ಆದರೂ ದಸ್ತಗಿರಿ ಗೌಡನನ್ನು ಬಿಟ್ಟು

ಕದಲಿರಲಿಲ್ಲ. ದಸ್ತಗಿರಿ ಮಲಗುವ ಮುನ್ನ, ತಲಬಾಗ್ಲಿ ಯಾವಾಗೋ ಚಿಲಕ ಹಾಕಿದ್ದರೂ ಬಂದೋಬಸ್ತು ಮುಚ್ಚಿದ್ದಿನೋ ಇಲ್ಲೋ ಅಂತ ಕ್ಯಾಲಯಿಟ್ಟು ನೋಡಿಕೊಂಡು, ಗೌಡನ ಬಳಿ ಬಂದು, 'ಗೌಡಾ, ನಿದ್ದಿ ಬಂದಂಗಿಲ್ಲ... !' ಅಂದ ಮೆಲ್ಲಕ. ಪಡಸಾಲೆಯ ಕೊನೆಕಟ್ಟೆ ಕೆಳಗೆ ನಿಂತಿದ್ದ ದಸ್ತಗಿರಿ ಮಾತು ಕೇಳಿ, 'ಹ್ಞಾಂ! ದಸ್ತಗಿರಿ ಬಾ, ಮ್ಯಾಲೆ ಬಾರೋ!' ಅಂದ ಗೌಡ ಎಚ್ಚತ್ತು ದಸ್ತಗಿರಿ ಪಡಸಾಲೆಯನ್ನು ಏರುವ ಪಾಂಟಣಗಿ ಮ್ಯಾಲೆ ಮೆಲ್ಲಕ ಕುಂತು, 'ನಿದ್ದೆ ಮಾಡು ಗೌಡ! ಬಂದದ್ದು ಬರ್ತದ! ಬರಲಾರದ್ದು ಬರದಿಲ್ಲ' ಅಂದ. 'ದಸ್ತಗಿರಿ, ಬರದು ಬಪ್ಪದು! ಬಪ್ಪದು ತಪ್ಪದು' ಅಂತ ಅಪ್ಪ ಆಗಾಗ ಅಂತಿದ್ದನು. ನನ್ನ ಅನುಭವಕ್ಕೂ ಆ ಮಾತು ನಿಲಕಿದ್ದಿಲ್ಲ. ಈಗ ನಿಲುಕಾಕ ಹತ್ಯಾದ. ಹೋದ ಸಲ ಮಹಾಂತ ತಾತ ಬಂದಿದ್ದು, ಹೋಗುವಾಗ 'ಶರಬಣ್ಣ, ನಾಳೆ ಬಪ್ಪುದು ನಮಗಿಂದೇ ಬರಲಿ – ಅಂತ ತಿಳಕಂಡುಬುಡು. ಧೈರ್ಯ ನಿನ್ನ ಬಳಿ ಇರ್ತದ' ಅಂತ ಹೇಳಿದ. ಆದ್ರೂ ದಸ್ತಗಿರಿ, ಹಾಂವು ಹೊಕ್ಕ ಮನ್ಯಾಗ ನಿದ್ದಿ, ನೀರಡಿಕೆ ಹೆಂಗಿರ್ತದ ? 'ಬರ್ತೀವೀ, ಮಾತುಕತೆ ಆಡಮಿ' ಅಂತ ಸುದ್ದಿ ಕೊಟ್ಟರು, ಖರೆ! ಬರ್ಲೇ ಇಲ್ಲ ನೋಡು! ಗಾಳಿ ಸುದ್ದಿಗೆ ನಾನು ಅಂಜಿಕೊಂಡು ಜೀವ ಕೈಯಾಗ ಹಿಡಕಂಡು ಎಷ್ಟಂತ ಕಾಯದು ? ಇವನಪ್ಪನ ತಂದು!' ಗೌಡ ಬೇಸರದಿಂದ ಕುಸಿದ. ಗೌಡನ ಮಾತಿನ್ಯಾಗ ಹೆದ್ರಿಕೆಯಿತ್ತು. ಗೌಡನ ಸ್ವಭಾವದೊಳಗೆ ಗತ್ತು, ದರ್ಪ ಇದ್ರ ಚಂದ ಅಂತನಿಸಿತು. ದಸ್ತಗಿರಿಗೆ ಆದ ಕಂಡು ಸಂಕಟವಾಯ್ತು.

'ಗೌಡ, ನಾನು ಹಿಂಗಂತೀನಿ ಅಂತ ಮನ್ಸು ಮುರ್ಕಬ್ಯಾಡಪ್ಪ! ಕಾಲ ಬಾಳ ನಾಜೂಕು ಆಗಾಕತ್ಯಾವ, ನಮ್ಮ ಸೀಮೆ ಒಳಗಿನ ಕಾಡುಬೆಟ್ಟದಾಗಿದ್ದು ಬಡವುರಿಗೆ ಬೆನ್ನೆಲುಬು ಆಗ್ತೀವಿ ಅಂತ ಅನ್ನುವ ಆ ಗುಂಪಿನವರು ನಿನ್ನ ಮ್ಯಾಲೆ ಕಣ್ಣಿಟ್ಟಾರ. ಅವರ ಕಣ್ಣುಗಳು ನಿನ್ನಂಥ ಜಮೀನ್ದಾರರ ಮ್ಯಾಗಂತ. ನರಸನಗೌಡನ ಸುದ್ದಿ ಇನ್ನ ಹಸಿ ಐತೆಲ್ಲ? ಗೌಡ, ನನ್ಗ ಅನಸ್ತದ ಒಂದು, ಅವರು ಹೇಳಿದಂಗ ಕೇಳಿ ನಡಕಂಡು ಹೋದ್ರ ಜೀವಕ್ಕೂ ಕುತ್ತಿಲ್ಲ. ಇಲ್ಲಂದ್ರ, ನೀನು ಮಕ್ಕಳ ಬಲ್ಲಿ ಹೋಗಿ ನಗರದಾಗ ತಣ್ಣಗ ಇದ್ದುಬುಡು, ಗೌಡಾನಿ ಇದ್ದಂಗ.' 'ಲ್ಹೇ ದಸ್ತಗಿರಿ, ಇಲ್ಲಿನ ವತನದ ಬಾಳೇವು ಗತಿ ಯೇನು ? ಅಂತ ನೀನು ಕೇಳ್ತಿದ್ದಿ, ಖರೆ. ಮಕ್ಳು ಬಂದು ಏನನ್ನ ವ್ಯವಸ್ಥೆ ಮಾಡ್ತಾರ. ಇಷ್ಟು ದಿನ ನೀನು ಮಾಡಿದ್ದು ಮಕ್ಕಳಿಗೆ ಬ್ಯಾಡಾಗ್ಯಾದೇನು ? ಅವರಿಗೆ ಜವಾಬ್ದಾರಿ ಇಲ್ಲೇನು ?' ದಸ್ತಗಿರಿ ಖರೆ ಸಿಟ್ಟಿನಿಂದ ಕೇಳಿದ.

'ಹಗ್ಗ ಹರಿಯೋತನ್ಕ ಜಗ್ಗ ವಯಸ್ಸು ನನ್ಗೆಲ್ಯಾದ, ದಸ್ತಗಿರಿ ?' ಅಂದ ಗೌಡ ದಸ್ತಗಿರಿಯನ್ನು ನೋಡಿ, 'ಇವನಪ್ಪನ, ನಾನು ಇನ್ನೂ ಬದುಕಿದ್ದಿನಿ, ಆದ್ರೂ ಈ ಕಾಲ ನನ್ನದಲ್ಲ ಅಂತ ಅನಿಸಿಬುಟ್ಟಾದ! ಅಮೀನುಸಾಬ, ತಸೀಲ್ದಾರ ಸಾಬ, ಕಲೆಕ್ಟರು ಸಾಬ ಬಂದು ಬಂದು ನನ್ಗ ಸೂಕ್ಷ್ಮದ ಮಾತುಗಳನ್ನ ಹೇಳಿವ್ದಾದ್ರು. ಮಹಾಂತ ತಾತನಂತೂ ಬೀಜದ ಮಾತು ಹೇಳ್ತಾನೇ ಇರ್ತಾನೆ. ಈಗ ನಾನು ಹಿಂದಕ ಸರದು ಕುಂತೀನಿ. ಏನು ಆಗ್ಬೇಕಾಗ್ಯಾದ ಅದು ಜಲ್ದಿ ಆದ್ರ ನನ್ಗ ಜೀವಕ್ಕ ನಿರುಮ್ಮಳ ಇರ್ತದ. ಅದ್ಕ ಕಾಯಾಕ ಹತ್ತೀನಿ. ಮೈ ಮನ್ಸಿನ್ಯಾಗ ಭಯ ತುಂಬ್ಕೊಂಡು ಎಷ್ಟು ದಿನಂತ ಕುಂತ್ಗಂತಿದ್ದಿ, ದಸ್ತಗಿರಿ ?' ಗೌಡನ ಮಾತಿನ್ಯಾಗ ಸಿಟ್ಟು ಸಂಕಟ ತುಂಬಿತ್ತು. ಅದಕಂಡು ದಸ್ತಗಿರಿ ಒಳಗೊಳಗೆ ವ್ಯಥೆಪಡುತ್ತ ಸುಮ್ಮನಾದ.

'ನಿನ್ಗೂ ನಿದ್ದಿಯಿಲ್ಲ. ನೀನು ಮಲಿಕ್ಕೆ ಹೋಗು' ಅಂದ ಗೌಡ. ದಸ್ತಗಿರಿ ಪಾಂಟಣಗಿ ಇಳದು, ಅಂಕಣ ದಾಟಿಕೊಂಡು ತಲಬಾಗಿಲದ ಬಲಗಡೆ ಬಂಕ ಏರಿದ, ಮಲಗಲು.

ಗೌಡ ತಲೆದಸಿಗೆಯಲ್ಲಿಟ್ಟಿದ್ದ ನೀರು ಕುಡುದು ಪಲ್ಲಂಗದಲ್ಲಿ ಮಲಗದೆ ದೊಡ್ಡ ದಿಂಬಿಗೆ ಒರಗಿ ಕುಂತನು. ಹೆಂಡತಿ ನೀಲಾಂಬಿಕೆ ನೆಪ್ಪಾದಳು. ಹಿರಿಮಗ ದೇವರಾಜ, ಸಣ್ಣವ ಶಶಿಧರ ಕಣ್ಣ ಮುಂದೆ ಸುಳಿದರು. ಇವರಿಬ್ಬರ ನಡುವೆ ಹುಟ್ಟಿದ ಶಶಿಕಲಾ ನೆಪ್ಪಾದಳು. ಮೊಮ್ಮಕ್ಕಳ್ಯಾರು ನೆನಪಿಗೆ ಬರಲಿಲ್ಲ. ಗೌಡನಿಗೆ ಮೂವ್ವರ ಮಕ್ಕಳ ಸಂಪರ್ಕವೇ ತಪ್ಪಿ ಹತ್ತಾರು ವರ್ಷಗಳೇ ಉರುಳಿದ್ದವು. ಈಚೆಗೆ ಫೋನಿನಲ್ಲಿ ಎಲ್ಲರೂ ಮಾತಾಡುತ್ತಿದ್ದರು. ಆದರೂ ಗೌಡನಿಗೆ ಅವರು ಯಾರು ಅನಿವಾರ್ಯವಾಗಿರಲಿಲ್ಲ. ಹಾಗಂತ ಅವರು ಯಾರು ಖಂಡಿತ ಬ್ಯಾಡಾಗಿರಲಿಲ್ಲ. ಸಹಜವಾಗಿ ಬಂದ ಪರಿಸ್ಥಿತಿಗೆ ಹೊಂದಿಕೊಂಡು ಇದ್ದರು. ಈಗಿನ ಪರಿಸ್ಥಿತಿ ಬ್ಯಾರೆ. ಇಂಥ ವ್ಯಾಳ್ಯಾದಾಗ ಹೆಂಡತಿ ಬಂದಿದ್ದರೆ ಪಾಡಿತ್ತು ಅಂತ ಗೌಡನಿಗೆ ಅನ್ನಿಸಿತು. ವಾರದ ಹಿಂದೆ ಫೋನಿನಲ್ಲಿ ಹೆಂಡತಿ ಅರ್ಧಗಂಟೆ ಮಾತಾಡಿದ್ದಳು. ಶಶಿಧರನ ಜತೆ ಇಂಗ್ಲೆಂಡಿನಲ್ಲಿದ್ದಳು. ಆದಷ್ಟು ಬೇಗ ಬರ್ತೀನಿ ಅಂತ ಹೇಳಿದ್ದಳು. ಅದರ ಹಿಂದಿನ ತಿಂಗಳು ಮಗ ದೇವರಾಜ ಬಂದು ಯೋಗಕ್ಷೇಮ ವಿಚಾರಿಸಿ, ಈಗಿನ ಪರಿಸ್ಥಿತಿಗೆ ಪರಿಹಾರ ಕಂಡುಕೊಳ್ಳುವುದಕ್ಕೆ ಬಹಳ ಯೋಚಿಸಿದ್ದ. ಮಾತಾಡುವಾಗ ಮಗನ ಸೂಚನೆಗಳೂ ಗೌಡನಿಗೆ ಸರಿಯೆನ್ನಿಸಿತು.

ರಕ್ಷಣೆಗೆ ಎಲ್ಲ ರೀತಿಯ ವ್ಯವಸ್ಥೆ ಮಾಡಿಸಿದ್ದ. ಅವು ತಕ್ಕಮಟ್ಟಿಗೆ ನೆರವಾಗಿದ್ದವು, ಖರೆ. ಆದ್ರೂ ಅವು ಕಿರಿಕಿರಿ ಅನ್ನಿಸಿದ್ದವು. ಗೌಡ ಎದ್ದು ಪಲ್ಲಂಗದಿಂದ ಇಳಿದು ಅಡ್ಡಾಡ ತೊಡಗಿದ. ಪಡಸಾಲೆಯ ಉದ್ದ ಮೂವತ್ತು ಹೆಜ್ಜೆಗಳು. ಗೌಡನಿಗೆ ಈಗ ಎಪ್ಪತ್ತೆಂಟು ವರ್ಷ. ಬದುಕಿನ್ಯಾಗ ಯಾವತ್ತು ಪೆಟ್ಟು ತಿಂದಾತಲ್ಲ. ಬದುಕಂದ್ರ ಏಳಿರಿತ ಇರತ್ವಲ್ಲ. ಗೌಡನ ವಿಷಯದಾಗ ನೆನಪಿಟ್ಟುಕೊಳ್ಳುವ ಗಂಡಾಂತರಗಳು ಇರಲಿಲ್ಲ. ಒಂದು ವ್ಯಾಳೆ ಇದ್ರೂ ಅವೇನು ಗೌಡನಿಗೆ ದಮ್ಮು ಹತ್ತುವಂಗ, ನೆಲ ಹಿಡಿಯುವಂಗ ಮಾಡಿರಲಿಲ್ಲ. ಮುಂಜಾನೆ ಸೂರ್ಯ ಹುಟ್ಟಿದ್ರ ಸಂಜೆ ಮುಂದ ಮುಳುಗುವಂಗ ಗೌಡನ ಜೀವನ ಸರಳಯಿತ್ತು. ಅದಕ್ಕೆ ಕಾರಣ ಆತನೇ ರೂಢಿಸಿಕೊಂಡ ಬಾಳೇವು. ಗೌಡನ ಪ್ರಾಂತದ ಅನೇಕ ಜಮೀನ್ದಾರರು ಕಾಲದ ಬದಲಾವಣೆಗೆ ತಕ್ಕಂತೆ ಬದಲಾಗಿದ್ದರು. ಚುನಾವಣೆ, ಅಧಿಕಾರ, ವ್ಯಾಪಾರ ಹಣಮಾಡುವ ಎಲ್ಲ ಸಂಗತಿಗಳ ಜತೆಗೆ ಎದ್ದುಬಿದ್ದು ಮಾಡುತ್ತ ನಡೆದಿದ್ದರು. ಶರಭನಗೌಡ ಮಾತ್ರ ಜವಾರಿತನದಿಂದ ಬದುಕಿದ್ದರು. ಅದಕ್ಕಾಗಿಯೇ ಇರಬೇಕು ಮಹಾಂತ ತಾತ ಗೌಡನ ಮ್ಯಾಲೆ ಬಾಳ ಪ್ರೀತಿ ಇಟ್ಟುಕೊಂಡು ಬಂದು ಹೋಗುತ್ತಿದ್ದ.

ಗೌಡನಿಗೆ ಬದುಕಿನ ಬದುವುಗಳು ನೆಪ್ಪಾದವು; ತನಗೆ ಮದುವೆಯಾದ ವರ್ಷ ತಂದೆ ವೀರಭದ್ರಗೌಡನ ತಮ್ಮ ಹಂಪನಗೌಡ ತನ್ನ ಪಾಲಿಗೆ ಬರುತ್ತಿದ್ದ ಜಮೀನು ಇಲ್ಲೇ ಬಿಟ್ಟು ಅಳಿತನಕ್ಕೆ ಹೋದ. ವೀರಭದ್ರಗೌಡನೇ ತಮ್ಮನಿಗೆ ಆ ವ್ಯವಸ್ಥೆ ಮಾಡಿಕೊಟ್ಟಿದ್ದ. ತಮ್ಮ ಹೋದ ಮ್ಯಾಲೆ ಗೌಡನಿಗೆ ಜವಾಬ್ದಾರಿ ಬಿತ್ತು. ಆರೇಳು ವರ್ಷ ತಂದೆ ಜತೆಗೆ ಜವಾಬ್ದಾರಿಯಿಂದ ವ್ಯವಸ್ಯಾಯ ಮಾಡಿದ. ತಾಯಿ ತಂದೆಗೆ ಒಬ್ಬನೆ ಮಗ ಶರಭನಗೌಡ. ಅವರು ತೀರಿಕೊಂಡ ಮ್ಯಾಲೆ, ಇನ್ನೂರ ಐವತ್ತು ಎಕರೆ ಜಮೀನು, ಹತ್ತು ಹದಿನೈದು ಗಳೇವು, ಹತ್ತಾರು ಮಂದಿ ಜೀತಗಾರರು, ನೂರಾರು ದನಕರಗಳ ದೊಡ್ಡ ವತನವನ್ನು ಗೌಡ ಸರಳವಾಗಿ ನಡೆಸಿಕೊಂಡು ಬಂದಿದ್ದ. ಏರುಪೇರುಗಳಾಗಿದ್ದವು. ಮೂವರು ಮಕ್ಕಳು. ಬುದ್ಧಿವಂತ ಹೆಂಡತಿ ಮಕ್ಕಳಿಗೆ ವಿದ್ಯೆ ಕಲಿಸಲು ತಾಲೂಕದಲ್ಲಿ ಮನೆ ಮಾಡಲು ಹೇಳಿದಾಗ, ಗೌಡ ಅಲ್ಲಿ ಮನೆ ಕಟ್ಟಿಸಿ ಮಕ್ಕಳ ಜತೆಗೆ ಹೆಂಡತಿಯನ್ನೂ ಇರಿಸಿದ. ವಾರಕ್ಕೊಮ್ಮೆ ಬಂಡಿಯಲ್ಲಿ ಮನೆ ಬಾಳೇವಿಗೆ ಬೇಕಾದದ್ದನ್ನು ಒಯ್ದು ಕುಟುಂಬದ ಜತೆಯಿದ್ದು ಬರ್‍ತಿದ್ದ. ಬೇಸಿಗೆ ರಜೆಯಲ್ಲಿ ಮಾತ್ರ ಹೆಂಡತಿ, ಮಕ್ಕಳು ಊರಿಗೆ ಬರುತ್ತಿದ್ದರು. ಆರೇಳು ವರ್ಷ ಕಳೆದ ಮ್ಯಾಲೆ ಹೆಂಡತಿ, ಮಕ್ಕಳು ಜಿಲ್ಲಾ ಕೇಂದ್ರ ಸೇರಿಕೊಂಡರು. ಅಲ್ಲಿಯೂ ಒಂದು ಮನೆ ಕಟ್ಟಿಸಿ ಅವರೆಲ್ಲ ಜಿಲ್ಲಾ ಕೇಂದ್ರ ಸೇರಿದ ಮ್ಯಾಲೆ ಶರಭನಗೌಡ ತಿಂಗಳಿಗೊಮ್ಮೆ ಬಸ್ಸಿಗೆ ಹೋಗಿ ಬರ್‍ತಿದ್ದ. ಹೆಂಡತಿ, ಮಕ್ಕಳು ನಗರಕ್ಕೆ ಹೊಂದಿಕೊಂಡರು. ಶರಭನಗೌಡನಿಗೆ ಮಾತ್ರ ನಗರದಲ್ಲಿ ಇರಲು ಆಗಲೇ ಇಲ್ಲ. ಹೆಂಡತಿ ಒತ್ತಾಯ ಮಾಡಿದ್ರೆ ಮಾತ್ರ ಮೂರೋ ನಾಲ್ಕೋ ದಿನ ಇರ್‍ತಿದ್ದ. ಹೆಂಡತಿಯೇ ಊರಿಗೆ ಬಂದು ಹೋಗುತ್ತಿದ್ದಳು. ಆದರೂ ಒಂದು ಅಂತರ ಬೆಳೆಯಿತು. ಜೀವನ ವಿಧಾನದಲ್ಲೂ ಭಿನ್ನತೆ ಬೆಳೆಯಿತು.

ಮಕ್ಕಳು ವಿದ್ಯಾವಂತರಾದರು. ಅವರ ಮದುವೆಗಳೂ ಆದವು. ಅದಕ್ಕೆಲ್ಲ ಹೆಂಡತಿಯೇ ಕಾರಣ ಅಂಬೋದು ಗೌಡನಿಗೆ ಗೊತ್ತು. ಈಗ ಹದಿನೈದು ವರ್ಷಗಳಿಂದ ಹಿರಿಮಗ ದೆಹಲಿಯಲ್ಲಿ ನೆಲೆಸಿದ್ದ. ಹೆಂಡತಿಯೂ ಅಲ್ಲೆ ಜತೆಗಿದ್ದಳು. ಮಗಳು ಗಂಡನ ಜತೆ ಬೇರೆ ದೇಶದಲ್ಲಿದ್ದಳು. ಸಣ್ಣವನ ಮದುವೆ ಆಯಿತು ಅಂತ ಮಾತ್ರ ಗೌಡ ಸುದ್ದಿ ಕೇಳಿದ. ಹೆಂಡತಿಯೇ ಅವನ ಬಗ್ಗೆ ಹೇಳುತ್ತಿದ್ದಳು. ಅಮೆರಿಕಾ, ಇಂಗ್ಲೆಂಡು ಅಂತ ತಿರುಗುತ್ತಾನೆಂದು ಮಾತ್ರ ಗೌಡನಿಗೆ ಅರಿವಿತ್ತು. ಹಿರಿಮಗ, ಹೆಂಡತಿ ಮಾತ್ರ ಗೌಡನ ಜತೆ ನಿರಂತರ ಸಂಪರ್ಕ ಹೊಂದಿದ್ದರು. ಮಗ, 'ದೆಹಲಿಗೆ ಬಂದಿದ್ದು ಬಿಡು. ಊರು ಸಾಕು, ಅಮ್ಮನಂತೆ ನೀನೂ ಹೊಂದಿಕೊಳ್ಳುತ್ತಿ' ಎಂದು ಕಕ್ಕುಲಾತಿಯಿಂದ ಹೇಳುತ್ತಿದ್ದ. ಗೌಡ ಮಾತ್ರ ಊರು ಬಿಟ್ಟು ಕದಲಲಿಲ್ಲ...

ಗೌಡ ಅಡ್ಡಾಡುವುದನ್ನು ನಿಲ್ಲಿಸಿದ. ದೊಡ್ಡ ಕಲ್ಲಿನ ಮನೆ ಭೇದಿಸಿ ನಾಯಿ ಅಳುವ ಕೂಗು ಕೇಳಿಸಿತು. ಗೌಡನಿಗೆ ಯಾಕೋ ವ್ಯಸನವಾಯ್ತು. ಪಲ್ಲಂಗದಲ್ಲಿ ಕುಂತ. ರಾತ್ರಿ ಸವಹೊತ್ತು. 'ಮಹಾಂತ ತಾತನಿಗೆ ಇರು ಅಂದ್ರ ಇರ್‍ಲಿಲ್ಲ, ಒಂದು ಕಡೆ ಇರದು ಪಾಡಲ್ಲ ತಮ್ಮ' ಅಂತ ಹೇಳಿದ. ನಾಯಿ ಅಳುವುದು ನಿಲ್ಲಿಸಲಿಲ್ಲ. 'ಇವನಪ್ಪನ ತಂದು!' ಅಂದು, ದಸ್ತಗಿರಿಯನ್ನು ಎಬ್ಬಿಸಿ ನಾಯಿಯನ್ನು ಓಡಿಸಿ ಬಾ ಎಂದು ಹೇಳಬೇಕೆಂದಾತ ಯಾಕೋ ಹೇಳದೆ ಸುಮ್ಮನಿದ್ದ. ಗೌಡನಿಗೆ ಈ ಒಂಟಿತನ ಸಾಕೆನಿಸಿತು. ಇಷ್ಟ ವರ್ಸದಾಗ ಎಂದೂ ಹಿಂಗ ಅನ್ನಿಸಿದ್ದಿಲ್ಲ. ಹೆಂಡತಿ, ಮಕ್ಕಳು ಮತ್ತೆ ನೆಪ್ಪಾದರು. ಇಂಥ ಪರಿಸ್ಥಿತಿಯಲ್ಲಿ ಹೆಂಡತಿ ಆದ್ರೂ ಜತೆಗಿರಬೇಕು ಅಂತ ಅನ್ನಿಸಿತು. ಆದ್ರೆ ಯಾಕೋ ಬೇಸರ ಬರಲಿಲ್ಲ. 'ಈಗ ಅನಸ್ತದ, ಅವರ ದಾರಿ ಪಾಡಾದ' ಅಂದುಕೊಂಡ. ಗೌಡನ ಪ್ರಾಂತಕ್ಕೆ ಯಾವ ನದಿಯ ಅಣೆಕಟ್ಟಿನಿಂದಲೂ ನೀರು ಹರಿದು ಬಂದು ನೀರಾವರಿ ಆಗಿರಲಿಲ್ಲ. ಆ ಹಿರೇಕೊಳ್ಳದ ನೀರಾವರಿ ಯೋಜನೆ ಜಾರಿಗೆ ಬರಲಿಲ್ಲ. ಹಿರಿಮಗ ಆಗಾಗ ಈ ಯೋಜನೆ ಬಗ್ಗೆ ಹೇಳುತ್ತಿದ್ದ. ಬರುಬರುತ್ತ ಆತನೂ 'ರಾಜಕೀಯ ಇಚ್ಛಾಶಕ್ತಿನೇ ಇಲ್ಲ' ಅಂತ ಬೇಸರ ಮಾಡಿಕೊಂಡು ಮರೆತಿದ್ದ. ಗೌಡನಿಗೆ ಮಾತ್ರ ಅದು ಬರುವ, ಬರದೇ ಇರುವ ಬಗ್ಗೆ ಯಾವ ಕನಸು ಕಟ್ಟಿರಲಿಲ್ಲ. ಗೌಡನ ಪ್ರಾಂತ ಮಳೆ ನೀರಿಗೆ ಜೀವ ಹಿಡಿದಿತ್ತು. ಪೂರ್ವಕ್ಕೆ ಗುಡ್ಡಗಾಡು, ಅದೂ ಬರಡು. ಉಳಿದಂತೆ ಸಣ್ಣಪುಟ್ಟ ಗುಡ್ಡಗಾಡುಗಳ ನಡುವೆ ವ್ಯವಸಾಯದ ಭೂಮಿ. ಗೌಡನ ಪ್ರಾಂತಕ್ಕೆ ಮುಂಗಾರು ಮಳೆ ಕಮ್ಮಿ ಬಂದಷ್ಟು ಮಳೆಗೆ ಜಮೀನುಗಳನ್ನು ಹರಗಿ ಹಸನ ಮಾಡಿಟ್ಟುಕೊಂಡರೆ ಹಿಂಗಾರಿ ಮಳೆಗೆ ಬಿತ್ತುವುದು ನಡೆಯುತ್ತಿತ್ತು. ಹತ್ತಿ, ಬಿಳಿಜೋಳದ ಬೆಳೆಯೇ ಹೆಚ್ಚು.

ಗೌಡನ ಒಕ್ಕಲುತನ ಸರಳಯಿತ್ತು. ಮುಂಗಾರಿ ಮಳೆಗೆ ಜಮೀನು ಹರಗಿಸುತ್ತಿದ್ದ. ಹಿಂಗಾರಿ ಮಳೆಗೆ ಬೀಜ ಬಿತ್ತಿಸುತ್ತಿದ್ದ. ಬೆಳೆಯನ್ನು ಕಾಯ್ದುಕೊಂಡು ಕಣ ಮಾಡಿಸುತ್ತಿದ್ದ. ಆಳುಕಾಳುಗಳಿಗೆ ವರ್ಷಕ್ಕೆ ಆಗುವಷ್ಟು ಕಾಳುಕಡಿ ಹಂಚಿ, ದನಕರುಗಳಿಗೆ ಮೇವು ಕೂಡಿಸಿಟ್ಟು, ಅಯಗಾರರಿಗೆ ಕಾಳುಕಡಿ ನೀಡಿ ನಿರುಮ್ಮಳಾಗಿ ಇರುತ್ತಿದ್ದ. ವರ್ಷದಲ್ಲಿ ಊರು, ಅಕ್ಕಪಕ್ಕದ ಊರುಗಳಲ್ಲಿ ನಡೆಯುವ ಉತ್ಸವ, ಪುರಾಣ, ಪ್ರವಚನಗಳಿಗೆ ತಕ್ಕಷ್ಟು ಕಾಣಿಕೆ ನೀಡುತ್ತಿದ್ದ. ಜಾತ್ರೆಗಳಿಗೆ ಹೋಗಿಬರುತ್ತಿದ್ದ. ಸಂಬಂಧಿಕರ ಮನೆಗಳಲ್ಲಿ ಮದುವೆಯಾದರೆ ಹೋಗಿಬರುತ್ತಿದ್ದ. ಮನೆಯ ಜೀತದಾಳುಗಳ ಮನೆಯಲ್ಲಿ ಮದುವೆಗಳಾದರೆ ನೆರವಾಗುತ್ತಿದ್ದ.

ಗೌಡನಿಗೆ ಪುರುಸೊತ್ತೇ ಇರುತ್ತಿರಲಿಲ್ಲ. ಉಗಾದಿ ಮುಂದ ಈ ಪ್ರಾಂತಕ್ಕೆ ಮುಂಗಾರು ಮಳೆ ಬಿದ್ದರೆ ಭೂಮಿ ಹಸನಕ್ಕೆ ಹರಗುವುದು ಶುರುವಾಗುತ್ತಿತ್ತು. ಗೌಡನ ಜಮೀನು ಒಂದು ಸಲ ಹರಗಲು ಹತ್ತು ಹನ್ನೆರಡು ಗಳೇವುಗಳಿಗೆ ಒಂದೂವರೆ ತಿಂಗಳು ದಗದ ನಡಿತಿತ್ತು. ಎರಡು ಸಲವಾದರೂ ಹರಗುವುದು ವಾಡಿಕೆ. ಅಂದರೆ ಮಾತ್ರ ಜಮೀನು ಹದಗೊಂಡು ಹಿಂಗಾರಿಗೆ ಬೀಜ ಕಾಣಿಸಲು ಬರುತ್ತಿತ್ತು. ಗಳೇವು



ಶುರುವಾದರೆ ಗೌಡ ಎಲ್ಲ ಜಮೀನುಗಳಿಗೆ ತಪ್ಪದೆ ಅಡ್ಡಾಡುತ್ತಿದ್ದ. ಬೆಳಗಿನ ಜಾವ ಮನೆಯಿಂದ ಹೊರಬಿದ್ದರೆ ಹೊತ್ತು ಮುಳುಗಿದ ಮ್ಯಾಲೆಯೇ ಮನೆ ಸೇರುತ್ತಿದ್ದ. ಇಡೀ ದಿನ ಹರಗುವ ಹೊಲಗಳಿಗೆ ಹೋಗಿ, ಎತ್ತುಗಳನ್ನು, ಜೀತದಾಳುಗಳನ್ನು, ಹೊಲಗಳ ಬದು, ಮ್ಯಾರೆ, ತಗ್ಗು ಬಗಡೆ ಎಲ್ಲವುಗಳನ್ನು ಗಮನವಿಟ್ಟು ನೋಡಿಕೊಂಡು, ನಿಗಾ ಮಾಡಿ ಬರುತ್ತಿದ್ದ. ಹೂಗಾರ ನೀಲಮ್ಮ-ರಾಮಣ್ಣ ದಂಪತಿಗಳು ಗೌಡನಿಗೆ ಅಡಿಗೆ ಮಾಡುವುದು, ಮನೆಕೆಲಸ, ಗೌಡನ ಪರಾಮರಿಕೆ ಮಾಡುತ್ತಿದ್ದರು. ಗೌಡ ಜಮೀನು ಸುತ್ತಲು ಹೊರಟರೆ ರಾಮಣ್ಣ ಹೊತ್ತಿಗೆ ಸರಿಯಾಗಿ ಬುತ್ತಿ, ನೀರು ಒದಗಿಸುತ್ತಿದ್ದ. ಹರಗುವುದು ಮುಗಿದು, ಮಳೆ ಕಾಯ್ದು, ಬೀಜ ಬಿತ್ತುವ ಕೂರಿಗೆ ಸಾಗಿದರೆ ಸಾಕು, ಆಗಂತೂ ಗೌಡ ಉಮೇದಿಯಿಂದ ಬಿತ್ತುವ ಹೊಲಗಳಿಗೆ ಅಡ್ಡಾಡಲು ನಿಂತರೆ, ಬಿತ್ತುವುದು ಮುಗಿವ ತನಕ ಸರಿಯಾಗಿ ನಿದ್ದೆ ಮಾಡುತ್ತಿರಲಿಲ್ಲ. ಸಾಮಾನ್ಯವಾಗಿ ಬಡಿಗೇರ ಈರಣ್ಣ ಹೆಗಲ ಮ್ಯಾಲೆ ಬಾಳಚಿ, ಚೀಲದಲ್ಲಿ ಚಕ್ಕೆಗಳನ್ನು ಹೊತ್ತು ಶರಭನಗೌಡನಿಂದ ಹೊಲಹೊಲ ಅಡ್ಡಾಡುತ್ತಿದ್ದ. ಗಳೇವುಗಳು ನಿರಾತಂಕವಾಗಿ ಸಾಗುವುದನ್ನು ನೋಡುತ್ತಿದ್ದ. ಕೂರಿಗೆ, ಕುಂಟೆಗಳು ಕಡಿದು ಬಳಿದು ಆಗಿದ್ದರೆ ಅದನ್ನು ಅಲ್ಲೆ ಸರಿಪಡಿಸಿಕೊಡುತ್ತಿದ್ದ ಈರಣ್ಣ.

ಬಿತ್ತುವುದು ಮುಗಿದು ಬೆಳೆ ಚಿಗುರುವುದನ್ನು, ಮೇಲೇಳುವುದನ್ನು ನೋಡುತ್ತ ಗೌಡ ತಿರುಗುತ್ತಿದ್ದ. ಮಾರ್ನಾಮಿ, ಎಳ್ಳಮಾಸಿ, ಅಮೃತಮಾಸಿವರೆಗೆ ಬಿಳಿಜೋಳದ ಹೊಲಗಳಲ್ಲಿ ಅಲೆಯುವುದು ಗೌಡನ ವಾಡಿಕೆ. ಈ ದಿನಗಳಲ್ಲಿ ಕೆಲವು ದಿನ ಮಹಾಂತ ತಾತ ಗೌಡನ ಮನೆಯಲ್ಲಿರುತ್ತಿದ್ದನು. ಸದಾ ಸಂಗಮನಾಥನ ಧ್ಯಾನದಲ್ಲಿರುತ್ತ, ಗೌಡನಿಗೆ ಅಧ್ಯಾತ್ಮದ ಅನುಭವ ಮಾಡಿಸುತ್ತಿದ್ದ. ಸಂಸಾರ ಬಿಟ್ಟಿರುತ್ತಿದ್ದ ಗೌಡನಿಗೆ ಮಹಾಂತ ತಾತನ ಅಧ್ಯಾತ್ಮ ಸಂಗತಿಗಳು ರುಚಿಸುತ್ತಿದ್ದವು. ಶಿವರಾತ್ರಿ ಎಡಬಲದ ಹೊತ್ತಿಗೆ ಗೌಡನ ಜಮೀನಿನಲ್ಲಿ ಬಿಳಿಜೋಳದ ಕಣಗಳು ನಡೆಯುತ್ತಿದ್ದವು. ಒಂದು ತಿಂಗಳು ಪುರುಸೊತ್ತಿಲ್ಲದೆ ಕಣದ ನಿಗಾ ಮಾಡುತ್ತಿದ್ದ, ರಾಶಿ ಮನೆಗೆ ಬರುವ ತನಕ. ಬೇಸಿಗೆಯಲ್ಲಿ ಜಾತ್ರೆ ಶುರುವಾದರೆ ಗೌಡ ಖುಷಿಯಿಂದ ಆಳುಕಾಳುಗಳ ಜತೆ ಬಂಡಿಯಲ್ಲಿ ಜಾತ್ರೆಗಳಿಗೆ ತಿರುಗುತ್ತಿದ್ದ. ಎತ್ತುಗಳನ್ನು ಮಾರುವುದು, ಇ[illegible] ಕೊಳ್ಳುವುದು, ಜೀತದವರಿಗೆ ಕಂಬಳಿ, ಹಾಸಿಗೆ, ಬಟ್ಟೆಬರೆ ಕೊಡಿಸುತ್ತಿದ್ದ. ಈಗ್ಗ ಹತ್ತ[illegible] ಹದಿನೈದು ವರ್ಷಗಳಿಂದ ಈ ಸಂಭ್ರಮ ನಿಂತೇಹೋಗಿತ್ತು... ನರಿಗಳ ಕೂಗು ಗೌಡನ ನೆನಪುಗಳಿಗೆ ಅಡ್ಡಿಯಾಯ್ತು. ಹತ್ತಾರು ನರಿಗಳ ಹಿಂಡು ಊರ ಸಮೀಪ[illegible] ಬಂದು ಕೂಗುತ್ತಿದ್ದವು. ಗೌಡನಿಗೆ ಯಾಕೋ ಸಿಟ್ಟು ಬಂತು. ಪಲ್ಲಂಗದಿಂದ ಇಳಿದ[illegible] ನಿಂತು, ಎಡಕೈಯಿಂದ ಪಂಚೆಯ ಕೊನೆಸೆರಗು ಹುಡುಕಿಕೊಂಡು, ಬಲಗೈ ನೆರವಿಲ್ಲದ[illegible] ಬರೀ ಎಡಗೈಯಿಂದ ಗಂಟು ಹಾಕಿದ. ನರಿಗಳು ಕೂಗು ಮೆಲ್ಲಕ ನಿಂತುಹೋಯಿತು[illegible] ಗೌಡನಿಗೆ ಸಿಟ್ಟು ಇಳಿಯಿತು. ರಾತ್ರಿ ನರಿಗಳು ಕೂಗಿದಾಗ ಹೀಗೆ ಮಾಡಿದರೆ ಕೂಗು ನಿಲ್ಲುತ್ತಿತ್ತು. ಗೌಡನಿಗೆ ಹೀಗೆ ಮಾಡುವುದು ವಾಡಿಕೆಯಿತ್ತು. ಮತ್ತೆ ನೀರು ಕುಡಿದು[illegible] ಬಚ್ಚಲಿಗೆ ಹೋಗಿ ಕಾಲುಮಡಿದು ಬಂದು ಮಲಗಿದ. ನಿದ್ದೆ ಬರುವಂಗ ಕಾಣಲಿಲ್ಲ[illegible] ದಣಿವು ಮಾತ್ರ ಹೆಚ್ಚಾದಂತನಿಸಿತು.

ಗೌಡನಿಗೆ ಐವತ್ತು ದಾಟಿದಾಗ, ಅದೇ ವರ್ಷವಿರಬೇಕು, ಆ ಪ್ರಾಂತದ[illegible] ಅತಿಯಾದ ಮಳೆಯಾಯ್ತು. ಮಳೆ ಒಂದು ಉಗಾದಿಗೆ ಶುರುವಾದದ್ದು ಮುಂಗಾರು ಕೂಡಿಕೊಂಡು ಹಿಂಗಾರು ಮುಗಿದರೂ ಬಿಡಲಿಲ್ಲ. ಮಳೆ ಹೊರಪಾದದ್ದು ಎಳ್ಳಮಾ[illegible] ದಾಟಿದ ಮ್ಯಾಲೆ. ಗೌಡ ಮನೆಯಲ್ಲೇ ಇರಬೇಕಾಗಿಬಂತು. ಜಮೀನುಗಳ[illegible] ಮೊಣಕಾಲು ಮಟ್ಟ ಹುಲ್ಲು, ನಡುವಿನ ಮಟ್ಟ ಗಿಡಗಳು ಬೆಳೆದವು. ಪ್ರಾಂತದ[illegible] ಹಸಿಬರ ಬಿತ್ತು. ಕೇರಿ ಮಂದಿ ದುಡಿಯಲು ಸೊಲ್ಲಾಪುರ, ಪುಣೆ, ಮುಂಬಯಿ ಕ[illegible] ವಲಸೆ ಹೋದರು. ಗೌಡನ ಜೀತದಾಳುಗಳು ಮಾತ್ರ ಊರಲ್ಲಿ ಉಳಿದಿದ್ದರು. ಮ[illegible] ಹೊರಪಾಗಿ ಜಮೀನು ಆರುವುದಕ್ಕೆ ವ್ಯಾಳ್ಯಾ ಹಿಡಿದಿತ್ತು. ಗೌಡರು ಜಮೀನುಗಳನ್ನು ಹದಗೊಳಿಸಲು ಚಿಂತೆ ಮಾಡಿದರು. ಈ ಸುದ್ದಿ ತಿಳಿದು ಹಿರಿಮಗ, ಹೆಂಡತಿ ಊರಿಗೆ ಬಂದರು. ಹಸಿಬರದಿಂದ ಗೌಡನ ಒಕ್ಕಲತನ ಹದಗೆಟ್ಟಿತ್ತು. ಮಗ, ಹೆಂಡತಿ ಚರ್ಚೆ ಮಾಡಿದರು. ಟ್ರ್ಯಾಕ್ಟರ್ ತಂದರು. ಎತ್ತುಗಳಿಂದ ವ್ಯವಸಾಯ ನಿಂತಿತು. ಮನೆಯಲ್ಲಿ ಎತ್ತುಗಳು, ದನಕರುಗಳು ಕಮ್ಮಿಯಾದವು. ಜೀತದಾಳುಗಳಲ್ಲಿ ಅನೇಕರನ್ನು ಕೈಬಿಟ್ಟರು.

ಗೌಡನ ಕಣ್ಣ ಮುಂದೆಯೇ ವ್ಯವಸಾಯದ ರೀತಿ ಬದಲಾಯಿತು. ಕಲ್ಲಿನ ದೊಡ್ಡ ಮನೆಗೆ ಕರೆಂಟು ಬಂತು. ಮಗ ವಾರ ಕಾಲವಿದ್ದು ಹೋಗಿದ್ದ. ಹೆಂಡತಿ ಮೂರು ತಿಂಗಳಿದ್ದಳು. ನಂತರ ಮಗನ ಹೆಂಡತಿಯ ಹೆರಿಗೆ ಬಂತೆಂದು ದೆಹಲಿಗೆ ಹೋಗಿಬಿಟ್ಟಳು. ಗೌಡನಿಗೆ ಅರ್ಧ ಖುಷಿ, ಅರ್ಧ ವ್ಯಸನ. ಬದುಕಿನ ಲಯ ತಪ್ಪಿದಂತೆ ಅನ್ನಿಸಿತು. ಟ್ರ್ಯಾಕ್ಟರ್ ಒಂದೇ ಗೌಡನ ಜಮೀನುಗಳನ್ನು ಕಣ್ಣು ಕುಕ್ಕುವಂತೆ ಕೆಲಸ ಮಾಡಿತ್ತು. ಆದರೆ ಮನೆಯಲ್ಲಿ ದನಕರಗಳಿಲ್ಲ. ಆಳುಗಳು ಇಲ್ಲ. ಇದ್ದರೂ ಇಬ್ಬರು ಮೂವ್ವರು ಮಾತ್ರ. ಗೌಡರ ಸ್ವಭಾವವೆಂದರೆ ತಮಾಸೆ ಮಾಡಿಕೊಂಡು ಅಡ್ಡಾಡುವುದು. ಈಗ ಅದೂ ತಪ್ಪಿತು. ಮನೆಯಲ್ಲಿ ಕಣ್ಣು ಕುಕ್ಕುವ ಲೈಟಿನ ಬೆಳಕು ಗೌಡನಿಗೆ ಆಗಿಬರಲಿಲ್ಲ. ಕೊನೆಗೆ ಪಡಸಾಲೆಯಲ್ಲಿ ಕಂದೀಲು ಬೆಳಕು ಇರಲೆಂದು ಹಾಕಿಸಿಕೊಂಡ. ಹರಗುವಾಗ, ಬಿತ್ತುವಾಗ, ಬೆಳೆ ಬೆಳೆಯುವಾಗ ಗೌಡ ಹೊಲ ಹೊಲ ಅಡ್ಡಾಡುತ್ತಿದ್ದನಲ್ಲ ಅದು ಕಮ್ಮಿಯಾಗಿಹೋಯಿತು. ಜೋಳದ ಕಣಗಳೂ ವಾರದಲ್ಲಿ ಮುಗಿಯುತ್ತಿದ್ದವು. ಗೌಡನಿಗೆ ಏನೋ ಕಳಕೊಂಡಂತೆ ಅನ್ನಿಸುತ್ತಿತ್ತು. 'ಥೂತ್ ಇವನಪ್ಪನ' ಅಂತ ಚಿಂತೆಗೀಡಾಗುತ್ತಿದ್ದನು.

ಗೌಡನ ಪ್ರಾಂತದಲ್ಲಿ ವರ್ಷಗಳು ಕಳೆದಂತೆ ಮಳೆ ಕಮ್ಮಿಯಾಗತೊಡಗಿತ್ತು. ಗುಳೆ ಹೋಗುವ ಜನರು ಹೆಚ್ಚಾದರು. ಊರು ಬಿಟ್ಟು ಹೋಗುವಾಗ ಇರುವ ಚೂರುಚಾರು ಭೂಮಿಯನ್ನು ಗೌಡನಿಗೆ ಒತ್ತೆಯಿಟ್ಟು ಇಲ್ಲ ಮಾರಿ ಹೋಗುತ್ತಿದ್ದರು. ಗೌಡನಿಗೆ ಭೂಮಿ ಕೊಳ್ಳುವ ಮನಸ್ಸಿದ್ದರೂ ಅದನ್ನು ನಿಭಾಯಿಸುವ ಶಕ್ತಿ ಕಮ್ಮಿಯಾಗುತ್ತಿತ್ತು. ಮಕ್ಕಳಿಗೆ ಗೌಡನ ಆಸ್ತಿಮ್ಯಾಲೆ ಗಮನ ಇರಲಿಲ್ಲ. ತಂದೆ ಎಂಬ ಕಕ್ಕುಲಾತಿಗೆ ಹಿರಿಮಗ ಸಂಪರ್ಕ ಇಟ್ಟುಕೊಂಡಿದ್ದಷ್ಟೆ. ಬಡವರು ಬಂದು ಭೂಮಿ ಮಾರುವಾಗ ಕೊಳ್ಳಲು ಅಳಕುತ್ತಿದ್ದ. ಆದರೂ ಗೌಡ ಒಲ್ಲದ ಮನಸ್ಸಿನಿಂದ ಆಗಾಗ ಕೊಂಡು ಹಾಕಿದ್ದು ಹಿರಿಮಗನಿಗೆ ಸರಿಬರಲಿಲ್ಲ. ಮೇಲಾಗಿ ಗೌಡನ ಬದಲಾದ ಒಕ್ಕಲತನ, ಬದಲಾದ ಕಾಲಮಾನದ ಜತೆಗೆ ವ್ಯವಹಾರ ಮಾಡಲು ಸಾಧ್ಯವಾಗಲಿಲ್ಲ. ಗೌಡ ಬೆಳೆದ ಬೆಳೆಯೆಲ್ಲ ಜಿಲ್ಲಾ ಕೇಂದ್ರದಲ್ಲಿದ್ದ ಚಿಕ್ಕಪ್ಪನ ಮಕ್ಕಳು ನಡೆಸುತ್ತಿದ್ದ ಅಡತಿ ಅಂಗಡಿಗೆ ಹೋಗುತ್ತಿತ್ತು. ಚಿಕ್ಕಪ್ಪನ ಮಕ್ಕಳಾದ್ದರಿಂದ ಗೌಡನ ವ್ಯವಹಾರ ಅಲ್ಲಿ ಜತನದಿಂದ ನಡಿತಿತ್ತು. ಈಗ್ಯ ಏಳೆಂಟು ವರ್ಷಗಳಿಂದ ಕರ್ಚುಗಳೇ ಹೆಚ್ಚಾಗಿ ಬಾಕಿ ಉಳಿಯುತ್ತಿತ್ತು. ಸಾಲದ ಗಂಟು ಏರಿದ್ದನ್ನು ಗೌಡನ ಗಮನಕ್ಕೆ ತಂದರು. ವ್ಯವಸಾಯ ಜಗ್ಗಿದರೂ ಮುಂದಕ್ಕೆ ಹೋಗದಂತಾಯ್ತು. 'ಥತ್ ಇವನಪ್ಪನ ತಂದು! ನಮ್ಮ ಕಾಲ ಪಾಡಿತ್ತು!' ಅನ್ನಲು ಗೌಡ ಶುರುಮಾಡಿದ್ದ. ಆದರೂ ಗೌಡ ಊರು ಬುಡಲಿಲ್ಲ. ಒಕ್ಕಲತನ ಮಾಡಿಸುತ್ತ ದೂರದ ಮಕ್ಕಳು, ಹೆಂಡತಿಯಿಂದ ಯೋಗಕ್ಷೇಮ ಸಮಾಚಾರ ಕೇಳಿಕೊಂಡು ನಿರುಮ್ಮಳವಾಗಿ ಇರಲು ಹೆಣಗುತ್ತಿದ್ದ.

ಗೌಡನಿಗೆ ಮೂವ್ವರ ಮಕ್ಕಳ ಸುದ್ದಿಯನ್ನು ಹೆಂಡತಿ ಹೇಳುತ್ತಿದ್ದಳು. ಗೌಡನಿಗೆ ಸರಿಗೆ ನೆಪ್ಪಿಲ್ಲ. ಆರೇಳು ವರ್ಷಗಳ ಹಿಂದೆ ಇರಬೇಕು. ಮಗಳು ಫೋನ್ ಮಾಡಿದಳು. 'ಅಪ್ಪ, ನಾನು ಶಶೀ..ಶಶಿಕಲಾ ಚೆನ್ನಾಗಿದ್ದಿ ಏನು ?' ಅಂತ ಕೇಳಿದಳು. ಗೌಡನಿಗೆ ಜಲ್ದಿ ಮಗಳೆಂದು ಗೊತ್ತಾಗಲಿಲ್ಲ. 'ಎಲ್ಲಿಂದ ತಾಯೀ ? ಊರಿಗೆ ಬಂದು ಹೋಗವ್ವ' ಅಂತ ಕರೆದರೆ, 'ಅಪ್ಪಾ, ಊರಿಗೆ ಬರಲು ಹನ್ನೆರಡು ಗಂಟೆ ಪ್ರಯಾಣ ಮಾಡ್ಬೇಕು. ನಾನು ಬೆಂಗಳೂರಿಗೆ ಬಂದಿದ್ದೀನಿ. ನೀನೇ ಬಂದು ಹೋಗು' ಅಂದಳು. ಸಣ್ಣವ ವರ್ಷಕ್ಕೆ ಒಮ್ಮೆಯಂತೂ ಗೌಡನಿಗೆ ಫೋನ್ ಮಾಡ್ತಿದ್ದ. ಅವನು ತನ್ನ ಗುಣಸ್ವಭಾವ ಹೊಂದಿದ್ದ. ತಮಾಸೆ ಮಾಡೋದೇ ಅವನ ಗುಣ. 'ಅಪ್ಪ, ಊರಿಗೆ ಸರಕಾರಿ ಕೆಂಪು ಬಸ್ಸು ಬರ್ತದೇನು, ಈಗಾದ್ರು ?' ಅಂತ ಕೇಳ್ತಿದ್ದ. 'ನಿನ್ನ ಜೀಪು, ಟ್ರ್ಯಾಕ್ಟರ್ ಪಂಕ್ಚರ್ ಆದ್ರೆ ಎಲ್ಲಿಗೆ ನೂಕಿಕೊಂಡು ಹೋಗಿ ರಿಪೇರಿ ಮಾಡಿಸ್ತಿದ್ದಿ ?' ಅಂತ ನಗುತ್ತಿದ್ದ. 'ಅಪ್ಪ, ತಂಬಿಗೆ ತಗಂಡು ಬೆಳಿಗ್ಗೆ ಹೊರಗೆ ಹೋಗಿ ಬರೋದು ಇನ್ನೂ ನಡದದೇನು ? ಅಪ್ಪ, ಊರಲ್ಲಿ ನೀನಿರೋ ಮನೆ ಸೂಪರ್ಬ್. ಇಂಗ್ಲೆಂಡಿನಲ್ಲಿ ಇಲ್ಲ, ಅಮೆರಿಕಾದಲ್ಲಿ ಇಲ್ಲ, ಭಾರತದಲ್ಲಿ, ಅದೂ ನಮ್ಮೂರಲ್ಲಿ ನೀನಿರುವ ಮನೆ ಬಾಳ ಚಂದ' ಅಂತ ಹೇಳುತ್ತಿದ್ದ. 'ಅದೆಲ್ಲ ಸರಿ, ಊರಿಗೆ ಬಾ ಮತ್ತೆ' ಎಂದು ಗೌಡ ಕರೆದರೆ, 'ಅಪ್ಪ, ಆಗಾಗ ಕನಸು ಬೀಳುತ್ತವೆ, ನನ್ನೂರಿನಲ್ಲಿದ್ದಂತೆ ಕನಸು ಕಂಡಿದ್ದೀನಿ' ಅಂತೇಳಿ ನಗುತ್ತಿದ್ದ. ಗೌಡನಿಗೆ ನಗು ಬರ್ತಿತ್ತು. ವ್ಯಸನವೂ ಆಗ್ತಿತ್ತು. ಅವನು ಮಾತ್ರ ಊರಿಗೆ ಬರಲಿಲ್ಲ. ನಾಲ್ಕು ವರ್ಷದ ಹಿಂದೆ ಒಂದು ದಿನ ದಸ್ತಗಿರಿ ಫೋನ್ ತಂದುಕೊಟ್ಟ. 'ಅಪ್ಪ, ನೀನು ಇನ್ನು ಮೇಲಿಂದ ಊರು ಬಿಟ್ಟು ದೆಹಲಿಗೆ ಬಂದು ಅಣ್ಣನಲ್ಲಿರು. ನಿನ್ನ ಊರು ಈಗ ಸುರಕ್ಷಿತ ಇಲ್ಲ. ನಾನು ಅಣ್ಣನ ಜತೆ, ಅಮ್ಮನ ಜತೆ ಮಾತಾಡಿದ್ದೀನಿ' ಅಂತ ಫೋನಿನಲ್ಲಿ ಹೇಳಿದ್ದ.

ಗೌಡನಿಗೆ ಸಣ್ಣವ ಹೇಳಿದ್ದು ನೆನಪಿನಲ್ಲಿ ಹಸಿಯಾಗಿತ್ತು. ಗೌಡ ದಿಗ್ಗನೆದ್ದು ಕುಂತ. 'ಅಲಾ ಇವನಪ್ಪನ!' ಅಂದುಕೊಂಡು ಆಶ್ಚರ್ಯಪಟ್ಟ. ದೇಶಬಿಟ್ಟು ದೂರದಾಗ ಇರುವ ಮಕ್ಕಳಿಗೆ, ನಮ್ಮೂರ ಗುಡ್ಡಗಾಡುಗಳಲ್ಲಿ ತಳವೂರಿಕೊಂಡಿದ್ದ ಬಂಡುಕೋರರ ಬಗ್ಗೆ ನನ್ಗಿಂತ ಮೊದ್ಲು ಸುದ್ದಿ ತಿಳಿದಿತ್ತಲ್ಲ! ನನ್ನೂರ ಕುಂಡೇಬುಡಕ್ಕ ಇರುವ ಸಮಾಚಾರ ನನ್ಗ ತಿಳಿದಿದ್ದಿಲ್ಲ. ಮಗ ತಿಳಿಸಿದಾಗ ಗೌಡನಿಗೆ ಅದರ ಬಿಸಿ ಗೊತ್ತಾಗಲಿಲ್ಲ. ಹಿರಿಮಗ, ಹೆಂಡತಿ ಅದೇ ಬೇಸಿಗೆಯಲ್ಲಿ ಬಂದರು. ಹಿರಿಮಗ ಮ್ಯಾಲಿಂದ ಮ್ಯಾಲೆ ಹೇಳುತ್ತಿದ್ದ. ಭಯೋತ್ಪಾದಕರು ಎಂಬ ಮಾತು ಗೌಡನಿಗೆ ನೆನಪಿನಲ್ಲಿ ಉಳಿತಿದ್ದಿಲ್ಲ. 'ಕಳ್ಳರೇನು ?' ಅಂತ ಗೌಡ ಕೇಳಿದರೆ, 'ಅಲ್ಲಪ್ಪ, ಅವರು ಕಳ್ಳರಲ್ಲ, ಅವರ ಗುರಿಗಳು ಬೇರೆ. ಅವರು ನಿನ್ನನ್ನು ಫ್ಯೂಡಲ್ ಅಂದೇ ತಿಳಿತಾರ' ಎಂದು ಮಗ ಕೆಲ ಸಂಗತಿಗಳನ್ನು ವಿವರಿಸಿ ಹೇಳಿದ್ದ. ಹೆಂಡತಿಯಂತೂ ದೆಹಲಿಗೆ ಬಂದಿರಲು ಒತ್ತಾಯಿಸಿದಳು. ಹಿರಿಮಗ ಊರಲ್ಲಿ ತಮ್ಮ ಜಮೀನುಗಳನ್ನು ಸುತ್ತಾಡಿ ನೋಡಿ ಗಾಬರಿಯಾದ. 'ಅಪ್ಪ, ಇದ್ದುಬಿದ್ದವರ ಭೂಮಿಯನ್ನು ಕೊಂಡುಹಾಕಿದ್ದಿ. ಇದರ ಅಗತ್ಯ ಏನಿತ್ತು ? ಇದನ್ನು ಯಾರು ರಕ್ಷಿಸಬೇಕು. ಬಹಳ ತಲೆನೋವಿನ ವಿಚಾರ' ಎಂದು ಬೇಸರ ಮಾಡಿಕೊಂಡ. 'ನನ್ಗ ಜಮೀನು, ವ್ಯವಸಾಯ ಮಾತ್ರ ಗೊತ್ತದ. ಇದೆಲ್ಲ ನಿಮ್ಗೆ ಅಲ್ಲೇನು ? ನನ್ನನ್ನು ಡೆಲ್ಲಿಗೆ ಕರಕಂಡು ಹೋಗುವ ಬದ್ಲು ನೀನೇ ಬಂದಿದ್ದು ವ್ಯವಸಾಯ ಮಾಡು. ಇಷ್ಟು ದಿನ ಇದ್ದದ್ದು ಸಾಕು' ಅಂತ ಗೌಡ ಹೇಳಿದಾಗ, 'ಅಪ್ಪ, ನಿನ್ಗ ಕೆಲವು ವಿಷಯಗಳು ತಿಳಿಯುವುದಿಲ್ಲ. ನಿನ್ನ ವ್ಯವಸಾಯದ ಒಂದು ವರ್ಷದ ಉತ್ಪನ್ನ ಏನಿದೆ, ಅದು ನನ್ನ ಒಂದು ತಿಂಗಳ ಗಳಿಕೆಗೆ ಸಮಯಿಲ್ಲ. ಏನೋ ನಿನ್ನ ಸ್ವಭಾವ ನಗರಕ್ಕೆ ಒಗ್ಗುವುದಿಲ್ಲ. ಹಳ್ಳಿಯಲ್ಲಿ ನೆಮ್ಮದಿಯಿಂದ ಇರುವ ನಿನ್ನ ಸ್ವಭಾವ ಡಾಕ್ಟರ್ ಆಗಿ ನಾನು ಅರಿತಿದ್ದೀನಿ. ವ್ಯವಸಾಯದಲ್ಲಿ ಸುಖವಿಲ್ಲ. ಹೀಗೆ ಮುಂದುವರಿದರೆ ನೀನು ಭಾರಿ ಸಾಲಗಾರ ಆಗ್ತಿದ್ದಿ. ಹೋಗಿ ನೋಡು ಅಡತಿ ಅಂಗಡಿಯಲ್ಲಿ ನಿನ್ನ ವ್ಯವಹಾರ ಎಲ್ಲ ಮೈಮೇಲೆ ಬಂದಿದೆ. ಆದರೂ ನೀನು ಫ್ಯೂಡಲ್. ಭಯೋತ್ಪಾದನೆ ನಿನ್ನ ಊರಿಗೂ ಬಂದಿದೆ. ನಿನ್ನ ಮೇಲೆ ನಿಗಾ ಇಡುವುದು ನನ್ನಿಂದ ಸುಲಭಯಿಲ್ಲ' ಎಂದು ಮಗ ಒಂದು ವಾರ ಮಾತುಕತೆ ಮಾಡಿದ. 'ಇವನಪ್ಪನ ತಂದು!' ಎಂದು ದೆಸೆಗೆಟ್ಟು ಕುಂತ ಗೌಡ. ಹೆಂಡತಿ, ಮಗ ಗೌಡನ ರಕ್ಷಣೆಗೆ ವ್ಯವಸ್ಥೆ ಮಾಡಿ, ಸರಕಾರದ ಅಧಿಕಾರಿಗಳ ಜತೆ, ಪೊಲೀಸರ ಜತೆ ಮಾತಾಡಿ ದೆಹಲಿಗೆ ಹೋದರು.

ಜಮೀನುಗಳಿಗೆ ಅಡ್ಡಾಡುವುದು ಕಮ್ಮಿಯಾದ ಮ್ಯಾಲೆ, ದಿನಾಲು ಮುಂಜಾನೆ ತೋಟದ ಬಾವಿಗೆ ಹೋಗಿ ಈಜಾಡುವುದು ಗೌಡನಿಗೆ ರೂಢಿಯಾಗಿತ್ತು. ಈಗ್ಯ ವರ್ಷದಿಂದ ಮಗ ನೇಮಿಸಿದ್ದ ಸೆಕ್ಯುರಿಟಿ ಗಾರ್ಡ್ ಹಿಂದಿಂದ ಬರುತ್ತಿದ್ದ. ಗೌಡನಿಗೆ ಅವನ ಬಟ್ಟೆಬರೆ ಕಂಡರೆ ಇರಸುಮುರಸಾಗುತ್ತಿತ್ತು. ಊರ ಮಂದಿ ನಿಂತು ನೋಡುವುದು ಶುರುವಾಗಿತ್ತು. 'ಥೂ ಇವನಪ್ಪನ ತಂದು ! ಇಂಥ ಬಂಧನದ ಬಾಳೇವು ಯಾರಿಗೆ ಬೇಕು ?' ಅಂತ ಕೂಗಾಡಿದ್ದ. ಅದೇ ಸಂದರ್ಭದಲ್ಲಿ ತಾಲೂಕಿನ ಪೊಲೀಸ್ ಅಧಿಕಾರಿ, ತಸೀಲ್ದಾರ ಬಂದು ವಿಚಾರಿಸಿ, 'ಸೆಕ್ಯುರಿಟಿ ಗಾರ್ಡ ಇದ್ದದ್ದು ಒಳ್ಳೆಯದು. ನಮ್ಮ ರಕ್ಷಣೆ ಇರ್ತದ. ಅದಕ್ಕಿಂತ ನೀವೇ ಎಚ್ಚರದಿಂದ ಇರಬೇಕು' ಎಂದು ಮಾತಾಡಿ ಅನೇಕ ವಿಷಯಗಳನ್ನು ತಿಳಿಸಿಹೋಗಿದ್ದರು. ಜಿಲ್ಲಾಧಿಕಾರಿ ಬಂದು ಕಂಡರು. ಎಲ್ಲರೂ ಬಂದು ಬಂದು ಮಾತಾಡಿದ ಫಲವೆಂದರೆ ಗೌಡನನ್ನು ಭಯಗ್ರಸ್ತನನ್ನಾಗಿ ಮಾಡಿದ್ದರು. ಆದರೆ ಗೌಡ ಹೆದರದೆ, 'ಲ್ಹೇ ದಸ್ತಗಿರಿ, ಇಷ್ಟು ವರ್ಷ ಈ ಪ್ರಾಂತದಾಗ ಯಾ ನನ್ನ ಮಕ್ಕಳು 'ಏನು ಗೌಡ' ಅಂದಿಲ್ಲ. ಈಗ ಗುಡ್ಡನಾಗಿದ್ದು ನನ್ನ ಹೆದ್ರುಸ್ತರೇನು ? ನಾನು ನೋಡೇ ಬುಡ್ತೀನಿ' ಎಂದು ಕೂಗಾಡಿದರೂ ಯಾಕೋ ಗೌಡನಿಗೆ ಧೈರ್ಯ ಬರಲಿಲ್ಲ. ಈ ಸಂದರ್ಭದಲ್ಲಿ ಮಾತ್ರ ಗೌಡ 'ದೆಹಲಿಗೆ ಹೋಗಿ ಹೆಂಡತಿ, ಮಗನ ಜತೆಗೆ ಇರುವುದೇ ಪಾಡ' ಅನ್ನಿಸಿತು. ಜಮೀನುಗಳ ವ್ಯವಸಾಯಕ್ಕೆ ಮಗ ಏನಾದರೂ ವ್ಯವಸ್ಥೆ ಮಾಡಿದರೆ ಕೊನೆಪಕ್ಷ ವರ್ಸಾರು ತಿಂಗಳು ಇದ್ದು ಬರಬಹುದು ಅಂತನೂ ಗೌಡ ಚಿಂತಿಸಿದ. ಮಗನ ಕಿವಿಗೆ ಈ ಸಂಗತಿ ಹೇಳಿದ. 'ಅಪ್ಪ, ವಿದೇಶಿ ಕಂಪೆನಿಗಳು ನಮ್ಮೂರ ಸರಹದ್ದಿನಲ್ಲಿ ಸ್ಥಾಪನೆ ಆಗಲಿವೆ. ಆ ಕಂಪೆನಿಗಳಿಗೆ ಬಹಳ ಭೂಮಿ ಬೇಕು. ಆಗ ನಮ್ಮ ಜಮೀನಿಗೆ ಬೆಲೆ ಬರ್ತದ. ವರ್ಷ, ಎರಡು ವರ್ಷ ನೀನು ಸದ್ಯ ಅಲ್ಲಿರು' ಎಂದು ತಿಳಿಸಿದ. ಗೌಡನಿಗೆ ಅದು ಸರಿ ಕಾಣಲಿಲ್ಲ. ಭೂಮಿ ಮಾರಿ, ಊರು ಬಿಟ್ಟು ಹೋಗುವುದನ್ನು ಗೌಡ ನೆನಸಿಕೊಳ್ಳಲೂ ಅಂಜಿದ. ಮಹಾಂತ ತಾತನನ್ನು ಕರೆಸಿಕೊಂಡು ಮಾತುಕತೆ ಆಡಿದ ಮ್ಯಾಲೆ ಗೌಡ ಸಲುಪು ಸಲೀಸಾಗಿ ಉಸಿರಾಡಿದ.

ಗೌಡ ಬಡಬಡಿಸುತ್ತ ಎದ್ದು ಕುಂತ. ಯಾರೋ ಹಿಡಿದು ಅಲುಗಾಡಿಸಿದಂಗ ಆಗಿತ್ತು. 'ಅಲಾ ಇವನಪ್ಪನ ತಂದು' ಅಂತ ಗಾಬರಿಯಾದ. ಗೌಡ ಕಣ್ಣುಮುಚ್ಚಿ ನಿದ್ದೆಗಾಗಿ ಹೆಣಗಿದಾಗ ಫತೇಪುರದ ನರಸನಗೌಡನ ಹೆಣದ ಚಿತ್ರ ಮೂಡಿತ್ತು.

ಅರೆಬರೆ ಕನ್ನಿನಲ್ಲಿ ಹೆಣ ಕಂಡಿತ್ತು. ಗೌಡ ಖರೆ ನೀರೊಡೆದುಬಿಟ್ಟ! ನರಸನಗೌಡ ಕೊಲೆಗೀಡಾದಾಗ ಗೌಡ ಜೀಪಿನಲ್ಲಿ ಹೋಗಿ ಬಂದಿದ್ದ. ಕೊಲೆ ಮಾಡಿದವರು ಈಗ ಗೌಡನಿಗೆ ತಾಕೀತು ಮಾಡುತ್ತಿದ್ದ ಗುಂಪೇ ಆಗಿತ್ತು. ಗೌಡನ ಆಪ್ತರಲ್ಲಿ ನರಸನಗೌಡ ಒಬ್ಬ. ಆತನ ಮನೆಯ ಶುಭಕಾರ್ಯಗಳಿಗೆ ಗೌಡ ಹೋಗಿ ಬರ್ತಿದ್ದ. ಗೌಡನ ಮನೆಯ ಎಲ್ಲ ಕಾರ್ಯಗಳಿಗೆ ನರಸನಗೌಡ ಬಂದುಹೋಗ್ತಿದ್ದ. ಅವರಿಬ್ಬರ ನಡುವೆ ಗೌರವ, ಪ್ರೀತಿ, ಆಪ್ತತೆ ಬೆಳೆದಿತ್ತು. ಸತ್ತ ಸುದ್ದಿ ಕೇಳಿ ಗೌಡ ಬಹಳ ಮರುಗಿದ್ದ. ಜೀವ ತಡಿಯದೆ ಹೋಗಿ ಬಂದಿದ್ದ. ಆ ಮ್ಯಾಲಿಂದ ಗೌಡ ಹೊರಗೆ ತಿರುಗಾಡುವುದು ಕಮ್ಮಿಯಾಯ್ತು. ಈ ಹಿಂದೆ ಮ್ಯಾಲಿಂದ ಮ್ಯಾಲೆ ಗೌಡನಿಗೆ ಕೆಲವು ಅಪರಿಚಿತ ವ್ಯಕ್ತಿಗಳು ಫೋನ್ ಮಾಡಿದ್ದರು. 'ಗೌಡ್ರೇ, ನೀವು ಭಾರಿ ಜಮೀನ್ದಾರರು. ನಿಮ್ಮ ಜಮೀನಿನಲ್ಲಿ ೧೫ರಿಂದ ೨೦ ಭಾಗ ನಿಮ್ಮೂರಿನ ಬಡವರಿಗೆ ಹಂಚಿದರೆ ಭೂರಹಿತರೂ ಅಸ್ತಿತ್ವ ಪಡಿತಾರೆ' ಎಂಬ ಮಾತುಗಳನ್ನು ಕಿವಿಗೆ ಹಾಕಿದ್ದರು. ಗೌಡನು 'ಅಲಾ ಇವನಪ್ಪನ ತಂದು! ನನ್ನ ಭೂಮಿನ್ನ ಪುಗಸಟ್ಟೆ ಬಡವರಿಗೆ ದಾನ ಮಾಡಬೇಕಂತ. ಇದ್ಯಾವ ನ್ಯಾಯ?' ಅಂತ ಅರ್ಧ ಗಮಾತು, ಅರ್ಧ ಗಾಬರಿಯಿಂದ ಚಡಪಡಿಸಿದ್ದ. ನರಸನಗೌಡ ಸತ್ತ ಮ್ಯಾಲೆ ಗೌಡ ಕುಸಿದದ್ದು ಖರೆ. ಜಮೀನುಳ್ಳವರ ಜಮೀನನ್ನು ಕಸಿದು ಬಡವರಿಗೆ ಹಂಚುವ ಗುಂಪಿನವರ ಸಮಾಚಾರವನ್ನು ಗೌಡ ದಿನೇ ದಿನೇ ಅರಿಯತೊಡಗಿದ. ಪತ್ರಿಕೆಗಳನ್ನು ತರಿಸತೊಡಗಿದ. ಶಾಲಾ ಮಾಸ್ತರನೊಬ್ಬನನ್ನು ಕರೆಸಿ ಓದಿಸಿ ಅವರ ಚಟುವಟಿಕೆಗಳನ್ನು ತಿಳಿದುಕೊಂಡ. 'ಇವನಪ್ಪನ ತಂದು! ಅತ್ತೆ ಸೀರೆ ಅಳಿಯ ದಾನ ಮಾಡಿದ ಅಂತಾರಲ್ಲ ಹಂಗ ಇವರ ಲೆಕ್ಕ!' ಅಂತ ಗೌಡ ಆತಂಕ ಪಡುತ್ತಿದ್ದ. ಸುಲ್ತಾನಪುರದಲ್ಲಿ ತಳವಾರ ಯಂಕಪ್ಪನನ್ನು ಕೊಲ್ಲಲಾಯಿತು. ಆಗ ಪೊಲೀಸರು ಸುತ್ತಲ ಜಮೀನ್ದಾರರಿಗೆ ರಕ್ಷಣೆ ಕೊಟ್ಟರು. ಗೌಡನ ಮನೆಯಲ್ಲಿ ವಾರ ಹತ್ತು ದಿನ ಪೊಲೀಸನೊಬ್ಬ ಬಂದೂಕು ಹಿಡಿದು ಮನೆ ಕಾಯ್ದ. ಆಗ ಗೌಡನಿಗೆ ಪೊಲೀಸ ಭಯೋತ್ಪಾದಕರ ಕೆಲಸ ಕಾರ್ಯಗಳನ್ನು ವಿವರಿಸುತ್ತಿದ್ದ.

ಕಳೆದ ಆರು ತಿಂಗಳಿಂದ ಅಮೀನಸಾಬ, ತಹಸೀಲದಾರ, ಜಿಲ್ಲಾಧಿಕಾರಿ ಯಾರ್ಯಾರೋ ಬಂದು ಗೌಡನನ್ನು ಕಂಡು ಮಾತಾಡಿ ಹೋಗುತ್ತಿದ್ದರು. ಗೌಡನಿಗೆ ಅಂಥವರ ಜತೆ ಮಾತುಕತೆಯಾಡಿ ರೂಢಿಯೇ ಇರಲಿಲ್ಲ. 'ಅವರ ಹಿಟ್‌ಲೀಸ್ಟಿನಲ್ಲಿ ನೀವು ಇದ್ದೀರಿ, ಗೌಡ್ರೇ' ಅಂತ ಪೊಲೀಸ ಹೇಳಿದಾಗ, ಗೌಡ 'ಹಂಗಂದ್ರೇನು, ಜವಾನಪ್ಪ?' ಅಂತ ಪ್ರಶ್ನೆ ಹಾಕಿ, ಉತ್ತರ ಕೇಳಿಕೊಂಡು ಬೆದರಿದ್ದ. ಅದಾಗಿ ಸಲುಪು ದಿನದಲ್ಲಿ ದಸ್ತಗಿರಿ ಒಂದು ದಿನ ಮನೆಯಲ್ಲೇ ಕಾಣೆಯಾದ. ಅದ ಕಂಡು ಹೆದರಿ ಸೆಕ್ಯೂರಿಟಿ ಗಾರ್ಡ್ ಕೂಡ ಕೆಲಸ ತೊರೆದು ಹೋಗಿಬಿಟ್ಟ. ಗೌಡ 'ಥೂ ಇವನಪ್ಪನ!' ಅಂತ ಚಿಂತಿಸಿದ. ಮರುದಿನ ಹೌಹಾರಿ ಬಂದ ದಸ್ತಗಿರಿ ಒಂದು ಸಮಾಚಾರವನ್ನು ಕೊಟ್ಟ. ಗೌಡ ಅದನ್ನು ಮಹಾಂತ ತಾತನನ್ನು ಕರೆಸಿ ಮಾತಾಡಿದ. ಎರಡು ಮೂರು ದಿನ ಮಾತುಕತೆ ನಡೆದವು. ಗೌಡನಿಗೆ ಎಂಥದೋ ಸಮಾಧಾನ ವಾಯ್ತು. ದಸ್ತಗಿರಿ ತಂದ ಸಮಾಚಾರ ಕೇಳಿ ಪೊಲೀಸ ಅಧಿಕಾರಿಯೂ ಊರಿಗೆ ಬಂದು ಗೌಡನನ್ನು ಕಂಡು ಮಾತಾಡಿದ. ಅದೆಲ್ಲದರ ಫಲವಾಗಿ ಗೌಡ ಒಂದು ನಿರ್ಧಾರಕ್ಕೆ ಬಂದು ಕಾಯತೊಡಗಿದ...

ಪಡಸಾಲೆ ಮ್ಯಾಲಿನ ಬೆಳಕಿಂಡಿಯಿಂದ ಬೆಳಕಿನ ಸುಳಿವು ಕಂಡಿತು. ಗೌಡ ಗೋಣೆತ್ತಿ ನೋಡಿದ. ಬೆಳಕು ಒಳಗಿಳಿಯತೊಡಗಿತ್ತು. ಎಂಥದೋ ಸಂತಸದ ಎಳೆ ಮೈಯಾಗ ಹರಿದಂತಾಯಿತು. 'ಇವನಪ್ಪನ ತಂದು! ಅಂತೂ ಬೆಳಕಾಯ್ತು!' ಅಂತಂದುಕೊಂಡು ದಸ್ತಗಿರಿ ನೆನಪಾದ. 'ದಸ್ತಗಿರೀ' ಅಂದ ಗೌಡ.

- ೩ -

'...ನಿಮ್ಗ ಅಭಿನಂದನೆಗಳು, ಬರ್ತೀನಿ ನಮಸ್ಕಾರ!' ಚಂದ್ರಪ್ಪ ಕೈಮುಗಿದು, ಪಡಸಾಲೆ ಇಳಿದು, ಅಂಕಣದಾಟಿ, ತಲಬಾಗಿಲಿನ ದೊಡ್ಡ ಹೊಸ್ತಿಲು ದಾಟಿ ಕಲ್ಲಿನ ದೊಡ್ಡಮನೆಯಿಂದ ಹೊರ ನಡೆದ. ಆತನ ಹಿಂದೆ ಬಂದಿದ್ದವನೂ ಬೆನ್ನ ಹಿಂದೆ ನಡೆದುಹೋದ.

'ಹ್ಞಾಂ! ಇವನಪ್ಪನ...' ಅನ್ನುತ್ತ ಚಕ್ಕಳಮುಕ್ಕಳ ಹಾಕೊಂಡು ಕುಂತಿದ್ದ ಗೌಡ ಪಲ್ಲಂಗದಿಂದ ಇಳಿದು ನಿಂತ. ಸುಮಾರು ಐದಾರು ತಿಂಗಳು ಮುಚ್ಚಿದ್ದ ತಲಬಾಗಿಲು ಈ ಹೊತ್ತು ತೆರೆದದ್ದನ್ನು ಕಂಡ ಗೌಡನಿಗೆ ಖುಷಿಯಾಯ್ತು. ಅದನ್ನು ಮುಚ್ಚಬೇಕು ಅಂತ ಅನ್ನಿಸಲಿಲ್ಲ. ಗೌಡ ಬಚ್ಚಲ ಮನೆಗೆ ಹೋಗಿ ಕಾಲುಮಡದು ಬಂದು ಪಲ್ಲಂಗದಲ್ಲಿ ದೊಡ್ಡ ದಿಂಬಿಗೆ ಒರಗಿ ಕುಂತ. ಒಂದೂವರೆ ತಾಸು ಚಂದ್ರಪ್ಪನ ಜತೆ ಮಾತುಕತೆ ನಡೆದಿತ್ತು. ಅದನ್ನು ನೆಪ್ಪು ಮಾಡಿಕೊಳ್ಳುವುದೇನು ಅದೇ ಮೈಮನಸ್ಸು ತುಂಬಿಕೊಂಡು ಕಥನ ನಡೆಶಿತ್ತು.

'...ಚಂದ್ರಪ್ಪಾಂತ!...' ಅಂದದ್ದು ಕೇಳಿ ಗೌಡ ಹೌಹಾರಿದ್ದು ಖರೆ. ಹಂಗ[...] ಪುಸಕ್ಕನೆ ಒಳ ಸೇರಿಕೊಂಡು ತಲಬಾಗಿಲು ಮುಚ್ಚಿಕೊಳ್ಳುವ ಯೋಚನೆ ಮಾಡಲೀ[...] ಅಚಾನಕ್ಕಾಗಿಯೂ ಅದು ಘಟಿಸಲಿಲ್ಲ. ಭಯದಿಂದ ಒಳ ಸರಿಯಲು ದೊ[...] ಹೊಸ್ತಿಲು ಅಡ್ಡಯಿತ್ತು. ಚಂದ್ರಪ್ಪನೇ, 'ಗೌಡ್ರೇ, ನಾನೇ ಚಂದ್ರಪ್ಪ! ಬೆಳಕಾಯ್ತಲ್ಲ[...] ನಿಮ್ಮ ನಿತ್ಯದ ಕರ್ಮಗಳು ಸಾಂಗವಾಗಿ ಜಲ್ದಿ ಮುಗಿಸಿಬಿಡ್ರಿ' ಅಂತ ಆತ ಅಂದ[...] ಗೌಡನಿಗೆ ಸಲುಪು ಧೈರ್ಯ ಬಂದಂಗಾಯ್ತು. ಒಳಗೆ ಬಂದು ಪಲ್ಲಂಗದ[...] ನಿಂತ. ಹಿಂದೆ ಬಂದ ಆತ, 'ಗೌಡ್ರೇ, ಈಗ ತಗರ್ರಿ ಬೇವಿನಕಡ್ಡಿ. ಹಲ್ಲು ತಿಕ್ಕೊಂಡ[...] ಅಂಗೇ ಪೈಖಾನೆಗೆ ಹೋಗಿ ಬರ್ರಿ. ನಮ್ಮ ಗೆಳೆಯ ನಿಮ್ಗ ಚಹ ಯಾ ಹಾಲು ಕುಡಿಯೋ[...] ಕೊಡ್ತಾನ. ಚೂರು ಮಾತುಕತೆ ಆಡನು' ಅಂದ.

'ನಿನ್ನಾ್ಯಕಪ್ಪ ಇದೆಲ್ಲ? ನಮ್ಮ ದಸ್ತಗಿರಿ ಇದ್ದಾನಲ್ಲ, ಲ್ಹೇ, ದಸ್ತಗಿರಿ' ಅಂತ ಕೂಗಿ[...] ಗೌಡ. ಮಹಡಿ ಮ್ಯಾಲಿನ ಪಾರಿವಾಳಗಳು ಪಟಪಟ ಅಂತ ಹಾರಿದವು. ಚಂದ್ರಪ್ಪ[...] ಶಬ್ದಕ್ಕೆ ಮೈಮನಸ್ಸಿಗೆ ಕಣ್ಣು ಕಿವಿ ಮಾಡಿಕೊಂಡು ನಿಂತ. ಗೌಡ ಅದಕಂಡು ಬೆರಗಾದ[...]

'ಅಂವಾ ನಮ್ಮ ಕಬ್ಜದೊಳಗ ಇದ್ದಾನ, ಗೌಡ್ರೇ. ಇವತ್ತು ನಿಮ್ಮನಿಗೆ ಅಡಿ[...] ಮಾಡುವ ನೀಲಮ್ಮಾಯಿ ಬರದಿಲ್ಲ. ನೀವು ಗಾಬರಿಯಾಗಬ್ಯಾಡ್ರೀ, ನಿತ್ಯದಂ[...] ನಿರುಮ್ಮಳವಾಗಿ ಇರ್ರಿ' ಅಂದ ಚಂದ್ರಪ್ಪ. ಗೌಡ ಚಂದ್ರಪ್ಪನನ್ನು ದಿಟ್ಟಿಸಿ ನೋಡಿದ...

ಪಲ್ಲಂಗದಲ್ಲಿ ದಿಂಬಿಗೆ ಒರಗಿ ಕುಂತಿದ್ದ ಗೌಡ 'ಇವನಪ್ಪನ, ನಾನ್ಯಾಕ ಹಂ[...] ಆತನ್ನ ದಿಟ್ಟಿಸಿ ನೋಡಿದೆ ಅಂದ್ರ, ಅಂವ ನರಸನಗೌಡನ ಕಥೆ ಮುಗಿಸ್ಯಾನಂತ[...] ವಾಲೀಕಾರ ಯಂಕಪ್ಪನ ಜೀವ ತೆಗದಾನಂತ, ಪೊಲೀಸರನ್ನ ಮುಗಸ್ತಾನಂತ ಬ್ಯಾ[...] ಕೇಳಿದ್ದೆ. ಅವನಂದ್ರ ಅಮೀನ್‌ಸಾಬ, ತಹಸೀಲ್ದಾರ ಸಾಬ, ಕಲೆಕ್ಟ್ರು ಸಾಬರೇ ನಿ[...] ಕಳಕಂಡಾರಂದ ಮ್ಯಾಲೆ ಆತನ್ನ ನೋಡಂಗ ಆಯ್ತು, ದಿಟ್ಟಿಸಿ ನೋಡ[...] ಅಂದುಕೊಂಡ ಗೌಡ.

... ದಿಟ್ಟಿಸಿ ನೋಡಿದ ಗೌಡನಿಗೆ ದೆಸೆಗೆಟ್ಟ ಸ್ಥಿತಿ. ಮಕ್ಕಳಿಗೆ ಉಣ್ಣು, ನಿದ್ದೆಮಾಡ[...] ಇಲ್ಲಂದ್ರ ಗಣಗಣ ತಿಮ್ಮ ಬಂದು ಹಿಡಕಂಡು ಹೋಗ್ತಾನ ನೋಡು ಅಂ[...] ಹೆದರ್ತಾರಲ್ಲ ಹಂಗಾಯತ್ತ ನನ್ನ ಫಜೀತಿ. ನನ್ನ ಪಾಲಿಗೆ ಇಂವ ಗಣಗಣ ತಿಮ್ಮ.

'ಲ್ಹೇ... ತಮ್ಮಾ... ಹ್ಞಾಂ... ಚಂದ್ರಪ್ಪ' ಗೌಡನಿಗೆ 'ಲ್ಹೇ' ಅಂತ ಬಾಯಿಗೆ ಬಂದಿತ[...] ಅದಕ್ಕೆ ಚಡಪಡಿಸಿದ. 'ಪರವಾಗಿಲ್ಲ ಗೌಡ್ರೇ, ನಾನು ನಿಮ್ಮ ಖಾಸಾ ಆಳುಮಗ ಅಂ[...] ತಿಳಿರಿ. 'ಲ್ಹೇ' ಅಂದ್ರ ನನ್ಗ ಬಾಳ ಖುಷಿಯಾಗ್ತದ! ಅದೇ ನಿಮ್ಮ ಜಾಯಮಾನ[...] ಶರಭನಗೌಡ ಅಂದ್ರ ಜವಾರಿ ಮನುಷ್ಯ ಸ್ವಭಾವದೊಳಗ, ಮಾತಿನೊಳಗ ಗಮಾತ[...] ತುಂಬಿರ್ತದ. ನಿಮ್ಮ ಬಗ್ಗೆ ನನ್ಗ ಬಾಳ ಅಭಿಮಾನ. ಯಾಕ ಅಂತ ಕೇಳ್ತೀರೇನು? ಒ[...] ಮಗ ದೆಹಲಿಯಲ್ಲಿ ಪ್ರಸಿದ್ಧ ಡಾಕ್ಟರ್. ಒಬ್ಬ ಮಗ ಅಮೆರಿಕಾ, ಇಂಗ್ಲೆಂಡ[...] ಯುರೋಪಗಳಲ್ಲಿ ದೊಡ್ಡ ಇಂಜಿನೀಯರ್ ಅಂತ ಹೆಸರು ಮಾಡಿದ್ದಾನ. ನಿ[...] ಮಗಳು ಒಳ್ಳೆ ಗಂಡನನ್ನು ಮದುವೆಯಾಗಿ ವಿದೇಶದಾಗ ನೆಲೆಸ್ಯಾಳ. ಅಂಥ ಮಕ್ಕಳ[...] ಹೆತ್ತ ನೀವು, ಮುನ್ನೂರತೊಂಬತ್ತೇಳು ಎಕರೆ ಜಮೀನ್ದಾರರಾಗಿ ಬೇವಿನ ಕಡ್ಡಿ ಬಿಟ್ಟೀ[...] ಮೈಯಿಗೆ ಕಡ್ಲೆಹಿಟ್ಟು ಹಚ್ಚಿಕೊಳ್ತೀರಿ. ತಣ್ಣೀರ ಬಾವಿಯೊಳಗ ಈಜಾಡ್ತೀರಿ. ಮೂರ[...] ಹೊತ್ತು ರೊಟ್ಟಿ, ಜೋಳದ ಅನ್ನ, ಮಜ್ಜಿಗೆ ಉಣ್ತೀರಿ. ನಮ್ಮ ತಾಲೂಕಿನ ಹತ್ತಿ ಮಿಲ್ಲ[...] ಬಟ್ಟೆ, ಪಂಚೆ ಉಡ್ತೀರಿ. ಇನ್ನೂ ಮಾದರ ಬಸಪ್ಪನ ಮಗ ಮಾಡುವ ತೊಗಲಿನ ಚ[...] ಮೆಟ್ಟೀರಿ. ಅದ್ಕ... ಹೇಳ್ತಿದ್ದನಲ್ಲ' ಆಗ ಗೌಡನಿಗೆ ಅನುಮಾನ ಬಂತು. ನಡುವೆ ಬಾ[...] ಹಾಕಿ, 'ತಮ್ಮ' ಅಂತೇಳಿ ಕರೆದ. ಚಂದ್ರಪ್ಪ, 'ಲ್ಹೇ ತಮ್ಮ ಅನ್ರೀ' ಅಂದ ನಕ್ಕು. ಗೌಡನ[...] ಇರಸು ಮುರಸಾಯ್ತು. ಅದನ್ನ ತಡಕಂಡು, 'ಇರ್ಲಿಬುಡಪ್ಪ, ಅಂದಂಗ ನೀನು ನ[...] ಸೀಮೆ ಹುಡ್ಗನಂಗಿದ್ದೀ?' ಗೌಡ ಕೇಳಿದಾಗ, 'ಹೂಂನ್ರೀ ಗೌಡ್ರೇ, ಸುಲ್ತಾನಪುರ[...] ಆ ಕಡೆ ಕೂಗಳತಿ ದೂರದಾಗ ಐತಲ್ಲ, ದಿನ್ನಿ ಅಂತ! ಅದೇ ನನ್ನೂರು. ನಿ[...] ಗೊತ್ತದ, ನೆಪ್ಪಿರ್ತದ, ಕೇರಿ ರಂಗಪ್ಪ ಅಂತ, ಆತನ ಮಗ ರಾಮಪ್ಪ. ರಾಮಪ್ಪನ ಮ[...] ನಾನು, ಚಂದ್ರಪ್ಪ. ಅಂದ್ರೆ ರಂಗಪ್ಪನ ಮೊಮ್ಮಗ' ಅಂದ.

...ಪಲ್ಲಂಗದಲ್ಲಿ ಕುಂತಿದ್ದ ಗೌಡನಿಗೆ ರಂಗಪ್ಪ ನೆಪ್ಪಾದ. ಸುಮಾರು ಇಪ್ಪತ್ತು ವರ್ಷ[...] ಹಿಂದೆ ಗೌಡನ ಬಿಳಿಜೋಳ ಕಣದ ರಾಶಿ ಶುರುವಾದರೆ ಸಾಕು, ರಂಗಪ್ಪ ಹೆಗಲ[...] ಹಲಿಗೆ ಹಾಕ್ಕೊಂಡು ಬಂದು ಹಾಜರಾಗುತ್ತಿದ್ದ. ರಂಗಪ್ಪ ಒಂದೆರಡು ದಿನ ತಡವಾದ[...] ಗೌಡನಿಗೆ ಚಡಪಡಿಕೆ ಆಗಿತ್ತು. ಜೋಳದ ಕಣ ಮುಗಿವ ತನಕ ರಂಗಪ್ಪ ಹಲಿ[...] ನುಡಿಸುತ್ತಿದ್ದ. ಅದರಾಗ ಬೇಸಿಗೆ ಸಂಜೆಗಳು, ಬೇಸಿಗೆ ರಾತ್ರಿಗಳು, ಅದರಾಗ ಬೇಸಿ[...] ಬೆಳದಿಂಗಳ ಒಳಗ ರಂಗಪ್ಪ ಹಲಿಗೆ ನುಡಿಸಿದರೆ ಜೋಳದ ರಾಶಿ ಎದ್ದು ಕುಣಿತ್ತಿತ್ತು

ಗೌಡ ನೆನಸಿಕೊಂಡು ಕಣ್ಣು ಮುಚ್ಚಿದ. ಎದೆಯಲ್ಲಿ ಹಲಿಗೆಯ ಖಣಖಣ ನಾದ ಕೇಳಿಸಿತು. ಗೌಡನಿಗೆ ಖುಷಿಯಾತ್ತು...

'ಅಲಾ ಜವನಪ್ಪನ ತಂದು? ಮತ್ತ ರಂಗಪ್ಪನ ಮೊಮ್ಮಗ ಅಂತಿದ್ದಿ...?' ಗೌಡನ ಪ್ರಶ್ನೆ ಚಂದ್ರಪ್ಪನಿಗೆ ತಿವಿಯಿತು.

'ಮತ್ತೆ....?' ಅಂದ.

'ನನ್ಗ ಅವನ ಮ್ಯಾಲೆ ಬಾಳ ಅಭಿಮಾನ ಐತೆ! ಗೊತ್ತದೇನು ನಿನ್ಗ! ತಲಿಮ್ಯಾಲಿನ ಮಾಸ ಆರಿಲ್ಲ ನಿನ್ಗ! ಮಗನ... ರಂಗಪ್ಪ ತಂಪು ಹೊತ್ತಿನ್ಯಾಗ ಹಲಗೆ ನುಡಿಸಾಕ ನಿಂತ್ರ ಹಕ್ಕಿಗಳು ಗೂಡು ಮರಿತಿದ್ದವು! ಸೂರ್ಯ ಭೂಮಿತಾಯಿ ಮಡಿಲಗೆ ಸೇರೋದು ಮರಿತಿದ್ದ! ಚಂದ್ರಪ್ಪ ಬೆಳದಿಂಗಳನ್ನು ರಂಗಪ್ಪನ ಮ್ಯಾಲೆ ಸುರುದು ನಿಂತು ಕೇಳ್ತಿದ್ದ! ಲ್ಹೇ ತಮ್ಮಾ, ರಂಗಪ್ಪ ದೊಡ್ಡ ಮನುಷ್ಯ. ಅವ ಸತ್ತಾಗ ನಾನು ಬಂಡಿ ಕಟ್ಟಿಸಿಕೊಂಡು ಮಣ್ಣಿಗೆ ಹೋಗಿ ಬಂದಿದ್ದೆ. ನೀನು ಹುಟ್ಟಿರಲಿಲ್ಲ..'



'ನಾನು ಮೂರು ವರ್ಷದವನಿದ್ದೆ ಅದ್ರ ಯಾವ್ದು ನೆಪ್ಪಿನಲ್ಲಿಲ್ಲ. ಕೇರಿಮಂದಿ ನನ್ನ ತಾತನ ಬಗ್ಗೆ ಹಾಡಿ ಹೇಳೊದನ್ನ ಕೇಳ್ತಾ ಬೆಳದೀನಿ' ಗೌಡನ ಮಾತಿಗೆ ಚಂದ್ರಪ್ಪ ಅಂದ.

ಚಂದ್ರಪ್ಪ ಹಂಗ ಅಂದಿದ್ವನಲ್ಲ ಗೌಡನಿಗೆ ಸಿಟ್ಟು ಬಂದಿತ್ತು. ಪಲ್ಲಂಗದಲ್ಲಿ ಕುಂತಿದ್ದ ಗೌಡನಿಗೆ ಸಿಟ್ಟು ಇನ್ನೂ ಇತ್ತು.

'ಬೇಸಾಯ್ತು ಬುಡು! ಕೇಳ್ತಾ ಬೆಳದೀನಿ ಅಂತಿದ್ದಿ! ಅಲ್ಲಲ್ಹೇ ತಮ್ಮ, ಅಂಥವನ ವಂಶದಾಗ ನೀನು ಹುಟ್ಟಿದ್ದಿ, ಖರೆ! ಆದ್ರೆ ಇದೇನಿದು ನಿನ್ನ ದಂದೆ?'

'ಗೌಡ್ರೇ, ದಂದೆ ಅಂತಂದು ನನ್ನ ಅವಮಾನ ಮಾಡಿದ್ದೀರಿ! ಹೋರಾಟ ಅನ್ರೀ! ಚಳುವಳಿ ಅನ್ರೀ! ಇದು ಅಸ್ತಿತ್ವ ಇಲ್ಲದ ಜನರ ಪರ ಹೋರಾಟ! ಭೂರಹಿತರಿಗೆ ಅಸ್ತಿತ್ವ ನೀಡುವ ಚಳುವಳಿ!' ಚಂದ್ರಪ್ಪ ಗಂಭೀರವಾಗಿ ಹೇಳಿದ. ಆತನ ಉಸಿರಾಟ ಬಿಸಿಯಾಯ್ತು. ಗೌಡನಿಗೆ ಭಂಡಧೈರ್ಯ ಇನ್ನೂ ಇತ್ತಲ್ಲ.

'ಭಪ್ಪರೆ ಮಗನ! ಚಳುವಳಿ! ಹೋರಾಟ! ತಮ್ಮಾ, ಬ್ರಿಟಿಸರನ್ನ, ನಿಜಾಮರನ್ನ, ರಜಾಕಾರರನ್ನ ಈ ಪ್ರಾಂತ, ದೇಶ ಬುಟ್ಟು ಓಡಿಸೋ ಚಳುವಳಿ, ಸತ್ಯಾಗ್ರಹ ಮಾಡಿದ್ದೇನು?'

'ಅವರನ್ನ ಕಳಿಸಿ, ಅವರ ಜಾಗದಾಗ ನೀವು ಕುಂತೀರಲ್ಲ, ಗೌಡ್ರೇ, ಅವರಿಗಿಂತ ನೀವು ಬಾಳ ಅಪಾಯ!' ಚಂದ್ರಪ್ಪ ಬಾಳ ಬಿಸಿಯಾದ. ಗೌಡ ಯಾಕೋ ತಣ್ಣಗಾದ.

ಗೌಡ ಪಲ್ಲಂಗದಿಂದ ಇಳಿದ. 'ನನ್ನನ್ನ ಅಪಾಯ' ಅಂದನಲ್ಲ ಅಂತ ಚಿಂತೆ ಮಾಡಿದ. ಹಂಗ ಅಂದು ಸುಮ್ಮನಾದ ಚಂದ್ರಪ್ಪ ಗೌಡನನ್ನು ಹಲ್ಲು ತಿಕ್ಕಲು, ಪೈಖಾನೆಗೆ ಹೋಗಲು ಕಳಿಸಿದ್ದ. ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬಂದಾಗ ಅವನ ಗೆಳೆಯ ಗೌಡನಿಗೆ ಜಾಮಿನಿನಲ್ಲಿ ಹಾಲು ತಂದುಕೊಟ್ಟ. ಚಂದ್ರಪ್ಪ ಅಂಕಣದ ಒಂದು ಮೂಲೆಯಲ್ಲಿ ನಿಂತು ಮೊಬೈಲ್ ಫೋನಿನಲ್ಲಿ ಮಾತಾಡುತ್ತಿದ್ದ. ಗೌಡನ ಕಣ್ಣಿಗೆ ಕಟ್ಟಿದೆ. ಮೊಬೈಲಿನಲ್ಲಿ ಭಯಗ್ರಸ್ತನಾಗಿ ಮಾತಾಡಿದ ಆತ ತಕ್ಷಣ ಪಡಸಾಲೆ ಏರಿ ಬಂದು ಕುಂತು, 'ಗೌಡ್ರೇ, ಹೇಳ್ರಿ' ಅಂದ. ಅವನ ಗೆಳೆಯ ಚಂದ್ರಪ್ಪನಿಗೂ ಕುಡಿಯಲು ಕೊಟ್ಟ. ಅದನ್ನ ಕುಡಿಯಲು ಅವನಿಗೆ ಪುರುಸೊತ್ತು ಇರಲಿಲ್ಲ, ಗೌಡನಿಗೆ ಚಂದ್ರಪ್ಪನ ಚಟುವಟಿಕೆ ನೋಡುವುದೇ ಕೆಲಸವಾಯ್ತು. ಅವನ ಗೆಳೆಯನೂ ಅಷ್ಟೆ. ಬೇಕಾದದ್ದನ್ನು ಚಕಾಚಕಾ ಮಾಡುತ್ತಿದ್ದ. ಗೌಡನ ಅಡಿಗೆ ಮನೆ ಹೊಕ್ಕು, ಹಾಲು ಕಾಯಿಸಿ ತಂದದ್ದು ಕಂಡು, 'ಭಪ್ಪರೆ ಮಕ್ಕಳಾ' ಅಂದುಕೊಂಡ! ಗೌಡ ತಾಸು ಹೊತ್ತಿನ ಕೆಳಗೆ ನಡೆದದ್ದನ್ನು ನೆನೆಸಿಕೊಳ್ಳುತ್ತ ಪಡಸಾಲೆಯಲ್ಲಿ ತಿರುಗಾಡುತ್ತಿದ್ದ. ತೆರೆದ ಬಾಗಿಲು ತೆರೆದೇ ಇತ್ತು...

...'ಹೇಳ್ರೀ, ಗೌಡ್ರೇ' ಅಂದಾಗ ಗೌಡ ಸುಮ್ಮನಿದ್ದ. 'ಏನು ಯೋಚ್ನೆ ಮಾಡಿದ್ರೀ?' ಅಂತ ಮತ್ತೆ ಕೇಳಿದ.

'ಯೋಚ್ನೇ ಅಂದ್ರ... ಅಲ್ಲ ತಮ್ಮಾ, ನನ್ಗ ಎಪ್ಪತ್ತೆಂಟು ವರ್ಸ! ನಿನ್ಗ?'

'ಐವತ್ತು ಕಳಿರಿ!' ಅಂದ ಚಂದ್ರಪ್ಪ, 'ಯಾಕ್ರೀ?' ಅಂತ ಕೇಳಿದ.

'ನನ್ನ ಎಡಗೈಯಿಂದ ನಿನ್ನ ಮುಂಗೈ ಹಿಡಿತೀನಿ, ನೀನು ಬಿಡಿಸಿಗಂಡು ನಿಂತ್ರ, ನೀನು ಗಂಡಸು...'

ಚಂದ್ರಪ್ಪ ನಗುತ್ತ, 'ಗೌಡ್ರೇ, ನಿಮ್ಮ ಜವಾರಿತನಕ್ಕೆ ಥ್ಯಾಂಕ್ಸ್. ಏನು ಯೋಚ್ನೆ ಮಾಡಿದ್ರಿ ಅಂದ್ರ ಯಾವ ನಿರ್ಧಾರಕ್ಕೆ ಬಂದ್ರಿ ಅಂತ? ಏನು ತೀರ್ಮಾನ ಮಾಡಿದ್ರಿ ಅಂತ? ಅದು ಬುಟ್ಟು ನನ್ನ ಪರ್ಸನಾಲಿಟಿ ನಿಮ್ಗ ಆಶ್ಚರ್ಯವಾಗಿ ಕಂಡದೇನು?' ಚಂದ್ರಪ್ಪ ಕೇಳಿದ.

'ಚಂದ್ರಪ್ಪ, ನೀನು ಗುಡ್ಡಗಾಡಿನ್ಯಾಗಿದ್ದು, ಇವನ್ನಂಥ ಹತ್ತಾರು ಮಂದಿನ್ನ ಕಟ್ಗೊಂಡು...' ಜತೆಗಾರನನ್ನು ನೋಡಿ ಮತ್ತೆ 'ಸರಕಾರನ್ನ, ಪೊಲೀಸರನ್ನ, ನನ್ನಂಥವನ್ನ ನಿದ್ದೆಗೆಡಿಸಿದ್ದಿ, ಖರೆ! ನೀನು ನನ್ನ ಮ್ಯಾಲೆ ಕಣ್ಣಿಟ್ಟ ಮ್ಯಾಲೆ, ನಾನು ನಿನ್ನ ಸುದ್ದಿನ್ನ ಅವರಿವರ ಬಾಯಾಗ ಕೇಳಿನಷ್ಟೆ. ಈಗ ನೋಡ್ತಿದ್ದೀನಲ್ಲ... ನಿನ್ನ ಮೈಯಾಗ ಬೊಗಸೆ ರಕ್ತಯಿಲ್ಲ. ಕುಂಡ್ಯಾಗ ಪಾವು ಖಂಡಯಿಲ್ಲ. ರಟ್ಟ್ಯಾಗ ಒಂದು ಮಣ ಹುಣಸೆಕಾಯಿ ಎತ್ತುವಷ್ಟು ಸತುವು ಇಲ್ಲ. ಆದ್ರೆ ಧೈರ್ಯ ಮಾತ್ರ ಬಾಳ ಇದ್ದಂಗ ಕಾಣ್ತದ, ನಿನ್ಗ?' ಅಂದ ಗೌಡ. ಚಂದ್ರಪ್ಪ ನಗುತ್ತ ಗೌಡನ ಮಾತು ಕೇಳಿ ಖುಷಿಯಾದಂತೆ ಕಂಡರೂ ಒಳಗೆ ಚಡಪಡಿಕೆ ಉಕ್ಕಿತು.

'ಸುಮ್ನೆ ಹೇಳ್ತೀನಿ. ನಿನ್ನ ಇಲ್ಲೇ ಹಿಡದು ಕೂಡುಸ್ತೀನಿ. ಪೊಲೀಸರನ್ನ ಕರಸ್ತೀನಿ. ಹಿಡಕಂಡು ಹೋಗ್ತಾರೆ. ಏನಾಡ್ತಿದ್ದಿ?' ಗೌಡ ಸಲುಪು ಹೆದರಿಕೆಯಿಂದ ಕೇಳಿದ.

'ಗೌಡ್ರೇ, ನಿಮ್ಮ ದಸ್ತಗಿರಿ ಮುಂದ ಇಂಥ ಮಾತಾಡಿ ಮಾತಾಡಿ ನಿಮ್ಗ ರೂಢಿ ಬಿದ್ದದ. ಇವತ್ತು ನಿಮ್ಮ ಮನೆ ಕಡೆ ಒಂದು ನಾಯಿ ಸಹಿತ ಸುಳಿವುದಿಲ್ಲ. ಇವತ್ತು ಪೊಲೀಸರಿಗೂ ಸೈತ ಈ ಕಡೆ ಗಮನಯಿಲ್ಲ! ಗೌಡ್ರೇ ನಿಮ್ಮ ದಸ್ತಗಿರಿ ಎಲ್ಲಿ? ಓಡಿ ಹೋದ್ನಲ್ಲ ಸೆಕ್ಯುರಿಟಿ ಗಾರ್ಡ್ ಯಾಕೆ? ನೀವು ನನ್ನ ಮುಂಗೈ ಹಿಡಿದರೆ ಬಹುಶ ನನ್ನಿಂದ ಬಿಡಿಸಿಕೊಳ್ಳುವುದು ಆಗ್ಲಿಕ್ಕಿಲ್ಲ. ಚರಿತ್ರೆಯೊಳ ಮನುಷ್ಯ ಕೇವಲ ದೈಹಿಕ ಬಲದಿಂದ ಬದುಕಿಲ್ಲ ಸಾಮ್ರಾಜ್ಯ ಕಟ್ಟಿಲ್ಲ. ಕಟ್ಟಿದ್ದು ಇದರಿಂದ...' ಅಂ ಚಂದ್ರಪ್ಪ ಪಿಸ್ತೂಲು ತೆಗೆದು ಕೈಯಲ್ಲಿಡಿದು ನೇ ನೋಡುತ್ತ ಕುಂತ. ಗೌಡನನ್ನು ನೋಡಲಿಲ್ಲ. ಗೌ ಹೌಹಾರಿದ...

ನಿಂತು ಪಲ್ಲಂಗದಲ್ಲಿ ಕುಂತ ಗೌಡನಿಗೆ ಚಂದ್ರ ಪಿಸ್ತೂಲು ತೆಗೆದಾಗ, ನೆಪ್ಪಾದದ್ದು ತನ್ನ ಮನೆಯಲ್ಲಿ ಬಂದೂಕು. ಅದನ್ನ ಹಿಡಿದು ನೋಡುವ ಸೆಕ್ಯೂರಿ ಗಾರ್ಡ್ ಓಡಿಹೋಗಿದ್ದ. ಗೌಡನಾಗಲಿ, ದಸ್ತಗಿ ಯಾಗಲಿ ಅದನ್ನು ಎತ್ತಿ ಹಿಡಿದಿದ್ದಿಲ್ಲ. ಮಗ ಕೊಡಿಸಿ ಕಾನೂನುಬದ್ಧ ಬಂದೂಕು ದೊಡ್ಡಕಲ್ಲಿ ಮನೆಯಲ್ಲಿತ್ತು ಅಷ್ಟೆ. ಗೌಡನಿಗೆ ಯಾಕೋ ಬೇಸ ಬಂತು. ತಿಂಗಳೊಪ್ಪತ್ತಿನಿಂದ ಮಹಾಂತ ತಾತನ ಕರೆಸಿಕೊಂಡು ಮಾತುಕತೆ ಆಡುವಾಗ, ತಾತ, 'ನೀನ ಜಮೀನ್ದಾರ, ನಿನ್ನಲ್ಲಿ ಅಷ್ಟು ಭೂಮಿ ಇರುವುದು ಅಸಹಜ

ನಿನ್ನ ಭೂಮಿಯಲ್ಲಿ ಹತ್ತರಿಂದ ಇಪ್ಪತ್ತು ಭಾಗ ಬಡಬಗ್ಗರಿಗೆ ಹಂಚು' ಅಂತ ಹೇಳಿಕಳಿಸ್ಯಾರ. 'ನನ್ನಂಥ ಜಮೀನ್ದಾರರನ್ನು ಮುಗಿಸುವುದಕ್ಕೂ ಹಿಂದು ಮುಂದ ನೋಡದಿಲ್ಲಂತ' ಗೌಡ ಹೇಳಿದ್ದ. ಮಹಾಂತ ತಾತ ಕೇಳಿಸಿಕೊಂಡು, ಹಿಂದ ಮುಂದ ನೋಡದೆ ತಣ್ಣಗೆ, 'ಅವರು ಬಂದು, ಗದರಿಸಿ ಕೇಳುವ ತನಕ ನೀನು ಸುಮ್ಮನಿದ್ದದ್ದು ಪಾಡಲ್ಲ' ಅಂದ. ಗೌಡನಿಗೆ ಅರ್ಥವಾಗದೆ, 'ಹಂಗಂದ್ರೇನು ತಾತ ?' ಅಂತ ಕೇಳಿದ್ದ. 'ಈ ಕಲ್ಸ ನೀನು ಯಾವತ್ತೋ ಮಾಡ್ಬೇಕಿತ್ತು' ಅಂದಿದ್ದ ಮಹಾಂತ ತಾತ. 'ನಿನ್ನ ನೂರು ಕೂರಿಗೆ ಭೂಮಿ ಐತೆ. ಅದನ್ನ ನಿನ್ನೂರಿನ ಕೇರಿಮಂದಿ ನಿನ್ನ ತಾತನ ಕಾಲಕ್ಕೂ, ನಿನ್ನ ತಂದೆ ಕಾಲಕ್ಕೂ, ಈಗ ನಿನ್ನ ಕಾಲಕ್ಕೂ ದುಡಕಂಡು ಬಂದಾರ. ಅದೇ ಮಂದಿ ಹರಗ್ಯಾರ, ಬಿತ್ಯಾರ, ರಾಶಿ ಮಾಡಿ ನಿನ್ನ ಹಗೇವಿಗೆ ತಂದು ತುಂಬಿಸ್ಯಾರ. ನಿನ್ನ ಭೂಮಿನ್ನ ಜತನ ಮಾಡ್ಯಾರ. ನಿನ್ನ ಮಕ್ಕಳು ಯಾವತ್ತಾದ್ರೂ ಕುಂಟೆಕೂರಿಗಿ, ಮೇಳಿ ಮ್ಯಾಲೆ ಕೈಯಿಟ್ಟುಗಳೆ ಹೊಡದಾರೇನು ? ನಿನ್ನ ಮಕ್ಕಳ ಉಗರಿನ ಕಣ್ಣಾಗ ನಿನ್ನ ಹೊಲದ ಮಣ್ಣು ಕುಂತಾದೇನು, ನೋಡು ? ತಲೆತಲೆಯಿಂದ ನಿನ್ನ ಹೊಲ್ದಾಗ ದುಡದ ಕೇರಿ ಮಂದಿ ಒಂದು ಕಡೆ, ನಿನ್ನ ಜಮೀನಿನ್ಯಾಗ ಕಾಲಿಡದ ನಿನ್ನ ಮಕ್ಕಳು ಒಂದು ಕಡೆ. ನೀನೇ ಯೋಚ್ನೆ ಮಾಡು ಜಮೀನು ಯಾರಿಗೆ ಬಿಟ್ಟುಹೋಗ್ತಿದ್ದಿ ?' ತಾತನ ಪ್ರಶ್ನೆಗೆ ಗೌಡನಲ್ಲಿ ಉತ್ತರ ಇರಲಿಲ್ಲ. ಆಮ್ಯಾಲೆ ಮಹಾಂತ ತಾತ ಇಂಥ ಮಾತುಗಳನ್ನ ಹತ್ತಾರು ಹೇಳಿದ್ದ.

ಗೌಡನಿಗೆ ನೆನಪಾದ. ಪೊಲೀಸ ಅಧಿಕಾರಿ ಬಂದು ಬಂದು ವಿಚಾರಿಸಿ ಹೋಗ್ತಿದ್ದನಲ್ಲ, ಒಂದು ಸಲ, 'ಗೌಡ್ರೇ, ನಾನು ಪೊಲೀಸ ಅಧಿಕಾರಿಯಾಗಿ ನಿನ್ಗ ರಕ್ಷಣೆ ಕೊಡ್ತೀನಿ. ಆದ್ರೆ, ಒಂದು ಮಾತು ಹೇಳ್ತೀನಿ ಪೊಲೀಸ್ ಅಧಿಕಾರಿಯಾಗಿಯಲ್ಲ, ನಿನ್ನ ಆಪ್ತನಾಗಿ ಅಂತ ತಿಳಕೊಳ್ಳಬೇಕು. ನಿಮ್ಗೆ ನೂರಾರು ಎಕರೆ ಭೂಮಿ ಇದೆ. ಕಾನೂನು ಪ್ರಕಾರ ಆಸ್ತಿ ಮಾಡುವ ಹಕ್ಕು ವ್ಯಕ್ತಿಗಳಿಗೆ ಇದೆ. ಆದ್ರೆ ನಿಮ್ಮ ಮಕ್ಕಳು ಒಳ್ಳೆ ಸ್ಥಿತಿಯಲ್ಲಿದ್ದಾರೆ. ಈ ನಿಮ್ಮ ಭೂಮಿಯ ಉತ್ಪನ್ನ ಅವರಿಗೆ ಕೇವಲ ಅನ್ನಿಸಬಹುದು. ಅವರಿಗೆ ನಿಮ್ಮ ಈ ಭೂಮಿ ಮ್ಯಾಲೆ ಗಮನ ಇಲ್ಲ. 'ಆಶೇನೂ ಇಲ್ಲ. ಜಮೀನ್ದಾರರ ವಿರುದ್ಧ ಹೋರಾಡುವ ಗುಂಪಿನವರ ವಿಧಾನದ ಬಗ್ಗೆ ಸರಕಾರ ವಿಚಾರ ಮಾಡ್ತದ. ನೀವು ಬಡವರಿಗೆ ತಕ್ಕಮಟ್ಟಿನ ಭೂಮಿ ಹಂಚಿಬಿಡಿ. ಈಗ ಬಂದಿರುವ ಅಪಾಯ ತಪ್ಪುತ್ತದೆ. ಲೋಕಕ್ಕೆ ನಿಮ್ಮಿಂದ ಒಳ್ಳೆಯ ಕಾಣಿಕೆನೂ ಸಲ್ಲುತ್ತದೆ' ಅಂತ ಹೇಳಿದ. ಮಹಾಂತ ತಾತನ ಮಾತಿನ ಮುಂದ ಈ ಪೊಲೀಸ ಅಧಿಕಾರಿ ಮಾತುಗಳೂ ತೂಕವಾಗಿ ಕಂಡವು. ತನ್ನ ಮಕ್ಕಳಿಗೆ ತನ್ನ ಈ ಜಮೀನು ಲೆಕ್ಕಕ್ಕಿಲ್ಲ ಅಂತ ಅಧಿಕಾರಿ ಹೇಳಿದ್ದ. ಗೌಡನಿಗೂ ಅದು ಅನುಭವಕ್ಕೆ ಬಂದಿತ್ತು. ಆದ್ರೆ ಮಹಾಂತ ತಾತ, 'ಶರಭಪ್ಪ, ನಿನ್ನ ಭೂಮಿ ಮ್ಯಾಲೆ ನಿನ್ನ ಮಕ್ಕಳಿಗೆ ಆಶೆ ಇಲ್ಲ ಅನ್ನಬ್ಯಾಡ. ಇದರ ಬೆಲೆ ಅವರಿಗೆ ಗೊತ್ತದ' ಅಂದಿದ್ದ. ಗೌಡನಿಗೆ ಜಲ್ದಿ ತಾತನ ಮಾತಿನ ಮರ್ಮ ತಿಳಿಲಿಲ್ಲ. ಗೌಡನಿಗೆ ಯೋಚಿಸಿದಾಗ ನೆಪ್ಪಾಯಿತು. ಜಮೀನ್ದಾರರ ವಿರುದ್ಧ ನಡೆಯುತ್ತಿದ್ದ ಹೋರಾಟದ ಬಿಸಿ ಗೌಡನಿಗೆ ತಗುಲಿದಾಗ, ಗೌಡ ವರ್ಷಾರು ತಿಂಗಳು ದೆಹಲಿಗೆ ಹೋಗಿ ಮಗನ ಬಳಿಯಲ್ಲಿದ್ದರೆ ಪಾಡ ಅನ್ನಿಸಿತ್ತಲ್ಲ ಆಗ ಹಿರಿಮಗನಿಗೆ ತಿಳಿಸಿದಾಗ, 'ಅಪ್ಪ, ವಿದೇಶಿ ಕಂಪನಿಗಳು ನಮ್ಮೂರಿನ ಸರಹದ್ದಿನಲ್ಲಿ ಸ್ಥಾಪನೆ ಆಗಲಿವೆ. ಆ ಕಂಪನಿಗಳಿಗೆ ಬಾಳ ಭೂಮಿ ಬೇಕು. ಆಗ ನಮ್ಮ ಭೂಮಿಗೆ ಬೆಲೆ ಬರ್ತದ. ವರ್ಷ, ಎರಡು ವರ್ಷ ನೀನು ಸದ್ಯ ಅಲ್ಲಿರು' ಅಂದದ್ದು. 'ಅಲಾ ಇವನಪ್ಪನ ತಂದು!' ಮಗನ ಮಾತನ್ನ ಕುರಿತು ಯೋಚಿಸಿದ ಗೌಡ. ಚಂದ್ರಪ್ಪ ಪಿಸ್ತೂಲು ತೆಗೆದಾಗ ಹೌಹಾರಿದ್ದು, ಖರೆ. ಆದರೂ ಭಂಡಧೈರ್ಯ ಉಳಕೊಂಡಿತ್ತು.

'ರಂಗಪ್ಪ ಬಾಳ ಸಂಭಾವಿತ ಇದ್ದ. ಪ್ರಾಮಾಣಿಕ ಇದ್ದ! ಅಂವ' ಪಿಸ್ತೂಲು ಮತ್ತು ಚಂದ್ರಪ್ಪನನ್ನು ನೋಡಿ ಅಂದ ಗೌಡ.

'ಅಂವ ಹಲಿಗೆ ನುಡಿಸುತ್ತಿದ್ದ. ಮೊಮ್ಮಗ ಪಿಸ್ತೂಲು ನುಡುಸ್ತಾನ.' 'ಗೌಡ್ರೇ, ಹಾವಿನ ವಿಷದ ಹಲ್ಲು ಕಿತ್ತಿ ಹಾವು ಆಡಿಸಾಕ ಬಂದ್ರ ಆ ಹಾವಿನ ಸಂಗವೇ ಪಾಡ! 'ಗೌಡ್ರೇ, ನನ್ನ ತಾತ ರಂಗಪ್ಪ ನಿನ್ನ ಜ್ವಾಳದ ರಾಶಿ ಮಾಡುವಾಗ ತಿಂಗಳಗಟ್ಟಲೆ ಹಲಿಗೆ ನುಡಿಸ್ತಿದ್ದ. ರಾಶಿ ಮಾಡುವ ಕೂಲಿಕಾರರ ದಣಿವನ್ನು ಕಳಿತಿದ್ದ. ನನ್ನ ಅಂಥ ತಾತಂದಿರಿಗೆ ನೀನು ಕೊಟ್ಟದ್ದು ಅಂಗೈ ಅಗಲದ ರೊಟ್ಟಿ, ಹಿಡಿ ಜೋಳದ ಅನ್ನ, ನೀರು ಮಜ್ಜಿಗೆ! ಅಲ್ಲೇನ್ರಿ, ಗೌಡ್ರೇ ?' ಚಂದ್ರಪ್ಪ ತಣ್ಣಗೆ ಕೇಳಿದ.

'ಮತ್ತೇನು ಕೊಡಬೇಕಿತ್ತಪ್ಪ ? ಜಹಗೀರು... ?'

'ಜಹಗೀರು ಬ್ಯಾಡ್ರಿ. ಅಂಗೈ ಅಗಲದ ರೊಟ್ಟಿ ಕೊಟ್ಟೀರಿ. ಆ ರೊಟ್ಟಿನ್ನ ಬೆಳೆವ ಭೂಮಿನ್ನ ನೀವು ಇಟಗಂಡೀರಿ. ಈಗ ಭೂಮಿನ್ನ ಕೊಟ್ಟುಬುಡ್ರೀ! ಗೌಡ್ರೇ. ರೊಟ್ಟಿನ್ನ ಬೆಳಕಂಡು ತಿಂತಾರ, ಕೇರಿ ಮಂದಿ' ಚಂದ್ರಪ್ಪ ಅಂದಾಗ.

'ಭಪ್ಪರೆ ಮಗನ! ನನ್ಗ ಹುಕುಂ ಮಾಡ್ತಿದ್ದಿ, ನೀನು ? ಜಮೀನು ಬಿಟ್ಟಿಗೆ ಬಂದದೇನು, ನನ್ಗ ?' ಗೌಡ ಅಂದ.

'ನೋಡು ಗೌಡ್ರೇ, ನನ್ಗ ವಾದ ಮಾಡಾಕ ಬರ್ತದ. [illegible] ನಿಮ್ಮೂರಿನ ಕೂಲಿಕಾರರು. ಕೇರಿ ಮಂದಿ ತಲೆತಲೆಮಾರಿನಿಂದ ನಿಮ್ಮ ಜಮೀನ್ಯಾಗ ದುಡುದು ಸತ್ತು ಹೋಗ್ಯಾರ. ಮತ್ತ ಕುಣಿಗೆ ಜಾಗ ಇಲ್ಲಾಗ. ಅವರು ಬಿಟ್ಟ [illegible] ನಿಮ್ಮ ಜಮೀನು ಬೆಳಿತ ಹೋಗ್ಯಾವ! ನಿಮ್ಮ ಹೆಸರಿಲೇ ಈ ಹೊತ್ತು ಮೂನ್ನೂರ [illegible] ಎಕರೆ ಭೂಮಿ ಐತೆ. ನಿಮ್ಮ ತಾತನ ಕಾಲಕ್ಕ ಎಪ್ಪತ್ತು ಎಕರೆಯಿತ್ತು. ನಿಮ್ಮ ತಂದೆ ಕಾಲಕ್ಕ ಇನ್ನೂರು ಎಕರೆ ದಾಟಿತು. ನಿಮ್ಮ ಕಾಲಕ್ಕ ಮೂರು ನೂರು ದಾಟಿ, ನಾಲ್ಕು ನೂರು ಎಕರೆಗೆ ನಿಂತದ. ನಿಮ್ಮೂರಲ್ಲಿ ಈಗೀಗ ಭೂರಹಿತರೇ ಹೆಚ್ಚಾಗ್ಯಾರ. ಯಾಕ ?'

'ನೀನು ಬಾಳ ಚಾಲಾಕಿ ಇದ್ದೀ! ಶ್ಯಾಣ್ಯಾ ಇದ್ದಿ! ಅದ್ಕ ನಿನ್ಗ ಊರಾಗಿನ ಬಡುವರು, ಕೇರ್ಯಾಗಿನ ಮಂದಿ ಮಳ್ಳಾಗ್ಯಾರ. ಕತ್ತಲದಾಗ ದಂಧೆ ನಡೆಸಿ ಗೆದ್ದು ಹೋಗ್ತೀನಂತ ನಿನ್ಗ ಖಾತ್ರಿ ಆಗ್ಯಾದೇನು ?'

'ನೀವು ಹಾಡಹಗಲಾಗ ದಂಧೆ ನಡಸ್ತೀರಿ. ಅಂದ ಮ್ಯಾಲೆ ನಮ್ಗ ಉಳದದ್ದು ಕತ್ತಲದ ದಾರಿನ.'

'ಲೇ ತಮ್ಮಾ, ನಾನು ಜಮೀನು ಹಂಚಿ ಕೊಡಲಿಲ್ಲಂದ್ರ, ನೀನು ನನ್ನ ಕೊಂದು ಹಾಕ್ತಿದ್ದೇನು ಮತ್ತ ?'

ಚಂದ್ರಪ್ಪ ನಗುತ್ತ, 'ಇಲ್ಲ, ಇಲ್ಲ ಗೌಡ್ರೇ, ಭೂರಹಿತರಿಗೆ ಅದೂ ನಿಮ್ಮ ಜಮೀನಿನಲ್ಲಿ ಹಿಂದಿನಿಂದಲೂ ದುಡಕಂಡು ಬಂದ ನಿಮ್ಮ ಕೇರಿ ಮಂದಿಗೇ ಬದುಕಲು ಭೂಮಿ ಹಂಚ್ರಿ ಅಂತ ಕೇಳ್ತೀವಿ. ಮನ ಒಲಿಸ್ತೀವಿ. ಯಾಕಂದ್ರ ಈಗ ನೋಡ್ರಿ ಗೌಡ್ರೇ, ನಿಮ್ಮ ಆಸ್ತಿ ಮ್ಯಾಲೆ ನಿಮ್ಮ ಮಕ್ಕಳಿಗೆ ಬಾಳ ಆಶೆಯೇನಿಲ್ಲ. ನಿಮ್ಮೂರಿನ ಕೂಲಿಕಾರರು, ಬಡವರು, ಕೇರಿ ಮಂದಿಗೆ ಭೂಮಿ ಇಲ್ಲ. ಇವರೇ ನಿಮ್ಮ ನಿಜವಾದ ಮಕ್ಕಳು. ನೀವು ಇವರಿಗೆಲ್ಲ ಭೂಮಿ ಕೊಟ್ಟರೆ, ಈ ಜನ, ಈ ದೇಶದ ಜನ, ಮೊದಲ ಸಲ ತಮ್ಮ ದೇಶದಾಗ ಅಸ್ತಿತ್ವ ಪಡಿತಾರ. ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಯಾವ ದೇಶದಲ್ಲಾದರೂ ಅಸ್ತಿತ್ವ ಪಡೆಯುವಷ್ಟು ಶಕ್ತಿವಂತರು. ನೀವೇ ಯೋಚ್ನೆ ಮಾಡ್ರೀ' ಅಂದ.

ಗೌಡ ಸುಮ್ಮನಾದ.

'ಚಂದ್ರಪ್ಪ, ನಿನ್ನ ಮಾತು ಖರೆ. ನಾನು ಕೇರಿ ಮಂದ್ಯಾಗ ಕೆಲವರಿಗೆ ಭೂಮಿ ಕೊಡಬೇಕಂತ ನಿರ್ಧಾರಕ್ಕ ಬಂದೀನಿ. ಸುಮ್ನೆ ನಿನ್ನ ಜತೆ ಬಿರುಸಿನ ಮಾತಾಡಿ ನೋಡಮು ಅಂತ ಮಾತಾಡಿದೆ ಅಷ್ಟೆ. ಮಹಾಂತ ತಾತನೂ ನನ್ಗ ಬುದ್ಧಿ ಮಾತು ಹೇಳ್ಯಾನ. ಆದ್ರ, ಚಂದ್ರಪ್ಪ, ನಾನು ಯಾರಿಗೆ ಭೂಮಿ ಕೊಡ್ತೀನೋ ಅವರು ಅದನ್ನ ಉತ್ತಿ, ಬಿತ್ತಿ, ಬೆಳದು ಉಣಲಿ. ಮಾರುವಂಗಿಲ್ಲ ನೋಡು ಮತ್ತ?' ಅಂದ ಗೌಡ.

ಚಂದ್ರಪ್ಪ ಅದನ್ನು ಕೇಳಿದ್ದೆ ತಡ ಎದ್ದು ಕೈ ಮುಗುದು, 'ಗೌಡ್ರೇ, ನಿಮ್ಗ ತಿಳಿದಷ್ಟು ಭೂಮಿನ್ನ, ತಿಳಿದಷ್ಟು ಮಂದಿಗೆ ಜಲ್ದಿ ಹಂಚ್ರಿ, ನಿಮ್ಗ ತ್ರಾಸು ಮಾಡೀನಿ. ನನ್ನ ಕ್ಷಮಿಸಿರಿ, ನಿಮ್ಗೆ ಅಭಿನಂದನೆಗಳು. ಬರ್ತೀನಿ, ನಮಸ್ಕಾರ...' ಅಂದು ಹೋಗಿಯೇಬಿಟ್ಟಿದ್ದ.

'ಗೌಡ್ರೇ, ಅರಾಮಿದ್ದೀರಿಲ್ಲ?' ದಸ್ತಗಿರಿ ತಲಬಾಗಿಲದ ದೊಡ್ಡ ಹೊಸ್ತಿಲು ದಾಟಿ ಬಂದು ಕೇಳಿದ.

'ಇವನಪ್ಪನ ತಂದು ! ಎಲ್ಲಿ ಸಾಯಾಕ ಹೋಗಿದ್ದಿ?'

'ಗೌಡ್ರೇ, ದೊಡ್ಡ ಕಥೆ...' ದಸ್ತಗಿರಿ ಅಸ್ತವ್ಯಸ್ತನಾಗಿದ್ದ.

'ನಿನ್ನ ಕಥೆ ನನ್ಗ ಗೊತ್ತದ. ಒಂದು ಕೆಲ್ಸ ತುರ್ತಾಗಿ ಮಾಡ್ಬೇಕಾಗ್ಯಾದ ಬಾಬಾ' ಅಂದ ಗೌಡ ಗಡಬಡಿಸಿದ. ಅಡಿಗೆ ಮಾಡುವ ನೀಲಮ್ಮ, ರಾಮಣ್ಣ ಬಂದದ್ದು ತಲ ಬಾಗಿಲಲ್ಲಿ ಕಂಡಿತು. 'ಥತ್ ಇವನಪ್ಪನ ತಂದು' ಅಂತಂದು ಗೌಡ ಪಲ್ಲಂಗದಿಂದ ಇಳಿದನು.

- ೪ -

ಐದು ದಿನ ಗೌಡ ಕಾಯ್ದು ಕಾಯ್ದು ದಣಿದಿದ್ದನು. ಆರನೇ ದಿನ ಕೊನೆಗೂ ಗೌಡನ ಕಲ್ಲಿನ ದೊಡ್ಡಮನೆಗೆ ಬಂದದ್ದು ಮೂವ್ವರು. ಬ್ಯಾಗಾರ ರಾಮ, ವಡ್ಡರ ಮಲ್ಲ, ಮಾದರ ಬಸ್ವಿ ಭೀಮವ್ವ. ದಸ್ತಗಿರಿಗೆ ಅಳುವುದೊಂದೇ ಬಾಕಿಯಿತ್ತು. ಮೂವ್ವರಾದರೂ ಬಂದರಲ್ಲ ಅಂತ ನಿಟ್ಟುಸಿರುಬುಟ್ಟ. ಚಂದ್ರಪ್ಪ ಬಂದು ಗೌಡನ ಜತೆ ಮಾತುಕತೆ ಆಡಿ ಹೋದ ಮ್ಯಾಲೆ, ಗೌಡ ಕುಂತು ತನ್ನ ಜಮೀನಿನಲ್ಲಿ ಬಹಳ ಕಾಲದಿಂದ ದುಡಿದವರನ್ನು ನೆಪ್ಪು ಮಾಡಿಕೊಂಡ. ಯಾಕಂದ್ರ ಟ್ರ್ಯಾಕ್ಟರ್ ತಂದು ಸುಮಾರು ಇಪ್ಪತ್ತು ವರ್ಷಗಳ ಮೇಲಾಗಿತ್ತು. ಅದು ತಂದ ಮ್ಯಾಲಿಂದ ಜೀತಗಾರರನ್ನು ದಗದದಿಂದ ಕೈಬಿಡಲಾಗಿತ್ತು. ಗೌಡ ಹೆಸರು ಹೇಳಿದಂತೆ ಅವರಲ್ಲಿ ಕೆಲವರು ಸತ್ತುಹೋಗಿದ್ದರು. ಕೆಲವರು ಗುಳೆ ಹೋಗಿದ್ದರು. ಅಂಥವರನ್ನು ಕಳೆದು ಕೊನೆಗೆ ಉಳಿದುಕೊಂಡ ಹೆಸರುಗುಳು ಏಳು. ಆ ಏಳು ಜನರಿಗೆ ಭೂಮಿ ಕೊಡಬೇಕೆಂದು ಗೊತ್ತುಮಾಡಿದ್ದ. ದಸ್ತಗಿರಿ ಆ ಏಳು ಜನರನ್ನು ಕಂಡು, ಮಾತಾಡಿ ಗೌಡನ ನಿರ್ಧಾರವನ್ನು ತಿಳಿಸಿ, ಮನೆಗೆ ಬರಬೇಕೆಂದು ಕರೆದರೆ ಯಾರೊಬ್ಬರು ಬರುವುದಕ್ಕೆ ಉಮೇದಿ ತೋರಿಸಲಿಲ್ಲ. ದಿನವೂ ಊರುಕೇರಿಯ ಅವರ ಮನೆಗೆ ತಿರುಗಿ, ಕುಂತು ಮಾತಾಡಿ ಒತ್ತಾಯಿಸಿ ಕರೆದರೂ ಬಂದಿರಲಿಲ್ಲ. ಯಾಕೆಂದು ದಸ್ತಗಿರಿಗೂ ಸರಿಯಾಗಿ ತಿಳಿದಿದ್ದಿಲ್ಲ. ಗೌಡನ ಜತೆಗೆ ಬಯ್ಸಿಕೊಳ್ಳುವುದೇ ದಿನದ ಕೆಲ್ಸವಾಗಿತ್ತು. ಕೊನೆಗೆ ದಸ್ತಗಿರಿ ಮೂವ್ವರನ್ನು ಗೌಡನ ಮುಂದೆ ತಂದು ನಿಲ್ಲಿಸಿ ನಿಟ್ಟುಸಿರುಬಿಟ್ಟಿದ್ದ.

ಬಂದ ಮೂವ್ವರೂ ಗೌಡನಿಗೆ ಜಾಸ್ತಿ ಕೂನ ಇರಲಿಲ್ಲ. ಬ್ಯಾಗಾರ ರಾಮ ಈರಪ್ಪನ ಮಗ. ವಡ್ಡರ ಮಲ್ಲ ಬಸಯ್ಯನ ಮಗ. ಮಾದರ ಬಸ್ವಿ ಭೀಮವ್ವ ಹಂಪವ್ವನ ಮಗಳು. ಗೌಡನ ತಲೆಮಾರಿನವರು ಈಗ ಕೇರಿಯಲ್ಲಿ ಉಳಿದಿಲ್ಲ. ಗೋವಾ, ಪುಣೆ ಕಡೆ ಬದುಕಲು ಹೋಗಿದ್ದರು. ಈಚೆಗೆ ಗೌಡನ ಊರಿನಿಂದ ಹದಿನೆಂಟು ಕಿಲೋಮೀಟರು ದೂರದಾಗ ಹೆದ್ದಾರಿ ಕೆಲಸ ನಡದಿತ್ತು. ಆ ಹೆದ್ದಾರಿ ಕೆಲಸಕ್ಕೆ ಮಂದಿ ಹೋಗಿದ್ದರು. ದಸ್ತಗಿರಿ ಆಗಾಗ ಊರುಕೇರಿ ಸುದ್ದಿ ಹೇಳುತ್ತಿದ್ದ. ಗೌಡನಿಗೆ ಅದು ಮನಸ್ಸಿಗೆ ಹೋಗಿದ್ದಿಲ್ಲ. ಹತ್ತಾರು ವರ್ಷದಿಂದ ಆಗಾಗ ಊರುಕೇರಿ ಮಂದಿ ಗೌಡನಲ್ಲಿಗೆ ಬಂದು ಸಮಸ್ಯೆಗಳನ್ನು ಹೇಳುತ್ತಿದ್ದರು. 'ನಿಮ್ಮ ಮಕ್ಕಳು ದೊಡ್ಡ ಕೆಲ್ಸದಲ್ಲಿ ಇದ್ದಾರ. ನಮ್ಮ ಮಕ್ಕಳಿಗೆ ಸಣ್ಣ ಕೆಲ್ಸ ಕೊಡ್ಸಾಕ ಹೇಳ್ರಿ' ಅಂತ ಬರುತ್ತಿದ್ದರು. ಗೌಡನಿಗೆ ಅದು ನೀಗುತ್ತಿರಲಿಲ್ಲ. 'ಥೂತ್ ಇವನಪ್ಪನ! ನನ್ನ ಮಕ್ಕಳು ನನ್ಗ ಮುಖ ತೋರ್ಸೋದು ಅಪರೂಪ! ಅಂಥದರಾಗ...' ಅಂತ ಹೇಳಿ ಹಚ್ಚಿಕೊಳ್ಳುತ್ತಿರಲಿಲ್ಲ. ಈಗ ಪರಿಸ್ಥಿತಿ ಅರಿವಿಗೆ ಬಂದಿತ್ತು.

'ದಸ್ತಗಿರಿ ನಿಮ್ಗ ಹೇಳಿದ್ದಾನಲ್ಲ. ನಾನು ನಿಮ್ಗ ಜಮೀನು ಕೊಡ್ತೀನಿ. ಉತ್ತಿ, ಬಿತ್ತಿ ಬೆಳದು ಉಣ್ಣಬೇಕು. ಅದು ಬುಟ್ಟು ಮಾರ್ಕೊಂಡು ಹೋದೀರಿ ಮತ್ತ!' ಅಂದ ಗೌಡ. ಪಲ್ಲಂಗದಲ್ಲಿ ಕುಂತಿದ್ದ ಗೌಡನನ್ನು ಬಂದ ಮೂವ್ವರು ಖುಷಿಯಿಂದ ನೋಡಲಿಲ್ಲ. ಬದಲಾಗಿ ಶೂನ್ಯ ದೃಷ್ಟಿಯಿಂದ ಕುಂತಿದ್ದರು, ಪಡಸಾಲೆಯ ಕೆಳಗಿನ ಅಂಕಣದಲ್ಲಿ.

ನಾನು ಯಾರಿಗೂ ಹೆದ್ರಿಕೊಂಡು ನಿಮ್ಗ ಜಮೀನು ಕೊಡಕತ್ತಿಲ್ಲ. ಗೌಡನ

ಮಾತಿಗೆ ಯಾರೂ ಮಿಸಕಲಿಲ್ಲ.

''ನಮ್ಮ ಗೌಡನ ಜಮೀನ್ಯಾಗ ನಿಮ್ಮ ಮನೆಮಂದಿಯೆಲ್ಲ ದುಡುದಾರ. ಮತ್ತ ಗೌಡನ ಮಕ್ಕಳು ದೊಡ್ಡ ಕೆಲ್ಸದಾಗ ಇದ್ದಾರ. ನಿಮ್ಮನ್ನೂ ಮಕ್ಳು ಅಂತ ತಿಳದು ಭೂಮಿ ಕೊಡ್ತಾರ. ಮಾಡಿಕೊಂಡು ಹೋಗ್ರಿ. ಭೂಮಿ ಅಂದ್ರ ನದರ ಇಲ್ದಂಗ ಮಾತಾಡದು ಪಾಡಲ್ಲ. ಏನಂದಿ ರಾಮಣ್ಣ... ?'' ದಸ್ತಗಿರಿ ಕೇಳಿದ.

''ಅಂವ ಚಂದ್ರಪ್ಪ ನಿಮ್ಮಲ್ಲಿಗೆ ಬಂದು ಮತ್ತೇನಾರ ಬತ್ತಿ ಇಟ್ಟಾನೇನು ?'' ಗೌಡ ಕೇಳಿದ.

''ಗೌಡ, ಚಂದ್ರಪ್ಪ ಗಿಂದ್ರಪ್ಪ ಅವರು ಬೈಲಿಗೆ, ಕೇರಿಗೆ ಬರ ಪೈಕಿಯಲ್ಲ ಬುಡು ತಂದೆ. ಆ ಜನ್ರು ಗುಡ್ಡದಾಗ ಇರುವ ತಾಂಡಾದ ಮಂದಿಗೆ ಬಾಳ ಬಾಳ ನೆರವಾಗ್ಯಾರಂತ. ಊರುಕೇರಿ ಮಂದಿಗೆ ಅವರ ಕೂನ ಗುರ್ತು ಇಲ್ಲ. ನಮ್ಮಂಥ ಜಮೀನಿಲ್ದ ಮಂದಿಗೆ ಜಮೀನು ಕೊಡಸಾಕ ಜಮೀನ್ದಾರರ ಮ್ಯಾಲೆ ಕಣ್ಣಿಟ್ಟಾರಂತ ಅಂಬೋದು ಕೇಳೀವಿ. ನರಸನಗೌಡ ಆ ಮಂದಿ ಮಾತು ಕೇಳಲಿಲ್ಲ, ಪೊಲೀಸ್ರು ಬಳಿ ನರಸನಗೌಡ ಬಾಳ ಬಾಳ ಹೋಗಿ ಚಂದ್ರಪ್ಪನ ಮಂದಿಗೆ ಕಿರಿಕಿರಿ ಮಾಡಿದ್ನಂತ. ಅದ್ಕ ಅವನ್ನ ಮುಗಿಸಿದ್ರು ಅಂತ ಮಂದಿ ಮಾತಾಡ್ತಾರ...'' ಬ್ಯಾಗಾರ ರಾಮ ಮಾತಿಗೆ ನಿಂತ.

''ಅದು ಖರೇವದ ಮತ್ತ. ನರಸನಗೌಡ ಸತ್ತೆ ಹ್ವಾದ. ಅಷ್ಟ್ಯಾಕ ಪೊಲೀಸ್ರ ಕೂಟ ಬಾಳ ಗೆಳೆತನ ಮಾಡ್ಯಾನಂತ ತಳವಾರ ಯಂಕನನ್ನ ಮುಗಿಸಿದ್ರಲ್ಲ. ಚಂದ್ರಪ್ಪನ ಮಂದಿ ಬಗ್ಗೆ ಚೂರುಚೂರು ಮಾತಾಡಿದ್ದು ಕೇಳಿದ್ರ ಪೊಲೀಸ್ರು ಸಂಸ್ಯಾದಿಂದ ನೋಡಿ ಸ್ಟೇಸನ್ನಕ ನಡಿ ಅಂತಾರ. ನಮ್ದು ನೋಡು ಫಜೀತಿ ಹೆಂಗದ ?'' ವಡ್ಡರ ಮಲ್ಲ ಅಂದ.

''ತಳವಾರ ಯಂಕ ಬಾಯಿ ಸತ್ತ ಮನ್ಷ್ಯಾ ಇದ್ದ ಪಾಪ ! ಜೀವ ಹೊಡದರಲ್ಲ'' ರಾಮ.

''ನಿಮ್ಮ ಸಲೇಕ ಅವರು ಹೋರಾಟ ನಡೆಸ್ಯಾರಲ್ಲ ಮತ್ತ! ಅಲಾ ಇವನಪ್ಪನ, ನಿಮ್ಮ ಹಕಿಕತ್ತು ಏನು ?''

''ಗೌಡ, ಇದೇನು ಮಾತು ತೆಗೀರಿ ! ನಮ್ಮ ಸಲ್ಯಾಕ ಯಾರ ಬಡದಾಡ್ತಾರ ಬುಡ್ರಿ. ಫಾಯಿದಾ ಏನದ ?'' ರಾಮ.

''ನಾನು ಅದೇ ಅಂತೀನಿ ಮತ್ತ! ಇವನಪ್ಪನ ತಂದು, ಯಾರಿಗೆನ್ನ ಹೆದರಿ ನಿಮ್ಗ ಜಮೀನು ಹಂಚಲ್ಯಾಕ ನಾನು ನಿಂತಿಲ್ಲ. ನನ್ನ ಜಮೀನ್ದಾಗ ದುಡದ ಜನ್ರು ನೀವು. ಅದ್ಕ ಜಮೀನು...'' ಗೌಡ ಹೇಳುತ್ತಿದ್ದ ನಡುವೆ ಬಾಯಿ ಹಾಕಿದ ವಡ್ಡರ ಮಲ್ಲ, ಜಮೀನು ತಗಂಡು ನಾವೇನು ಮಾಡಾಮಿ ತಂದೆ. ಹಿಂಗಂತೀನಿ ಅಂತ ಮುಖ ಕರ್ರಗ ಮಾಡಬ್ಯಾಡ್ರೀ ಯಪ್ಪ. ನಮ್ಮ ಸೀಮೆಗೆ ಮಳೆ ಬೀಳದ ಕಮ್ಮಿ. ಅದ್ಯಾವುದೋ ಡ್ಯಾಮಿನಿಂದ ನೀರು ಬರ್ತಾವು, ನೀರು ಬರ್ತಾವು ಅಂತ ತಾತ ಅಂತಿದ್ದ. ನಮ್ಮಪ್ಪನೂ ಹೇಳ್ತಿದ್ದ. ನನ್ನ ಕಾಲಕ್ಕೂ ನಮ್ಮ ಸೀಮೆಗೆ ನೀರಾವರಿ ಬರ್ಲಿಲ್ಲ. ಬಂದ್ರೂ ಸುಖಾ ಇಲ್ಲಂತ ಕೆಳಗಡೆ ಸೀಮೆ ಮಂದಿ ಹೇಳ್ತಾರ. ಜಮೀನ್ದಾಗ ಸುಖಾಯಿಲ್ಲ ಅಂತ ಕೂಲಿ ಮಾಡಾಕ ರೈತ ಮಂದಿ ನಡದಾರ, ಗೌಡ್ರ'' ಅಂದ ಹಿಂದ ಮುಂದ ನೋಡುತ್ತ.

''ಖರೇ ಅದ. ಗೌಡ, ಮಲ್ಲ ಅಂಬೋದು ಖರೇ ಅದ. ನಮ್ಮೂರಾಗ ಹತ್ತು ಹದಿನೈದು ಕೂರಿಗೆ ಜಮೀನಿದ್ದ ಮಂದಿ ಸಾಲ ಮಾಡಿ ಕೊನಿಗಿ ಸಡಕ್ ಕೆಲ್ಸಕ್ಕ ನಿಂತಾರ. ನಿಮ್ಗ ಗೊತ್ತದಲ್ಲ, ಬಾಳ ಮಂದಿ ಜಮೀನ್ದಾಗ ಫಾಯಿದಾ ಇಲ್ಲಂತ ನಿಮ್ಗ ಸಸ್ತದಾಗ ಮಾರಿ ಮಾರಿ ಹೋಗ್ಯಾರ'' ಬ್ಯಾಗಾರ ರಾಮ ಅಂದ.

''ಗೌಡ, ಕಿಸಾನ್ ಮಂದಿ ಜಮೀನು ಐತಂತ. ಅದನ್ನ ನಂಬಿಕೊಂಡು ಒಕ್ಕಲತನ ಮಾಡಿ ಮಾಡಿ ಸಾಲ ಮಾಡಿಕೊಂಡು ತೀರಿಸಕ ಆಗ್ದೆ ಸತ್ತು ಸತ್ತು ಹೋಗ್ಯಾರ. ನಮ್ಮ ತಾಲೂಕದಾಗ ಸತ್ತಾರಲ್ಲ ಗೌಡ. ನಿನ್ಗ ತಿಳಿಲಾರದ್ದೇನಲ್ಲ'' ವಡ್ಡರ ಮಲ್ಲ ಅಂದ.

''ಹಂಗಂತ ಜಮೀನು ಬ್ಯಾಡೇನು ? ಭೂಮಿತಾಯಿನ್ನ ಹಂಗ ಕೈ ಬುಡ್ತೀರೇನು ?'' ದಸ್ತಗಿರಿ ಸಿಟ್ಟು ಮಾಡಿಕೊಂಡ.

''ಭಪ್ಪರೆ ಮಕ್ಳ ! ಜಮೀನು ಬ್ಯಾಡಾಯ್ತೇನು ನಿಮ್ಗೆಲ್ಲ?'' ಗೌಡ ಚಡಪಡಿಸಿದ. ಗಾಬರಿಯಾಗಿ ನೋಡಿದ.

''ಗೌಡ, ನಿಮ್ಗ ನಾವೇನು ಹೇಳಮಿ ? ಈಗ ಬಡಾಸಡಕ್ ಕೆಲ್ಸಕ್ಕ ಹೋದ್ರ ವಾರಕ್ಕ ಸಾವುರ ರೂಪಾಯಿ ಸಿಗ್ತಾವ. ಗಂಡ-ಹೇಣ್ತಿ ಹೋದ್ರಕ ನಮ್ಮ ಜೀವನಕ್ಕ ತ್ರಾಸಿಲ್ಲ. ಈಗ ನೋಡ್ರಿ, ನನ್ನ ಮಗ ಓದ್ಯಾನ, ರಾಮನ ಮಗ್ಳು ಓದ್ಯಾಳ. ಕೇರ್‍ಯಾಗ ದುಡಕಂಡು ತಿಂಬ ಮಂದಿ ಈಗೀಗ ಶಾಲಿ ಕಲತು ಕುಂತಾವ. ನಿಮ್ಮ ಮಕ್ಕಳು ದೊಡ್ಡ ದೊಡ್ಡ ಕೆಲ್ಸದಾಗರ ಅಂಬೋದು ಕೇಳೀವಿ. ಅವುರಿಗೆ ಹೇಳ್ರಿ, ನಮ್ಮ ಮಕ್ಕಳಿಗೆ ಒಂದು ಸಣ್ಣ ಸಣ್ಣ ಚಾಕ್ರಿ ಕೊಡ್ಲಿದ್ರ, ತಿಂಗಳ ತಿಂಗಳ ಪಗಾರ ಬರುವಂತೆ ಅದ್ರ ನಮ್ಗ ಪಾಡ'' ವಡ್ಡರ ಮಲ್ಲ ಕೇಳಿದ.

''ಗೌಡ, ಬಟ್ಟಿ ಮಿಲ್ಲು ಬಂದಾಯ್ತು. ಮಗ, ಸೊಸೆ ಮನಿಗೆ ಬಂದಾರ. ಈಗ ಗೋವಾಕೋ ಎಲ್ಲಿಗೊ ಹೋಗಿ ಬದುಕಾಕ ನೋಡ್ತಾರ. ನಮ್ಮ ತಾಲೂಕದಾಗ ಬರುವ ಮಿಲ್ಲುಗಳು, ಗಿರಣಿಗಳು, ಬಟ್ಟಿಗಳು ದಿನ ದಿನ ಮುಚ್ಚಾಕ ಹತ್ಯಾವ. ಹಳ್ಳಿ ಮಂದಿ ಪಟ್ಟಣ ಸೇರಿ ಕಟ್ಟಡ ಕೆಲ್ಸಕ್ಕ ಹೋಗ್ತಾರ. ಮಲ್ಲ ಅಂದಂಗ ತಿಂಗಳ ತಿಂಗಳ ಪಗಾರ ಬರುವ ಕೆಲ್ಸ ಬೇಕ್ರಿ ನಮ್ಗ. ಸೇತಿ ಸವಾಸ ಬ್ಯಾಡ'' ಅಂದ ರಾಮ ಕೈ ಮುಗುದು.

''ನಿಂದೇನು ಹೇಳವ್ವ ರಗಳೆ ? ನಿನ್ಗ ಜಮೀನು ಬ್ಯಾಡೇನು ?'' ಗೌಡ ಬಸ್ಸಿ ಭೀಮವ್ವನನ್ನು ಕೇಳಿದ.

''ಗೌಡ, ಮಲ್ಲಪ್ಪಣ್ಣ, ರಾಮಣ್ಣ ಅಂಬೋದು ವಾಜಮೀ ಐತೆ. ನನ್ಗ ಜಮೀನು ಯಾಕ ? ನಾನು ಸತ್ರ ಹೆಣ ಇಡಾಕ ಬೇಕೇನು, ಈ ಮೂಳಗ ? ನನ್ನ ಕೂದಲಿನ ಬಣ್ಣ ಮಾಸ್ಯಾದ. ಕಣ್ಣಾಗಿನ ಬೆಳಕು ಮಾಸ್ಯಾದ. ದುಡಿಯಾಕ ಸತುವು ಇಲ್ಲ. ಮನೆಮಂದಿ ಗುಳೆ ಹೋಗ್ಯಾರ. ಗೌಡ, ತಿಂಗ್ಳಿಗಿ ಒಂದಿಷ್ಟು ದುಡ್ಡು ಕೊಡ್ತಾರಲ್ಲ ಸರ್ಕಾರ್‍ದೋರು... ಹಂಗ ಕೊಡ್ಸಿದ್ರ ಸಾಕು. ಜಮೀನು ಬ್ಯಾಡ್ರಿಯಪ್ಪ'' ಅಂದಳು ಕೈ ಮುಗುದು.

''ಥತ್ ಇವರಪ್ಪನ ತಂದು ! ದಸ್ತಗಿರಿ, ಜಮೀನು ಕಾಲಕಸ ಆಯ್ತಲ್ಲ ಈ ಮಂದಿಗೆ ? ಎಂಥ ಕಾಲ ಬಂತಲ್ಲ? ಅಂವ ನೋಡಿದ್ರ ಜಮೀನು ಹಂಚಿ ಕೊಡ್ರಿ, ಬಡವರು, ಕೇರಿಮಂದಿಯ ಅಸ್ತಿತ್ವದ ಪ್ರಶ್ನೆ ಇದು ಅಂತ ಬೊಬ್ಬೆ ಹೊಡಿತಿದ್ದ!'' ಗೌಡ ಸಿಟ್ಟಿನಿಂದ ಎದ್ದು ನಿಂತ.

''ನಮ್ಮ ಗೌಡ, ನಿಮ್ಗ ಒಂದೊಂದು ಕೂರಿಗೆ ಭೂಮಿ ಕೊಡ್ತಾನಪ್ಪ. ಹ್ಞೇ ಮಲ್ಲ, ಹ್ಞೆ ರಾಮ, ಅವ್ವಾ...''

ದಸ್ತಗಿರಿ ಗಾಬರಿಯಾಗಿ ಮುಟ್ಟಿ ಮುಟ್ಟಿ ಕೇಳಿಕೊಂಡ. ಒಂದು ತಾಸು ಮಾತುಕತೆ ಆಯ್ತು. ಗೌಡನ ಜಮೀನನ್ನು ಯಾರೂ ಪಡೆಯಲು ಮನಸ್ಸು ಮಾಡಲಿಲ್ಲ. ಎಲ್ಲರೂ ಮೆಲ್ಲಕ ಎದ್ದು ಹೋದರು. ದಸ್ತಗಿರಿ ತಲಬಾಗಿಲಲ್ಲಿ ನಿಂತು ಅವರು ಹೋದದ್ದನ್ನು ನಿಂತು ನೋಡಿ, ಮುಖ ಬಾಡಿಸಿಕೊಂಡು ಬಂದ. ಗೌಡ ಪಡಸಾಲೆ ಇಳಿಯುವ ಪಾಂಟಣಿಗೆ ಮ್ಯಾಲೆ ಕುಂತಿದ್ದ! ದಸ್ತಗಿರಿ ಹೌಹಾರಿ, ''ಗೌಡ್ರಾ, ಇದೇನು...'' ಅಂತಂದ! ಶರಭನಗೌಡ ಎಂದೆಂದೂ ಅಂಕಣದಿಂದ ಪಡಸಾಲೆ ಏರುವ, ಇಳಿವ ಪಾಂಟಣಿಗಿ ಮ್ಯಾಲೆ ಕುಂತಿರಲಿಲ್ಲ. ಅದೇನಿದ್ದರೂ ದಸ್ತಗಿರಿ ಅಂಥವರು ಕುಂದ್ರುವ ಜಾಗವಾಗಿತ್ತು.

''ದಸ್ತಗಿರಿ, ನನ್ನ ಜಮೀನು ಪುಗಸಟ್ಟೆಯಾಗಿ ಅಭಿಮಾನದಿಂದ ಕರದು ಕೊಡಾಕ ಹೋದ್ರ ಈ ಮಂದಿ, ನಮ್ಮೂರಿನ ಕೇರಿಮಂದಿ ಬ್ಯಾಡಂದ್ರಲ್ಲಪ್ಪ! ನನ್ಗ ಅವಮಾನ ಮಾಡಿದ್ರಲ್ಲ?'' ಅಂತ ಗೌಡ ಮುಖ ಮುಚ್ಚಿಕೊಂಡ. ದಸ್ತಗಿರಿಗೆ ಮಾತು ಹೊರ ಬರಲಿಲ್ಲ. ಕೈಯಲ್ಲಿದ್ದ ಅನ್ನ, ಕೈತಪ್ಪಿ ನೆಲಕ್ಕೆ ಬಿದ್ದರೆ ಆಗುವಂಥ ಸ್ಥಿತಿ ದಸ್ತಗಿರಿದಾಗಿತ್ತು. ಗೌಡನ ಮುಂದ ಸಂಕಟಪಡುತ್ತ ನಿಂತಿದ್ದ. ಗೌಡ ಕುಂತವರು ಏಳಲಿಲ್ಲ. ಮುಖ ಮುಚ್ಚಿಕೊಂಡ ಕೈ ತೆಗದು, ''ದಸ್ತಗಿರಿ, ಚಂದ್ರಪ್ಪ ಯಾವಾಗ ಸಿಗ್ತಾನ. ನಾನು ಅವನ್ನ ನೋಡ್ಬೇಕಾಗ್ಯಾದ'' ಅಂತ ಕೇಳಿದ.

''ನೋಡ್ಬೇಕು ಅಂದಾಗ ಅಂವಗ ನಾವು, ನಮ್ಗ ಅಂವ ಸಿಗದು ಸರಳ ಇಲ್ಲ ಗೌಡ.''

''ದಸ್ತಗಿರಿ, 'ಜಮೀನು ಬ್ಯಾಡ' ಅಂತ ಹೋದ್ರಲ್ಲ ಅವರ ಮನೆಗೆ ಹೋಗಿ, ಕೈ ಕಾಲು ಹಿಡಕಂಡು ನನ್ನ ಜಮೀನು ಬ್ಯಾಡ ಅನ್ನಬ್ಯಾಡ್ರೀ ಅಂತ ಕೇಳ್ತೀನಿ. ಇಲ್ಲಂದ್ರ ನನ್ಗ ಅವಮಾನ ತಡ್ಕಳ್ಳದಾಗದಿಲ್ಲ. ನಡಿ, ಕೇರಿಗೆ ಹೋಗಾಮಿ'' ಅಂದ ಗೌಡ ಎದ್ದು ನಿಂತ. ಹೋಗುವ ಮುನ್ನ ಗೌಡನಿಗೆ ಏನೋ ಹೊಳೆದಂಗಾಯ್ತು. ನಿಂತು ದಸ್ತಗಿರಿಯನ್ನು ನೋಡಿದ. ನೋಡುತ್ತ, 'ದಸ್ತಗಿರಿ, ಒಂದು ಮಾತು ಕೇಳ್ತೀನಿ. ಖರೇ ಹೇಳ್ಬೇಕು. ಮಗನ. ನಾನು ನಿನ್ಗ ಎಲ್ಡು ಕೂರಿಗೆ ಜಮೀನು ಕೊಡ್ತೀನಿ. ಆ ಜಮೀನಿನ್ಯಾಗ ವ್ಯವಸಾಯ ಮಾಡ್ಕೊಂಡು ಇರ್ತಿದೇನು ? ಯಾಕಂದ್ರ, ಇನ್ನ ಮ್ಯಾಲೆ ನಾನೂ ಮಕ್ಕಳಲ್ಲಿಗೆ ಹೋಗಿ ಇರ್ಬೇಕಂತ ಮಾಡೀನಿ. ನಾನು ಹೋದ್ರ ನಿನ್ನ ಚಾಕ್ರಿನೂ ಇರದಿಲ್ಲ' ಅಂದ ಗೌಡ.

ದಸ್ತಗಿರಿಗೆ ಮಾತು ಹೊರಬರಲಿಲ್ಲ! ಚಡಪಡಿಸಿದ ! ಗೌಡನನ್ನೂ ನೋಡುವ ಸ್ಥಿತಿಯಲ್ಲಿ ಇರಲಿಲ್ಲ! ಆದರೂ 'ಗೌಡ, ಇಷ್ಟು ದಿನ ನಿಮ್ಮ ನೆಳ್ಳಾಗಿದ್ದು ಚಾಕ್ರಿ ಮಾಡೀನಿ! ನೀವು ಶಹರಕ್ಕ ಹೋದ್ರ ನನ್ನನ್ನೂ ಕರಕಂಡು ಹೋಗ್ರಿ ಮತ್ತ. ನೀವು ಬದುಕಿರೋತನ್ಕ ಚಾಕ್ರಿ ಮಾಡ್ತೀನಿ. ನೀವು ಚೂರುಚಾರೂ ಪಗಾರ ಕೊಟ್ರ ಅದನ್ನ ಹೇಣ್ತಿ ಮಕ್ಕಳಿಗೆ ಕಳಿಸ್ತೀನಿ. ಅವುರೂ ಬದುಕ್ತಾರ. ಜಮೀನು ನನ್ಗ ಬ್ಯಾಡ್ರೀ...' ಅಂದು ತಲೆತಗ್ಗಿಸಿ ನಿಂತ.

ಇಬ್ಬರೂ ದೆಸೆಗೆಟ್ಟ ಸ್ಥಿತಿಯಲ್ಲಿ ನಿಂತಿದ್ದರು !

ಅಮರೇಶ ನುಗಡೋಣಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

# ನಿನ್ನೆ ಸಫ್ಧರ ಸಿಕ್ಕ



ಸತೀಶ ಕುಲಕರ್ಣಿ
೨೪೨, ಬಸವೇಶ್ವರನಗರ, ಹಾವೇರಿ

ಮಹಿಳಾ ಕಾಲೇಜಿನಲ್ಲಿ
ಬೀದಿ ನಾಟಕ ಮಾಡುವಾಗ
ನಿನ್ನೆ ಆ ಸಫ್ಧರ ಹಶ್ಮಿ ಸಿಕ್ಕ.

ಏರು ಗೂದಲದ ಕ್ರಾಫ್‌ಧಾರಿ
ಕುತ್ತಿಗೆಗೆ ಸುತ್ತಿದ ನಶ್ಯ ಶಾಲು
ಬೆಳ್ಳಿ ಚಾಳಿಸುಧಾರಿ ಸಫ್ಧರ
ನನ್ನ ಬೀದಿ ನಾಟಕ ನೋಡುತ್ತ ನಿಂತಿದ್ದ.

ಎತ್ತರದ ದನಿಯಲ್ಲಿ
ನಾನು ಹಾಡಿದೆ, ಕೈ ಬೀಸಿ ಡೈಲಾಗು ಹೇಳಿದೆ
ಹಲ್ಲಬೋಲದ ಕ್ರಾಂತಿ ಗೀತೆ ಹಾಡಿದೆ.

ಅವನು ನಗಲಿಲ್ಲ
ಅವನು ಅಳಲಿಲ್ಲ
ಅವನು ಚಪ್ಪಾಳೆ ತಟ್ಟಲಿಲ್ಲ.

ಸುತ್ತ ನಿಂತವರ
ಒಂದೊಂದು ಮುಖ ನೋಡಿದೆ
ಎಲ್ಲವೂ ಮೂಕ, ಮೌನ, ಸ್ತಬ್ಧ.

ಬಾಂಬು ನುಂಗಿ ನಿಂತವರ
ಅವರ ಕಣ್ಣುಗಳಲ್ಲಿ
ಸೂಜಿ ಕಾರಖಾನೆಯನ್ನು ಕಂಡೆ.

ಅವರ ಕಾಲುಗಳು
ಭಲ್ಲೆಯಂತೆ ಅಲ್ಲೆ ನಿಂತಿವೆ
ನನ್ನ ಮಾತುಗಳು ಅವರ ಕಿವಿಗೆ
ಹೋದವೊ ಇಲ್ಲವೊ ಗೊತ್ತಿಲ್ಲ.

ನಿಂತವರ ನಡುವೆ
ಆ ಶಾಂತ ಸಾಗರ ಸಫ್ಧರ
ಏನೋ ಗುಮಾನಿ, ಏನೋ ಅಳುಕು
ತೆರೆಗಳ ಹೊತ್ತು ನಿಂತಿದ್ದಾನೆ.

ಹಾಡು, ಕುಣಿತ,
ಸಂಗೀತದಲ್ಲಿ
ಮುಳು ಮುಳುಗಿ ಎದ್ದಿದೆ ನಾಟಕ.

ಹೀಗೆ ಇರಬೇಕಲ್ಲವೆ ಸಫ್ಧರನ ಆ
ದೆಹಲಿಯ ಹಿತ್ತಲದ ಹೆದ್ದಾರಿ
ಕೂಟಿನ ಆ ಮುಂಜಾವು

ನನ್ನಂತೆ
ಹೀಗೇ ಹಾಡುತ್ತ ಕುಣಿಯುತ್ತ

ಕ್ರಾಂತಿಯ ರಣಹಲಿಗೆ ಹೊಡೆಯುತ್ತ
ನೀನಿದ್ದಿರಬಹುದಲ್ಲವೆ ?

ಈ ಹಾದಿಯಲ್ಲಿ
ಹೊಸ ಹಾದಿ ಹುಡುಕಬೇಕೆಂದು
ಹೊರಟವ
ಹಾದಿ ಹೆಣವಾದಿಯಲ್ಲವೆ ?

ನನ್ನ ನಾಟಕ ಗಕ್ಕನೆ ಮುಗಿಯಿತು

ನನ್ನ ಜೋಳಿಗೆಯಲ್ಲಿ
ಯಾರು ಹತ್ತು , ಯಾರು ಐದು,
ಅವರವರ ಕಿಸೆ ತಾಕತ್ತಿನಂತೆ ರೊಕ್ಕ ಹಾಕಿದರು.

ಸಫ್ಧರ ಈಗ ಕಾಣಲಿಲ್ಲ.

ಹೆಗಲಿಗೆ ಡೋಲು
ಕೊರಳಿಗೆ ಮಫ್ಲರು
ಕೈ ಜೋಳಿಗೆ ಹಿಡಿದು ಓಡಿದೆ.

"ನಿಲ್ಲು ಸಫ್ಧರ ನಿಲ್ಲು,
ಈ ಜೋಳಿಗೆಗೆ ಏನಾದರು ಹಾಕೆಂದು'' ಕೇಳಿದೆ.

ಜನ ನಿನಗೆ ಕೊಟ್ಟರು
ನೀನು ನನಗೆ ಕೊಡು ಎಂದೆ.

ಕಣ್ಣಲ್ಲಿ ಹುಸಿ ನಗೆ ನಕ್ಕ
ಹಣ್ಣೆಲೆ ಉದರಿದಂತೆ

ಕಿಸೆಯಿಂದ ಹರಕು ಹಾಳೆಯ ತೆಗೆದು
ಮುಷ್ಟಿಯಲ್ಲಿ ಮುದ್ದೆಮಾಡಿ
ನನ್ನ ಜೋಳಿಗೆಗೆ ಹಾಕಿದ.

ಹೆಬ್ಬೆರಳ ರಕ್ತ
ಸಿಕ್ಕಾ ಸೀಲು ಅದರ ಮೇಲಿತ್ತು
ಸಫ್ಧರ ಮರೆಯಾಗಿದ್ದ.

# ಜಗದ ಚಾವಣಿಯಲ್ಲಿ ಶಿವನ ಗಿರಿ ಶಿಖರ



ಎನ್. ಗಾಯತ್ರಿ

ಭಾರತೀಯರಿಗೂ ಹಿಮಾಲಯಕ್ಕೂ ಬಹಳ ನಂಟು. ವಿಶ್ವದ ಎಲ್ಲಾ ಪರ್ವತಗಳಿಗಿಂತಲೂ ಎತ್ತರವೂ, ವಿಸ್ತಾರವೂ ಆದ ಈ ಪರ್ವತಶ್ರೇಣಿಯತ್ತ ಒಮ್ಮೆ ಚಾರಣ ಮಾಡಿದರೂ ಸಾಕು ಅದು ಮತ್ತೆ ಮತ್ತೆ ನಮ್ಮನ್ನು ಕೈ ಬೀಸಿ ಕರೆಯುತ್ತದೆ. ಉತ್ತರ ಭಾರತದ ಗಡಿಯುದ್ದಕ್ಕೂ ೧೬೦೦ ಮೈಲಿಗಳಷ್ಟು ವಿಸ್ತಾರವಾಗಿ ಹರಡಿರುವ ಈ ಪರ್ವತಶ್ರೇಣಿ ಕಂದಹಾರ ಮತ್ತು ಕಾಶ್ಮೀರದಿಂದ ಹಿಡಿದು ಅಸ್ಸಾಂನ ಪೂರ್ವಭಾಗದ ಕೊನೆಯವರೆಗೂ ೨೦೦ ಮತ್ತು ೩೦೦ ಮೈಲಿಗಳ ಅಗಲದಷ್ಟು ವಿಸ್ತಾರವಾಗಿದೆ. ಗಢ್‌ವಾಲ್ ಹಿಮಾಲಯದ ಚಾರ್‌ಧಾಮಗಳು, ಕುಸುಮ ಕಣಿವೆ, ಹಿಮಾಚಲದ ಚಂದ್ರಖನಿ ಪಾಸ್ ಮತ್ತು ನೇಪಾಳದ ಅನ್ನಪೂರ್ಣ ಬೇಸ್ ಕ್ಯಾಂಪ್‌ನತ್ತ ಚಾರಣವನ್ನು ಈಗಾಗಲೇ ಮಾಡಿ ಮುಗಿಸಿದ್ದ ನಾನು ಮತ್ತು ನನ್ನ ಗೆಳತಿ ವಿಜಿ ಕೊನೆಯದಾಗಿ ಟಿಬೆಟ್‌ನ ಕೈಲಾಸ-ಮಾನಸ ಸರೋವರವನ್ನೂ ನೋಡಿಬಿಡಬೇಕೆಂಬ ಆಸೆಯಿಂದ ಯೋಜನೆ ಹಾಕಿದ್ದು, ಅಂತೂ ಅದು ಕಾರ್ಯಗತಗೊಂಡದ್ದು ಇತ್ತೀಚೆಗೆ.

ಸಾಮಾನ್ಯವಾಗಿ ಕೈಲಾಸ-ಮಾನಸ ಸರೋವರದ ಯಾತ್ರೆಯನ್ನು ಧಾರ್ಮಿಕ ಯಾತ್ರೆ, ಪುಣ್ಯ ಯಾತ್ರೆಯೆಂದು ಭಾವಿಸಿರುವ ಸರ್ಕಾರ ಇದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಿ ದೆಹಲಿಯ ಮಾರ್ಗವಾಗಿ ನಿರ್ದಿಷ್ಟ ಜನಗಳಿಗೆ ಪ್ರವಾಸ ಮಾಡಲು ಅನುಮತಿ ಮಾಡಿಕೊಡುವುದುಂಟು. ಹಾಗೆಯೇ ನೇಪಾಳ ಮಾರ್ಗವಾಗಿ ಟಿಬೆಟ್ ಪ್ರವೇಶಿಸಿ ಕೈಲಾಸ-ಮಾನಸ ಸರೋವರದ ಯಾತ್ರೆ ಮಾಡುವ ಖಾಸಗಿ ವ್ಯವಸ್ಥೆಯೂ ಒಂದಿದೆ. ನಾವು ನೇಪಾಳದ ಮಾರ್ಗವನ್ನೇ ಆರಿಸಿಕೊಳ್ಳಲು ಎರಡು ಉದ್ದೇಶಗಳಿದ್ದವು : ಇದು ಭಾರತದ ಮಾರ್ಗಕ್ಕಿಂತ ಸುಲಭದ್ದೆಂದು; ಮತ್ತೊಂದು ಜಗತ್ತಿನ ಚಾವಣಿಯೆಂದೇ ಪ್ರಖ್ಯಾತವಾದ ಟಿಬೆಟ್‌ನ ಬಹುಭಾಗದಲ್ಲಿ ಸುತ್ತಾಡಬಹುದಾದ ಅವಕಾಶವೂ ಮುಖ್ಯವೆನಿಸಿತ್ತು.

ಬೆಂಗಳೂರಿನ ಗ್ರೇಟ್ ಔಟ್‌ಡೋರ್ಸ್ ಸಂಸ್ಥೆಯ ಮೂಲಕ ಪ್ರವಾಸ ಹೋಗುವುದೆಂದು ತೀರ್ಮಾನಿಸಿದಾಗ ಮನಸ್ಸಿನೊಳಗೆ ಏನೋ ಒಂದು ಅಳುಕು. ಹಿಂದೆ ಈ ಸಂಸ್ಥೆಯ ಮೂಲಕ ಹೋಗಿಬಂದವರ ಅನುಭವ ಕೇಳಿದ್ದರೂ, ಏನೋ ಅಪರಿಚಿತರ ಜೊತೆ ಹಿಮಾಲಯ ಪ್ರವಾಸ ಕೈಗೊಳ್ಳುತ್ತಿದ್ದುದು ಇದೇ ಮೊದಲು. ತೀರ್ಥಕ್ಷೇತ್ರಗಳಿಗೆ ಈ ಹಿಂದೆ ಪ್ರವಾಸ ಮಾಡಿದ್ದರೂ ಭಕ್ತರ ಗುಂಪಿನೊಂದಿಗೆ ಹೋಗಿರಲಿಲ್ಲ. ನಮ್ಮದೇ ಚಾರಣಪ್ರಿಯರ, ಪ್ರಕೃತಿ ಆರಾಧಕರ ಸಣ್ಣ ಸಣ್ಣ ಗುಂಪಿನಲ್ಲಿ ಪ್ರವಾಸ ಮಾಡಿದ್ದ ನಮಗೆ ಈ ಬಾರಿಯದೊಂದು ವಿಲಕ್ಷಣ ಅನುಭವ. ಅಂತೂ ನಾವಿಬ್ಬರು ಹೊರಡುವ ನಿರ್ಧಾರ ತೆಗೆದುಕೊಳ್ಳುವ ಹೊತ್ತಿಗೆ ನಮ್ಮದೇ ಒಂದು ಸಣ್ಣ ಗುಂಪಾಯಿತು. ಜಿ. ಆರ್. ನಮ್ಮ ಜೊತೆ ಸೇರಿದರು. ೧೯೮೪ರಲ್ಲಿ ಒಮ್ಮೆ ಭಾರತದ ಮಾರ್ಗವಾಗಿ ಕೈಲಾಸ-ಮಾನಸ ಸರೋವರದ ಯಾತ್ರೆ ಮಾಡಿದ್ದ ಜಿ. ಆರ್. ನಮ್ಮ ಜೊತೆ ಸೇರಿದ್ದು ನಮಗೆ ಅತೀವ ಸಂತಸ. ಪ್ರಯಾಣದ ಬಗ್ಗೆ ಇದ್ದ ಆತಂಕಗಳೆಲ್ಲಾ ನಿವಾರಣೆಯಾಯಿತು. ಹಾಗೆಯೇ ನಮ್ಮ ಕುಟುಂಬಗಳಿಗೂ ಇದರಿಂದ ಸಮಾಧಾನವಾಯಿತು.

ಜುಲೈ ತಿಂಗಳಿನಲ್ಲಿ ಬೆಂಗಳೂರಿನಿಂದ ದೆಹಲಿ ಮಾರ್ಗವಾಗಿ ಕಠ್ಮಂಡು ತಲುಪಿದ ನಮಗೆ ಸುಸಜ್ಜಿತವಾದ 'ಮನಸ್ಲು' ಹೋಟೆಲ್‌ನಲ್ಲಿ ಉಳಿದುಕೊಳ್ಳಲು ವ್ಯವಸ್ಥೆ ಮಾಡಿದ್ದರು. 'ಮನಸ್ಲು' ನೇಪಾಳದ ಹಿಮಾಲಯ ಗಿರಿಶ್ರೇಣಿಯಲ್ಲಿ ಒಂದು ಗಿರಿಶಿಖರ. ಇಲ್ಲಿ ವ್ಯವಸ್ಥೆ ಚೆನ್ನಾಗಿತ್ತು. ಇಲ್ಲಿನ 'ಇಕೋ ಟ್ರಾವಲರ್ಸ್' ಸಂಸ್ಥೆಯೊಂದಿಗೆ ಬೆಂಗಳೂರಿನ 'ಗ್ರೇಟ್ ಔಟ್‌ಡೋರ್ಸ್' ಸಂಸ್ಥೆ ಜಂಟಿಯಾಗಿ ಈ ಕಾರ್ಯಕ್ರಮ ಏರ್ಪಡಿಸಿದ್ದಿತು. ಈ ಹೋಟೆಲ್‌ನಲ್ಲಿ ನಮಗೆ ಪ್ರವಾಸಕ್ಕೆ ಬೇಕಾದ ಚೀನಿ ಹಣದ ವಿನಿಮಯ ಮತ್ತು ಪ್ರವಾಸದ ಬಗ್ಗೆ ಪೂರ್ಣ ಮಾಹಿತಿಯನ್ನು ಕೊಡಲಾಯಿತು.

ಬೆಂಗಳೂರಿನಿಂದ ಹೊರಟ ೧೬ ಮಂದಿಯನ್ನು ಹೊತ್ತ ಮಿನಿ ಬಸ್ ನೇಪಾಳದಿಂದ ಪ್ರವಾಸ ಆರಂಭಿಸಿತು. ಆರಂಭದಲ್ಲೇ ಧೂಲಿಖೇಲ್ ಎಂಬ ಸುಂದರವಾದ ಗಿರಿಧಾಮವನ್ನು ತಲುಪಿದೆವು. ನಮ್ಮ ಒಟ್ಟು ಪ್ರವಾಸಕ್ಕೆ ಇದು ಶುಭಾರಂಭ. ಸುಸಜ್ಜಿತವಾದ ಹೋಟೆಲ್. ಸುಂದರವಾದ ಜಾಗ. ಸುತ್ತಾಡಲೂ ತುಂಬ ಒಳ್ಳೆಯ ಜಾಗವಾದರೂ ಒಂದು ರಾತ್ರಿ ಮಾತ್ರ ತಂಗಿದ್ದ ನಮಗೆ ಇಲ್ಲಿ ಸುತ್ತಾಡಲೂ ಹೆಚ್ಚು ಸಮಯವಿರಲಿಲ್ಲ. ಧೂಲಿಖೇಲ್‌ನಿಂದ ಕೊಡಾರಿಯತ್ತ ನಮ್ಮನ್ನು ಹೊತ್ತ ಬಸ್ ಚಲಿಸಿತು. ದಾರಿಯಲ್ಲಿ ಭೂ ಕುಸಿತ, ಹಿಂದಿನ ದಿನದಿಂದಲೇ ಮಣ್ಣನ್ನು ಸವರಿ ನೆಲಸಮ ಮಾಡಲು ಪ್ರಯತ್ನಿಸುತ್ತಿದ್ದರಾದರೂ ರಸ್ತೆ

ಸರಿಹೋಗಲು ಬಹಳ ಸಮಯ ಹಿಡಿಯುತ್ತಿತ್ತು. ಒಂದೆರಡು ತಾಸು ವ್ಯರ್ಥವಾಗಿ ಕಳೆದ ಮೇಲೆ ಎಲ್ಲರೂ ಬಸ್ಸಿಂದಿಳಿದು ನಡೆದೇ ಹೋಗಲು ನಿರ್ಧರಿಸಿದೆವು. ಶೆರ್ಪಾ ಹುಡುಗರು ನಮ್ಮ ಲಗ್ಗೇಜನ್ನು ಹೊತ್ತು ತಂದರು. ನಂತರ ಅಲ್ಲಿಂದ ಮತ್ತೊಂದು ಬಸ್ ಹತ್ತಿ ಕಡಾರಿಯನ್ನು ಸಕಾಲದಲ್ಲಿ ತಲುಪಲು ಸಾಧ್ಯವಾಯಿತು. ನಮ್ಮ ಪಾಸ್‌ಪೋರ್ಟು ಗಳನ್ನು ಮುಂಚೆಯೇ ಕೊಟ್ಟುಕಳುಹಿಸಿದ್ದರಿಂದ ನಾವು ಊಟಮಾಡಿ ನಿಧಾನವಾಗಿ 'ಸ್ನೇಹ ಸೇತುವೆ'ಯನ್ನು ದಾಟಿ ಪಾಸ್‌ಪೋರ್ಟ್ ಆಫೀಸಿನ ಮುಂದೆ ನಿಂತೆವು. ಆ ಕಛೇರಿಯಲ್ಲಿ ಕೆಲಸ ಮಾಡುವ ಚಿಕ್ಕ ಚಿಕ್ಕ ಚೀನಿ ಹುಡುಗರು, ಮುಖದಲ್ಲಿ ಅಹಂಕಾರ ತುಂಬಿಕೊಂಡು ಪ್ರವಾಸಿಗರನ್ನು ಮಾತನಾಡಿಸುತ್ತಿದ್ದ ರೀತಿ ಯಾವ ದೇಶಕ್ಕೂ ಮರ್ಯಾದೆ ತರುವಂಥದ್ದಲ್ಲ. ಕೊಡಾರಿಯಿಂದ ಪರವಾನಗಿ ದೊರೆತ ನಂತರ ನಾವು ಬೇರೆಯದೇ ಆದ ವಾಹನದಲ್ಲಿ ಸಂಚರಿಸಬೇಕಾಗಿತ್ತು. ನಾಲ್ಕು-ಐದು ಜನ ಕೂಡಬಹುದಾದ ಲ್ಯಾಂಡ್ ಕ್ರೂಸರ್‌ಗಳಲ್ಲೇ ಪ್ರಯಾಣ ಮಾಡಬೇಕು. ಇಂತಹ ನಾಲ್ಕು ಕ್ರೂಸರ್‌ಗಳಲ್ಲಿ ನಮ್ಮ ಬೆಂಗಳೂರಿನ ತಂಡ ಪ್ರಯಾಣ ಮಾಡಲು ಸಿದ್ಧವಾಯಿತು. ನಮ್ಮ ವಾಹನದಲ್ಲಿ ನಾನು, ವಿಜಿ ಮತ್ತು ಜಿ. ಆರ್. ಜೊತೆಗೆ ತಂಡದ ನಾಯಕ ಪ್ರಸಾದ್ ಆಚಾರ್ಯ ಸೇರಿಕೊಂಡರು.

ಕೊಡಾರಿಯಿಂದ ಜಾಂಗ್ಮುಗೆ ಪ್ರಯಾಣ. ಅಲ್ಲಿ ವೀಸಾ ವಿಧಿ ವಿಧಾನಗಳನ್ನು ಮುಗಿಸಿದ ಮೇಲೆ ಅಲ್ಲಿಂದ ನ್ಯಾಲಂನತ್ತ ಪ್ರಯಾಣ. ನ್ಯಾಲಂನಿಂದ ಸಾಗಾ ಎಂಬ ಚಿಕ್ಕ ಪಟ್ಟಣಕ್ಕೆ, ಅಲ್ಲಿಂದ ಪರ್ಯಾಂಗ್ ಎನ್ನುವ ಊರಿಗೆ ಪ್ರಯಾಣ. ಒಂದಕ್ಕಿಂತ ಒಂದು ಗಲೀಜಾದ ಊರುಗಳು. ಈ ಊರುಗಳಲ್ಲಿರುವ ಹೋಟೆಲ್‌ಗಳು ವಸತಿಗೆ ತಕ್ಕವೆನಿಸಿದರೂ ಶೌಚ ವ್ಯವಸ್ಥೆಯಂತೂ ನರಕ ಸದೃಶವಾಗಿದ್ದವು. ಪರ್ಯಾಂಗ್‌ನಿಂದ ೧೪,೫೦೦ ಅಡಿ ಎತ್ತರದಲ್ಲಿರುವ ಮಾನಸ ಸರೋವರದತ್ತ ನಮ್ಮ ಪ್ರಯಾಣ ಸಾಗಿತು. ಕಟ್ಮಂಡುವಿನಿಂದ ಹೊರಟ ನಮಗೆ ಮಾನಸ ಸರೋವರ ತಲುಪಲು ಸುಮಾರು ೭೫೦ ಕಿ.ಮೀಟರುಗಳಷ್ಟು ದಾರಿ ಸವೆಸಬೇಕಿತ್ತು. ಈ ದೀರ್ಘ ಪ್ರಯಾಣದಲ್ಲಿ ನ್ಯಾಲಂವರೆಗೂ ಇಕ್ಕೆಲಗಳಲ್ಲೂ ಹಸಿರಿನ ಗಿರಿಸಿರಿ ನಮ್ಮ ಕಣ್ಣಿಗೆ ತಂಪು



ನೀಡಿತು. ದಾರಿಯುದ್ದಕ್ಕೂ ಚಿಕ್ಕ ಚಿಕ್ಕ ಜಲಪಾತಗಳು ಕಂಡುಬಂದವು. ಮನ ಸೋಲುವಷ್ಟು, ಕೈ ಸೋಲುವಷ್ಟು ಫೋಟೋಗಳನ್ನು ತೆಗೆದುಕೊಂಡೆವು. ಇಷ್ಟೊಂದು ಸಂಖ್ಯೆಯ ಜಲಪಾತಗಳ ಸರಮಾಲೆಯನ್ನು ನೋಡಿದ್ದು ಇದೇ ಮೊದಲು. ನ್ಯಾಲಂನ ನಂತರ ನಾವು ವಿಶಾಲವಾದ ಪ್ರಸ್ಥಭೂಮಿಯನ್ನು ಪ್ರವೇಶಿಸುತ್ತೇವೆ. ದಾರಿಯುದ್ದಕ್ಕೂ ಕಣ್ಣು ಚಾಚಿದಷ್ಟೂ ವಿಸ್ತಾರವಾದ ಬಯಲೋ ಬಯಲು. ನಿಘಂಟುವಿನಲ್ಲಿರುವ 'ವಿಶಾಲ' ಎಂಬ ಪದದ ಮೂರ್ತ ಅನುಭವ ಈ ಪ್ರಯಾಣದಲ್ಲಿ ಆಗುತ್ತದೆ. ದಾರಿಯುದ್ದಕ್ಕೂ ಚಿಕ್ಕ ಪುಟ್ಟ ಕುರುಚಲು ಗಿಡ ಬಿಟ್ಟರೆ ಎಲ್ಲೂ ಹಸಿರು ಕಂಡುಬರುವುದಿಲ್ಲ. ಆದರೆ, ಪ್ರಯಾಣದುದ್ದಕ್ಕೂ ಇಕ್ಕೆಲಗಳಲ್ಲಿ ಮರಳಿನ ಗುಡ್ಡಗಳ ಸರಮಾಲೆ. ಕಪ್ಪು, ಕೆಂಪು, ಕಂದು. ಅದರದೇ ವಿಚಿತ್ರ ಸೌಂದರ್ಯ! ಒಮ್ಮೆ ನಾವು ಯಾವುದೋ ಮರುಭೂಮಿಯಲ್ಲಿದ್ದೇವೆನ್ನುವ ಭಾವ. ತಕ್ಷಣವೇ ಅಕ್ಕಪಕ್ಕದಲ್ಲಿ ಕಾಣುವ ಚಿಕ್ಕ ಪುಟ್ಟ ಸರೋವರಗಳು, ಎಡದಲ್ಲಿ ಹರಿಯುವ ಬ್ರಹ್ಮಪುತ್ರ, ದೂರದಲ್ಲಿ ಕಾಣುವ ಶೀಷಾಪಾಂಗ ಪರ್ವತಶ್ರೇಣಿ – ಎಲ್ಲವೂ ನಮ್ಮನ್ನು ಬೇರೆಯದೇ ಲೋಕಕ್ಕೆ ಕೊಂಡೊಯ್ಯುತ್ತವೆ.

ಪರ್ಯಾಂಗ್‌ನಿಂದ ಐದು ದಿನಗಳ ಪ್ರಯಾಣದ ನಂತರ ಮಾನಸ ಸರೋವರ ಸಮೀಪಿಸಿದಾಗ ಮಧ್ಯಾಹ್ನದ ಸಮಯ. ಇನ್ನೂ ಮಾನಸ ಸರೋವರ ಎರಡು ಕಿ. ಮೀಟರ್ ಇದೆಯೆನ್ನುವಾಗಲೇ ದೂರದಲ್ಲಿ ಕೈಲಾಸ ದರ್ಶನವಾಯಿತು. ಎಲ್ಲರೂ ತಮ್ಮ ವಾಹನಗಳಿಂದ ಇಳಿದರು. ಬಲಕ್ಕೆ ಕೈಲಾಸ ದರ್ಶನವಾಗುತ್ತಿದ್ದಂತೆ ಯಾತ್ರಿಕರೆಲ್ಲ ರೋಮಾಂಚಿತರಾದರು. ಕೆಲವರು ಕೈಯೆತ್ತಿ ಮುಗಿದರು; ಮತ್ತೆ ಕೆಲವರು ಸಾಷ್ಟಾಂಗ ನಮಸ್ಕಾರ ಮಾಡಿದರು. ಕೆಲವರ ಕಣ್ಣಲ್ಲಿ ಅಶ್ರುಧಾರೆ. ಸುತ್ತಲೂ ಹೂ ಬಿಸಿಲು. ಬಹುದಿನದ ಕನಸು ನನಸಾಗುವ ಅದ್ಭುತ ಕ್ಷಣ. ಇಡೀ ಸನ್ನಿವೇಶವೇ ಮಂತ್ರಮುಗ್ಧವಾಯಿತು. ತಕ್ಷಣ ಎಲ್ಲರ ಕೈಗಳಿಗೂ ಕ್ಯಾಮೆರಾಗಳು ಬಂದವು. ಸಾಕೆನಿಸುವಷ್ಟು ಫೋಟೋಗಳು ಕ್ಲಿಕ್ಕಿಸಿದ್ದೇ ಕ್ಲಿಕ್ಕಿಸಿದ್ದು. ನಂತರ ಎಲ್ಲರೂ ಸರೋವರದ ತೀರಕ್ಕೆ ಧಾವಿಸಿದೆವು. ಪಕ್ಕದಲ್ಲೇ ಕೆಲವು ನಿಮಿಷಗಳಲ್ಲಿ ಟೆಂಟ್‌ಗಳು ಎದ್ದವು. ಜನ ಬಿಸಿಲಿರುವಾಗಲೇ ಸ್ನಾನ ಮಾಡಿಬಿಡಬೇಕೆಂದು ಸರೋವರದತ್ತ ಧಾವಿಸಿದರು. ನಾವೂ ಆ ಗುಂಪಿನಲ್ಲಿ ಸೇರಿದೆವು.

ಭಾರತದ ಬಹು ಮುಖ್ಯ ನದಿಗಳಾದ ಬ್ರಹ್ಮಪುತ್ರ, ಸಿಂಧು ಮತ್ತು ಸಟ್ಲೆಜ್ ನದಿಗಳ ಉಗಮಸ್ಥಾನವಾದ ಮಾನಸ ಸರೋವರಕ್ಕೆ ಭೇಟಿ ನೀಡಬೇಕೆಂಬುದು ನಮ್ಮ ಬಹುದಿನದ ಹಂಬಲ. ಸುಮಾರು ೧೪,೫೦೦ ಅಡಿಗಳಷ್ಟು ಎತ್ತರದಲ್ಲಿರುವ ಹಾಗೂ ೩೫೦ ಅಡಿ ಆಳವಿರುವ ಮಾನಸ ಸರೋವರದ ಸುತ್ತಳತೆ ೮೫ ಕಿ. ಮೀಟರ್‌ನಷ್ಟು, ಜಗತ್ತಿನ ಅತಿ ಎತ್ತರದ ಶುಭ್ರ ಸಲಿಲ ಸರೋವರ ಎನಿಸಿಕೊಂಡಿರುವ ಮಾನಸ ಸರೋವರದಲ್ಲಿ ಮುಳುಗಿ ಅದರ ಮುಂದೆ ನಿಂತು ಕೈಲಾಸ ಪರ್ವತವನ್ನು ವೀಕ್ಷಿಸುತ್ತಿದ್ದಾಗ ಒಂದು ರೀತಿಯ ವಿಲಕ್ಷಣವಾದ ಆದರೂ ಧನ್ಯತೆಯ ಭಾವ ನಮ್ಮನ್ನು ಆವರಿಸುತ್ತದೆ. ಎದುರಿಗೆ ಪ್ರಜ್ವಲಿಸುವ ಸೂರ್ಯ, ಸರೋವರದಲ್ಲಿ ಅದರ ಪ್ರತಿಫಲನ, ಎಡಕ್ಕೆ ಅಗ್ನಿಜ್ವಾಲೆಯಾಗಿ ಹೊಳೆಯುತ್ತ ಇರುವ ಮಾಂಧಾತ ಪರ್ವತ ಶ್ರೇಣಿ – ಈ ನಯನ ಮನೋಹರ ದೃಶ್ಯವನ್ನು ಸವಿಯುತ್ತಿರುವಾಗಲೇ ದಟ್ಟವಾದ

ಮಳೆ ಹೊತ್ತ ಮೋಡಗಳು ಕೈಲಾಸಕ್ಕೆ ಮಂಜಿನ ತೆರೆ ಹೊದಿಸಿದವು. ಸಂಜೆಯಾಗುತ್ತಿದ್ದಂತೆ ಆ ಸರೋವರದ ಇಡೀ ಸನ್ನಿವೇಶವೇ ಮಾಂತ್ರಿಕವಾಗಿ ಪರಿವರ್ತಿತವಾಯಿತು. ಯಾವ ದಿಕ್ಕಿನಲ್ಲಿ ದೃಷ್ಟಿ ಹಾಯಿಸಿದರೂ ಗಿರಿ ಸಮೂಹ. ಅದು ಗಳಿಗೆಗೊಂದು ಬಣ್ಣ ಬದಲಾಯಿಸುತ್ತಾ ಹೋಗುತ್ತದೆ. ನೀಲಿ, ಊದಾ, ಹಸಿರು, ಕಡುಗಪ್ಪು ಮೋಡಗಳ ಆಟವೇ ಆಟ. ಈ ಬೆಟ್ಟಗಳ ಬಣ್ಣಗಳನ್ನು ಮೋಡ ನಿರ್ಧರಿಸಿದರೆ, ಆ ಬಣ್ಣಗಳು ಸರೋವರದಲ್ಲಿ ಪ್ರತಿಫಲಿತವಾಗುತ್ತವೆ. ಯಾವುದನ್ನು ನೋಡುವುದು, ಯಾವುದನ್ನು ಬಿಡುವುದು – ಎಂಬ ತಾಕಲಾಟದಲ್ಲಿರುವಾಗ ಚಿಕ್ಕ ಮಕ್ಕಳಂತೆ ಎಲ್ಲವನ್ನೂ ಮೊಗೆಮೊಗೆದು ಕುಡಿದುಬಿಡಬೇಕೆಂಬ ಅದಮ್ಯ ಆಸೆ ಹುಟ್ಟುತ್ತದೆ. ಅಲ್ಲಿ ಮಾತು ಮೌನವಾಗುತ್ತದೆ. ದೃಷ್ಟಿ ವಿಶಾಲವಾಗುತ್ತದೆ. ಆ ಒಟ್ಟು ಪರಿಸರವೇ ಕನಸೋ ವಾಸ್ತವವೋ ಎಂಬ ಭ್ರಮೆ ಆವರಿಸುತ್ತದೆ. ಸುಂದರ ಚಿತ್ರ ಚಿತ್ತಾರದ ಹಾಗೆ ನಮ್ಮ ಮನೋಭಿತ್ತಿಯಲ್ಲಿ ಇಡೀ ಸನ್ನಿವೇಶ ಮುದ್ರೆಯೊತ್ತುತ್ತದೆ. ಈ ಅನನ್ಯ ಕ್ಷಣಗಳು ಹೆಚ್ಚು ಕಾಲ ಇರಲಾರದೆನ್ನುವಂತೆ ಮಳೆ ಹನಿಯಲು ಆರಂಭಿಸಿತು. ನಂತರ ಸುರಿದ ಜೋರಾದ ಮಳೆಯಿಂದ ಆ ರಾತ್ರಿ ಹುಣ್ಣಿಮೆಯ ಚಂದ್ರನನ್ನು ನೋಡುವ ಭಾಗ್ಯದಿಂದ ವಂಚಿತರಾದೆವು.

ಮಾನಸ ಸರೋವರದ ತಟದಲ್ಲಿ ಎರಡು ದಿನಗಳು ತಂಗುವುದೆಂದು ನಾವು ನಿರ್ಧರಿಸಿದ್ದರಿಂದ ಎರಡನೆಯ ದಿನವೆಲ್ಲಾ ಸರೋವರದ ತೀರದಲ್ಲಿ ತೃಪ್ತಿಯಾಗುವಷ್ಟು ಸುತ್ತಾಡಿದೆವು. ಭಕ್ತಾದಿಗಳೆಲ್ಲ ಹೋಮ, ಹವನ ಕಾರ್ಯದಲ್ಲಿ ಮಗ್ನರಾಗಿದ್ದರು. ಸರೋವರದ ತಿಳಿನೀರಿನಲ್ಲಿ ಕಾಲಾಡಿಸುತ್ತಾ ದೂರದಲ್ಲಿದ್ದ ಬಾತುಕೋಳಿಗಳನ್ನು ನೋಡುವುದೇ ಒಂದು ಸಂಭ್ರಮ. ತೀರದಲ್ಲಿರುವ ನುಣುಪಾದ ಕೆಂಪು, ಕಂದು, ಬಿಳಿ ಕಲ್ಲುಗಳನ್ನು ಆರಿಸುತ್ತಾ, ಅದನ್ನು ತಂದು ಕೊಡಿರೆಂದು ಕೇಳಿಕೊಂಡ ಸ್ನೇಹಿತರನ್ನು ನೆನಪಿಸಿಕೊಂಡೆವು. ಜೊತೆಗೆ ನಮ್ಮ ಜೊತೆಯಲ್ಲಿದ್ದ ಜಿ. ಆರ್.ರವರ ಹಿಂದಿನ ಯಾತ್ರೆಯ ಅನುಭವ, ಕಳೆದ ಇಪ್ಪತ್ತು ವರ್ಷಗಳಲ್ಲಿ ಉಂಟಾಗಿರುವ ಬದಲಾದ ಪರಿಸ್ಥಿತಿಯೆಲ್ಲವನ್ನೂ ಮೆಲುಕುಹಾಕುತ್ತಾ ಸಂತೋಷಪಡುತ್ತಿರುವಾಗ ಯಾತ್ರಿಕರು ಹೋಮ, ಹವನ ಮಾಡಿ ಪರಿಸರವನ್ನು ಕಲುಷಿತಗೊಳಿಸಿದ್ದನ್ನು ನೋಡಿ ಮನಸ್ಸಿಗೆ ಅತೀವ ನೋವಾಯಿತು. ಮಾನಸ ಸರೋವರದ ಶುಭ್ರತೆ, ಕೈಲಾಸ ಪರ್ವತದ ಭವ್ಯತೆಯನ್ನು ಕಲುಷಿತವಾಗದಂತೆ ಉಳಿಸಿಕೊಳ್ಳುವುದೇ ದೊಡ್ಡ ಪೂಜೆಯಲ್ಲವೇ ? ಎಂಬ ವಿಷಾದದ ಭಾವವೊಂದು ಆಗ ಮನಸ್ಸಿನಲ್ಲಿ ಮೂಡಿತು.

ಮಾನಸ ಸರೋವರದಲ್ಲಿದ್ದ ಎರಡನೆಯ ರಾತ್ರಿಯಾದರೂ ಬೆಳದಿಂಗಳ ಚಂದ್ರ ನಮಗೆ ದೊರೆತಾನೇನೋ ಎಂದು ಆಸೆಪಟ್ಟರೆ ಆಗಲೂ ನಿರಾಸೆ ಕಾದಿತ್ತು. ಆದರೂ ಮಲಗುವ ಮುಂಚೆ ರಾತ್ರಿ ಚಂದ್ರ ಕಂಡರೆ ನಮ್ಮನ್ನು ಎಬ್ಬಿಸಿ ಎಂದು ಜಿ. ಆರ್. ರವರಿಗೆ ತಾಕೀತು ಮಾಡಿ ನಾನು ಮತ್ತು ವಿಜಿ ನಮ್ಮ ಟೆಂಟಿನಲ್ಲಿ ನುಸುಳಿಕೊಂಡೆವು. ರಾತ್ರಿ ಸುಮಾರು ಒಂದು ಗಂಟೆಯಿರಬಹುದು. ಪಕ್ಕದ ಟೆಂಟಿನಿಂದ ಜಿ. ಆರ್. ರವರ ಕರೆ – ''ಚಂದ್ರ ಕಾಣುತ್ತಿದ್ದಾನೆ, ಬೇಗ ಏಳಿ''. ಸಂಭ್ರಮದಿಂದ ನಾವಿಬ್ಬರೂ ಹೊರಬಂದಾಗ ಕಂಡದ್ದು ಹಾಲು ಹುಣ್ಣಿಮೆಯ, ಬೆಳದಿಂಗಳ ಚಂದ್ರನಲ್ಲ, ಅತ್ತು ಗಾರಾಗಿ ಮುಖವೊರೆಸಿಕೊಳ್ಳುವ ಚಂದ್ರಮ. ಜೊತೆಗೆ ಬರಲೋ ಬೇಡವೋ ಎಂದು ಅನುಮಾನಿಸುತ್ತಾ ಹಣಕಿ ಹಾಕುತ್ತಿದ್ದ ಒಂದೆರಡು ನಕ್ಷತ್ರಗಳು. ಆಗೊಂದು 'ಪವಾಡ' ನಡೆಯಿತು. ನಾವು ಮೂವರೂ ಕೆಳದನಿಯಲ್ಲಿಯೇ ಮಾತನಾಡುತ್ತಿದ್ದರೂ, ಅಲ್ಲಿ ಅಕ್ಕ ಪಕ್ಕದಲ್ಲಿದ್ದ ಟೆಂಟಿನಿಂದ ಜನರು ನಿದ್ರೆಯಿಂದ ಎಚ್ಚತ್ತು, ಆದರೆ ಟೆಂಟಿನಿಂದ ಹೊರಗೆ ಬರದೆ ''ಏನ್ರೀ ? ಏನಾಗುತ್ತಿದೆ ?'' ಎಂದು ಕೇಳಲು ಶುರುಮಾಡಿದರು. ''ಏನೂ ಇಲ್ಲ, ಚಂದ್ರನನ್ನು ನೋಡುತ್ತಿದ್ದೇವೆ'' ಎಂದೆವು. ಅವರಿಗೆ ಭಾರಿ ನಿರಾಶೆ. ''ಅಷ್ಟೆಯೇ, ಹಾಗಾದರೆ ಸುಮ್ಮನೆ ಮಲಗಿಕೊ'' ಎನ್ನುತ್ತಾ ಕೆಲವರು ಸುಮ್ಮನಾದರೆ ಮತ್ತೆ ಕೆಲವರು ''ಏನು, ಏನಾಗುತ್ತಿದೆ ?'' ಎಂದು ಪ್ರಶ್ನಿಸುತ್ತಾ ಟೆಂಟಿನಿಂದ ಹೊರ ಬರಲು ಆರಂಭಿಸಿದರು. ನಾವು ಮೂವರು ನಿಶ್ಶಬ್ದವಾಗಿ ನಮ್ಮ ಟೆಂಟುಗಳೊಳಗೆ ನುಸುಳಿಕೊಂಡೆವು. ಒಬ್ಬರಿಂದ ಒಬ್ಬರಿಗೆ ಗುಜು ಗುಜು ಶಬ್ದ ಕೇಳಿಸಿ ಎಲ್ಲರೂ ಎದ್ದು ಹೊರಬರಲಾರಂಭಿಸಿದರು. ಕೆಲವರಿಗೆ ಏನೂ ಪವಾಡ ನಡೆದಿಲ್ಲವೆಂಬ ಅಸಮಾಧಾನ ! ಮಾನಸ ಸರೋವರದಲ್ಲಿ ದೇವತೆಗಳು ಸ್ನಾನ ಮಾಡಲು ಬರುತ್ತಾರೆಂಬ ನಂಬಿಕೆ ಕೆಲವರಿಗಿರುವುದರಿಂದ ಯಾವ ದೇವರನ್ನು ನೋಡುವ ಅವಕಾಶ ಅವರಿಗೆ ತಪ್ಪಿತೋ ಎಂಬ ದುಃಖಿಪರಬೇಕು. ಆ ಕ್ಷಣದಲ್ಲಿ ನನಗೆ ಕಥೆಗಾರ ಕೆ. ಸತ್ಯನಾರಾಯಣರ ''ಸದ್ದು, ದೇವರು ಸ್ನಾನ ಮಾಡುತ್ತಿದ್ದಾನೆ'' ಪುಸ್ತಕ ನೆನಪಿಗೆ ಬಂದಿತು.



## ಈಗಿನ ತಳಮಳ

ಒಂದೇ ಕುಂಟೆ ಹೊಲದೆ
ಹಾಲುಗಾಳು ಬಲಿತು
ತೆನೆಮೂಗು ಒಣಗಿ
ಕೊಯಿಲಾಗುವ ಮುನ್ನಾದಿನ
ಧೋ... ಧೋ... ಮಾಯದ ಮಳೆ ಬಂದು
ಸುರಿಯಿತು... ದರಿದ್ರ.

ಈ ಮಳೆಯ ತಡೆಯುವುದು ನಮ್ಮ ಕಯ್ಯಲಿಲ್ಲಾ
ಈ ಮಳೆಯ ಕರೆಯುವುದೂ ನಮ್ಮ ಕಯ್ಯಲಿಲ್ಲಾ

ಬೆಣ್ಣೆಯ ಬೆಟ್ಟಕ್ಕೆ ಕರಿರೆಕ್ಕೆ ಮೂಡಿದ ಹಾಗೆ
ಈ ಮೋಡ ಕಣ್ಣೆದುರೇ
ಆ ದಿಣ್ಣೆಯಾಚೆ ಹಾರಿ ಅಲ್ಲೇ ಕಾಲೂರಿ
ಬೇಕೆಂದಾಗ ಬರದೇ ಯಾರಿಗೋ ಸುರಿಯುತ್ತದೆ.

ಬೇಡಾದಾಗ, ರಮ್ಮನೇ
ನಮ್ಮ ನೆತ್ತಿಯ ಮೇಲೇ ಬಂದು ರಾಚುತ್ತದೆ.
ಕೊಯಿಲೆಗೆ ಕಲ್ಲು ಬಿದ್ದು ಅಕ್ಕಲಿಗೂ ಸೊನ್ನೆ
ನಮ್ಮ ಕಯ್ಯಲ್ಲಿ ಏನೂ ಇಲ್ಲ.

ಸಂಜೆ ಮಗು ಚಿಮಣಿ ಬೆಳಕಿನಲಿ
ಎಡಗಯ್ಯ ತೋಳಿನಲಿ ಸಿಂಬಳ ಸೀಟಿ
ಅಳದೆ ನಗದೆ ಅನ್ನಾ ಅಂತ ಕೇಳದೆ
ಮಿಠಾಯಿ ಪಾಠವ ಓದಿಕೊಳುವಾಗ
ಹೊಟ್ಟೆಯಲಿ ಯಾರೋ ರಕ್ತದ ಮೊಸರ ಕಡೆದಂತೆ ಉಮ್ಮಳ
ನಾಳಿನ ಚಿಂತೆಗೆ ಮೊದಲು ಈಗಿನ ತಳಮಳ

**ರಾಮಲಿಂಗಪ್ಪ ಟಿ. ಬೇಗೂರು**, ನಂ. ೮೨, ೮ನೇ ಮುಖ್ಯರಸ್ತೆ, ೮ನೇ ಅಡ್ಡರಸ್ತೆ, ಬಾಲಾಜಿ ಛತ್ರದ ಬಳಿ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

ಎರಡು ದಿನದ ಮಾನಸ ಸರೋವರದ ವಾಸ ಮುಗಿಸಿ ಕೈಲಾಸ ಪ್ರದಕ್ಷಿಣೆಗೆಂದು ಪ್ರಯಾಣ ಮುಂದುವರೆಸಿದೆವು. ಮೊದಲು ಮಾನಸ ಸರೋವರದ ಪ್ರದಕ್ಷಿಣೆಗೆಂದು ಹೊರಟಾಗ ದಾರಿಯಲ್ಲಿ ರಾಕ್ಷಸ ಸರೋವರವನ್ನು ದಾಟಿ ೧೫,೭೫೦ ಅಡಿ ಎತ್ತರದ ಡಾರ್ಚನ್ ತಲುಪಿದೆವು. 'ಯಾಕ್' ಪ್ರಾಣಿಯ ತಲೆಯ ತೋರಣ ಹೊತ್ತ ಮಹಾದ್ವಾರದಿಂದ ಒಂದು ದೊಡ್ಡ ವಠಾರದಂತಹ ಆವರಣವನ್ನು ತಲುಪಿದರೆ ಅಲ್ಲಿ ಹತ್ತು ಹದಿನೈದು ಕೋಣೆಗಳಿರುವ ಸ್ಥಳವಿರುತ್ತದೆ. ಸ್ಫಟಿಕದ ಸರಗಳು, ಬಣ್ಣಬಣ್ಣದ ಮಣಿಸರಗಳನ್ನು, ರುದ್ರಾಕ್ಷಿಯನ್ನು, ನೇಪಾಳಿಗಳ ಪ್ರಾರ್ಥನಾ ಗಂಟೆಯನ್ನು ಮಾರುವ ಟಿಬೆಟ್ ಮಹಿಳೆಯರು ಬಂದು ನಮ್ಮನ್ನು ಮುತ್ತುತ್ತಾರೆ. ಭಾಷೆ ಬಾರದಿದ್ದರೂ, ಕೈ ಬಾಯಿ ಸಂಜ್ಞೆಯಿಂದಲೇ ಮಾತನಾಡುತ್ತಾ ಕ್ಯಾಲುಕಲೇಟರ್‌ನಲ್ಲಿ ವ್ಯಾಪಾರದ ಹಣವನ್ನು ಸೂಚಿಸುತ್ತಾ ಕಾರ್ಯಪ್ರವೃತ್ತರಾಗುವ ಅವರ ವೈಖರಿ ನಿಜವಾಗಿಯೂ ಮೆಚ್ಚಬೇಕಾದ್ದೆ. ಆ ಊರಿನಲ್ಲಿದ್ದ ಗೂಡಂಗಡಿಗಳಲ್ಲಿ ಚಿಕ್ಕ ಪುಟ್ಟ ಸಾಮಾನುಗಳು ಮಾರಾಟಕ್ಕಿದ್ದುದಲ್ಲದೆ ಫೋನ್ ಮಾಡಲು ವ್ಯವಸ್ಥೆಯಿರುತ್ತಿತ್ತು.

ಡಾರ್ಚೆನ್‌ನಿಂದ ಸುಮಾರು ಎಂಟು ಕಿಲೋಮೀಟರ್‌ಗಳಷ್ಟು ಜೀಪಿನಲ್ಲಿ ಪ್ರಯಾಣ ನಡೆಸಿದ ಮೇಲೆ 'ಯಮದ್ವಾರ' ಸಿಗುತ್ತದೆ. ಇಲ್ಲಿಂದ ಕೈಲಾಸ ಪರಿಕ್ರಮದ ಆರಂಭ. ನಮಗೆ ಅಗತ್ಯವಾದ ಬಟ್ಟೆ, ರೈನ್‌ಕೋಟು, ತಿಂಡಿ ಪದಾರ್ಥಗಳನ್ನು ತೆಗೆದುಕೊಂಡು ಕೈಲಾಸದ ಪ್ರದಕ್ಷಿಣೆಗೆಂದು ಹೊರಟೆವು. ತಣ್ಣನೆಯ ಕೊರೆಯುವ ಚಳಿ. ಮೂರು ದಿನದಿಂದ ಹಿಡಿದ ಮಳೆ ಬಿಟ್ಟಿತ್ತು. ನಮ್ಮ ಹಿಂದಿನ ತಂಡದ ಯಾತ್ರಿಕರು ಮಂಜು ಮತ್ತು ಮಳೆಗೆ ಹೆದರಿ ಕೈಲಾಸ ಪ್ರದಕ್ಷಿಣೆ ಮಾಡದೆ ಹಿಂದಿರುಗಿ ಬಂದವರನ್ನು ನಾವು ಆರಂಭದಲ್ಲಿ ಎದುರುಗೊಂಡೆವು. ಅವರ ಪರಿಸ್ಥಿತಿ ನಮ್ಮಲ್ಲಿ ನಿರುತ್ಸಾಹವನ್ನು ಉಂಟುಮಾಡಿದರೂ ಛಲಬಿಡದ ತ್ರಿವಿಕ್ರಮನಂತೆ ಚಾರಣ ಮುಂದುವರೆಸಿದೆವು. ನಮ್ಮ ತಂಡದ ಹದಿನಾಲ್ಕು ಮಂದಿಯೂ ಕಾಲ್ನಡಿಗೆಯಲ್ಲಿ ಕೈಲಾಸ ಪರಿಕ್ರಮ ನಡೆಸಿದ್ದು ಒಂದು ವಿಶೇಷವೇ. ಮೂರು ದಿನಗಳ ಕಾಲದಲ್ಲಿ ಒಟ್ಟು ಐವತ್ತನಾಲ್ಕು ಕಿಲೋಮೀಟರುಗಳಷ್ಟು ನಡಿಗೆಯ ಕಠಿಣ ಹಾದಿಯನ್ನು ನಾವು ಕ್ರಮಿಸಬೇಕಿತ್ತು.

೬೭೧೪ ಮೀಟರ್ ಎತ್ತರದಲ್ಲಿರುವ ಕೈಲಾಸ ಪರ್ವತ ಟಿಬೆಟ್‌ನ ನೈಋತ್ಯ ಭಾಗದಲ್ಲಿದೆ. ಶ್ವೇತ ಶುಭ್ರವಾಗಿ ಕಂಗೊಳಿಸುವ ಈ ಕೈಲಾಸ ಪರ್ವತವು ೨೨೧೫೬ ಅಡಿಯ ಕಲ್ಲಿನ ಪಿರಮಿಡ್ ಆಕೃತಿಯಲ್ಲಿದ್ದು ದೇವಾನುದೇವತೆಗಳ ಸಿಂಹಾಸನವೆನಿಸಿದೆ. ಟಿಬೇಟನ್ನರಿಗೆ ಕೈಲಾಸ ಪರ್ವತವು 'ಕಾಂಗ್‌ರಿನ್ ಪೋಚೆ'' (ಪವಿತ್ರ ಹಿಮಪರ್ವತ), ಜೈನರಿಗೆ 'ಅಷ್ಟಪಾದ' ಪರ್ವತವೆನಿಸಿದೆ. ಇವರುಗಳು ದಕ್ಷಿಣ ಮುಖವನ್ನು ನೀಲಮಣಿ (Sapphire), ಪೂರ್ವಭಾಗವನ್ನು ಹವಳ, ಪಶ್ಚಿಮ ಭಾಗವನ್ನು ರೂಬಿ ಮತ್ತು ಉತ್ತರವನ್ನು ಚಿನ್ನದಿಂದ ಕೂಡಿದೆಯೆಂದು ಭಾವಿಸುತ್ತಾರೆ.

ಮೊದಲನೆಯ ೧೩ ಕಿಲೋಮೀಟರ್‌ಗಳ ನಡಿಗೆ ಮುಗಿಸಿದಾಗ ಧೀರಾಪುಕ್ ಸಿಗುತ್ತದೆ. ದಾರಿ ಕ್ರಮಿಸುವಾಗ ಕೈಲಾಸ ಪರ್ವತದ ಉತ್ತರ ಮುಖ ದರ್ಶನವಾಗುತ್ತದೆ. ಬೆಳಗಿನ ಸೂರ್ಯನ ಕಿರಣಗಳು ಪರ್ವತದ ಮೇಲೆ ಬಿದ್ದು ಸ್ವರ್ಣರಂಜಿತವಾಗಿರುವಂತೆ ಗೋಚರವಾಗುತ್ತದೆ. ಆದ್ದರಿಂದಲೇ ಇದನ್ನು ಚಿನ್ನದ





ಮುಖವೆನ್ನುವುದು. ಪರಿಕ್ರಮಣದ ಎರಡನೇ ದಿನ ಧೀರಾಪುಕ್ (೧೬೪೦೦ ಅಡಿ)ನಿಂದ ಹೊರಟು ೧೮ ಕಿ.ಮೀಟರ್ ದೂರದ ಜುತುಲ್‌ಪುಕ್‌ನ್ನು ತಲುಪುವಾಗ ಕಡಿದಾದ ಹಾಗೂ ಅತ್ಯಂತ ಎತ್ತರ ಪ್ರದೇಶವಾದ (೧೮,೬೦೦ ಅಡಿ) ದೋಲ್ಮ ಲಾ ಪಾಸ್‌ನ ತಲುಪಬೇಕಾಗುತ್ತದೆ. ಇದಕ್ಕೆ ಶಕ್ತಿಸ್ಥಲ, ಮುಕ್ತಿಸ್ಥಾನವೆಂತಲೂ ಕರೆಯುತ್ತಾರೆ. ಟಿಬೇಟನ್ನರು ಇಲ್ಲಿ ಧ್ವಜಸ್ತಂಭವನ್ನು ನೆಟ್ಟು ಪೂಜಿಸಿರುವುದು ಕಂಡುಬರುತ್ತದೆ. ಅಲ್ಲಿ ಒಂದು ಬಂಡೆಗೆ ವಿವಿಧ ದೇಶದ ಕರೆನ್ಸಿಯಿಂದ ಪೂಜಿಸಿರುವುದು ಕಂಡುಬರುತ್ತದೆ. ಇಲ್ಲಿಂದ ೩೦೦ ಅಡಿ ಕೆಳಗಡೆ ಇಳಿಯುತ್ತಾ ಹೋದರೆ ಗೌರಿಕುಂಡ ಸಿಕ್ಕುತ್ತದೆ. ಗೌರಿಕುಂಡದಿಂದ ೧೦ ಕಿ.ಮೀಟರ್ ಕ್ರಮಿಸಿದರೆ ಜುತುಲ್‌ಪುಕ್ ಸಿಕ್ಕುತ್ತದೆ. ಮೂರನೆಯ ದಿನ ಸುಮಾರು ಹತ್ತು ಕಿಲೋಮೀಟರುಗಳ ನಡಿಗೆಯ ನಂತರ ಚಾರಣ ಮುಗಿಸಿ ನಮ್ಮ ಜೀಪುಗಳನ್ನು ಹತ್ತಿ ಹಿಂತಿರುಗಿ ಬರುವಲ್ಲಿಗೆ ಯಾತ್ರೆ ಮುಗಿಸಿದ ಸಾರ್ಥಕ ಭಾವ ನಮ್ಮಲ್ಲಿ ಮೂಡಿತು. ಮತ್ತೊಮ್ಮೆ ಮಾನಸ ಸರೋವರದಲ್ಲಿ ಕೈಲಾಸ ಪರ್ವತದ ಪ್ರತಿಬಿಂಬವನ್ನು ನೋಡುತ್ತಾ ಸಾಗುತ್ತಿರುವಾಗ ವರ್ಣರಂಜಿತವಾದ ಮೇಘಮಾಲೆಯನ್ನು ಆನಂದಿಸುತ್ತಾ ಮೂರು ದಿನ ಪ್ರಯಾಣ ಮಾಡಿದ ನಂತರ ನ್ಯಾಲಂನತ್ತ ಪ್ರಯಾಣ ಬೆಳೆಸಿದೆವು.

ನಮ್ಮ ಕೊನೆಯ ತಂಗುದಾಣವಾದ ನ್ಯಾಲಂನತ್ತ ಧಾವಿಸುತ್ತಿದ್ದಂತೆ ದಾರಿಯಲ್ಲಿ ಚಿಕ್ಕದೊಂದು ಹಳ್ಳಿಯಲ್ಲಿ ನಮ್ಮ ವ್ಯಾನ್ ನಿಂತಿತು. ಎಡಕ್ಕೆ ಕಂಡ ಚಿಕ್ಕದಾದ ನಾಮಫಲಕದಲ್ಲಿ ಮಹಾಯೋಗಿ ಮಿಲರೇಪನ ಹೆಸರು ಕಂಡುಬಂದಿತು. ಆ ಮಹಾಯೋಗಿಯ ತಪಸ್ಸಿನ ಸ್ಥಳವನ್ನು ನೋಡಲೆಂದು ಎಲ್ಲರೂ ಕೆಳಗಿಳಿದರು. ಕ್ರಿ.ಶ. ೧೧ನೇ ಶತಮಾನದಲ್ಲಿ ಟಿಬೆಟ್‌ನ ಮಹಾಯೋಗಿ ಮತ್ತು ಕವಿಯಾಗಿದ್ದ ಸಿದ್ಧ ಮಿಲರೇಪನು ಈ ಪ್ರದೇಶದಲ್ಲಿ ಹಲವು ವರ್ಷಗಳು ನೆಲೆಸಿದ್ದು, ನಗ್ನನಾಗಿದ್ದು ತಪಸ್ಸು ಮಾಡಿದ್ದನೆಂದು ಹೇಳುತ್ತಾರೆ. ಇವನು ಟಿಬೆಟ್‌ನ ಭಾಷೆಯಲ್ಲಿ ಲಕ್ಷಾಂತರ ಪದ್ಯಗಳನ್ನು ರಚಿಸಿದ್ದಾನೆ. ಕೈಲಾಸ ಪುರಾಣದಲ್ಲಿ ಅವನನ್ನು ನಶ್ವರವಾದಿಯೆಂದು ಚಿತ್ರಿಸಲಾಗಿದೆ. ಮಿಲರೇಪನು ತಪಸ್ಸು ಮಾಡಿದ್ದನೆನ್ನಲಾದ ಗುಹೆಯನ್ನು ನೋಡಲೆಂದು ಹೋದಾಗ ಅಲ್ಲಿ ನಮಗೆ ಕಂಡದ್ದು ದುರಸ್ತಿ ಮಾಡಲೆಂದು ಅಣಿಯಾಗಿದ್ದ ಗುಹೆ. ಆ ಕ್ಷಣದಲ್ಲಿ ನೆನಪಾದದ್ದು ಕನ್ನಡದ ಕವಿ ಎಚ್. ಎಸ್. ಶಿವಪ್ರಕಾಶ್‌ರ 'ಮಿಲರೇಪ' ಕವನ :
''ಕಾಲದೇಶಗಳ ಬೀಳಿ ನಿಕ್ಕಟ್ಟಲ್ಲಿ। ಕರೆದೊಯ್ವ। ವಜ್ರಯಾನದಗ್ನಿರಥ ಸಾರಥಿಯೆ।
ನಮನ ನಮನ ನಿನಗೆ ॥''

ಜಗತ್ತಿನ ಅತಿ ಎತ್ತರದ ಚಾವಣಿಯಲ್ಲಿ ಸಂತ ಮಿಲರೇಪನನ್ನು ನೆನೆಯುತ್ತಾ, ಶ್ವೇತ ಶುಭ್ರ ಕೈಲಾಸ ಪರ್ವತ ಹಾಗೂ ಸ್ಫಟಿಕ ಶುಭ್ರ ಮಾನಸ ಸರೋವರದ ನೆನಪಿನೊಂದಿಗೆ ನಮ್ಮ ಗೂಡುಗಳನ್ನು ಸೇರಿಕೊಂಡೆವು.

ಡಾ॥ ಎನ್. ಗಾಯತ್ರಿ
ಸ್ಕೈಲೈನ್ ಸುರಭಿ, ೧೦೮, ವಿದ್ಯಾಪೀಠ ರಸ್ತೆ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಬರ, ನೆರೆ ಮತ್ತು ನಿರ್ವಹಣೆ

ಡಾ|| ಹೆಚ್. ಚಂದ್ರಶೇಖರ

ಮಾನವ ಜನಾಂಗವನ್ನು ಬಹುಕಾಲದಿಂದಲೂ ಕಾಡುತ್ತಿರುವ ನೈಸರ್ಗಿಕ ಉತ್ಪಾತಗಳಲ್ಲಿ ಬರ ಮತ್ತು ನೆರೆ ಎರಡೂ ಸೇರುತ್ತವೆ. ಈ ಉತ್ಪಾತಗಳಲ್ಲಿ ಒಂದಾದ ಭೂಕಂಪದಂತೆ ಯಾವ ಸೂಚನೆಗಳನ್ನೂ ನೀಡದೆ ಈ ಪ್ರಸ್ತುತ ಚರ್ಚೆಯ ವಿಷಯಗಳಾದ ಬರ ಮತ್ತು ನೆರೆ ಮಾನವ ಜನಾಂಗದ ಮೇಲೆರಗುವುದಿಲ್ಲ; ಪರಿಣಾಮಗಳು ಅಷ್ಟು ತೀವ್ರವಾಗುವುದಿಲ್ಲ. ಆದರೆ ಬರ ಸಾವಕಾಶವಾಗಿ ತನ್ನ ಕರಾಳಛಾಯೆಯನ್ನು ಬೆಳೆಸುತ್ತದೆ; ನಾವು ಸೂಕ್ತ ಕ್ರಮಗಳನ್ನು ಕೈಗೊಳ್ಳದಿದ್ದರೆ ಭೀಕರ ಪರಿಣಾಮಗಳಾಗುತ್ತವೆ ಎಂಬುದಕ್ಕೆ ಇತಿಹಾಸ ಸಾಕ್ಷಿಯಾಗಿದೆ. ಬ್ರಿಟಿಷರ ಕಾಲದಲ್ಲಿ ಬಿದ್ದ ಡೋಗಿ ಬರ ಮತ್ತು ೧೯೮೭ರಲ್ಲಿ ನಮ್ಮ ದೇಶದ ಬಹುಭಾಗವನ್ನು ವ್ಯಾಪಿಸಿದ ಬರ ಇವುಗಳನ್ನು ನಿದರ್ಶನವಾಗಿ ಹೇಳಬಹುದು. ಬರ ಮತ್ತು ನೆರೆಯ ಬಗ್ಗೆ ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ರಚಿತವಾದ 'ಕೌಟಿಲ್ಯನ ಅರ್ಥಶಾಸ್ತ್ರ'ದಲ್ಲಿಯೂ, ಕ್ರಿ.ಶ. ೧೮೭೯ರಲ್ಲಿ, ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಸಂತೆಕಲ್ಲೂರಿನ ಘನಮಠದ ಶಿವಯೋಗಿಗಳಿಂದ ರಚಿತವಾದ 'ಕೃಷಿಜ್ಞಾನ ಪ್ರದೀಪಿಕೆ' ಯಲ್ಲಿಯೂ ವಿವರಣೆ ಮತ್ತು ಪರಿಹಾರೋಪಾಯಗಳ ಪ್ರಸ್ತಾಪ ಇದೆ, ಎಂದರೆ ಈ ಎರಡು ನೈಸರ್ಗಿಕ ಉತ್ಪಾತಗಳ ಮಹತ್ವ ಗೊತ್ತಾಗುತ್ತದೆ.

**ಬರಗಳ ವರ್ಗೀಕರಣ**

ಬರ ಎಂದರೇನು ? ಎಂಬ ಪ್ರಶ್ನೆಗೆ ಸರಿಯಾದ ಹಾಗೂ ನಿರ್ದಿಷ್ಟವಾದ ವಿವರಣೆ ಇಲ್ಲ. ಬರ ಒಬ್ಬೊಬ್ಬರ ದೃಷ್ಟಿಯಲ್ಲಿ ನೀರಿನ ಬಳಕೆಯನ್ನಾಧರಿಸಿ ಬೇರೆ ಬೇರೆ ವಿವರಣೆಗಳಿವೆ. ಅವುಗಳ ವಿವರವಾದ ಚರ್ಚೆಗೆ ಹೋಗದೆ ಬರವನ್ನು ಪ್ರಮುಖವಾಗಿ ಮೂರು ಬಗೆಯಲ್ಲಿ ವರ್ಗೀಕರಿಸಬಹುದು :

೧. **ಮಳೆಯ ಕೊರತೆಯ ಬರ:** ಯಾವುದೇ ಪ್ರದೇಶದಲ್ಲಿ ಸಾಮಾನ್ಯವಾಗಿ ಸರಾಸರಿ ಮಳೆಗಿಂತ ಶೇಕಡ ೭೫ಕ್ಕಿಂತ ಕಡಿಮೆ ಮಳೆ ಬಿದ್ದರೆ ಇದನ್ನು ಮಳೆಯ ಕೊರತೆಯ ಬರ ಎಂದು ಕರೆಯಲಾಗುತ್ತದೆ. ಇಲ್ಲಿಯೂ ಒಳ ವರ್ಗೀಕರಣಗಳಿವೆ. ಈ ಬರ ಸಾಮಾನ್ಯರಿಗೂ ಅರಿವಾಗುತ್ತದೆ.

೨. **ಜಲದ ಕೊರತೆಯ ಬರ :** ಮಳೆಯ ಕೊರತೆಯು (ಅಂದರೆ ಹಿಮವೂ ಸೇರಿ) ಸತತವಾಗಿ ಮುಂದುವರೆದರೆ ಮೇಲು ಜಲ ಸಂಗ್ರಹ ಮತ್ತು ಅಂತರ್ಜಲ ಸಂಗ್ರಹವು ಕಡಿಮೆಯಾಗಿ ಕೆರೆಗಳು ಬತ್ತುತ್ತವೆ, ದೊಡ್ಡ ದೊಡ್ಡ ಜಲಾಶಯಗಳು ಅರೆಭರ್ತಿಯಾಗುತ್ತವೆ ಮತ್ತು ಆಳವಲ್ಲದ ಬಾವಿಗಳು ಬತ್ತುತ್ತವೆ. ಇಂಥ ಪರಿಸ್ಥಿತಿಯನ್ನು ಜಲದ ಕೊರತೆಯ ಬರ ಎಂದು ಕರೆಯಲಾಗುತ್ತದೆ.

೩. **ಕೃಷಿ ಬರ :** ಮಳೆ ಕಡಿಮೆಯಾಗಿದ್ದರೂ, ಜಲ ಸಂಗ್ರಹವು ಕುಂಠಿತಗೊಂಡಿದ್ದರೂ, ಬಿತ್ತನೆಗೆ ಅನುಕೂಲವಾಗುವಷ್ಟು ಮತ್ತು ಬೆಳೆ ಬೆಳೆಯುವುದಕ್ಕೆ ಅನುಕೂಲವಾಗುವಷ್ಟು ಮಣ್ಣಿನಲ್ಲಿ ತೇವಾಂಶ ಇದ್ದರೆ ಕೃಷಿಗೆ ತೊಂದರೆ ಇಲ್ಲ. ಅಂದರೆ ಮಳೆಯ ಬರವಿಲ್ಲದಿದ್ದರೂ, ಜಲದ ಕೊರತೆ ಇಲ್ಲದಿದ್ದರೂ, ಸರಿಯಾದ ಸಮಯಕ್ಕೆ ಮಳೆ ಸುರಿಯದಿದ್ದರೆ, ಮಣ್ಣಿನಲ್ಲಿ ಸೂಕ್ತ ತೇವಾಂಶ ಇಲ್ಲದಿದ್ದರೆ ಕೃಷಿಗೆ ತೊಂದರೆಯಾಗುತ್ತದೆ. ಈ ಬರವು ನೇರವಾಗಿ ಕೃಷಿಕನನ್ನು ತಟ್ಟುತ್ತದೆ.

**ಬರಕ್ಕೆ ಕಾರಣಗಳು ಮತ್ತು ದುಷ್ಪರಿಣಾಮಗಳು**

ಮೇಲಿನ ವಿವರಣೆಗಳನ್ನು ಓದಿದಾಗ ಬರಕ್ಕೆ, ಹಿಮವೂ ಸೇರಿದಂತೆ ಮಳೆಯ ಅಭಾವವೇ ಮೂಲ ಕಾರಣವೆಂದು ಗೊತ್ತಾಗುತ್ತದೆ. ಆದರೆ ಇದು ಅರ್ಧ ಸತ್ಯ. ಮನುಷ್ಯನು ನೀರಿನ ಸದ್ಬಳಕೆಯನ್ನು ತನ್ನ ನಿತ್ಯಜೀವನದಲ್ಲಿ, ಜೀವನ ವಿಧಾನದಲ್ಲಿ ಮತ್ತು ಕೃಷಿ ಪದ್ಧತಿಯಲ್ಲಿ ಅಳವಡಿಸಿಕೊಂಡರೆ ಬರದ ಸ್ವರೂಪ ಮತ್ತು ಅದರ ಪರಿಣಾಮಗಳೇ ಬದಲಾಗುತ್ತವೆ. ಕೇವಲ ೧೦" (೨೫೦ ಎಂ.ಎಂ.) ವಾರ್ಷಿಕ ಸರಾಸರಿ ಮಳೆ ಪಡೆಯುವ ಇಸ್ರೇಲ್ ಬರದ ಪರಿಣಾಮಗಳಿಗೆ ತುತ್ತಾಗಿಲ್ಲವೆಂಬುದನ್ನರಿತರೆ ಇನ್ನರ್ಧ ಸತ್ಯ ನಮ್ಮ ಕೈಯಲ್ಲಿದೆ ಎಂಬುದು ತಿಳಿಯುತ್ತದೆ. ಅಂದರೆ ಬರ ಎಂಬುದು ಕೇವಲ ನೈಸರ್ಗಿಕ ಪ್ರಕ್ರಿಯೆಯಲ್ಲ ಮಾನವ ನಿರ್ಮಿತವೂ ಅಹುದು ಎಂಬುದನ್ನು ನಾವು ಒಪ್ಪಲೇಬೇಕಾಗುತ್ತದೆ. ಆದ್ದರಿಂದಲೇ ಆರಂಭದಲ್ಲಿ ಬರಕ್ಕೆ ನಿರ್ದಿಷ್ಟವಾದ ವಿವರಣೆ ಇಲ್ಲ ಎಂದು ನಾನು ಹೇಳಿದೆ. ಮುಂದಿನ ಚರ್ಚೆಯಲ್ಲಿ ಬರ ಎಂಬ ಪದವನ್ನು ಜನಸಾಮಾನ್ಯರು ಬಳಸುವ (ಅಂದರೆ ಜೂನ್ ಮತ್ತು ಜುಲೈ ತಿಂಗಳಲ್ಲಿ ಸಾಕಾಗುವಷ್ಟು ಪ್ರಮಾಣದಲ್ಲಿ ಮಳೆ ಬೀಳದಿದ್ದರೆ) ಅರ್ಥದಲ್ಲಿಯೇ ನಾನು ಬಳಸುತ್ತೇನೆ.

ಬರದ ಪರಿಣಾಮ ಮೊದಲಿಗೆ ನೇರವಾಗಿ ಕೃಷಿ ಚಟುವಟಿಕೆಗಳ ಮೇಲಾಗುತ್ತದೆ. ಈ ದೇಶ ಹಾಗೂ ಕರ್ನಾಟಕವು ಮಳೆ ಆಧಾರಿತ ಕೃಷಿ ಪ್ರದೇಶವಾಗಿರುವುದರಿಂದ ಹಳ್ಳಿಗಳಲ್ಲಿ ನಿರುದ್ಯೋಗ ಸಮಸ್ಯೆ ಹಾಗೂ ಸಾಮಾಜಿಕ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಜನರು ಪಟ್ಟಣಗಳಿಗೆ ಅಥವಾ ನಗರಗಳಿಗೆ ಉದ್ಯೋಗಾವಕಾಶಗಳನ್ನರಸಿ ಗುಳೆಹೋಗುತ್ತಾರೆ. ಇದರಿಂದ ನಗರಗಳಲ್ಲಿ ವಸತಿ ಸಮಸ್ಯೆ ಮತ್ತು



ಕುಡಿಯುವ ನೀರಿನ ಸಮಸ್ಯೆಗಳು ಉಲ್ಬಣಗೊಳ್ಳುತ್ತವೆ. ಕೆರೆಗಳು, ಬಾವಿಗಳು ಬತ್ತುವುದರಿಂದ ಕುಡಿಯುವ ನೀರಿನ ಸಮಸ್ಯೆಗಳು ತಲೆದೋರಿ ಸಾರ್ವಜನಿಕರ ಆರೋಗ್ಯ ಕೆಡುತ್ತದೆ. ದನಕರುಗಳಿಗೆ ಮೇವಿನ ಕೊರತೆಯುಂಟಾಗಿ ರೈತನು ತನ್ನ ಎತ್ತುಗಳನ್ನು ಕಸಾಯಿಖಾನೆಗಳಿಗೆ ಮಾರುವ ಪ್ರಸಂಗ ಬರಬಹುದು. ಬರ ಒಂದೆರಡು ವರ್ಷಗಳ ಕಾಲ ಮುಂದುವರೆದರೆ ಆಹಾರ ಧಾನ್ಯಗಳ ಸಂಗ್ರಹ ಮುಗಿದರೆ ಹಸಿವಿನ ಸಮಸ್ಯೆ ತೀವ್ರಗೊಳ್ಳುತ್ತದೆ. ಇದಕ್ಕೆ ಡೋಗಿ ಬರವೇ ಉದಾಹರಣೆ. ಕೃಷಿ ಉತ್ಪಾದನೆ ಕುಂಠಿತಗೊಂಡರೆ ಕೃಷಿ ಉತ್ಪನ್ನಗಳನ್ನಾಧರಿಸಿರುವ ಕಾರ್ಖಾನೆಗಳು ಕೊರತೆಯನ್ನು ಅನುಭವಿಸುವುದರಿಂದ ಪಟ್ಟಣಗಳ ಮತ್ತು ನಗರಗಳ ಮೇಲೂ ದುಷ್ಪರಿಣಾಮಗಳುಂಟಾಗುತ್ತವೆ. ಹೀಗೆ ಬರ ಒಂದು ಸರಪಳಿ ಪ್ರಕ್ರಿಯೆಯಂತೆ ವರ್ತಿಸುತ್ತದೆ. ಈ ಸರಪಳಿ ಕ್ರಿಯೆಯನ್ನು ಮುರಿಯುವುದೇ ಬರ ನಿರ್ವಹಣೆ ಮತ್ತು ನಿವಾರಣೋಪಾಯಗಳ ಮೂಲ ಮಂತ್ರ.

**ಬರದ ನಿರ್ವಹಣೆ ಮತ್ತು ನಿವಾರಣೋಪಾಯಗಳು**

ಬರ ನಿರ್ವಹಣೆ ಮತ್ತು ನಿವಾರಣೋಪಾಯಗಳನ್ನು ತತ್ಕಾಲೀನ ಹಾಗೂ ದೀರ್ಘಕಾಲೀನ ಕ್ರಮಗಳೆಂದು ವಿಂಗಡಿಸಬಹುದು.

**ತತ್ಕಾಲೀನ ಕ್ರಮಗಳು :** ಹಳ್ಳಿಗಳಲ್ಲಿ ಕೃಷಿ ಕಾರ್ಮಿಕರಿಗಾಗಿ ಸೂಕ್ತ ಹಾಗೂ ದೀರ್ಘಕಾಲ ಉಪಯುಕ್ತವೆನ್ನಿಸುವಂಥ ಕಾಮಗಾರಿಗಳನ್ನು ಆರಂಭಿಸುವುದು, ಕೆರೆಗಳ ಹೂಳನ್ನು ಎತ್ತುವುದು, ಸಣ್ಣ ಹಳ್ಳಗಳಿಗೆ ತಡೆಗಟ್ಟೆಗಳನ್ನು ಕಟ್ಟುವುದು ಇತ್ಯಾದಿ.

ಹಳ್ಳಿಗಳಲ್ಲಿ ಕೃಷಿಯೇತರ ಉದ್ಯೋಗಗಳನ್ನು ಸೃಷ್ಟಿಸುವುದು ಬಹು ಮುಖ್ಯ. ಇಲ್ಲವಾದರೆ ಬೆಂಗಳೂರು, ಮೈಸೂರು ಮತ್ತು ಹುಬ್ಬಳ್ಳಿಗಳಂಥ ನಗರಗಳಲ್ಲಿ ವರ್ಷ ಕಾಲವೂ ನಡೆಯುವ ಕಟ್ಟಡ ಹಾಗೂ ರಸ್ತೆ ನಿರ್ಮಾಣಗಳಿಗೆ ಕೃಷಿ ಕಾರ್ಮಿಕರು ಗುಳೆ ಹೋಗುತ್ತಾರೆ. ೧೯೭೧-೭೨ರಲ್ಲಿ ಮತ್ತು ೧೯೮೪-೮೫ರಲ್ಲಿ ಬಿದ್ದ ಬರದಿಂದಾಗಿ ಕಲಬುರ್ಗಿ ಮತ್ತು ರಾಯಚೂರು ಜಿಲ್ಲೆಗಳಿಂದ ಬೆಂಗಳೂರಿಗೆ ವಲಸೆ ಬಂದ ಸಾವಿರಾರು ಕೃಷಿ ಕಾರ್ಮಿಕರು ತಮ್ಮ ಹಳ್ಳಿಗಳಿಗೆ ವಾಪಸು




*ರಾಜ್ಯದ ಕರಾವಳಿಯಲ್ಲಿ ಸರಾಸರಿ ವಾರ್ಷಿಕ ಮಳೆಯು **8000** ಮಿಮೀಗಿಂತ ಹೆಚ್ಚಾಗಿದ್ದು ಈಶಾನ್ಯ ಭಾಗದಲ್ಲಿ 600 ಮಿಮೀಗಿಂತ ಹೆಚ್ಚಾಗಿದೆ. ರಾಜ್ಯದ ಮಧ್ಯ ಭಾಗದಲ್ಲಿ ವಾಯವ್ಯದಿಂದ ಆಗ್ನೇಯ ದಿಕ್ಕಿನಲ್ಲಿ ಹಬ್ಬಿರುವ ಭಾಗದಲ್ಲಿ 600 ಮಿಮೀಗಿಂತ ಕಡಿಮೆ ಮಳೆ ಬೀಳುತ್ತದೆ. ಈ ಭಾಗವೇ ಬರಸಂಭವ ಪ್ರದೇಶವಾಗಿದೆ.*

ಹೋಗಿಲ್ಲ. ಇದೊಂದು ನಿದರ್ಶನ. ಇದೊಂದು ರೀತಿಯಿಂದ ಬೆಂಗಳೂರಿನಲ್ಲಿ ತಮಿಳರ ಪ್ರಭಾವ ಕೊಂಚಮಟ್ಟಿಗೆ ಕುಗ್ಗಲು ಕಾರಣವಾಗಿದೆ.

ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕು. ದನಕರುಗಳಿಗೆ ಮೇವನ್ನು ಬೇರ ಕಡೆಗಳಿಂದ ತರಿಸಿ ಹಂಚಬೇಕು. ಗೋಶಾಲೆಗಳನ್ನು ತೆರೆದು ದನಕರುಗಳಿಗೆ ಸೂಕ್ತ ರಕ್ಷಣ ಒದಗಿಸಬೇಕು. ಇಲ್ಲಿ ಒಂದು ಸ್ವಾನುಭವ ಹೇಳಿದರೆ ತಪ್ಪಾಗದು. ೧೯೮೪-೮೫ರ ಅವಧಿ ಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಅರೆಬರದ ಪರಿಸ್ಥಿತಿ ಉಂಟಾದಾಗ ಹರಿಯಾಣ ಮತ್ತು ಪಂಜಾಬ ಗಳಿಂದ ರೈಲುಗಳ ಮೂಲಕ ಸಾವಿರಾರು ಟನ್ ಗೋಧಿ ಮತ್ತು ಭತ್ತದ ಹುಲ್ಲನ್ನು ತರಿಸಿ ಹಂಚಲಾಯಿತು. ಆದರೆ ಜೋಳದ ಸೊಪ್ಪನ್ನೇ ತಿಂದು ರೂಢಿಸಿಕೊಂಡಿದ್ದ ದನಕರುಗಳು ಈ ಹುಲ್ಲನ್ನು ಮೇಯಲಿಲ್ಲ. ಆದ್ದರಿಂದ ರೈತರು ತಮ್ಮ ದನಕರುಗಳಿಗೆ ಆರಂಭದಿಂದಲೂ ಬೇರೆ ಬೇರೆ ಬಗೆಯ ಮೇವಿನ ರುಚಿಯನ್ನು ಹಚ್ಚಬೇಕು.

ಜೂನ್-ಜುಲೈ ತಿಂಗಳುಗಳಲ್ಲಿ ಮಳೆ ಬೀಳದಿದ್ದರೆ ಅಥವಾ ಕಡಿಮೆ ಮಳೆ ಬಿದ್ದರೆ ಬೇರ ಕಿರು ಕಾಲಾವಧಿಯ ಬೆಳೆಗಳನ್ನು ಬೆಳೆಯಬೇಕು. ಕೃಷಿ ಇಲಾಖೆ ರೈತರಿಗೆ ಸೂಕ್ತ ಮಾಹಿತಿ ಮತ್ತು ನೆರವನ್ನು ನೀಡಬೇಕು.

ಜಲಾಶಯಗಳಿಂದ ಉದ್ಯಮಗಳಿಗೆ ನೀಡಲಾಗುವ ನೀರಿನ ಪ್ರಮಾಣವನ್ನು ಕಡಿತ ಗೊಳಿಸಿ, ಕುಡಿಯುವ ನೀರಿಗೆ ಆದ್ಯತೆ ನೀಡಬೇಕು. ನೀರನ್ನು ಹೆಚ್ಚು ಬಯಸುವ ಬೆಳೆಗಳ ಬದಲಾಗಿ ಕೇವಲ ಮಣ್ಣಿನ ತೇವಾಂಶದಿಂದಲೇ ಅಥವಾ ಕಡಿಮೆ ನೀರಿನ ಅವಶ್ಯಕತೆ ಇರುವ ಬೆಳೆಗಳ ಬೀಜಗಳನ್ನು ಬಿತ್ತಿ ಬೆಳೆಗಳನ್ನು ಬೆಳೆಯಬೇಕು.

ಒಂದೊಂದು ಜಿಲ್ಲೆಯಲ್ಲಿ ಸಣ್ಣ ಸಣ್ಣ ಘಟಕಗಳನ್ನು (ಹೋಬಳಿ ಇತ್ಯಾದಿ) ಮಾಡಿ ಆಯಾ ಘಟಕಗಳ ಜನರೊಡನೆ ಚರ್ಚಿಸಿ ಆಯಾ ಘಟಕದ ಅವಶ್ಯಕತೆಗಳನ್ನು ಗುರ್ತಿಸಿ ಕಾರ್ಯಕ್ರಮಗಳನ್ನು ರೂಪಿಸಬೇಕು. ಆಹಾರ ಧಾನ್ಯಗಳನ್ನು ತ್ವರಿತವಾಗಿ ಹೆಚ್ಚಳ ಪ್ರದೇಶ ಗಳಿಂದ ಸಾಗಿಸಿ ಸೂಕ್ತ ರೀತಿಯಲ್ಲಿ ವಿತರಿಸಬೇಕು.

**ದೀರ್ಘಕಾಲೀನ ಕ್ರಮಗಳು**

ರೈತರು ಭತ್ತ ಮತ್ತು ಕಬ್ಬುಗಳನ್ನು ಬೆಳೆಯುವುದರ ಬದಲಾಗಿ, ಅಷ್ಟೇ ಲಾಭ ತರುವ ಬೇರೆ ತೋಟಗಾರಿಕೆ ಇತ್ಯಾದಿ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸಬೇಕು. ದುರ್ದೈವದ ಸಂಗತಿ ಎಂದರೆ ಈಗ ದೇಶದಲ್ಲಿ ಸಕ್ಕರೆ ಕೊಳೆಯುತ್ತಾ ಬಿದ್ದಿದ್ದರೂ ಹೊಸ ಹೊಸ ಸಕ್ಕರೆ ಕಾರ್ಖಾನೆಗಳ ಸ್ಥಾಪನೆಗೆ ಸರ್ಕಾರ ಉತ್ತೇಜನ ನೀಡುತ್ತಲಿದೆ. ಇದರ ಹಿಂದೆ ಲಿಕ್ಕರ್ ಲಾಬಿಗಳ ಕೈವಾಡ ಇದೆ.

ರೈತರು ತಮ್ಮ ಹೊಲ-ಗದ್ದೆಗಳನ್ನು ಸಮತಟ್ಟಾಗಿಸಬೇಕು. ಇದರಿಂದಾಗಿ ಬಿದ್ದ ಮಳೆಯ ನೀರು ಮಣ್ಣಿನೊಳಕ್ಕೆ ಇಂಗಿ ತೇವಾಂಶ ಹೆಚ್ಚಾಗುತ್ತದೆ. ಹುನಗುಂದದ ದಿ॥ ನಾಗರಾಳರು ತಮ್ಮ ಎರೆ ಭೂಮಿ ಹೊಲದಲ್ಲಿ ಕೇವಲ ಮಳೆಯ ಆಶ್ರಯದಿಂದಲೇ ಸತತವಾಗಿ ಒಳ್ಳೆಯ ಪ್ರಮಾಣದಲ್ಲಿ ಜೋಳ ಬೆಳೆದು ಸಮೃದ್ಧಿಯನ್ನು ಪಡೆದಿದ್ದರು. ಅವರೆಂದೂ ನೀರಾವರಿ ಗಾಗಲೀ ರಾಸಾಯನಿಕ ಗೊಬ್ಬರಕ್ಕಾಗಲೀ ಶರಣಾಗಲಿಲ್ಲ. ಇದನ್ನು ನಿದರ್ಶನಕ್ಕಾಗಿ ಇಲ್ಲಿ ಹೇಳಬಯಸುತ್ತೇನೆ. ಕಾಲುವೆ ನೀರನ್ನು ಮತ್ತು ಅಂತರ್ಜಲವನ್ನು ತುಂಬಾ ಜಿಪುಣತನದಿಂದ ಬಳಸುವುದನ್ನು ನಮ್ಮ ರೈತರು ಕಲಿಯಬೇಕು.

ಕೆರೆಗಳನ್ನು ಸೂಕ್ತವಾಗಿ ರಕ್ಷಿಸಬೇಕು. ಹೂಳು ತುಂಬಿದ್ದರೆ ಹೂಳನ್ನು ಎತ್ತಿ ಹೊಲಗಳಿಗೆ ಗೊಬ್ಬರದಂತೆ ಉಪಯೋಗಿಸಬೇಕು. ಕೆರೆಯಂಗಳ ಜೇಡಿಮಣ್ಣಿನಿಂದ ಕೂಡಿರದಿದ್ದರೆ ಕೆರೆಯ ನೀರು ಇಂಗಿ ಅಂತರ್ಜಲವಾಗಿ ಸಂಗ್ರಹವಾಗಿ ಆಪದ್ಧನದಂತೆ ಕೆಲಸಕ್ಕೆ ಬರುತ್ತದೆ.

ಸಣ್ಣ ಸಣ್ಣ ಹಳ್ಳಗಳಿಗೆ ಸೂಕ್ತ ತಡೆಗಟ್ಟೆಗಳನ್ನು ಆಯಾ ಜಲಾನಯನ ಪ್ರದೇಶಕ್ಕೆ ತಕ್ಕಂತೆ ಕಟ್ಟಬೇಕು. ಇದರಿಂದ ಬತ್ತಿಹೋಗಿದ್ದ ಹಳ್ಳ ಮತ್ತು ಬಾವಿಗಳು ಜೀವಂತವಾಗುತ್ತವೆ ಮತ್ತು ಕಟ್ಟೆಯ ಹಿಂಬದಿಯ ಪ್ರದೇಶದ (upstream soil) ಮಣ್ಣು ಸವಕಳಿಯಾಗದೆ ತೇವಾಂಶ ವನ್ನು ಹೆಚ್ಚಿಸಿಕೊಳ್ಳುತ್ತದೆ. ಇದು ಜಲಾನಯನ ಅಭಿವೃದ್ಧಿಯ ಕಾರ್ಯಕ್ರಮದ ಭಾಗವಾಗಿ ಅನುಷ್ಠಾನಕ್ಕೆ ಬರಬೇಕು. ಜಿಲ್ಲಾವಾರು ಅಥವಾ ತಾಲ್ಲೂಕುವಾರು ಬರ ಪರಿಹಾರನಿಧಿಯನ್ನು ಸ್ಥಾಪಿಸಿ ಪ್ರಾಮಾಣಿಕವಾಗಿ ಉಪಯುಕ್ತ ಕಾರ್ಯಕ್ರಮಗಳಿಗಾಗಿ ಉಪಯೋಗಿಸಬೇಕು.

ಬರಸಂಭವ ಪ್ರದೇಶವನ್ನು ಗುರ್ತಿಸಿ ಎಲ್ಲಾ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಿ ಕಾಲಕಾಲಕ್ಕೆ ಸೂಕ್ತ ಸಲಹೆಗಳನ್ನು ಜಿಲ್ಲಾಧಿಕಾರಿಗೆ ನೀಡಬೇಕು. ಇದಕ್ಕಾಗಿ ಭೌಗೋಳಿಕ ಮಾಹಿತಿ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಬೇಕು.

ಜಲಾಶಯದ ನೀರನ್ನು ಸಾಗಿಸುವ ಕಾಲುವೆಗಳ ಕಾಮಗಾರಿ ಕೆಲಸ ಉನ್ನತ ಮಟ್ಟದ್ದಾಗಿರಬೇಕು. ಕಾಲುವೆ ಒಡೆಯುವುದರಿಂದ ನೀರು ಮತ್ತು ಬೆಳೆದು ನಿಂತ ಬೆಳೆ ಹಾಳಾಗುತ್ತದೆ. ಇಂಥ ಕಳಪೆ ಕಾಮಗಾರಿಗಾಗಿ ಸಂಬಂಧಿತ ಅಧಿಕಾರಿಗಳ ವಿರುದ್ಧ ತೀವ್ರ ಕ್ರಮ ಕೈಗೊಳ್ಳಬೇಕು. ತುಂಗಭದ್ರಾ ಎಡದಂಡೆ ಕಾಲುವೆಯು ಪ್ರತಿ ವರ್ಷವೂ




***ಈ ನಕಾಶೆಯನ್ನು ಗಮನಿಸಿದರೆ ನಮ್ಮ ರಾಜ್ಯದ ಕರಾವಳಿ ಪ್ರದೇಶ ಮತ್ತು ಪಶ್ಚಿಮ ಘಟ್ಟಗಳ ಪ್ರದೇಶದಲ್ಲಿ ಅತಿ ಹೆಚ್ಚು ಮಳೆ ಬಿದ್ದರೆ ಈಶಾನ್ಯ ಭಾಗದಲ್ಲಿ ಕಡಿಮೆ ಹಾಗೂ ಮಧ್ಯಭಾಗದಲ್ಲಿ ವಾರ್ಷಿಕವಾಗಿ 500 ಮಿ.ಮೀ.ಗಿಂತ ಕಡಿಮೆ ಮಳೆ ಬೀಳುತ್ತದೆ. ಈ ಮಧ್ಯಭಾಗವೇ ಬರಸಂಭವ ಪ್ರದೇಶವಾಗಿದೆ***

ಒಡೆಯುವುದನ್ನು ಇಲ್ಲಿ ಸ್ಮರಿಸಬಹುದು. ತಾಲ್ಲೂಕು ಮಟ್ಟದ ಅಥವಾ ಹೋಬಳಿ ಮಟ್ಟದ ಬರದ ಬಹು ಶಿಸ್ತಿನ ಅಧ್ಯಯನ ಆಗಬೇಕು.

ಜಲಾಶಯಗಳ ಮತ್ತು ಕೆರೆಗಳ ಹಿಂಬದಿಯ ಪ್ರದೇಶಗಳ ಮಣ್ಣಿನ ಸವಕಳಿಯನ್ನು ತಡೆಗಟ್ಟಲು ಹುಲ್ಲುಗಾವಲುಗಳನ್ನು ಮತ್ತು ಅರಣ್ಯಗಳನ್ನು ಸೂಕ್ತ ಸ್ಥಳಗಳಲ್ಲಿ ಬೆಳೆಸಬೇಕು. ಸಾಧ್ಯವಾದಲ್ಲಿ ನೀರನ್ನು ಅಂತರ್‌ಕಣಿವೆಗಳಿಗೆ ಸಾಗಿಸಬೇಕು. ಇದು ತುಂಬಾ ಜಟಿಲವಾದ ಕ್ರಮ. ತುಂಬ ವಿವರವಾದ ಅಧ್ಯಯನ ಮಾಡಿ ನಿರ್ಧಾರ ತೆಗೆದುಕೊಳ್ಳಬೇಕು. ಕೃಷಿ ವಿಶ್ವವಿದ್ಯಾಲಯಗಳಲ್ಲಿ ಹಾಗೂ ಇತರ ಸಂಶೋಧನಾ ಸಂಸ್ಥೆಗಳಲ್ಲಿ ಕೈಗೊಂಡ ಸಂಶೋಧನೆಗಳ ಫಲಗಳು ಸಾಮಾನ್ಯ ಜನರನ್ನು ತಲುಪಬೇಕು. ಸಾಮಾನ್ಯ ಜನರು ಹೊಸ ಹೊಸ ತಳಿಗಳನ್ನು ಹೊಸ ಹೊಸ ತಂತ್ರಗಳನ್ನು ಅಳವಡಿಸಿಕೊಂಡು ನೀರನ್ನು ಪೋಲು ಮಾಡದೆ ಕೃಷಿಯಲ್ಲಿ ತೊಡಗಬೇಕು.

**ನೆರೆ ಮತ್ತು ಅದರ ನಿರ್ವಹಣೆ**

ನೆರೆಯನ್ನು ಕೂಡ ಬರದಂತೆ ನಿರ್ದಿಷ್ಟವಾಗಿ ವಿವರಿಸುವುದು ಸಾಧ್ಯವಿಲ್ಲ. ಆದರೂ ಆಯಾ ಪ್ರದೇಶದ ಮೇಲೆ ಬೀಳುವ ವಾರ್ಷಿಕ ಸರಾಸರಿ ಮಳೆಗಿಂತ ಶೇಕಡ ೨೫ ಹೆಚ್ಚು ಮಳೆ, ಕಡಿಮೆ ಅವಧಿಯಲ್ಲಿ ರಭಸದಿಂದ ಸುರಿದರೆ ನೆರೆಹಾವಳಿಯಾಗುತ್ತದೆ ಎಂದು ಹೇಳಬಹುದು. ಅಷ್ಟೇ ಅಲ್ಲದೆ ಮಾನವನು ಜಲ ಚರಂಡಿಗಳಿಗೆ (river drainage) ಅಡ್ಡಿಯನ್ನುಂಟುಮಾಡಿದ್ದರೆ ನೀರು, ನದಿ ಅಥವಾ ಹಳ್ಳಗಳ ದಂಡೆಗಳಿಂದ ಹೊರಕ್ಕೆ ಹರಿದು ಮನುಷ್ಯನಿಗೂ ಬೆಳೆಗಳಿಗೂ ಪ್ರಾಣಿಗಳಿಗೂ ಹಾನಿ ಉಂಟಾಗುತ್ತದೆ. ಸಾಮಾನ್ಯವಾಗಿ ತೀರ ಅಗಲವಾಗಿರುವ ನದಿಪಾತ್ರಗಳ ದಂಡೆಗಳ ಭೂಮಿ ಫಲವತ್ತಾಗಿರುತ್ತದೆ. ಶ್ರಮವಿಲ್ಲದೆ ಒಳ್ಳೆಯ ಫಸಲನ್ನು ಬೆಳೆದು ಲಾಭ ಮಾಡಿಕೊಳ್ಳಬಹುದೆಂಬ ಆಸೆಯಿಂದ ಅಂಥ ಭೂಮಿಯನ್ನಾಕ್ರಮಿಸಿಕೊಂಡಿದ್ದರೆ, ಕೊಂಚ ಹೆಚ್ಚು ಮಳೆ ರಭಸದಿಂದ ಸುರಿದರೆ ಅದು ನೆರೆಹಾವಳಿ ಎನಿಸಿಕೊಳ್ಳುತ್ತದೆ. ಇಂಥ ಹಲವಾರು ಘಟನೆಗಳನ್ನು ನಾನು

## ಕರ್ನಾಟಕದ ಇತ್ತೀಚಿನ ವರ್ಷಗಳ ಅನಾವೃಷ್ಟಿ : ವಿಶ್ಲೇಷಣೆ

ನಾನು ಆಗಲೇ ಚರ್ಚಿಸಿದಂತೆ ನಮಗೆ ಮುಂಗಾರು ಮಳೆಯೇ ಬಹಳ ಮುಖ್ಯ. ಅಂದರೆ ಮೇ-ಅಕ್ಟೋಬರ್ ಅವಧಿಯಲ್ಲಿ ಬೀಳುವ ಮಳೆಯು ಸಮರ್ಪಕವಾಗಿದ್ದರೆ ಕರ್ನಾಟಕಕ್ಕೆ ಕ್ಷೇಮ – ಕೃಷಿ ಹಾಗೂ ಜಲ ವಿದ್ಯುತ್ ಉತ್ಪಾದನೆಯ ದೃಷ್ಟಿಗಳಿಂದ. ಈ ಕಾರಣಕ್ಕಾಗಿ ನಮ್ಮ ರಾಜ್ಯದ ಬರಸಂಭವ ತಾಲ್ಲೂಕುಗಳ ೨೦೦೨ನೇ ವರ್ಷದ ಮುಂಗಾರು ಮಳೆಯಿಂದ ಆರಂಭಿಸಿ ೨೦೦೬ ನೇ ವರ್ಷದ ಅವಧಿಯ ಮುಂಗಾರು ಮಳೆಯನ್ನು ಇಲ್ಲಿ ವಿಶ್ಲೇಷಿಸಿದ್ದೇನೆ.

ಈ ಮುಂಗಾರು ಅವಧಿಯಲ್ಲಿ ಬಿದ್ದ ಮಳೆಯು ಇದೇ ಅವಧಿಯ ಸರಾಸರಿ ಮಳೆಗಿಂತ ಶೇಕಡ ೨೫ ಮತ್ತು ಅದಕ್ಕೂ ಕಡಿಮೆ ಇದ್ದರೆ ಅಂಥ ತಾಲ್ಲೂಕನ್ನು ಬರಪೀಡಿತ ತಾಲ್ಲೂಕು ಎಂದು ಪರಿಗಣಿಸಬಹುದೆಂಬ ಪ್ರಮೇಯವನ್ನಿಟ್ಟುಕೊಂಡು ವಿಶ್ಲೇಷಿಸಿದರೆ ಈ ಕೆಳಗೆ ಕಾಣಿಸಿದಂತೆ ವಿವರಗಳು ಲಭ್ಯವಾಗುತ್ತವೆ :

| ವರ್ಷ | ಬರಪೀಡಿತ ತಾಲ್ಲೂಕುಗಳ ಸಂಖ್ಯೆ | ಬೆಳೆ ಹಾನಿಗೀಡಾದ ಪ್ರದೇಶ |
|---|---|---|
| ೨೦೦೨ | ೬೫ | ೨೮ ಲಕ್ಷ ಹೆಕ್ಟೇರು |
| ೨೦೦೩ | ೫೫ | ೨೭ ಲಕ್ಷ ಹೆಕ್ಟೇರು |
| ೨೦೦೪ | ೧೬ | ೧೪ ಲಕ್ಷ ಹೆಕ್ಟೇರು |
| ೨೦೦೫ | ೩ | ೧೨ ಲಕ್ಷ ಹೆಕ್ಟೇರು |
| ೨೦೦೬ | ೭೪ | ೨೯ ಲಕ್ಷ ಹೆಕ್ಟೇರು |

ಮೇಲ್ಕಾಣಿಸಿದ ೫ ವರ್ಷಗಳ ಅವಧಿಯಲ್ಲಿ ೨೦೦೬ ವರ್ಷ ಅತ್ಯಧಿಕ ಬರಪೀಡಿತ ತಾಲ್ಲೂಕುಗಳನ್ನು ಹೊಂದಿರುವುದು ವ್ಯಕ್ತವಾಗುತ್ತದೆ. ಸಹಜವಾಗಿ ಅತಿಹೆಚ್ಚಿನ ಪ್ರದೇಶದಲ್ಲಿ ಬೆಳೆಹಾನಿ ಉಂಟಾಗಿದೆ. ಆದ್ದರಿಂದಲೇ ಕೇಂದ್ರ ಸರ್ಕಾರ ಈ ವರ್ಷದಲ್ಲಿ ಉಂಟಾದ ನೆರೆ ಮತ್ತು ಬರಗಳ ನಿರ್ವಹಣೆಗಾಗಿ ರೂ. ೨೫೦ ಕೋಟಿ ಹಣವನ್ನು ನೆರವಿನಂತೆ ಬಿಡುಗಡೆಮಾಡಿದೆ. ಈ ಹಣದ ಸದುಪಯೋಗ ನಮ್ಮ ಚುನಾಯಿತ ಪ್ರತಿನಿಧಿಗಳ, ಅಧಿಕಾರಿಗಳ ಮತ್ತು ಸಾಮಾನ್ಯ ಜನರ ಕಾರ್ಯತತ್ಪರತೆ ಮತ್ತು ಪ್ರಾಮಾಣಿಕತೆಗಳ ಮೇಲೆ ಅವಲಂಬಿತವಾಗಿದೆ.

**ಬರಕ್ಕೆ ಪ್ರತಿಸ್ಪಂದನ**

ಮಳೆಯ ಅಂಕಿಅಂಶಗಳನ್ನಾಧರಿಸಿ ಬರದ ತೀವ್ರತೆಯನ್ನು ಅಳೆಯುವುದು ಸುಲಭ. ಆದರೆ, ಬರದ ನಿರ್ವಹಣೆಗಾಗಿ ನೀಡಿರುವ ಹಣದ ಉಪಯೋಗ ಹೇಗಾಯಿತು, ಸಾಮಾನ್ಯ ಜನರಿಗೆ ಅದರಿಂದಾದ ಉಪಯೋಗಗಳೇನು ಎಂಬುದನ್ನು ತಿಳಿಯುವುದು ಅಷ್ಟೇ ಅವಶ್ಯಕ; ಆದರೆ ಇದು ಅಸಾಧ್ಯವೆನ್ನುವಷ್ಟು ಕಷ್ಟಸಾಧ್ಯದ ಕೆಲಸ. ಇದನ್ನೇ ಬರಕ್ಕೆ ಪ್ರತಿಸ್ಪಂದನ ಎಂದು ಕರೆಯಲಾಗುತ್ತದೆ. ಇದೊಂದು ತುಂಬಾ ಸಂಕೀರ್ಣವಾದ ಅಧ್ಯಯನ. ಇಂಥದೊಂದು ಅಧ್ಯಯನ ಮಾಡುವವರ ಗುಂಡಿಗೆ ಗಟ್ಟಿಯಾಗಿರಬೇಕು. ಸರ್ಕಾರ ಕಾಲಕಾಲಕ್ಕೆ ಬಿಡುಗಡೆ ಮಾಡಿದ ಅನುದಾನ ಮತ್ತು ಪ್ರತಿಸ್ಪಂದನ ಯೋಜಿತ ರೀತಿಯಲ್ಲಿದ್ದರೆ ಸಾರ್ಥಕವಾಗುತ್ತದೆ. ಇಲ್ಲವಾದರೆ ಎಲ್ಲವೂ ವ್ಯರ್ಥ : ಆದ್ದರಿಂದ ಇಂಥ ಅಧ್ಯಯನವನ್ನು ಸರ್ಕಾರೇತರ ಅಧ್ಯಯನ ತಂಡಕ್ಕೆ ವಹಿಸಿ ಒಂದು ಅಕಾಡೆಮಿಕ್ ಅಧ್ಯಯನಕ್ಕೊಳಪಡಿಸುವುದು ಅವಶ್ಯ. ಈ ಅಧ್ಯಯನದ ಉದ್ದೇಶ ಯಾರನ್ನೂ ಶಿಕ್ಷಿಸುವುದಕ್ಕಾಗಿ ಅಲ್ಲ, ಇದರಿಂದ ಪಾಠ ಕಲಿಯುವುದಕ್ಕಾಗಿ ಎಂಬುದನ್ನು ಸ್ಪಷ್ಟಪಡಿಸಿದರೆ ಅಧಿಕಾರಿಗಳೂ, ಜನಪ್ರತಿನಿಧಿಗಳೂ ಮತ್ತು ಫಲಾನುಭವಿಗಳೂ ಸಹಕರಿಸಲು ಸಾಧ್ಯ. ಇಂಥ ಅಧ್ಯಯನದ ಆಧಾರದ ಮೇಲೆ ಮುಂಬರುವ ವರ್ಷಗಳಲ್ಲಿ ಸೂಕ್ತ ಯೋಜನೆಗಳನ್ನು ರೂಪಿಸಿ ಉಪಯುಕ್ತ ರೀತಿಯಲ್ಲಿ ಅನುಷ್ಠಾನಗೊಳಿಸಲು ಸಾಧ್ಯ.




ಉತ್ತರ ಕರ್ನಾಟಕದ ಎರೆಮಣ್ಣಿನಲ್ಲಿ ಹರಿಯುವ ಹಳ್ಳಗಳ ಬದಿಗಳಲ್ಲಿ ನೋಡಿದ್ದೇನೆ. ಮನುಷ್ಯ ತಾನು ಮಾಡಿದ ಆಕ್ರಮಣಕ್ಕಾಗಿ ನದಿಯನ್ನಾಗಲೀ ಹಳ್ಳವನ್ನಾಗಲೀ ದೂಷಿಸುವುದು ಸರಿಯಲ್ಲ. ಆದರೆ ನೆರೆಯ ದುಷ್ಪರಿಣಾಮಗಳನ್ನು ಸುಲಭವಾಗಿ ಮುಂಗಡವಾಗಿ ಗುರ್ತಿಸಬಹುದು ಹಾಗೂ ಅದರ ದುಷ್ಪರಿಣಾಮಗಳ ವ್ಯಾಪ್ತಿ ಮತ್ತು ಕಾಲ ಸೀಮಿತ. ಬರಕ್ಕೆ ಹೋಲಿಸಿದರೆ ನೆರೆಯ ಪರಿಣಾಮಗಳು ಗೌಣ.

ನೆರೆಯ ದುಷ್ಪರಿಣಾಮಗಳು ಕಳಪೆ ಕಟ್ಟಡಗಳ ಮೇಲೆ ನೇರವಾಗಿ ಬೀಳುವುದರಿಂದ ವಸತಿಯ ಸಮಸ್ಯೆಗಳನ್ನು ಯುದ್ಧೋಪಾದಿಯಲ್ಲಿ ನಿರ್ವಹಿಸಬೇಕು. ಇಲ್ಲವಾದರೆ ಜನರ ಹಾಹಾಕಾರ ತೀವ್ರವಾಗುತ್ತದೆ. ನದಿಗಳ ದ್ವೀಪಗಳಲ್ಲಿ ಹಾಗೂ ನದಿಗಳ ದಂಡೆಗಳ ಪಕ್ಕದಲ್ಲಿರುವ ಹಳ್ಳಿಗಳಲ್ಲಿ ವಾಸಿಸುತ್ತಿರುವ ಜನರನ್ನು, ಜಾನುವಾರುಗಳನ್ನು ನಾವೆಗಳ ಮೂಲಕ ಸುರಕ್ಷಿತ ಸ್ಥಳಗಳಿಗೆ ಸ್ಥಳಾಂತರಿಸಬೇಕು.

ಎರೆ ಪ್ರದೇಶಗಳಲ್ಲಿ(black cotton soil) ಹರಿಯುವ ಸಣ್ಣ ಸಣ್ಣ ಹಳ್ಳಗಳು, ರಭಸದಿಂದ ಮಳೆ ಸುರಿದರೆ ನೆರೆಯೇರುತ್ತವೆ. ಆದ್ದರಿಂದ ಇಂಥ ಪ್ರದೇಶಗಳ ಜನರು ರಭಸದ ಮಳೆ ಬಂದಾಗ ಎಚ್ಚರ ವಹಿಸಬೇಕು. ರಭಸದ ಮಳೆ ಬೀಳುವಾಗ ಕಾಲ್ನಡಿಗೆಯಿಂದ ಹಳ್ಳಗಳನ್ನು ದಾಟಬಾರದು. ಕೊಂಚ ಎಚ್ಚರ ತಪ್ಪಿದರೂ ನೀರಿನ ರಭಸಕ್ಕೆ ಜನರು ಕೊಚ್ಚಿಹೋಗುತ್ತಾರೆ. ಅಂಥ ಘಟನೆಗಳು ಸಿಂಧನೂರು ತಾಲ್ಲೂಕಿನ ಹಳ್ಳಗಳಲ್ಲಿ ಹಿಂದೆ ನಡೆದ ಉದಾಹರಣೆಗಳಿವೆ. ಒಟ್ಟಿನಲ್ಲಿ ನೆರೆಯ ದುಷ್ಪರಿಣಾಮಗಳಿಂದ ಜನರು ತಾವೇ ಎಚ್ಚರವಹಿಸಿದರೆ ಸರ್ಕಾರದ ಹೆಚ್ಚಿನ ನೆರವಿಲ್ಲದೆ ಉಳಿದು ಬದುಕಬಹುದು.

**ಕರ್ನಾಟಕದ ಬರ ಮತ್ತು ನೆರೆ**

ಇನ್ನು ಮುಂದೆ ಕರ್ನಾಟಕದ ಬರ ಮತ್ತು ನೆರೆ ಸಂಭವ ಪ್ರದೇಶಗಳ ಬಗ್ಗೆ ವಿವರಿಸಿ ಈ ಲೇಖನ ಮುಗಿಸುತ್ತೇನೆ. ಕರ್ನಾಟಕದ ಮಳೆಯು ಸಮನಾಗಿ ಹಂಚಿಕೆಯಾಗಿಲ್ಲ. ಕಾಲಮಾನ ಹಾಗೂ ಪ್ರಾದೇಶಿಕ ದೃಷ್ಟಿಯಿಂದ, ಬೀಳುವ ಮಳೆಯು ತುಂಬಾ ವ್ಯತ್ಯಾಸವನ್ನು ಹೊಂದಿದೆ. ಶಿವಮೊಗ್ಗ ಜಿಲ್ಲೆಯ ಆಗುಂಬೆಯಲ್ಲಿ ಸರಾಸರಿ ವಾರ್ಷಿಕ ಮಳೆಯು ಸುಮಾರು ೧೩,೦೦೦ ಮಿ.ಮೀ. (೧೯೬೬ರಲ್ಲಿ) ಇದ್ದರೆ, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯಲ್ಲಿ ಬೀಳುವ ವಾರ್ಷಿಕ ಮಳೆ ಕೇವಲ ೪೫೮ ಮಿ.ಮೀ. ಎಂದರೆ ನಮ್ಮ ರಾಜ್ಯದ ಮೇಲೆ ಬೀಳುವ ವಾರ್ಷಿಕ ಸರಾಸರಿ ಮಳೆಯ ವ್ಯತ್ಯಾಸ (ನೋ. ನಕಾಶೆ ೧) ಗೊತ್ತಾಗುತ್ತದೆ. ರಾಜ್ಯದ ವಾರ್ಷಿಕ ಸರಾಸರಿ ಮಳೆ ೧೧೩೯ ಮಿ.ಮೀ. ಇದರಲ್ಲಿ ೮೦೬ ಮಿ.ಮೀ. ಮಳೆ, ನೈಋತ್ಯ ಮಾನ್ಸೂನ್ ಮಳೆಯಾಗಿದೆ. ಅಂದರೆ ವರ್ಷದ ಶೇಕಡ ೭೦ರಷ್ಟು ಮಳೆಯು ವಾಯವ್ಯ ಮಳೆಯಾಗಿದೆ. ಕೃಷಿ ಕೆಲಸದಿಂದ ಯೋಚಿಸಿದರೆ ಮೇ ತಿಂಗಳಲ್ಲಿಯೇ ರೈತನು ಭೂಮಿಯಲ್ಲಿ ನೇಗಿಲು ಮತ್ತು ಕುಂಟೆ ಹೊಡೆದು ನೆಲವನ್ನು ಜೂನ್ ತಿಂಗಳಲ್ಲಿ ಬೀಳುವ ಮಳೆಗಾಗಿ ಸಿದ್ಧಗೊಳಿಸುತ್ತಾನೆ. ಹಾಗೆಯೇ, ಅಕ್ಟೋಬರ್‌ವರೆಗೆ ಬೀಳುವ ಮಳೆಯು ಕೃಷಿ ಚಟುವಟಿಕೆಗಳಿಗೆ (ವಿಶೇಷವಾಗಿ ಹಿಂಗಾರು ಬೆಳೆಗಳಿಗೆ) ಒಟ್ಟಾಗಿ ಆಧಾರವಾಗಿರುತ್ತದೆ. ಆದ್ದರಿಂದ ಮೇ-ಅಕ್ಟೋಬರ್‌ವರೆಗೆ (ಅಕ್ಟೋಬರ್ ಸೇರಿಸಿ) ಬೀಳುವ ಮಳೆಯು ನಮ್ಮ ರಾಜ್ಯದ ಮೇಲೆ ಪ್ರಭಾವ ಬೀರುತ್ತದೆ ಎಂದರ್ಥ. ಈ ದೃಷ್ಟಿಯಿಂದ ನೋಡಿದಾಗ ಶೇಕಡ ೮೦ರಷ್ಟು ಮಳೆ, ಈ ಅವಧಿಯಲ್ಲಿ ಬೀಳುತ್ತದೆ. ಅಂದರೆ ಈ ಅವಧಿಯಲ್ಲಿ ಬೀಳುವ ಪ್ರಮಾಣ ಶೇಕಡ ೨೫ಕ್ಕಿಂತ ಕಡಿಮೆಯಾದರೆ ಬರದ ಬರುವನ್ನು ಸೂಚಿಸುತ್ತದೆ ಎಂದರ್ಥ. ಅದರಲ್ಲಿ ವಿಶೇಷವಾಗಿ ಜೂನ್-ಜುಲೈ ತಿಂಗಳ ಮಳೆಯು ಕುಂಠಿತಗೊಂಡರೆ ಸರ್ಕಾರ ಬರದ ಪರಿಹಾರೋಪಾಯಗಳನ್ನು ಸಿದ್ಧಮಾಡಿಕೊಳ್ಳಬೇಕು.

ನಮ್ಮ ದೇಶದಲ್ಲಿ ಅತಿ ಹೆಚ್ಚು ಬರ ಸಂಭವ ಪ್ರದೇಶವನ್ನು ರಾಜಸ್ಥಾನ ಹೊಂದಿದ್ದರೆ, ನಂತರದ ಸ್ಥಾನ ಕರ್ನಾಟಕಕ್ಕೆ ಸಲ್ಲುತ್ತದೆ. ವಾರ್ಷಿಕ ಸರಾಸರಿ ಮಳೆ ೭೫೦ ಮಿ.ಮೀ.ಗಿಂತ ಕಡಿಮೆ ಮಳೆ ಪಡೆಯುವ ಪ್ರದೇಶವನ್ನು ಬರ ಸಂಭವ ಪ್ರದೇಶವೆಂದು ಕೆಲವರು ಗುರ್ತಿಸುತ್ತಾರೆ. ಈ ಮಿತಿಯ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ನನ್ನ ದೃಷ್ಟಿಯಲ್ಲಿ ಕೇವಲ ವಾರ್ಷಿಕ ಮಳೆ ಅಷ್ಟೇ ಅಲ್ಲದೆ ಮುಂಗಾರು ಮಳೆಯನ್ನು ಪರಿಗಣಿಸಿ ಇಂಥ ಬರಸಂಭವ ಪ್ರದೇಶ ಅಥವಾ ತಾಲ್ಲೂಕುಗಳನ್ನು ಗುರ್ತಿಸುವುದು ಸೂಕ್ತ. ಈ ಮಾತು ಎರಡು ನಕಾಶೆಗಳನ್ನು ನೋಡಿದರೆ ಅರ್ಥವಾಗುತ್ತದೆ (ನಕಾಶೆ ೧ ಮತ್ತು ನಕಾಶೆ ೨). ನನ್ನ ದೃಷ್ಟಿಯಲ್ಲಿ ವಾರ್ಷಿಕ ೬೫೦ ಮಿ.ಮೀ.ಗಿಂತ ಕಡಿಮೆ ಮಳೆ ಬೀಳುವ ಹಾಗೂ ಮುಂಗಾರಿನಲ್ಲಿ ३೦೦ ಮಿ.ಮೀ.ಗಿಂತ ಕಡಿಮೆ ಮಳೆ ಪಡೆಯುವ ಪ್ರದೇಶಗಳನ್ನು (ಅಥವಾ ತಾಲ್ಲೂಕುಗಳನ್ನು) ಬರಸಂಭವ ತಾಲ್ಲೂಕುಗಳೆಂದು ಕರೆಯಬಹುದು. ಈ ಅಳತೆಗೋಲನ್ನು ಹಿಡಿದರೆ ಸುಮಾರು ೫೦ ತಾಲ್ಲೂಕುಗಳನ್ನು ಬರಸಂಭವ ತಾಲ್ಲೂಕುಗಳೆಂದು ಗುರ್ತಿಸಬಹುದು. ಆದರೆ ಬರ ಸಂಭವ ತಾಲ್ಲೂಕುಗಳೆಂಬ ಹಣೆಪಟ್ಟಿ ಇದ್ದರೆ ಸಿಗಬಹುದಾದ ಸೌಕರ್ಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಾಜಕೀಯ ಒತ್ತಡಗಳಿಗೆ ಯಾವುದೇ ಸರ್ಕಾರ ಮಣಿಯಬೇಕಾಗುತ್ತದೆ. ಆದ್ದರಿಂದ ಸದ್ಯ ನಮ್ಮ ರಾಜ್ಯದಲ್ಲಿ ಒಟ್ಟು ೮೮ ತಾಲ್ಲೂಕುಗಳನ್ನು ಈ ಬರಸಂಭವ ಪ್ರದೇಶಗಳ ಪಟ್ಟಿಗೆ ಸೇರಿಸಲಾಗಿದೆ (ನಕಾಶೆ ೩). ಅಂದರೆ ಈ ೮೮ ತಾಲ್ಲೂಕುಗಳ ಮಳೆಯನ್ನು ಸದಾ ಎಚ್ಚರಿಕೆಯಿಂದ ಗಮನಿಸಬೇಕು ಎಂದರ್ಥ.

**ನೆರೆ**

ನಮ್ಮ ರಾಜ್ಯದಲ್ಲಿ ಉತ್ತರ ಪ್ರದೇಶ ಮತ್ತು ಬಿಹಾರಗಳಿಗೆ ಹೋಲಿಸಿದರೆ, ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆ ನೆರೆಹಾವಳಿ ಇದೆ. ಆದರೆ ೨೦೦೬ ಮತ್ತು ೨೦೦೫ರಲ್ಲಿ ನಮ್ಮ ರಾಜ್ಯದ ಬೆಳಗಾವಿ, ಬಿಜಾಪುರ ಮತ್ತು ಕಲಬುರ್ಗಿ ಜಿಲ್ಲೆಯ ನೂರಾರು ಹಳ್ಳಿಗಳು ನೆರೆಹಾವಳಿಗೆ ತುತ್ತಾಗಿರುವುದು ಈಗ ಇತಿಹಾಸ. ಈ ಹಳ್ಳಿಗಳು ಹೆಚ್ಚಾಗಿ ನಮ್ಮ ರಾಜ್ಯದ ದೊಡ್ಡ ದೊಡ್ಡ ಅಣೆಕಟ್ಟೆಗಳಿಂದ ನಿರ್ಮಾಣವಾಗಿರುವ ಜಲಾಶಯಗಳ ಹಿನ್ನೀರಿನ ಪ್ರದೇಶಗಳಲ್ಲಿವೆ. ಮತ್ತು ನದಿಗಳ ದಂಡೆಗಳ ಮೇಲೆ ಇರುವ ಹೊಲ-ಗದ್ದೆಗಳ ಮೇಲೆ ದುಷ್ಪರಿಣಾಮಗಳು ಆಗಿವೆ. ಈ ನೆರೆಹಾವಳಿಗೆ ಮುಖ್ಯ ಕಾರಣವೆಂದರೆ ಮಹಾರಾಷ್ಟ್ರದಲ್ಲಿ ಬಿದ್ದ ಅತಿ ಹೆಚ್ಚಿನ ರಭಸದ ಮಳೆ ಮತ್ತು ಮಹಾರಾಷ್ಟ್ರದ ಅಣೆಕಟ್ಟುಗಳಿಂದ ಹಠಾತ್ತನೆ ಬಿಟ್ಟ ನೀರು – ಅಂದರೆ ಈ ನೆರೆಹಾವಳಿಗಳು ಮಾನವ ನಿರ್ಮಿತ. ಇವುಗಳ ದುಷ್ಪರಿಣಾಮಗಳ ಬಗ್ಗೆ ಮುಂಜಾಗ್ರತೆ ವಹಿಸಿದ್ದರೆ ತಡೆಯಬಹುದಾಗಿತ್ತು.

ಕೊನೆಯಲ್ಲಿ ಒಂದು ಮಾತು. ಬರ ಮತ್ತು ನೆರೆಗೆ ಜಲವೇ ಕಾರಣ. ಜಲದ ಸದ್ಬಳಕೆಯನ್ನು ನಾವು ನಮ್ಮ ಜೀವನ ವಿಧಾನದಲ್ಲಿ ಅಳವಡಿಸಿಕೊಂಡರೆ, ಬರ ಮತ್ತು ನೆರೆಯ ಪರಿಣಾಮಗಳಿಂದ ಬಹುಪಾಲು ಮುಕ್ತವಾಗಬಹುದು. ಈ ಸಂಬಂಧದಲ್ಲಿ ವರಕವಿ ಬೇಂದ್ರೆಯವರ ಸುಪ್ರಸಿದ್ಧ ಕವನದ ಸಾಲುಗಳನ್ನು ಕೊಂಚ ಬದಲಾಯಿಸಿ ಕೆಳಗಿನಂತೆ ಹೇಳಬಹುದು :

*ಜಲವೇ ಜನನ*
*ನಿರ್ಜಲವೇ ಮರಣ*
*ಸಮಜಲವೇ ಜೀವನ*

(ವಿ.ಸೂ. : ಈ ಲೇಖನಕ್ಕಾಗಿ ಕೆಲ ಮಾಹಿತಿಗಳನ್ನೂ ನಕಾಶೆ ೩ರ ಪ್ರತಿಯನ್ನೂ ಒದಗಿಸಿದ ಸ್ನೇಹಿತರೂ ಬರ ಪರಿಹಾರ ಉಸ್ತುವಾರಿ ಕೋಶದ ನಿರ್ದೇಶಕರೂ ಆದ ಶ್ರೀ ವಿ. ಎಸ್. ಪ್ರಕಾಶ ಮತ್ತು ಈ ಸಂಸ್ಥೆಯ ವಿಜ್ಞಾನಿಗಳಾದ ಡಾ|| ಶ್ರೀನಿವಾಸ ರೆಡ್ಡಿಯವರಿಗೆ ಈ ಲೇಖಕ ಕೃತಜ್ಞನಾಗಿದ್ದಾನೆ.)

**ಡಾ|| ಹೆಚ್. ಚಂದ್ರಶೇಖರ**
'ಸಂಗಮ' ಎಮ್.ಐ.ಜಿ.-೭೭, ೬ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ,
೨ನೇ ಹಂತ, ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

ಅಷ್ಟು ಹೊತ್ತೂ ಶಾನುಭೋಗರಿಂದ ಕತೆ ಕೇಳಿ ತಲೆ ತೂಗುತ್ತಿದ್ದ ಶಂಕರಯ್ಯನವರು ಒಂದು ಚಿಟಿಕೆ ನಶ್ಯ ಏರಿಸಿ ಮೂಗೊರೆಸಿಕೊಳ್ಳುತ್ತಾ ತಾವೂ ಶುರು ಮಾಡಿದರು ಒಂದು ಕತೆಯನ್ನು:

''ಏನು ಶ್ಯಾನುಭೋಗರೇ, ನೀವೀಕತೆ ಹೇಳಿದಿರಲ್ಲ, ನಮ್ಮ ತಾತ ನನಗೆ ಹೇಳಿದ್ದ ಒಂದು ನಡೆದ ಕತೆ ಹೇಳ್ತೀನಿ ಕೇಳಿ. ನಮ್ಮ ಹಳ್ಳಿಗೆ ಪಡುವಲಲ್ಲಿ ಒಂದು ಗುಡ್ಡದ ಮೇಲೆ ಯಾವುದೋ ಒಂದು ದೊಡ್ಡ ಮನೆ ಮುರಿದು ಬಿದ್ದಿದೆ ನೋಡಿ.''

''ಅದೇ... ಮಸೀದಿಯೊ, ಚರ್ಚೋ ಇತ್ತಲ್ಲ.''

''ಹೂಂ, ಅದರ ಮುಂದೆ ನೂರೈವತ್ತೆ ಕರೆಯೊ, ನೂರರವತ್ತೆಕರೆಯೊ ಒಂದು ಖುಷ್ಕಿ ಜಮೀನು ಪಾಳು ಬಿದ್ದಿತಂತೆ. ಈಗೇನೊ ಕಾವೇರಿಯಿಂದ ನಾಲೆ ತಂದ ಮೇಲೆ ಆದಷ್ಟು ಜಮೀನು ತರಿ ಆಗಿದೇನ್ನಿ. ಅದೇನು ಕಾರಣ ದಿಂದಲೋ ಏನೊ ಆ ಜಮೀನನ್ನು ಆಗ ಯಾರೂ ಸಾಗುವಳಿ ಮಾಡಿರಲಿಲ್ಲ. ಅಲ್ಲದೆ ಯಾರಿಗೆ ಸೇರಿದೆ ಅಂತಲೂ ಸರಿಯಾಗಿ ಯಾರಿಗೂ ತಿಳಿದೇ ಇರಲಿಲ್ಲ. ಒಂದು ಸಾರಿ ಯುದ್ಧ ಕಳೆದ ಮೇಲೆ ದೇಶದಲ್ಲಿ ಎಲ್ಲೆಲ್ಲೂ ಮಳೆ ಬೆಳೆ ಇಲ್ಲದೆ ಕ್ಷಾಮ ಬಂದು, ಹೊಟ್ಟೆಗೆ ಹಿಟ್ಟಿಲ್ಲದೆ ಜನ ಸಾಯ್ತಾ ಇದ್ದರಲ್ಲ, ಆಗ



# ಬಸಪ್ಪನ ಜಮೀನು

ನ. ಸುಬ್ರಹ್ಮಣ್ಯಂ

ಕಂಗಾಲಾಗಿ ಸಾಯುತ್ತಿದ್ದ ಜನಗಳಿಗೆ ಸಮಾಧಾನ ತರುವುದಕ್ಕೋಸ್ಕರ ಸರ್ಕಾರದವರು 'ಹೆಚ್ಚು ಆಹಾರ ಬೆಳೆಯಿರಿ' ಅನ್ನೋ ಒಂದು ಸಂಸ್ಥೆಯನ್ನು ಸ್ಥಾಪಿಸಿ, ಎಲ್ಲೆಲ್ಲೂ ಬಾವಿಗಳನ್ನು ತೋಡಿಸೋದು, ಸಾಧ್ಯವಾದ ಕಡೆಯಲ್ಲೆಲ್ಲ ನದಿಗಳಿಂದ ಕಾಲುವೆ ಹರಿಸಿ ಬಂಜರು ಪ್ರದೇಶಗಳನ್ನೆಲ್ಲ ಸಾಗುವಳಿ ಮಾಡಿಸುವುದು, ಬೇಸಾಯ ಗಾರರಿಗೆ ಹೆಚ್ಚು ಆಹಾರ ಬೆಳೆಯಲಿ ಅಂತ ಒಳ್ಳೆ ಗೊಬ್ಬರ, ಬಿತ್ತನೆ, ಹೊಸತರದ ಉಪಕರಣಗಳು ಮೊದಲಾದುವನ್ನು ಕೊಡೋದು, ಅಲ್ಲದೆ ಹೆಚ್ಚು ಆಹಾರ ಬೆಳೆದವರಿಗೆ ಬಹುಮಾನ ಕೊಡೋದು ಹೀಗೆಲ್ಲ ಮಾಡಿದರು ನೋಡಿ! ಅದರಿಂದ ದೇಶದಲ್ಲಿ ಪಾಳು ಬಿದ್ದಿದ್ದ ಜಮೀನೆಲ್ಲ ಮತ್ತೆ ಸಾಗುವಳಿಗೆ ಬಂತು. ಜನಗಳಿಗೂ ಒಂದೆರಡು ವರ್ಷದಲ್ಲೇ ತುಂಬಾ ಅನುಕೂಲವಾಯ್ತು ಅನ್ನಿ. ಹಾಗೇ ಒಂದು ಸಾರಿ 'ಹೆಚ್ಚು ಆಹಾರ ಬೆಳೆಯಿರಿ' ಸಂಸ್ಥೆಯ ಅಧಿಕಾರಿಗಳು ರೈತರ ಕಷ್ಟ ಸುಖಗಳನ್ನೆಲ್ಲ ವಿಚಾರಿಸಿಕೊಳ್ಳುತ್ತಾ ನಮ್ಮ ಹಳ್ಳಿಗೂ ಬಂದಿದ್ದರು. ಆಗ ಆ ಗುಡ್ಡದ ಕೆಳಗೆ ಪಾಳು ಬಿದ್ದಿದ್ದ ಖುಷ್ಕಿ ಜಮೀನು ಅವರ ಕಣ್ಣಿಗೆ ಬಿತ್ತು. ಅಂತಹ ಕಷ್ಟ ಕಾಲದಲ್ಲಿ ಅಷ್ಟು ವಿಶಾಲವಾದ ಜಮೀನನ್ನು ಪಾಳು ಬಿಟ್ಟಿದ್ದರೆ ಯಾರು ತಾನೇ ಸಹಿಸ್ತಾರೆ? ಅವರು ತಮ್ಮ ಪಕ್ಕದಲ್ಲೇ ಇದ್ದ ರೆವಿನ್ಯೂ ಆಫೀಸರನ್ನು ಕರೆದು, ''ಯಾರದ್ರೀ ಈ ಜಮೀನು?'' ಎಂದು ಕೇಳಿದರು. ರೆವಿನ್ಯೂ ಆಫೀಸರು ಹಿಂತಿರುಗಿ ಪಟೇಲನ ಮುಖವನ್ನು ನೋಡಿದರು. ಪಟೇಲ ಕೈಎಣ್ಣೆ ಮುಖ ಮಾಡಿಕೊಂಡು, ''ಶಾನುಭೋಗರ್ನ ಕರೆತತ್ತೀನಿ ಮಾಸ್ವಾಮಿ'' ಎಂದು, ''ಈ ಹಾಳು ಶಾನುಭೋಗ್ರು ಒಳ್ಳೇ ಸಮಯದಲ್ಲಿ ಕೈಕೊಡ್ತಾರಲ್ಲ? ಎಲ್ಲೋ ಊಟಾಂತ ಹೊರಟುಬಿಟ್ಟವ್ರೆ'' ಅಂತ ಗೊಣಗಿಕೊಂಡು ಓಡಿದ. ಎರಡು ನಿಮಿಷದಲ್ಲೇ ಚಿತ್ತೈಸಿತು ಶಾನುಭೋಗರ ಸವಾರಿ! ಪಾಪ, ಸಾಹುಕಾರ್ ಸುಬ್ಬಣ್ಣನವರ ಮನೆ ಮದುವೆ ಊಟಕ್ಕೆ ಹೋಗಿದ್ದರು. ಅರೆಹೊಟ್ಟೆಯಾದರೂ ಊಟ ಮಾಡಿದ್ದರೋ ಇಲ್ಲವೋ ಕಾಣೆ. ಪಟೇಲ ಕರೆದ ಕೂಡಲೆ ಕೈಗೆ ನೀರು ಹಾಕಿದ್ದೇ ತಡ ಮೈಗೆ ಬನೀನು ತಗಲಿಸಿಕೊಂಡು, ಅದರ ಮೇಲೆ ಗುಂಡಿಯಿಲ್ಲದೆ ಕಾಗದ ಪತ್ರಗಳ ಭಾರದಿಂದ ಕೆಳಕ್ಕೆ ಜಗಿಯುತ್ತಿದ್ದ ಕೋಟೊಂದನ್ನು ಹಾಕಿಕೊಂಡು, ಕಂಕುಳಲ್ಲಿ ಕೆಲವು ಪುಸ್ತಕಗಳನ್ನು ಇರಿಸಿಕೊಂಡು, ಮೂಗಿನ ತುದಿಗೆ ದಾರಕಟ್ಟಿದ ಕನ್ನಡಕವನ್ನು ತೂಗಿಸಿ ಕೊಂಡು, ಬೊಜ್ಜು ದೇಹವನ್ನು ಹೊರಲಾರದೆ ಹೊತ್ತು ಸ್ವಲ್ಪ ಪ್ರಯಾಸದಿಂದಲೇ ಬಂದರು. ಅವರನ್ನು ನೋಡಿದ ಕೂಡಲೇ ರೆವಿನ್ಯೂ ಆಫೀಸರು ಸ್ವಲ್ಪವೂ ಕನಿಕರವಿಲ್ಲದೆ ಅವರ ಮೇಲೆ ಎಗರಿಬಿದ್ದರು–

೧೯೫೩ನೇ ಇಸವಿಯಲ್ಲಿ 'ಪ್ರಬುದ್ಧ ಕರ್ನಾಟಕ'ದ ಸಂಪುಟ - ೩೪, ಸಂಚಿಕೆ - ೪ರಲ್ಲಿ, ನ. ಸುಬ್ರಹ್ಮಣ್ಯಂ ಅವರು ಬರೆದಿರುವ 'ಬಸಪ್ಪನ ಜಮೀನು' ಕತೆ ಪ್ರಕಟವಾಗಿತ್ತು. ನ. ಸುಬ್ರಹ್ಮಣ್ಯಂ ಅವರ ಹೆಸರು ಕನ್ನಡ ಸಣ್ಣ ಕತೆಗಳ ಸಂದರ್ಭದಲ್ಲಿ ಎಲ್ಲೆಲ್ಲಿಯೂ ಉಲ್ಲೇಖವಾಗಿಲ್ಲ. ಇದುವರೆಗೆ ಕನ್ನಡ ಸಣ್ಣ ಕತೆಗಳ ಜಗತ್ತಿನಲ್ಲಿ ಯಾರ ಕಣ್ಣೂ ಈ ಕತೆಯ ಮೇಲೆ ಬಿದ್ದಿಲ್ಲ. ಸಾಮ್ರಾಜ್ಯಶಾಹಿ ಜಾಗತೀಕರಣದ ಲೂಟಿಗೆ ಹಾಗೂ ಬಹುರಾಷ್ಟ್ರೀಯ ಕಂಪನಿಗಳಿಗೆ ನಮ್ಮ ದೇಶದ ಹಾಗೂ ಕರ್ನಾಟಕದ ನೆಲ ಜಲವನ್ನು ಆಳುವ ವರ್ಗಗಳು ಮುಕ್ತವಾಗಿ ತೆರೆದಿಟ್ಟಿವೆ. ಪರಿಣಾಮವಾಗಿ ಭೂಮಿ, ಜಮೀನು, ಜಾತಿ, ಧರ್ಮ ಮುಂತಾದುವನ್ನು ಸಾಮ್ರಾಜ್ಯಶಾಹಿ ಲೂಟಿಗೆ ಪೂರಕವಾಗಿ ಮಾರ್ಪಡಿಸಲಾಗಿದೆ. ಇಂತಹ ಸಂದರ್ಭದಲ್ಲಿ ವರ್ತಮಾನದ ವಾಸ್ತವವನ್ನು ಮತ್ತೊಮ್ಮೆ ಈ ಕತೆ ನಮ್ಮ ಗಮನಕ್ಕೆ ತರುತ್ತದೆ. ಕನ್ನಡ ವಿಶ್ವವಿದ್ಯಾನಿಲಯದ ಡಾ॥ ಬಿ. ಎಂ. ಪುಟ್ಟಯ್ಯ, ಸಂಶೋಧನ ವಿದ್ಯಾರ್ಥಿಗಳಾದ ಸುಮತಿ ಹಾಗೂ ಬಿ. ಸುಧಾಕರ ದೇವಾಡಿಗ ಇವರು ಈ ಕತೆಯನ್ನು ಸಂಗ್ರಹಿಸಿಕೊಟ್ಟಿದ್ದಾರೆ.



# ಆಮೇಲೇನು ?

ಅವನು ಏನಾಗಿದ್ದ ?
ಹೆಂಡತಿಗೆ ಒಳ್ಳೆಯ ಗಂಡ, ಮಕ್ಕಳಿಗೆ ಪ್ರೀತಿಯ ಅಪ್ಪ
ಗೆಳೆಯರಿಗೆ ಆಪ್ತ ; ಊರಿಗೋ – ಮಹದುಪಕಾರಿ
ಯಶಸ್ಸಿನೊಂದೊಂದೆ ಮೆಟ್ಟಲನು ಏರುತ್ತಾ ಹೋದಂತೆ
ಎಲ್ಲರೂ ಹಾಡಿ ಹೊಗಳಿದರು
ಜಯಕಾರ ಹಾಕಿದರು
ಸನ್ಮಾನ, ಹಾರ ತುರಾಯಿಗಳ ಸಂಭ್ರಮದಲ್ಲೇ ಅವನ
ಮುಚ್ಚಿಬಿಟ್ಟರು.
ಕಡುವೈರಿಗಳೂ ಗುಟ್ಟಿನಲ್ಲವನ
ಮೆಚ್ಚಿಕೊಂಡರು.

ಆಮೇಲೇನಾಯ್ತು !
ಒಂದು ದಿನ ಅವನು
ಹಠಾತ್ತನೆ ಸತ್ತ.
ಜನಸಂದಣಿ ಸೇರಿ,
ಹೂವಿನ ಹಾರ ಹೊದೆಸಿ
ಶ್ರದ್ಧಾಂಜಲಿಯಿತ್ತು
ಹೊತ್ತು ,
ಕಾಷ್ಠಕ್ಕೇರಿಸಿ
ಸುಟ್ಟುಬಿಟ್ಟರು.

ಆಮೇಲೇನಾಯ್ತು !
ಆಗುವುದೇನು –
ಮೊದಲದಿನ ಅಳು ಸುರಿವ ಬಿರುಮಳೆ
ಮರುದಿನ ಮೌನದ ದಟ್ಟ ಮೋಡ
ಆಮೇಲಿನ ದಿನವೋ –
ಮೋಡವನು ಸರಿಸಿ ಹೊರಬಂದ
ಸೂರ್ಯ
ಕಿರಣಗಳ ಅಡಿಯಲ್ಲಿ –
ನಗು, ಹರಟೆ
ಜತೆಗೇ ಆಗೀಗ
ಇನ್ನೊಬ್ಬನ ಕುರಿತು ಅಂಥದೇ
ಮಾತು – ಕತೆ !

ಸುಬ್ರಾಯ ಚೊಕ್ಕಾಡಿ, ಚೊಕ್ಕಾಡಿ - ೫೭೪ ೨೧೨, ದಕ್ಷಿಣ ಕನ್ನಡ

''ಎಲ್ರಿ ಹೋಗಿದ್ರಿ ಇಷ್ಟು ಹೊತ್ತೂ? ಯಾರದ್ರಿ ಈ ಜಮೀನು ?''

''ಇದು ಬಸಪ್ಪಂದು ಮಹಾಸ್ವಾಮಿ'' ಅಂದರು ಶಾನುಭೋಗರು.

''ಯಾವ ಬಸಪ್ಪಂದ್ರೀ ? ಕರೀರಿ ಅವನ್ನ''

''ಶಾನುಭೋಗರು ಕಕ್ಕಾಬಿಕ್ಕಿಯಾಗಿ ಹಿಂತಿರುಗಿ ನೋಡಿದರು. ಪಟೇಲ ಅಲ್ಲಿ ಸೇರಿದ್ದ ಎಲ್ಲ ಹಳ್ಳಿಗರನ್ನೂ ವಿಚಾರಿಸಿ ನೋಡಿದ. ಯಾರನ್ನು ಕೇಳಿದರೂ 'ಬಸಪ್ಪ ಅನ್ನೋವ್ನು ನಮ್ಮಳ್ಳಿಲೇ ಇಲ್ವಲ್ಲ' ಅಂದುಬಿಟ್ಟರು. ದೂರದಲ್ಲಿ ಕೋಲೂರಿ ನಿಂತಿದ್ದ ಒಬ್ಬ ಮುದುಕ ಮಾತ್ರ, ''ಆ ಮೂಲೇ ಅಟ್ಟೀಲಿ ಬಸಣ್ಣ ಅಂತ ಒಬ್ಬ ಇದ್ದ. ಅವನ್ ತೀರೋಗಾಗ್ಲೇ ಅದಿನ್ನೈದಿಪ್ಪತ್ತೊರ್ಷಕ್ ಬಂತು. ಆದ್ರೆ... ಅವ್ನ ಜಮೀನ್ ಗಿಮೀನ್ ಮಾಡ್ಕೊಂಡಿದ್ದಂಗ್ ಕಾಣೆ. ಅತ್ವಾ ಇರಬವ್ದೋ ಏನೊ ನಂಗ್ ನೆಪ್ಪಿಲ್ಲ'' ಅಂದ. ರೆವಿನ್ಯೂ ಆಫೀಸರು ರೇಗಿ, ''ಏನ್ರಿ ಶಾನುಭೋಗರೆ, ಇದೇ ಏನ್ರಿ ನೀವು ಮಾಡ್ತಿರೋ ಕೆಲಸ ? ನೆಟ್ಟಗೆ ಜಮೀನು ಯಾವುದು, ಅದರ ವಾರಸುದಾರರು ಯಾರು ಅನ್ನೋದನ್ನೇ ತಿಳುಕೊಳ್ಳುವ ಯೋಗ್ಯತೆಯಿಲ್ಲ. ಏನ್ರಿ ನೀವು ಶಾನಭೋಗ್ಕೆ ಮಾಡೋದು ? ಶುದ್ಧ ನಾಲಾಯಕ್ಕು . ಬಿಚ್ಚಿ ನೋಡ್ರಿ ನಿಮ್ಮ ಕಂತೇನ'' ಅಂದರು. ಶಾನುಭೋಗರು ಗಡಗಡ ನಡಗ್ತಾ ತಾವು ತಂದಿದ್ದ ಕಡತವನ್ನೆಲ್ಲ ಬಿಚ್ಚಿ ಒದರಿ ಮೊದಲು ಆ ಜಮೀನಿನ ಸರ್ವೇ ನಂಬರನ್ನು ಕಂಡುಹಿಡಿದರು. ಆಮೇಲೆ ಹಳೆ ದಾಖಲೆಗಳನ್ನೆಲ್ಲಾ ಹುಡುಕಿ ಅದು ಬಸಪ್ಪ ಎಂಬವನಿಗೆ ಸೇರಿದ್ದೆಂತಲೂ, ಆದರೆ ಅದೇನು ಕಾರಣದಿಂದಲೋ ಆ ಜಮೀನಿಗೆ ಬಹಳ ದಿನಗಳಿಂದ ಕಂದಾಯವೇ ಪಾವತಿಯಾಗುತ್ತಿಲ್ಲವೆಂತಲೂ ಕಂಡುಹಿಡಿದರು. ಆದರೆ ಆ ಬಸಪ್ಪ ಯಾರೋ ಯಾರಿಗೂ ತಿಳಿಯದು. ರೆವಿನ್ಯೂ ಆಫೀಸರು ಸ್ವಲ್ಪ ಹೊತ್ತು ಚರ್ಚೆಮಾಡಿ ಪುಸ್ತಕವನ್ನೆಲ್ಲ ಇನ್ನೊಂದು ಸಾರಿ ತಿರುವಿ ಹಾಕಿ, ಆಮೇಲೆ ''ಕಡಿಮೆ ಬೆಲೆಗೆ ಒಪ್ಪಿಸಿಕೊಡುವುದರ ಬದಲು ಹರಾಜು ಹಾಕಿಸಿಬಿಡಿ. ಯಾರಿಗೆ ಅಭಿಲಾಷೆ ಇದೆಯೋ ಅವರು ಇದನ್ನು ತೆಗೆದುಕೊಳ್ಳಲಿ. ಅದರಿಂದ ಸರ್ಕಾರಕ್ಕೂ ಲಾಭವಾಗುತ್ತೆ. ಅಲ್ಲದೆ ಸಾಗುವಳಿ ಮಾಡುವವರೂ ಪ್ರೀತಿಯಿಂದ ಮಾಡುತ್ತಾರೆ. ನಾವೂ ಬೇಕಾದರೆ ಎಲ್ಲಾ ರೀತಿಯ ಸಹಾಯ ಮಾಡಿ ಹೊಸ ರೀತಿ ಯಂತ್ರಗಳಿಂದ ಈ ಬಂಜರು ಭೂಮಿಯನ್ನು ಹಸನು ಮಾಡಿಸಿ ಒಳ್ಳೆ ಬೆಳೆ ತರಿಸಬಹುದು'' ಅಂತ ಸಲಹೆ ಕೊಟ್ಟರು. ಆ ಗಳಿಗೆಯಲ್ಲೇ ಅದಕ್ಕೆ ಬೇಕಾದ ಏರ್ಪಾಡುಗಳನ್ನೆಲ್ಲಾ ಮಾಡುವಂತೆ ಶಾನುಭೋಗರಿಗೆ ಅಪ್ಪಣೆ ಕೊಡಿಸಿದರು.

''ಸರಿ, ಆಮೇಲೆ ಶಾನುಭೋಗರು ಹರಾಜಿಗೆ ಒಂದು ಸರಿಯಾದ ದಿನ ಗೊತ್ತು ಮಾಡಿ ರೆವಿನ್ಯೂ ಆಫೀಸರು ಒಪ್ಪಿ ತಾಲ್ಲೂಕು ಧಣಿಗಳಿಗೆ ತಿಳಿಸಿದರು. ಎಲ್ಲ ಸಿದ್ಧತೆಗಳೂ ಆಗತೊಡಗಿದವು. ಒಂದೆರಡು ದಿನ ಮುಂಚೆನಿಂದಲೇ ಸುತ್ತಮುತ್ತ ಇದ್ದ ಎಲ್ಲಾ ಹಳ್ಳಿಗಳಲ್ಲೂ ಡಂಗುರ ಹೊಡಿಸಿ ಹರಾಜಿನ ವಿಷಯವನ್ನೂ ಪ್ರಚಾರ ಮಾಡಿದರು. ಅಷ್ಟೇ ಅಲ್ಲದೆ ಪಟ್ಟಣವಾಸದವರಿಗೂ ತಿಳಿಯಲೆಂಬ ಉದ್ದೇಶದಿಂದ ಪತ್ರಿಕೆಗಳಲ್ಲೇ ಅಚ್ಚುಹಾಕಿಸಿದರು. ಹರಾಜಿನ ದಿನವೂ ಬಂತು. ಏನು, ಅಲ್ಲಿ ಒಂದು ದೊಡ್ಡ ಜಾತ್ರೇನೇ ನಡೆಯಿತು. ಆಗ ತಾನೆ ಆ ಹಳ್ಳಿಯ ಮೂಲಕ ಕಾವೇರಿ ನಾಲೆ ಬಂದು ಸುತ್ತಮುತ್ತ ಇದ್ದ ಹೊಲಗಳೆಲ್ಲ ಬತ್ತದ ಗದ್ದೆಗಳಾಗಿದ್ದುದರಿಂದ ಎಲ್ಲರಿಗೂ ಆ ಜಮೀನಿನ ಮೇಲೆ ಕಣ್ಣು ಬಿತ್ತು. ಒಂದೇ ತಾಕಿನಲ್ಲಿ ನೂರೈವತ್ತೆಕರೆ ಜಮೀನು ! ಯಾರು ತಾನೇ ಬಿಟ್ಟಾರು ? ಎಲ್ಲಾ ಮೂಲೆಗಳಿಂದಲೂ ಹಣವಿದ್ದ ಹಳ್ಳಿಯ ಜನ ತಾವೂ ಒಂದು ಕೈ ನೋಡೋಣವೆಂದು ಅಲ್ಲಿಗೆ ಬಂದು ಸೇರಿದರು. ಪಟ್ಟಣದಿಂದ ಸಾಹುಕಾರರನೇಕ ಮಂದಿ ಮೂರೂವರೆ ರಸ್ತೆಯಲ್ಲೇ ಹೇಗೋ ತಮ್ಮ ಕಾರನ್ನು ನುಸುಳಿಸಿಕೊಂಡು ಬಂದು ನೆರೆದರು. ಕೇವಲ ಕುತೂಹಲದಿಂದ ನೋಡಬೇಕೆಂದು ಬಂದಿದ್ದವರಂತೂ ಸಾವಿರಾರು ಜನ. ಎಲ್ಲ ಆ ಜಮೀನಿನ ತುಂಬ ದಿಕ್ಕಾಪಾಲಾಗಿ ತುಂಬಿಕೊಂಡಿದ್ದಾರೆ. ಮಧ್ಯೆ ಒಂದು ವೇದಿಕೆಯ ಮೇಲೆ ಅಮಲ್ದಾರರು, ರೆವಿನ್ಯೂ ಆಫೀಸರು, ಸಂಸ್ಥೆಯ ಅಧಿಕಾರಿಗಳು ಕುರ್ಚಿಗಳಲ್ಲಿ ಕೂತಿದ್ದಾರೆ. ಪೊಲೀಸಿನವರು ಕೈಲಿ ಲಾಠಿ ಹಿಡಿದು ಜನ ಗಲಭೆ ಎಬ್ಬಿಸದಂತೆ ನೋಡಿಕೋತಿದಾರೆ. ಆಗ ಬರಬಹುದಾದ ಜನವೆಲ್ಲ ಬಂದಿರಬಹುದೆಂದು ತಿಳಿದ ಮೇಲೆ ಅಮಲ್ದಾರರು ಗಡಿಯಾರ ನೋಡಿಕೊಂಡು ಪಟೇಲನಿಗೆ ಅಪ್ಪಣೆ ಕೊಟ್ಟರು. ಪಟೇಲ ವೇದಿಕೆಯ ತುದಿಯಲ್ಲಿ ನಿಂತು ಜನಗಳ ಗಮನ ಸೆಳೆದು ಗಟ್ಟಿಯಾಗಿ, ''ಈ ನೂರೈವತ್ತೆಕರೆ ಜಮೀನಿಗೆ ಸರ್ಕಾರಿ ಸವಾಲ್ ಐನೂರು ರೂಪಾಯಿ'' ಎಂದು ಹರಾಜು ಕೂಗುವುದಕ್ಕೆ ಶುರು ಮಾಡಿದ. ಜನಗಳ ಮಧ್ಯದಿಂದ ಒಬ್ಬ ಆರುನೂರಕ್ಕೆ ಕೇಳಿದ. ಇನ್ನೊಬ್ಬ ಏಳುನೂರು, ಇನ್ನೊಬ್ಬ ಎಂಟುನೂರು. ಮತ್ತೊಬ್ಬ ಸಾವಿರ. ಹೀಗೇ ಒಬ್ಬರೊಬ್ಬರಿಗೆ ಪೈಪೋಟಿ ಹತ್ತಿ ಮೊದಲು ಹದಿನೈದು ಸಾವಿರಕ್ಕೇರಿತು. ಆಮೇಲೆ ಅನೇಕರಿಗೆ ಸುಸ್ತಾಗಿ ಸುಮ್ಮನೆ ಬೇರೆಯವರ ಧಾರಣೆಯನ್ನೇ ಕೇಳ್ತಾ ನಿಂತರು. ಇಬ್ಬರಿಗೆ

ಮಾತ್ರ ಒಳ್ಳೇ ಜೊತೆ ಬಿತ್ತು. ಇಬ್ಬರೂ ಲಕ್ಷಾಧೀಶ್ವರರೇ. ಒಬ್ಬ ಬಟ್ಟೆ ಕಾರ್ಖಾನೆ ಮಾಲಿಕ. ಇನ್ನೊಬ್ಬ ದಳ್ಳಾಳಿ ವ್ಯಾಪಾರದವನು. ಅವರಿಬ್ಬರೂ ಸಾವಿರ ಸಾವಿರವಾಗಿ ಧಾರಣೆ ಏರಿಸುತ್ತಿದ್ದುದನ್ನು ನೋಡಿದರೆ ಎಷ್ಟೇ ಹಣ ಖರ್ಚಾದರೂ ಒಬ್ಬರು ಇನ್ನೊಬ್ಬರಿಗೆ ಆ ಜಮೀನನ್ನು ಬಿಟ್ಟುಕೊಡುವಂತೆ ತೋರಲಿಲ್ಲ ಹಾಗೂ ಹೀಗೂ ಧಾರಣೆ ಇಪ್ಪತ್ತೈದು ಸಾವಿರಕ್ಕೇರಿತು. ಅಲ್ಲಿಂದಾಚೆಗೆ ದಳ್ಳಾಳಿ ವ್ಯಾಪಾರದವನು ಯಾಕೋ ಸಾವಿರದ ಮಾತು ಬಿಟ್ಟು ನೂರಕ್ಕಿಳಿದ. ಕಾರ್ಖಾನೆ ಮಾಲಿಕ ಸ್ವಲ್ಪವೂ ಜಗ್ಗಲಿಲ್ಲ. ಇನ್ನೊಂದು ಸಾವಿರವನ್ನು ಸೇರಿಸಿಯೇ ಬಿಟ್ಟ! ದಳ್ಳಾಳಿ ಮತ್ತೆ ಉಸಿರೆತ್ತಲಿಲ್ಲ. ನೆರೆದಿದ್ದ ಜನವೆಲ್ಲ 'ಹೊ' ಎಂದು ಕೂಗಿ ಚಪ್ಪಾಳೆ ಹೊಡೆದರು. ವೇದಿಕೆಯ ಮೇಲಿದ್ದವರೆಲ್ಲ ಉಲ್ಲಾಸದಿಂದ ಹಿಗ್ಗಿಹೋದರು. ಪಟೇಲನೂ ಉತ್ಸಾಹದಿಂದ, ''ಇಪ್ಪತ್ತಾರು ಸಾವಿರ ಒಂದು ಸಾರಿ... ಇಪ್ಪತ್ತಾರು ಸಾವಿರ ಎರಡು ಸಾರಿ...'' ಅಂದ. ಇನ್ನೂ 'ಮೂರು ಸಾರಿ' ಅಂದಿರಲಿಲ್ಲ. ಅಷ್ಟರಲ್ಲೇ ಎಲ್ಲಿಂದಲೋ ಬಂತು ನೋಡಿ ಒಂದು ಕಾರು, ವೇಗವಾಗಿ ಆರ್ಭಟ ಮಾಡಿಕೊಂಡು. ಎಲ್ಲರೂ ಕುತೂಹಲದಿಂದ ಆ ಕಡೆ ತಿರುಗಿದರು. ಕತ್ತಿನಿಂದ ಹಿಡಿದು ಕಾಲ ತುದಿಯವರೆಗೆ ಬಿಳಿ ನಿಲುವಂಗಿ ಹಾಕಿದ್ದ ಒಬ್ಬ ಎತ್ತರವಾದ ವ್ಯಕ್ತಿ ಆ ಕಾರಿನಿಂದ ಹೊರಕ್ಕೆ ಧುಮುಕಿ, ಶಿವಪೂಜೆಯಲ್ಲಿ ಕರಡಿ ಬಿಟ್ಟ ಹಾಗೆ ಕಂಡಿತು. ಆತುರಾತುರವಾಗಿ ಅವನು ಬಂದದ್ದು ನೋಡಿ ಜಮೀನಿಗೆ ಇನ್ನೂ ಬೆಲೆ ಏರಬಹುದೆಂದು ನಿರೀಕ್ಷಿಸಿ ಜನರು ಅವನನ್ನೇ ನೋಡುತ್ತಿದ್ದರು. ಅಮಲ್ದಾರರಿಗೂ ಅದು ಸ್ವಲ್ಪ ತಮಾಷೆಯಾಗಿ ಕಂಡಿತು. ಪಟೇಲನಿಗೆ ನಿಧಾನಿಸುವಂತೆ ಸಂಜ್ಞೆ ಮಾಡಿದರು. ಅಷ್ಟು ಹೊತ್ತಿಗೆ ಆ ವ್ಯಕ್ತಿ ಜನಗಳನ್ನು ಆಚೆ ಈಚೆ ತಳ್ಳಿ ದಾರಿಮಾಡಿಕೊಂಡು ವೇದಿಕೆ ಹತ್ತಿ ಅಮಲ್ದಾರರ ಹತ್ತಿರ ಗಾಬರಿ ಗಾಬರಿಯಾಗಿ 'ದಯವಿಟ್ಟು ಹರಾಜು ನಿಲ್ಲಿಸಬೇಕು ಸ್ವಾಮಿ' ಅಂದ. ಅಮಲ್ದಾರರು ಗಾಬರಿಯಾಗಿ ''ಯಾಕೆ ?'' ಅಂದರು.

ಅದಕ್ಕೆ ಪಾದ್ರಿ, ''ಈ ಜಮೀನು ನಮ್ಮದು ಸ್ವಾಮಿ, ತಾವು ಹರಾಜಿನ ವಿಷಯ ನಮ್ಮ ಗಮನಕ್ಕೆ ತರದೆ ಹೀಗೆ ಮಾಡುತ್ತಿದ್ದೀರಿ'' ಅಂದ.

ಅಮಲ್ದಾರರು ಆಶ್ಚರ್ಯದಿಂದ, ''ಏನ್ರಿ ಹಾಗಂದ್ರೆ ? ಯಾರ್‍ರಿ ನೀವು ? ಏನ್ರಿ ನಿಮ್ಮ ಹೆಸರು ?'' ಅಂದರು.

''ನನ್ನ ಹೆಸರು ಫಾದರ್ ರಿಚರ್ಡ್'' ಅಂದ.

''ಮತ್ತೆ ನಿಮಗೆ ಹೇಗ್ರಿ ಸೇರುತ್ತೆ ಈ ಜಮೀನು ಎಂದು ಅಮಲ್ದಾರರು ಹತ್ತಿರವೇ ನಿಂತಿದ್ದ ಶಾನುಭೋಗರನ್ನು ನೋಡಿ, ''ಏನ್ರೀ ಶಾನುಭೋಗರೆ, ಸರಿಯಾಗಿ ನೋಡಿದ್ದೀರೇನ್ರಿ ಈ ಜಮೀನು ಬಸಪ್ಪಂದು ಅಂತ ?'' ಅಂತ ಕೇಳಿದರು.

ಶಾನುಭೋಗರು, ''ಹೌದು ಮಹಾಸ್ವಾಮಿ, ಅದಕ್ಕೆ ಬೇಕಾದಷ್ಟು ದಾಖಲೆ ಇದೆ'' ಅಂದರು.

ಅದಕ್ಕೆ ಪಾದ್ರಿ, ''ಇಲ್ಲ ಸ್ವಾಮಿ, ಈ ಜಮೀನು ನಮ್ಮ ಯೇಸುಸ್ವಾಮಿಗೆ ಸೇರಿದ್ದು'' ಅಂದ.

''ಅದಕ್ಕೆ ದಾಖಲೆ ಎಲ್ರಿ ?'' ಎಂತ ಅಮಲ್ದಾರರು ಕೇಳಿದರು.

''ಪಾದ್ರಿ ಹಿಂದೆ ಮುಂದೆ ನೋಡಿ, ಅಲ್ಲೇ ಗುಡ್ಡದ ಮೇಲೆ ಮುರಿದು ಬಿದ್ದಿದ್ದ ಮನೆಯನ್ನು ತೋರಿಸುತ್ತಾ, ''ನೋಡಿ ಸ್ವಾಮಿ, ಅಲ್ಲಿದ್ದ ನಮ್ಮ ಯೇಸುವಿನ ಮಂದಿರಕ್ಕೆ ಬೆಂಕಿ ಬಿದ್ದಾಗಲೇ ಈ ಜಮೀನಿಗೆ ಸಂಬಂಧಿಸಿದ ಕಾಗದ ಪತ್ರಗಳೆಲ್ಲಾ ಸುಟ್ಟು ಬೂದಿ ಯಾಯಿತು. ಆಮೇಲೆ ಉಳಿದ ಚರಸ್ಥಿರ ಆಸ್ತಿಯನ್ನೆಲ್ಲ ಬೆಂಗಳೂರಿನ ಚರ್ಚಿಗೆ ಸೇರಿಸಿ ಕೊಂಡು ನಾವೇ ನೋಡಿಕೊಳ್ಳುತ್ತಿದ್ದೇವೆ. ನಮ್ಮಲ್ಲಿ ಬೇರೆ ಯಾವ ದಾಖಲೆಯೂ ಇಲ್ಲ. ಸರ್ಕಾರದಲ್ಲೇ ಇರುವ ಹಳೇ ರಿಕಾರ್ಡುಗಳನ್ನು ತೆಗೆಸಿ ನೋಡಬಹುದು. ಹರಾಜಿನ ಸುದ್ದಿಯನ್ನು ಪೇಪರಿನಲ್ಲಿ ನೋಡಿದ ಕೂಡಲೆ ನಮ್ಮ ಗುರುಗಳು ನನ್ನನ್ನು ಕಳಿಸಿಕೊಟ್ಟಿದ್ದಾರೆ'' ಅಂದ.

''ಅಷ್ಟು ಹೊತ್ತಿಗೆ ಶಾನುಭೋಗರು ತಾವು ತಂದಿದ್ದ ಕಾಗದ ಪತ್ರಗಳನ್ನೆಲ್ಲಾ ಅಮಲ್ದಾರರ ಮುಂದಿಟ್ಟರು. ಅಮಲ್ದಾರರು ಓದಿ ನೋಡಿದರು. ಬಗೆಹರಿಯಲಿಲ್ಲ. ಪಾದ್ರಿಯನ್ನು ಶುದ್ಧ ಮೋಸಗಾರನಿರಬೇಕೆಂದು ಬೈದರು. ಆದರೆ ಪಾದ್ರಿ ಮಾತ್ರ ನಮ್ರನಾಗಿ, ''ನಾವು ಯೇಸುವಿನ ಭಕ್ತರು. ಸುಳ್ಳು ಹೇಳುವವರಲ್ಲ. ತಾವು ಸರಿಯಾಗಿ ಪರಿಶೀಲಿಸಿ ನೋಡಬೇಕು. ಇಲ್ಲದಿದ್ದರೆ ನಮ್ಮ ದೇವರಿಗೆ ಅನ್ಯಾಯ ಮಾಡಿ ದಂತಾಗುತ್ತೆ'' ಅಂದ. ಅವನ ಮಾತನ್ನು ಸುಲಭವಾಗಿ ತೆಗೆದುಹಾಕುವಂತಿರಲಿಲ್ಲ. ಅಮಲ್ದಾರರಿಗೆ ಮಾತ್ರ ಏನುಮಾಡುವುದಕ್ಕೂ ತೋಚಲಿಲ್ಲ. ಸ್ವಲ್ಪ ಹೊತ್ತು ಆಲೋಚನೆ ಮಾಡಿದರು. ಆಮೇಲೆ ಶಾನುಭೋಗರ ಕಡೆ ತಿರುಗಿ, ''ನೀವು ಈಗ ತೋರಿಸಿದ ದಾಖಲೆ ಎಷ್ಟು ವರ್ಷದ್ರಿ ?'' ಅಂತ ಕೇಳಿದರು.

''ಶಾನುಭೋಗರು, ''ಹೋದ ವರ್ಷದ್ದು ಮತ್ತು ಈ ವರ್ಷದ್ದು ಮಹಾಸ್ವಾಮಿ'' ಅಂದರು.

''ಬಾಕೀದು ?'' ಎಂದು ಕೇಳಿದರು.

''ಬಾಕೀದೆಲ್ಲ ತಮ್ಮ ಆಫೀಸಿನಲ್ಲೇ ಇದೆಯಲ್ಲ ಮಹಾಸ್ವಾಮಿ'' ಅಂದರು.

''ಸರಿ'' ಅನ್ನುತ್ತಾ ಅಮಲ್ದಾರರು ಮೇಲೆದ್ದು, ತಮಾಷೆ ನೋಡುತ್ತಾ ಏನಿತ್ಯರ್ಥ ಮಾಡುವರೋ ಎಂದು ಎದುರುನೋಡುತ್ತಿದ್ದ ಜನಗಳನ್ನು ನೋಡಿ, ''ಈ ದಿನ ಹರಾಜನ್ನು ಇಲ್ಲಿಗೇ ನಿಲ್ಲಿಸಿದೆ. ಜಮೀನಿನ ಮಾಲೀಕರು ಯಾರೆಂದು ಖಚಿತವಾಗಿ ತಿಳಿದ ಮೇಲೆ, ಬೇರೆ ಯಾವ ಅಡಚಣೆಯೂ ಇಲ್ಲದಿದ್ದಲ್ಲಿ ಈ ದಿನ ಎಲ್ಲರಿಗಿಂತ ಹೆಚ್ಚು ಬೆಲೆಗೆ ಕೇಳಿದವರಿಗೆ ಈ ಜಮೀನನ್ನು ಕೊಡಲಾಗುತ್ತೆ. ಅವರು ಹಣದ ಸಮೇತ ನಾಳೆ ಮಧ್ಯಾಹ್ನ ಆಫೀಸಿನಲ್ಲಿ ಬಂದು ನನ್ನನ್ನು ಕಾಣಬಹುದು'' ಅಂದರು. ಜನರ ಗುಂಪೆಲ್ಲ ಕೋಲಾಹಲ ಮಾಡಿಕೊಂಡು ಹೊರಟುಹೋಯಿತು. ಎಲ್ಲಾ ಸಂತೋಷದಿಂದ ಹೋದರೂ ಮಿಲ್ ಮಾಲಿಕನೊಬ್ಬ ಸ್ವಲ್ಪ ಅಸಮಾಧಾನದಿಂದಲೇ ಹೋದ.

ಅದುವರೆಗೆ ಕಂಬ ಒರಗಿಕೊಂಡು, ಕಣ್ಣು ಮಿಟುಕಿಸದೆ ಶಂಕರಯ್ಯನವರ ಮುಖವನ್ನೇ ನೋಡುತ್ತಾ, ಬಾಯಿ ಬಿಟ್ಟುಕೊಂಡು ಕತೆ ಕೇಳುತ್ತಿದ್ದ ಶಾನುಭೋಗರು, ಬೆನ್ನುಮೂಳೆ ನೆಟ್ಟಗೆ ಮಾಡಿಕೊಂಡು ಏನೋ ಸಂದೇಹ ನಿವಾರಣೆ ಮಾಡಿಕೊಳ್ಳುವ ವರಂತೆ, ''ಅದ್ಸರಿ, ಆ ಫಾದರ್ ರಿಚರ್ಡ್ ಚರ್ಚು ಸುಟ್ಟುಹೋಯಿತು ಅಂದ್ರಲ್ಲ, ಅದೇನು ಕಾರಣವೋ ?'' ಅಂತ ಕೇಳಿದರು.

ಶಂಕರಯ್ಯನವರು ಮುಂದುವರಿಸಿದರು – ''ಅದೇ! ಅದೊಂದು ದೊಡ್ಡ ಕತೆ. ಇಂಗ್ಲಿಷರು ನಮ್ಮ ದೇಶಕ್ಕೆ ಬಂದಾಗ ಅವರ ಜೊತೆಯಲ್ಲೆ ಅವರ ಮತ ಹರಡೋದಿಕ್ಕೆ ಕೆಲವು ಜನ ಪಾದ್ರಿಗಳು ಬಂದ್ರಲ್ಲಾ, ಅವರು ಎಲ್ಲೆಲ್ಲೂ ಚರ್ಚುಗಳನ್ನು ಸ್ಥಾಪಿಸಿ ಸಿಕ್ಕಿ ಸಿಕ್ಕಿದವರನ್ನೆಲ್ಲ ತಮ್ಮ ಮತಗಳಿಗೆ ಸೇರಿಸಿಕೊಳ್ಳುತ್ತಿದ್ದ ವಿಷಯ ನಿಮಗೆ ಗೊತ್ತಿದೆಯಲ್ಲ! ಅವರು ನಮ್ಮ ಹಳ್ಳಿಗೆ ಬಂದು ಆ ಗುಡ್ಡದ ಮೇಲೆ ಒಂದು ಚರ್ಚು ಕಟ್ಟಿಸಿದರು. ಆಗೇನು, ಇಂಗ್ಲಿಷರದೇ ರಾಜ್ಯ, ಅವರಾಡಿದ್ದೇ ಆಟ. ಅವರನ್ನು ತಡೆಯೊದಕ್ಕೆ ಯಾರಿದ್ರು ? ಅಂತ ಚರ್ಚು ಕಟ್ಟಿಸಿದ ಮೇಲೆ ಅಲ್ಲಿ ಮೂರು ಜನ ಪಾದ್ರಿಗಳು, ಅವರಿಗೊಬ್ಬ ಯಜಮಾನ ನಾಕು ಜನವೂ ವಾಸ ಮಾಡಿಕೊಂಡಿದ್ದರು. ತಿನ್ನೋದಕ್ಕೂ ಕುಡಿಯೋದಕ್ಕೂ ಅವರಿಗೆ ಯಥೇಚ್ಛವಾಗಿತ್ತು. ಅವರು ಪ್ರತಿನಿತ್ಯ ಸಾಯಂಕಾಲದ ಹೊತ್ತು ಸಂಜೆಮಾಳದಲ್ಲಿ ನಿಂತು ಯೇಸುಕ್ರಿಸ್ತನ ಮೇಲೆ ಕಟ್ಟಿದ ಹಾಡುಗಳನ್ನೆಲ್ಲಾ ಹಾಡುತ್ತಿದ್ದರು. ಕೇಳುವುದಕ್ಕೆ ಸುತ್ತ ಜನ ಬಂದು ಸೇರಿದರೆಂದರೆ ಭಾಷಣಕ್ಕಾರಂಭಿಸುತ್ತಿದ್ದರು. ಮೊದಮೊದಲು ಜನಗಳಿಗೆ ಬಲು ತಮಾಷೆಯಾಗಿ ಕಂಡಿತು. ಎಲ್ಲರೂ ಹೋಗಿ ಮುತ್ತಿಕೊಳ್ಳುತ್ತಿದ್ದರು. ಒಂದು ದಿನ ಆ ಪಾದ್ರಿಗಳು ತಮ್ಮ ಯೇಸುಕ್ರಿಸ್ತನ ಮಹಿಮೆಯನ್ನು ಹೊಗಳುತ್ತಾ ಬೈಬಲಿನಲ್ಲಿ ಬರುವ ಸ್ವಾರಸ್ಯವಾದ ಕತೆಗಳನ್ನು ಹೇಳುತ್ತಾ ತಮ್ಮ ಧರ್ಮವೇ ಶ್ರೇಷ್ಠವಾದುದು ಎಂದೆಲ್ಲ ವಿವರಿಸಿ, ಆಮೇಲೆ ಜನಗಳಿಗೆ, ''ನೋಡಿ, ನೀವು ಮೋಸಹೋಗುತ್ತಿದೀರಿ. ಕಲ್ಲು ಮಣ್ಣುಗಳನ್ನು ದೇವರೆಂದು ಪೂಜಿಸುತ್ತೀರಿ. ಗಿಡಗಳನ್ನು ಪ್ರಾಣಿಗಳನ್ನು ದೇವರೆಂದು ಪೂಜಿಸುತ್ತೀರಿ. ನಿಮಗೆ ತಿಳುವಳಿಕೆಯಿಲ್ಲ. ಪಾಪ, ತಿಳಿಯದೆ ನೀವು ತಪ್ಪು ದಾರಿಯಲ್ಲಿ ಹೋಗುತ್ತಿದ್ದೀರಿ. ಭಗವಂತನ ಪುತ್ರನಾದ ನಮ್ಮ ಯೇಸುವನ್ನು ನೋಡಿ! ಅವನು ಏತಕ್ಕೆ ಹುಟ್ಟಿದ ? ನಿಮ್ಮಂಥವರ ಉದ್ಧಾರಕ್ಕಾಗಿಯೇ! ಅಷ್ಟೆಲ್ಲ ಏತಕ್ಕೆ ಕಷ್ಟಪಟ್ಟ ? ನಿಮ್ಮಂಥವರ ಉದ್ಧಾರಕ್ಕಾಗಿಯೇ! ತನ್ನನ್ನು ಶಿಲುಬೆಗೆ ಏರಿಸಿದರೂ ಯಾರಿಗಾಗಿ ಆ ಹಿಂಸೆಯನ್ನೆಲ್ಲ ಸಹಿಸಿಕೊಂಡ ? ನಿಮ್ಮಂಥವರಿಗಾಗಿಯೇ! ಆದ್ದರಿಂದ ಅವನು ತೋರಿಸಿದ ಮಾರ್ಗದಲ್ಲಿ ನಡೆಯಿರಿ, ನಿಮಗೆ ಒಳ್ಳೆಯದಾಗುತ್ತದೆ. ಇಲ್ಲದಿದ್ದರೆ ನೀವು ನಾಶವಾಗುತ್ತೀರಿ. ನರಕದಲ್ಲಿ ಬೀಳುತ್ತೀರಿ'' ಅಂದರು. ಓ ಎಂದರೆ ಠೋ ಗೊತ್ತಿಲ್ಲದ ನಮ್ಮ ಜನಗಳು ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡು ಸುಮ್ಮನಿದ್ದರು.

''ಮಾರನೇ ದಿನ ಬೆಳಿಗ್ಗೆ ಮಾರಿಗುಡಿ ಚಾವಡಿ ಮುಂದೆ ಹಳ್ಳಿ ಜನಗಳು ಕೆಲವರು ಸೇರಿ ಬಿಸಿಲು ಕಾಯಿಸ್ತಾ ಹಿಂದಿನ ದಿನದ ಮಾತುಗಳನ್ನೇ ಆಡ್ತಾ ನಿಂತಿದ್ದರು. ಅಷ್ಟು ಹೊತ್ತಿಗೆ ಮಠದ ಅಯ್ಗಳು ಆ ಕಡೆ ಬಂದರು. ಅವರಿಗೆ ತಾವು ಕೇಳಿದ ಭಾಷಣವನ್ನು ಚಾಚೂ ತಪ್ಪದೆ ವರದಿ ಒಪ್ಪಿಸಿದರು. ಪಾದ್ರಿಗಳಾಡಿದ ಮಾತೆಲ್ಲ ಕೇಳಿ ಅಯ್ಗಳಿಗೆ ಮೈ ಉರಿದುಹೋಯಿತು! ''ಆಹಾ, ಈ ಮ್ಲೇಚ್ಛರು ಇಷ್ಟೆಲ್ಲ ಮಾಡಿದರೋ ? ನಮ್ಮ ದೇವರುಗಳನ್ನು ಬೈಯ್ಯುವುದಕ್ಕೆ ಬಂದರೋ ಚಂಡಾಲರು ? ನೋಡಿ, ಲೋಕ ಕಲ್ಯಾಣಕ್ಕಾಗಿ ಬಂಡೆಯಿಂದ ತಾನಾಗಿಯೇ ಉದ್ಭವಿಸುವ ಈ ನಮ್ಮ ಗ್ರಾಮ ದೇವತೆಯನ್ನೇ ಅವರು ಕಲ್ಲು ಎಂದು ಕರೀತಿರೋದು. ಸಾಕ್ಷಾತ್ ಸುಬ್ರಹ್ಮಣ್ಯೇಶ್ವರನ ವಾಸಸ್ಥಾನವಾದ ಹುತ್ತವನ್ನು ಪೂಜೆ ಮಾಡಿದರೆ ಮಣ್ಣನ್ನು ಪೂಜಿಸ್ತೀರಿ ಅಂತಿದಾರೆ.

ನಮಗೆ ಅಮೃತ ಕೊಡೋ ಗೋಮಾತೆಯನ್ನು ಪೂಜಿಸಿದರೆ ಪ್ರಾಣಿಗಳನ್ನು ಪೂಜಿಸ್ತೀರಿ ಅಂತಾರೆ. ಮೂಲತೋ ಬ್ರಹ್ಮರೂಪಾಯ। ಮಧ್ಯತೋ ವಿಷ್ಣು ರೂಪಿಣೇ। ಅಗ್ರತಃ ಶಿವರೂಪಾಯ। ಅಂತ ಬ್ರಹ್ಮ ವಿಷ್ಣು ಮಹೇಶ್ವರರೂ ದೇವತೆಗಳೂ ನೆಲೆಸಿರುವ ವೃಕ್ಷರಾಜನಾದ ಅರಳಿ ಮರವನ್ನು ಪೂಜೆ ಮಾಡಿದರೆ ಗಿಡಗಳನ್ನು ಪೂಜೆ ಮಾಡ್ತೀರಿ ಅಂತಾರೆ. ಪಾಷಂಡಿಗಳು, ಶುದ್ಧ ಅವಿವೇಕಿಗಳು! ಅವರ ಮಾತುಗಳನ್ನು ಕೇಳಿಗೀಳೀರಿ. ಅವರ ಮುಖವನ್ನೂ ಕೂಡ ನೋಡಬಾರದು ನಾವು. ಜಾತಿಯಲ್ಲಿ ನಮ್ಮ ಹೊಲೆಯರಿಗಿಂತ ಕಡೆ. ಅವರನ್ನು ನೋಡಿದರೆ ಸ್ನಾನ ಮಾಡಬೇಕು. ಇನ್ನು ಅವರ ಮಾತುಗಳನ್ನೇನಾದರೂ ಕೇಳಿದರೆ ನೀವು ಅನ್ಯಾಯವಾಗಿ ಹಾಳಾಗ್ತೀರಿ. ಎಚ್ಚರಿಕೆ ಕೊಟ್ಟಿದ್ದೇನೆ'' ಅಂದರು. ನಮ್ಮ ಹಳ್ಳಿ ಜನಗಳ ವಿಷಯ ನಿಮಗೆ ತಿಳಿದೇ ಇದೆಯಲ್ಲ. ಎತ್ತು ಈಯಿತು ಅಂದರೆ ಕೊಟ್ಟಿಗೇಲಿ ಕಟ್ಟು ಅನ್ನುವ ಜನ! ಅಯ್ಯಗಳು ಅಷ್ಟು ಹೇಳಿದ್ದೇ ಸಾಕು. ತುರುಕ ಮೆಣಸಿನಕಾಯಿ ಕಡಿದ ಹಾಗಾಯಿತು ಅವರಿಗೆ! 'ಈ ಬಡ್ಡಿ ಮಕ್ಕಳ್ನ ಸುಮ್ಕೆ ಬಿಡ್ಬಾರ್ದು' ಅಂದುಕೊಂಡರು.

''ಅದಾದ ಒಂದೆರಡು ದಿನಕ್ಕೇ ಪಾದ್ರಿಗಳು ಹಳ್ಳಿಯ ಕೆಲವು ಮಾದಿಗರನ್ನೂ ಹೊಲೆಯರನ್ನೂ ಅನ್ನ ಬಟ್ಟೆಯ ಆಸೆ ತೋರಿಸಿ, ಚರ್ಚಿಗೆಳೆದುಕೊಂಡು ಹೋಗಿ ಏಸುವಿನ ಶಿಲುಬೆಯಡಿ ನಿಲ್ಲಿಸಿ, ಅವರ ಕೈಲಿ ಬೈಬಲ್ ಕೊಟ್ಟು, ತಮ್ಮ ಒಡೆಯನಿಂದ ಆಶೀರ್ವಾದ ಮಾಡಿಸಿ ಅವರಿಗೆ ಸ್ವರ್ಗಕ್ಕೆ ನೇರವಾಗಿ ಟಿಕೆಟ್ ಕೊಟ್ಟರು! ಈ ವಿಷಯ ತಿಳಿದ ಮೇಲಂತೂ ಹಳ್ಳಿಯ ಜನಗಳಿಗೆ ರೋಷ ಮಿತಿಮೀರಿತು. ಎಲ್ಲರೂ ಒಂದೊಂದು ದೊಣ್ಣೆ ತೆಗೆದುಕೊಂಡು ಚರ್ಚಿನ ಕಡೆ ಹೊರಟುಬಿಟ್ಟರು. ಆದರೆ ಅಯ್ಯಗಳು ದಾರಿಯಲ್ಲಿ ಸಿಕ್ಕಿ, ''ಆ ಪಾದ್ರಿಗಳ ತಂಟೆಗೆ ಹೋಗಬೇಡಿ. ಅವರೆಲ್ಲ ಇಂಗ್ಲಿಷರ ಕಡೆಯವರು. ಅವರನ್ನೇನಾದರೂ ಮುಟ್ಟಿದರೆ ನಮ್ಮನ್ನು ಸುಮ್ಮನೆ ಬಿಟ್ಟಾರೆ? ಬೇಡ ಬನ್ನಿ'' ಎಂದು ಸಮಾಧಾನ ಮಾಡಿ ಹಿಂದಕ್ಕೆ ಕರೆತಂದರು. ಆದರೂ ಸಮಯ ಕಾದಿದ್ದು ಅವರಿಗೆ ತಕ್ಕ ಶಿಕ್ಷೆ ಮಾಡಬೇಕೆಂದು ಹಳ್ಳಿಯವರೆಲ್ಲ ನಿರ್ಧಾರ ಮಾಡಿಕೊಂಡರು.

''ಸ್ವಲ್ಪ ದಿನಗಳಲ್ಲೇ ಆ ವರ್ಷದ ಮಾರಮ್ಮನ ಜಾತ್ರೆ ಬಂತು. ಸುತ್ತಮುತ್ತ ಇದ್ದ ಹಳ್ಳಿಗಳಿಂದ ಸಾವಿರಾರು ಜನ ಬಂದು ಸೇರಿದ್ದರು. ಆಗ ಪಾದ್ರಿಗಳು ಮತ್ತಷ್ಟು ಜನ ತಮ್ಮ ಬಲೆಗೆ ಬೀಳ್ತಾರೇನೋ ಅಂತ ಬೈಬಲ್ಲು ಕಂಕುಳಲ್ಲಿಟ್ಟುಕೊಂಡು ಮಾರಿಗುಡಿ ಮುಂದೆ ಬಂದು ನಿಂತರು. ತಮ್ಮ ದೇವರ ಪೂಜೆ ಆಗುವಾಗ ಆ ಮ್ಲೇಚ್ಛರು ಎದುರಿಗೆ ಬಂದು ನಿಂತದ್ದು ಹಳ್ಳಿಯ ಜನಗಳಿಗೆ ಸರಿಯಾಗಿ ಕಾಣಲಿಲ್ಲ. ಆದರೂ ತಮ್ಮ ಗ್ರಾಮ ದೇವತೆಯ ಮಹಿಮೆಯನ್ನು ನೋಡಿ ಅವರು ನಾಚಿಕೊಳ್ಳಲಿ ಎಂದು ಸುಮ್ಮನಾದರು. ಆದರೆ ಯಾವಾಗ ಅವರು ತಮ್ಮ ಪುಸ್ತಕ ಬಿಚ್ಚಿ, ''ಯೇಸುಕ್ರಿಸ್ತನ ಭಜಿಸೋ...'' ಅಂತ ರಾಗ ತೆಗೆದು ''ಕುರಿ ಕೋಣಗಳನ್ನು ಬಲಿತೆಗೆದುಕೊಳ್ಳುವ ನಿಮ್ಮ ದೇವರು ದೇವರಲ್ಲ. ಅದು ಸೈತಾನ, ಪಿಶಾಚಿ. ಅದನ್ನು ನಂಬಿ ನೀವು ಕೆಟ್ಟು ಹೋಗುತ್ತೀರಿ...'' ಎಂದು ಬಾಯಿ ಬಿಟ್ಟರೋ ಇಲ್ವೋ ಜನಗಳ ರಕ್ತ ಕುದಿಯತೊಡಗಿತು. ಅವರು ತಾನೆ ಎಷ್ಟೂಂತ ಸಹಿಸ್ತಾರೆ ಅವರ ಅನಾಚಾರಾನ? ನಾಕು ಜನ ತುಂಡಾಡಿಗಳು ಹಿಂದಿನಿಂದ ದೊಣ್ಣೆ ಹಿಡಿದುಕೊಂಡು ಬಂದುಬಿಟ್ಟರು. ಚೆನ್ನಾಗಿ ಬಡಿದರು ಪಾದ್ರಿಗಳಿಗೆ! ಒಬ್ಬನಿಗೆ ತಲೇಗೆ ಪೆಟ್ಟು ಬಿದ್ದು ಅಲ್ಲೇ ಉರುಳಿಕೊಂಡ. ಇನ್ನಿಬ್ಬರು ಅರಚಿಕೊಂಡು ಓಡಿಹೋಗುವುದಕ್ಕೆ ನೋಡಿದರು. ಅಷ್ಟು ಜನಗಳಿರುವಾಗ ಎಲ್ಲಿಗೆ ಅವರು ತಪ್ಪಿಸಿ ಕೊಂಡು ಹೋಗೋದು? ಹೊಡೀರೋ ಬಡೀರೋ ಅಂತ ಎಲ್ಲ ಮುತ್ತಿಕೊಂಡು ಆಳಿಗೊಂದು ಗುದ್ದು ಹಾಕಿದರು. ಮೂರು ಜನವೂ ಮಾರೆಮ್ಮನಿಗೆ ಬಲಿಯಾಗಿ ಬಿಟ್ಟರು! ಅಂತೂ ಗ್ರಾಮದೇವತೆಯನ್ನು ಬೈದುದಕ್ಕೆ ಅವರಿಗೆ ತಕ್ಕ ಶಿಕ್ಷೆಯಾಯಿತೆಂದು ಎಲ್ಲರಿಗೂ ಸಂತೋಷವಾಯಿತು. ಕೆಲವರಿಗೆ ಅಷ್ಟರಿಂದಲೇ ಸಮಾಧಾನವಾಗಲಿಲ್ಲ. ಆ ಮೂವರ ಹೆಣವನ್ನು ಮಾರಮ್ಮನ ಮುಂದಕ್ಕೆ ದರದರ ಎಳೆತಂದರು. ಗುಡಿಯ ಮುಂದೆ ಕೊಂಡ ಹಾಯುವುದಕ್ಕೆ ಸಿದ್ಧ ಮಾಡಿಟ್ಟಿದ್ದ ಬೆಂಕಿ ಧಗಧಗಾಂತ ಉರೀತಿತ್ತು. ಮಾರಮ್ಮನ ಪ್ರೀತ್ಯರ್ಥವಾಗಿ ಆ ಹೆಣಗಳನ್ನು ಒಂದೊಂದಾಗಿ ಬೆಂಕಿಗರ್ಪಿಸಿದರು. ಅಷ್ಟುಹೊತ್ತಿಗೆ ಅದೇನೊ ಹೇಳ್ತಾರಲ್ಲ ಮೊದಲೇ ಕಪಿಗೆ ಹೆಂಡ ಕುಡಿಸಿ ಚೇಳು ಕಡಿಸಿದ ಹಾಗೆ ಅಂತ! ಹಾಗೆ ಇನ್ನೂ ಕೆಲವರು ಕೊಳ್ಳಿ ಹಿಡಕೊಂಡು ಹೋಗಿ ಚರ್ಚಿಗೆ ಬೆಂಕಿ ಇಟ್ಟುಬಿಟ್ಟರು! ಆ ಚರ್ಚು ಉರಿಯುವುದಕ್ಕೆ ಮೊದಲಾಯಿತು. ನೋಡಿ, ಜ್ವಾಲೆ

ಅಂತರಿಕ್ಷವನ್ನು ಮುಟ್ಟುತ್ತಿತ್ತು. ಜನ ಸಂತೋಷವಾಗಿ ಕುಣಿದಾಡ್ತಾ ಇದ್ದರು. ಚರ್ಚಿನಲ್ಲಿ ಪಾದ್ರಿಗಳ ಯಜಮಾನ ಒಬ್ಬನೇ ಇದ್ದ. ಹೊರಗಿನಿಂದ ಬಾಗಿಲು ಬೀರೆ ಹಾಕಿಕೊಂಡು ಬಿಟ್ಟಿದ್ದರು. ಚರ್ಚೆಲ್ಲ ಸುಟ್ಟು ಬೂದಿಯಾಗುವಾಗ ಪಾಪ, ಯೇಸುಕ್ರಿಸ್ತನ ಜೊತೆಯಲ್ಲಿ ಅವನೂ ಬೆಂದುಹೋದ. ಗ್ರಾಮದೇವತೆಯನ್ನು ನಿಂದಿಸಿ ಜನ ಬದುಕುವು ದಕ್ಕುಂಟೆ? ನೋಡಿ, ಹೇಗೆ ಸೇಡು ತೀರಿಸಿಕೊಂಡಳು ತನ್ನನ್ನು ಹಳಿದದ್ದಕ್ಕೆ!

''ಆಮೇಲೆ ಪೊಲೀಸಿನವರು ಅವರು ಇವರು ಎಲ್ಲಾ ಬಂದರು ನೋಡಿದರು. ಅವರೇನು ಮಾಡ್ತಾರೆ? ಯಾರನ್ನಾಂತ ಹಿಡಿತಾರೆ? ಹಾಗೂ ಸಿಕ್ಕಿದವರು ಒಬ್ಬಿಬ್ಬರನ್ನು ಹಿಡಕೊಂಡು ಹೋಗಿ ಲಾಕಪ್ಪಿಗೆ ಹಾಕಿದರು. ಮೊನ್ನೆಮೊನ್ನೆವರೆಗೂ ಕೋರ್ಟಿನಲ್ಲಿ ಅದರ ವ್ಯವಹಾರ ನಡೀತಲೇ ಇತ್ತು. ಆಮೇಲೆ ಅವರನ್ನೂ ಬಿಟ್ಟುಬಿಟ್ಟರು ಅನ್ನಿ!... ನೋಡಿದ್ರಾ. ಇದೇ ಚರ್ಚು ಸುಟ್ಟುಹೋದ ಕತೆ. ಆ ಸಂದರ್ಭದಲ್ಲೇ ಇರಬೇಕು ಚರ್ಚಿನಲ್ಲಿದ್ದ ಕಾಗದ ಪತ್ರಗಳೆಲ್ಲ ಸುಟ್ಟು ಹೋದದ್ದು.''

ಕತೆ ನಿಲ್ಲಿಸಿ, ಶಂಕರಯ್ಯನವರು ಸೊಂಟದಿಂದ ಡಬ್ಬಿ ತೆಗೆದು, ಅದರ ತಲೆಯ ಮೇಲೆ ಬೆರಳಿನಿಂದ ಒಂದೇಟು ಹಾಕಿ, ಮುಚ್ಚಳ ತೆಗೆದು, ಶಾನುಭೋಗರಿಗೆ ಒಂದು ಚಿಟಿಕೆ ಕೊಟ್ಟು, ತಾವೂ ಒಂದು ಚಿಟಿಕೆ ನಶ್ಯ ಮೂಗಿಗೇರಿಸಿ, ಆಮೇಲೆ ಒಂದಾನೊಂದು ಕಾಲದಲ್ಲಿ ಬಿಳಿದೆನಿಸಿದ್ದು ನಶ್ಯದ ಸಂಪರ್ಕದಿಂದಲೇ ಒಂದು ಗ್ಯಾರಂಟಿ ಬಣ್ಣ ಬಂದಿದ್ದ ಕರವಸ್ತ್ರದಿಂದ ಮೂಗೊರೆಸಿಕೊಳ್ಳುತ್ತಾ, ಒಂದು ಸಾರಿ ಕೆಮ್ಮಿ ಗಂಟಲು ಸರಿಮಾಡಿ ಕೊಂಡು, ಮತ್ತೆ ಕತೆಯನ್ನು ಹರಿಯಬಿಟ್ಟರು.

''ಏನೋ ಹೇಳೋಕ್ಕೆ ಹೋಗಿ ಏನೋ ಆಯ್ತು! ಅವತ್ತು ಹರಾಜು ನಿಂತು ಹೋಯ್ತು ಅಂದ್ನೆಲ್ಲ, ಅದರ ಮಾರನೇ ದಿನ ಫಾದರ್ ರಿಚರ್ಡ್ ಹೊತ್ತಿಗೆ ಸರಿಯಾಗಿ ತಾಲ್ಲೂಕು ಆಫೀಸಿಗೆ ಬಂದ. ಅಮಲ್ದಾರರು ಒಂದು ಕಡೆ ಕೂತಿದಾರೆ, ಫಾದರ್ ರಿಚರ್ಡ್ ಒಂದು ಕಡೆ ಕೂತಿದಾನೆ. ಅಮಲ್ದಾರನ ಎರಡು ಪಕ್ಕಗಳಲ್ಲೂ ರೆವಿನ್ಯೂ ಆಫೀಸರು, 'ಹೆಚ್ಚು ಆಹಾರ ಬೆಳೆಯಿರಿ' ಸಂಸ್ಥೆಯ ಅಧಿಕಾರಿಗಳು ಕೂತಿದಾರೆ. ಪೊಲೀಸ್ ಇನ್ಸ್‌ಪೆಕ್ಟರು, ಆಫೀಸಿನ ಗುಮಾಸ್ತರುಗಳು ಅಮಲ್ದಾರರ ಕುರ್ಚಿ ಹಿಂದೆಯೇ ನಿಂತಿದಾರೆ. ಹೊರಗಡೆ ಬಾಗಿಲಲ್ಲಿ ಮಿಲ್ ಮಾಲಿಕ, ಹಳ್ಳಿಜನಗಳು, ಶಾನುಭೋಗ, ಪಟೇಲ ಎಲ್ಲರೂ ಏನಾಗುತ್ತೋ ನೋಡಬೇಕೆಂದು ಕುತೂಹಲದಿಂದ ಕಾದಿದ್ದಾರೆ. ರೆಕಾರ್ಡ್ ಕೀಪರ್ ವೆಂಕಟಸುಬ್ಬಯ್ಯ – ಅವನೇ, ನನ್ನ ಸೋದರಳಿಯ. ಅಲ್ಲಿಗೆ ಬಂದು ನಾಕು ವರ್ಷವಾಗಿತ್ತು. ಈಗ ಹೊಸಮಂಗಲದಲ್ಲಿದ್ದಾನೆ. ಅವನು ಹಳೀ ರಿಕಾರ್ಡು ಗಳನ್ನೆಲ್ಲ ಒಂದೊಂದು ವರ್ಷದ ಹಾಗೆ ತೆಗೆದು ತೆಗೆದು ಅಮಲ್ದಾರರ ಮುಂದೆ ಇಡುತ್ತಿದ್ದ. ಅಮಲ್ದಾರರು ಅವುಗಳನ್ನೆಲ್ಲಾ ಒಂದೊಂದಾಗಿ ತಿರುವಿ ಹಾಕುತ್ತಿದ್ದಾರೆ. ಒಂದು ವರ್ಷದ್ದು ನೋಡಿದರು. ಎರಡು ವರ್ಷದ್ದು ನೋಡಿದರು. ಜಮೀನು ಬಸಪ್ಪನದೇ ಎಂದಿದೆ! ನಮ್ಮ ವೆಂಕಟಸುಬ್ಬಯ್ಯನ ಅಕ್ಷರಗಳು ಗುಂಡಗೆ ಸ್ಫುಟವಾಗಿ ಮುತ್ತು ಪೋಣಿಸಿದ ಹಾಗಿತ್ತು. ಅದರಲ್ಲೇನೂ ತಪ್ಪು ಹುಡುಕುವಂತಿರಲಿಲ್ಲ. ಕಂದಾಯ ರಸೀತಿ ಪುಸ್ತಕವನ್ನು ತರಿಸಿಕೊಂಡು ನೋಡಿದರು. ಅದರ ಅಕ್ಕಪಕ್ಕದ ಜಮೀನಿನ ವರೆಲ್ಲ ಸರಿಯಾಗಿ ಕಂದಾಯ ಪಾವತಿಮಾಡಿದ್ದಾರೆ. ಆ ಜಮೀನನದು ಮಾತ್ರ ಬಂದಿಲ್ಲ! ಬೇರೊಂದು ಪುಸ್ತಕ ಎಳೆದುಕೊಂಡು ನೋಡಿದರು. ಒಂದು ಮೂಲೆಯಲ್ಲಿ ಕೆಂಪು ಶಾಯಿಯಲ್ಲಿ ಯಾವುದೋ ಆರ್ಡರಿನ ನಂಬರನ್ನೂ ತಾರೀಕನ್ನೂ ಗುರುತು ಹಾಕಿತ್ತು. ಫೈಲು ತೆಗೆದು ಆ ಆರ್ಡರನ್ನು ನೋಡಿದರು. ಆ ಜಮೀನಿಗೆ ಕಂದಾಯದ ರಿಯಾಯಿತಿ ಕೊಟ್ಟಿದೆ ಎಂದು ಬರೆದಿತ್ತು. ಅಂತೂ ಒಂದೇನೋ ನಿರ್ಧಾರವಾಯಿತು, ಜಮೀನು ಬಸಪ್ಪನದೇ ಮತ್ತು ಅವನು ಕಂದಾಯ ಕೊಡಬೇಕಾಗಿರಲಿಲ್ಲ. ಆಮೇಲೆ ಇನ್ನೂ ಒಂದು ವರ್ಷದ ಹಿಂದಿನ ರಿಕಾರ್ಡ್‌ನ್ನು ನೋಡಿದರು. ಅದರಲ್ಲೂ ಅದೇ! ಮತ್ತೊಂದು ವರ್ಷದ್ದು ನೋಡಿದರು, ಅದರಲ್ಲೂ ಅದೇ! ಅಮಲ್ದಾರರಿಗೆ ಬಲು ಆಶ್ಚರ್ಯವಾಯಿತು. ''ಇದಕ್ಕೇನು ಹೇಳ್ತೀರ್ರಿ?'' ಅಂತ ಪಾದ್ರಿಯನ್ನೊಂದು ಸಾರಿ ನೋಡಿ ನಕ್ಕರು. ಪಾದ್ರಿ ಮುಖ ಗಂಟುಹಾಕಿಕೊಂಡು ಸುಮ್ಮನೆ ಉಸಿರೆತ್ತದೆ ಕುಳಿತಿದ್ದ. ಅಮಲ್ದಾರರು ತಮ್ಮ ಮುಂದಿದ್ದ ರಿಕಾರ್ಡುಗಳ ಕಂತೆಯನ್ನೆಲ್ಲ ಪಕ್ಕಕ್ಕೆ ತಳ್ಳಿ ಅದಕ್ಕೂ ಹಿಂದಿನ ವರ್ಷದ ರಿಕಾರ್ಡ್‌ನ್ನು ಎಳೆದುಕೊಂಡು ನೋಡಿದರು. ಬೇರೆಬೇರೆ ತರದ ಅಕ್ಷರಗಳು. ಆದರೂ ಬಿಡಿಬಿಡಿಯಾಗೇನೋ ಇತ್ತು. ಆ ಜಮೀನಿನ ದಾಖಲೆಯನ್ನೆಲ್ಲ ಮೊದಲಿಂದ ಕಡೆಯವರೆಗೆ ಓದಿನೋಡಿದರು. ಎಲ್ಲವೂ ಮೊದಲ ಹಾಗೇ ಇತ್ತು. ಆದರೆ ಒಂದೇ ಒಂದು ವ್ಯತ್ಯಾಸ: 'ಬಸಪ್ಪ' ಎನ್ನುವುದರ ಬದಲು 'ಬಶಪ್ಪ' ಎಂದಿತ್ತು. ಅದನ್ನು ನೋಡಿದ ಕೂಡಲೇ ಅಮಲ್ದಾರರಿಗೆ ನಗು ತಡೆಯುವುದಕ್ಕಾಗಲಿಲ್ಲ. ''ಯಾರ್ರೀ ಅದನ್ನು ಬರೆದದ್ದು?'' ಅಂತ ಹಿಂದೆ ನಿಂತಿದ್ದ ಹೆಡ್ ಗುಮಾಸ್ತೆಯನ್ನು ಕೇಳಿದರು. ಆತ ಒಳಕ್ಕೆ ಓಡಿ ಹೋಗಿ ವರ್ಗಾವರ್ಗಿ ಸಮಾಚಾರವಿದ್ದ ಫೈಲೊಂದನ್ನು ತಂದು ಬಿಚ್ಚಿ ನೋಡಿ, ''ಶಿವಸ್ವಾಮಿ ಅನ್ನೋವ್ನು ಮಹಾಸ್ವಾಮಿ'' ಅಂದ. ಅಮಲ್ದಾರರು ಮೊದಲೇ ಹಾಸ್ಯಪ್ರಿಯರು. ಅವನ ಹೆಸರು ಕೇಳಿದ್ದೇ ತಡ ಗೊಳ್ಳೆಂದು ನಗುತ್ತ, ''ಓಹೋ ಶಿವಶಾಮಿನೋ! ಅದಕ್ಕೆ ಬಶಪ್ಪವರ ಮನೇಲಿ ಬಿಶಿಬಿಶಿ ಗಶಗಶೆ ಪಾಯಿಶಾಂತ ಬರೆದಿದಾನೆ!'' ಅಂದರು. ಶಿವಸ್ವಾಮಿ ನಮ್ಮ ವೆಂಕಟಸುಬ್ಬಯ್ಯನಿಗಿಂತ ಮುಂಚೆ ಇದ್ದವನು. ಕೆಲಸದಲ್ಲಿ ಗಟ್ಟಿಗ. ಆದರೆ ಏನೊ ಅವನ ಪ್ರಾರಬ್ಧಕರ್ಮ, ಮಾತಾಡುವಾಗ ಅವನಿಗೆ ಶ ಷ ಸ ಗಳಿಗೆ ವ್ಯತ್ಯಾಸವೇ ತಿಳೀತಿರಲಿಲ್ಲ. ಅವನೂ ಆ ಆಫೀಸಿನಲ್ಲಿ ಮೂರು ವರ್ಷ ಇದ್ದ. ಸರಿ, ಅವನ ಕೈಬರಹದ ರಿಕಾರ್ಡೆಲ್ಲ ಒಂದೇ ರೀತಿ ಇತ್ತು.

''ಅಷ್ಟು ಹೊತ್ತಿಗಾಗಲೇ ಎಂಟು ಹತ್ತು ವರ್ಷದ ರಿಕಾರ್ಡುಗಳನ್ನು ನೋಡಿ ದಂತಾಯಿತು. ಅಮಲ್ದಾರರಿಗೂ ಸಾಕಾಗಿತ್ತು. ಇನ್ನೆಷ್ಟು ಬೇಕು ರುಜುವಾತಿಗೆ? ಅನ್ನ ಆಗಿದೆಯೋ ಇಲ್ಲವೋ ನೋಡುವುದಕ್ಕೆ ಎಲ್ಲಾ ಅಗುಳನ್ನೂ ಹಿಚುಕಿ ನೋಡಬೇಕೆ? ಫಾದರ್ ರಿಚರ್ಡ್‌ನಿಗೆ ತುಂಬಾ ಬೇಸರವಾಯಿತು. ಅವನಿಗೆ ತನ್ನದೇ ತಪ್ಪಿರಬಹುದು ಅನ್ನಿಸಿತು. ಜೊತೆಗೆ ಗಾಬರಿಯೂ ಆಯಿತು. ಅಷ್ಟು ಜನಗಳ ಎದುರಿಗೆ ತನಗೆ ಅವಮಾನ ವಾಗುತ್ತದಲ್ಲ ಎಂದು ವ್ಯಥೆಯೂ ಆಯಿತು. ಯೇಸುವನ್ನು ಒಂದೇ ಮನಸ್ಸಿನಿಂದ ಧ್ಯಾನಿಸುತ್ತಿದ್ದ. ಅಮಲ್ದಾರರು ಕಡೆಯದಾಗಿ ಇನ್ನು ಒಂದೇ ಒಂದು ವರ್ಷದ ರಿಕಾರ್ಡನ್ನು ನೋಡುವುದಾಗಿ ನಿರ್ಧರಿಸಿ, ಮಧ್ಯೆ ಮೂರು ವರ್ಷಗಳನ್ನು ಬಿಟ್ಟು ಹಿಂದಿನದನ್ನು ತರಿಸಿದರು. ಹಳೇ ಕಾಲದ ಬರವಣಿಗೆ ರಾಗಿ ಶಾಯಿಯಲ್ಲಿ ಬರೆದ ಮೋಡಿ ಅಕ್ಷರಗಳು ಎಲ್ಲ ಒಂದಕ್ಕೊಂದು ಹೆಣೆದುಕೊಂಡು ಕಲಸುಮೇಲೋಗರವಾಗಿತ್ತು. ಅಲ್ಲಲ್ಲಿ ಶಾಯಿ ಬಿದ್ದು ಚಿತ್ತೂ ಆಗಿತ್ತು. ಅಮಲ್ದಾರರು ಸ್ವಲ್ಪ ಪ್ರಯಾಸದಿಂದಲೇ ಓದಿದರು. ಒಕ್ಕಣೆಯೆಲ್ಲ ಹಾಗೇ ಇತ್ತು. ಆದರೆ ಹೆಸರು ಮಾತ್ರ ಸ್ಪಷ್ಟವಾಗಿರಲಿಲ್ಲ. ನೋಡಿದರೆ 'ಬಶಪ್ಪ' ಎಂದು ಬರೆದಿದ್ದಂತೆ ತೋರಿತು. ಅದನ್ನು ಹೆಡ್ ಗುಮಾಸ್ತರ ಕೈಗೆ ಕೊಟ್ಟು, ''ಇದನ್ನು ಸರಿಯಾಗಿ ಓದಿ ನೋಡ್ರಿ'' ಅಂದರು. ಅವರು ಕಣ್ಣಿಗೆ ಕನ್ನಡಕ ಸಿಕ್ಕಿಸಿಕೊಂಡು, ಬಾಗಿಲ ಹತ್ತಿರ ಹೋಗಿ, ಹಾಳೆಯನ್ನು ಕೆಳಗೆ ಮೇಲೆ ಮಾಡಿ ಚೆನ್ನಾಗಿ ಪರಿಶೀಲಿಸಿ, ''ಇದು ಬಿಷಪ್ಪ ಎಂದಾಗುತ್ತೆ ಮಹಾಸ್ವಾಮಿ'' ಅಂದರು. ಫಾದರ್ ರಿಚರ್ಡ್ ಇದ್ದಕ್ಕಿದ್ದಂತೆ ಒಂದು ಹಾರು ಹಾರಿ, ''ಸ್ವಾಮಿ ನೋಡಿದಿರಾ ಬಿಷಪ್ ಬಿಷಪ್!'' ಅಂದ... ಬಿಶಪ್ ಅಂದ್ರೆ ಗೊತ್ತಿಲ್ವೇ, ಕ್ರೈಸ್ತ ಗುರು ಅಂತ! ಆಗ ಹೊಳೆಯಿತು ಎಲ್ಲರಿಗೂ, ಬಿಷಪ್ಪನ ಹೆಸರಿನಲ್ಲೇ ಜಮೀನಿದ್ದದ್ದು ಅಂತ. ಆ ಜಮೀನು ಚರ್ಚಿಗೆ ಸೇರಿದ್ದುದರಿಂದಲೇ ಬ್ರಿಟಿಷ್ ಸರ್ಕಾರದವರು ಅದಕ್ಕೆ ಕಂದಾಯದ ರಿಯಾಯ್ತಿ ಕೊಟ್ಟಿದ್ದು!

''ಸರಿ, ಅಮಲ್ದಾರರು ಫಾದರ್ ರಿಚರ್ಡ್‌ನ ಕ್ಷಮಾಪಣೆ ಕೇಳಿಕೊಂಡು, ಆ ಜಮೀನು ಚರ್ಚಿಗೇ ಸೇರಿದ್ದೆಂದು ನಿರ್ಧರಿಸಿದರು. ಆಮೇಲೆ ತಮ್ಮ ಗುಮಾಸ್ತರುಗಳ ಕಡೆ ತಿರುಗಿ ನಗುನಗುತ್ತಾ, ''ನೋಡಿದಿರೇನ್ರಿ! ಒಂದು ದೊಡ್ಡ ಯಂತ್ರದಲ್ಲಿ ಒಂದು ಸಣ್ಣ ತಿರುಪು ಕಳಚಿಕೊಂಡರೂ ಹೇಗೆ ಯಂತ್ರವೇ ಕೆಟ್ಟುಹೋಗುತ್ತೋ ಹಾಗೆ ಒಬ್ಬ ಗುಮಾಸ್ತೆ ಒಂದು ಅಕ್ಷರ ತಪ್ಪು ಮಾಡಿದ್ದಕ್ಕೆ ಎಷ್ಟು ಅನಾಹುತ ಆಯ್ತು! ಇನ್ಮೇಲಾದರೂ ಎಚ್ಚರಿಕೆಯಿಂದಿರಿ'' ಅಂದರು. ಎಲ್ಲರೂ ಹಿಹಿಹಿ ಅಂತ ನಗುತ್ತಿದ್ದರು. ಆ ಮಿಲ್ ಮಾಲಿಕನೊಬ್ಬ ಪೆಚ್ಚುಮುಖ ಹಾಕಿಕೊಂಡು ಮನೆಗೆ ಹೋದ!''

ಕತೆ ಮುಗಿಯಿತು. ಶಾನುಭೋಗರು ಮೇಲೆದ್ದು, ''ಬಂದೆ ಬಂದೆ, ಕೈ ಕಾಲು ತೊಳಕೊಂಡು ಬರ್ತೀನಿ'' ಎನ್ನುತ್ತಾ ಮನೆಯೊಳಕ್ಕೆ ಹೊರಟರು.

*(ಪ್ರಬುದ್ಧ ಕರ್ನಾಟಕ, ಸಂಪುಟ - ೩೪, ಸಂಚಿಕೆ - ೪, ೧೯೫೩)*





ಕೆ.ವಿ. ಸುಬ್ಬಣ್ಣ ನೆನಪಿನ
'ಮೊದಲ ಓದು' ಪುಸ್ತಕ ಮಾಲೆ

ಕನ್ನಡ ಸಾಹಿತ್ಯವನ್ನು ಪ್ರವೇಶಿಸಬಯಸುವ ಹೊಸ ಓದುಗರಿಗೆ ಕನ್ನಡದ ಪ್ರಮುಖ ಲೇಖಕರ ಆಯ್ದ ಬರಹಗಳ ಕಿರು ವಾಚಿಕೆಗಳು ಲಭ್ಯವಾಗಬೇಕು – ಎಂಬ ಉದ್ದೇಶವಿಟ್ಟುಕೊಂಡು ಅಕ್ಷರ ಪ್ರಕಾಶನವು ಈ ಪುಸ್ತಕ ಮಾಲಿಕೆಯನ್ನು ಆರಂಭಿಸಿದೆ. ಈ ಮಾಲಿಕೆಯ ಮೊದಲ ಕಂತಿನಲ್ಲಿ ತಲಾ ೧೦೮ ಪುಟಗಳ ೨೫ ಪುಸ್ತಕಗಳು ಹೊರಬಂದಿವೆ. ಅದರಲ್ಲಿ ಆಧುನಿಕ ಪೂರ್ವ ಕನ್ನಡದ ೫ ಮಹತ್ಕೃತಿಗಳೂ (ಟಿಪ್ಪಣಿಗಳೊಂದಿಗೆ) ಹಾಗೂ ಹೊಸಗನ್ನಡದ ೨೦ ಪ್ರಮುಖ ಲೇಖಕರ ಆಯ್ದ ಕಥೆ-ಕವನ-ಪ್ರಬಂಧಗಳೂ ಸೇರಿವೆ. ಆಯಾ ಲೇಖಕರನ್ನು ಮೊದಲ ಬಾರಿಗೆ ಪರಿಚಯಿಸಿಕೊಳ್ಳುವವರಿಗೆ ಉಪಯುಕ್ತವಾಗುವಂತೆ ಈ ಪುಸ್ತಕಗಳ ವಸ್ತು-ವಿನ್ಯಾಸಗಳನ್ನು ರೂಪಿಸಲಾಗಿದೆ. ಮಾರುಕಟ್ಟೆಗೆ ಬಿಡುಗಡೆಯಾಗುವ ಜತೆಗೆ, ಈ ಮಾಲಿಕೆಯ ಪುಸ್ತಕಗಳನ್ನು ನೀನಾಸಂ ಪ್ರತಿಷ್ಠಾನವು ನಡೆಸುತ್ತಿರುವ ಸಾಹಿತ್ಯ ಅಧ್ಯಯನ ಶಿಬಿರಗಳಲ್ಲಿ ಪಠ್ಯಗಳಾಗಿಯೂ ಬಳಸಲಾಗುತ್ತದೆ.

ಅಕ್ಷರ ಪ್ರಕಾಶನಕ್ಕೆ ೫೦ ತುಂಬಿರುವ ಸಂದರ್ಭದಲ್ಲಿ ಅಕ್ಷರ ಪ್ರಕಾಶನ ಮತ್ತು ನೀನಾಸಂ ಸಂಸ್ಥೆಗಳ ಪ್ರೇರಕ ಶಕ್ತಿಯಾಗಿದ್ದ ದಿವಂಗತ ಕೆ. ವಿ. ಸುಬ್ಬಣ್ಣನವರ ನೆನಪಿಗೆ ಈ ಹೊಸ ಪುಸ್ತಕ ಮಾಲೆಯ ಮೊದಲ ಕಂತಿನ ೨೫ ಪುಸ್ತಕಗಳನ್ನು ೨೦೦೬ನೆಯ ಅಕ್ಟೋಬರ್‌ನಲ್ಲಿ ಹೊರತರಲಾಗಿದೆ. ಪ್ರಕಟಣೆಯ ಹಕ್ಕುಗಳ ಲಭ್ಯತೆಯನ್ನಾಧರಿಸಿ, ಮುಂದಿನ ವರ್ಷಗಳಲ್ಲಿ ಈ ಮಾಲೆಯನ್ನು ಇನ್ನೂ ಹಲವು ಲೇಖಕ-ಕೃತಿ-ಪ್ರಕಾರಗಳಿಗೆ ವಿಸ್ತರಿಸಬೇಕೆಂಬುದು ಪ್ರಕಾಶನದ ಆಶಯ.

**ಮೊದಲ ಕಂತಿನ ಪುಸ್ತಕಗಳು :** ಪಂಪನ ಆದಿಪುರಾಣ ಪ್ರವೇಶ ❑ ಜನ್ನನ ಯಶೋಧರ ಚರಿತೆ ಪ್ರವೇಶ ❑ ವಚನ ಪ್ರವೇಶ ❑ ರಾಘವಾಂಕನ ಹರಿಶ್ಚಂದ್ರ ಕಾವ್ಯ ಪ್ರವೇಶ ❑ ಕುಮಾರವ್ಯಾಸನ ಕರ್ಣಾಟಕ ಭಾರತ ಕಥಾಮಂಜರಿ ಪ್ರವೇಶ ❑ ಕುವೆಂಪು ಅವರ ಆಯ್ದ ಕವಿತೆಗಳು ❑ ಪು.ತಿ.ನ. ಅವರ ಆಯ್ದ ಕವಿತೆಗಳು ❑ ಕೆ. ಎಸ್. ನರಸಿಂಹಸ್ವಾಮಿ ಅವರ ಆಯ್ದ ಕವಿತೆಗಳು ❑ ಗೋಪಾಲಕೃಷ್ಣ ಅಡಿಗ ಅವರ ಆಯ್ದ ಕವಿತೆಗಳು ❑ ಚಂದ್ರಶೇಖರ ಕಂಬಾರ ಅವರ ಆಯ್ದ ಕವಿತೆಗಳು ❑ ಎ. ಕೆ. ರಾಮಾನುಜನ್ ಅವರ ಆಯ್ದ ಕವಿತೆಗಳು ❑ ಸು.ರಂ. ಎಕ್ಕುಂಡಿ ಅವರ ಆಯ್ದ ಕವಿತೆಗಳು ❑ ಯು. ಆರ್. ಅನಂತಮೂರ್ತಿ ಅವರ ಆಯ್ದ ಕಥೆಗಳು ❑ ಪಿ. ಲಂಕೇಶ್ ಅವರ ಆಯ್ದ ಕಥೆಗಳು ❑ ಯಶವಂತ ಚಿತ್ತಾಲ ಅವರ ಆಯ್ದ ಕಥೆಗಳು ❑ ಶಾಂತಿನಾಥ ದೇಸಾಯಿ ಅವರ ಆಯ್ದ ಕಥೆಗಳು ❑ ಪೂರ್ಣಚಂದ್ರ ತೇಜಸ್ವಿ ಅವರ ಆಯ್ದ ಕಥೆಗಳು ❑ ದೇವನೂರ ಮಹಾದೇವ ಅವರ ಆಯ್ದ ಕಥೆಗಳು ❑ ವೈದೇಹಿ ಅವರ ಆಯ್ದ ಕಥೆಗಳು ❑ ಶಿವರಾಮ ಕಾರಂತ ಅವರ ಆಯ್ದ ಬರಹಗಳು ❑ ಡಿ.ವಿ.ಜಿ. ಅವರ ಆಯ್ದ ಬರಹಗಳು ❑ ಗೌರೀಶ ಕಾಯ್ಕಿಣಿ ಅವರ ಆಯ್ದ ಬರಹಗಳು ❑ ಕೀರ್ತಿನಾಥ ಕುರ್ತಕೋಟಿ ಅವರ ಆಯ್ದ ಬರಹಗಳು ❑ ಬಿ.ಜಿ.ಎಲ್. ಸ್ವಾಮಿ ಅವರ ಆಯ್ದ ಬರಹಗಳು ❑ ಡಿ. ಆರ್. ನಾಗರಾಜ್ ಅವರ ಆಯ್ದ ಬರಹಗಳು.

ಪ್ರತಿಯೊಂದರ ಬೆಲೆ : ರೂ. ೭೫
ಒಟ್ಟು ೨೫ ಶೀರ್ಷಿಕೆಗಳ
ಒಂದು ಸೆಟ್‌ನ ಬೆಲೆ : ರೂ. ೧೮೭೫

ವಿವರಗಳಿಗೆ
**ಅಕ್ಷರ ಪ್ರಕಾಶನ**
ಹೆಗ್ಗೋಡು – ೫೭೭ ೪೧೭, ಸಾಗರ
ಶಿವಮೊಗ್ಗ ಜಿಲ್ಲೆ, ದೂರವಾಣಿ : ೦೮೧೮೩ – ೨೬೫೪೭೬

# ತೇಜಸ್ವಿಯವರ ಮಾಯಾಲೋಕ

ಡಾ॥ ರಹಮತ್ ತರೀಕೆರೆ



- ೧ -

ಅನೇಕ ಪ್ರಕಾರಗಳಲ್ಲಿ ಬರೆಯುವುದು ಕನ್ನಡದ ದೊಡ್ಡ ಲೇಖಕನ ಒಂದು ಲಕ್ಷಣ. ಕುವೆಂಪು, ಮಾಸ್ತಿ, ಕಾರಂತ, ಪುತಿನ, ಅನಂತಮೂರ್ತಿ, ಕಂಬಾರ, ಲಂಕೇಶ್ ಇವರೆಲ್ಲ ಬಹುಪ್ರಕಾರಗಳಲ್ಲಿ ಬರೆದವರು. ಇದೇ ಪರಂಪರೆಯಲ್ಲಿ ಸೇರುವ ತೇಜಸ್ವಿ ನಾಟಕ, ಸಣ್ಣಕತೆ, ಕಾದಂಬರಿ, ಪ್ರವಾಸಕಥನ, ವಿಜ್ಞಾನ ಬರೆಹ, ಅನುವಾದ, ಜೀವನ ಚರಿತ್ರೆ, ಚಿಂತನೆ ಹೀಗೆ ಬಹುಪ್ರಕಾರದಲ್ಲಿ ಬರೆದವರು. ಬಹುಪ್ರಕಾರಗಳಲ್ಲಿ ಬರೆಯುವುದು ಕೇವಲ ಸಾಹಿತ್ಯಕ ಪ್ರಯೋಗಶೀಲತೆಯ ಲಕ್ಷಣವಲ್ಲ; ಲೇಖಕರು ತಮ್ಮ ಜೀವನದೃಷ್ಟಿಯನ್ನು ಬೇರೆಬೇರೆ ಕಾಲ ಸಂದರ್ಭಗಳಲ್ಲಿ ಇಟ್ಟು ನಿರಂತರ ಪರಿಶೀಲಿಸುವ ದಾರ್ಶನಿಕ ಶೋಧದ ಗುಣ ಕೂಡ. ಕನ್ನಡದ ದೊಡ್ಡ ಲೇಖಕರು ಕೇವಲ ಕಲೆಯ ನಿರ್ಮಾತೃಗಳಲ್ಲ; ತಮ್ಮ ಚಿಂತನೆಯಿಂದ ನಾಡಿನ ಮನಸ್ಸನ್ನು ರೂಪಿಸಬೇಕು ಎಂಬ ಕ್ರಿಯಾಶೀಲರೂ ಹೌದು. ಅವರು ರಾಜಕೀಯ ಚಿಂತನೆ ಎಂದು ಪ್ರತ್ಯೇಕವಾಗಿ ಮಾಡುವುದಿಲ್ಲ. ತಮ್ಮ ಕಲಾಪ್ರಕಾರಗಳಲ್ಲೆ ಮಾಡುತ್ತಾರೆ. ತೇಜಸ್ವಿ ಕೂಡ ತಮ್ಮ ಸ್ವತಂತ್ರ ಚಿಂತನೆಗಳಲ್ಲಿ ಮಾತ್ರವಲ್ಲದೆ, ತಮ್ಮ ಕಥನಗಳ ಮೂಲಕ ರಾಜಕೀಯ ಚಿಂತನೆ ಮಾಡುತ್ತಾರೆ. 'ಅಬಚೂರಿನ ಪೋಸ್ಟಾಫೀಸು' ಕಥಾಸಂಕಲನದ ಮುನ್ನುಡಿಯಲ್ಲಿ ('ಹೊಸದಿಗಂತದೆಡೆಗೆ') ಹೊಸ ಪರಿಪೂರ್ಣ ನಾಗರಿಕತೆಯ ನಿರ್ಮಿಸುವ ಹೋರಾಟದ ಮಾತು ಬರುತ್ತದೆ. ಇದು ಆಕಸ್ಮಿಕವಲ್ಲ.

ಕನ್ನಡದಲ್ಲಿ ಹದಿಹರೆಯದ ಓದುಗರಿಗೆ ಲಂಕೇಶ್-ತೇಜಸ್ವಿ ಯಾಕೆ ಮುಖ್ಯರಾಗಿದ್ದಾರೆ ಎಂಬ ರಹಸ್ಯವನ್ನು ಇನ್ನೂ ಭೇದಿಸಬೇಕಿದೆ; ತೇಜಸ್ವಿ ಮಟ್ಟಿಗೆ ಹೇಳುವುದಾದರೆ ಅವರ ಜನಪ್ರಿಯತೆಯು ಅವರ ಬರೆಹದಲ್ಲಿರುವ ಲವಲವಿಕೆಯ ಶೈಲಿಯಲ್ಲಿ; ನಿಗೂಢಗಳ ಬೆನ್ನುಹತ್ತಿ ಹೋಗುವ ಶೋಧಕ ಪ್ರವೃತ್ತಿಯಲ್ಲಿ; ಸಾಂಪ್ರದಾಯಿಕ ಸಮಾಜದ ವಿರುದ್ಧ ಬಂಡೇಳುವ ತರುಣರು ಕಥನದ ನಾಯಕರಾಗುವುದರಲ್ಲಿ; ಪರಿಸರದ ಜತೆ ಅವರು ಅನುಸಂಧಾನ ಮಾಡುತ್ತ ಕಾಣಿಸುತ್ತಿರುವ ಹೊಸ ಜೀವಜಗತ್ತಿನ ದರ್ಶನದಲ್ಲಿ ಇರಬಹುದು. ಸಾಹಿತ್ಯವನ್ನು ಕೇವಲ ಖುಷಿಗಾಗಿ ಓದುವ ವರ್ಗಕ್ಕೂ ತಾತ್ವಿಕ ಚರ್ಚೆಗಾಗಿ 'ಗಂಭೀರ' ಓದುಗರಿಗೂ ಏಕಕಾಲಕ್ಕೆ ಎರಡೂ ಸ್ತರಗಳಲ್ಲಿ ಸಲ್ಲುವ ಕೆಲವೇ ಲೇಖಕರಲ್ಲಿ ತೇಜಸ್ವಿ ಒಬ್ಬರು. ತೇಜಸ್ವಿಯವರ ಯಶಸ್ಸಿನ ಮುಖ್ಯ ಕಾರಣಗಳಲ್ಲಿ ಒಂದಾಗಿರುವ ಅವರ ಉತ್ಪ್ರೇಕ್ಷೆ ಮತ್ತು ಹ್ಯೂಮರುಗಳಿಂದ ಕೂಡಿದ ಕಥನಕ್ರಮವು, ಮೂರು ಉದ್ದೇಶಗಳನ್ನು ಈಡೇರಿಸುತ್ತದೆ: (೧) ವಕ್ರವೂ ವೈರುಧ್ಯವೂ ಉಳ್ಳ ಬದುಕಿನ ಲಯವನ್ನು ಪ್ರೀತಿಯಿಂದ ಸಮೀಪದಿಂದ ಸೂಕ್ಷ್ಮವಾಗಿ ಗಮನಿಸುವುದಕ್ಕೆ; (೨) ತಿರಸ್ಕೃತ ಜಗತ್ತಿನಲ್ಲಿ ಅಡಗಿರುವ ಚೈತನ್ಯಶೀಲತೆಯನ್ನು ಗುರುತಿಸುವುದಕ್ಕೆ; (೩) ಜಡಸಂಪ್ರದಾಯವನ್ನು ವಿಮರ್ಶೆ ಮಾಡುವುದಕ್ಕೆ ಹಾಗೂ ಆ ಕೆಲಸ ಮಾಡುವ ತರುಣರ ಉಕ್ಕು ಜೀವನಪ್ರೀತಿಯನ್ನು ವ್ಯಕ್ತಮಾಡುವುದಕ್ಕೆ ಎಂತಲೇ ತರುಣರು ಅವರ ಮುಖ್ಯ ಪಾತ್ರಗಳು. ಸರಳ ಅನಿಸುವ ಹಾಸ್ಯವಿನ್ಯಾಸದ ಕಥೆಯಲ್ಲಿ ಜಾತಿ ಸಮಾಜ ವಿಧಿಸಿರುವ ಕಟ್ಟಳೆಗಳನ್ನು ಯುವಕರ ತಲೆಮಾರು ಹೇಗೆ ಮೀರಬಲ್ಲದು ಮತ್ತು ಕೂಡಿ ಬದುಕುವ ನಾಳೆಯನ್ನು ಕಟ್ಟಬಲ್ಲದು ಎಂಬ ಸುಪ್ತ ದರ್ಶನವನ್ನು ತೇಜಸ್ವಿ ಅಡಗಿಸುತ್ತಾರೆ.

ತಮ್ಮ ಕಥನಗಳಲ್ಲಿ ಮಾಡುವ ಭಾಷಾಬಳಕೆಯ ಮೂಲಕ ಕನ್ನಡ ಭಾಷೆಗೆ ವಿಶಿಷ್ಟ ಅಭಿವ್ಯಕ್ತಿ ಶಕ್ತಿ ಕೊಟ್ಟವರಲ್ಲಿ ತೇಜಸ್ವಿ ಅವರು ಒಬ್ಬರು; ವಿಜ್ಞಾನದ ಚರ್ಚೆಯನ್ನು ಕನ್ನಡ ಕಥನದಲ್ಲಿ ಅಳವಡಿಸಿದ ಅವರ ಕಥನ ಪ್ರಯೋಗವು ಕನ್ನಡಕ್ಕೆ ಕೊಟ್ಟ ಶಕ್ತಿಯ ಸ್ವರೂಪ ಎಂತಹುದು ಎಂಬುದನ್ನು ಇನ್ನೂ ತಿಳಿಯಬೇಕಿದೆ; ''ಅನುಭವದ ಸೂಕ್ಷ್ಮಾತಿಸೂಕ್ಷ್ಮಗಳನ್ನು ಆಳಪಾತಾಳದ ಸತ್ಯಗಳನ್ನೂ ಅಭಿವ್ಯಕ್ತಿಸಲು ಭಾಷೆಯನ್ನು ಸೌಷ್ಠವಗೊಳಿಸುವುದು ಜನಸಮಷ್ಟಿಯ ಸಂಕೀರ್ಣ ಜವಾಬ್ದಾರಿ. ಲೇಖಕ ಈ ಸಮಷ್ಟಿಯಲ್ಲಿ ಒಬ್ಬ'' ಎಂದು ಅವರು ಹೇಳುವುದುಂಟು. ಲೇಖಕರು ಭಾಷೆಯ ಮೂಲಕ ಜನರಿಗೆ ಮಾಡಬೇಕಾದ ಸೇವೆ ಎಂದರೆ ಇದುವೇ ಎಂದು ಅವರು ನಂಬಿದವರು.

ತೇಜಸ್ವಿ ಹಲವಾರು ಪ್ರಕಾರಗಳಲ್ಲಿ ಬರೆದಿದ್ದರೂ ಮೂಲತಃ ಅವರೊಬ್ಬ ಕಥನಕಾರ. ಏನನ್ನು ಬರೆದರೂ ಅದನ್ನು ಕಥೆಯಾಗೇ ಅವರು ಕಲ್ಪಿಸಿಕೊಳ್ಳುತ್ತಾರೆ. ಅವರು ಕಟ್ಟಿಕೊಟ್ಟಿರುವ ಕಥನಕ್ರಮವು ಕನ್ನಡ ಸಾಹಿತ್ಯಕ್ಕೆ ದೊಡ್ಡ ಶಕ್ತಿಯನ್ನು ಸೇರ್ಪಡೆ ಮಾಡಿದೆ. ''ನಾನು ಜ್ಞಾನೋಪಾಸಕನಾಗಲಿ ವಿದ್ವಾಂಸನಾಗಲಿ ಅಲ್ಲ. ಸಾಹಿತ್ಯವೇ ನನ್ನ ಸ್ವಧರ್ಮ. ಹಾಗಾಗಿ ನಾನು ಏನನ್ನು ಬರೆದರೂ ಅದಕ್ಕೆ ಸಾಹಿತ್ಯ ಪರಿವೇಷ, ಕಥೆ ಕಾದಂಬರಿಗಳ ಛಾಯೆ ಇರುತ್ತದೆ. ಸಾಹಿತಿ ತನ್ನ ಅನುಭವ ಹೇಳಲು ಧರ್ಮಶಾಸ್ತ್ರ, ಪುರಾಣ, ಮನಃಶಾಸ್ತ್ರ ಉಪಯೋಗಿಸುವಂತೆ, ಈ ಕತೆಗಳಲ್ಲಿ ಜೀವಶಾಸ್ತ್ರ, ಪಕ್ಷಿಶಾಸ್ತ್ರ, ಪ್ರಾಣಿಶಾಸ್ತ್ರ ಮುಂತಾದುವುಗಳ ಉಪಯೋಗ ಆಗಿದೆಯಷ್ಟೆ. ಸ್ವಾನುಭವದ



ಎಲ್ಲೆಯನ್ನು ಮೀರದೆ ನಿರೂಪಿಸಿರುವ ಇವನ್ನು ಕಥೆಗಳೆಂದೇ ಪರಿಗಣಿಸಬಹುದು ಅಥವಾ ಇವನ್ನು ಏನೆಂದು ಪರಿಗಣಿಸುವ ಅಗತ್ಯವಾದರೂ ಏನು?'' ಎಂದು ಅವರು ಹೇಳುವುದುಂಟು. ಈ ಮಾತು ಕನ್ನಡದಲ್ಲಿ ಪ್ರಕಾರಗಳು ಸಂಕರಗೊಳ್ಳುತ್ತ, ತಮ್ಮ ಗಡಿಗೆರೆಗಳನ್ನು ಕಲಸಿಕೊಳ್ಳುತ್ತ, ಹೊಸ ಪ್ರಕಾರದ ಹುಟ್ಟಿಗೆ ಕಾರಣ ಆಗುತ್ತಿರುವ ಸಂಕ್ರಮಣ ಅವಸ್ಥೆಯನ್ನು ಸೂಚಿಸುತ್ತಿದೆಯೆ? ದೇಶದ ಸಮಾಜದಲ್ಲಿ ಜಾತಿ ಧರ್ಮಗಳ ಹೆಸರಲ್ಲಿ ಮನುಷ್ಯರನ್ನು ವಿಂಗಡಿಸುವ ವಿಚಾರಧಾರೆಗಳು ಬಲಗೊಳ್ಳುವಾಗ ಕನ್ನಡದಲ್ಲಿ ಸಾಹಿತ್ಯ ಪ್ರಕಾರಗಳಲ್ಲಿದ್ದ ವಿಂಗಡಿಸುವ ಗೆರೆಗಳೇ ಅಳಿಸುತ್ತಿವೆ.

ನಾಲ್ಕು ದಶಮಾನಗಳ ಕಾಲದ ತೇಜಸ್ವಿಯವರ ಕಥನ ಕ್ರಮವು ಮೂರು ಘಟ್ಟಗಳನ್ನು ದಾಟಿ ಬಂದಂತಿದೆ: (೧) ಒಂದು ಸಣ್ಣ ಸಂಗತಿಗೆ ಅಥವಾ ಒಬ್ಬ ವ್ಯಕ್ತಿಗೆ ಸಂಬಂಧಿಸಿದ ವಸ್ತುವನ್ನು ತೆಗೆದುಕೊಂಡು ಅದನ್ನು ಅದರೆಲ್ಲ ಸೂಕ್ಷ್ಮ ಸ್ತರಗಳು ಹೊಮ್ಮುವಂತೆ ಆಕಾರ ಕೊಡುವ ಕಲೆಯ ಹಂತ; 'ಲಿಂಗಬಂದ' ಕತೆಗಳು ಇಂತಹವು. ಆದರೆ ವ್ಯಕ್ತಿ ಅಥವಾ ಘಟನೆಯ ಹಿಂದೆ ಒಂದು ವಿಶಾಲ ಪರಿಸರವಿರುವುದನ್ನು ನೋಡುವುದಕ್ಕೆ ಈ ಕಥನವಿನ್ಯಾಸ ಅಷ್ಟು ಆಸಕ್ತಿವಹಿಸುವುದಿಲ್ಲ. ಇಲ್ಲಿ ತೇಜಸ್ವಿ ವ್ಯಕ್ತಿ ವಿಶಿಷ್ಟವಾದಿ ನೆಲೆಯ ಟಿಪಿಕಲ್ ನವ್ಯಲೇಖಕ. (೨) ಒಂದು ವಸ್ತುವಿನ ಹಿಂದೆ ದೊಡ್ಡ ಲೋಕ ಅಥವಾ ಒಬ್ಬ ವ್ಯಕ್ತಿಯ ಕಥನದ ಹಿಂದೆ ಒಂದು ವಿಸ್ತಾರ ಸಮಾಜ ಇದೆ ಎಂಬ ಅರಿವಿನಲ್ಲಿ ಹುಟ್ಟುವ ಕಥನ. 'ಅಬಚೂರಿನ ಪೋಸ್ಟಾಫೀಸು' ಸಂಕಲನದಿಂದ ಈ ಪ್ರಜ್ಞೆ ಗೋಚರಿಸುತ್ತದೆ. ಇಲ್ಲಿ ಬರುವ ಬಹುತೇಕ ಪಾತ್ರಗಳ ಜೀವನ ಸಮಸ್ಯೆಗೆ ಕಾರಣ, ಕೇವಲ ಅವರಲ್ಲ; ಅವರ ಹಿಂದಿರುವ ಸಾಮಾಜಿಕ ಜೀವನದ ದೊಡ್ಡ ಹಿನ್ನೆಲೆ. ಎಂತಲೇ ದೊಡ್ಡ ಕ್ಯಾನವಾಸಿನಲ್ಲಿ ಮನುಷ್ಯರ ವೇದನೆ, ಸಂತೋಷ, ಸಂಕಟಗಳನ್ನು ಹಿಡಿಯಲು ಅವರು ಯತ್ನಿಸುತ್ತಾರೆ. ಇದನ್ನು ಕಥನ ಕ್ರಮದ ಸಮಾಜವಾದಿ ವಿಸ್ತರಣೆ ಎಂದೂ ಕರೆಯಬಹುದು. (೩) ಪರಿಸರದಲ್ಲಿರುವ ಮನುಷ್ಯರ ಜತೆ, ನಿಸರ್ಗದ ಹಕ್ಕಿ ಪ್ರಾಣಿ ಗಿಡ ಮರ ಬಳ್ಳಿ ಹಳ್ಳ ಕೀಟ ಮಳೆ ಗಾಳಿ ಸಮಸ್ತ ಚರಾಚರಗಳನ್ನು ಒಟ್ಟಿಗೆ ನೋಡುತ್ತ ಬರೆಯುವುದು; ಇದನ್ನು 'ಜೀವಕೇಂದ್ರಿತ' ವಿಸ್ತರಣೆ ಪಡೆದ ಕಥನ ಎನ್ನಬಹುದು; 'ಕರ್ವಾಲೊ' ಕಾದಂಬರಿಯಿಂದ ಈ ಕಥನ ಆರಂಭವಾಗುತ್ತದೆ. ತೇಜಸ್ವಿಯವರಲ್ಲಿ ಕಥನಕ್ರಮದ ಈ ಪಲ್ಲಟಗಳು ಕೇವಲ ಶೈಲಿಯ ಮುರಿತಗಳಲ್ಲ, ಲೋಕವನ್ನು ನೋಡುವ ದೃಷ್ಟಿಕೋನದಲ್ಲಿ ಆದ ಬದಲಾವಣೆಯ ಸಂಕೇತಗಳು ಕೂಡ; 'ಕರ್ವಾಲೊ' ಕಾದಂಬರಿಯಲ್ಲಿ ಇರುವುದು ಕರ್ವಾಲೊ ಅವರ ಶೋಧದ ಕತೆಯೊ ಹಾರುವ ಓತಿಯ ಕಥನವೊ ಮಂದಣ್ಣನ ಕಥೆಯೊ? 'ಜೀಕ್ರಮೇಸ್ತ್ರಿ ಮತ್ತು ಹಾವುಮೀನು' ಎಂಬ ಕತೆಯ ಶೀರ್ಷಿಕೆ ಗಮನಿಸಿದರೂ ನಿಸರ್ಗ ಹಾಗೂ ಮಾನವ

ಲೋಕದ ಬೆರೆಸುವಿಕೆ ಗೊತ್ತಾಗುತ್ತದೆ. ಪ್ರಸ್ತುತ 'ಮಾಯಾಲೋಕ'ವು ಈ ಮೂರನೆಯ ಮಾದರಿಯ ಕಥನಕ್ರಮ ಹಾಗೂ ಲೋಕದೃಷ್ಟಿಯಲ್ಲಿ ಹುಟ್ಟಿದ ಕೃತಿ.

- ೨ -

ನಿಗೂಢತೆಯ ಶೋಧವು ತೇಜಸ್ವಿ ಬರೆಹದ ಚಲಚಿಹ್ನೆ. 'ನಿಗೂಢ ಮನುಷ್ಯರು', 'ಚಿದಂಬರ ರಹಸ್ಯ', 'ಮಾಯಾಲೋಕ', 'ಅದ್ಭುತವಿಶ್ವ' – ಈ ಕೃತಿಗಳ ಹೆಸರು ಕಂಡರೂ ನಿಗೂಢಗಳ ಹಿಂದೆ ಸುಳಿಯುವಲ್ಲಿ ಅವರಿಗಿರುವ ಸೆಳೆತ ಗೊತ್ತಾಗುತ್ತದೆ. ಅದು ಝರಿಯ ಜಾಡಿರಬಹುದು, ಹಾವು ಮೀನು ಇರಬಹುದು, ಹಾರುವ ತಟ್ಟೆ ಇರಬಹುದು, ಹಾರುವ ಓತಿಯಿರಬಹುದು; ಕುತೂಹಲ ಕೆರಳಿಸಿಕೊಳ್ಳುವುದು ಮತ್ತು ಹುಡುಕುವುದು ಅವರ ಕಥನದ ಲಕ್ಷಣ; 'ಮಾಯಾಲೋಕ' ಕೂಡ ಮನೆಬದಿಯ ಹಳ್ಳವು ಹೇಗೆ ನದಿಯನ್ನು ಸೇರುತ್ತದೆ ಎಂಬ ಶೋಧದ ಸಂಕಲ್ಪದಲ್ಲಿ ಮುಗಿಯುತ್ತದೆ. ತೇಜಸ್ವಿ ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಸಾಂಪ್ರದಾಯಿಕ ಸಮಾಜದಲ್ಲಿ ಸಂಚಲನೆ ಉಂಟುಮಾಡಬಲ್ಲ ಶಕ್ತಿ ಹಾಗೂ ಮುಂದಿನ ಪರ್ಯಾಯಗಳು ಎಂದು ನಂಬಿದವರು; ಜಾತಿ ಮತ್ತು ಧರ್ಮಗಳು ಮಾಡಿರುವ ಮಾನವ ಚೈತನ್ಯದ ಮೇಲಿನ ಹಲ್ಲೆಯನ್ನು ಈ ವಿಜ್ಞಾನ ವೈಚಾರಿಕತೆಯಿಂದ ತಡೆಯಬೇಕು ಎಂದು ಭಾವಿಸಿದವರು; ಆದ್ದರಿಂದಲೇ ಕರ್ವಾಲೊನಂತಹ ಆಧುನಿಕ ವಿಜ್ಞಾನ ಲೋಕಕ್ಕೆ ಸೇರಿದ ವ್ಯಕ್ತಿ ಅವರ ಕಥಾನಾಯಕ ಆಗಿರುವುದು; ನೈಲ್‌ನದಿಯ ಶೋಧಕ್ಕೆ ಹೋಗಿ ಪ್ರಾಣಬಿಡುವ ಲೀವಿಂಗ್ ಸ್ಟೋನ್ ಬಗ್ಗೆ ಅವರು ಬಹಳ ಶ್ರದ್ಧೆಯಿಂದ ಬರೆಯುತ್ತಾರೆ; ವಿಜ್ಞಾನಕ್ಕೆ ಇರುವ ಶೋಧಕ ಗುಣವೇ ಲೇಖಕರಾದ ತೇಜಸ್ವಿಯವರನ್ನು ಆವರಿಸಿಕೊಂಡ ಮಾಯೆಯಾಗಿದೆ; ಯಾವುದಾದರೂ ಒಂದು ಯಂತ್ರ, ಜೀಪು, ಕ್ಯಾಮರಾ ಅವರ ಕೃತಿಗಳಲ್ಲಿ ಪಾತ್ರಗಳಾಗಿ ಬರುತ್ತವೆ. ಮಾಯಾಲೋಕದಲ್ಲಿ ಸ್ಕೂಟರು ಹಾಗೂ ಪಂಪುಸೆಟ್ಟು ಇಂತಹ ಪಾತ್ರಗಳಾಗಿವೆ.

ಲೋಕದ ರಚನೆಯಲ್ಲಿ ಅಡಗಿರುವ ನಿಗೂಢಗಳ ಶೋಧದಲ್ಲಿ ಮಾನವನ ಅರಿವಿಗೆ ಮಿತಿಯಿದೆ. ಯಾಕೆಂದರೆ ಲೋಕಸೃಷ್ಟಿಯನ್ನು ಪೂರ್ಣವಾಗಿ ಅರಿಯಲು ಸಾಧ್ಯವಿಲ್ಲ. ಹೀಗಾಗಿ ಅಂತಿಮ ಸತ್ಯವೊಂದು ಸಿಕ್ಕಿತು ಎಂದು ಜಯಘೋಷವೆ ಇಲ್ಲ. ಅದೊಂದು ಪ್ರಕ್ರಿಯೆ. ಯಾರು ಬಲ್ಲರು ? ದೇವರಿಗೇ ಗೊತ್ತು ಎಂಬ ಉದ್ಗಾರ ವಾಚಕಗಳು ಮಾಯಾಲೋಕವನ್ನು ಒಳಗೊಂಡಂತೆ ತೇಜಸ್ವಿ ಕಥನದಲ್ಲಿ ಮತ್ತೆಮತ್ತೆ ಕಾಣಿಸುವುದು ಆಕಸ್ಮಿಕವಲ್ಲ. 'ಕರ್ವಾಲೊ' ಕಾದಂಬರಿ ಮುಕ್ತಾಯದಲ್ಲಿ ಬರುವ ಹೇಳಿಕೆಯಿದು: ''ಸರಿ ತಪ್ಪು ಹೇಗೆ ಹೇಳ್ತೀರಿ. ನಮಗೆ ಈ ಕ್ಷಣ, ಇಲ್ಲಿ ಹೀಗನಿಸಿದೆ. ಜೀವ ವಿಕಾಸಕ್ಕೆ ಎಲ್ಲಿದೆ ಕೊನೆ !''

'ಅಲೆಮಾರಿಯ ಅಂಡಮಾನ'ನಲ್ಲಿ ಗಾಳಕಚ್ಚುವ ಒಂದು ದೊಡ್ಡ ಮೀನು ಕಡೆಗೂ ನೀರುಬಿಟ್ಟು ಹೊರಬರದೆ ಇರುವುದು ನಿರಾಶೆ ಹುಟ್ಟಿಸುವುದಿಲ್ಲ, ಮನುಷ್ಯನನ್ನು ಸೋಲಿಸಿದ ಕಾರಣದಿಂದ ಆದರ ಮತ್ತು ನಿಗೂಢ ಹುಟ್ಟಿಸುತ್ತದೆ. ಇವು ನಿರಂತರ ಹುಡುಕಾಟವೊಂದೆ ನಮ್ಮ ಮುಂದಿರುವ ಲೋಕವನ್ನು ಅರಿವ ಕ್ರಮ; ಹೀಗೆ ಅರಿಯುವುದಕ್ಕೆ ಮಾಡಲಾಗುವ ಮಾನವ ಯತ್ನಗಳೇ ಚೈತನ್ಯ ಪ್ರಕಟಿಸುವ ವಿಧಾನ ಎಂದು ನಂಬಿಕೆಯಿಂದ ಬಂದವು. ಹೀಗಾಗಿ ಚಾರಣವು ತೇಜಸ್ವಿ ಕಥನದಲ್ಲಿ ದೊಡ್ಡ ಕ್ರಿಯಾರೂಪಕವಾಗಿ ಬರುತ್ತದೆ. ಅವರ ಪ್ರವಾಸಕಥನದಲ್ಲಿ 'ಅಲೆಮಾರಿ' ಎಂಬ ಶಬ್ದವು ಅರ್ಥಪೂರ್ಣ ಪದವಾಗಿದೆ. ಯಾವುದಾದರೂ ಜೀವಿಯ ಸುಳಿವು ಕಂಡರೆ ಬೆನ್ನು ಹತ್ತಿ ಹೋಗುವ ನಾಯಿಯು ತೇಜಸ್ವಿ ಬರೆಹದಲ್ಲಿ ಒಂದು ಪಾತ್ರವಾಗಿ ಬರುವುದು ಕೂಡ ಇಂತಹ ಹುಡುಕಾಟ ಮತ್ತು ಚೈತನ್ಯ ಪ್ರಕಟಣೆಯ ಭಾಗವಾಗಿದೆ. ಅಲೆದಾಟದ ವಿಷಯದಲ್ಲಿ ಈ ನಾಯಿಗಳಿಗೂ ಹೊಳೆಯ ಮೂಲ ಅಂತ್ಯಗಳನ್ನು ಹುಡುಕಿ ಹೋಗುವ ಕಥಾನಾಯಕರಿಗೂ ವ್ಯತ್ಯಾಸವಿಲ್ಲ. ಇದೊಂದು ಜೈವಿಕ ಅದ್ವೈತ ಸ್ಥಿತಿ.

ತೇಜಸ್ವಿಯವರ ಈ ಶೋಧಕಗುಣ ಹಾಗೂ ಆಧುನಿಕ ವಿಜ್ಞಾನದಲ್ಲಿ ಅವರಿಗೆ ಇರುವ ಶ್ರದ್ಧೆಯು, ಅವರನ್ನು ವಿಜ್ಞಾನದ ಪತ್ತೇದಾರಿ ಅಥವಾ ವಿಜ್ಞಾನದ ಲೇಖಕನನ್ನಾಗಿ ಮಾಡಬೇಕಿತ್ತು. ಆದರೆ ಹಾಗೆ ಆಗಲಿಲ್ಲ. ಯಾಕೆಂದರೆ ಅವರು ಈ ಶೋಧದ ಜತೆಗೆ ಮಾನವ ಬದುಕನ್ನು ಲಗತ್ತಿಸಿಬಿಡುತ್ತಾರೆ. ಬದುಕಿನ ಅರ್ಥಶೋಧದ ದಾರ್ಶನಿಕ ಗುಣವೆ ಅವರೊಬ್ಬ ಥ್ರಿಲ್ಲರ್‌ಗಳ ಲೇಖಕರಾಗದಂತೆ ತಡೆದಿರಬಹುದು. ಮಾನವರಲ್ಲಿ ಅಡಗಿರುವ ಅಪರಿಮಿತ ಚೈತನ್ಯವು ರೂಢಿಗೆ ಬಿದ್ದುಹೋಗಿರುವ ಸಾಂಪ್ರದಾಯಿಕ ಸಮಾಜದಲ್ಲಿ ಸಿಲುಕಿ ಪೂರ್ಣ ಪ್ರಮಾಣದಲ್ಲಿ ಪ್ರಕಟವಾಗುತ್ತಿಲ್ಲ; ಆದ್ದರಿಂದ ಸಮಾಜದ ಅನಿಸಿಕೆಗಳಿಗೆ ಹೆದರದೆ ತಮ್ಮ ಒಳಗಿನ ತುಡಿತದಂತೆ ಕ್ರಿಯಾಶೀಲವಾಗುವ ಬದುಕಿನ ಹಾದಿಯನ್ನು ಆರಿಸಿಕೊಳ್ಳಬೇಕು ಎಂದು ತೇಜಸ್ವಿ ಭಾವಿಸಿದವರು. ಸಮಾಜವು ಅವರ ಕಥನದಲ್ಲಿ ಎದುರಾಳಿಯಾಗಿ ಬರುತ್ತದೆ; ತಲೆಗೆ ಏನಾದರೂ ಹುಚ್ಚು ಹತ್ತಿಸಿಕೊಂಡು ಮನೆಬಿಟ್ಟು 'ಪೋಲಿ' ತಿರುಗುವವರೆ ಅವರ ಕಥನದ ಹೀರೋಗಳು; ಕರ್ವಾಲೊದ ಮಂದಣ್ಣ ಪ್ರಭಾಕರ, ನಿರೂಪಕ, ಪ್ಯಾರಾ; 'ಜುಗಾರಿಕ್ರಾಸ್'ನ ಸುರೇಶ, ಮಾಯಾ ಲೋಕದ ಕರಾಟೆಮಂಜ ಅಥವಾ ಅಪ್ಪಣ್ಣ ಎಲ್ಲ ಇಂತಹವರೆ; ಇಂತಹ ಸಾಹಸಿಕ ಪ್ರವೇಶ ಹುಲಿಯೂರಿನ ಸರಹದ್ದು ಕತೆಯಿಂದಲೇ ಆರಂಭವಾಗುತ್ತದೆ. ಸರಹದ್ದಿನ ಒಳಗೆ ಬದುಕುವುದಲ್ಲ, ಅದನ್ನು ದಾಟುವುದು ಮುಖ್ಯ. ತೇಜಸ್ವಿ ಬರೆಯುವ ಹಕ್ಕಿಗಳ ಕಥನವು ಇಂತಹ ಸರಹದ್ದುಗಳ ಕಲ್ಪನೆಯನ್ನು ಭಗ್ನಮಾಡುವ ಕಾರಣದಿಂದಲೇ ಮತ್ತೆಮತ್ತೆ ಬರುತ್ತದೆ. ಹಾರುವ ಓತಿಯು ಈ ಕಾರಣಕ್ಕಾಗಿ ರೂಪಕವಾಗಿದೆ. ಹಕ್ಕಿಯಂತೆ ಅದು ಹಾರಲಾರದು. ಆದರೆ ತನಗಿರುವ ಎಲ್ಲ ಕಷ್ಟಗಳಲ್ಲೂ ಅದು ಹಾರಲು ಯತ್ನಿಸುವುದು ದೊಡ್ಡ ಸಂಗತಿ. ಇದು ಜೀವವಿಕಾಸದ ಕಥೆಯಲ್ಲ; ಸಮಾಜದಲ್ಲಿ ವ್ಯಕ್ತಿಗಳು ಪಡೆದುಕೊಳ್ಳಬೇಕಾದ ದರ್ಶನ ಎಂದು ಕರ್ವಾಲೊ ಸೂಚಿಸುತ್ತದೆ. ಪ್ರಾಣಿ, ಪಕ್ಷಿ, ಕೀಟ, ಗಿಡ ಮರಗಳ ಮೇಲೆ ಬರೆಯುವ ಕಾರಣ, ತೇಜಸ್ವಿಯವರನ್ನು ಪರಿಸರದ ಲೇಖಕ ಎಂದು ಸಾಮಾನ್ಯವಾಗಿ ಗ್ರಹಿಸಲಾಗಿದೆ. ಈಗ ಪ್ರಚಲಿತ ಇರುವ ಅರ್ಥದಲ್ಲಿ ತೇಜಸ್ವಿ ಪರಿಸರವಾದಿಯಲ್ಲ. ಅವರಿಗೆ ಬೇಟೆಯ ಸೆಳೆತವಿದೆ. ಮಾಂಸಾಹಾರದ ಬಗ್ಗೆ ತಿರಸ್ಕಾರವಿಲ್ಲ. ಅವರ ಕೃತಿಗಳು ಕಟ್ಟಿಕೊಡುವ ಪರಿಸರದಲ್ಲಿ ಜನ ಪ್ರಾಣಿ ಕೀಟ ಪಕ್ಷಿ ನದಿ ಗಿಡ ಮರ ಎಲ್ಲವೂ ಸೇರಿ ಪರಸ್ಪರ ಸಂಘರ್ಷ ಮತ್ತು ಸಹಬಾಳ್ವೆ ಮಾಡುತ್ತಿರುವ ಹೊಸ ಜೀವಸತ್ಯವೊಂದು ನೆಲೆಸಿದೆ. ಕಾರಂತರ ಜ್ಞಾನಶೋಧ ಹಾಗೂ ಕುವೆಂಪು ಅವರ ಅದ್ವೈತ ಕಲ್ಪನೆಯನ್ನು ತೇಜಸ್ವಿ ವಿಶಿಷ್ಟವಾಗಿ ಸಿಂಥೆಸೈಜ್ ಮಾಡಿಕೊಂಡ ರೀತಿಯಿದು.

'ಮಾಯಾಲೋಕ'ದಲ್ಲಿ ನೂರಾರು ಮಾನವ ಪಾತ್ರಗಳು ಬರುತ್ತವೆ. ಅಷ್ಟೇ ದಟ್ಟವಾಗಿ ಹುಂಡುಕೋಳಿಯ ಜೀವನಕ್ರಮ, ಮಂಗ, ಚಿಟ್ಟುಗಿಳಿ, ಮೀನು, ಏಡಿ, ಹಾವು, ಅಳಿಲು, ನವಿಲು, ಕಾಡುಹಂದಿ, ಜೇಡ ಬರುತ್ತವೆ; ಕಥೆ ಶುರುವಾಗುವುದೇ ನಾಯಿಯ ಮೂಲಕ; ದಾಸವಾಳ ಜೊಂಡು ಅಡಕೆ ಮೆಣಸಿನಗಿಡ ಮುಂತಾದ ಸಸ್ಯಜಗತ್ತು ಬರುತ್ತದೆ. ಮಾನವ ಹಾಗೂ ಸಸ್ಯ ಪ್ರಾಣಿಕೀಟಗಳ ಎರಡೂ ಲೋಕಗಳು ಏಕೀಭವಿಸಿದ ಜಗತ್ತು ಇಲ್ಲಿ ಅನಾವರಣ ಆಗುತ್ತದೆ.

ತೇಜಸ್ವಿ ಬರೆಹದ ಜೀವಂತಿಕೆ ಹೊರಬರುವುದು ನಿಸರ್ಗದ ವಿದ್ಯಮಾನಗಳು ಬಂದಾಗ; ಮಾಯಾಲೋಕದಲ್ಲಿ ಬರುವ ಮಲೆನಾಡಿನ ಮಳೆಬರುವ ದೃಶ್ಯದ ವರ್ಣನೆಗಳನ್ನು ಗಮನಿಸಬೇಕು. ಇಲ್ಲೆಲ್ಲ ಕಥನವು ರಮ್ಯಕವಿಯ ಕಾವ್ಯದ ಹಾಗೆ ತನ್ಮಯವಾಗಿ ಮೈಮರೆಯುತ್ತದೆ; ಆದರೆ ಈ ತನ್ಮಯತೆ ಮಾನವ ಸಮಾಜ ಬಂದಾಗ ಕಾಣುವುದಿಲ್ಲ. ಅಲ್ಲೊಂದು ಬಗೆಯ ಬಿರುಸು ಕಾಣುತ್ತದೆ. ನಿಸರ್ಗದ ವಿಷಯದಲ್ಲಿ ಯಥಾಸ್ಥಿತಿವಾದಿ ನಿಲುವನ್ನು ಬಳಸುವ ತೇಜಸ್ವಿ ಕಥನ, ಸಮಾಜದ ವಿಷಯದಲ್ಲಿ ವಿಮರ್ಶಾತ್ಮಕ ಹಾಗೂ ವೈಚಾರಿಕ ನಿಲುವನ್ನು ಬಳಸುತ್ತದೆ; ಪ್ರಾಣಿ ಸಸ್ಯ ಇರುವ ಜಗತ್ತನ್ನು ಆಪ್ತತೆಯಿಂದ ನೋಡಿದರೆ, ಮನುಷ್ಯರು ವಾಸಿಸುವ ಸಮಾಜವನ್ನು ಕಟುವಾಗಿ ಗಮನಿಸುತ್ತದೆ; ತೇಜಸ್ವಿ ಕಥನ ನಡೆವ ಊರುಗಳ ಹೆಸರುಗಳು ಗಮನಿಸಿ. ಹುಲಿಯೂರಿನ ಸರಹದ್ದು;



ಕತೆಯ ಹುಲಿಯೂರು; ಚಿದಂಬರ ರಹಸ್ಯದ ಕೆಸರೂರು; ಮಾಯಾಲೋಕದ ಗೊಂದಲಗೇರಿ (ಇದು ಅಡಿಗರ ಕವನದಲ್ಲಿ ಬರುವ ಗೊಂದಲಪುರದ ನೆರಳೇ?); 'ಮಾಯಾಲೋಕ'ದಲ್ಲಿ ನಿಜವಾಗಿಯೂ ಜನ ವಿಚಿತ್ರ ಗೊಂದಲದಲ್ಲಿ ಬದುಕುತ್ತಾರೆ. ತನ್ನ ಗಂಡನನ್ನು ಮತಾಂತರ ಮಾಡಿದರು ಎಂದು ಬೊಬ್ಬೆಹಾಕುವ ಹೆಂಗಸರು; ಮೋಟರು ಸುಟ್ಟಿದ್ದು ಹೇಗೆಂದು ಅರಿಯದವರು ಮಾಡುವ ನಾನಾ ಊಹೆಗಳು; ಬೇಟೆಯಾಡಿದ್ದು ಕಾಡುಹಂದಿಯೊ ಸಾಕುಹಂದಿಯೊ ಸ್ಪಷ್ಟವಾಗದೆ ಗಲಭೆ ಎಬ್ಬಿಸುವವರು; ನೆಲ ಅಗೆಯುವಾಗ ಸಿಕ್ಕ ಮಡಕೆ ಚಿನ್ನದ ನಾಣ್ಯವಿದ್ದದ್ದೊ ಶವದ ಜತೆ ಹುಗಿದಿದ್ದೊ ಎಂಬ ಊಹಾಪೋಹ ಮಾಡುವವರು. ಎಲ್ಲವೂ ಗೊಂದಲ.

'ಮಾಯಾಲೋಕ'ದಲ್ಲಿ ಹಳ್ಳ ಹಾಗೂ ವಿದ್ಯುತ್ ಹರಿಯುವ ತಂತಿಗಳು ಪಾತ್ರಗಳಾಗಿ ಬರುತ್ತವೆ. ಎರಡು ಸಂಬಂಧವಿಲ್ಲದ ಬಿಂದುಗಳನ್ನು ಸೇರಿಸುವ ಇವು, ಇಲ್ಲಿ ಜನರ ಸಂಬಂಧ ಕಡಿದುಹಾಕುತ್ತವೆ. ಇದೊಂದು ವ್ಯಂಗ್ಯ; ಹಳ್ಳದ ನೀರಿಗಾಗಿ ಎರಡು ಊರುಗಳು ಜಗಳ ಮಾಡುತ್ತವೆ; ತೇಜಸ್ವಿ ಕಥನದ ವಿಶೇಷವೆಂದರೆ, ಪೊಲೀಸು ಕೋರ್ಟು ಆಡಳಿತಶಾಹಿ ಪತ್ರಕರ್ತರು ಕಾರ್ಮಿಕ ಸಂಘಟನೆ, ರೈತ ಸಂಘಗಳು ರಾಜಕೀಯ ಪಕ್ಷಗಳು ಎಲ್ಲ ಸಂಘಟಿತ ವ್ಯವಸ್ಥೆಗಳನ್ನು ಗುಮಾನಿಯಿಂದ ನೋಡುವುದು; ಎಲ್ಲ ಮುಷ್ಕರ ಚಳುವಳಿಗಳನ್ನು ಒಪ್ಪದೆ ಇರುವುದು; 'ಕರ್ವಾಲೊ'ನ ನಾಗರಾಜ ಮತ್ತು ಪೊಲೀಸರು; 'ಜುಗಾರಿಕ್ರಾಸಿ'ನ ಫಾರೆಸ್ಟು ಇಲಾಖೆ; 'ತಬರನ ಕಥೆ'ಯ ತಾಲೂಕು ಕಛೇರಿ; 'ಮಾಯಾಲೋಕ'ದಲ್ಲಿ ಪೊಲೀಸರು, ವಿದ್ಯುತ್ತು, ತಂತಿ ಹಾಗೂ ಅಬಕಾರಿ ಇಲಾಖೆಯ ಅಧಿಕಾರಿಗಳು – ಎಲ್ಲರೂ ಎಲ್ಲವೂ ಅವನತ ಸಮಾಜದ ಸಂಕೇತಗಳು. ಈ ಅವನತ ಸಮಾಜದಲ್ಲಿ ಚಲನೆಯುಂಟುಮಾಡುವುದು ಹೇಗೆ? ಇದೊಂದು ರಾಜಕೀಯ ಮತ್ತು ದಾರ್ಶನಿಕ ಪ್ರಶ್ನೆ.

ಇದಕ್ಕೆ ತೇಜಸ್ವಿ ಸಾಹಿತ್ಯದಲ್ಲಿ ಸುಲಭವೆಂಬಂತೆ ಪ್ರಕಟವಾಗುವ ಪರ್ಯಾಯವೆಂದರೆ ಆ ಸಮಾಜದ ನಾಶ. ಈ ನಾಶವನ್ನು ಯಾರ ಹಿಡಿತಕ್ಕೂ ಸಿಗದೆ ವಿಜೃಂಭಿಸುವ ನಿಸರ್ಗವೇ ಮಾಡಬೇಕು. ಏಕಾಲಜಿಯ ಆವರ್ತನದಲ್ಲಿ ಪ್ರಕೃತಿಯ ದುರ್ದಮ್ಯ ಪ್ರವೃತ್ತಿ ಪ್ರಕಟವಾಗುತ್ತದೆ. ಭೀಕರ ಗಾಳಿ, ಧಾರಾಕಾರ ಮಳೆ, ನಿಯಂತ್ರಿಸಲಾಗದ ಕಾಡ್ಗಿಚ್ಚು ಇತ್ಯಾದಿ. ಇವು ನಾಶ ಹಾಗೂ ಹೊಸಹುಟ್ಟು ಒಟ್ಟೊಟ್ಟಿಗೆ ಇರುವ ಗಳಿಗೆಗಳೂ ಹೌದು; ಇಂತಹ ಗಳಿಗೆಗಳನ್ನು ಹಿಡಿಯುವಲ್ಲಿ ತೇಜಸ್ವಿಯವರ ಬರೆಹದ ದಾರ್ಶನಿಕ ಕಥನಕ್ಕೆ ಆಸಕ್ತಿ. ಮಾಯಾಲೋಕದಲ್ಲಿ ಮಳೆ ಇಂತಹ ಪ್ರಳಯ ಹಾಗೂ ಹೊಸ ಸೃಷ್ಟಿಯ ರೂಪಕವಾಗಿ ಬರುತ್ತದೆ; ತಾನು ಬತ್ತುವ ಮೂಲಕ ಮನುಷ್ಯರ ಸಣ್ಣತನ ಜಗಳಗಳಿಗೆ ಕಾರಣವಾದ ಹಳ್ಳವು, ಕೊನೆಗೆ ತುಂಬಿ ಹರಿಯುತ್ತ ವಿಸ್ಮಯಕ್ಕೆ ಕಾರಣವಾಗುತ್ತದೆ; ಅಡಕೆ ಮರ, ಗದ್ದೆಯ ಮಣ್ಣು ಅದರ ರಭಸದಲ್ಲಿ ಕೊಚ್ಚಿಹೋಗಿ ಹೊಸ ಕಂದರವೊಂದು ಸೃಷ್ಟಿಯಾಗುತ್ತದೆ. ಜತೆಗೆ ಹಳ್ಳವು ಹೊಸನದಿಯಾಗಿ ರೂಪಾಂತರ ಕೂಡ ಪಡೆಯುತ್ತದೆ. ಮನುಷ್ಯರ ಬದುಕಿನ ಚಟುವಟಿಕೆಗಳನ್ನು ನಿರರ್ಥಕತೆಯನ್ನು ತೋರಲು ತೇಜಸ್ವಿ ಇಂತಹ ನಿಸರ್ಗದ ವಿದ್ಯಮಾನಗಳನ್ನು ಉದ್ದೇಶಪೂರ್ವಕವಾಗಿ ತರುತ್ತಾರೆಯೆ? ಹಿಂದೆ ಗುಡ್ಡ ಜರಿಯುವುವಿಕೆ (ನಿಗೂಢ ಮನುಷ್ಯರು), ಕಾಡ್ಗಿಚ್ಚು (ಚಿದಂಬರ ರಹಸ್ಯ) ಬಂದರೆ, ಇಲ್ಲಿ ಬರಗಾಲ ಮತ್ತು ಮಳೆ ಪ್ರವಾಹಗಳು ಬರುತ್ತವೆ. ಮಾನವ ಸಮಾಜಕ್ಕೆ ಎಚ್ಚರ ಮತ್ತು ಅರಿವನ್ನು ಮಾನವೇತರ ಶಕ್ತಿಗಳ ಆಕ್ರಮಣದ ಮೂಲಕ ಒದಗಿಸುವ ಈ ಪರಿಯು ತೇಜಸ್ವಿ ದರ್ಶನದ ವಿಶಿಷ್ಟತೆಯೊ ಅಸಹಾಯಕತೆಯೊ?

ತೇಜಸ್ವಿ ಕಥನವು ಎಲ್ಲ ಬಗೆಯ ವ್ಯವಸ್ಥೆಯಿಂದ ಹೊರಗಿರಲು ಬಯಸುವ, ಬೇರೆಯವರು ಮಾಡಿದ ಚೌಕಟ್ಟುಗಳಲ್ಲಿ ಬದುಕಲು ನಿರಾಕರಿಸುವ, ಸ್ವತಂತ್ರ ಮನಸ್ಸಿನ ವ್ಯಕ್ತಿಗಳಲ್ಲಿ ಜೀವಂತಿಕೆಯನ್ನು ಅರಸುತ್ತದೆ; 'ಕರ್ವಾಲೊ'ದ ಮಂದಣ್ಣ ಪ್ರಭಾಕರ ಪ್ಯಾರ ಇರಬಹುದು; ಮಾಯಾಲೋಕದ ಇಕ್ಬಾಲ್ ಕರಾಟೆ ಮಂಜ, ಅಪ್ಪಣ್ಣಪ್ಪ ಇರಬಹುದು. ಇವರು ಸಂಸಾರದ ಚೌಕಟ್ಟುಗಳಲ್ಲಿ ಸಿಲುಕದವರು. ನಿರಂಕುಶಮತಿಗಳು. ತಮ್ಮ ಪರಿಸರದ ಸಮಾಜವನ್ನು ಬದಲಾಯಿಸುವ ಸಮೂಹದ ನಾಯಕರಲ್ಲ; ಚಲನೆ ಕಳೆದುಕೊಂಡ ಸಮಾಜದಲ್ಲಿ ತಮ್ಮದೇ ಸೃಜನಶೀಲ ಹೊಸ ಹಾದಿಗಳನ್ನು ಹಠದಿಂದ ಹುಡುಕಿಕೊಳ್ಳುವವರು; ತೇಜಸ್ವಿ ಸಾಹಿತ್ಯ ಸೃಜನಶೀಲ ಸಮಾಜವನ್ನು ಚಿತ್ರಿಸುವುದಿಲ್ಲ; ಜಡಸಮಾಜದಲ್ಲಿ ಸೃಜನಶೀಲ ವ್ಯಕ್ತಿಗಳನ್ನು ಶೋಧಿಸುತ್ತಾರೆ. ಈ ಅರ್ಥದಲ್ಲಿ ವ್ಯಕ್ತಿ ವಿಶಿಷ್ಟವಾದದ ಬೇರೆಬೇರೆ ಹುಡುಕಾಟದ ವಿಭಿನ್ನ ಆವೃತ್ತಿಗಳ ಹಾಗೆ ಅವರ ಕೃತಿಗಳಿವೆ. ದಲಿತ ಲೇಖಕರು ಸಮಾಜದ ಆಕ್ರಮಣಕ್ಕೆ ಸಿಲುಕಿದ ಮಾನವರನ್ನು ಕಾಣಿಸಿದರೆ, ತೇಜಸ್ವಿ ಆಕ್ರಮಣಕ್ಕೆ ಸಿಲುಕದೆ ತಪ್ಪಿಸಿಕೊಂಡು ಸ್ವತಂತ್ರ ಚೈತನ್ಯ ರೂಪಿಸಿಕೊಂಡ ಸ್ವತಂತ್ರ ವ್ಯಕ್ತಿಗಳನ್ನು ಕಾಣಿಸುತ್ತಾರೆ. ದೇವನೂರರಲ್ಲಿ ('ಕುಸುಮಬಾಲೆ') ಆಧುನಿಕ ಶಿಕ್ಷಣ ವೈಚಾರಿಕತೆಗೆ ತೆರೆದುಕೊಂಡವರು ಸಾಂಪ್ರದಾಯಿಕ ದಲಿತರ ಮುಂದೆ ವ್ಯಂಗ್ಯವಾಗಿ ಚಿತ್ರಣಗೊಳ್ಳುತ್ತಾರೆ; ಇದನ್ನು ಅನಂತಮೂರ್ತಿ ಅವರಲ್ಲೂ ('ಸೂರ್ಯನ ಕುದುರೆ') ಕಾಣಬಹುದು. ತೇಜಸ್ವಿಯವರಲ್ಲಿ ಆಧುನಿಕ ಮನಸ್ಸಿನ ಜನರೇ ಪರಿಸರದಲ್ಲಿ ಕೊಂಚವಾದರೂ ಚಲನಶೀಲತೆ ತರುವವರು. ಆದರೆ ಇದರಿಂದ ಸಾಂಪ್ರದಾಯಿಕ ಜೀವನಕ್ರಮದಲ್ಲೂ ಇರಬಹುದಾದ ಚೈತನ್ಯಶೋಧವನ್ನು ಮಾಡುವುದಕ್ಕೆ ತೇಜಸ್ವಿ ಸಾಹಿತ್ಯಕ್ಕೆ ಸಾಧ್ಯವಾಗುವುದಿಲ್ಲ. ಇದು ಮಾಯಾಲೋಕದ ಜೀವನದರ್ಶನದ ಮಿತಿ ಕೂಡ.

ಮಾಯಾಲೋಕದಲ್ಲಿ ಸಾಮಾನ್ಯ ಕ್ಷುದ್ರ ಎನಿಸುವ ವಿವರಗಳ ಮೂಲಕ ಬದುಕಿನ ಕಥನವನ್ನು ಕಟ್ಟುವ ಪ್ರಯೋಗವಿದೆ; ಮೆಣಸಿಕಾಯಿ ಬೆಳೆಯಲು ಹಳ್ಳಕ್ಕೆ ನೀರುಕಟ್ಟುವ ಕ್ರಿಯೆಯು ವಿಸ್ತಾರವಾಗಿ ಬರುವುದನ್ನು ಗಮನಿಸಬೇಕು. ಇದು ಉದ್ದೇಶಪೂರ್ವಕವಾಗಿದೆ. ಮಾಯಾಲೋಕವನ್ನು ಸಣ್ಣ ಸಂಗತಿಗಳ ಮಹಾಕಾವ್ಯ ಎನ್ನಬಹುದು. ಕಾದಂಬರಿಯಲ್ಲಿ ನಾಯಕ ಇಲ್ಲ; ಬದಲಿಗೆ ನೂರಾರು ಪಾತ್ರಗಳಿವೆ. ಕೆಲವು ಪಾತ್ರಗಳ ಮೂಲಕ ಬದುಕನ್ನು ಕಾಣುವುದು ಸರಿಯಲ್ಲ ಎಂಬ ಅರಿವಿನಿಂದ ಈ ಕಥನ ವಿನ್ಯಾಸ ಹುಟ್ಟಿದೆಯೇ? ಕನ್ನಡದಲ್ಲಿ ದೈನಿಕ ಸಾಮಾನ್ಯ ವಿವರಗಳ ಮೂಲಕ ಬದುಕನ್ನು ಹಿಡಿದುಕೊಡುವ ಯತ್ನವನ್ನು 'ಮರಳಿಮಣ್ಣಿಗೆ', 'ಮದುಮಗಳು' 'ಒಡಲಾಳ', 'ಗಂಗಾಮಾಯಿ', 'ಗ್ರಾಮಾಯಣ' ಮುಂತಾದ ಕಾದಂಬರಿಗಳು ಈಗಾಗಲೇ ಯಶಸ್ವಿಯಾಗಿ ಮಾಡಿವೆ; ಇವಕ್ಕೆ ಹೋಲಿಸಿದರೆ ಇಲ್ಲಿನ ಸಾಮಾನ್ಯ ವಿವರಗಳ ಲಯಗಾರಿಕೆ ದೊಡ್ಡ ಯಶಸ್ಸು ಪಡೆದಿದೆ ಅನಿಸುವುದಿಲ್ಲ; ವಿಶೇಷವೆಂದರೆ, ಈ ಸಣ್ಣ ವಿವರಗಳು ಹಾದಿಬೀದಿಯಲ್ಲಿ ನಡೆಯುವವು; ಮನೆಯೊಳಗಲ್ಲ. ಮನೆಯೊಳಗಿನ ಜಗತ್ತಿನ ವಿಷಯ ಬಂದಾಗ ತೇಜಸ್ವಿ ಅಷ್ಟು ಆಸಕ್ತರೂ ಅಲ್ಲ, ಸೂಕ್ಷ್ಮರೂ ಅಲ್ಲ. ಅವರ ಬಹುತೇಕ ಪಾತ್ರಗಳಿಗೆ ಕೌಟುಂಬಿಕ ಜಗತ್ತೇ ಇಲ್ಲ ಎಂಬ ಅಂಶವನ್ನು ಇಲ್ಲಿ ಪ್ರಸ್ತಾಪಿಸಬೇಕು.

ತೇಜಸ್ವಿ ಬರೆಹದ ಮೊದಲ ಘಟ್ಟದಲ್ಲಿ ಸಾಮಾಜಿಕ ಬದುಕಿನಿಂದ ಅನುಭವ ಲೋಕ ಸೃಷ್ಟಿಯಾಗುತ್ತಿತ್ತು; ಎರಡನೆಯ ಘಟ್ಟದಲ್ಲಿ ಇಲ್ಲಿಂದ ಅನುಭವದ ಒಳಹರಿವು ಕಡಿಮೆಯಾದ ಕಾರಣ, ಕಾಡುಮೇಡು ಹಾಗೂ ವಿಜ್ಞಾನದ ಓದಿನಿಂದ ಅದು ಬರ

ತೊಡಗಿತು. ಬರೆಹಕ್ಕೆ ಬೇಕಾದ ಅನುಭವ ಹಾಗೂ ತಿಳಿವಿನ ಕೊರತೆ ತುಂಬಿಕೊಳ್ಳಲು ಹೊಸ ಉಪಾಯಗಳನ್ನು ತೇಜಸ್ವಿ ಕಥನ ಉದ್ದಕ್ಕೂ ಎಚ್ಚರಿಕೆಯಿಂದ ಕಂಡು ಕೊಳ್ಳುತ್ತಲೇ ಬಂದಿದೆ. ಈ ಹೊಸ ಅನುಭವ ಹಾಗೂ ತಿಳಿವಿನ ಹರಿವು ಅವರ ಕಥನಕ್ಕೆ ಹೊಸ ದೃಷ್ಟಿಕೋನಗಳನ್ನು ಪಡೆದುಕೊಳ್ಳಲೂ ಕಾರಣವಾಯಿತು; ಹೀಗಾಗಿ 'ಹೊಸದಿಗಂತದೆಡೆಗೆ' ಮುನ್ನುಡಿಯಲ್ಲಿ ಶುರುವಾದ ಈ ಶೋಧ ಇನ್ನೂ ನಿಂತಿಲ್ಲ. 'ಮಾಯಾಲೋಕ'ದ ಮುನ್ನುಡಿಯಲ್ಲಿ ಬರುವ ಈ ಮಾತನ್ನು ಗಮನಿಸಬೇಕು: ''ನಮ್ಮೆದುರು ಬದಲಾವಣೆಗಳ ಮಹಾಪೂರವೇ ಹರಿಯುತ್ತಿದೆ. ಹೊಸನುಡಿಗಟ್ಟುಗಳ ಹೊಸ ಉಕ್ತಿಭಂಗಿ ಹೊಸ ಅಭಿವ್ಯಕ್ತಿ ವಿಧಾನಗಳ ಬಗ್ಗೆ ನಾವೀಗ ಗಮನಹರಿಸಿ ಹೊಸದಿಗಂತಗಳತ್ತ ಅನ್ವೇಷಣೆ ಹೊರಡಬೇಕಿದೆ.''



ಪ್ರಶ್ನೆಯೆಂದರೆ ತೇಜಸ್ವಿ ಕಥನವು ಮಾಡಿಕೊಂಡು ಬಂದಿರುವ ಈ ಅನ್ವೇಷಣೆಗೆ ಮಾಯಾಲೋಕದಲ್ಲಿ ಸಿಕ್ಕಿರುವ ಯಶಸ್ಸು ಎಂತಹುದು? ಮಾಯಾಲೋಕವನ್ನು ಓದುವಾಗ ತೇಜಸ್ವಿ ಕಥನದ ಯಶಸ್ಸಿಗಿಂತ ಅದು ಹಾಯುತ್ತಿರುವ ಬಿಕ್ಕಟ್ಟುಗಳೆ ಎದ್ದು ಕಾಣುತ್ತವೆ. ಅದಕ್ಕೆ ತನ್ನ ಹಳೆಯ ಪಾತ್ರಗಳಿಂದ, ಶೈಲಿಯಿಂದ ವಾಕ್ಯ ರಚನೆಗಳಿಂದ ಹಾಸ್ಯಗಳಿಂದ ತಪ್ಪಿಸಿಕೊಳ್ಳಲು ಆಗುತ್ತಿಲ್ಲ; ಈ ರಿಪೀಟೇಶನ್ ಮತ್ತು ಅದರಿಂದ ಹೊರಬರಲು ಮಾಡುವ ಸೆಣಸಾಟ 'ಜುಗಾರಿಕ್ರಾಸಿ'ನಲ್ಲೆ ಶುರುವಾಗಿತ್ತು. ತೇಜಸ್ವಿಯವರ ಬರೆಹದ ಮಾಂತ್ರಿಕತೆ ಈಗಾಗಲೇ ಕಳೆದುಹೋಗಿದೆಯೇ? ಮಾಯಾಲೋಕದಲ್ಲಿ ಅನೇಕ ಕಡೆ ಓವರ್‌ರೈಟಿಂಗ್ ಇದೆ. ಇದು ತೇಜಸ್ವಿ ಕಥನದ ಜಾಯಮಾನಕ್ಕೆ ವಿರುದ್ಧವಾದುದು. ಬಹುಶಃ ಅವರ ಕಥನ ಕ್ರಮವು ದಣಿದಿದೆ. ಅವರಲ್ಲಿ ಸಮೃದ್ಧವಾಗಿ ಇರುತ್ತಿದ್ದ ವೈಚಾರಿಕ ವೈನೋದದ ಶೈಲಿಯು ಮಂಕಾಗಿ, ಒಂದು ಬಗೆಯ ವಿಷಾದ ಸಿನಿಕತೆ ಆವರಿಸಿದಂತಿದೆ.

ಜಾಗತೀಕರಣವನ್ನು ಅರ್ಥಮಾಡಿಕೊಳ್ಳುವಲ್ಲಿ ಹಾಗೂ ಅದರಿಂದ ಪಾರಾಗುವಲ್ಲಿ ಉಂಟಾಗಿರುವ ತಾತ್ವಿಕ ರಾಜಕೀಯ ಗೊಂದಲಗಳ ಪರಿಣಾಮವಾಗಿ ಈ ಬಗೆಯ ಸಾಹಿತ್ಯಕ ಬಿಕ್ಕಟ್ಟುಗಳು ಹುಟ್ಟಿವೆಯೇ? ಕುವೆಂಪುಯವರ 'ಅರಮನೆ', ಅನಂತಮೂರ್ತಿ ಅವರ 'ದಿವ್ಯ', ಕಂಬಾರರ 'ಚಕೋರಿ' ಓದುವಾಗಲೂ ಈ ಬಿಕ್ಕಟ್ಟು ಗೋಚರವಾಗುತ್ತದೆ. ಸಾಹಿತ್ಯದಲ್ಲಿ ಹೊಸ ಆಕೃತಿಗಾಗಿ ನಡೆಯುವ ಹೋರಾಟ ಎಂದರೆ ಹೊಸ ಭಾಷೆ ಹೊಸ ಚಿಂತನೆಗಾಗಿ ನಡೆಯುವ ಹೋರಾಟ ಕೂಡ. ಅಂತಿಮವಾಗಿ ಲೇಖಕರ ಬರೆಹದ ಬಿಕ್ಕಟ್ಟುಗಳ ಮೂಲ ಎಲ್ಲಿದೆ? ಅನುಭವದ ಕೊರತೆಯೇ? ಕನ್ನಡದಲ್ಲಿ ಹೊಸ ಲೇಖಕರಿಗೆ ಅನುಭವ ಹಾಗೂ ಗ್ರಾಮೀಣ ವಿಶಿಷ್ಟ ಭಾಷೆಯ ಮಂಡನೆಯ ತವಕವಿದೆ. ಕಲೆಯ ಸಿದ್ಧಿಯಿಲ್ಲ. ದೊಡ್ಡ ಲೇಖಕರಿಗೆ ಕಲೆಯಿದೆ. ಆದರೆ ಅನುಭವದ ತೀವ್ರತೆ, ಹೊಸ ಅನುಭವಗಳ ಒಳಹರಿವು ನಿಂತುಹೋಗಿದೆ.

''ವಿಶ್ವವಿದ್ಯಾಲಯದ ಪದವೀಧರನಾದ ಬರಹಗಾರನಾದ ನಾನು ಹಳ್ಳಿಯಲ್ಲಿ ಒಂದು ವಿಚಿತ್ರ ಸಂದರ್ಭದಲ್ಲಿ ಸಿಲುಕಿಕೊಂಡೆ. ನಮ್ಮ ವಿದ್ಯಾಭ್ಯಾಸ ಕ್ರಮ, ಅದರ ತಿರುಳು ಮತ್ತು ಮಾಧ್ಯಮ ಇವು ಭಾರತೀಯ ಪರಿಸ್ಥಿತಿಯಲ್ಲಿ ಎಂಥ ಅಸಂಬದ್ಧವಾಗಿವೆ ಎಂಬುದು ಅರಿವಾಯ್ತು. ಈ ನಿಗೂಢವಾದ ಅಪರಿಚಿತ ಭಾರತದ ಬಗ್ಗೆ ಕಣ್ಣು ತೆರೆಸಿದ್ದು ಲೋಹಿಯಾ'' ಎಂದು ತೇಜಸ್ವಿ 'ಅಬಚೂರಿನ ಪೋಸ್ಟಾಫೀಸು' ಮುನ್ನುಡಿಯಲ್ಲಿ ಹೇಳಿಕೊಂಡಿದ್ದರು; ದಲಿತರಿಗೆ ಆಧುನಿಕ ಶಿಕ್ಷಣ ನಗರವಾಸಗಳು ತಮ್ಮ ಹಳ್ಳಿಯ ಕ್ರೌರ್ಯದರ್ಶನ ಮಾಡಿಸಿದರೆ, ಪೇಟೆಯಿಂದ ಹೋದ ತೇಜಸ್ವಿಯವರಿಗೆ ಆಧುನಿಕ ವಿದ್ಯಾಭ್ಯಾಸ ಅಸಂಬದ್ಧತೆಯನ್ನು ಹಾಗೂ ಮಧ್ಯಮವರ್ಗದ ಬದುಕಿನ ಟೊಳ್ಳನ್ನು ತೋರಿಸಿದವು; 'ಅವನತಿ', 'ನಿಗೂಢ ಮನುಷ್ಯರು' ಕತೆಗಳಲ್ಲಿ, ಮಾನವ ಬದುಕಿನ ನಿಗೂಢಗಳ ಶೋಧಗಳತ್ತ ಕೊಟ್ಟ ಗಮನವನ್ನು ನಂತರ, ತೇಜಸ್ವಿ ಕಥನವು ಏಕಾಲಜಿಯ ನಿಗೂಢಗಳತ್ತ ತಿರುಗಿತು. ಪ್ರಶ್ನೆಯೆಂದರೆ ಅವರು ಹುಡುಕಬಯಸುವ ಝರಿಯ ಮೂಲ, ನದಿಯ ಮಿಲನ ಇತ್ಯಾದಿ ಹೊಸನಿಗೂಢಗಳು, ಯಾವ ವರ್ಗದ ಹವ್ಯಾಸಗಳು? ಈ ನಿಗೂಢಗಳ ಶೋಧದಲ್ಲಿ ಪ್ರಾಣಿಗಳ ಜೀವನಕ್ರಮ ಅಥವಾ ನದಿಯ ಹರಿಯುವಿಕೆಗಳ ಹಾಗೆ ಮಾನವ ಬದುಕಿನ ರಹಸ್ಯಗಳನ್ನು ಒಳಗೊಳ್ಳುವಿಕೆಯು ಕಡಿಮೆಯಾಗುತ್ತ ಬಂದಿದೆಯೇ? ಅವರ ಕಾದಂಬರಿಯಲ್ಲಿ ನಿರೂಪಕನ ಇಷ್ಟಾನಿಷ್ಟಗಳ ಹೊರಗಿರುವ ಪಾತ್ರಗಳಿಗೆ ದೊಡ್ಡ ಅಸ್ತಿತ್ವವೇ ಇಲ್ಲ ಎಂದು ಯಾಕನಿಸುತ್ತದೆ? ಯಾಕೆ ತೇಜಸ್ವಿಯವರಲ್ಲಿ ಸ್ವತಂತ್ರವಾಗಿ ಶೋಧಕ್ಕಾಗಿ ಒಡ್ಡಿಕೊಂಡ ದಿಟ್ಟ ಮಹಿಳೆಯರು ಕಡಿಮೆ? 'ಮಾಯಾಲೋಕ'ದಲ್ಲಿ ಗಂಡನನ್ನು ನಿಯಂತ್ರಿಸುವ ರುಕ್ಮಿಣಿ, ಹಂದಿ ಸಾಕಿದ ಬಾಯಮ್ಮ ಮುಂತಾದವರು ಬರುತ್ತಾರೆ. ಆದರೆ ಎಲ್ಲರೂ ರೇಖಾಚಿತ್ರದ ಮಾದರಿಗಳು. 'ಕಿರುಗೂರಿನ ಗಯ್ಯಾಳಿಗಳು' ಕೃತಿಯ ಹೆಂಗಸರ ದಿಟ್ಟತನವು ತನ್ನ ತಮಾಷೆಯಿಂದ ಹಾಸ್ಯಕಥೆಯಂತೆ ಉಳಿದುಬಿಡುತ್ತದೆ. 'ಜುಗಾರಿಕ್ರಾಸಿ'ನಲ್ಲಿ ಬರುವ ಒಂದು ಸಾಂಕೇತಿಕ ಪಾತ್ರ ಬಿಟ್ಟರೆ ತೇಜಸ್ವಿ ಕಥನದ ಯಾವ ಶೋಧದಲ್ಲಿಯೂ ಸ್ತ್ರೀಯಿಲ್ಲ; 'ಅವನತಿ' ಕತೆಯ ಗೌರಿ ಬಿಟ್ಟರೆ, ಧೀಮಂತವಾದ ತುಂಬಿಕೊಂಡ ಮಹಿಳೆಯರು ಕಥನದಲ್ಲಿ ಕಡಿಮೆ; ಕನ್ನಡದಲ್ಲಿ 'ಇಂದಿರಾಬಾಯಿ'ಯ (೧೮೯೯) ಗುಲ್ವಾಡಿಯವರಿಂದ ಹಿಡಿದು ಕುವೆಂಪು, ದೇಸಾಯಿ, ದೇವನೂರು, ಮೊಕಾಶಿ, ಕಾರಂತ ಎಲ್ಲರೂ ಮನೆಯೊಳಗಿನ ಜೀವನ ಲಯವನ್ನು ಹಿಡಿಯುವವರು; ಆ ಕಾರಣಕ್ಕೆ ಕನ್ನಡ ಕಾದಂಬರಿಯು ಸ್ತ್ರೀಕೇಂದ್ರಿತ ಕಥನ. ತೇಜಸ್ವಿಯವರಲ್ಲಿ ಮಹಿಳೆಯರ ಗಾಢಲೋಕ ಇಲ್ಲದಿರುವಿಕೆಗೂ, ಕುಟುಂಬ ಮನೆಯ ಒಳಗಿನ ನಿತ್ಯ ಬದುಕಿನ ಚಟುವಟಿಕೆಗಳ ಲಯವನ್ನು ಅವರ ಕಥನ ಬಿಟ್ಟುಕೊಟ್ಟಿರುವುದಕ್ಕೂ, ಮನೆಯಿಂದ ಹೊರಗೆ ತಿರುಗಾಡುವವರಲ್ಲಿ ಚೈತನ್ಯಶೀಲತೆ ಅರಸುವುದಕ್ಕೂ ಒಳಸಂಬಂಧವಿದೆ. ಅವರ ಕಥನದ ಹೀರೋಗಳ ಕೌಟುಂಬಿಕ ಸಂಬಂಧಗಳು ಬಹಳ ತೆಳು; ತೇಜಸ್ವಿಗೆ ತಮ್ಮ ಕಥನದಲ್ಲಿ ಹಾಗೂ ಶೋಧದಲ್ಲಿ ಗಂಡುಪ್ರಧಾನ ಮನೋಭಾವದಿಂದ ಹೊರಬರಲು ಆಗುತ್ತಿಲ್ಲವೇ?

ತೇಜಸ್ವಿ ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನದ ಮೇಲೆ ಸೆಳೆತ ಹಾಗೂ ಮೋಹವುಳ್ಳವರು; ಇದು ಕೆಲಮಟ್ಟಿಗೆ ಅವರನ್ನು ಪಶ್ಚಿಮ ಆಧುನಿಕತೆಯನ್ನು ಅವಿಮರ್ಶಾತ್ಮಕವನ್ನಾಗಿ ನೋಡುವಂತೆ ಮಾಡಿತು. ಈ ವಿಜ್ಞಾನಶೋಧ ಮತ್ತು ಅವುಗಳ ಬಳಕೆಗಳ ಹಿಂದೆ ಇರುವ ಪಶ್ಚಿಮದ ಆರ್ಥಿಕ ರಾಜಕಾರಣದ ಬಗ್ಗೆ ಅವರು ಗಮನ ಕೊಡುವುದಿಲ್ಲ. ಸಾಮ್ರಾಜ್ಯಶಾಹಿ, ವಸಾಹತುಶಾಹಿ – ಎಂಬ ಪರಿಭಾಷೆಯನ್ನೆ ಅವರು ಅನುಮಾನಿಸುತ್ತಾರೆ. ಆದರೆ ಈ ಶಾಹಿಗಳ ರಾಜಕಾರಣದ ಬಗ್ಗೆ ಅವರು ಬಹಳ ಸಲ ಸರಳವಾಗಿ ಮಾತನಾಡುತ್ತಾರೆ ಎಂದೂ ಅನಿಸಿದೆ; 'ತಬರನ ಕತೆ'ಯು ಬ್ರಿಟಿಶರ ಕಾಲದ ಆಡಳಿತದ ಬಗ್ಗೆ ಸದಭಿಪ್ರಾಯ ಹುಟ್ಟಿಸುವುದನ್ನು ಗಮನಿಸಬೇಕು. ಎಲ್ಲ ಬಗೆಯ ಸಂಘಟಿತರೂಪದ ಚಳುವಳಿಗಳ ಬಗ್ಗೆ ಅವು ವ್ಯಕ್ತಿವಿಶಿಷ್ಟತೆಯನ್ನು ಮನ್ನಿಸುವುದಿಲ್ಲವೆಂದೂ ಏನೋ ಅವರಿಗೆ ಅನುಮಾನ. ಎಂತಲೇ ಕಮ್ಯುನಿಸ್ಟರು ಹಾಗೂ ಚಳುವಳಿಗಾರರು ಅವರ ಬರೆಹದಲ್ಲಿ ಹಾಸ್ಯಾಸ್ಪದ ಪಾತ್ರಗಳು; ಮಾಯಾಲೋಕದ ಆರಂಭದಲ್ಲಿ ೨೧ನೇ ಶತಮಾನದ ಸವಾಲುಗಳನ್ನು ಮುಖಾಮುಖಿ ಮಾಡಬೇಕಾದ ಮಾತುಗಳಿವೆ. ಆದರೆ ಅದರಲ್ಲಿ ಸ್ಥಳೀಯ ಎನಿಸುವ ಬದುಕಿನ ಹಿಂದಣ ಅಂತರರಾಷ್ಟ್ರೀಯ ರಾಜಕಾರಣದ ಚೌಕಟ್ಟೇ ಗೈರುಹಾಜರು ಅನಿಸುತ್ತದೆ. ಇದು ತೇಜಸ್ವಿ ಜಾಗತೀಕರಣ ಮುಖಾಮುಖಿಯ ಒಂದು ವಿಧಾನದ ಸಮಸ್ಯೆಯೆ? ತೇಜಸ್ವಿಯವರ ಬರೆಹದಲ್ಲಿ ಯಾಕೆ ಸಮಾಜದ ವರ್ಗವೈರುಧ್ಯಗಳು, ತೀವ್ರ ಪ್ರಶ್ನೆಗೆ ಒಳಗಾಗುವುದಿಲ್ಲ? ಒರಟಾಗಿ ಕೇಳುವುದಾದರೆ, ಕಾಫಿ ತೋಟಗಳಲ್ಲಿ ಕೆಲಸ ಮಾಡುವ ಗುಳೆಬಂದ ಜನ ಬದುಕುವ ಲೈನುಗಳಲ್ಲಿ ಅವರ ಬದುಕನ್ನು ಹಿಡಿಯಲು ತೇಜಸ್ವಿ ಬರೆಹ ಯಾಕೆ ಹಿಂಜರಿಯುತ್ತದೆ? ಯಾಕೊ ಮೊದಲ ಓದಿನಲ್ಲಿ ಮಾಯಾಲೋಕವು ತೇಜಸ್ವಿಯವರ ಯಶಸ್ಸಿಗಿಂತ ಬಿಕ್ಕಟ್ಟುಗಳನ್ನೇ ಕಾಣಿಸುತ್ತಿದೆ ಅನಿಸುತ್ತದೆ.

ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬ ಬಳ್ಳಾರಿ ಜಿಲ್ಲೆ



# ಮನೆಗೆಲಸದವಳ ಆತ್ಮಚರಿತ್ರೆ

**ಮ**ಕ್ಕಳ ಮೇಲೆ ಎಷ್ಟೂ ಮಮತೆ ಇಲ್ಲದ ತಾಯಿ; ತಂದೆಯ ಜವಾಬ್ದಾರಿ ನಿರ್ವಹಿಸಲಾಗದ ನರಸತ್ತ ಅಪ್ಪ; ಹೆಂಡತಿ ಮಕ್ಕಳ ಮೇಲೆ ಎಷ್ಟೂ ಪ್ರೀತಿ ಇರದ ಅಯೋಗ್ಯ ಗಂಡ– ಒಂದು ಹೆಣ್ಣಿನ ಬಾಳು ಮೂರಾಬಟ್ಟೆಯಾಗಲು ಇದಕ್ಕಿಂತ ಇನ್ನೇನು ಬೇಕು? ಬಂಗಾಳದ ಹುಡುಗಿ ಬೇಬಿ ಹಾಲ್ದಾರಳ ಬದುಕಿನಲ್ಲಿ ಬರೆದದ್ದೂ ಇಷ್ಟೇ.

ಸೈನ್ಯದಲ್ಲಿದ್ದ ಅಪ್ಪ ನಿವೃತ್ತಿಯ ನಂತರ ಲಾರಿ ಡ್ರೈವರ್ ಆದ. ಜೊತೆಗೆ ಕುಡಿತದ ದಾಸನೂ ಆದ. ಬಂದ ಸಂಬಳದಲ್ಲಿ ಮನೆ ಖರ್ಚಿಗೆ ದುಡ್ಡು ಕೊಟ್ಟ ದಿನಗಳಿಗಿಂತ ಕೊಡದ ದಿನಗಳೇ ಹೆಚ್ಚು. ಕಿತ್ತು ತಿನ್ನುತ್ತಿದ್ದ ಬಡತನ, ಗಂಡನ ಹೊಡೆತ-ಬಡಿತಗಳನ್ನು ತಾಳಲಾರದೆ ಬೇಬಿಯ ತಾಯಿ, ಆಕೆಯ ಕೈಗೆ ಹತ್ತು ಪೈಸೆಯನ್ನಿಟ್ಟು, ಅಂಗಡಿಗೆ ಹೋಗಿ ಬರುತ್ತೇನೆ ಎಂದು ಹೇಳಿ ಕಿರಿಮಗನನ್ನು ಬಗಲಲ್ಲಿ ಇರಿಸಿಕೊಂಡು ಹೋದವಳು ಮತ್ತೆ ಬಾರಲೇ ಇಲ್ಲ. ಅಂಗೈಯಲ್ಲಿ ಹತ್ತು ಪೈಸೆಯನ್ನು ಇರಿಸಿಕೊಂಡು, ಅಕ್ಕ, ಅಣ್ಣ, ತಮ್ಮಂದಿರೊಂದಿಗೆ ಅಳುತ್ತಾ ಅವ್ವನ ದಾರಿ ಕಾಯ್ದುದಷ್ಟೇ ಬಂತು. ಅವ್ವ ಇಲ್ಲದ ತಬ್ಬಲಿಗಳ ಕೈಗೆ ಒಂದಷ್ಟು ಕಾಸನ್ನಿಟ್ಟು, ''ಅಡಿಗೆ ಮಾಡಿಸ್ಕಂಡು ಉಂಡು ಸಾಲಿಗೆ ಹೋಗ್ರಿ'' ಎಂದು ಹೇಳಿ ಅಪ್ಪ ಊರು ಬಿಟ್ಟ.

ಹಾಗೋ ಹೀಗೋ ಅಕ್ಕನ ಮದುವೆಯಾಯಿತು. ಒಂದಿಷ್ಟು ದೊಡ್ಡವನಾದ ಅಣ್ಣ ದೊಡ್ಡಪ್ಪನ ಮನೆ ಸೇರಿಕೊಂಡ. ತಮ್ಮನನ್ನು ಕರೆದುಕೊಂಡು ಬೇಬಿ ತಂದೆಯ ಬಳಿಗೆ ಬಂದಳು. ಆ ವೇಳೆಗಾಗಲೇ ಅಪ್ಪ ಎರಡನೇ ಮದುವೆಯಾಗಿದ್ದ. ಮಲತಾಯಿಗೆ ಅಪ್ಪ - ಮಗಳ ಸಂಬಂಧದ ಮೇಲೆಯೇ ಸಂಶಯ. ಈ ವಿಷಯ ಕುರಿತಂತೆ ಮನೆಯಲ್ಲಿ ದಿನವೂ ಲಟಾಪಟಿ, ಕಟಿಪಿಟಿ. ಇವೆಲ್ಲವುಗಳ ನಡುವೆಯೇ ಬೇಬಿಗೆ ಹದಿಮೂರು ವರ್ಷಗಳಾದವು. ಹಾಲುಗಲ್ಲದ ಹುಡುಗಿಗೆ, ಆಕೆಯ ಅಪ್ಪ ಕೈಗೆ ಸಿಕ್ಕ ಹುಡುಗನನ್ನು ಹಿಡಿದು, ಅವನ ಪೂರ್ವಾಪರ ವಿಚಾರಿಸದೆ, ಮದುವೆ ಮಾಡಿಯೇಬಿಟ್ಟ. ಆಗ ಬೇಬಿ ಕೇವಲ ಹಾಲುಗಲ್ಲದವಳಷ್ಟೇ ಆಗಿರಲಿಲ್ಲ, ಪಾಪದ ಆಕೆಗೆ ಮದುವೆ ಎಂದರೆ ಏನು ಎನ್ನುವುದೂ ತಿಳಿದಿರಲಿಲ್ಲ. ಮದುವೆ ಎಂದರೆ 'ಹೊಸ ಬಟ್ಟೆ, ಸೊಗಸಾದ ಊಟ, ಲೈಟಿನ ಬೆಳಕಿನಲ್ಲಿ ಕೇರಿಯ ಹುಡುಗರು-ಹುಡುಗಿಯರೊಂದಿಗೆ ಕಣ್ಣುಮುಚ್ಚಾಲೆ ಆಟ' ಎಂದೇ ಅವಳು ತಿಳಿದುಕೊಂಡಿದ್ದಳು. ತನ್ನ ಮದುವೆಯ ಹಿಂದಿನ ರಾತ್ರಿ ಅವಳು ಮಾಡಿದುದೂ ಅದೇ.

ಮದುವೆಯ ನಂತರ ಬೇಬಿಯ ಬದುಕೇನೂ ಬದಲಾಗಲಿಲ್ಲ. ಕಾದ ಎಣ್ಣೆಯ ಕೊಪ್ಪರಿಗೆಯಿಂದ ಉರಿವ ಒಲೆಯೊಳಕ್ಕೆ ಅವಳು ಬಿದ್ದಳಷ್ಟೇ. ಅವಳ ದುಃಖ, ಕಷ್ಟಗಳು ಕಡಿಮೆಯಾಗಲಿಲ್ಲ. ಬದಲಾಗಿ ಹೆಚ್ಚಾದವು. ಆಕೆಯ ಗಂಡ, ಶಂಕರ್, ಕೈತುಂಬ ದುಡಿಯುತ್ತಿದ್ದರೂ, ಖರ್ಚಿಗೆಂದು ಬೇಬಿಗೆ ಐದು ಪೈಸೆ ಕೊಟ್ಟವನಲ್ಲ. ಅಷ್ಟೇ ಏಕೆ, ಅಡುಗೆ ಮಾಡಲು ಅಕ್ಕಿಯನ್ನು ಅಳೆದುಕೊಡುತ್ತಿದ್ದ ಭೂಪ. ಹೀಗಾಗಿ ಮದುವೆಯ ಹೆಣ್ಣು ತೊಡುತ್ತಿದ್ದ ಶಂಖದ ಬಳೆ ಅಥವಾ ಸಿಂಧೂರ (ಕುಂಕುಮ) ಕೊಳ್ಳಲೂ ಬೇಬಿಯ ಬಳಿ ಕಾಸಿರುತ್ತಿರಲಿಲ್ಲ. ಪ್ರತಿದಿನ ಅಡುಗೆ ಮಾಡುವಾಗ ಒಂದು ಮುಷ್ಟಿ ಅಕ್ಕಿಯನ್ನು ಎತ್ತಿ ಇಟ್ಟು, ಅದನ್ನೇ ಗಂಡನಿಗೆ ಮಾರಿ ಹಣ ಹೊಂಚಿಕೊಳ್ಳಬೇಕಾದ ದುಃಸ್ಥಿತಿ. ಅಂತಹ ಪರಿಸ್ಥಿತಿಯಲ್ಲಿಯೂ ಮುಗುಮ್ಮಾಗಿ ನಗುವುದನ್ನಷ್ಟೇ ರೂಢಿಸಿಕೊಂಡಿದ್ದ ಅವಳ ಗಂಡ – ಮೊದಲ ಮಗುವಿನ ಹೆರಿಗೆಯ ಸಂದರ್ಭದಲ್ಲಿ ನಾಲ್ಕೈದು ದಿನಗಳವರೆಗೆ ನೋವನ್ನು ಅನುಭವಿಸುತ್ತಿದ್ದರೂ ಆ ಬಗ್ಗೆ ತಲೆ ಕೆಡಿಸಿಕೊಳ್ಳದ ನೀರೋ ಆಗಿದ್ದ ಅವನು. ಒಂದು ವಾರದ ನೋವನ್ನನುಭವಿಸಿ, ಬಾಂಡಲಿಗಟ್ಟಲೆ ರಕ್ತ ಕಳೆದುಕೊಂಡು ಆಕೆ ಹೆತ್ತದ್ದು ಗಂಡು ಮಗು. ಆಗ ಅವಳ ವಯಸ್ಸು ಹದಿನೈದು. ಮುಂದೆ ಮತ್ತೊಂದು ಗಂಡು, ಒಂದು ಹೆಣ್ಣು. ಮೂರು ಮಕ್ಕಳ ತಂದೆಯಾದರೂ ಆಕೆಯ ಗಂಡ ಬದಲಾಗಲೇ ಇಲ್ಲ. ಕೂತದ್ದಕ್ಕೂ ನಿಂತದ್ದಕ್ಕೂ ತಪ್ಪು ಹುಡುಕಿ ದನಕ್ಕೆ ಬಡಿಯುವಂತೆ ಬಡಿಯುವುದೇ ಹೆಂಡತಿಗೆ ತೋರಿಸುವ ಪ್ರೀತಿ ಎಂದುಕೊಂಡಿದ್ದ ಅವನು. ಅವನ ಅತ್ಯಾಚಾರ ಹೆಚ್ಚಾದಾಗ ಇನ್ನು ಅವನಿಂದ ದೂರವಾಗುವುದೇ ಮೇಲು ಎಂದುಕೊಂಡಳು ಬೇಬಿ. ಆದರೆ ಹೋಗುವುದಾದರೂ ಎಲ್ಲಿಗೆ? ಆ ಹೊತ್ತಿಗಾಗಲೇ ಆಕೆಯ ಅಣ್ಣ-ತಮ್ಮಂದಿರು 'ಕೆಟ್ಟು ಪಟ್ಟಣ ಸೇರು' ಎನ್ನುವಂತೆ ದೆಹಲಿ ಸೇರಿಬಿಟ್ಟಿದ್ದರು. ಅಪ್ಪನಿಂದ ಅವರ ವಿಳಾಸದ ಪುಟ್ಟ ಚೀಟಿ ಪಡೆದು, ದಾರಿ ಖರ್ಚಿಗೆ ಹಣ ಪಡೆದು ಅವಳೂ ದೆಹಲಿ ಸೇರಿದಳು.




ಕಾಣದ ಊರಿನಲ್ಲಿ, ಅರಿಯದ ಜನರ ನಡುವೆ, ಬಹಳ ದಿನಗಳ ಹಿಂದಿನ ವಿಳಾಸ ಹಿಡಿದು ಜನರನ್ನು ಹುಡುಕುವುದು ಹರಸಾಹಸವೇ ಸರಿ. ಕಷ್ಟಪಟ್ಟು ಅವರನ್ನು ಹುಡುಕಿದಾಗ, ಗಂಡನನ್ನು ಬಿಟ್ಟು ಬಂದುದಕ್ಕಾಗಿ ಅಣ್ಣ- ತಮ್ಮ ಇಬ್ಬರಿಂದಲೂ ಬಯ್ಗುಳ. ಅವರ ಹೆಂಡತಿಯರ ಭರ್ತ್ಸನೆ. ಅದೆಲ್ಲವನ್ನೂ ಸಹಿಸಿ ಯಾವುದೋ ಮನೆಯಲ್ಲಿ ಕಸ ಹೊಡೆಯುವ, ನೆಲ ತೊಳೆಯುವ 'ಕೆಲಸ' ಸಂಪಾದಿಸಿಕೊಳ್ಳುತ್ತಾಳೆ. ಕೆಲಸದ ಮನೆ ಬದಲಾಯಿಸುತ್ತಾ ಬದಲಾಯಿಸುತ್ತಾ ಆಕೆ ಕೊನೆಗೆ ಸೇರಿದುದು 'ತಾತೂಷ್' ಅವರ ಮನೆಯನ್ನು. ತಂದೆಯ ಪ್ರೀತಿಯನ್ನು ತೋರಿಸಿದ ಅವರು, ಬೇಬಿಯಲ್ಲಿದ್ದ ಪುಸ್ತಕ ಪ್ರೀತಿ, ಓದಿನಲ್ಲಿನ ಆಸಕ್ತಿಯನ್ನು ಕಂಡು ತನ್ನ ಜೀವನ ಚರಿತ್ರೆ ಬರೆಯುವಂತೆ ಅವಳನ್ನು ಪ್ರೇರೇಪಿಸಿ, ಪ್ರೋತ್ಸಾಹಿಸುತ್ತಾರೆ. ತಾತೂಷ್ ಅವರ ಪ್ರೋತ್ಸಾಹದ ಫಲವೇ ಬೇಬಿ ಹಾಲ್ದಾರ್‌ಳ 'ಆಲೋ - ಆಂಧಾರಿ' (ಬೆಳಕು-ಕತ್ತಲೆ) ಕೃತಿ. ಇದು ಬಂಗಾಳಿ ಭಾಷೆಯಲ್ಲಿದೆ. ಅಂದ ಹಾಗೆ ತಾತೂಷ್ ಅವರು ಪ್ರಸಿದ್ಧ ಹಿಂದಿ ಸಾಹಿತಿ ಪ್ರೇಮಚಂದ್ ಅವರ ಮೊಮ್ಮಗ.

ಕೇವಲ ಅಗವ್ಯ (ಅತಿ ಗಣ್ಯವ್ಯಕ್ತಿ)ರ ಜೀವನ ಚರಿತ್ರೆಗಳನ್ನಷ್ಟೇ ಗಮನಿಸುವ ನಮಗೆ ಬೇಬಿ ಹಾಲ್ದಾರಳ ಜೀವನ ಚರಿತ್ರೆ ಅನೇಕ ಕಾರಣಗಳಿಗಾಗಿ ನಮ್ಮ ಗಮನ ಸೆಳೆಯುತ್ತದೆ. ಇದು ಆರ್ಥಿಕವಾಗಿ ನಿಮ್ನ ವರ್ಗದ ಜನರ ಜೀವನದ ಚಿತ್ರಣ ನೀಡುತ್ತದೆ. ಇಲ್ಲಿ ಬರುವ ವ್ಯಕ್ತಿಗಳೆಲ್ಲರೂ – ಆಸ್ಪತ್ರೆಯ ಡಾಕ್ಟರರು ಮತ್ತು ತಾತೂಷ್ ಅವರನ್ನು ಬಿಟ್ಟು – ಕೆಳ ವರ್ಗದವರೇ; ಬರಿಯ ಪ್ರತಿಕೂಲಗಳೇ ಇರುವ ಬದುಕಿನಲ್ಲಿ ತನ್ನ ಬದುಕನ್ನು ತನ್ನ ಮಕ್ಕಳ ಭವಿಷ್ಯವನ್ನು ರೂಪಿಸಿಕೊಳ್ಳಲು ಹೋರಾಡುವ ಅದಮ್ಯ ಚೇತನ ಈ ಕೃತಿಯಲ್ಲಿ ಕಾಣಸುತ್ತದೆ. ಆದರೆ ಅದು 'ಇಕ್ರಲಾ... ವದೀರ್ಲಾ...' ಎನ್ನುವ ಮನೋಧರ್ಮವನ್ನು ತಾಳದೆ, ಬದುಕನ್ನು ಅದು ತೆರೆದುಕೊಂಡಂತೆ ಸ್ವೀಕರಿಸುತ್ತಲೇ ತನ್ನ ದಾರಿಯನ್ನು ತಾನು ಕಂಡುಕೊಳ್ಳುವ ಸಹಜ ಮನೋಧರ್ಮವಾಗಿ ತೋರುತ್ತದೆ; ಎಲ್ಲಕ್ಕೂ ಮುಖ್ಯವಾಗಿ ನನ್ನ ಗಮನವನ್ನು ಸೆಳೆದದ್ದು ಬೇಬಿಯ ಭಾಷೆ. ಹೇಳಬೇಕಾದುದನ್ನು ನೇರವಾಗಿ, ಸರಳವಾಗಿ ಹೇಳುವ ಆಕೆ ಎಲ್ಲೂ ಅಹಂಕಾರವನ್ನು ತೋರಿಸುವುದಿಲ್ಲ. ಆತ್ಮಚರಿತ್ರೆಗಳಲ್ಲಿ ಸಹಜವಾಗಿಯೇ ಎದ್ದುಕಾಣುವ 'ಅಹಮಿಕೆ' ಇಲ್ಲಿ ಕಾಣಸುವುದೇ ಇಲ್ಲ. ಹಾಗೆಯೇ ಆಕೆ ಇತರರನ್ನು ಹೀಗಳೆಯುವುದಿಲ್ಲ. ಬದಲಾಗಿ, ಎಷ್ಟೋ ವರ್ಷಗಳ ನಂತರ ದೊರೆತ ತನ್ನ ಗೆಳತಿಯನ್ನು ಎದುರಿನಲ್ಲಿ ಕುಳ್ಳಿರಿಸಿಕೊಂಡು ಅದುವರೆಗಿನ ತನ್ನ ಕತೆಯೆಲ್ಲವನ್ನೂ ಹೇಳಿಕೊಂಡು ಮನಸ್ಸನ್ನು ಹಗುರವಾಗಿಸಿಕೊಳ್ಳುವ ಹೆಣ್ಣಿನ ಆತ್ಮೀಯ ಧಾಟಿ ಇಲ್ಲಿದೆ. ಈ ತಣ್ಣನೆಯ ಭಾಷೆ ಚರ್ಚೆಯ ಮೊನಚನ್ನು ಹೊಂದಿರುವಂತೆಯೇ ಸಮಾಜದ ಅಂಚಲಿಕ ಜಾಗೆಯಲ್ಲಿರುವ ಜನರ ಜೀವನವನ್ನು ಅರ್ಥಮಾಡಿಕೊಳ್ಳುವ ದುರ್ಬೀನೂ ಆಗಿದೆ; ಇದರೊಂದಿಗೆ ೨೦ ವರ್ಷಗಳ ನಂತರ ತನ್ನ ತಾಯಿಯನ್ನು ಮತ್ತೆ ಭೇಟಿಯಾದಾಗ, ಅಥವಾ ತನ್ನ ಅಕ್ಕನ ಸಾವಿನ ಚಿತ್ರಣ ನೀಡುವಾಗ ಇಲ್ಲವೇ ತನ್ನ ಮೊದಲನೆಯ ಹೆರಿಗೆಯ ನೋವನ್ನು ಬಣ್ಣಿಸುವಾಗ ಬೇಬಿಯ ಶೈಲಿಯಲ್ಲಿ ಪ್ರಬುದ್ಧತೆ ಎದ್ದು ಕಾಣಸುತ್ತದೆ.

ಬೇಬಿಯ ಈ ಆತ್ಮಕತೆ ಮೂಲ ಬಂಗಾಳಿಯಲ್ಲಿ ಪ್ರಕಟವಾಗುವುದಕ್ಕೂ ಮೊದಲೇ ಹಿಂದಿಯಲ್ಲಿ ಅನುವಾದವಾಗಿ ಪ್ರಕಟವಾಗಿದ್ದುದು ಒಂದು ವಿಶೇಷವಾದರೆ, ಅದು ಈಗಾಗಲೇ ಮಲಯಾಳಂ, ಮರಾಠಿ, ಒರಿಯಾ ಮತ್ತು ಇಂಗ್ಲಿಷ್ ಭಾಷೆಗಳಿಗೇ ಅಲ್ಲದೆ ಕೊರಿಯನ್ ಮತ್ತು ಜಪಾನಿ ಭಾಷೆಗಳಿಗೂ ಅನುವಾದಗೊಂಡಿದೆ. ಈ ಕೃತಿಯನ್ನು ಕೆ. ಸಚ್ಚಿದಾನಂದನ್, ಮೇಧಾ ಪಾಟ್ಕರ್, ಅರುಂಧತಿ ರಾಯ್, ಶೀಲಾ ರೆಡ್ಡಿ ಮೊದಲಾದವರು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ.

**ಜಿ. ಕುಮಾರಪ್ಪ**
'ತೀನ್ ಸಂಗೀ', ಪಿ - ೮, ಆರ್ಕೇಡಿಯಾ ಬಡಾವಣೆ
ಬೇಹಾಲ, ಕೊಲ್ಕತ್ತಾ - ೭೦೦ ೦೨೬

# ಚರಿತ್ರೆಯ ಕನ್ನಡಿಯೊಳಕ್ಕೆ ಒಂದು ಇಣುಕು ನೋಟ

ಬಿ. ಮೈತ್ರಿ

ಬ್ರಿಟಿಷರ ಆಡಳಿತದ ಸಂಕೋಲೆಗಳಿಂದ ಭಾರತ ಮುಕ್ತವಾಗಿ ೫೯ ದೀರ್ಘ ವರ್ಷಗಳು ಕಳೆದಿವೆ. ಭಾರತ ಬ್ರಿಟಿಷರ ಹಿಡಿತದಲ್ಲಿದ್ದ ಕಾಲದ ಬಗ್ಗೆ ಸಾಕಷ್ಟು ಚರ್ಚೆ ನಡೆದಿದ್ದು, ಅನೇಕ ಪುಸ್ತಕಗಳು ಹೊರಬಂದಿವೆ. ದ್ವಿತೀಯ ಜಾಗತಿಕ ಯುದ್ಧದ ಕರಾಳ ಛಾಯೆಯು ಭಾರತದ ಮೇಲೂ ಬಿದ್ದಿತ್ತು. ಇಂತಹ ಸಮಯದಲ್ಲಿನ ಭಾರತವನ್ನು ನಮ್ಮ ಮುಂದೆ ತೆರೆದಿಡುವ ಪ್ರಯತ್ನ 'ಮಾಣಿಕ್‌ಪುರ್ ಜಂಕ್ಷನ್' ಮಾಡುತ್ತದೆ. ಇಂತಹ ಪ್ರಯತ್ನ ಅಪೂರ್ವ ಹಾಗೂ ಅನನ್ಯವಾಗಿದ್ದು, ಭಿನ್ನವಾದ ದೃಷ್ಟಿಕೋನದಿಂದ ಸ್ವಾತಂತ್ರ್ಯಪೂರ್ವ ಭಾರತವನ್ನು ನೋಡಬಹುದಾಗಿದೆ. ಈ ಕಾದಂಬರಿಯ ಕರ್ತೃ ಶ್ರೀ ಎಂ.ಬಿ. ಲಾಲ್‌ರವರು 'ಸ್ಟೇಟ್ಸ್‌ಮನ್' ಪತ್ರಿಕೆಯ ಹಿರಿಯ ಪತ್ರಕರ್ತರಾಗಿದ್ದವರು. 'ಮಾಣಿಕ್‌ಪುರ್ ಜಂಕ್ಷನ್' ಅವರ ಪ್ರಥಮ ಕಾದಂಬರಿಯಾದರೂ ಅವರು 'ಪವರ್ ಗೇಮ್', 'ರೂರಲ್ ಚಾಲೆಂಜ್' ಮತ್ತು 'ಇಂಡಿಯಾಸ್ ಟೆಕ್ನಾಲಜಿ ಗ್ಯಾಪ್'




ಮುಂತಾದ ಪುಸ್ತಕಗಳನ್ನು ರಚಿಸಿದ್ದಾರೆ. 'ತ್ರೂ ದ ಈಗಲ್ಸ್ ಐ' ಎಂಬುದು ಅವರ ಇತ್ತೀಚಿನ ಇನ್ನೊಂದು ಕಥಾನಕ.

ಪ್ರಸ್ತುತ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಭಾರತ ೧೯೪೩ರ ಕಾಲಕ್ಕೆ ಸೇರಿದುದು. ಅಂದಿನ ಒಂದು ವಿಶಿಷ್ಟ ಚಿತ್ರಣವನ್ನು ಲೇಖಕರು ನಕುಲ್ ಪಾಲ್ ಎಂಬ ವಿದ್ಯಾರ್ಥಿಯ ದೃಷ್ಟಿಯಲ್ಲಿ ತೆರೆದಿಡುತ್ತಾರೆ. ಲಾರ್ಡ್ ಮೆಕಾಲೆ ಅಕಾಡೆಮಿಯ (ಇದು ಬಹಳ ಸೂಚ್ಯವಾದ ಹೆಸರೆಂದು ಹೇಳಬೇಕಾಗಿಲ್ಲವಷ್ಟೆ) ಹದಿಹರೆಯದ ವಿದ್ಯಾರ್ಥಿ ನಕುಲ್ ಈ ಕಾದಂಬರಿಯ ನಾಯಕ. ಕಾದಂಬರಿಯಲ್ಲಿ ಬರುವ ವಿವಿಧ ಪಾತ್ರಗಳು, ಅವುಗಳ ವರ್ತನೆಯ ಬಗ್ಗೆ ನಕುಲನ ಅನಿಸಿಕೆಗಳು, ಅದರಲ್ಲಿನ ಸನ್ನಿವೇಶಗಳನ್ನು ಅರ್ಥೈಸಿಕೊಳ್ಳಲು ಅವನು ಮಾಡುವ ಪ್ರಯತ್ನ, ಹೀಗೆ ಕಾದಂಬರಿಯ ಎಲ್ಲ ಅಂಶಗಳನ್ನು ಲೇಖಕರು ನಕುಲನ ಸುತ್ತ ಹೆಣೆಯುತ್ತಾರೆ. ಈ ಕಾದಂಬರಿಯ ನಾಯಕಿ ಮೇರಿ ಜೇಕಬ್‌ಸನ್. ಮೂಲತಃ ಸ್ವೀಡನ್‌ನವಳಾದ ಮೇರಿ ಆಕ್ಸ್‌ಫರ್ಡ್‌ನ ಪಂಡಿತೆಯೂ ಆಗಿದ್ದು, ಆರ್ಯರ ನಾಗರಿಕತೆಯ ಬಗ್ಗೆ ಅಡಾಲ್ಫ್ ಹಿಟ್ಲರ್‌ನಿಗಿದ್ದ ಗೀಳಿನ ಅಧ್ಯಯನಕ್ಕಾಗಿ ಭಾರತಕ್ಕೆ ಬಂದಿರುತ್ತಾಳೆ. ಮೇರಿ ಮತ್ತು ನಕುಲ್‌ರ ಮೊದಲನೆಯ ಭೇಟಿಯಲ್ಲಿ 'ಮಾಣಿಕ್‌ಪುರ್ ಜಂಕ್ಷನ್' ರೈಲ್ವೆ ನಿಲ್ದಾಣದಲ್ಲಿ ನಡೆಯುವ ಘಟನೆಗಳು ಅವರ ಸ್ನೇಹಕ್ಕೆ ಹೊಸ ತಿರುವನ್ನು ನೀಡುತ್ತವೆ. ಅದರ ಪರಿಣಾಮವಾಗಿ ಪೊಲೀಸರ ಗಮನಕ್ಕೆ ಇವರಿಬ್ಬರೂ ಬರುವಂತಾಗಿ ಅನೇಕ ಸಾಹಸಗಳಲ್ಲಿ ಭಾಗಿಗಳಾಗುವಂತಾಗುತ್ತದೆ. ಮೇರಿ ಮತ್ತು ನಕುಲ್‌ರ ಒಡನಾಟ ಸ್ನೇಹದಿಂದ ಆರಂಭವಾದರೂ ಕಾದಂಬರಿ ಕೊನೆಯಾಗುವಾಗ ಅದು ಪ್ರೇಮಕ್ಕೆ ತಿರುಗುತ್ತದೆ.



ಈ ಕಾದಂಬರಿಯಲ್ಲಿ ಮೂರು ಭಾಗಗಳಿವೆ. ಮೊದಲನೆಯದರಲ್ಲಿ ಮೇರಿ ಮತ್ತು ನಕುಲರ ಸ್ನೇಹ, ಸಾಹಸಗಳ ವರ್ಣನೆ ಇದೆ. ಎರಡನೆಯ ಭಾಗದಲ್ಲಿ ಅಂದಿನ ಕಾಲದ ವಿದ್ಯಾರ್ಥಿ ಜೀವನದ ಚಿತ್ರಣವಿದೆ. ನಕುಲ ಸುಜಾತಾ ಎಂಬ ಹುಡುಗಿಯ ಜೊತೆ ಸ್ನೇಹ ಬೆಳೆಸಿ, ಅವಳ ಪ್ರೇಮಿಯಾಗುತ್ತಾನೆ. ಅದೇ ಸಮಯದಲ್ಲಿ ಅವರ ಜೀವನದಲ್ಲಿ ಮೇರಿಯ ಪ್ರವೇಶವೂ ಆಗುತ್ತದೆ. ಅದರ ಪರಿಣಾಮವಾಗಿ ನಕುಲ-ಸುಜಾತರ ಸಂಬಂಧದಲ್ಲಿ ಅನೇಕ ಬದಲಾವಣೆಗಳು ಕಂಡುಬರುತ್ತವೆ. ಈ ಮೂವರ ಬದುಕಿನ ಮೇಲೆ ಸ್ವಾತಂತ್ರ್ಯ ಚಳುವಳಿ ಬೀರುವ ಪರಿಣಾಮವನ್ನು ಇಲ್ಲಿ ನಿಚ್ಚಳವಾಗಿ ಗಮನಿಸಬಹುದಾಗಿದೆ. ಮೂರನೆಯ ಭಾಗವು ಈ ಎಲ್ಲ ಪಾತ್ರಗಳ ಪರಿವರ್ತನೆಯ ಚಿತ್ರಣವಾಗಿದೆ.

ಕಾದಂಬರಿಯಲ್ಲಿ ಅಂದಿನ ಶಿಕ್ಷಣ ವ್ಯವಸ್ಥೆಯ ಚಿತ್ರಣವಿದೆ. ಬ್ರಿಟಿಷ್ ಆಡಳಿತದ ಪರಿಣಾಮ ಅಂದಿನ ಶಿಕ್ಷಣ ವ್ಯವಸ್ಥೆಯ ಮೇಲೆ ಯಾವ ಮಟ್ಟದ್ದಾಗಿತ್ತು ಎಂಬುದು ಇಲ್ಲಿ ಗೋಚರವಾಗುತ್ತದೆ. ಅಲ್ಲದೆ ಅಂದಿನ ವಿದ್ಯಾರ್ಥಿಗಳ ಚಟುವಟಿಕೆಗಳ, ಆಸಕ್ತಿಗಳ ಚಿತ್ರ ನಮಗೆ ದೊರಕುತ್ತದೆ. ವಿದ್ಯಾರ್ಥಿಗಳ ಹುಮ್ಮಸ್ಸು, ಜೀವನ ಪ್ರೀತಿ ಅವರ ಶಕ್ತಿಯನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಲು ಪ್ರೇರೇಪಿಸಿತ್ತು. ಅಕಾಡೆಮಿಯ ಪ್ರೊಫೆಸರುಗಳಾದ ಸೇನ್ ಮತ್ತು ಮಿಸ್ತ್ರಿಯವರಂತಹ ಪ್ರೋತ್ಸಾಹದ ಬಲದಿಂದ ಅಲ್ಲಿನ ವಿದ್ಯಾರ್ಥಿಗಳಿಗೆ ಅವರ ಪ್ರತಿಭೆಗಳನ್ನು ಉಪಯುಕ್ತವಾಗಿ ಬೆಳೆಸಿ, ಬಳಸಿಕೊಳ್ಳುವಂತಹ ಅವಕಾಶಗಳು ದೊರಕುತ್ತಿದ್ದವು. ಬರವಣಿಗೆ, ನಾಟಕ, ಚರ್ಚೆ ಮುಂತಾದ ಚಟುವಟಿಕೆಗಳು ವಿದ್ಯಾರ್ಥಿಗಳ ಭೌತಿಕ ಬೆಳವಣಿಗೆಗೆ ಅತ್ಯಂತ ಸಹಕಾರಿಯಾಗಿದ್ದುದು, ಓದುಗರಿಗೆ ಅರಿವಾಗುತ್ತದೆ. ಈ ಎಲ್ಲ ಚಟುವಟಿಕೆಗಳು ಅಕಾಡೆಮಿಯ ವತಿಯಿಂದ ನಡೆದದ್ದಾದರೆ, ಸ್ವಾತಂತ್ರ್ಯ ಚಳುವಳಿಯ ಭಾಗವಾಗಿ ನಡೆದಂತಹ ಅನೇಕ ಚಟುವಟಿಕೆಗಳಲ್ಲೂ ವಿದ್ಯಾರ್ಥಿಗಳು ಭಾಗಿಗಳಾಗಿದ್ದನ್ನು ಕಾಣಬಹುದಾಗಿದೆ. ಇಂತಹ ಚಟುವಟಿಕೆಗಳ ಅನುಭವ ಅವರುಗಳ ಜೀವನಕ್ಕೆ ಎಷ್ಟು ಮುಖ್ಯವಾಗಿತ್ತೆಂದರೆ ಅವರು ಜೀವನದಲ್ಲಿ ಮಾಡಿದಂತಹ ಆಯ್ಕೆಗಳನ್ನು ಅರ್ಥ ಮಾಡಿಕೊಳ್ಳಲು ಅವು ಸಹಕಾರಿಯಾಗುತ್ತವೆ.

ಆದರ್ಶಗಳ ಮೂರ್ತ ರೂಪದಂತಿದ್ದ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗುವ ಸುಜಾತ, ತನ್ನೆಲ್ಲ ಶಕ್ತಿ, ಸಾಮರ್ಥ್ಯವನ್ನು ಬಾಪೂರವರ ಹೋರಾಟದ ಬೆಂಬಲಕ್ಕೆ ಮುಡುಪಾಗಿಡುತ್ತಾಳೆ. ಪ್ರವಾಹದಿಂದ ತತ್ತರಿಸುತ್ತಿದ್ದವರ ಸೇವೆಯಿಂದ ಹಿಡಿದು ಸೇವಾಗ್ರಾಮದಲ್ಲಿ ನೆಲೆಸಿ, ಗಿರಿಜನರ ನಡುವೆ ಇದ್ದು, ಕೆಲಸ ಮಾಡುವವರೆಗೆ ಬೆಳೆಯುತ್ತಾಳೆ. ಗಾಂಧೀಜಿಯವರ ಸಾಮಾಜಿಕ ಕಾಳಜಿ ಮತ್ತು ಬದ್ಧತೆಗೆ ಅವಳ ನಿಷ್ಠೆ ಇಂದಿನ ಯುವ ಪೀಳಿಗೆಗೆ ಅಚ್ಚರಿ ಹುಟ್ಟಿಸುವಂಥದ್ದು. ತನ್ನದಾದುದೆಲ್ಲವನ್ನು ಬಿಟ್ಟು ಯಾವುದೋ ಗುಡ್ಡಗಾಡು ಪ್ರದೇಶದ ಜನರ ನಡುವೆ ನೆಲೆಸಿ, ಕೆಲಸ ಮಾಡುವಂತೆ ಅವಳನ್ನು ಪ್ರೇರೇ ಪಿಸಿದ ಆ ಕಾಳಜಿಯ ಬಗ್ಗೆ ಗೌರವ ಮೂಡುತ್ತದೆಯಲ್ಲದೆ ಅಂತಹ ನಿರ್ಧಾರ ವನ್ನು ತೆಗೆದು ಕೊಂಡ ಸುಜಾತಾಳ ಆತ್ಮಸ್ಥೈರ್ಯದ ಬಗ್ಗೆಯೂ ಗೌರವ ಹುಟ್ಟುತ್ತದೆ.

ಸುಜಾತಾಳ ನಿರ್ಧಾರವನ್ನು ಪ್ರಶಂಸಿಸುತ್ತಾ ಮೇರಿ ಹೇಳುತ್ತಾಳೆ : ''ನನ್ನ ಮಟ್ಟಿಗೆ ಅವಳು ಗಾಂಧಿಗಿಂತಲೂ ಶ್ರೇಷ್ಠಳು. ಒಬ್ಬ ನಾಯಕ ಎಷ್ಟೇ ಶ್ರೇಷ್ಠನಾದರೂ, ಕೇವಲ ನಾಯಕತ್ವ ವಹಿಸಬಲ್ಲ. ಆದರೆ ತಮ್ಮದೆಲ್ಲವನ್ನೂ ತೊರೆದು, ತಮ್ಮ ಜೀವನವನ್ನೇ ಮುಡಿಪಾಗಿಟ್ಟು, ಮಹತ್ತರ ಕಾರ್ಯಗಳನ್ನು ಮಾಡುವ ತುಡಿತವನ್ನು ಆತ ಯಾರಲ್ಲಿ ಬಿತ್ತುವನೋ ಅಂತಹ ಕಾರ್ಯಕರ್ತರೇ ನಿಜವಾದ ಹುತಾತ್ಮರು'' (ಪುಟ ೨೪೦). ಇಂತಹ ಅನೇಕ ನಿಸ್ವಾರ್ಥ, ದೇಶಪ್ರೇಮಿ ಯುವಕ ಯುವತಿಯರಿಂದಾಗಿಯೇ ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರಕಿತು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಅತ್ಯಂತ ವಾಚ್ಯವಾಗಲ್ಲದಿದ್ದರೂ ಇಂತಹ ದೃಢ ಮನಸ್ಸಿನ ಯುವಕರ ಕೊರತೆ ಇಂದಿನ ಭಾರತಕ್ಕಿದೆ ಎಂಬ ಅಂಶವನ್ನು ಲೇಖಕರು ಹೇಳಬಯಸುತ್ತಿದ್ದಾರೆಂಬ ಭಾವನೆ ಉಂಟಾಗುತ್ತದೆ.

ಕಾದಂಬರಿಯ ಮುಖ್ಯ ವಸ್ತು ಸ್ವಾತಂತ್ರ್ಯ ಹೋರಾಟ ಅಲ್ಲವಾದ್ದರಿಂದ ಅದರ ಬಗ್ಗೆ ಇಲ್ಲಿ ಹೆಚ್ಚಿನ ವಿವರಣೆ ಇಲ್ಲ. ಆದರೆ ಬ್ರಿಟಿಷ್ ಆಡಳಿತದ ಕ್ರೌರ್ಯದ ಅನೇಕ ನಿದರ್ಶನಗಳು ಕಾದಂಬರಿಯಲ್ಲಿ ಕಂಡುಬರುತ್ತದೆ. ಹಿಟ್ಲರ್‌ನ ಗೂಢಚಾರಿಗಳೆಂದು ಶಂಕಿಸಲ್ಪಟ್ಟ ಮೇರಿ ಮತ್ತು ನಕುಲ್ ಅಲಹಾಬಾದಿನ ಹತ್ತಿರ ಬೋಟೊಂದನ್ನು ಜೊತೆಯಲ್ಲಿ

ಏರಿದ ಸಂದರ್ಭದಲ್ಲಿ ನಡೆಯುವ ಘಟನೆಗಳು ಬ್ರಿಟಿಷರ ಕ್ರೌರ್ಯದ ಸಾಕ್ಷಿಗಳಾಗಿವೆ. ಅಲ್ಲದೆ ಪ್ರವಾಹದಿಂದ ತತ್ತರಿಸಿಹೋದ ಜನರಿಗೆ ಯಾವುದೇ ಪರಿಹಾರ ಒದಗಿಸದ ಬ್ರಿಟಿಷ್ ಆಡಳಿತ ಬರ್ಬರವೇ ಸರಿ. ಅದಕ್ಕೆ ವಿರುದ್ಧವಾಗಿ ಸಮಾಜ ಕಾರ್ಯಕರ್ತರ ಸೇವೆ ಮನಮುಟ್ಟುವಂಥದ್ದು.

ಕಾದಂಬರಿಯಲ್ಲಿ ಗಾಂಧಿವಾದವು ಮರೆತುಹೋದ ನರುಗಂಪಿನಂತೆ ಗೋಚರವಾಗುತ್ತದೆ. ಜಾತಿ, ಧರ್ಮ, ಭಾಷೆಗಳ ಗೋಡೆಗಳನ್ನು ದಾಟಿ ಎಲ್ಲರ ಮನಸ್ಸನ್ನು ಒಂದುಗೂಡಿಸುವ ಮಂತ್ರವೇ ದೇವರನಾಮ. ಆ ದೈವ ಶಕ್ತಿಯೊಂದರಿಂದಲೇ ಎಲ್ಲ ಮಾನವರನ್ನು ಒಂದುಗೂಡಿಸುವ ಸಾಹಸ ಸಾಧ್ಯ ಎಂಬ ಗಾಂಧೀಜಿಯ ನಂಬಿಕೆಯನ್ನು ಲೇಖಕರು ಪ್ರತಿಪಾದಿಸುತ್ತಾರೆ. ಇಡಿಯ ವಿಶ್ವವನ್ನು ನಡೆಸುವ, ನಿಯಂತ್ರಿಸುವ ಮಾಯಾಶಕ್ತಿಯೊಂದು ಈ ಪ್ರಪಂಚದ ಅಸ್ತಿತ್ವಕ್ಕೆ ಕಾರಣ; ಅಂತಹ ಶಕ್ತಿ ಪ್ರತಿಯೊಬ್ಬ ಮನುಷ್ಯನಲ್ಲೂ ಇದೆ; ಮನುಷ್ಯ ತನ್ನೆಲ್ಲ ಭಯ, ದುರಾಸೆ, ಕ್ರೌರ್ಯ, ಸಣ್ಣತನಗಳನ್ನು ಮೀರಿ ತನ್ನ ಮನಸ್ಸಿನೊಳಗೆ ತಡಕಾಡಿ ಈ ವಿಸ್ಮಯದ ಅರ್ಥವನ್ನು ಕಂಡುಕೊಂಡರೆ ಅವನ ಜೀವನ ಸಾರ್ಥಕವಾದಂತೆ, ಅವನು ತನ್ನ ಬದುಕಿನಲ್ಲಿ ಯಶಸ್ವಿಯಾದಂತೆ ಎಂಬ ಸಂದೇಶವನ್ನು ಲೇಖಕರು ಸಂತ ಅಲ್ಲಾ ರಖಾನ ಪಾತ್ರದ ಮೂಲಕ ತಿಳಿಸ ಬಯಸುತ್ತಾರೆ. ಅಂತೆಯೇ ಕಾದಂಬರಿಯಲ್ಲಿ ಬರುವ ಯುವಕರಾದ ನಕುಲ, ಮೇರಿ, ಸುಹಾಸ, ವಿಕ್ರಮ, ರಾಜೇಶ್ವರ ಮುಂತಾದವರ ಬದುಕಿನಲ್ಲಿ ಈ ಅರಿವಿನ ಕಿರಣ ತರುವ ಬದಲಾವಣೆಯನ್ನು ಕಾದಂಬರಿಕಾರರು ಉತ್ತಮವಾಗಿ ಚಿತ್ರಿಸಿದ್ದಾರೆ.




'ಮಾಣಿಕ್‌ಪುರ್ ಜಂಕ್ಷನ್' ಕಾದಂಬರಿಯು ಅಲಹಾಬಾದಿನ ಬಯಲು ಸೀಮೆಯಿಂದ ಹಿಮಾಲಯದ ಹಿಮಾಚ್ಛಾದಿತ ಪರ್ವತ ಶ್ರೇಣಿಗಳವರೆಗಿನ ಸುಂದರ ದೃಶ್ಯ ಕಾವ್ಯವಾಗಿ ಅರಳುತ್ತವೆ. ಸಾಹಸದಿಂದ ಪ್ರೇಮದವರೆಗೆ ಹಾಗೂ ದೇಶಭಕ್ತಿಯಿಂದ ಅಧ್ಯಾತ್ಮದವರೆಗೆ ಎಲ್ಲ ಅಂಶಗಳನ್ನು ಈ ಕಾದಂಬರಿ ಒಳಗೊಂಡಿದೆ. ಬ್ರಿಟಿಷರ ಭಾರತದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ಚಿತ್ರಣವನ್ನು ಕಾದಂಬರಿಯು ಚಿಕ್ಕದಾಗಿ ಹಾಗೂ ಚೊಕ್ಕವಾಗಿ ನಮ್ಮ ಮುಂದೆ ತೆರೆದಿಡುತ್ತದೆ. ಇಂದಿನ ಯುವ ಜನಾಂಗಕ್ಕೆ ಈ ಕಾದಂಬರಿಯು ಕುತೂಹಲಕಾರಿಯಾಗಿರುವುದಷ್ಟೇ ಅಲ್ಲದೆ, ಚರಿತ್ರೆಯ ಹಲವಾರು ಸಂಗತಿಗಳ ಬಗ್ಗೆ ತಿಳಿವು ಮೂಡಿಸುತ್ತದೆ. ಒಟ್ಟಿನಲ್ಲಿ 'ಮಾಣಿಕ್‌ಪುರ್ ಜಂಕ್ಷನ್' ಚರಿತ್ರೆಯ ಕನ್ನಡಿಯೊಳಗಣ ಒಂದು ಇಣುಕು ನೋಟ ಎಂದು ಹೇಳಬಹುದು.

ಬಿ. ಮೈತ್ರಿ
ಅಂತಿಮ ಬಿ.ಎಸ್ಸಿ. ತರಗತಿ, ಮಹಾವೀರ ಜೈನ್ ಕಾಲೇಜು, ಬೆಂಗಳೂರು - ೫೬೦ ೦೦೨



# ಕುಣಿಯೋ ಘುಮಾ

ಈ ಸಾವ-ಕೆಡುವ ಗಂಡರನೊಯ್ದು
ಒಲೆಯೊಳಗಿಕ್ಕೆಂದ ನೀನು ಎಂಥ ದಿಟ್ಟ ಅಕ್ಕ !
ಸಾಯಿಸುವ-ಕೆಡಿಸುವ ಗಂಡರ ಮಧ್ಯ ನಾವು
ಆಸೆಗಳನು ಅಳಿಸಿದವರು ಕನಸುಗಳನು ಮಾರಿದವರು
ಬಾಳನ್ನೇ ಬಲಿಗೊಟ್ಟು ಕತ್ತಲಲಿ ಕಮರಿ ನಿಂತ ತ್ಯಾಗಿಗಳು

ದೇವರ ಅಪ್ಪಣೆಯಾಗಿದೆಯೆಂದು ಕಾಮಿಸಬಂದ
ದುರುಳ ಸ್ವಾಮಿಯ ಭಕ್ತಿಯ ಬಯಲುಗೊಳಿಸಿದೆ ನೀನು
ಈ ವೈಚಾರಿಕ ಯುಗದಲಿ ಗಾಣದೆತ್ತಿನಂತೆ
ಸುತ್ತುತ್ತಿದ್ದೇವೆ ಗುಡಿ-ಗುಂಡಾರಗಳನು ಫ್ಯಾಶನ್‌ಗಾಗಿ ನಾವು

ರಾಜ ಕೌಶಿಕನ ಹಸಿದ ಕಣ್ಣುಗಳಿಗೆ ಹೇಸಿ
ಉಟ್ಟ ಬಟ್ಟೆಯ ಬಿಸುಟು ಅರಮನೆಯ ಎದೆ ನಡುಗಿಸಿದೆ ನೀನು
ರಂಗು-ರಂಗಿನ ಬಟ್ಟೆಯಲಿ ಶೋಭಿಸುತ ನೀ ತುಳಿದ ದಾರಿಯ
ಹೆದ್ದಾರಿ ಮಾಡುವದನು ಮರೆತುಬಿಟ್ಟೆವು ನಾವು

ಶರಣರಿದ್ದರು ನಿನಗೆ ಅಕ್ಕರೆಯಿಂದ ಅಕ್ಕನೆನಲು
ನಿನ್ನೆದೆಯ ಮಾತುಗಳನು ಮುತ್ತೆಂದು ಒಪ್ಪಿ ಮೆರೆಯಲು
ಆದರೆ ಇಂದು ? ........................
ಇಲ್ಲವಕ್ಕಾ ನಿನ್ನಂಥ ಛಾತಿ ನಮಗೂ
ಅದಕ್ಕೆ ನಾವು ಮತ್ತೆ ಮತ್ತೆ ಕುಣಿಯೇ ಘುಮಾ.

ಅನಸೂಯ ಕಾಂಬಳೆ
ಸರಕಾರಿ ಪ್ರಥಮ ದರ್ಜೆ ಕಾಲೇಜು, ತೇರದಾಳ, ಜಮಖಂಡಿ ತಾಲ್ಲೂಕು

ಇಂದಿನ ವಿದ್ಯಮಾನಗಳನ್ನು ವಸ್ತುವನ್ನಾಗಿ ತೆಗೆದುಕೊಳ್ಳಲು ಸಂಕೋಚವಿರುವ ಕೆಲವು ಸಾಹಿತಿಗಳು ಯಾವುದೋ ಪೂರ್ವಕಾಲದ ಪಾತ್ರಗಳನ್ನು ಹಾಗೂ ಘಟನೆಗಳನ್ನು ಆಯ್ದುಕೊಂಡು ಸಮಕಾಲೀನ ಜಗತ್ತಿನ ಬಗ್ಗೆ ವ್ಯಾಖ್ಯಾನಿಸುವುದು ಅಪರೂಪವೇನಲ್ಲ. ಅಲ್ಲಿ ವ್ಯಕ್ತವಾಗುವುದು ಆ ಹಿಂದಿನ ಕಾಲದ ವಾಸ್ತವಿಕ ಜೀವನ ಕ್ರಮವಲ್ಲ. ಇಂದಿನ ವ್ಯಾಖ್ಯಾನಕ್ಕೆ ಅನುವಾಗುವಂತೆ ಆಯ್ಕೆಯ ಸ್ವಾತಂತ್ರ್ಯವನ್ನು ಸಾಹಿತಿ ಆರೋಪಿಸಿಕೊಳ್ಳುತ್ತಾನೆ. ಸಂಶೋಧನೆಗಳಲ್ಲಿ ಸಹ ಇಂತಹುದೇ ಸ್ವಾತಂತ್ರ್ಯವನ್ನು ಪಡೆಯಲು ಸಾಧ್ಯವೇ ಎಂಬುದು ಚರ್ಚೆಗೆ ಸೂಕ್ತವಾದ ವಿಷಯ. ಆರ್ಯರ ಆಗಮನದಿಂದ ಹಿಡಿದು ಉತ್ತರ ಕೊರಿಯ ಬಾಂಬು ಸಿಡಿಸಿರುವುದಕ್ಕೆ ಪ್ರತಿಕ್ರಿಯೆಯವರೆಗೆ ಯಾವುದನ್ನು ಕುರಿತು ಬೇಕಾದರೂ ನಮ್ಮ ಇಂಗಿತವನ್ನು ಸಂಶೋಧನೆಯ ಆಯಾಮದಲ್ಲಿ ತಂದು ನಿಲ್ಲಿಸುವುದು ಶಕ್ಯ. ಎಲ್ಲ ಸಂಶೋಧಕರೂ ತಾವು ಸತ್ಯವನ್ನು ಕಂಡುಕೊಂಡಂತೆ ಬಗೆಯುವುದು ಅಸಹಜವಲ್ಲ. ಅದರಿಂದಾಗಿ ಒಂದೇ ವಿಷಯದ ಬಗ್ಗೆ ಹತ್ತು 'ಸತ್ಯ'ಗಳು ನಮ್ಮ ಗಮನಕ್ಕೆ ಬರಲು ಸಾಧ್ಯ. ಅವುಗಳಲ್ಲಿ ನಾವು ಸ್ವತಃ ಯಾವುದನ್ನು ಆಯ್ಕೆ ಮಾಡಿಕೊಳ್ಳುತ್ತೇವೆಂಬುದು ಆ ಒಂದು ವಿಷಯದ ಬಗ್ಗೆ ನಾವು ತಾಳುವ ನಿಲುವಾಗಿರದೆ ಅನೇಕ ವಿಷಯಗಳ ಸಂಘಾತವನ್ನು ಕುರಿತಂತೆ ನಮ್ಮ ಮನೋಭಾವವನ್ನು ಪ್ರಕಟಿಸುವ ರೀತಿಯಲ್ಲಿ ಇರುತ್ತದೆ. ವಸ್ತುನಿಷ್ಠ ಅಧ್ಯಯನವನ್ನು ತಾವು ಮಾತ್ರ ರೂಢಿಸಿಕೊಂಡಿರುವುದಾಗಿ ಭ್ರಮಿಸುವವರು ಈ ಪ್ರಮೇಯವನ್ನು ತಿರಸ್ಕರಿಸುತ್ತಾರೆ. ಆದರೆ ಸತ್ಯವು ಇತರರಿಗೆ ತಿಳಿಯಲಾಗದಷ್ಟು ನಿಗೂಢವಲ್ಲ.

# ಸತ್ಯ ಶೋಧನೆ

'ಸುವರ್ಣ ಕರ್ನಾಟಕ' ಎಂಬ ಸಂಭ್ರಮದ ಸಂದರ್ಭದಲ್ಲಿ ಕನ್ನಡ ಮತ್ತು ಕರ್ನಾಟಕಕ್ಕೆ ನಾವೇನು ಮಾಡುತ್ತಿದ್ದೇವೆಂಬುದನ್ನು ಮುಕ್ತವಾಗಿ ಅರಿವಿಗೆ ತಂದುಕೊಳ್ಳಲು ನಾವಿನ್ನೂ ಸಿದ್ಧರಾಗಿದ್ದಂತೆ ತೋರುವುದಿಲ್ಲ. ಗತಕಾಲದ ತಥಾಕಥಿತ ವೈಭವಗಳನ್ನು ನೆನೆಯುತ್ತಾ ಇಂದಿನ ನೈಜ ಪರಿಸ್ಥಿತಿಯನ್ನು ವೀಕ್ಷಿಸುವುದರಲ್ಲಿ ಸೋಲುತ್ತಿದ್ದೇವೆ. ಎಂದೋ ಒಂದು ದಿನ ಕರ್ನಾಟಕದ ಎಲ್ಲೆಯು ನಾಸಿಕ್ ವರೆಗೂ ಇತ್ತೆಂದು ಹುರುಳಿಲ್ಲದ ವಾದವನ್ನು ಮಂಡಿಸುವುದಕ್ಕಿಂತಲೂ ಇಂದು ಕರ್ನಾಟಕದ ಸಾಂಸ್ಕೃತಿಕ ಮತ್ತು ಆರ್ಥಿಕ ಸನ್ನಿವೇಶವು ಎಷ್ಟು ಭಯಂಕರವಾಗಿದೆಯೆಂಬುದನ್ನು ತಿಳಿಯಹೇಳುವುದು ಉತ್ತಮವಾದೀತು. ಕೃಷ್ಣಾ ನದಿಯ ಆಸುಪಾಸಿನಲ್ಲಿ ಕನ್ನಡಿಗರು ತಮ್ಮ ಭೂಮಿಯನ್ನು ಆಂಧ್ರದ ಜಮೀನುದಾರರಿಗೆ ಮಾರಿಕೊಂಡು ನಗರಗಳ ಕೂಲಿಕಾರ ವರ್ಗಕ್ಕೆ ಸೇರಿಕೊಳ್ಳುತ್ತಿದ್ದಾರೆ. ಹಿರಿಯೂರು - ಚಿತ್ರದುರ್ಗಗಳಂತಹ ಪಟ್ಟಣಗಳ ಬಳಿ ಮುಂಬೈನ ಉದ್ಯಮಿಗಳು ತಲಾ ಇನ್ನೂರು-ಮುನ್ನೂರು ಎಕರೆಗಳಷ್ಟು ಭೂಮಿಯನ್ನು ಕೊಳ್ಳುತ್ತಿದ್ದಾರೆ. ಬೆಂಗಳೂರಿನ ಬಸವನಗುಡಿ- ಜಯನಗರ- ಹನುಮಂತನಗರಗಳಲ್ಲಿ ಕೂಡ ಹಿಂದಿ ಭಾಷಿಕರು ಬೀದಿಗಟ್ಟಲೆ ಮನೆಗಳನ್ನು ಕೊಂಡಿದ್ದಾರೆ ಮತ್ತು ಅಲ್ಲಿ ತರಕಾರಿ ಮಾರುವ ಹೆಂಗಸರು ಈಗ ಹಿಂದಿಯಲ್ಲಿ ವ್ಯವಹರಿಸುವುದನ್ನು ರೂಢಿ ಮಾಡಿಕೊಳ್ಳುತ್ತಿದ್ದಾರೆ. ಬೆಂಗಳೂರು ಮುಂತಾದ ದೊಡ್ಡ ನಗರಗಳಲ್ಲಿ ಕಬ್ಬಿಣ, ಸಿಮೆಂಟ್, ಕಾಗದ, ಔಷಧಿ ಮೊದಲಾದವುಗಳ ಸಗಟು ವ್ಯಾಪಾರವು ಸಂಪೂರ್ಣವಾಗಿ ಕನ್ನಡೇತರ ಜನರ ಹಿಡಿತದಲ್ಲಿದೆ. ಅವರು ದೊಡ್ಡ ದೊಡ್ಡ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಾ ಹಿಂದಿಯನ್ನು ಹೇರಳವಾಗಿ ಹೇರುತ್ತಿದ್ದಾರೆ. ಇದೆಲ್ಲಾ ಕನ್ನಡ-ಕರ್ನಾಟಕದ ಬಗೆಗಿನ ನಮ್ಮ ಅಪಾರ ಪ್ರೀತಿಯ ದ್ಯೋತಕವೇನು? ರಾಜ್ಯದ ಜನರ ಹಿತವನ್ನು ಕಾಪಾಡದೆಯೇ ಕನ್ನಡದ ಬಗೆಗಿನ ಆದರವನ್ನು ಪ್ರಕಟಿಸುವುದು ಒಂದು ಕುಹಕ. ಟಿಪ್ಪು ಸುಲ್ತಾನ್ ಕನ್ನಡ ದ್ರೋಹಿಯಾಗಿದ್ದನೋ ಇಲ್ಲವೋ ಎಂಬ ಚರ್ಚೆ ಅಪ್ರಾಸಂಗಿಕ; ಇಂದಿನ ನಮ್ಮ ಕನ್ನಡದ ಪ್ರೇಮ ಅಥವಾ ಅದರ ಅಭಾವ ಖಂಡಿತ ಅಪ್ರಾಸಂಗಿಕವಲ್ಲ, ಅದು ತೀರಾ ಪ್ರಸ್ತುತ.

**ಡಾ|| ಜಿ. ರಾಮಕೃಷ್ಣ**

ದೆಹಲಿಯಲ್ಲಿರುವ ರಾಷ್ಟ್ರೀಯ ಪತ್ರಾಗಾರದಲ್ಲಿ (ನ್ಯಾಷನಲ್ ಆರ್ಕೈವ್ಸ್) ಅಂದಿನ ಮೈಸೂರು ಸೀಮೆಯ ಕಾಡುಗಳಲ್ಲಿ ಬ್ರಿಟಿಷರು ಮರಗಳನ್ನು ಮನಬಂದಂತೆ ಕಡಿಪ ಕೂಡದೆಂದು ನಿರ್ಬಂಧ ಹೇರುವ ಒಂದು ಒಪ್ಪಂದದ ಪ್ರತಿ ಇದೆ. ಅದನ್ನು ನಾನು ಸ್ವತಃ ನೋಡಿ ಓದಿದ್ದೇನೆ. ಆ ಒಪ್ಪಂದದ ವಿಧಿಗಳನ್ನು ರೂಪಿಸಿ ಅನುಷ್ಠಾನಕ್ಕೆ ತಂದವನು ಟಿಪ್ಪು ಸುಲ್ತಾನ್ ಎಂಬ ಮಾಹಿತಿ ಅಲ್ಲಿದೆ. ಹಡಗುಗಳ ನಿರ್ಮಾಣಕ್ಕೆಂದು ಹಿಗ್ಗಾಮುಗ್ಗಾ ಕಾಡುಗಳನ್ನು ತರಿದುಹಾಕುವುದು ಬ್ರಿಟಿಷರ ಹುನ್ನಾರವಾದರೆ ಕಾವೇರಿ ನದಿಯ ಇಕ್ಕೆಲಗಳಲ್ಲಿ ಎಲ್ಲೂ ಮರಗಳನ್ನು ಕಡಿಯಕೂಡದೆಂದು ಟಿಪ್ಪು ಸುಲ್ತಾನ್ ಆಜ್ಞಾಪಿಸಿದನೆಂದು ಅಲ್ಲಿ ಹೇಳಲಾಗಿದೆ. ಕರ್ನಾಟಕದ ಸಂಪತ್ತು ಪರರು ಕೊಳ್ಳೆಹೊಡೆಯಲು ಸಾಧ್ಯವಾಗಕೂಡದೆಂಬ ತಿಳುವಳಿಕೆ ಅವನಲ್ಲಿದ್ದುದು ಪ್ರಶಂಸನೀಯ.

ಹದಿನೆಂಟನೆಯ ಶತಮಾನದಲ್ಲಿ ಕನ್ನಡ ಪರ ಮತ್ತು ಕನ್ನಡ ವಿರೋಧ ಎಂಬ ಪರಿಕಲ್ಪನೆಯು ಇಪ್ಪತ್ತೊಂದನೆಯ ಶತಮಾನದಲ್ಲಿ ಇರುವಂತೆ ಇದ್ದಿತೆಂದು ಭಾವಿಸುವುದು ಸರಿಯಿಲ್ಲವೆಂದು ಇತಿಹಾಸದ ಪ್ರಾಥಮಿಕ ಪಾಠಗಳನ್ನು ಓದಿದವರಿಗೂ ಗೊತ್ತಿರುತ್ತದೆಂದು ನನ್ನ ಭಾವನೆ. ಟಿಪ್ಪು ಸುಲ್ತಾನನ ನಂತರದ ಒಡೆಯರು ಕಂಪನಿ ಸರ್ಕಾರದ ಜೊತೆ ಯಾವ ಭಾಷೆಯಲ್ಲಿ ವ್ಯವಹರಿಸಿದರೆಂಬುದನ್ನು ತಿಳಿಯಲು ಯಾವ ಸಂಶೋಧನೆಯ ಅಗತ್ಯವೂ ಇಲ್ಲ. ಅಷ್ಟೇಕೆ, ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಜಯಚಾಮರಾಜೇಂದ್ರ ಒಡೆಯರ್ ಕೀರ್ತನೆಗಳನ್ನು ರಚಿಸಿದ್ದು ಕನ್ನಡದಲ್ಲಿ ಅಲ್ಲ, ಸಂಸ್ಕೃತದಲ್ಲಿ. (ಆ ಕೀರ್ತನೆಗಳನ್ನು ಬೇರಾರೋ ರಚಿಸಿ ಇವರ ಅಂಕಿತ ಹಾಕಿದರೆಂಬುದು ಬೇರೆಯೇ ವಿಚಾರ.) ಎರಡನೇ ಪುಲಿಕೇಶಿಯು ಹರ್ಷವರ್ಧನನಿಗೆ ಪತ್ರವನ್ನೇನಾದರೂ ಬರೆದಿದ್ದರೆ ಯಾವ ಭಾಷೆಯಲ್ಲಿ ಬರೆದಿರುತ್ತಿದ್ದ? ಕನ್ನಡದಲ್ಲೇ? ಅಂದಿನ ವ್ಯಾವಹಾರಿಕ ಕ್ರಮಗಳನ್ನು ಕನ್ನಡ ಪರ – ಕನ್ನಡ ವಿರೋಧ ಎಂಬ ನೆಲೆಯಲ್ಲಿ ಮಾಪನ ಮಾಡಬೇಕೆಂಬ ಸಲಹೆ ಬಾಲಿಶವೆಂದು ಹೇಳಿದರೆ ಬಹುಶಃ ನಮ್ಮ ಬಾಲಕರಿಗೆ ಅಪಚಾರವೆಸಗಿದಂತಾದೀತು! ಫ್ರೆಂಚರೊಡನೆ ಸಂಪರ್ಕ ಸಾಧಿಸುವ ಸಂದರ್ಭದಲ್ಲಿ ಟಿಪ್ಪು ಸುಲ್ತಾನ್ ಪತ್ರಗಳನ್ನು ಪರ್ಶಿಯನ್ ಭಾಷೆಯಲ್ಲಿ

# ವ್ಯಗ್ರತೆಯ ಅಭಿವ್ಯಕ್ತಿ

ಬರೆಯಲಿಲ್ಲ. ನಮ್ಮ ರಾಜ್ಯದ ಪತ್ರಾಗಾರವು (ಆರ್ಕೈವ್ಸ್) ಪ್ರಕಟಿಸಿರುವ 'ಟಿಪ್ಪು ಸುಲ್ತಾನ್' ಪುಸ್ತಕದಿಂದ ಇದು ತಿಳಿಯುತ್ತದೆ. ಅವನ ಕಾಲದಲ್ಲಿ, ಅವನ ಆಡಳಿತಕ್ಕೆ ಒಳಗಾಗಿದ್ದ ಪ್ರದೇಶಗಳಲ್ಲಿ, ಕನ್ನಡವನ್ನು ಓದಿ-ಬರೆದು ಮಾಡುವ ಸಾಮರ್ಥ್ಯವಿದ್ದ ಅಕ್ಷರಸ್ಥರು ಎಷ್ಟು ಮಂದಿ ಇದ್ದಿರಬಹುದು ಮತ್ತು ಜನಸಂಖ್ಯೆಯ ಶೇಕಡಾವಾರು ಪ್ರಮಾಣ ಎಷ್ಟಿದ್ದಿರಬಹುದೆಂದು ತಿಳಿಯುವ ಕುತೂಹಲ ನನ್ನದು; ಆದರೆ ಅದನ್ನು ಹೇಗೆ ತಿಳಿಯಬಹುದೆಂಬುದು ನನಗೆ ತಿಳಿಯದು.

ನಮ್ಮ ದೇಶದ ವಿವಿಧ ಭಾಗಗಳಲ್ಲಿ ಆಳ್ವಿಕೆ ನಡೆಸಿದ ರಾಜರು ತಾವು ನಂಬಿದ ಮತಧರ್ಮಗಳನ್ನು ಪುರಸ್ಕರಿಸಲು ಕೈಗೊಂಡ ವಿಧಾನಗಳು ಸಂಪೂರ್ಣವಾಗಿ ಮರೆತುಹೋಗಿರುವ ಅಂಶಗಳಲ್ಲ. ಅಶೋಕನ ಕಾಲದಲ್ಲಿ ಜನಕ್ಕೆಲ್ಲಾ ಇದ್ದಕ್ಕಿದ್ದಂತೆ ಬೌದ್ಧ ಧರ್ಮದ ಬಗ್ಗೆ ವ್ಯಾಮೋಹ ಉಂಟಾಯಿತೆ? ಅಥವಾ ಆಳ್ವಿಕೆಯ ಅಂಗಗಳು ಪ್ರಯತ್ನ ಮಾಡಿ ಅದರ ಬಗ್ಗೆ ಜನಮಾನಸದಲ್ಲಿ ಒಂದು ಭಾವನೆ ಮೂಡಿಸಿದುವೆ? ವಿಧಾನಗಳಲ್ಲಿ ವ್ಯತ್ಯಾಸಗಳುಂಟು. ಆದರೆ ವಿಧಾನವೇ ಇಲ್ಲವೆಂದಲ್ಲ. ದೇವಸ್ಥಾನ ಉರುಳಿಸುವುದು, ಜೈನ ಬಸದಿಗಳನ್ನು ನಾಶ ಮಾಡುವುದು, ಜೈನ ಬಸದಿಗಳನ್ನು ಶೈವ ದೇವಾಲಯವನ್ನಾಗಿ ಪರಿವರ್ತಿಸುವುದು, ಇವೆಲ್ಲಾ ನಮ್ಮ ದೇಶದ ಇತಿಹಾಸದಲ್ಲಿ ನಡೆದಿರುವ ದುರಂತಗಳು. ಅನ್ಯಧರ್ಮೀಯರು ಹಾಗೆ ಮಾಡುವುದು ತಮ್ಮ ಪರಾಕ್ರಮದ ಚಿಹ್ನೆಯನ್ನಾಗಿ ಮಾಡಿಕೊಂಡಿದ್ದರೋ ಏನೋ! ಆಲಿವರ್ ಕ್ರಾಮ್‌ವೆಲ್ ಐರ್ಲೆಂಡಿನ ಮೇಲೆ ದಂಡೆತ್ತಿ ಹೋದಾಗ ಕಾರ್ಕ್ ನಗರದ ಬಳಿ ಬ್ಲಾರ್ನೆ ಎಂಬಲ್ಲಿರುವ ಕ್ಯಾಥೊಲಿಕ್ ಕ್ರೈಸ್ತ ದೇವಾಲಯವನ್ನು ತನ್ನ ಸೈನ್ಯದ ಕುದುರೆಗಳಿಗೆ ಲಾಯವನ್ನಾಗಿ ಪರಿವರ್ತಿಸಿಕೊಂಡಿದ್ದ. ಆ ಚರ್ಚಿನ ಗೋಡೆಯ ಮೇಲೆ ಈಗ ಆ ಒಕ್ಕಣೆ ಇರುವುದನ್ನು ನಾನು ಸ್ವತಃ ನೋಡಿದ್ದೇನೆ. ಟಿಪ್ಪು ಸುಲ್ತಾನ್ ಆಗಲಿ ಮರಾಠರಾಗಲಿ ಅಂತಹ ಪ್ರಶ್ನಾರ್ಹ ಮನೋಭಾವವನ್ನು ಎಂದೂ ತಾಳಲಿಲ್ಲವೆಂದು ಹೇಗೆ ಹೇಳಲು ಸಾಧ್ಯ? ರೌಲಟ್ ಆಕ್ಟನ್ನು ಪ್ರಶ್ನಿಸಿದ್ದಕ್ಕೆ ಬ್ರಿಟಿಷ್ ವಸಾಹತು ಆಡಳಿತವು ಜಲಿಯನ್‌ವಾಲಾ ಬಾಗ್ ಹತ್ಯೆಗಳನ್ನು ಯಾವ ಸಂಕೋಚವೂ ಇಲ್ಲದೆ ಎಸಗಿತು. ಇಂದಿನ

ಬುಷ್ ಮಹಾರಾಜನು ತನ್ನ ಚಕ್ರಾಧಿಪತ್ಯದ ವಿಸ್ತರಣೆಗಾಗಿ ಇರಾಕಿನಲ್ಲಿ ಆರೂವರೆ ಲಕ್ಷ ಜನಗಳನ್ನು ಹತ್ಯೆಗೈದಿದ್ದಾನೆ (ಲ್ಯಾನ್ಸೆಟ್ ಪತ್ರಿಕೆಯ ವರದಿ). ಈ ಬರ್ಬರ ಕೃತ್ಯಗಳು ಅವರ ಏಕಸ್ವಾಮ್ಯಕ್ಕೆ ಸೇರಿಲ್ಲ. ಟಿಪ್ಪು ಸುಲ್ತಾನ್ ಸಹ ಪ್ರತಿರೋಧ ಒಡ್ಡಿದವರನ್ನು ಹಿಂಸಿಸಿದ್ದಾನೆ, ಕೊಂದಿದ್ದಾನೆ. ಅದನ್ನು ಸಮರ್ಥಿಸುವ ಹೃದಯಹೀನರು ಯಾರೂ ಇರುವುದಿಲ್ಲವೆಂದೇನೂ ಇಲ್ಲ; ಆದರೆ ಸಾಮಾನ್ಯವಾಗಿ ಮಾನವತೆಯ ಕುರುಹುಗಳನ್ನು ಉಳಿಸಿಕೊಂಡಿರುವವರು ಅದನ್ನು ಖಂಡಿಸಿಯೇ ತೀರುತ್ತಾರೆ. ಬ್ರಿಟಿಷರು ಪಂಜಾಬಿಗಳಿಗೆ ದ್ರೋಹವೆಸಗಬೇಕೆಂದು ಲಾಲಾ ಲಜಪತ ರಾಯ್ ಅವರನ್ನು ಬಡಿದು ಸಾಯಿಸಲಿಲ್ಲ; ತಮ್ಮ ಆಳ್ವಿಕೆಯ ವಿರೋಧವಾಗಿ ಜನರನ್ನು ಸಜ್ಜುಗೊಳಿಸುತ್ತಿದ್ದುದನ್ನು ಸಹಿಸಲಾಗದೆ ಬ್ರಿಟಿಷರು ಲಾಲಾ ಅವರನ್ನು ಕೊಂದರು. ಬುಷ್ ಸಾಮಾನ್ಯ ಇರಾಕಿ ಜನರ ಶತ್ರುವಲ್ಲ; ಅವನು ಇರಾಕಿನ ತೈಲದ ಮಿತ್ರ. ಆದ್ದರಿಂದ ಮುಲಾಜಿಲ್ಲದೆ ಲಕ್ಷಗಟ್ಟಲೆ ಜನರನ್ನು ಸಾಯಿಸುತ್ತಾನೆ. ಇಪ್ಪತ್ತನೆಯ ಶತಮಾನದ ದೌರ್ಜನ್ಯಗಳು ಟಿಪ್ಪು ಸುಲ್ತಾನನ ಹದಿನೆಂಟನೆಯ ಶತಮಾನದಲ್ಲಿ ಇಲ್ಲದಿರಲು ಶಕ್ಯವೆ? ಆದರೆ ಅದನ್ನು ಕನ್ನಡದ ದ್ರೋಹವೆಂದು ತೀರ್ಮಾನಿಸಿದರೆ ಟಿಪ್ಪುವನ್ನು ಕ್ಷಮಿಸಿಬಿಟ್ಟಂತಾಗುತ್ತದೆ. ಅವನು ತನ್ನ ಆಳ್ವಿಕೆಯನ್ನು ಸುಭದ್ರಗೊಳಿಸಿಕೊಳ್ಳುವ ಹುನ್ನಾರದಲ್ಲಿದ್ದ.

ನಮ್ಮ ದೇಶದ ರಾಜರು ತಮ್ಮ ಆಧಿಪತ್ಯವನ್ನು ಸ್ಥಾಪಿಸಲು ಹಾಗೂ ಭದ್ರಗೊಳಿಸಿಕೊಳ್ಳಲು ಏನೆಲ್ಲಾ ಮಾಡಿದ್ದಾರೆಂಬುದನ್ನು ಪರಿಶೀಲಿಸಿದರೆ ಟಿಪ್ಪು ಸುಲ್ತಾನ್ ಏಕೈಕ ಘೋರ ಪಾತಕಿಯಾಗಿ ಕಾಣುವುದಿಲ್ಲ. ಗುಲಾಮರ ವಿದ್ರೋಹವನ್ನು ಹತ್ತಿಕ್ಕಲು ರೋಮಿನಲ್ಲಿ ಸಾವಿರಾರು ಜನರನ್ನು ಕೊಲ್ಲಲಾಯಿತು. ಸ್ಪಾರ್ಟಕಸ್ ನೇತೃತ್ವದ ಹೋರಾಟ ವಿಫಲವಾದ್ದು ಅದರಿಂದ. ಅಂತಹ ನಿದರ್ಶನಗಳಿಗೆ ಇತಿಹಾಸದಲ್ಲಿ ಲೆಕ್ಕವಿಲ್ಲ. ಅವೆಲ್ಲಾ ಸಮರ್ಥನೀಯವಲ್ಲದಿರಬಹುದು, ಆದರೆ ಘಟನಾವಳಿಗಳನ್ನು ಬದಲಾಯಿಸಿ ಬರೆಯುವುದರಿಂದ ಲಾಭವೇನೂ ಇಲ್ಲ. ಕಲ್ಹಣನ 'ರಾಜತರಂಗಿಣಿ'ಯನ್ನು ಓದಿದರೆ ಇಂದಿನ ನೇಪಾಳದ ರಾಜನ ದುಷ್ಕೃತ್ಯಗಳು ಬಹಳ ಅಲ್ಪವೆಂದು ಭಾಸವಾಗುತ್ತದೆ. ಆ ಗ್ರಂಥದ ಏಳನೆಯ ತರಂಗವೊಂದನ್ನು ನೋಡಿದರೂ ಸಾಕು, ಟಿಪ್ಪು ಸುಲ್ತಾನ್ ಎಷ್ಟು ಸಭ್ಯನೆಂದು ಆಶ್ಚರ್ಯ ಉಂಟಾಗುತ್ತದೆ. ಟಿಪ್ಪುವಿಗಿದ್ದ ವಿದೇಶಿ ಬ್ರಿಟಿಷರ ಉಪಟಳ ಕಾಶ್ಮೀರದ ದೊರೆ ಹರ್ಷನಿಗೆ ಇರಲಿಲ್ಲ. ಸ್ವೇಚ್ಛಾಚಾರಿಯಾಗಿ ತನ್ನ ಪ್ರಜೆಗಳನ್ನು ಹುರಿದು ತಿಂದ ಅಪರೂಪದ ರಾಜ ಈ ಹರ್ಷ ಕ್ರಿ.ಶ. ೧೧ನೇ ಶತಮಾನದವನು (೧೦೮೯-೧೧೦೧). ಕನ್ನಡ ಸಾಹಿತ್ಯ ಪರಿಷತ್ತು ಕಲ್ಹಣನ ಗ್ರಂಥದ ಕನ್ನಡ ಅನುವಾದವನ್ನು ಪ್ರಕಟಿಸಿದೆ (ಮೂರನೆಯ ಮುದ್ರಣ ೨೦೦೨; ಅನುವಾದಕರು: ನೀರ್ಪಾಜೆ ಭೀಮಭಟ್ಟ). ಅದರ ಕೆಲವು ಭಾಗಗಳನ್ನು ಉದ್ಧರಿಸಬಹುದು: "ತನ್ನ ತಂದೆಯ ಮೇಲಿರುವ ವೈರದ ಪ್ರತೀಕಾರ ರೂಪವಾಗಿ ತಂದೆ ಕಟ್ಟಿಸಿದ ನಗರ, ಮಠ ಮೊದಲಾದ ಚಿಹ್ನೆಗಳನ್ನು ನಾಶಮಾಡಿಸಿದನು. ತ್ಯಾಗಶೀಲನೆಂದು ಖ್ಯಾತಿಗಳಿಸುವ ಸಲುವಾಗಿ ತಂದೆ ಸಂಗ್ರಹಿಸಿದ ಕೋಶ ಸಂಭಾರವನ್ನು ವ್ಯಯ ಮಾಡಿದ್ದಲ್ಲದೆ ಜಿಪುಣನಾದ ತಂದೆಯನ್ನು ಪಾಪಸೇನ ಎಂಬ ಹೆಸರಿನಿಂದ ಕರೆಯುವಂತೆ ಮಾಡಿದನು..." (ಪು. ೨೫೯). ಒಂದು ದಿನ ಲೋಷ್ಟಧರನು ಹಾಸ್ಯಾವಸರದಲ್ಲಿ ನಗುತ್ತ ರಾಜನೊಡನೆ ಹೇಳಿದನು: 'ಅರಸನೆ, ದೇವನೊಬ್ಬನು ಬಂಧನದಲ್ಲಿದ್ದಾನೆ. ಆತನ ಬಿಡುಗಡೆಯಾಗಬೇಕಾಗಿದೆ.' 'ಏನಿದರ ಅರ್ಥ?' ರಾಜನು ಪ್ರಶ್ನಿಸಿದನು. ಲೋಷ್ಟಧರನು ನುಡಿದನು:

ಹಿಂದೆ ಉದಭಾಂಡಪುರದಲ್ಲಿ ಭೀಮ ಶಾಹಿಯೆಂಬ ರಾಜನ ಕಲಶದೇವನ ರಾಜ್ಯದಲ್ಲಿ ಭೀಮಕೇಶವ ಎಂಬ ವಿಷ್ಣುವಿನ ಸ್ಥಾಪನೆ ಮಾಡಿ ತಕ್ಕ ಪುರೋಹಿತರನ್ನೂ, ಆಡಳಿತದವರನ್ನೂ ನೇಮಿಸಿದ್ದನು. ಆದರೆ ವ್ಯವಸ್ಥಾಪಕರು ಕಚ್ಚಾಡಿಕೊಂಡು ಮಂದಿರದ ಬಾಗಿಲು ಹಾಕಲ್ಪಟ್ಟಿತು. ಅವರ ವೈರವು ಶಾಂತವಾದಾಗ ದೇವಸ್ಥಾನದ ಬಾಗಿಲು ತೆರೆಯಲ್ಪಟ್ಟಿತು. ಆಗ ದೇವರ ರಜತ ಕವಚವು ಅಪಹೃತವಾಗಿರುವದು ಕಂಡುಬಂದಿತು. ಅನಂತರ ಭಯದಿಂದ ದೇವಸ್ಥಾನದ ಬಾಗಿಲು ಮತ್ತೆ ಹಾಕಲ್ಪಟ್ಟಿತು. ಕಳ್ಳರ ಭಯವನ್ನುಂಟುಮಾಡುವ ಮಂದಿರದ ಸಂಪತ್ತನ್ನೆಲ್ಲಾ ಇಲ್ಲಿಗೆ ತರಬೇಕು. ಮತ್ತು ದೇವಸ್ಥಾನದ ಬಾಗಿಲನ್ನು ತೆರೆದು ದೇವನಿಗೆ ಹೂ, ದೀಪ ಮೊದಲಾದ ಪೂಜೆ ಸದಾ ಸಿಗುವಂತಾಗಬೇಕು.'

''ಈ ರೀತಿ ಲೋಷ್ಟಧರನು ನುಡಿದುದನ್ನು ಕೇಳಿ ರಾಜನು ಅಂತೆಯೇ ನಡೆದುಕೊಂಡನು. ಮಣಿಸ್ವರ್ಣ ನಿರ್ಭರವಾದ ದೇವಸ್ಥಾನದ ಕೋಶವನ್ನೆಲ್ಲಾ ತರಿಸಿಕೊಂಡನು. ಮತ್ತೆ ಯೋಚಿಸಿದನು : 'ಶೂನ್ಯವಾದ ಮಂದಿರದಲ್ಲಿ ಇಷ್ಟೊಂದು ಸಂಪತ್ತು ಇರುವಾಗ, ಇನ್ನುಳಿದ ಪ್ರಾಚೀನ ಮಹಾದೇವ ಮಂದಿರಗಳಲ್ಲಿ ಎಷ್ಟೊಂದು ಅಪಾರ ಸಂಪತ್ತು ಇರಬಹುದು ?'

''ದೇವಳಗಳ ಸಂಪತ್ತನ್ನು ಕಸಿಯುವ ಬಗ್ಗೆ ಅಲ್ಲಿನ ವ್ಯವಸ್ಥಾಪಕರು ಉಪವಾಸ ಮಾಡಿದರು. ತಮ್ಮ ಮೇಲಿರುವ ಭಾರವನ್ನು ತಪ್ಪಿಸುವ ಸಲುವಾಗಿ ರಾಜನು ಮಾಡುತ್ತಿರುವ ಉದ್ಯಮವೆಂಬುದನ್ನು ತೋರಿಸಿಬಿಟ್ಟರು. ಆದರೂ ಅವನ ಕಾರ್ಯಕ್ರಮ ನಿಲ್ಲಲಿಲ್ಲ. ಅವನು ತನ್ನ ಸೇನೆ ಹಾಗೂ ಅದರ ವಿವಿಧ ಭಾಗಗಳನ್ನು ವೃದ್ಧಿಪಡಿಸುವ ವ್ಯಸನಕ್ಕೆ ಬಿದ್ದು, ದೇವಳಗಳ ಸಂಪತ್ತನ್ನು ಲೂಟಿಮಾಡುವ ಬುದ್ಧಿ ಬೆಳೆಯುತ್ತ ಹೋಯಿತು. ಹಿಂದಿನ ರಾಜರು ಅರ್ಪಿಸಿದ ಭುವನಾದ್ಭುತ ಕೋಶಗಳನ್ನು ಎಲ್ಲಾ ದೇವಮಂದಿರಗಳಿಂದಲೂ ಅತ್ಯಾಶೆಯಿಂದ ಅವನು ಅಪಹರಿಸಿದನು. ಇಷ್ಟರಿಂದಲೂ ಅವನು ತೃಪ್ತನಾಗಲಿಲ್ಲ. ದೇವಳಗಳಲ್ಲಿ ಉಳಿದಿದ್ದ ದೇವರ ಪ್ರತಿಮೆಗಳನ್ನು ತರುವ ಬಗ್ಗೆ ಉದಯರಾಜನನ್ನು ದೇವೋತ್ಪಾಟನ ನಾಯಕನನ್ನಾಗಿ ನೇಮಿಸಿದನು. ಅವನು ದೇವಮಂದಿರಕ್ಕೆ ಹೋಗುವಾಗ ಮೂಗು, ಕಾಲು, ಕೈ ಇಲ್ಲದ ನಗ್ನ ಭಿಕ್ಷುಕರಿಂದ ಮಲಮೂತ್ರ ಮೊದಲಾದವುಗಳನ್ನು ಮೂರ್ತಿಗಳಿಗೆ ಚೆಲ್ಲಿಸಿ, ಆಮೇಲೆ ಪ್ರತಿಮೆಗಳನ್ನು ಕೀಳುತ್ತಿದ್ದನು. ಚಿನ್ನ, ಬೆಳ್ಳಿ ಮೊದಲಾದವುಗಳಿಂದ ನಿರ್ಮಿಸಿದ ದೇವ ಪ್ರತಿಮೆಗಳು ಕಟ್ಟಿಗೆಯ ತುಂಡುಗಳಂತೆ ರಸ್ತೆಗಳಲ್ಲಿ ಹೊರಳಾಡುತ್ತಿದ್ದವು. ಹೂಗಳ ಬದಲಿಗೆ ಪ್ರತಿಮೆ ಮೇಲೆ ನಗ್ನ ಭಿಕ್ಷುಕರು ಉಗುಳುತ್ತಿದ್ದರು ಮತ್ತು ರಸ್ತೆಗಳಲ್ಲಿ ಹಗ್ಗಗಳಿಂದ ಅವುಗಳನ್ನು ಎಳೆದುಕೊಂಡು ಹೋಗುತ್ತಿದ್ದರು. ಹರ್ಷನೆಂಬ ತುರುಷ್ಕರಾಜನು ತನ್ನ ರಾಜ್ಯದ ಗ್ರಾಮ, ಪುರ, ನಗರಗಳಲ್ಲಿ ಯಾವ ಮಂದಿರದಲ್ಲಿಯೂ ಮೂರ್ತಿಯಿಲ್ಲದಂತೆ ಮಾಡದೆ ಉಳಿಯಲಿಲ್ಲ. ಆದರೆ ಒಂದು ನಗರದಲ್ಲಿ ಶ್ರೀ ರಣಸ್ವಾಮಿ, ಮತ್ತೊಂದು ಪಟ್ಟಣದಲ್ಲಿ ಶ್ರೀ ಮಾರ್ತಾಂಡದೇವ ಈ ಇಬ್ಬರು ದೇವರು ಮಾತ್ರ ಈ ಆಘಾತದಿಂದ ಪಾರಾಗಿ ಉಳಿದ ಪ್ರಭಾವಿಗಳಾಗಿದ್ದರು. ಒಂದು ಸಂದರ್ಭದಲ್ಲಿ,

> ಇಂದಿನ ವಿದ್ಯಮಾನಗಳನ್ನು ವಸ್ತುವನ್ನಾಗಿ ತೆಗೆದುಕೊಳ್ಳಲು ಸಂಕೋಚವಿರುವ ಕೆಲವು ಸಾಹಿತಿಗಳು ಯಾವುದೋ ಪೂರ್ವಕಾಲದ ಪಾತ್ರಗಳನ್ನು ಹಾಗೂ ಘಟನೆಗಳನ್ನು ಆಯ್ದುಕೊಂಡು ಸಮಕಾಲೀನ ಜಗತ್ತಿನ ಬಗ್ಗೆ ವ್ಯಾಖ್ಯಾನಿಸುವುದು ಅಪರೂಪವೇನಲ್ಲ. ಅಲ್ಲಿ ವ್ಯಕ್ತವಾಗುವುದು ಆ ಹಿಂದಿನ ಕಾಲದ ವಾಸ್ತವಿಕ ಜೀವನ ಕ್ರಮವಲ್ಲ. ಇಂದಿನ ವ್ಯಾಖ್ಯಾನಕ್ಕೆ ಅನುವಾಗುವಂತೆ ಆಯ್ಕೆಯ ಸ್ವಾತಂತ್ರ್ಯವನ್ನು ಸಾಹಿತಿ ಆರೋಪಿಸಿಕೊಳ್ಳುತ್ತಾನೆ. ಸಂಶೋಧನೆಗಳಲ್ಲಿ ಸಹ ಇಂತಹುದೇ ಸ್ವಾತಂತ್ರ್ಯವನ್ನು ಪಡೆಯಲು ಸಾಧ್ಯವೇ ಎಂಬುದು ಚರ್ಚೆಗೆ ಸೂಕ್ತವಾದ ವಿಷಯ. ಆರ್ಯರ ಆಗಮನದಿಂದ ಹಿಡಿದು ಉತ್ತರ ಕೊರಿಯ ಬಾಂಬು ಸಿಡಿಸಿರುವುದಕ್ಕೆ ಪ್ರತಿಕ್ರಿಯೆಯವರೆಗೆ ಯಾವುದನ್ನು ಕುರಿತು ಬೇಕಾದರೂ ನಮ್ಮ ಇಂಗಿತವನ್ನು ಸಂಶೋಧನೆಯ ಆಯಾಮದಲ್ಲಿ ತಂದು ನಿಲ್ಲಿಸುವುದು ಶಕ್ಯ. ಎಲ್ಲ ಸಂಶೋಧಕರೂ ತಾವು ಸತ್ಯವನ್ನು ಕಂಡುಕೊಂಡಂತೆ ಬಗೆಯುವುದು ಅಸಹಜವಲ್ಲ. ಅದರಿಂದಾಗಿ ಒಂದೇ ವಿಷಯದ ಬಗ್ಗೆ ಹತ್ತು 'ಸತ್ಯ'ಗಳು ನಮ್ಮ ಗಮನಕ್ಕೆ ಬರಲು ಸಾಧ್ಯ. ಅವುಗಳಲ್ಲಿ ನಾವು ಸ್ವತಃ ಯಾವುದನ್ನು ಆಯ್ಕೆ ಮಾಡಿಕೊಳ್ಳುತ್ತೇವೆಂಬುದು ಆ ಒಂದು ವಿಷಯದ ಬಗ್ಗೆ ನಾವು ತಾಳುವ ನಿಲುವಾಗಿರದೆ ಅನೇಕ ವಿಷಯಗಳ ಸಂಘಾತವನ್ನು ಕುರಿತಂತೆ ನಮ್ಮ ಮನೋಭಾವವನ್ನು ಪ್ರಕಟಿಸುವ ರೀತಿಯಲ್ಲಿ ಇರುತ್ತದೆ.

ರಾಜನು ದಾನ ಕೇಳುವ ವೇಳೆ, ಕನಕನೆಂಬ ಗಾಯಕನು ಪರಿಹಾಸಪುರದಲ್ಲಿಯೂ ನಗರವಾಸಿಯಾದ ಕುಲಶ್ರೀ ಎಂಬ ಶ್ರಮಣಕನು ನಗರದಲ್ಲಿಯೂ ವಿನೀತರಾಗಿ ಎರಡು ಬುದ್ಧ ಪ್ರತಿಮೆಗಳನ್ನು ರಾಜನಿಂದ ಉಳಿಸುವಂತೆ ಮಾಡುವುದರಲ್ಲಿ ಸಫಲರಾದರು'' (ಪು. ೨೬೯-೨೭೦).

ಇಂತಹ ಇನ್ನೂ ಹತ್ತಾರು ನಿದರ್ಶನಗಳನ್ನು ನಮ್ಮ ದೇಶದ ಬೇರೆ ಬೇರೆ ಭಾಗಗಳ ಇತಿಹಾಸದ ಪುಟಗಳಿಂದ ಹೆಕ್ಕಿ ತೆಗೆಯಬಹುದು. ಅವೆಲ್ಲದರ ಸಾರಾಂಶವಿಷ್ಟೆ: ತುರುಷ್ಕನಲ್ಲದ ಹರ್ಷನಂತಹ ರಾಜನು ದೇವೋತ್ಪಾಟನ ಕಾರ್ಯಕ್ರಮ ಹಾಕಿಕೊಳ್ಳಬಹುದು ಮತ್ತು ತುರುಷ್ಕನಾದ ಟಿಪ್ಪು ಸುಲ್ತಾನ್ ದೇವೋತ್ಪಾಟನದ ಬದಲು ಶೃಂಗೇರಿ, ಶ್ರೀರಂಗಪಟ್ಟಣ, ಶ್ರೀರಂಗ ಮುಂತಾದೆಡೆಗಳಲ್ಲಿ ದೇವಸ್ಥಾನಗಳ ಉದ್ಧಾರ ಕಾರ್ಯದಲ್ಲಿ ತೊಡಗಬಹುದು. ಮರಾಠರು ಶೃಂಗೇರಿಯಲ್ಲಿ ಎಸಗಿದ ಧ್ವಂಸಕ್ಕೆ ಇನ್ನಷ್ಟು ಧ್ವಂಸವನ್ನು ಕೂಡಿಸದೆ ಟಿಪ್ಪು ಸುಲ್ತಾನ್ ಅಲ್ಲಿ ಪರಿಹಾರ ಕಾರ್ಯಕ್ಕೆ ಸಹಾಯ ನೀಡಿದನೆಂದು ಹೇಳುತ್ತಾರೆ. ಸೋಮನಾಥ ದೇವಾಲಯವನ್ನು ತುರುಷ್ಕನೊಬ್ಬ ಲೂಟಿಮಾಡಿದ ನಂತರ ಅದಕ್ಕೆ ಪರಿಹಾರ ಒದಗಿಸುವುದಿರಲಿ, ಮತ್ತೆ ಮತ್ತೆ ಲೂಟಿಯಾಗುವುದನ್ನು ತಡೆಯುವಂತಹ ಮತ್ತೊಬ್ಬ ಟಿಪ್ಪು ಸುಲ್ತಾನ್ ಅಲ್ಲಿ ಉದಯವಾಗಲಿಲ್ಲ. ಟಿಪ್ಪು ಸುಲ್ತಾನ್ ಅವತರಿಸದಿದ್ದರೆ ಹೋಗಲಿ, ಸೋಮನಾಥನ ಪೂಜೆ ಮಾಡುತ್ತಿದ್ದ ಭಕ್ತರೇ ಏಕೆ ಲೂಟಿಯನ್ನು ತಡೆಯಲು ಮುಂದಾಗಲಿಲ್ಲ? ಈ ಪ್ರಶ್ನೆ ಮೂಲಭೂತವಾದ್ದು, ಏಕೆಂದರೆ ತುರುಷ್ಕರನ್ನು ನಿಂದಿಸುವುದರಿಂದ ಸನ್ನಿವೇಶದ ಪೂರ್ಣಚಿತ್ರ ದೊರೆಯುವುದಿಲ್ಲ. ನಮ್ಮ ಸಾಮಾಜಿಕ ರಚನೆಯ ಸ್ವರೂಪವು ನಾಗರಿಕರೆಲ್ಲಾ ಒಟ್ಟಾಗಿ ಸೇರಿ ಧ್ವಂಸಕಾರಿಗಳನ್ನು ವಿರೋಧಿಸಲು ಪ್ರತಿಬಂಧಕಗಳನ್ನೊಡ್ಡಿರಬಹುದೆ ? ಅಂದರೆ, ದೇವಸ್ಥಾನದೊಳಗೆ ಪ್ರವೇಶವಿಲ್ಲದವನು ಪ್ರವೇಶವಿದ್ದವರೊಡನೆ ಸಹಕರಿಸಿ ತುರುಷ್ಕರನ್ನು ಹಿಮ್ಮೆಟ್ಟಿಸಲು ಮುನ್ನುಗ್ಗಲಿಲ್ಲವೆನ್ನಬಹುದೆ ? ಇಂದಿನ ಸಾಮಾಜಿಕ ಐಕ್ಯತೆಗೆ ಪೂರಕವಾದ ಅಂಶಗಳನ್ನು ತಪ್ಪದೆ ಗುರುತಿಸಿಕೊಳ್ಳಬೇಕೆನ್ನುವುದಷ್ಟೇ ಈ ಘಟನೆಗಳ ಸಂದೇಶ. ನಾವು ಅಂತಹ ಸಂದೇಶವನ್ನು ಮಾನ್ಯ ಮಾಡದೆ ದೂಷಣೆಯ ಹೊಳೆಯನ್ನು ಮತ್ತೂ ರಭಸವಾಗಿ ಹರಿಸುವುದಾದರೆ ಇನ್ನಷ್ಟು ದೇವೋತ್ಪಾಟಕ ಹರ್ಷರು ಹುಟ್ಟಿಕೊಳ್ಳುತ್ತಾರೆ, ಮತ್ತಷ್ಟು ಸೋಮನಾಥ ಪ್ರಸಂಗಗಳು ಜರುಗುತ್ತವೆ. ಕನ್ನಡ ಜನರ ದ್ರೋಹಿಯಾದವನು ಶೃಂಗೇರಿ ಮುಂತಾದ ಸ್ಥಳಗಳಲ್ಲಿ ಅವರ ಮನವೊಲಿಸಿಕೊಳ್ಳಲು ಯತ್ನಿಸುವುದಿಲ್ಲ; ತನ್ನ ಕತ್ತಿಯನ್ನು ಇನ್ನಷ್ಟು ಘೋರವಾಗಿ ಝಳಪಿಸುತ್ತಾನೆ. ಅಂದರೆ ಶಾರದಾಂಬೆಯಲ್ಲಿ ಅಥವಾ ರಂಗನಾಥಸ್ವಾಮಿಯಲ್ಲಿ ಟಿಪ್ಪು ಸುಲ್ತಾನನಿಗೆ ಶ್ರದ್ಧೆ ಇದ್ದಿತೆಂದು ಇದರರ್ಥವಲ್ಲ; ಶ್ರದ್ಧೆ ಇದ್ದವರನ್ನು ತಣಿಸುವುದು ಅವನ ಉದ್ದೇಶವಾಗಿದ್ದಿರಬಹುದು. ಜೈನ ಬಸದಿಗಳು ಹಾಗೂ ಬೌದ್ಧ ವಿಹಾರಗಳನ್ನು ಕುರಿತಂತೆ ನಮ್ಮ ದೇಶದಲ್ಲಿ ಅಂತಹ ಮನೋಭಾವ ಉತ್ಕಟವಾಗಿ ಪ್ರಕಟವಾಗಿದ್ದಿದ್ದರೆ ಈಗಿರುವಷ್ಟು ಪಾಳು ಪ್ರದೇಶಗಳು ಇರುತ್ತಿರಲಿಲ್ಲ. ಒಂದು ವಿಶ್ವಕೋಶದಲ್ಲಿ ಬರುವ ವಾಕ್ಯ ಹೀಗಿದೆ : ''ಟಿಪ್ಪುವಿನ ಪತನವು ಹಿಂದು ಧರ್ಮದ

ಜೀರ್ಣೋದ್ಧಾರಕ್ಕೆ ಅನುಕೂಲ ಕಲ್ಪಿಸಿಕೊಟ್ಟಿತು." ಅದು ಬಹಳ ತಪ್ಪು ಗ್ರಹಿಕೆ ಎನ್ನಲು ಪುರಾವೆಗಳು ಬೇಕಾದಷ್ಟಿವೆ.

ಟಿಪ್ಪುವಿನ ಕಾಲದಲ್ಲಿ ಕನ್ನಡ ನಾಡಿನಲ್ಲಿ ಸುಭಿಕ್ಷೆ ಇದ್ದಿತು, ಅಥವಾ ಅಂದೇ ಸುವರ್ಣ ಕರ್ನಾಟಕವು ನಲಿಯುತ್ತಿತ್ತು, ಎಂದು ಹೇಳಲು ದಾಖಲೆಗಳಿಲ್ಲದಿರುವುದು ಸ್ಪಷ್ಟವಾಗಿದೆ. ಹೈದರ್ ಆಲಿಗೆ ಮುಂಚೆ ಚಿಕ್ಕದೇವರಾಜ ಒಡೆಯರ್ ಕಾಲದಲ್ಲಿ ಯಾವ ಕಂದಾಯ ಪದ್ಧತಿ ಇದ್ದಿತ್ತೋ ಅದನ್ನೇ ಹೈದರ್ ಮುಂದುವರಿಸಿಕೊಂಡು ಹೋದನೆಂದು ಲೂಯಿಸ್ ರೈಸ್ ತಮ್ಮ ಮೈಸೂರು ಗೆಜೆಟಿಯರ್‌ನಲ್ಲಿ ತಿಳಿಸಿರುವುದುಂಟು (೧೮೯೭ರ ಪ್ರಕಟಣೆ, ಪು. ೫೯೫ – ಡಾ॥ ಸಿದ್ದಲಿಂಗಸ್ವಾಮಿಯವರು ಕೃಷಿ ಸಂಬಂಧಗಳನ್ನು ಕುರಿತಂತೆ ರಚಿಸಿರುವ ಪ್ರೌಢ ಪ್ರಬಂಧದಲ್ಲಿ ನಮೂದಿಸಿರುವಂತೆ). ಟಿಪ್ಪು ಅದನ್ನು ಬದಲಾಯಿಸಿ ತನ್ನ ಆಳ್ವಿಕೆಯಲ್ಲಿದ್ದ ಪ್ರದೇಶವನ್ನು ತುಕಡಿಗಳನ್ನಾಗಿ ವಿಭಜಿಸಿದ ಮತ್ತು ಪ್ರತಿಯೊಂದು ತುಕಡಿಯಲ್ಲೂ ಮೇಲ್ವಿಚಾರಣೆ ಮತ್ತು ಕಂದಾಯ ವಸೂಲಿಗೆ ಅಧಿಕಾರಿಗಳನ್ನು ನೇಮಿಸಿದ. ಅವರನ್ನು ಅಸೋಫರು ಎಂದು ಕರೆಯಲಾಗಿತ್ತು. ಚಿಕ್ಕದೇವರಾಯನ ಕಾಲದ ಹರಿಕಾರರಂತೆ ಇವರೂ ಲಂಚ ಪಡೆಯುತ್ತಿದ್ದರೆಂದು ಹೇಳಲಾಗಿದೆ. ಹೇಗಿದ್ದರೂ ಲಂಚವು ನಮ್ಮ ದೇಶದ ಸಂಸ್ಕೃತಿಯ ಅವಿಭಾಜ್ಯ ಅಂಗವೇ ತಾನೆ! ಹಿಂದಿನ ಅವಧಿಯೊಡನೆ ಹೋಲಿಸಿದರೆ ಟಿಪ್ಪು ಕಾಲದಲ್ಲಿ ರೈತರ ಸಂಕಷ್ಟ ಕಡಿಮೆಯೇನೂ ಆಗಲಿಲ್ಲ; ಆದರೆ ಅದು ಗಮನಾರ್ಹವಾಗಿ ಹೆಚ್ಚಲೂ ಇಲ್ಲ. ಕೊಯಮತ್ತೂರಿನ ಪೂರ್ಣಯ್ಯನ ಅಧಿಕಾರವು ಟಿಪ್ಪು ಸಾವಿನ ನಂತರ ಬ್ರಿಟಿಷರ ಉಸ್ತುವಾರಿಕೆಯಲ್ಲಿ ಉನ್ನತ ಮಟ್ಟಕ್ಕೇರಿತು. ಐದು ವರ್ಷ ವಯಸ್ಸಿನ ಒಡೆಯರ್ ಬಾಲಕ ಸಿಂಹಾಸನವನ್ನೇರಿದ್ದ, ಜೂನ್ ೩೦, ೧೭೯೯ರಂದು. ಅದರ ಮಾರನೆಯ ದಿನವೇ ಪೂರ್ಣಯ್ಯ ದಿವಾನನಾದ. ಕ್ಲೋಸ್‌ಪೇಟೆ (ರಾಮನಗರ) ಖ್ಯಾತಿಯ ಕ್ಲೋಸ್ ಮತ್ತು




ಕರ್ನಲ್ ವೆಲ್ಲೆಸ್ಲಿ ಅವನಿಗೆ ಮಾರ್ಗದರ್ಶಕರಾಗಿದ್ದರು. ವೆಂಕಟಾದ್ರಿ ನಾಯಕನೆಂಬ ಪಾಳೇಗಾರನನ್ನು ಬಂಧಿಸಿದಾಗ ವೆಲ್ಲೆಸ್ಲಿ ಅವನನ್ನು ಯುದ್ಧ ಕೈದಿಯೆಂದು ಪರಿಗಣಿಸಬೇಕೆಂಬ ಸಲಹೆ ನೀಡಿದ. ಆದರೆ ಇತರರಿಗೆ ಎಚ್ಚರಿಕೆ ನೀಡಬೇಕೆಂಬ ದೃಷ್ಟಿಯಿಂದ ಪೂರ್ಣಯ್ಯ ಅವನನ್ನು ಗಲ್ಲಿಗೇರಿಸಿದ. ಕನ್ನಡ ನಾಡಿನ ಜನರ ಬಗೆಗಿನ ಟಿಪ್ಪುವಿನ ಆದರಕ್ಕೂ ಪೂರ್ಣಯ್ಯನ ಅಧಿಕಾರ ವಿಧಾನಕ್ಕೂ ಇರುವ ಅಂತರಕ್ಕೆ ಇದೊಂದು ನಿದರ್ಶನ. ನಂತರದ ಕಾಲದಲ್ಲಿ ದಿವಾನಗಿರಿಯು ವಂಶ ಪಾರಂಪರ್ಯವಾಗಬೇಕೆಂದು ಬಯಸಿದ ಪೂರ್ಣಯ್ಯನಿಗೆ ಬ್ರಿಟಿಷರ ಬೆಂಬಲವಿರಲಿಲ್ಲ. ಟಿಪ್ಪುವಿನ ವಂಶದವರಾದರೋ ಬ್ರಿಟಿಷರ ಸೆರೆಮನೆ ಸೇರಿದ್ದರು, ಅದು ಬೇರೆ ವಿಚಾರ. ೧೮೩೦-೩೧ರ ರೈತರ ದಂಗೆಯು ನಗರ (ಹೊಸನಗರ)ದಲ್ಲಿ ಬೂದಿ ಬಸಪ್ಪನ ನೇತೃತ್ವದಲ್ಲಿ ಆರಂಭವಾದ್ದು ಟಿಪ್ಪು ಕಾಲದ ಕಂದಾಯ ಪದ್ಧತಿಯನ್ನು ಪೂರ್ಣಯ್ಯನ ಕಾಲದಲ್ಲಿ ಬಹಳವಾಗಿ ಬದಲಾಯಿಸಿದ್ದುದರಿಂದ. ಬೇರೆ ಕಾರಣಗಳೂ ಇದ್ದುವು, ಆದರೆ ರೈತರ ಮೇಲಿನ ಅಧಿಕ ಹೊರೆಯು ಪ್ರಮುಖ ಕಾರಣವಾಗಿದ್ದಿತು. ತನ್ನ ಬೊಕ್ಕಸ ತುಂಬಿಕೊಳ್ಳಲು ಟಿಪ್ಪು ಇಂಥದೇ ಕ್ರಮ ಅನುಸರಿಸಬಹುದಿತ್ತು. ಆದರೆ ಮಧ್ಯವರ್ತಿಗಳನ್ನು ತೆಗೆದುಹಾಕಿ ಅದರಿಂದ ಹೆಚ್ಚಿದ ಆದಾಯದಿಂದ ಅವನು ತೃಪ್ತನಾದ. ಕನ್ನಡ ನಾಡಿನ ಜನರು ಟಿಪ್ಪು ಕಾಲದಲ್ಲಿ ಎಷ್ಟು ಸಂತೃಪ್ತರಾಗಿದ್ದರೋ ಅದಕ್ಕಿಂತಲೂ ಕಡಿಮೆ ಮಟ್ಟದಲ್ಲಿ ಪೂರ್ಣಯ್ಯ -ಬ್ರಿಟಿಷರ ಆಳ್ವಿಕೆಯಲ್ಲಿ ತೃಪ್ತಿಪಡಬೇಕಾದ್ದು ಅನಿವಾರ್ಯವಾಯಿತು. ಕನ್ನಡ ನಾಡಿನ ಜನರಿಗೆ ದ್ರೋಹ ಬಗೆದಿದ್ದು ಯಾರೆಂದು ಇದರಿಂದ ಊಹಿಸಬಹುದಾಗಿದೆ. ಪೂರ್ಣಯ್ಯನ ನಂತರ ದಿವಾನನಾಗಿದ್ದ ರಾಮರಾವ್ (೧೮೧೧-೧೮೧೫) ಒಂದು ರೀತಿಯಲ್ಲಿ ಬೂದಿ ಬಸಪ್ಪನ ದಂಗೆಗೆ ಅವತರಣಿಕೆಯನ್ನು ರಚಿಸಿಕೊಟ್ಟ. ಇಕ್ಕೇರಿಯ ರೈತರು ಆಗ

ಬ್ರಿಟಿಷ್ ರೆಸಿಡೆಂಟನಾಗಿದ್ದವನಿಗೆ ಸಲ್ಲಿಸಿದ ಅಹವಾಲಿನಲ್ಲಿರುವ ಒಂದು ಭಾಗ ಹೀಗಿದೆ: ''ಟಿಪ್ಪು ಅಧಿಕಾರದಲ್ಲಿದ್ದಾಗ ನಾವು, ರೈತರು, ಶಾಂತಿ-ನೆಮ್ಮದಿಗಳಿಂದ ಬದುಕಿದ್ದೆವು. ಆದರೆ ರಾಜನ ಪ್ರಭುತ್ವದಲ್ಲಿ ನಿರಂತರವಾಗಿ ಜಾರಿಯಲ್ಲಿರುವ ಮರ್ದನ ಮತ್ತು ಕ್ರೌರ್ಯ ನಮ್ಮನ್ನು ಹಿಂಡಿ ಹಿಪ್ಪೆ ಮಾಡಿದೆ. ಇದು ಅಸಹನೀಯ, ಅಧಿಕಾರಿಗಳು ವಸೂಲು ಮಾಡುವ ತೆರಿಗೆಗಳು ಎಷ್ಟೊಂದು ಹೆಚ್ಚಿವೆಯೆಂದರೆ ಕೆಲವೇಳೆ ನಾವು ನಮ್ಮ ಮಕ್ಕಳನ್ನೇ ಮಾರಬೇಕಾದ ಸಂದರ್ಭ ಬಂದಿದೆ'' (ಡಾ|| ಸಿದ್ದಲಿಂಗಸ್ವಾಮಿ ಅವರ ಪುಸ್ತಕದ ೪೯ನೇ ಪುಟ. ಅನುವಾದವನ್ನು ಪದಶಃ ಮಾಡಲಾಗಿಲ್ಲ). ಇದನ್ನು ಪರಾಮರ್ಶೆ ಮಾಡಿದಾಗ ಟಿಪ್ಪುವಿನ ಜನಪರ ನಿಲುವಿಗೆ ಬೇರೆ ವ್ಯಾಖ್ಯಾನದ ಅಗತ್ಯವಿದೆಯೆನಿಸುವುದಿಲ್ಲ.

ಹೈದರ್-ಟಿಪ್ಪು ಕಾಲದ ನಾಣ್ಯಗಳಲ್ಲಿ ಕನ್ನಡವನ್ನು ಕೈಬಿಟ್ಟು ಕೇವಲ ಪರ್ಶಿಯನ್ ಲಿಪಿಯನ್ನು ಬಳಸಲಾಗಿದೆಯೆಂಬುದು ಒಂದು ಅರ್ಧ ಸತ್ಯ, ಅಷ್ಟೆ. ಹೈದರನ ಕಾಲದ ನಾಣ್ಯಗಳಲ್ಲಿ ಶಿವ-ಪಾರ್ವತಿಯರ ಚಿತ್ರವನ್ನು ಬಿಡಿಸಲಾಗಿದೆ. ಅದಕ್ಕಾಗಿ ಹೈದರನಿಗೆ ವಿಶೇಷ ಮನ್ನಣೆ ನೀಡಬೇಕೆಂದು ಇದರ ಸೂಚನೆಯಲ್ಲ. ಸಾಮಾನ್ಯವಾಗಿ ಆಳ್ವಿಕೆ ನಡೆಸುವ ರಾಜರು ತಮ್ಮ ತಕ್ಷಣದ ಪ್ರಜೆಗಳನ್ನು ತಣಿಸಲು ಯತ್ನಿಸುತ್ತಾರೆ ಮತ್ತು ಆಕ್ರಮಿತ ಪ್ರದೇಶಗಳಲ್ಲಿ ವಿರೋಧಿಗಳನ್ನು ಹತ್ತಿಕ್ಕಲು ಉಪಟಳಗಳನ್ನು ನೀಡುತ್ತಾರೆ. ತನಗಿಷ್ಟವಿಲ್ಲದಿದ್ದರೂ ಹೈದರ್ ಶಿವ-ಪಾರ್ವತಿಯರನ್ನು ನಾಣ್ಯಗಳಲ್ಲಿ ಬಿಡಿಸಿದ್ದಾನೆಂಬ ವಾದ ಹೂಡಲು ಅಡ್ಡಿಯಿಲ್ಲ. ಆದರೆ ಅದನ್ನು ನಮ್ಮ ಅರ್ಥಮಂತ್ರಿ ಪಿ. ಚಿದಂಬರಂ ಮುದ್ರಿಸುವ ನೂರು ರೂಪಾಯಿ ನೋಟುಗಳಲ್ಲಿ ಗಾಂಧೀಜಿ ಚಿತ್ರ ಅಚ್ಚು ಮಾಡುವುದರ ಬಗೆಗೂ ಹೇಳಬಹುದು! ಟಿಪ್ಪುವಿನ ಕೆಲವು ನಾಣ್ಯಗಳಲ್ಲಿ ಒಂದು ಕಡೆ ಪರ್ಶಿಯನ್ ಲಿಪಿಯಿದ್ದರೆ ಇನ್ನೊಂದು ಕಡೆ ಗಿಣಿಯನ್ನುಳ್ಳ ಶೃಂಗೇರಿ ಶಾರದಾಂಬೆಯ ಚಿತ್ರವೂ ಇದೆ. ಇದನ್ನು ಕನ್ನಡ ವಿರೋಧವೆಂದು ಕರೆಯುವುದಾದರೆ ಕನ್ನಡನಾಡಿನ ಸಾಂಸ್ಕೃತಿಕ ಪ್ರತಿಮೆಯಾದ ಶಾರದಾಂಬೆಯ ಇರುವಿಕೆಯನ್ನು ಏನೆಂದು ವ್ಯಾಖ್ಯಾನಿಸಬೇಕು? ಅಷ್ಟಕ್ಕೂ, ಟಿಪ್ಪುವಿಗೆ ಮುನ್ನವಿದ್ದ ''ಕಂಠೀರಾಯ ಪಗೋಡ'' ನಾಣ್ಯಗಳು ಟಿಪ್ಪುವಿನ ಕಾಲದಲ್ಲಿ ಚಲಾವಣೆಯಲ್ಲಿ ಮುಂದುವರೆದಿದ್ದವು. ಸ್ವಾರಸ್ಯದ ವಿಷಯವೆಂದರೆ, ಟಿಪ್ಪುವಿನ ನಂತರದ ಕೃಷ್ಣರಾಜ ಒಡೆಯರ ಕೆಲವು ನಾಣ್ಯಗಳಲ್ಲಿ ಒಂದು ಕಡೆ ''ಜರ್ಬ್ -ಇ- ಮಹಿಶೂರ್'' (ಮೈಸೂರು ಸಂಸ್ಥಾನ) ಎಂದು ಪರ್ಶಿಯನ್‌ನಲ್ಲಿ ಬರೆಯಲಾಗಿದೆ. ಇನ್ನೊಂದು ಕಡೆ ರಾಜನನ್ನು ಸೂಚಿಸುವ 'ಕೃಷ್ಣ' ಎಂಬ ಪದವಿದೆ. ಹನ್ನೆರಡೂವರೆ ಕಾಸಿನ ಈ ನಾಣ್ಯಗಳು ಕನ್ನಡ ಕುವರನ ಕಾಲದವು. ಕೆಲವು ದಶಕಗಳ ನಂತರ ಬ್ರಿಟಿಷರ ನಾಣ್ಯಗಳನ್ನೇ ಉಪಯೋಗಿಸಬೇಕೆಂಬ ಶಾಸನ ಜಾರಿಗೆ ಬಂದಿತು. ಅವುಗಳಲ್ಲಿ ಕನ್ನಡವಿರಲಿಲ್ಲವೆಂದು ತಿಳಿದಿದ್ದರೂ ''ಯದುಕುಲಸಂತಾನಶ್ರೀ''ಗೆ ಸೇರಿದ ಒಡೆಯರು ಆಕ್ಷೇಪವೆತ್ತಲಿಲ್ಲ. ಹೈದರ್-ಟಿಪ್ಪು ಕಾಲದ ನಾಣ್ಯಗಳ ಬಗ್ಗೆ ಸಮಗ್ರವಾದ ಸಂಶೋಧನಾ ಗ್ರಂಥವೊಂದನ್ನು ಡಾ|| ಎ.ವಿ. ನರಸಿಹಮೂರ್ತಿ ಪ್ರಕಟಿಸಿದ್ದಾರೆ. ಅದು ೧೯೭೦ರಲ್ಲಿ ಮರುಮುದ್ರಣ ಕಂಡಿದೆ. ಆ ಗ್ರಂಥವು ಇಲ್ಲವೇ ಇಲ್ಲವೇನೋ ಎಂಬಂತೆ ಟಿಪ್ಪು ಕಾಲದ ನಾಣ್ಯಗಳ ಬಗ್ಗೆ ಕೆಲವು ವಿದ್ವಾಂಸರು ತಮಗೆ ತೋಚಿದಂತೆ ಹೇಳುವುದು ಸಾರ್ವಜನಿಕರಿಗೆ ಮಾಡುವ ಅಪಚಾರವೇ ಸರಿ.

ಟಿಪ್ಪು ಕನ್ನಡನಾಡಿನ ಎಲ್ಲೆಗಳನ್ನು ವಿಸ್ತರಿಸಿದನೆಂದು ಹೆಮ್ಮೆ ಪಟ್ಟುಕೊಳ್ಳುವುದು ನನಗೆ ಅಪಥ್ಯವೆನಿಸುತ್ತದೆ. ಏಕೆಂದರೆ, ಆ ಹೊಸ ಪ್ರದೇಶಗಳ ಜನ ಇದನ್ನು ಸ್ವಾಗತಿಸಿರಲಾರರು. ಬೇರೆ ರಾಜ್ಯಗಳ ರಾಜಕೀಯ ಪಟುಗಳನ್ನು ರಾಜಕೀಯ ಹಾಗೂ ಹಣದ ಕಾರಣಗಳಿಗೆ ನಮ್ಮ ರಾಜ್ಯದಿಂದ ರಾಜ್ಯಸಭೆಗೆ ಚುನಾಯಿಸಿ ಕಳಿಸಿರುವ ನಾವು ಟಿಪ್ಪು ಬಗ್ಗೆ ಅಸಹ್ಯ ಪಡುವಂಥದು ಕನ್ನಡದ ಹಾಗೂ ಕನ್ನಡ ಜನರ ಬಗೆಗಿನ ಪ್ರೀತಿಯ ದ್ಯೋತಕವಾಗುವುದಿಲ್ಲ. ಟಿಪ್ಪುವಿನ ಪತನವು ಬ್ರಿಟನ್ನಿನ ಆಡಳಿತವನ್ನು ಸುಗಮಗೊಳಿಸಿದೆ, ಆಧಿಪತ್ಯ ಭದ್ರವಾದ ನೆಲೆಯಲ್ಲಿ ಬೇರೂರಿದೆ, ಎಂಬಿತ್ಯಾದಿ ಮಾತುಗಳನ್ನು ಅಂದಿನ ಬ್ರಿಟಿಷ್ ರಾಜಕೀಯ ಮುತ್ಸದ್ದಿಗಳು, ವಸಾಹತು ಆಡಳಿತಗಾರರು ಮತ್ತು ಬ್ರಿಟನ್ನಿನ ಕೆಲವು ಚರಿತ್ರಕಾರರು ಹೇಳಿರುವುದಕ್ಕೆ ವಿಪುಲವಾದ ದಾಖಲೆಗಳಿವೆ. ಕನ್ನಡ ನಾಡು ಟಿಪ್ಪುವಿನ ಬಗ್ಗೆ ಹೆಮ್ಮೆಪಡಲು ಇದೊಂದು ಮಹತ್ವದ ಸಂಗತಿ. ಇಡೀ ದೇಶದಲ್ಲಿ ಎಲ್ಲ ರಾಜ-ಮಹಾರಾಜರೂ ಬ್ರಿಟಿಷರಿಗೆ ಡೊಗ್ಗು ಸಲಾಮು ಹೊಡೆಯುತ್ತಾ ತಮ್ಮ ಸ್ಥಾನಗಳನ್ನು ಭದ್ರಮಾಡಿಕೊಂಡು ಜನಗಳನ್ನು ನಾಯಿನರಿಗಳಿಗೆ ಹೊಡೆದು ಹಾಕುತ್ತಿದ್ದಂತಹ ಸಂದರ್ಭದಲ್ಲಿ ಟಿಪ್ಪು ಬ್ರಿಟಿಷರಿಗೆ ಶರಣಾಗದೆ ಅವರನ್ನು ದೇಶದಿಂದ ಒದ್ದೋಡಿಸಬೇಕೆಂಬ ಆಶಯವನ್ನು ಇಟ್ಟುಕೊಂಡಿದ್ದ. ಮರಾಠರು, ಹೈದರಾಬಾದಿನ ನಿಜಾಮ, ಜಯಪುರದ ಮಹಾರಾಜ, ಇಂಥವರೆಲ್ಲಾ ಟಿಪ್ಪುವಿನೊಡನೆ ಸೇರಿ ಬ್ರಿಟಿಷರ ವಿರುದ್ಧ



# ಕಣ್ಣು

ನಾನು
ನೋಡಿದಲ್ಲೆಲ್ಲಾ ಗೆರೆ
ಮೂಡಿ
ಚಿತ್ರವಾಗುವುದನ್ನು
ನಾನು
ಕವಿತೆ
ಎಂದಾಗ

ನನ್ನ ಕಣ್ಣು
ಸಮುದ್ರ ಮೀನುಗಾರನ
ನೋಡಿ ನಗುವಂತೆ
ಸಾವಿರ ನಗೆ ನಕ್ಕಿತು.

ಅಂಕುರ್ ಬೆಟಗೇರಿ
೧೦೬, ಇ.ಎ.ಟಿ. ರಸ್ತೆ, ಬಸವನಗುಡಿ
ಬೆಂಗಳೂರು - ೫೬೦ ೦೦೪

ಹೋರಾಡುವ ಬದಲಾಗಿ ತಾರತಮ್ಯ ಮಾಡುತ್ತಿದ್ದಾಗ ಫ್ರೆಂಚರ ನೆರವನ್ನು ಟಿಪ್ಪು ಬಯಸಿದನೆಂಬುದನ್ನು ಟೀಕಿಸಲಾಗುತ್ತದೆ. ಮುಳುಗುವವನಿಗೆ ಆಪತ್ಕಾಲೀನ ಹುಲ್ಲು ಕಡ್ಡಿ ಆದಾಗಿತ್ತೆಂದು ಹೇಳಿದರೆ ತಪ್ಪಾಗಲಾರದು. ಬ್ರಿಟಿಷರಿಗೆ ಶರಣಾಗಿದ್ದರೆ ಟಿಪ್ಪು ಕನ್ನಡನಾಡನ್ನು ಮಾತ್ರವಲ್ಲದೆ ಅವನು ಗೆದ್ದಿದ್ದ ಪ್ರದೇಶಗಳನ್ನೂ ಆಳಿಕೊಂಡು ನೂರ್ಕಾಲ ಬದುಕಬಹುದಾಗಿತ್ತು. ಸ್ಪೇನಿನ ಅಂತರ್ಯುದ್ಧದ ಸಮಯದಲ್ಲಿ ದಿಟ್ಟ ಮಹಿಳೆ ಡೊಲಾರಿಸ್ ಇಬರೂರಿ ಹೇಳಿದ್ದಳು: ಮಂಡಿಯೂರಿ ಜೀವಿಸುವುದಕ್ಕಿಂತ ಸೆಟೆದು ನಿಂತು ಮಡಿಯುತ್ತೇನೆ ಎಂದು. ಕನ್ನಡ ನಾಡಿನ ಅಬ್ಬಕ್ಕ, ಕಿತ್ತೂರು ರಾಣಿ ಚೆನ್ನಮ್ಮ ಇವರ ಸಮಕ್ಕೆ ನಿಲ್ಲಬಲ್ಲ ಇನ್ನೊಬ್ಬನೇ ವ್ಯಕ್ತಿ ಟಿಪ್ಪು ಸುಲ್ತಾನ್. ಮೊಗಲರ ವಿರುದ್ಧ ಕಡೆಯ ಕಡೆಯವರೆವಿಗೂ ಹೋರಾಡಿದ ಪಂಜಾಬಿನ ರಣಜಿತ್ ಸಿಂಗ್ ಮತ್ತು ಬ್ರಿಟಿಷರ ವಿರುದ್ಧ ಅಷ್ಟೇ ಅಪ್ರತಿಮವಾಗಿ ಸೆಣಸಿದ ಟಿಪ್ಪು ಸುಲ್ತಾನ್ ನಮ್ಮ ದೇಶದ ಈಚಿನ ಶತಮಾನಗಳ ಇತಿಹಾಸದಲ್ಲಿ ಅತಿ ಹೆಚ್ಚಿನ ಗೌರವಕ್ಕೆ ಪಾತ್ರರಾದವರು. ರಣಜಿತ್ ಸಿಂಗ್‌ಗೆ ಪಂಜಾಬಿನ ಜನರ ಬಗೆಗಿನ ಆದರವನ್ನು ನೆನೆಯುತ್ತೇವೆ, ಆದರೆ ಟಿಪ್ಪು ಮುಸಲ್ಮಾನನಾದ್ದರಿಂದ ಅವನ ಕನ್ನಡನಾಡಿನ ನಿಷ್ಠೆಯನ್ನು ಗುರುತಿಸಲು ಹಿಂಜರಿಯುತ್ತೇವೆ. ಇಂದಿನ ಸಾಮಾಜಿಕ-ರಾಜಕೀಯ ಸಂದರ್ಭದ ಕೆಲವು ವೈಯಕ್ತಿಕ ಭಾವನೆಗಳನ್ನು ಹಂದಿನೆಂಟನೆಯ ಶತಮಾನವನ್ನು ವಿಮರ್ಶಿಸುವಾಗ ಆರೋಪಿಸುವುದು ಇದಕ್ಕೆ ಕಾರಣ. ಅದನ್ನೇ ವಸ್ತುನಿಷ್ಠ ಚಾರಿತ್ರಿಕ ದೃಷ್ಟಿಯೆಂದು ಭ್ರಮಿಸುವ ಪದ್ಧತಿ ಇದ್ದರೆ ಅದರ ಜೊತೆ ಸಂವಾದ ಸಾಧ್ಯವಾಗುವುದಿಲ್ಲ. ಕಲ್ಹಣನು 'ರಾಜತರಂಗಿಣಿ'ಯ ಆರಂಭದಲ್ಲಿ ಹೇಳುತ್ತಾನೆ: ''ವಾಸ್ತವ ದೃಷ್ಟಿಯಿಂದ ಮಾತ್ರ ವ್ಯವಹರಿಸಿದಲ್ಲಿ ಸಜ್ಜನರು ತೃಪ್ತಿಪಡಬಹುದೆಂದು ನಾನು ನಂಬಿದ್ದೇನೆ. ರಾಗದ್ವೇಷ ರಹಿತನಾದ ಇತಿಹಾಸಕಾರನ ವಾಣಿ, ಗತ ಇತಿಹಾಸವನ್ನು ಚಿತ್ರಿಸುವದರಲ್ಲಿ ಯಶಸ್ವಿಯಾಗುತ್ತದೆ'' (ಪು. ೧). ಅದನ್ನು ಅನುಷ್ಠಾನಕ್ಕೆ ತರುವುದು ಬೌದ್ಧಿಕ ಆರೋಗ್ಯಕ್ಕೆ ಒಳ್ಳೆಯದು.

ಪ್ರಸ್ತುತ ಸಂದರ್ಭದಲ್ಲಿ ನಮ್ಮ ಕನ್ನಡದ ಪ್ರೇಮವನ್ನು ಮೆರೆಯಲು ಟಿಪ್ಪುವನ್ನು ಎಳೆದುತರಬೇಕಾಗಿ ಬಂದ ಪ್ರಸಂಗವು ನಮ್ಮ ದುರಂತ; ಕನ್ನಡದ ದುರಂತ ಕೂಡ.

ಡಾ|| ಜಿ. ರಾಮಕೃಷ್ಣ

# ಆಧುನಿಕ ಭಾರತದ ಬೃಹತ್ ಭೂ ಆಕ್ರಮಣ ಚಳುವಳಿ

> ದೇಶೀಯ ನೆಲದಲ್ಲಿ ಮೂಲ ನಿವಾಸಿಗಳನ್ನು ಹೊರದೂಡಿ ತಮಗೆ ವಿಧೇಯರಾಗಿರುವ ಗುಲಾಮರನ್ನಿಟ್ಟುಕೊಂಡು ತಮ್ಮ ಮನಬಂದಂತೆ ಕೈಗಾರಿಕೆ, ವ್ಯಾಪಾರ, ವ್ಯವಹಾರಗಳನ್ನು ನಡೆಸಿ ದೇಶದ ಅಮೂಲ್ಯ ಸಂಪತ್ತನ್ನು ಮನಬಂದಂತೆ ಲೂಟಿ ಮಾಡುವ, ಕುರುಡು ಕಾಂಚಾಣ ಕುಣಿದು ಕುಪ್ಪಳಿಸಿ, ಕಾಲಿಗೆ ಸಿಕ್ಕವರನ್ನು ತುಳಿದು ಅಟ್ಟಹಾಸದಿಂದ ಮೆರೆದಾಡುವ ನವವಸಾಹತು ಕೇಂದ್ರಗಳೇ ಈ ವಿಶೇಷ ಆರ್ಥಿಕ ವಲಯಗಳು ಬಂಡವಾಳಗಾರರು ನೀಡುವ ಅಪಾರ ಲಂಚ ರುಷುವತ್ತುಗಳಿಗೆ ನಮ್ಮನ್ನಾಳುವ ರಾಜಕಾರಣಿಗಳು ಬಲಿಯಾಗಿ ದೇಶಕ್ಕೆ ವಿನಾಶಕಾರಿ ಗಂಡಾಂತರವನ್ನು ಆಹ್ವಾನಿಸು ತ್ತಿರುವುದು ೨೧ನೇ ಶತಮಾನದ ದುರಂತ. ಮತ್ತೊಮ್ಮೆ ನಮ್ಮ ದೇಶವನ್ನು ದಾಸ್ಯದ ಸಂಕೋಲೆಗಳಿಗೆ ದೂಡುವ ಅಪಾಯ ಇದರಿಂದ ನಿಚ್ಚಳವಾಗುತ್ತಿದೆ.

**ಸಿ. ಯತಿರಾಜು**

ಜಜ್ಜಾರ್ ಹರಿಯಾಣ ರಾಜ್ಯದ ಒಂದು ಸಣ್ಣ ಪಟ್ಟಣ. ಅವರ ಸುತ್ತಮುತ್ತಲಿನ ರೈತರು ತಮ್ಮ ಉತ್ಕೃಷ್ಟವಾದ ಕೃಷಿ ಭೂಮಿಯನ್ನು ಎಕರೆಗೆ ೨೨ ಲಕ್ಷ ರೂ.ಗಳ ಬೆಲೆಗೆ ಮಾರುತ್ತಿದ್ದಾರೆ. ಅವರು ಹರಿಯಾಣ ರಾಜ್ಯ ಕೈಗಾರಿಕಾ ಮತ್ತು ಮೂಲ ಸೌಕರ್ಯ ಅಭಿವೃದ್ಧಿ ಕಾರ್ಪೊರೇಷನ್ ಹಾಗೂ ರಿಲಯನ್ಸ್ ಇಂಡಿಯಾ ಲಿಮಿಟೆಡ್ ಕಂಪನಿಗಳು ಜೊತೆಗೂಡಿ ಆರಂಭಿಸಲಿರುವ 'ಬಹು ಉತ್ಪನ್ನ ವಿಶೇಷ ಆರ್ಥಿಕ ವಲಯ'ಕ್ಕೆ ತಮ್ಮ ಜಮೀನು ಗಳನ್ನು ಮಾರುತ್ತಿದ್ದಾರೆ. ಈ ಪ್ರದೇಶದ ಸುಮಾರು ೨೫,೦೦೦ ಎಕರೆ ಪ್ರದೇಶ ಈ ರೀತಿ ರೈತರಿಂದ ಮಾರಲ್ಪಡುತ್ತಿದೆ. ರಾಷ್ಟ್ರದ ಮುಖ್ಯ ಹೆದ್ದಾರಿ ಗ್ರ್ಯಾಂಡ್ ಟ್ರಂಕ್ ರಸ್ತೆಗೆ ಹೊಂದಿಕೊಂಡಂತೆ ಸೋನಾಪೇಟ್ ಸಮೀಪ ರಾಜೀವ್ ಗಾಂಧಿ 'ಶಿಕ್ಷಣ ನಗರಿ' ಸ್ಥಾಪನೆಗಾಗಿ ಸುಮಾರು ೨೦೦೦ ಎಕರೆ ಪ್ರದೇಶ ಮಾರಾಟಗೊಳ್ಳುತ್ತಿದೆ. ಇವೆರಡು ಹರಿಯಾಣ ರಾಜ್ಯದ ಎರಡು ವಿಶೇಷ ಆರ್ಥಿಕ ವಲಯಗಳ (ವಿ.ಆ.ವ.) ಮಾದರಿಗಳಷ್ಟೇ. ಹರಿಯಾಣ ರಾಜ್ಯವೊಂದರಲ್ಲೆ ಇಂತಹ ೬೦ ವಿಶೇಷ ಆರ್ಥಿಕ ವಲಯಗಳನ್ನು ಯೋಜಿಸಲಾಗುತ್ತಿದೆ. ಇವುಗಳ ಪೈಕಿ ೩೫ಕ್ಕೆ ಈಗಾಗಲೇ ಕೇಂದ್ರದ ತಾತ್ವಿಕ ಒಪ್ಪಿಗೆ ದೊರೆತಿದೆ. ಕೇವಲ ಇದು ಹರಿಯಾಣ ರಾಜ್ಯದ ಕತೆಯಲ್ಲ. ಇಂದು ದೇಶಾದ್ಯಂತ ಅನೇಕ ರಾಜ್ಯಗಳು ಸ್ಪರ್ಧೆಗಿಳಿದು ಇಂತಹ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ಮುಂದಾಗಿವೆ.

ಮುಂಬೈ ನಗರದ ಹೊರವಲಯದಲ್ಲಿ ದೇಶದಲ್ಲೇ ಅತ್ಯಂತ ದೊಡ್ಡದಾದ ಆರ್ಥಿಕ ವಲಯವೊಂದನ್ನು ಸ್ಥಾಪಿಸಲು ಸುಮಾರು ೩೫,೦೦೦ ಎಕರೆ ಬೆಲೆಬಾಳುವ ಭೂಮಿಯನ್ನು ವಶಪಡಿಸಿಕೊಳ್ಳಲು ಸರ್ಕಾರ ರೈತರಿಗೀಗಾಗಲೇ ನೋಟಿಸ್ ಜಾರಿ ಮಾಡಿದೆ. ಸುಮಾರು ೩೦,೦೦೦ ರೈತರು ರಿಲಯನ್ಸ್‌ನ ಈ ಯೋಜನೆಯ ವಿರುದ್ಧ ಪ್ರತಿಭಟಿಸಿದ್ದಾರೆ. ಒಂದು ಅಂದಾಜಿನಂತೆ ಸುಮಾರು ೨೦೦ ಅಂತರರಾಷ್ಟ್ರೀಯ ಹೂಡಿಕೆ ದಾರರು ೩ ಲಕ್ಷ ಕೋಟಿ ರೂ.ಗಳ ಬಂಡವಾಳ ವನ್ನು ಈ ಆರ್ಥಿಕ ವಲಯದಲ್ಲಿ ಹೂಡಲಿದ್ದಾರೆ ಎಂದು ನಿರೀಕ್ಷಿಸಲಾಗಿದೆ. ರಿಲಯನ್ಸ್ ಕಂಪನಿ ಯೊಂದೇ ಈ ಯೋಜನೆಯಲ್ಲಿ ೨೫,೦೦೦ ಕೋಟಿ ಬಂಡವಾಳ ಹೂಡುವುದಾಗಿ ತಿಳಿಸಿದೆ.

ಒರಿಸ್ಸಾದ ಜಾಜ್‌ಪುರ್ ಜಿಲ್ಲೆಯ ಕಳಿಂಗ ನಗರ್ ವಿಶ್ವದ ಉಕ್ಕು ಉತ್ಪಾದನೆಯಲ್ಲಿ ೩ನೇ ಸ್ಥಾನ ದಲ್ಲಿರುವ ಪೋಸ್ಕೋ ಕಂಪನಿ ಖನಿಜ ಆಧಾರಿತ ವಿಶೇಷ ಆರ್ಥಿಕ ವಲಯ ಸ್ಥಾಪನೆಗೆ ೪೫೦೦ ಎಕರೆ ಪ್ರದೇಶವನ್ನು ವಶಪಡಿಸಿಕೊಳ್ಳಲು ಮುಂದಾಗಿದೆ. ಈ ಯೋಜನೆಯಿಂದ ನಿರ್ವಸಿತರಾಗಲಿರುವ ಗಿರಿಜನರು ಈ ಯೋಜನೆಯ ವಿರುದ್ಧ ಸಮರ ಸಾರಿದ್ದಾರೆ. ಜನವರಿ ೨ರಂದು ಅವರು ನಡೆಸಿದ ರಸ್ತೆತಡೆ ಚಳುವಳಿಯಲ್ಲಿ ೧೩. ಗಿರಿಜನರು ಹಾಗೂ ೨ ಪೊಲೀಸರು ಹುತಾತ್ಮರಾಗಿದ್ದಾರೆ.

ಪಶ್ಚಿಮ ಬಂಗಾಳದ ಹಾಲ್ದಿಯಾ ಸುತ್ತಮುತ್ತ ೩ ದೊಡ್ಡ ವಿಶೇಷ ಆರ್ಥಿಕ ವಲಯಗಳು ಸ್ಥಾಪನೆ ಗೊಳ್ಳಲಿವೆ. ರಾಜ್ಯದಲ್ಲೇ ಅತಿದೊಡ್ಡದಾದ ಪೆಟ್ರೋಲಿಯಂ ರಾಸಾಯನಿಕಗಳು ಮತ್ತು ಪೆಟ್ರೋರಾಸಾಯನಿಕಗಳ ಕೈಗಾರಿಕಾವಲಯ ೨೮೦ ಚ.ಕಿ.ಮೀ. ವ್ಯಾಪ್ತಿ ಪ್ರದೇಶದಲ್ಲಿ ಸ್ಥಾಪನೆ ಗೊಳ್ಳಲಿದೆ. ಇಂಡೋನೇಷ್ಯಾದ ಸಲೀಂ ಗುಂಪಿನ ಕಂಪನಿಗಳು ೧೨,೫೦೦ ಎಕರೆ ಪ್ರದೇಶದಲ್ಲಿ 'ಬಹು ಉತ್ಪನ್ನ ವಿಶೇಷ ಆರ್ಥಿಕ ವಲಯ' ಸ್ಥಾಪಿಸಲು ಸರ್ಕಾರದೊಂದಿಗೆ ಒಪ್ಪಂದ ಮಾಡಿ ಕೊಂಡಿವೆ. ಪಶ್ಚಿಮ ಬಂಗಾಳ ಕೈಗಾರಿಕಾ ಅಭಿವೃದ್ಧಿ ಕಾರ್ಪೊರೇಷನ್‌ನ ಸಹಭಾಗಿತ್ವದಲ್ಲಿ ೧೦,೦೦೦ ಎಕರೆ ಪ್ರದೇಶದಲ್ಲಿ ರಾಸಾಯನಿಕ ವಿಶೇಷ ಆರ್ಥಿಕ ವಲಯ ಸ್ಥಾಪನೆಗೊಳ್ಳಲಿದೆ. 'ಔಷಧ ವಿಶೇಷ ಆರ್ಥಿಕ ವಲಯ' ೩೦೦೦ ಎಕರೆ ಪ್ರದೇಶದಲ್ಲಿ ಅಸ್ತಿತ್ವಕ್ಕೆ ಬರಲಿದೆ. ಸಿಂಗರೂರ್‌ನಲ್ಲಿ ಟಾಟಾರವರ ಕಾರು ಉತ್ಪಾದನಾ ವಿಶೇಷ ಆರ್ಥಿಕ ವಲಯಕ್ಕೆ ೯೦೦ ಎಕರೆ ಜಮೀನು ವಶಪಡಿಸಿಕೊಳ್ಳುವ ಬಗ್ಗೆ ಮಮತಾ ಬ್ಯಾನರ್ಜಿ ಮತ್ತು ಮೇಧಾ ಪಾಟ್ಕರ್ ನೇತೃತ್ವದಲ್ಲಿ ಪ್ರತಿಭಟನೆ ನಡೆದಿದೆ. ಈ ಯೋಜನೆಗಳ ವಿರುದ್ಧ ಪಶ್ಚಿಮ ಬಂಗಾಳದ ವಿರೋಧ ಪಕ್ಷಗಳು ಪ್ರತಿಭಟನೆ ನಡೆಸುತ್ತಿವೆ.

ಉತ್ತರ ಪ್ರದೇಶದ ಗಾಜಿಯಾಬಾದ್ ಜಿಲ್ಲೆಯ ಏಳು ಹಳ್ಳಿಗಳ ರೈತರು ದಾದ್ರಿಯಲ್ಲಿನ ರಿಲಯನ್ಸ್ ಪವರ್ ಪ್ಲಾಂಟ್ ಕಬಳಿಸಿರುವ ಜಮೀನಿಗೆ ಸೂಕ್ತ ಪರಿಹಾರ ಪಡೆದುಕೊಳ್ಳಲು ಹೋರಾಡುತ್ತಿದ್ದಾರೆ. ಹೀಗೆ ದೇಶಾದ್ಯಂತ ಸಹಸ್ರಾರು ಎಕರೆ ಭೂಮಿಯನ್ನು ಬಂಡವಾಳಗಾರರು ಸರ್ಕಾರಗಳ ಬೆಂಬಲ ಮತ್ತು ಸಹಕಾರದಿಂದ ತಮ್ಮ ವಶಕ್ಕೆ ತೆಗೆದುಕೊಂಡು ವಿಶೇಷ ಆರ್ಥಿಕ ವಲಯಗಳೆಂಬ ಆಧುನಿಕ ಜಮೀನ್ದಾರಿ ಪದ್ಧತಿಯನ್ನು ರೂಪಿಸು ತ್ತಿದ್ದಾರೆ. ಭೂಸುಧಾರಣೆ ಮಾಡಿ ಬಡ ಕೃಷಿಕರಿಗೆ ಜಮೀನು ಹಂಚುವ ನೀತಿಗೆ ತಿಲಾಂಜಲಿ ನೀಡಿ ಅವರ ಬಳಿ ಇದ್ದ ಅಲ್ಪ ಸ್ವಲ್ಪ ಜಮೀನನ್ನು ಅಭಿವೃದ್ಧಿಯ ಹೆಸರಿನಲ್ಲಿ ಕಬಳಿಸಿ ಅದನ್ನು ಅತ್ಯಾಧುನಿಕ ಪಾಳೆಗಾರರ ವಶಕ್ಕೊಪ್ಪಿಸಲು ನಮ್ಮ ಸರ್ಕಾರಗಳು ಮುಂದಾಗಿವೆ.

ಕರ್ನಾಟಕ ರಾಜ್ಯ ಕೂಡ ಈ ಬೆಳವಣಿಗೆ ಯಿಂದ ಮುಕ್ತವಾಗಿಲ್ಲ. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನಗಳ ರಾಜಧಾನಿ ಎಂದೇ ಖ್ಯಾತ ವಾಗಿರುವ ಕರ್ನಾಟಕದಲ್ಲಿ ಮಾಹಿತಿ ತಂತ್ರಜ್ಞಾನ (ಐಟಿ), ಮಾಹಿತಿ ತಂತ್ರಜ್ಞಾನ ಬೆಂಬಲಿತ ಸೇವಾ ವಲಯ (ಐಟಿಇಎಸ್) ಹಾಗೂ ಜೈವಿಕ ತಂತ್ರಜ್ಞಾನದ ವಲಯದಲ್ಲಿ ಸುಮಾರು ೩೪ ವಿಶೇಷ ಆರ್ಥಿಕ ವಲಯಗಳು ಅಸ್ತಿತ್ವಕ್ಕೆ ಬರಲಿವೆ. ಇನ್‌ಫೋಸಿಸ್ ಟೆಕ್ನಾಲಜೀಸ್, ಹೂಲಿಟ್ ಪಕಾರ್ಡ್, ಆದರ್ಶ್ ಪ್ರೈಮ್ ಪ್ರಾಜೆಕ್ಟ್ಸ್ ಲಿ., ಗೋಕುಲ್‌ದಾಸ್ ಎಕ್ಸ್‌ಪೋರ್ಟ್ಸ್, ಗಾಂಧೀ ಸಿಟಿ ಪ್ರಾಜೆಕ್ಟ್ಸ್, ಬಯೋಕಾನ್ ಲಿ., ಸುಝ್ಲಾನ್ ಇನ್ಫ್ರಾಸ್ಟ್ರಕ್ಚರ್ ಲಿ., ಟಾಟಾ ಕನ್ಸಲ್ಟೆನ್ಸಿ ಸರ್ವಿಸಸ್, ಹಿಂದುಜಾ ಇನ್‌ವೆಸ್ಟ್‌ಮೆಂಟ್ ಪ್ರೈವೆಟ್ ಲಿ. ಮುಂತಾದ ಕಂಪನಿಗಳು ವಿವಿಧ ರೀತಿಯ ವಿಶೇಷ

ಆರ್ಥಿಕ ವಲಯಗಳ ಸ್ಥಾಪನೆಗೆ ಕಾದುಕುಳಿತಿವೆ. ಕರ್ನಾಟಕದ ಕರಾವಳಿ ಪ್ರದೇಶದ ಕದ್ರಿ, ಪಡುಬಿದ್ರಿ, ಬೈಕಂಪಾಡಿಗಳಲ್ಲಿ ೩ ವಿಶೇಷ ಆರ್ಥಿಕ ವಲಯಗಳು ಸ್ಥಾಪನೆಗೊಳ್ಳಲಿವೆ. ಹಾಸನದಲ್ಲಿ ಒಂದು ವಿಶೇಷ ಆರ್ಥಿಕ ವಲಯ ಸ್ಥಾಪನೆಯಾಗಲಿದೆ. ದಕ್ಷಿಣ ಕನ್ನಡ ರೈತ ಸಂಘಟನೆಗಳ ಒಕ್ಕೂಟ ಹಾಗೂ ಅನೇಕ ಪರಿಸರ ಸಂಘಟನೆಗಳು ಈ ಯೋಜನೆಗಳನ್ನು ವಿರೋಧಿಸುತ್ತಿವೆ. ಕರ್ನಾಟಕ ರಾಜ್ಯ ರೈತ ಸಂಘ, ಹಸಿರು ಸೇನೆ ಮುಂತಾದವು ವಿಶೇಷ ಆರ್ಥಿಕ ವಲಯಗಳನ್ನು ವಿರೋಧಿಸುತ್ತಿವೆ. ಬಿಡದಿ ಮತ್ತು ರಾಮನಗರದ ಸುತ್ತಮುತ್ತಲ ಪ್ರದೇಶಗಳಲ್ಲಿ 'ಜ್ಞಾನ ನಗರಿ'ಯ ಸ್ಥಾಪನೆ ಮಾಡಲು ಕರ್ನಾಟಕ ಸರ್ಕಾರ ಅಪಾರ ಪ್ರಮಾಣದ ಭೂಮಿಯನ್ನು ವಶಪಡಿಸಿಕೊಳ್ಳುವ ಸಿದ್ಧತೆ ನಡೆಸುತ್ತಿದೆ.

೨೧ನೇ ಶತಮಾನದಲ್ಲಿ ದೇಶವನ್ನು ಅಭಿವೃದ್ಧಿಯ ಪಥದಲ್ಲಿ ಕೊಂಡೊಯ್ಯಲು, ಅಂತರರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧೆ ನಡೆಸಲು ವಿಶೇಷ ಆರ್ಥಿಕ ವಲಯಗಳು ಅತ್ಯಗತ್ಯವೆಂಬ ಭಾವನೆಯನ್ನು ಪ್ರತಿಪಾದಿಸಲಾಗುತ್ತಿದೆ. ಅಭಿವೃದ್ಧಿಯ ಆತುರದಲ್ಲಿ ವಿಶೇಷ ಆರ್ಥಿಕ ವಲಯ ಅನುಮೋದನಾ ಮಂಡಳಿ ಮಾರ್ಚ್‌ನಲ್ಲಿ ತನ್ನ ಪ್ರಥಮ ಸಭೆಯಲ್ಲಿ ಮಂಡಿಸಲ್ಪಟ್ಟ ೧೬೬ ಪ್ರಸ್ತಾವನೆಗಳಲ್ಲಿ ೧೪೮ ಪ್ರಸ್ತಾವನೆಗಳಿಗೆ ತಕರಾರಿಲ್ಲದೆ ಮಂಜೂರಾತಿ ನೀಡಿತು. ಈ ವರೆಗೆ ಒಂದು ಅಂದಾಜಿನಂತೆ ೧೮೧ ವಿಶೇಷ ಆರ್ಥಿಕ ವಲಯಗಳಿಗೆ ಮಂಜೂರಾತಿ ನೀಡಲಾಗಿದೆ. ಸುಮಾರು ೧೨೮ ವಿಶೇಷ ಆರ್ಥಿಕ ವಲಯಗಳಿಗೆ ತಾತ್ವಿಕ ಅನುಮೋದನೆ ನೀಡಲಾಗಿದೆ. ಮಂಜೂರಾತಿ ನೀಡಿರುವ ವಿಶೇಷ ಆರ್ಥಿಕ ವಲಯಗಳಿಗೆ ಸುಮಾರು ೨೬,೮೦೦ ಹೆಕ್ಟೇರ್ ಭೂಮಿಯನ್ನು ವಶಪಡಿಸಿಕೊಳ್ಳಲಾಗಿದೆ. ತಾತ್ವಿಕ ಒಪ್ಪಿಗೆ ನೀಡಿರುವ ಸುಮಾರು ೧೨೮ ವಿಶೇಷ ಆರ್ಥಿಕ ವಲಯಗಳಿಗೆ ಸುಮಾರು ೭೫,೦೦೦ ಹೆಕ್ಟೇರ ಭೂಮಿಯನ್ನು ವಶಪಡಿಸಿಕೊಳ್ಳಬೇಕಾಗಬಹುದೆಂದು ಅಂದಾಜಿಸಲಾಗಿದೆ. ದೇಶದ ೧೩ ರಾಜ್ಯಗಳಲ್ಲಿ ಇಂತಹ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸಲು ತೀವ್ರ ಸ್ಪರ್ಧೆ ನಡೆಯುತ್ತಿದೆ. ಬಂಡವಾಳ ಹೂಡಿಕೆದಾರರನ್ನು ಆಕರ್ಷಿಸಲು ರಾಜ್ಯಗಳು ದೇಶೀಯ ಮತ್ತು ವಿದೇಶೀಯ ಕಂಪನಿಗಳಿಗೆ ರತ್ನಗಂಬಳಿ ಆಹ್ವಾನ ನೀಡುತ್ತಿವೆ ಆತುರಾತುರವಾಗಿ. ವಿಶೇಷ ಆರ್ಥಿಕ ವಲಯಗಳು ಸ್ಥಾಪನೆಯಾಗಿ ಅಪಾರ ಪ್ರಮಾಣದ ಕೃಷಿ ಭೂಮಿ ಬಂಡವಾಳಗಾರರ ವಶವಾಗುತ್ತಾ ಹೋದಂತೆ ಭೂಮಿ ಕಳೆದುಕೊಂಡ ರೈತ ಸಮೂಹ ಈ ಯೋಜನೆಯ ವಿರುದ್ಧ ಬೀದಿಗಿಳಿದು ಹೋರಾಟ ಮಾಡಲಾರಂಭಿಸಿದೆ. ಹೀಗಾಗಿ ವಿಶೇಷ ಆರ್ಥಿಕ ವಲಯ ಯೋಜನೆ ಇಂದು ಅತ್ಯಂತ ವಿವಾದಾತ್ಮಕ ಯೋಜನೆಯಾಗಿದೆ.

೨೦೦೫ರಲ್ಲಿ ವಿಶೇಷ ಆರ್ಥಿಕ ವಲಯ ಕಾಯಿದೆಯನ್ನು ಜಾರಿಗೆ ತಂದಾಗ ಅವು ಮೂಲ ಸೌಕರ್ಯ ನಿರ್ಮಾಣ, ರಫ್ತು ಹೆಚ್ಚಳ ಮತ್ತು ಉದ್ಯೋಗಾವಕಾಶಗಳನ್ನು ಹೆಚ್ಚಿಸಿ ಆರ್ಥಿಕ ಅಭಿವೃದ್ಧಿಯ ಚಾಲಕ ಶಕ್ತಿಯಾಗಿ ದೇಶದ ಆರ್ಥಿಕತೆಯನ್ನು ಉತ್ತಮಪಡಿಸುತ್ತವೆ ಎಂದು ಆಶಿಸಲಾಗಿತ್ತು. ದೇಶದ ಅಭಿವೃದ್ಧಿಯ ನೂತನ ಕೇಂದ್ರಗಳಾಗಿ ಇಲ್ಲಿ ಬಂಡವಾಳ ಹೂಡುವವರಿಗೆ ವಿಶೇಷ ಆರ್ಥಿಕ ಸೌಲಭ್ಯಗಳಲ್ಲದೆ, ಅನೇಕ ವಿನಾಯಿತಿಗಳನ್ನು ನೀಡಲಾಗುತ್ತಿದೆ; ವ್ಯಾಪಾರ ಮತ್ತು ಬೆಲೆಗಳಿಗೆ ಇದನ್ನು ವಿದೇಶಿ ಪ್ರದೇಶವೆಂದು ಭಾವಿಸಿ ಅದನ್ನು ಸ್ವತಂತ್ರ ಪ್ರದೇಶವೆಂದು ಪರಿಗಣಿಸುವುದು; ಅಲ್ಲಿಯ ಉತ್ಪನ್ನ ಮತ್ತು ಸೇವೆಗಳಿಗೆ ತಮಗೆ ಸೂಕ್ತವೆನಿಸಿದ ಬೆಲೆ ನಿಗದಿಪಡಿಸುವ ಸ್ವಾತಂತ್ರ್ಯ ನೀಡಲಾಗಿದೆ;



# ದಿಕ್ಕುಗಳು

ಬೆಳಕು ನಂದಿದ ಹೊತ್ತಲ್ಲಿ
ದಿಕ್ಕುಗಳನ್ನರಸುವುದು ಕಷ್ಟ;
ಪೂರ್ವಾಪರ, ಸಂಸ್ಕಾರ, ಗ್ರಹಣಗಳ ನಡುವೆ
ನಡವಳಿಕೆಯ ಹಾದಿ ಸವೆದು ಹೋಗಿರುವಾಗ,
ವಾಮಮಾರ್ಗದ ಬಿಸುಪು
ಪರಂಪರೆಯ ಬಲದ ಮುಂದೆ
ಗುರಿ ಮರೆತು ತತ್ತರಿಸುತ್ತಿರುವಾಗ
ಉಳಿದುದೆಲ್ಲವೂ ಅಯೋಮಯ,
ನರಳುತ್ತಿರುವ ದನಿ ಮಾತ್ರ ದಯಾಮಯ.

ಅವಕಾಶ ಸಿಕ್ಕಾಗಲೆಲ್ಲ ಒತ್ತರಿಸಿ ಬರುವ
ಸಹಜ ಮಾರುತಕ್ಕೂ ಹೊಸ ಹೊಸ ಹೆಸರು
ಬೀಸಿ ಬರುವ ಬಿರುಗಾಳಿಯಿಡಿದ ಗುರಿಗೆ
ಸಿಕ್ಕಿ ಬಿದ್ದವರು ಮಾತ್ರ ದಿಕ್ಪಾಲು.

ಚಂದ್ರನಿರದ ಕಡು ಕಪ್ಪು ಕತ್ತಲ ರಾತ್ರಿ
ಸುತ್ತಲೂ ಮುತ್ತಿರುವ ದಟ್ಟ ಮೋಡದ
ನಡುವೆ ಅವಿತಿರುವ ಧ್ರುವನ ಚಹರೆಯೂ ಅಳಿದು
ಉದ್ವಿಗ್ನವಾಗಿದೆ ಸಪ್ತರ್ಷಿ ಮಂಡಲ.

ಒಂದೇ ಸಮ ಅಳುತ್ತಿರುವ ಮಗುವಿಗೆ
ಮೊಲೆಯೂಡುವ ಅಮ್ಮ ಕಾಣಿಸುತ್ತಿಲ್ಲ
ಸಮಾಧಾನದ ಹಸ್ತ ರಿಕ್ತವಾಗುತ್ತಿರುವ ಕ್ಷಣಗಳಲ್ಲೇ
ವಿಶಾಲ ಆಗಸದತ್ತ ಕೈ ಮಾಡಿ
ಚಂದಮಾಮನ ಜೊತೆಗೆ ನಕ್ಷತ್ರದ ಹಾರ
ತೊಡಿಸಿ ನಗಿಸೋಣವೆಂದರೆ
ದಿಕ್ಕೇ ಗೊತ್ತಾಗದ ಈ ನಿಶೆಯ ಹೊತ್ತಲ್ಲಿ,

ನಶೆ ತುಂಬಿದವರು ತೋರಿದ ದಾರಿ
ವಿಶ್ವಾಸ ಹುಟ್ಟಿಸುತ್ತಿಲ್ಲ, ದಿಕ್ಕು ತಿಳಿಯುತ್ತಿಲ್ಲ.

ಡಿ. ಎಸ್. ರಾಮಸ್ವಾಮಿ

ಯಾವುದೇ ಪರವಾನಗಿ ಇಲ್ಲದೆ ವಸ್ತುಗಳನ್ನು ಆಮದು ಮಾಡಿಕೊಳ್ಳುವ ಅವಕಾಶ. ದೇಶೀಯ ಮಾರುಕಟ್ಟೆಯಲ್ಲಿ ಖರೀದಿಸಿದ ಕಚ್ಚಾಸಾಮಗ್ರಿ ಮತ್ತು ಬಂಡವಾಳ ಉತ್ಪನ್ನಗಳ ಮೇಲೆ ಎಕ್ಸೈಸ್ ಸುಂಕ ವಿನಾಯಿತಿ; ೫ ವರ್ಷಗಳ ಕಾಲ ಪೂರ್ಣ ಆದಾಯ ತೆರಿಗೆ ವಿನಾಯಿತಿ; ಮುಂದಿನ ೨ ವರ್ಷಗಳ ಅವಧಿಗೆ ಶೇಕಡ ೫೦ ಆದಾಯಕರ ವಿನಾಯಿತಿ; ಶೇಕಡ ೧೦೦ರಷ್ಟು ವಿದೇಶೀ ನೇರ ಬಂಡವಾಳ ಹೂಡಿಕೆಗೆ ಮುಕ್ತ ಅವಕಾಶ; ಕಾರ್ಮಿಕ ಕಾನೂನುಗಳಿಂದ ಪೂರ್ಣ ವಿನಾಯಿತಿ – ಇಂತಹ ಹತ್ತು ಹಲವು ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ಸರ್ಕಾರಗಳು ಉದಾರವಾಗಿ ನೀಡಲು ಮುಂದಾಗಿವೆ.




ಆದರೆ ವಿ.ಆ.ವ.ಗಳು ಸ್ಥಾಪನೆಯಾಗುತ್ತಿರುವ ವೇಗ, ಕ್ರಮ ಮತ್ತು ವಿಧಾನಗಳು ಜನರ ಆತಂಕ ಮತ್ತು ತೀವ್ರ ವಿರೋಧಕ್ಕೆಡೆಮಾಡಿಕೊಟ್ಟಿವೆ. ಹಳ್ಳಿಗಳು ಗ್ರಾಮಗಳನ್ನೇ ಈ ಯೋಜನೆ ಆಪೋಶನ ತೆಗೆದುಕೊಳ್ಳುತ್ತಿದೆ. ಬಹುಪಾಲು ಕಡೆಗಳಲ್ಲಿ ಫಲವತ್ತಾದ ಕೃಷಿ ಭೂಮಿಯನ್ನು ವಶಪಡಿಸಿಕೊಳ್ಳಲಾಗುತ್ತಿದೆ. ಭೂಮಿ ಕಳೆದುಕೊಳ್ಳುತ್ತಿರುವವರಿಗೆ ನ್ಯಾಯಯುತವಾದ ಪರಿಹಾರ ನೀಡಲಾಗುತ್ತಿಲ್ಲ. ಅವರ ಪುನರ್ವಸತಿಗೆ ಯಾರೂ ತಲೆ ಕೆಡಿಸಿಕೊಳ್ಳುತ್ತಿಲ್ಲ. ಒಂದಷ್ಟು ಹಣವನ್ನು ಬಡ ಭೂ ಒಡೆಯರಿಗೆ ಬಿಸಾಡಿ ವಿಶಾಲ ಭೂಪ್ರದೇಶಗಳನ್ನು ಬಂಡವಾಳಗಾರರು ತಮ್ಮ ಕೈವಶ ಮಾಡಿಕೊಳ್ಳುತ್ತಿದ್ದಾರೆ. ಅವರ ಉದ್ದಿಮೆಯ ಅಗತ್ಯಕ್ಕಿಂತ ಅಗಾಧ ಪ್ರಮಾಣದ ಭೂಮಿಯನ್ನು ಸರ್ಕಾರದ ನೆರವಿನಿಂದ, ದಲ್ಲಾಳಿಗಳ ಪ್ರಲೋಭನೆಯ ಮೂಲಕ, ಹಾಗೂ ಹಲವು ಸಂದರ್ಭಗಳಲ್ಲಿ ವಿವಿಧ ರೀತಿಯ ಬೆದರಿಕೆ ತಂತ್ರ ಬಳಸಿ ತಮ್ಮ ಆಧುನಿಕ ಪಾಳೆಯ ಪಟ್ಟುಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಈ ಪಾಳೆಯಪಟ್ಟಿನ ಕೇವಲ ಶೇಕಡ ೨೫ರಷ್ಟು ಭೂಪ್ರದೇಶವನ್ನು ಕೈಗಾರಿಕಾ ಉದ್ದೇಶಕ್ಕೆ ಬಳಸಿ ಉಳಿದ ಭಾಗವನ್ನು ಕೈಗಾರಿಕೇತರ ಉದ್ದೇಶಗಳಿಗೆ ಬಳಸಿಕೊಳ್ಳಲು ಕಾಯ್ದೆಯಲ್ಲಿ ಅವಕಾಶ ಕಲ್ಪಿಸಿ ಇದು ರಿಯಲ್ ಎಸ್ಟೇಟ್ ದಂಧೆಯಾಗಿದೆ. ಅವರು ರೈತರಿಗೆ ನೀಡುವ ಬೆಲೆಗೂ ಆ ಜಮೀನನ್ನು ಅಭಿವೃದ್ಧಿಪಡಿಸಿದ ಮೇಲೆ ಅವರು ಪಡೆಯುವ ಬೆಲೆಗೂ ಭೂಮಿ ಆಕಾಶದಷ್ಟು ಅಂತರವಿದೆ. ಬಡವರ ಪರವಾಗಿ ನಿಲ್ಲಬೇಕಾದ ಸರ್ಕಾರ ಇಂದು ಕೈಗಾರಿಕೋದ್ಯಮಿಗಳ ರಿಯಲ್ ಎಸ್ಟೇಟ್ ದಂಧೆಯ ಪರವಾಗಿ ನಿಂತಿದೆ. ಅಭಿವೃದ್ಧಿಯ ಮಂತ್ರ ಪಠಿಸುತ್ತಾ ಅಪಾರ ಪ್ರಮಾಣದ ಗಿರಿಜನರು ಮಧ್ಯಮ ಹಾಗೂ ಸಣ್ಣ ರೈತರನ್ನು ನಿರ್ಗತಿಕರನ್ನಾಗಿಸಿ ಅವರ ಮೂಲ ನೆಲೆಗಳಿಂದ ಗುಳೆಯೆಬ್ಬಿಸಿ ನಗರಗಳ ಕೊಳೆಗೇರಿಗಳಿಗೆ ಓಡಿಸಿ ಅವರನ್ನು ನಿತ್ಯ ನರಕಕ್ಕೆ ದೂಡಲಾಗುತ್ತಿದೆ. ಕುಸಿಯುತ್ತಿರುವ ಕೃಷಿ ಉತ್ಪಾದನೆಯ ಈ ಸಂದರ್ಭದಲ್ಲಿ ಅಪಾರ ಪ್ರಮಾಣದ ಕೃಷಿ ಭೂಮಿಯನ್ನು ಕೃಷಿಯೇತರ ಉದ್ದೇಶಗಳಿಗೆ ಬಳಸುವುದು ದೇಶದ ಆಹಾರೋತ್ಪಾದನೆ ಮೇಲೆ ದುಷ್ಪರಿಣಾಮವುಂಟು ಮಾಡಿ ಬಹಳ ಕಷ್ಟಪಟ್ಟು ಸಾಧಿಸಿದ್ದ ಆಹಾರ ಸುರಕ್ಷತೆಯನ್ನೇ ಹಾಳುಗೆಡವಿ ಮತ್ತೆ ಭಾರತ ಆಹಾರಕ್ಕಾಗಿ ಭಿಕ್ಷೆ ಬೇಡುವ ಪರಿಸ್ಥಿತಿ ನಿರ್ಮಾಣಗೊಳ್ಳಲಿದೆ. ಬಡ ರೈತರೇ ಶ್ರೀಮಂತ ಕೈಗಾರಿಕೋದ್ಯಮಿಗಳಿಗೆ ಸಹಾಯಧನ ನೀಡುವ ವಿಪರ್ಯಾಸದ ಆರ್ಥಿಕ ನೀತಿಯನ್ನು ವಿ.ಆ.ವ.ಗಳ ಸ್ಥಾಪನೆ ಮೂಲಕ ಜಾರಿಗೊಳಿಸಲಾಗುತ್ತಿದೆ. ಬಡವರನ್ನು ದೋಚಿ ರಿಯಲ್ ಎಸ್ಟೇಟ್ ದಂಧೆಯ ಮೂಲಕ ದೊಡ್ಡ ದೊಡ್ಡ ಬಂಡವಾಳಗಾರರನ್ನು ಬಹುರಾಷ್ಟ್ರೀಯ ಕಂಪನಿಯ ಮಾಲೀಕರನ್ನಾಗಿಸಿ ಅವರು ವಿಶ್ವದ ಶ್ರೀಮಂತರ ಪಟ್ಟಿಯಲ್ಲಿ ಸ್ಥಾನ ಪಡೆಯುವಂತೆ ಮಾಡುವ ನೀತಿಯನ್ನು ನಮ್ಮ ಸರ್ಕಾರವೇ ರೂಪಿಸಿದೆ. ಇದೊಂದು ಅತ್ಯಂತ ವ್ಯವಸ್ಥಿತ, ಕರುಣೆಯೇ ಇಲ್ಲದ ಭೂ-ಲೂಟಿ ರಿಯಲ್ ಎಸ್ಟೇಟ್‌ನ ಕಾಳಸಂತೆ. ಖ್ಯಾತ ಇತಿಹಾಸಕಾರ ಸುಮಿತ್ ಸರ್ಕಾರ್ ಮಾತಿನಂತೆ, ''ಇದು ಆಧುನಿಕ ಭಾರತದ ಅತ್ಯಂತ ಬೃಹತ್ತಾದ **ಭೂ ಆಕ್ರಮಣ ಚಳುವಳಿ**''. ಯಾವುದೇ ಹೋರಾಟವಿಲ್ಲದೆ ಸಾವಿರಾರು ಎಕರೆ ಭೂಮಿಯನ್ನು ಕೈವಶಮಾಡಿಕೊಳ್ಳುವ ವಿನೂತನ ವಿಧಾನ.

ಇದಿಷ್ಟೇ ಸಾಲದೆಂಬಂತೆ ಇಲ್ಲಿ ದುಡಿಯುವ ಉದ್ಯೋಗಿಗಳಿಗೆ ಅವರು ನೀಡಿದ್ದೇ ಕೂಲಿ; ಸೇವಾಭದ್ರತೆಗಾಗಲಿ, ಕಾರ್ಮಿಕ ಕಲ್ಯಾಣ ಕಾರ್ಯಕ್ರಮಗಳಿಗಾಗಲಿ ಅವಕಾಶವೇ ಇಲ್ಲ. ದೇಶದ ಕಾರ್ಮಿಕ ಕಾಯಿದೆಗಳು ಇಲ್ಲಿ ಜಾರಿಯಾಗುವುದೇ ಇಲ್ಲ. ಹೀಗೆ ವಿಶೇಷ ಆರ್ಥಿಕ ವಲಯ '**ವಿಶೇಷ ಶೋಷಣಾ ವಲಯ**'ವಾಗಲಿದೆ. ಇಲ್ಲಿ ಕಾರ್ಮಿಕ ಸಂಘಗಳಿಗಾಗಲಿ, ಮುಷ್ಕರಕ್ಕಾಗಲಿ ಮಾನ್ಯತೆ ಇಲ್ಲ. ಇಲ್ಲಿ ಮಾಲಿಕರೇ ಅಂತಿಮ. ಕಾರ್ಮಿಕರ ಹಕ್ಕುಗಳಿಗೆ, ವೇತನಕ್ಕೆ ಯಾವುದೇ ರಕ್ಷಣೆ ಇಲ್ಲ. ತಮ್ಮ ಮನ ಬಂದಂತೆ ಹಿಂಸಿಸಿ ದುಡಿಸಿಕೊಂಡು ತಮಗೆ ತೋಚಿದಷ್ಟು ವೇತನ ಬಿಸಾಡುವ ಆಧುನಿಕ ಬೆವರಿನ ಅಂಗಡಿಗಳು ಈ ವಿ.ಆ.ವ.ಗಳು.

ಯಾವುದೇ ಪರಿಸರ ಸಂರಕ್ಷಣಾ ಕಾಯಿದೆಗಳು ಇಲ್ಲಿ ಜಾರಿಯಾಗುವುದೇ ಇಲ್ಲ. ಎಷ್ಟೇ ಮಾಲಿನ್ಯ ಮಾಡಿದರೂ, ಅತ್ಯಂತ ಅಪಾಯಕಾರಿ ವಿಷವಸ್ತುಗಳನ್ನು ಸಂಸ್ಕರಿಸದೆ ಮನಬಂದಂತೆ ಎರಚಾಡಿಕೊಂಡರೂ ನೈಸರ್ಗಿಕ ಸಂಪನ್ಮೂಲಗಳನ್ನು ತಮ್ಮ ಖುಷಿಗೆ ಬಂದಂತೆ ಬಳಕೆ ಮಾಡಿಕೊಂಡರೂ ಅವುಗಳಿಂದ ಜೀವಹಾನಿ, ಆರೋಗ್ಯ ಹಾನಿಯಾದರೂ ಅವರನ್ನು ಯಾರೂ ಕೇಳುವಂತಿಲ್ಲ. ಈ ಯೋಜನೆಗಳಿಗೆ ಯಾವುದೇ ಶಾಸನಬದ್ಧ ಪರಿಸರ ಪರಿಣಾಮ ಅಂದಾಜು ಮಾಡುವ ಅಗತ್ಯವೇ ಇಲ್ಲ. ಅದರಿಂದುಂಟಾಗುವ ಯಾವುದೇ ಮಾಲಿನ್ಯಗಳ ದುಷ್ಪರಿಣಾಮಗಳಿಗೆ ಅವರು ಜವಾಬ್ದಾರರಾಗುವುದಿಲ್ಲ. ಅವರದೇ ರಕ್ಷಣಾ ವ್ಯವಸ್ಥೆ, ಅವರದೇ ಆಡಳಿತ ವ್ಯವಸ್ಥೆ ರೂಪಿಸಿಕೊಂಡು, ತಮ್ಮದೇ ಆದ ಪ್ರತ್ಯೇಕ ವಿದೇಶೀ ಜಗತ್ತನ್ನು ಕಟ್ಟಿಕೊಳ್ಳಲು ಮುಕ್ತ ಅವಕಾಶ. ಅವರಿಗೆ ಬೇಕಾದ ಭಾಷೆ, ಅವರಿಗಿಷ್ಟವಾದ ಪಬ್, ಪಿಜ್ಜಾ, ವಿದೇಶಿ ಸಂಗೀತ, ನೃತ್ಯ, ಮುಕ್ತ ಲೈಂಗಿಕ ಮನರಂಜನಾ ಸಂಸ್ಕೃತಿಯನ್ನು, ರೂಪಿಸಿಕೊಂಡು ಖಾಸಗಿ ಆಡಳಿತ ನಡೆಸುವ ಆಧುನಿಕ ಮೋಜಿನ ಪಾಳೆಗಾರರು, ಈ ಪ್ರದೇಶಗಳನ್ನು ಎಲ್ಲಾ ರೀತಿಯ ತಮ್ಮ ಕರಾಳ ಕಾರ್ಯ ಚಟುವಟಿಕೆಗಳ ವಿದೇಶಿ ಅಡ್ಡೆಗಳನ್ನಾಗಿ ಮಾಡಿಕೊಳ್ಳಲಿದ್ದಾರೆ. ಅವರು ಯಾವ ಪ್ರಮಾಣದಲ್ಲಾದರೂ ವಿದೇಶಿ ಹಣ ಹೂಡಿ ಲಾಭ ಮಾಡಿಕೊಂಡು ಹೊತ್ತೊಯ್ಯಲು ಮುಕ್ತ ಅವಕಾಶ. ನಮ್ಮ ದೇಶದ ಆರ್ಥಿಕ ಇಲಾಖೆಯೇ ಆತಂಕ ವ್ಯಕ್ತಪಡಿಸಿರುವಂತೆ ೨೦೧೦ರ ವೇಳೆಗೆ ವಿ.ಆ.ವ.ಗಳಿಂದ ಸುಮಾರು ರೂ. ೧,೭೦,೦೦೦ ಕೋಟಿಗಳ ತೆರಿಗೆ ಆದಾಯ ನಷ್ಟವಾಗಬಹುದೆಂದು ಅಂದಾಜಿಸಲಾಗಿದೆ. ಯಾವುದೇ ವಾದವಿವಾದಗಳುಂಟಾದರೂ, ದೌರ್ಜನ್ಯ ನಡೆದರೂ, ಕಾನೂನು ಉಲ್ಲಂಘನೆಯಾದರೂ ಅವು ನಮ್ಮ ದೇಶದ ನ್ಯಾಯಾಲಯಗಳ ವ್ಯಾಪ್ತಿಯಿಂದ ಹೊರಕ್ಕೆ. ಹೀಗೆ ಕೋಳಿಗೂಡಿಗೆ ತೋಳಗಳನ್ನು ಮುಕ್ತವಾಗಿ ಬಿಟ್ಟು ಮನಬಂದಂತೆ ತಿಂದು ತೇಗಲು ಅವಕಾಶ ಕಲ್ಪಿಸಲಾಗಿದೆ. ಇಲ್ಲಿಯ ಮಹಿಳಾ ಉದ್ಯೋಗಿಗಳನ್ನು ಲೈಂಗಿಕವಾಗಿ ದುರ್ಬಳಕೆ ಮಾಡಿಕೊಂಡರೂ ದೌರ್ಜನ್ಯ ವೆಸಗಿದರೂ ಈ ಆಧುನಿಕ ದೊರೆಗಳ ದರ್ಬಾರಿನಲ್ಲಿ ಕೇಳುವವರೇ ಇರುವುದಿಲ್ಲ.

ದೇಶೀಯ ನೆಲದಲ್ಲಿ ಮೂಲ ನಿವಾಸಿಗಳನ್ನು ಹೊರದೂಡಿ ತಮಗೆ ವಿಧೇಯರಾಗಿರುವ ಗುಲಾಮರನ್ನಿಟ್ಟುಕೊಂಡು ತಮ್ಮ ಮನಬಂದಂತೆ ಕೈಗಾರಿಕೆ, ವ್ಯಾಪಾರ, ವ್ಯವಹಾರಗಳನ್ನು ನಡೆಸಿ ದೇಶದ ಅಮೂಲ್ಯ ಸಂಪತ್ತನ್ನು ಮನಬಂದಂತೆ ಲೂಟಿ ಮಾಡುವ, ಕುರುಡು ಕಾಂಚಾಣ ಕುಣಿದು ಕುಪ್ಪಳಿಸಿ, ಕಾಲಿಗೆ ಸಿಕ್ಕವರನ್ನು ತುಳಿದು ಅಟ್ಟಹಾಸದಿಂದ ಮೆರೆದಾಡುವ ನವವಸಾಹತು ಕೇಂದ್ರಗಳೇ ಈ ವಿ.ಆ.ವ.ಗಳು. ಬಂಡವಾಳಗಾರರು ನೀಡುವ ಅಪಾರ ಲಂಚ ರುಷುವತ್ತುಗಳಿಗೆ ನಮ್ಮನ್ನಾಳುವ ರಾಜಕಾರಣಿಗಳು ಬಲಿಯಾಗಿ ದೇಶಕ್ಕೆ ವಿನಾಶಕಾರಿ ಗಂಡಾಂತರವನ್ನು ಆಹ್ವಾನಿಸುತ್ತಿರುವುದು ೨೧ನೇ ಶತಮಾನದ ದುರಂತ. ಮತ್ತೊಮ್ಮೆ ನಮ್ಮ ದೇಶವನ್ನು ದಾಸ್ಯದ ಸಂಕೋಲೆಗಳಿಗೆ ದೂಡುವ ಅಪಾಯ ಇದರಿಂದ ನಿಚ್ಚಳವಾಗುತ್ತಿದೆ. ಎಚ್ಚರ!

ಪಿ. ಯತಿರಾಜು
ಕಾಳಿದಾಸ ಪದವಿಪೂರ್ವ ಕಾಲೇಜು ಸಮೀಪ, ಕಾಳಿದಾಸನಗರ, ತುಮಕೂರು - ೫೭೨ ೧೦೨





# ಪದ ಕುಸಿಯೆ ನೆಲವಿಹುದು

ಅಲಕ ತೀರ್ಥಹಳ್ಳಿ

''ದತ್ತೂ ನೀನು ಇವತ್ತು ಶಾಲೆ ಹೋಗಾದು ಬ್ಯಾಡ; ನನ್ನೊತ್ತ ಮಾಬ್ಲಯ್ಯನೋರ ತ್ವಾಟಕ್ಕೆ ಬಾ.''

ಆಗಷ್ಟೆ ಹಾಸಿಗೆಯಿಂದೆದ್ದು ಟಾಮಿಯನ್ನೊಮ್ಮೆ ಮುದ್ದಿಸಿ, ತಣ್ಣನೆಯ ಅಬ್ಬಿನೀರಿನಲ್ಲಿ ಮುಖ ತೊಳೆದು ಕೊಳ್ಳುತ್ತಿದ್ದ ದತ್ತಮೂರ್ತಿಗೆ ಕುದಿಯುವ ನೀರನ್ನು ಮುಖಕ್ಕೆ ಸೋಕಿಸಿದಂತಾಯಿತು. ಅಷ್ಟರಲ್ಲಿ ಅಂತಹುದೇ ಅನುಭವವಾದ ಪಾರತಿಯು ಒಳಗಿನಿಂದಲೇ ಹೇಳಿದಳು :

''ಹಂಗಂದ್ರೆ ಎಂಥದು ? ಮೂರು ತಿಂಗಳಿಂದ ಮುಚ್ಚಿದ ಶಾಲೆ ಬಾಗಿಲು ತೆಗೆದು ಮೂರು ವಾರವೂ ಆಗಿಲ್ಲ; ಆಗಲೇ ಅವನ ಓದು ಸಾಕಾಗೋಯ್ತ ನಿಮಗೆ ? ಇವತ್ತು ದತ್ತು ಶಾಲೆಗೆ ಹೋಗಲಿ; ದೊಡ್ಡೋರ ಮನೆ ಚಾಕ್ರಿ ಮಾಡೋದು ನಿಮ್ಮಲ್ಲಿಗೇ ಮುಗೀಲಿ – ಮಕ್ಕಳ ಕಾಲಕ್ಕೂ ಮುಂದುವರಿಯೋದು ಬ್ಯಾಡ.''

ಪಾರತಿಯು ತನ್ನ ಮಾತನ್ನು ಇಷ್ಟುದ್ದಕ್ಕೆ ಎಳೆಯ ಬೇಕಾಗಿರಲಿಲ್ಲ. ಗಣಪಯ್ಯ ತನ್ನ ಮಗನ ಓದಿಗಾಗಿ ಏನು ಮಾಡಲೂ ಸಿದ್ಧನಿದ್ದನೆಂಬುದು ಪಾರತಿಗೆ ಗೊತ್ತಿಲ್ಲದ ವಿಚಾರವೇನೂ ಅಲ್ಲ. ಇತ್ತ ಮಾಬ್ಲಯ್ಯ ನವರ ಕೆಲಸವಂತೂ ಇವತ್ತು ನಿಲ್ಲುವಂತೆಯೇ ಇಲ್ಲ. ಒಂದು ವಾರದಿಂದ ಅಡಿಕೆ ಮರದಿಂದ ಮಣಿ ಉದುರುತ್ತಿದೆ – ಹೆಕ್ಕಿ ತೆಗೆದರೆ ಪ್ರತೀ ದಿನವೂ ಬುಟ್ಟಿ ತುಂಬುವಷ್ಟು ಕೊಳೆ ಅಡಿಕೆ ಸಿಕ್ಕೀತು. ಕಂಡೂ ಕಂಡು ವರ್ಷದ ಅನ್ನವನ್ನು ಮಣ್ಣಿಗೆ ಚೆಲ್ಲುವುದೇ ? ಒಂದು ದಿನ ಔಷಧಿ ಕರಡುವವ ಇಲ್ಲ; ಮತ್ತೊಂದು ದಿನ ಪಂಪು ಹೊಡೆಯುವವ ಇಲ್ಲ. ಮೊಗದೊಂದು ದಿನ ಮಳೆ... ಹೀಗೆಲ್ಲಾ ಮುಂದೆ-ಮುಂದೆ ಹಾಕುತ್ತಾ ಹೋದರೆ ?

''ಇಲ್ಲ ಮಾರಾಯ್ತಿ. ತಿಮ್ಮನ ಮಗನೀಗೆ ಹೇಳಿದ್ದೇ; ಆದ್ರೆ ಅವ್ನಿಗೇನೋ ಕೆಸರುಬಕ್ಕೆಯಾಗಿ ಕಾಲೆಲ್ಲಾ ಕೊಳಿತಾಯಿದೆಯಂತೆ.''

''ಏನು ಹಂಗಂದ್ರೆ. ತಿಮ್ಮನ ಮಗ ಮಾಡೋ ಕೆಲ್ಸ ನಮ್ಮ ದತ್ತೂ ಕೈನಲ್ಲಿ ಆಗುತ್ತಾ ? ಇನ್ನೂ ಹತ್ತು ವರ್ಷವೂ ತುಂಬಿಲ್ಲ – ಕೊಳೆ ಮಿಷಿನ್ನಿನ ಪಂಪನ್ನು ಹೊಡೀತಾನ ? ಅಡಿಕೆ ಮರಾನು ಹತ್ತಿಸಿಬಿಡಿ – ಮನೇಲಿರೋ ಅಷ್ಟೂ ಕೈ ದುಡಿದ್ರೆ ಸಂಸಾರ ಮೇಲೇಳುತ್ತಾ ನೋಡೋಣ.''

''ಆಗದಿದ್ದರೆ ಇಲ್ಲ ಬಿಡು. ಅಷ್ಟಕ್ಕೆ ಇಷ್ಟುದ್ದ ಮಾತು ಯಾಕೆ ? ದೊಡ್ಡವ್ರ ಮನೆ ಚಾಕ್ರಿ ಮಾಡಲಿಕ್ಕೆ ಶುರು ಮಾಡಿದೋನು ನಾನು – ನನ್ನಲ್ಲಿಗೇ ಮುಗಸ್ತೀನಿ ಬಿಡು. ಆದ್ರೆ, ಸರ್ಕಾರ ಕೈಬಿಟ್ಟಾಗ ನಮ್ಮ ಕೈಹಿಡಿದವರು ಮಾಬ್ಲಯ್ಯನವರು ಅನ್ನೋದನ್ನ ಮಾತ್ರ ಮರೀಬೇಡ... ನಮ್ಮ ದತ್ತು ಚೆನ್ನಾಗಿ ಓದಿ ಯಾವುದಾದರೂ ನೌಕ್ರಿ ಹಿಡಿದ್ರೆ ಸಾಕು; ಈ ಮಾತನ್ನು ಮಾಬ್ಲಯ್ಯನವ್ರೂ ಹೇಳ್ತಾರೆ ಗೊತ್ತಾ ?''

ಭೂಸುಧಾರಣೆಯ ಕಾನೂನು ಯಾರಿಗೆ ಏನೆಲ್ಲ ಉಪಕಾರವನ್ನು ಮಾಡಿತ್ತೋ ಏನೋ ಗಣಪಯ್ಯನವರ ಸಂಸಾರವನ್ನಂತೂ ಅಕ್ಷರಶಃ ಬೀದಿಗೇ ಎಸೆದಿತ್ತು! ಅವರ ಅಪ್ಪಯ್ಯನ ಕಾಲದ ಹತ್ತು ಎಕರೆ ಗದ್ದೆಯಲ್ಲಿ ರೈತರು ಬೆಳೆದುಕೊಡುತ್ತಿದ್ದ ಒಂದಿಷ್ಟು ಗುತ್ತಿಗೆ ಭತ್ತ, ಸಂಸಾರಕ್ಕೆ ಸಾಕಾಗುತ್ತಿತ್ತು. ಇನ್ನು ಅಲ್ಲಿ-ಇಲ್ಲಿ ಅಡುಗೆ, ಪೌರೋಹಿತ್ಯ ಇತ್ಯಾದಿ ಸಣ್ಣ-ಪುಟ್ಟ ಆದಾಯದಿಂದ ಮೇಲು ಖರ್ಚುಗಳೂ ನಡೆಯುತ್ತಿದ್ದವು. ಆದರೆ ಈಗ ಹಾಗಲ್ಲ; ಅರಳು ಹುರಿಯುವುದಕ್ಕೂ ನಾಕು ಕಾಳು ಗುತ್ತಿಗೆ ಭತ್ತ ಬರುತ್ತಿಲ್ಲ. ಇನ್ನು, ಊರಿನಲ್ಲಿ ಎಲ್ಲರೂ ಅಡುಗೆಯವರೆ – ಎಲ್ಲರೂ ಪೌರೋಹಿತ್ಯದವರೆ! ಆದರೆ ದೇವರು ದೊಡ್ಡವನು. ತನ್ನನ್ನು ನಿತ್ಯವೂ ತೊಳೆದು, ತಲೆಯಮೇಲೆ ಹೂವು ಹಾಕಿದವರನ್ನು ಹಾಗೇ ಬಿಡಲಾರ. ಮಾಬ್ಲಯ್ಯನವರ ಮನೆಯ ಹೊರಗೆ ತೋಟ-ಹಿತ್ತಲುಗಳಲ್ಲಿ ಗಣಪಯ್ಯ ದುಡಿದರೆ, ಪಾರತಿಯು ಅವರ ಮನೆಯ ಒಳಗೆಲಸಕ್ಕೆ ನಿಂತಳು. ಪುರುಸೊತ್ತು ಸಿಕ್ಕಾಗಲೆಲ್ಲಾ ತಮ್ಮ ಮನೆಯ ಮುಂದಿನ ಅರ್ಧ ಎಕರೆ ಯಲ್ಲಿ ಅಡಿಕೆ-ಬಾಳೆಯನ್ನೂ ಬೆಳೆಸಿಕೊಂಡಿದ್ದಾರೆ – ದತ್ತು ದೊಡ್ಡವನಾಗುವ ಹೊತ್ತಿಗೆ ಆಸರೆಯಾದೀತೆಂದು.

''ಅಪ್ಪಯ್ಯ, ನಾನು ಇವತ್ತು ಶಾಲೆಗೆ ಹೋಗೋದು ಉಂಟ-ಇಲ್ವ ?''

ದತ್ತುವಿನ ಈ ಪ್ರಶ್ನೆ ಪಾರತಿಯನ್ನು ಮತ್ತೆ ಕೆರಳಿಸಿತು.

''ಮತ್ತೆ ಅದು ಎಂಥ ಅಪ್ಪಯ್ಯನ್ನ ಕೇಳೋದು ? ನೀನೇನು ಪಿಟಾರಿ ತರ ಊರಿನ ದನಾನೆಲ್ಲಾ ಕಾಯ್ತೀಯೊ ಹ್ಯಂಗೆ ? ಶಾಲೇಗೆ ಹೋಗು ಅಂತ ಹೇಳಿ ಆಯ್ತಲ್ವಾ ? ಆ ಮೇಸ್ಟ್ರು ಇನ್ನು ಎಷ್ಟು ದಿನ ಇಲ್ಲಿ ಇರ್ತಾರೋ ಗೊತ್ತಿಲ್ಲ. ನಾಳೀನೆ ಮ್ಯಾಲಿನವರಿಗೆ ದುಡ್ಡುಕೊಟ್ಟು ತಮ್ಮ ಊರಿನ ಕಡೆ ವರ್ಗ ಮಾಡಿಸ್ಕೊಂಡ್ ಹೋದ್ರೆ ಮುಗೀತು – ಇನ್ನು ಆರು ತಿಂಗಳು ಬೀಗ! ಸುಮ್ನೆ ಸ್ಲೇಟು ಪುಸ್ತಕ ತೆಗೆದು ಓದ್ಕ ಹೋಗು. ನಾನು ಶಾರದೆ ಹಾಲು ಕರ್ಕೊಂಡು ಬರ್ತೇನೆ.''

ಶರಾವತಿ ಹೊನ್ನಾವರಕ್ಕೆ ಹರಿದು ತನ್ನಷ್ಟಕ್ಕೆ ಸಮುದ್ರ ವನ್ನು ಸೇರದಹಾಗೆ ಲಿಂಗನಮಕ್ಕಿಯಲ್ಲಿ ಅವಳನ್ನು ತಡೆದಾಗ ಸಿಟ್ಟಿನಲ್ಲಿ ಅವಳು ಮುಳುಗಿಸಿದ ಊರುಗಳಿಗೆಲ್ಲಿದೆ ಲೆಕ್ಕ ? ಆದರೆ ಅದೇಕೊ ಏನೋ ನವಿಲೆಸರವನ್ನು ಮಾತ್ರ ಮುಳುಗಿಸದೆ ತೇಲಿಸಿಬಿಟ್ಟಳು. ಸುತ್ತಲೂ ನೀರು – ನಡುವೆ ಊರು! ಸಾಲಿಗ್ರಾಮಕ್ಕೆ ಸುತ್ತಿಕೊಂಡ ನಾಗರನ ಹಾಗೆ! ಅದೇನು ದಿಗ್ಬಂಧವೋ ಅನುಬಂಧವೋ ಬಲ್ಲವರೆ ಬಲ್ಲರು. ಇಲ್ಲಿಯೇ ಹುಟ್ಟಿ ಬೆಳೆದವರು ಇಲ್ಲಿರುತ್ತಾರೆಂದರೆ, ಮಾಧವ ಬಾಪಟರಿಗೇನು ಇದು ತವರೂರೆ ? ಬಂದ ದಿನವೇನೊ ಊರಿನವರಿಗೆಲ್ಲ ಮಾತುಕೊಟ್ಟಿದ್ದಾರೆ – ನಾನು ಇಲ್ಲಿಯೇ ಇರಲಿಕ್ಕೆ ಬಂದವ, ನೀವು ಓಡಿಸುವವರೆಗೂ ಇಲ್ಲಿಯೇ ಇರುವವ... ಇಂತಹ ಬೆಣ್ಣೆ ಮಾತುಗಳನ್ನು ಶುರುವಿನಲ್ಲಿ ಯಾರೂ ಹೇಳಿಯಾರು – ಊಟ, ವಸತಿ ವ್ಯವಸ್ಥೆಯಾಗಬೇಕಲ್ಲವೆ ? ಆದರೆ ಈ ಮಾಷ್ಟರಿಗೂ

ಸ್ವಲ್ಪ ಬೇರೆಯಾಗಿಯೇ ಇದ್ದಾರೆ. ನಾನೂ ಮಲ್ಲಾಡಿಹಳ್ಳಿಯ ಅನಾಥಾಶ್ರಮದಲ್ಲಿ ಓದಿ ಬೆಳೆದವನು; ಇದೇ ನನ್ನ ಊರು, ಈ ಶಾಲೆಯೇ ಮನೆ – ಇವರೇ ನನ್ನ ಮಕ್ಕಳು-ಸಂಸಾರ – ಅಂತೆಲ್ಲಾ ಹೇಳಿದ್ದಾರಂತೆ. ಆದ್ದರಿಂದ ನವಿಲೆಸರ, ಶಿವಳ್ಳಿ, ಸಂಪಗಾರು, ಹಿಂಗಾರಕೊಡಿಗೆ, ಹೂವಿನಕೊಪ್ಪಲು ಮುಂತಾದ ಊರುಗಳ ಪುಟ್ಟ ಪುಟ್ಟ ಮನೆಗಳಲ್ಲಿ ಮಕ್ಕಳ ವಿದ್ಯೆಗಾಗಿ ಹಪಹಪಿಸುವ ಹಲವರ ಮಹದಾಸೆಯ ಮೊಗ್ಗು ಮೆಲ್ಲನೆ ಬಿರಿಯುತ್ತಿದೆ.

ಮಾಧವ ಮಾಸ್ಟರು ನವಿಲೆಸರಕ್ಕೆ ವರ್ಗವಾಗಿ ಬಂದ ಮರುದಿನವೇ ಊರಿನ ಹಿರಿಯರ ಸಭೆಯನ್ನು ಕರೆದು ಶಾಲೆಯನ್ನು ಅಭಿವೃದ್ಧಿಪಡಿಸುವ ಬಗ್ಗೆ ಮಾತನಾಡಿದ್ದಾರೆ. ಆ ಮರುದಿನದಿಂದಲೇ ಶಾಲೆಯ ಸುತ್ತ ಬೆಳೆದಿದ್ದ ಲಂಟಾನಿನ ಪೊದೆಗಳೆಲ್ಲಾ ಬೋಳಾಗಿವೆ. ದಾಸವಾಳ, ಬಕುಲ, ಕರವೀರ, ಅಗಸೆ ಮುಂತಾದ ಹೂಗಿಡಗಳ ಚಿಗುರು ಗೂಟಗಳನ್ನು ನೆಡಿಸಿ ಬೇಲಿ ಕಟ್ಟಿಸಿದ್ದಾರೆ. ಬರುವ ವರ್ಷದ ಈ ದಿನಕ್ಕೆ ಅವೆಲ್ಲವೂ ಹೂ ಬಿಟ್ಟಾವು. ಮಕ್ಕಳು ತಮ್ಮ ಮನೆಗಳಿಂದ ತಂದು ನೆಟ್ಟ ಹಲವು ಜಾತಿಯ ಗಿಡ-ಬಳ್ಳಿಗಳಿವೆ. ದಿನವೂ ಬೆಳಿಗ್ಗೆ ಹತ್ತುಗಂಟೆಗೆ ಡಣಡಣಡಣಣಣಣಣಣಣ ಢಾಣ್ ಢಾಣ್ ಢಾಣ್ ಎಂಬ ಶಾಲೆಯ ಬೆಲ್ಲು ಮಕ್ಕಳಿಗಷ್ಟೇ ಯಾಕೆ ಸುತ್ತಲಿನ ಊರಿನ ಜನರಿಗೂ ವಿಚಿತ್ರ ಕಚಗುಳಿಯನ್ನಿಡುತ್ತಿದೆ.

ಶಾಲೆಯ ಸಮೀಪದಲ್ಲಿಯೇ ಇರುವ ಮಾಬ್ಲಯ್ಯನವರಂಥ ಮನೆಯವರಿಗಂತೂ ಮಕ್ಕಳು ಒಕ್ಕೊರಲಿನಿಂದ 'ಸ್ವಾಮಿ ದೇವನೆ ಲೋಕಪಾಲನೆ' ಶುರುಮಾಡಿದರೆಂದರೆ, ಸಶಬ್ದವಾಗಿ ನಡೆಯುತ್ತಿದ್ದ ಕೆಲಸಗಳೆಲ್ಲವೂ ಭಕ್ತಿ-ಭಾವದಲ್ಲಿ ಅದ್ದಿಕೊಂಡು ಮೌನವಾಗಿ ಮುಂದುವರಿಯುತ್ತವೆ. ಮಧ್ಯಾಹ್ನವೂ ಅಷ್ಟೆ, ಇನ್ನು ಊರಿನವರು ಹೊತ್ತಲ್ಲದ ಹೊತ್ತಿನಲ್ಲಿ ಊಟಮಾಡಿಕೊಳ್ಳುವಂತಿಲ್ಲ – ಒಂದೂವರೆಯಾಗುತ್ತಲೇ ಊಟಕ್ಕೆ ಎಲೆ ರೆಡಿಯಾಗಿರಬೇಕು. ಇನ್ನು ಅಪ್ಪ-ಅಮ್ಮ ಇಬ್ಬರೂ ಕೂಲಿಗೆ ಹೋಗುವ ಮನೆಯವರೆಂದರೆ ಮುಗಿಯಿತು – ಅಜ್ಜ-ಅಜ್ಜಿಯರು ಗಡಿಬಿಡಿಯಲ್ಲಿ ಕೆಲಸಮಾಡುತ್ತಾ, ಅಡುಗೆ ಗುಬ್ಬೆಯ ಕತ್ತಲೆಯಲ್ಲಿ ಮುಗ್ಗರಿಸಿ ಏಳುವಷ್ಟರಲ್ಲಿ ಮಕ್ಕಳು ಗಂಜಿಯ ಗಡಿಗೆಯನ್ನು ಖಾಲಿ ಮಾಡಿ ಪರಾರಿ! ಶಾಲೆಯ ಹಿಂಬದಿಯಲ್ಲಿರುವ ಗುಡ್ಡದಲ್ಲಿ ಹಸುಗಳನ್ನು ಮೇಯಿಸುತ್ತಾ ಅದ್ಯಾವುದೋ ಮರದ ಮೇಲೋ-ಕೆಳಗೋ ಕೂರುವ ಪಿಟಾರಿಗೆ ನಾಕೂವರೆಯ ಗಂಟೆ ಬಾರಿಸಿತೋ, ಹಸುಗಳ ಮುಖವೂ ಊರಿನಕಡೆ ತಿರುಗಲೇ ಬೇಕು...

ಶಾಲೆಯ ಒಳಗೂ ಈಗ ಎಲ್ಲವೂ ಸುಗಮ. ಕಾಗುಣಿತ, ಬಳ್ಳಿ-ಮಗ್ಗಿಗಳಲ್ಲಿ ಒಂದೆರಡು ವರ್ಷ ಹಿಂದೆ ಬಿದ್ದ ಮಕ್ಕಳೆಲ್ಲ ಈಗ ಸಟಸಟ ಸಾಗುತ್ತಿದ್ದಾರೆ. ನಡುವೆ ಯಾವುದೂ ವಿಘ್ನಗಳು ಬಾರದೇ ಇದ್ದರೆ ಅವರೆಲ್ಲರೂ ತಾಳಗುಪ್ಪೆಯ ಶಾಲೆಗೆ ಹೋಗುವಷ್ಟರಲ್ಲಿ ಸಂಪೂರ್ಣ ರೆಡಿಯಾಗುವುದರಲ್ಲಿ ಅನುಮಾನವೇ ಇಲ್ಲ.

ನವಿಲೆಸರದ ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಈಗ ಮೂರು ತಿಂಗಳ ಸಣ್ಣ ಪರೀಕ್ಷೆಗಳು ನಡೆಯುತ್ತಿವೆ. ಬಾಪಟ್ ಮಾಷ್ಟರು ಮುದ್ದಾದ ಅಕ್ಷರಗಳಲ್ಲಿ ಬೋರ್ಡಿನ ಮೇಲೆ ಬರೆದ ಪ್ರಶ್ನೆಗಳನ್ನು ನೋಡಿಕೊಂಡು ಮಕ್ಕಳು ತದೇಕಚಿತ್ತದಿಂದ ಉತ್ತರ ಬರೆಯುತ್ತಿದ್ದಾರೆ. ಶಾಲೆಯಲ್ಲಿ ಒಂದು ಪಿಳ್ಳೆಯೂ ಇಲ್ಲವೆನ್ನುವಂತಹ ಮೌನ. ಅವರೆಲ್ಲರಿಗೂ ಈ ಮೌನವೊಂದು ವಿಲಕ್ಷಣ ಅನುಭವವನ್ನು ಕೊಡುತ್ತಿದೆ. ಅದಕ್ಕೇ ಇರಬೇಕು ತಾವು ಚೆನ್ನಾಗಿ ಓದಿಕೊಂಡಿದ್ದ ಉತ್ತರಗಳು ಮರೆತೇಹೋಗುತ್ತಿವೆ! ಮಾತುಗಳೂ ನಾಲಿಗೆಯಲ್ಲಿ ಇಂಗಿಹೋದವೇನೋ ಎಂಬ ಅನುಮಾನವೂ ಕಾಡಿರಬೇಕು – ಅವರು ಚಿಕ್ಕದಾಗಿ ನಾಲಿಗೆಯ ತುದಿಯವರೆಗೆ ಮಾತುಗಳ ಪಿಸುವನ್ನು ತಂದುಕೊಂಡು ಪರೀಕ್ಷಿಸಿಕೊಳ್ಳುತ್ತಿದ್ದಾರೆ. ಈ ಪ್ರಶ್ನೋತ್ತರಗಳ ಲೋಕಕ್ಕೆ ಸಂಬಂಧವೇ ಇಲ್ಲದ್ದು ಏನಾದರೂ ಘಟಿಸಬಾರದೆ ? ಮಾತುಗಳನ್ನು ಮುಕ್ತಗೊಳಿಸಬಾರದೇ ?... ಅಗೋ! ಶಾಲೆಯ ಆಚೆ ಬಾಗಿಲಿನಲ್ಲಿ ಹುಡುಗನೊಬ್ಬ ಬಂದು ನಿಂತಿದ್ದಾನೆ; ದೊಗಲೆ ಅಂಗಿ-ಚಡ್ಡಿ ; ಸೊಂಟಕ್ಕೆ ಪುಂಡಿಯ ನಾರಿನ ಹೆಬ್ಬೆಟ್ಟು ಗಾತ್ರದ ಜೋಡು ಹುರಿಯನ್ನು ಬೆಲ್ಟಿನಂತೆ ಕಟ್ಟಿಕೊಂಡಿದ್ದಾನೆ, ತಲೆಯ ಮೇಲೆ ಮಣ್ಣಿನ ಬಣ್ಣದ ಟವೆಲ್ಲು. ಬರೀ ನಾಕು ವರ್ಷಗಳ ಹಿಂದೆ ಈ ಮಕ್ಕಳಂತೆಯೇ ಇಲ್ಲೇ ಕುಳಿತುಕೊಂಡವನು. ಅದೇನೊ ರೋಗದಲ್ಲಿ ತಾಯಿ ಸಾಯುತ್ತಲೇ ತಂದೆಯ ಒತ್ತಾಸೆಗೆ ಓದಿಗೆ ವಿದಾಯ ಹೇಳಿದವನು. ಈಗ ಇಲ್ಲಿ ಮಾಧವ ಮಾಷ್ಟರ ಆಧಿಪತ್ಯದಲ್ಲಿ ಶುರುವಾದ ಅಭಿಯಾನಕ್ಕೂ ತನಗೂ ಸಂಬಂಧವೇ ಇಲ್ಲವೆನ್ನುವಂತೆ ಹೊರಗೆ ನಿಂತು ಕೈಸನ್ನೆಯಲ್ಲಿ ಮಾಷ್ಟರನ್ನೇ ಕರೆಯುತ್ತಿದ್ದಾನೆ – ಇದಕ್ಕೂ ಮೊದಲು ಬಲಗೈ ಬೆರಳುಗಳನ್ನು ಬಿಚ್ಚಿ-ಸೆಟೆಸಿಕೊಂಡು ಹಣೆಗೆ ಏರಿಸಿ ನಮಸ್ಕರಿಸದೆಯೆ!

"ನೀನು ಪಿಟಾರಿ ಅಲ್ವಾ ? ದನಾ ಕಾಯೋದನ್ನ ಬಿಟ್ಟು ಇದೇನಪ್ಪ ಇಲ್ಲಿಗೆ ಬಂದೆ ?"

''ಸಾರ್, ದತ್ತಮೂರ್ತಿಯ ಅಪ್ಪಯ್ಯ, ಅಡಿಕೆ ಮರದಿಂದ ಬಿದ್ದುಬಿಟ್ಟಾರೆ; ಮೈಮ್ಯಾಲೆ ಧ್ಯಾಂಸವೇ ಇಲ್ಲ! ಕೂಡ್ಲೆ ಸಾಗರಕ್ಕೆ ಕರ್ಕೊಂಡ್ ಹೊಂಟಾರೆ. ದತ್ತಯ್ಯನ್ನೂ ಈಗಲೇ ಮನೆಗೆ ಕಳಿಸ್ಬೇಕಂತೆ.''

''ಏಯ್ ! ಮೆಲ್ಲಗೆ ಮಾತಾಡೋ... ನೋಡು ಪಿಟಾರಿ. ಈಗ ಮಕ್ಕಳಿಗೆ ಸಣ್ಣ ಪರೀಕ್ಷೆ ನಡೀತಾ ಇದೆ : ಇನ್ನು ಅರ್ಧ ಗಂಟೆ ಅಷ್ಟೆ. ಆಮೇಲೆ ನಾನೇ ಕರ್ಕೊಂಡು ಬರ್ತೀನಿ; ನೀನು ಇಷ್ಟನ್ನ ಹೇಳಿಬಿಡು - ಆಯ್ತಾ?'' ಸನ್ನಿವೇಶದ ತುರ್ತನ್ನು ಇಷ್ಟು ದೊಡ್ಡವರೂ ಅರ್ಥಮಾಡಿಕೊಳ್ಳುತ್ತಿಲ್ಲವೆಂಬ ಚಡಪಡಿಕೆಯಲ್ಲಿ ಪಿಟಾರಿಯಿದ್ದ; ಮಾಷ್ಟರು ಮನಸ್ಸು ಬದಲಿಸಿಯಾರು ಅಂತಲೋ ಅಥವಾ ಇನ್ನೂ ಏನನ್ನೋ ಹೇಳಬೇಕೆಂದುಕೊಂಡೋ ಅಲ್ಲಿಯೇ ನಿಂತಿದ್ದ ಅವನನ್ನು ನೋಡಿ ಮಾಷ್ಟರು ಮತ್ತೆ ಹೇಳಿದರು :

''ನಂಗೆಲ್ಲಾ ಅರ್ಥ ಆಗಿದೆ; ನಾನು ಹೇಳಿದಷ್ಟನ್ನು ನೀನು ಮಾಡು ಅಷ್ಟೆ– ಆಯ್ತಾ?''

ತನಗೆ ದಿನವೂ ಬೆಳಿಗ್ಗೆ ಹಸುಕರುಗಳನ್ನು ಹೊಡೆದುಕೊಂಡು ಬರುವಾಗ ದೋಸೆ-ಬೆಲ್ಲವನ್ನು ಕೊಡುವ ದತ್ತುವಿನ ಅಮ್ಮನ ಚಿಕ್ಕ ಕೋರಿಕೆಯನ್ನು ತೀರಿಸ ಲಾಗದ್ದಕ್ಕೆ ಪಿಟಾರಿಗೆ ಅಳುವೇ ಬಂದಂತಾಯಿತು; ಸಾಯಲುಬಿದ್ದ ತಂದೆಯನ್ನು ಕೊನೇ ಘಳಿಗೆಯಲ್ಲಿ ನೋಡಲು ಬಿಡದೆ ಶಾಲೆಯ ಒಳಗೆ ಮಗನನ್ನು ಕೂಡಿ ಹಾಕಿಕೊಂಡು ತಾವು ಮಾತ್ರ ಬೆನ್ನಿಗೆ ಕೈಕಟ್ಟಿ ಅತ್ತಿತ್ತ ಓಡಾಡುತ್ತಿರುವ ಮಾಷ್ಟರನ್ನು ನೋಡಿ ಪಿಟಾರಿಗೆ ಸಿಟ್ಟು ಬಂತು :

''ಹಂಗಾರೆ, ನೀವೀಗ ದತ್ತೂನ್ನ ಕಳಿಸೋಲ್ವ ? ಸರಿ. ಹಂಗೇ ಹೋಗಿ ಹೇಳ್ತೀನಿ.''

ಪಿಟಾರಿಯು ಮಾಷ್ಟರ ಉತ್ತರಕ್ಕಾಗಿ ಕಾಯದೆ ಸಟಸಟನೆ ಹೋಗಿಬಿಟ್ಟ. ಇವಿಷ್ಟು ಸುದ್ದಿಯನ್ನು ಮುಟ್ಟಿಸಿ ಅವನು ಮತ್ತೆ ಬೆಟ್ಟಕ್ಕೆ ಹೋಗಿ ದನಕರುಗಳನ್ನು ವಾಪಸು ಊರಿಗೆ ಹೊಡೆದುಕೊಂಡು ಬರಬೇಕಾಗಿದೆ.

ಪರೀಕ್ಷೆ ಮುಗಿಯುತ್ತಲೇ ಬೆಲ್ಲಿನ ಶಬ್ದವನ್ನು ಕೇಳಿದ ಮಕ್ಕಳು ಎಂದಿನಂತೆ ಹೋ ಎಂದು ಕೂಗದೆ ಮೌನವಾಗಿ ಹೊರನಡೆದು ತಮ್ಮ ತಮ್ಮ ಮನೆಯ ಹಾದಿ ಹಿಡಿದರು. ಈ ಮಕ್ಕಳಿಗೆಲ್ಲಾ ದತ್ತುವಿನ ಮನೆಯಲ್ಲಿ ನಡೆದ ಅವಘಡದ ಸುಳಿವು ಸಿಕ್ಕಿಬಿಟ್ಟಿರಬಹುದೇ ಎಂದು ಬಾಪಟರಿಗೆ ಅನುಮಾನವೂ ಕಾಡದೆ ಇರಲಿಲ್ಲ. ಆದರೆ, ದತ್ತುವು ಎಂದಿನಂತೆ ಗೆಲುವಿನಲ್ಲೇ ಇದ್ದುದನ್ನು ನೋಡಿ ಸಮಾಧಾನ ವಾಯಿತು. ಅವರು ದತ್ತುವಿನ ಭುಜದ ಮೇಲೆ ಕೈಯಿಟ್ಟು ಹೇಳಿದರು :

''ದತ್ತು, ಇಲ್ಲಿ ಬಾ. ನನ್ನ ಸೈಕಲ್ಲಿನಲ್ಲೇ ಕೂತ್ಕೊಂಡು ಮನೆಗೆ ಹೋಗಬಹುದು.''

ದತ್ತುವು ಅನುಮಾನದಿಂದ ಏನನ್ನೂ ಕೇಳುವ ಮೊದಲೇ ಇವರು ಮುಂದುವರಿಸಿದರು :

''ಅದೇನೊ ನಿನ್ನ ಅಪ್ಪಯ್ಯನವರಿಗೆ ಸ್ವಲ್ಪ ಹುಷಾರಿಲ್ಲವಂತೆ; ಸಾಗರಕ್ಕೆ ಕರ್ಕೊಂಡು ಹೋಗ್ತಿದಾರಂತೆ.''

''ನನ್ನ ಅಪ್ಪಯ್ಯನಿಗೆ ? ಬೆಳಿಗ್ಗೆ ಆರಾಮಾಗಿದ್ದರು ?''

''ಈಗಲೂ ಅಂಥಾದ್ದೇನೂ ಆಗಿಲ್ಲ; ತೋಟದಲ್ಲಿ ಬಿದ್ದು ಸ್ವಲ್ಪ ಪೆಟ್ಟು ಆಗಿದೆಯಂತೆ. ನೀನೇನೂ ಹೆದ್ರಬೇಡ. ''

''ಅಯ್ಯೋ! ಹಂಗೆಲ್ಲ ಅಪ್ಪಯ್ಯ ಬೀಳ್ತಾನೆ ಇರ್ತಾರೆ; ಅದಕ್ಕೆಲ್ಲಾ ನಾನ್ಯಾಕೆ ಹೆದ್ರಬೇಕು ?''

ಬಾಪಟರು ಹೆಚ್ಚಿಗೆ ಏನೂ ಮಾತನಾಡದೆ ದತ್ತುವನ್ನು ತಮ್ಮ ಸೈಕಲ್ಲಿನ ಹಿಂದಿನ ಸೀಟಿನಲ್ಲಿ ಕೂರಿಸಿಕೊಂಡು ನಿಧಾನವಾಗಿ ಊರಿನ ಕಡೆ ಹೊರಟರು. ಅಷ್ಟುದೂರ ಹೋಗುತ್ತಲೆ ಉಗುಳು ನುಂಗಿಕೊಂಡು ಮತ್ತೆ ಶುರುಮಾಡಿದರು :

''ದತ್ತು, ನಿನ್ನ ಅಪ್ಪಯ್ಯ ಅಡಿಕೆ ಮರದ ಮೇಲಿಂದ ಬಿದ್ದಿದಾರಂತೆ, ಪೆಟ್ಟು ಸ್ವಲ್ಪ ಜಾಸ್ತಿಯೇ ಆಗಿರಬೇಕು. ಏನೇ ಆಗಲಿ ದತ್ತು, ನೀನು ಧೈರ್ಯವಾಗಿರು. ನಾವೆಲ್ಲಾ ಇದ್ದೇವೆ.''

ಅವರು ತಮ್ಮ ಒಂದು ಕೈಯಲ್ಲಿ ಮಾತ್ರ ಸೈಕಲ್ಲಿನ ಹ್ಯಾಂಡಲ್ ಹಿಡಿದುಕೊಂಡು ಇನ್ನೊಂದರಲ್ಲಿ ಮೆಲ್ಲನೆ ದತ್ತುವಿನ ಭುಜವನ್ನು ತಟ್ಟಿದರು. ತನಗರಿವಿಲ್ಲದಂತೆಯೇ ದತ್ತುವು ತನ್ನೆರಡೂ ಕೈಗಳನ್ನು ಮಾಷ್ಟರ ಕಿಬ್ಬೊಟ್ಟೆಯ ಸುತ್ತ ಮೆದುವಾಗಿ ಹಿಡಿದು ಕೊಂಡ. ಹೀಗೆ ಗುರು-ಶಿಷ್ಯರ ಸವಾರಿ ಸ್ವಲ್ಪ ದೂರವಷ್ಟೇ ಸಾಗಿರಬೇಕು – ಸೈಕಲ್ಲು ಇದ್ದಕ್ಕಿದ್ದಂತೆ ನಿಂತುಬಿಟ್ಟಿತು. ಎದುರಿನಿಂದ ಮಾಬ್ಲಯ್ಯನವರ ಮಗ ಶೇಷಗಿರಿಯ ಸೈಕಲ್ಲೂ ಬಂದು ಇವರ ಹತ್ತಿರವೇ ನಿಂತಿತು.

''ಓಹೋ ಏನಯ್ಯಾ, ಯಾವತ್ತು ಬಂದ್ಯಪ್ಪಾ ಮೈಸೂರಿಂದ ?'' ಉತ್ತರಕ್ಕೆ ಕಾಯದೆ ಅವರೆ ಮುಂದುವರಿಸಿದರು :

''ನಮ್ಮ ಗಣಪಯ್ಯನವರು ಹೇಗಿದಾರಪ್ಪ ?''

ದತ್ತುವಿನ ಮುಖವನ್ನು ನೋಡದಂತೆ ತನ್ನ ಮುಖ ತಿರುಗಿಸಿಕೊಂಡು ಶೇಷಗಿರಿ ಹೇಳಿದ :

''ಇನ್ನೂ ಎಚ್ಚರ ಬಂದಿಲ್ಲ ಸಾರ್. ನಮ್ಮ ಗಾಡೀನಲ್ಲೆ ಶಿರವಂತೆ ತನಕ ಹೋದರು. ಅಲ್ಲಿಂದ ಬಸ್ಸಲ್ಲಿ ಸಾಗರಕ್ಕೆ ಕರ್ಕೊಂಡು ಹೋಗ್ತಿದಾರೆ. ಇವಿಷ್ಟನ್ನು ನಿಮಗೆ ಹೇಳೋಣ ಅಂತಾನೆ ನಾನು ಶಾಲೆ ಕಡೆ ಹೊರಟಿದ್ದೆ.''

ಮಾಧವ ಮಾಷ್ಟರು ಒಂದು ಕ್ಷಣ ಕಣ್ಣು ಮುಚ್ಚಿ ನೀಳವಾದ ಉಸಿರೊಂದನ್ನು ಬಿಟ್ಟರು; ಮತ್ತೆ ಮೊದಲಿನಂತೆ ಗೆಲುವಾಗುತ್ತಾ ಹೇಳಿದರು : ''ಇರಲಿ ಬಿಡು; ಅಂಥಾದ್ದೇನೂ ಆಗೋದಿಲ್ಲ.''

''ಸಾರ್, ದತ್ತುವನ್ನು ಶಿರವಂತೆಗೆ ಕರ್ಕೊಂಡು ಬಾ ಅಂತ ಅವರಮ್ಮ ಹೇಳಿದಾರೆ; ಕರ್ಕೊಂಡು ಹೋಗ್ಲಾ ?''

''ಬೇಡ ಶೇಷಗಿರಿ, ನೀನೇನೂ ಯೋಚನೆ ಮಾಡೋದು ಬ್ಯಾಡ. ಹ್ಯಾಗೂ ನನ್ನ ಸೈಕಲ್ಲಿನಲ್ಲೇ ಕುಳ್ತಿದಾನಲ್ಲ – ನಾನೇ ಹೋಗ್ತೀನಿ. ಅವ್ರು ಇಷ್ಟು ಬೇಗ ಅಲ್ಲೀವರೆಗೂ ಹೋಗಿರಲಿಕ್ಕಿಲ್ಲ. ಸರಿ ನೀನು ಹೋಗಪ್ಪಾ. ಅಂದಹಾಗೆ ಮೈಸೂರಿಗೆ ಯಾವತ್ತು ಹೋಗ್ತೀಯ ?''

ಈ ಪ್ರಶ್ನೆಗೆ ಉತ್ತರವೇನೂ ಅವರಿಗೆ ಬೇಕಿರಲಿಲ್ಲ; ಸುಮ್ಮನೆ ಸಂದರ್ಭದ ಗಾಂಭೀರ್ಯವನ್ನು ಸ್ವಲ್ಪವಾದರೂ ತೆಳುಗೊಳಿಸಬೇಕಿತ್ತು. ಶೇಷಗಿರಿಯೂ ಉತ್ತರಿಸುವ ಉಮೇದಿನಲ್ಲಿರಲಿಲ್ಲ. ಆದರೂ ಸಹಜವೆಂಬಂತೆ ಹೇಳಿದ : ''ಇಲ್ಲ ಸಾರ್ ನಂದು ಪಿಯುಸಿ ಒಂದು ಸಬ್ಜೆಕ್ಟ್ ಹೋಗಿದೆ; ಇಲ್ಲೇ ಇದ್ಕೊಂಡ್ ಓದಬೇಕು ಅಂದ್ಕೊಂಡಿದೀನಿ.''

ಈ ಉತ್ತರವು ಮಾತ್ರ ಮಾಷ್ಟರಿಗೆ ತೀರಾ ಅನಿರೀಕ್ಷಿತವಾಗಿತ್ತು; ಅವರಿಗೆ ಅವನ ಪರಿಚಯವು ಅಷ್ಟೊಂದು ಇಲ್ಲವಾಗಿದ್ದರೂ ಅವನು ಇದೇ ಶಾಲೆಯಲ್ಲಿ ಅರಬರೆ ಓದಿ ಕೊಂಡು ಕೊನೆಗೆ ತಾಳಗುಪ್ಪೆಯಲ್ಲಿ, ಅನಂತರ ಮೈಸೂರಿನಲ್ಲಿ ಕಾಲೇಜು ಓದಲು ಹೋಗಿದ್ದನೆಂಬುದಷ್ಟೆ ಗೊತ್ತಿತ್ತು. ಮಾಬ್ಲಯ್ಯನವರು ಮಾತ್ರ ಅವನನ್ನು ಹೆಚ್ಚಿನ ಓದಿಗಾಗಿ



ಇಂಗ್ಲೆಂಡಿಗೂ ಕಳಿಸಿಯಾರು. ಆದರೆ ಪಾಪ ! ಪಿಯುಸಿಯಲ್ಲೇ ಫೇಲಾಗಿ ಈ ವಯಸ್ಸಿನ ಹುಡುಗ ಮನೆ ಸೇರಿಕೊಂಡಿದ್ದಾನೆಂಬುದು ಅವರ ಒಳಮನಸ್ಸನ್ನು ನಲುಗಿಸಿತು.

''ನೋಡು ದತ್ತು, ಏನೇ ಆದರೂ ಓದೋದನ್ನು ಮಾತ್ರ ನಿಲ್ಲಿಸಬೇಡ. ಈ ಊರಿಗೆ ಈಗಿರೋ ಒಬ್ಬ ಪಿಟಾರಿ ಸಾಕು – ಇಲ್ಲವಾದರೆ ದನ-ಕರುಗಳಿಗಿಂತ ದನಕಾಯೋರೆ ಹೆಚ್ಚಾದಾರು. ಈ ಶೇಷಗಿರಿಯೂ ಪಿಟಾರಿಯೇ ಆಗದಿದ್ದರೆ ಸಾಕು.''

ಈ ಮಾತುಗಳು ಈಗ ದತ್ತುವಿಗೆ ಬೇಕಿದ್ದವೋ ಇಲ್ಲವೋ ಮಾಷ್ಟರು ಯೋಚಿಸಿರಲಿಲ್ಲ, ಆದರೆ, ಇಂತಹ ಹಸಿಯಲ್ಲಿಯೇ ಅಲ್ಲವೆ ಬೇಡದ ಬೀಜಗಳು ಮೊಳೆಯುವುದು ? ಅದಕ್ಕೆ ಇರಬೇಕು ಅವರು ಹದವನರಿತು ಈಗಲೇ ಸತ್ವಲದ ಬಿತ್ತನೆ ನಡೆಸಿದ್ದು !

ಬಾಪಟರು ತಮ್ಮ ಸೈಕಲ್ಲಿನ ಹಿಂದೆ ಕುಳಿತಿದ್ದ ದತ್ತುವನ್ನು ಕೆಳಗೆ ಇಳಿಸಿ ಮುಂದಿನ ಬಂಪರು ರಾಡಿನ ಮೇಲೆ ಕುಳ್ಳಿರಿಸಿಕೊಂಡರು. ಈಗ ಅವನ ಬೆನ್ನು ಮಾಷ್ಟರ ಎದೆಗೆ ಮೆತ್ತಿಕೊಂಡಂತಿದೆ – ಅವನ ನೆತ್ತಿಯ ಗಂಧ ಅವರ ಮೂಗನ್ನು ಸವರಿ ವಾತ್ಸಲ್ಯದ ಅಮಲನ್ನು ತುಂಬುವಂತಿದೆ...

ಸೈಕಲ್ಲು ತುಂಬಾ ಕಿರಿದಾದ ಕಾಲುದಾರಿಯಲ್ಲಿ ಸಾಗಿದೆ. ರಸ್ತೆಯ ಇಕ್ಕೆಲಗಳಲ್ಲಿ ಲಂಟಾನಿನ ಪೊದೆಗಳು ಅಚ್ಚಗೆಂಪು ಹೂಗಳನ್ನು ನೆತ್ತಿಯಲ್ಲಿ ಹೊತ್ತುಕೊಂಡು ಸೈಕಲ್ಲಿನಷ್ಟೇ ಎತ್ತರದಲ್ಲಿವೆ. ಇನ್ನಾವುದೋ ಹೆಸರಿಲ್ಲದ ಹುಲ್ಲುಗಳು ಇಷ್ಟುದ್ದಕ್ಕೆ ಬೆಳೆದು ರಸ್ತೆಯನ್ನು ಆಕ್ರಮಿಸಿಕೊಂಡಿವೆ. ಹೀಗೆ ಅವರು ಸ್ವಲ್ಪ ದೂರ ಹೋಗುತ್ತಲೇ ಸಣ್ಣ ಹೊಳೆಯೊಂದು ಅವರನ್ನು ಅಡ್ಡವಾಗಿ ತಡೆಯಿತು. ಮಾಷ್ಟರು ಕೆಳಗೆ ಇಳಿಯದೆ ಜೋರಾಗಿ ಪೆಡಲ್ ತುಳಿದು ಸೈಕಲ್ಲು ನೀರಿಗೆ ನುಗ್ಗುತ್ತಲೇ ತಮ್ಮ ಎರಡೂ ಕಾಲುಗಳನ್ನು ಎತ್ತರಕ್ಕೆ ಅಗಲವಾಗಿ ಏರಿಸಿಕೊಂಡರು. ಎರಡೂ ಬದಿಗೆ ನೀರು ಚರ್ರನೆ ಹಾರುತ್ತಿದ್ದಂತೆ ದತ್ತುವು ಹರಳು ಚೆಲ್ಲಿದಂತೆ ಗಿಟಗಿಟಿ ಎಂದು ನಕ್ಕ. ಇವೆಲ್ಲದರಿಂದ ಉತ್ತೇಜಿತ ರಾದವರಂತೆ ಮಾಷ್ಟರು ಎದುರಿಗೆ ಬಂದ ಏರಿನಲ್ಲೂ ವೇಗವಾಗಿಯೇ ಸೈಕಲ್ಲನ್ನು ತುಳಿಯತೊಡಗಿದರು. ಇನ್ನು ಯಾವುದೇ ಸಂದರ್ಭವಾಗಿದ್ದರೂ ಅವರು ಇಲ್ಲಿ ಇಳಿದು ಸೈಕಲ್ಲನ್ನು ತಳ್ಳಿಕೊಂಡೇ ಹೋಗುವವರಾಗಿದ್ದರು.

ಹೀಗೆ ಸೈಕಲ್ಲು ನಿಧಾನವಾಗಿ ಏರುತ್ತಾ ಸಾಗಿದೆ. ಇದ್ದಕ್ಕಿದ್ದಂತೆ ದತ್ತುವು ಕೂಗಿದ :

''ಸಾರ್, ಮಾಬ್ಲಯ್ಯನವರ ಮನೆ ಎತ್ತಿನ ಗಾಡಿ ವಾಪಸ್ ಬರ್‍ತಾ ಇದೆ !''

ಮಾಷ್ಟರಿಗೊಮ್ಮೆ ನೆತ್ತಿ ಝುಲ್ಲೆಂದುಬಿಟ್ಟಿತು. ಇಷ್ಟು ಬೇಗನೆ ಅವರು ಗಣಪಯ್ಯನವರನ್ನೂ ಪಾರತಿಯನ್ನೂ ಬಸ್ಸಿಗೆ ಹತ್ತಿಸಿ ಹಿಂದಕ್ಕೆ ಬರುವುದು ಅಸಾಧ್ಯದ ಮಾತು. ಆದರೆ ಗಾಡಿ ಹಾಗೆಯೇ ವಾಪಸಾಗುತ್ತಿದೆಯೇ ? ತಮಗೆ ಅರಿವಿಲ್ಲದಂತೆಯೇ ಅವರು ಸೈಕಲ್ಲಿನಿಂದ ಇಳಿದುಬಿಟ್ಟಿದ್ದರು. ಶಿರವಂತೆಯ ಕಡೆ ಮುಖಮಾಡಿದ್ದ ತಮ್ಮ ಸೈಕಲನ್ನು ನಿಧಾನವಾಗಿ ತಿರುಗಿಸಿ ನವಿಲೆಸರದ ಕಡೆ ತಿರುಗಿಸಿದರು. ಯಾವುದೇ ಕ್ಷಣದಲ್ಲಿ ದತ್ತುವು ಪ್ರತಿಭಟಿಸಬಹುದೆಂಬ ಅವರ ಊಹೆ ಸುಳ್ಳಾಯಿತು. ಮೆಲ್ಲನೆ ಪೆಡಲನ್ನು ತುಳಿಯತೊಡಗಿದರು. ಕೊರಕಲು ದಾರಿಯಲ್ಲಿ ಬರುತ್ತಿದ್ದ ಗಾಡಿಯ ಗಡಗಡ ಸದ್ದು ಅವರ ಗುಂಡಿಗೆಯನ್ನು ಹೊಕ್ಕು ಕರಗತೊಡಗಿತು. ಎತ್ತುಗಳ ಕೊರಳಿನ ಗಂಟೆಯ ಸದ್ದು ಅಷ್ಟು ದೂರಕ್ಕೆ ಕೇಳಿಸಿಯೂ ಕೇಳಿಸದಂತಿತ್ತು. ಇನ್ನು ಇಲ್ಲಿ ಮಾತು-ಮಾತುಗಳ ಹುಸಿಯಾಟ ನಡೆದಿದೆ; ಉತ್ತರವು ಗೊತ್ತಿದ್ದೂ ಕೇಳುವ ಪರಿಯೊಂದು ಕಡೆಯಾದರೆ, ತಿಳಿದವರಿಗೇ ಉತ್ತರ ಹೇಳುವುದಿನ್ನೊಂದು ಪರಿಯಾಟ ! ಆಡುವವರಿಗಷ್ಟೇ ಗೊತ್ತು ಅದರ ಗೋಳು–

''ಸಾರ್, ಅದು ಶೇಷಗಿರಿಯವರ ಮನೆ ಗಾಡಿ ಅಲ್ಲವಾ ?''

''ಇರಬೇಕು ದತ್ತು ; ನಾನು ಸರಿಯಾಗಿ ನೋಡಲಿಲ್ಲ.''

''ಮತ್ತೆ ನಾವ್ಯಾಕೆ ನವಿಲೆಸರಕ್ಕೆ ವಾಪಾಸು ಹೋಗ್ತಾ ಇದೀವಿ – ಶಿರವಂತೆಗಲ್ವ ಸಾರ್, ಹೋಗಬೇಕಾದ್ದು ?''

''ಹೌದು. ಆದ್ರೆ ಮನೇಗೆ ಹೋಗಿ ಆಮೇಲೆ ಹೋಗೋಣ.''

''ಆಮೇಲೆ ಅಂದ್ರೆ ? ಅಪ್ಪಯ್ಯನ್ನ ಕರಕೊಂಡು ಹೋಗಿಬಿಟ್ಟಿರೋಲ್ವ ?... ಗಾಡೀನಲ್ಲಿ ಯಾರೋ ಹೆಂಗಸರು ಇದ್ದಹಾಗಿತ್ತು ? ಸೀರೆ ನೋಡಿದರೆ ಅಮ್ಮ ಇರಬೇಕು ಅನ್ನಿಸ್ತು.''

''ನಾನು ಸರಿ ನೋಡಲಿಲ್ಲ ದತ್ತು.''

ಸಣ್ಣವನಿಗೆ ಸಾಕೆನಿಸಿದೆ ಆಟ-ಬಳಲಿಕೆಯಲ್ಲೊಂದು ಕೊನೆಯ ಮಾತು –

''ಸಾರ್ ಸೈಕಲ್ಲು ನಿಲ್ಸಿ. ಹಿಂದೆ ಗಾಡೀನಲ್ಲಿ ಯಾರೋ ಜೋರಾಗಿ ಅಳ್ತಾ ಇದಾರೆ; ನಮ್ಮ ಅಮ್ಮನ ಅಳುವಿನ ಹಾಗೆ...''

ಅವನು ಅಳುವುದಕ್ಕೆ ಶುರುಮಾಡಿದ್ದಾನೆ. ಮಾಧವ ಮಾಷ್ಟರು ಸೋತು ಕಂಗಾಲಾಗಿದ್ದಾರೆ. ಏನು ಮಾಡಲೂ ತೋಚದೆ ಒಂದೇ ಸಮನೆ ಸೈಕಲ್ಲಿನ ಪೆಡಲನ್ನು ತುಳಿಯತೊಡಗಿದ್ದಾರೆ. ಇನ್ನೂ ಇನ್ನೂ ಜೋರಾಗಿ... ದತ್ತುವಿನ ಅಳುವೂ ಜೋರಾಗತೊಡಗಿದೆ. ಆಗಷ್ಟೆ ಅವರಿಬ್ಬರೂ ದಾಟಿಬಂದ ಚಿಕ್ಕ ಹೊಳೆಯು ಮೆಲ್ಲನೆ ಹರಿಯುತ್ತಿದೆ... ಮಾಷ್ಟರು ಹಿಂದಿನಂತೆಯೇ ಜೋರಾಗಿ ಸೈಕಲ್ಲನ್ನು ತುಳಿದು ಮುಂದಕ್ಕೆ ಹೋಗಿಬಿಡುವ ಹುನ್ನಾರಿನಲ್ಲಿದ್ದರು. ಆದರೆ ಅದೇಕೋ ದತ್ತುವಿನ ಚಡಪಡಿಕೆ ಹೆಚ್ಚಾಯಿತು. ಈಗ ಅವನು ಪ್ರಯಾಸಪಟ್ಟು ತಿರುಗಿ ಕುಳಿತು ಅವರ ಹೊಟ್ಟೆಗೆ ತನ್ನ ಎದೆಯನ್ನು ಒತ್ತಿಕೊಂಡು ಬೆನ್ನಿಗೆ ಎರಡೂ ಕೈಗಳನ್ನು ಬಿಗಿದುಕೊಂಡು ಮುಖವನ್ನು ಮೈಯಲ್ಲಿ ಹುದುಗಿಸಿ ಬಿಕ್ಕಳಿಸಿ ಬಿಕ್ಕಳಿಸುತ್ತಿದ್ದಾನೆ. ಇನ್ನೇನು ಅವನು ಸೈಕಲ್ಲಿನ ನಡುವೆಯೇ ನುಸುಳಿ ಕೆಳಗೆ ಇಳಿದು ಬಿದ್ದುಬಿಡುತ್ತಾನೆ ಎಂದುಕೊಂಡು ಮಾಷ್ಟರೂ ನಡು ನೀರಿನಲ್ಲಿಯೇ ಇಳಿದುಬಿಟ್ಟರು. ಈಗ ಅವರೂ ಮೆಲ್ಲನೆ ನಡುಗುತ್ತಿದ್ದಾರೆ.

ನೀರಿನಲ್ಲಿ ಸೈಕಲನ್ನು ದಾಟಿಸಿ ದಡದಲ್ಲಿ ನಿಲ್ಲಿಸಲು ಪ್ರಯತ್ನಿಸುತ್ತಿದ್ದಂತೆ ಅದರ ಸ್ಟ್ಯಾಂಡು ಮರಳಿನಲ್ಲಿ ಹೂತುಕೊಂಡು ಕೆಳಗೆ ಬಿತ್ತು. ಮತ್ತೆ ನಿಲ್ಲಿಸಲು ಪ್ರಯತ್ನಿಸಿದರು. ಆದರೂ ಅದು ಬೀಳುತ್ತಲೇ ಹೋಯಿತು. ಅಲ್ಲಿ ನಿಲ್ಲಲು ಸಾಧ್ಯವೇ ಇಲ್ಲವೆಂದು ದತ್ತುವಿನಂಥವರಿಗೂ ತಿಳಿಯುತ್ತಿತ್ತು – ಆದರೆ ಮಾಷ್ಟರು ಮಾತ್ರ ಹಠವೆಂಬಂತೆ ಮತ್ತೂ ಮತ್ತೂ ಹಾಗೆ ಮಾಡುತ್ತಾ ಇದ್ದರು. ಕೊನೆಗಂತೂ ಸೈಕಲನ್ನು ನೆಲಕ್ಕೇ ಮಲಗಿಸಿ ಸುಮ್ಮನೇ ನಿಂತುಬಿಟ್ಟರು. ಒಂದು ಚಣವಷ್ಟೆ. ಇವೆಲ್ಲವನ್ನೂ ನಿರ್ಭಾವದಿಂದ ನೋಡುತ್ತಿದ್ದ ದತ್ತುವು ಇದ್ದಕ್ಕಿದ್ದಂತೆ ಜೋರಾಗಿ ಅಳುತ್ತಾ ಅಂಗಲಾಚಿದ :

''ಸಾರ್, ಕೈ ಮುಗೀತೀನಿ; ಆ ಗಾಡಿ ಬರೋ ತನಕ ಇಬ್ರೂ ಇಲ್ಲೇ ಇರೋಣ...''

ಐವತ್ತು ವರ್ಷಗಳಲ್ಲಿ ಕಂಡರಿಯದ ಅನುಭವವೊಂದು ಆ ಕ್ಷಣದಲ್ಲಿ ಮಾಷ್ಟರನ್ನು ಇಷ್ಟಿಷ್ಟೆ ಆವರಿಸುತ್ತಾ ಇಡಿಯಾಗಿ ತುಂಬಿಕೊಳ್ಳತೊಡಗಿತು. ದತ್ತುವು ಒಮ್ಮೆಲೇ ಅವರನ್ನು ಬಿಗಿಯಾಗಿ ಅಪ್ಪಿಕೊಂಡುಬಿಟ್ಟ. ಮಾಷ್ಟರು ಅವನಿಗೆ ಅದೇನನ್ನೋ ಹೇಳಬೇಕೆಂದುಕೊಳ್ಳುವಷ್ಟರಲ್ಲಿ ಅಳುವೇ ನುಗ್ಗಿಬಂದು ಸುಮ್ಮನಾಗಿಬಿಟ್ಟರು. ಪ್ರಾಯಶಃ ಅವರು 'ದತ್ತು, ನಾವಿದ್ದೇವೆ; ನೀನೇನೂ ಚಿಂತಿಸಬೇಡ' ಎಂದು ಹೇಳಬೇಕೆಂದುಕೊಂಡಿದ್ದರೋ ಏನೋ.

ಅಲಕ ತೀರ್ಥಹಳ್ಳಿ
ಸರ್ಕಾರಿ ಪ್ರಾಥಮಿಕ ಶಾಲೆಯ ಹತ್ತಿರ, ಬೆಟ್ಟಮಕ್ಕಿ ಬಡಾವಣೆ, ಸೀಬಿನಕೆರೆ ಅಂಚೆ, ತೀರ್ಥಹಳ್ಳಿ - ೫೭೭ ೪೩೨



ಶ್ರೀ ಸದಾಶಿವ ಯೋಗಿಗಳು

ಸಂಸ್ಥಾಪಕ ಅಧ್ಯಕ್ಷರು

# ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ)

ಶ್ರೀ ಶಿವಾನಂದ ಯೋಗಾಶ್ರಮ, ಹಂಪಿ-583 239, ಹೊಸಪೇಟೆ ತಾ||, ಬಳ್ಳಾರಿ ಜಿಲ್ಲೆ

ಕಳೆದ 50 ವರ್ಷಗಳಿಂದ ಆಧ್ಯಾತ್ಮಿಕತೆಯ ವೈಜ್ಞಾನಿಕ ಹಿನ್ನೆಲೆಯನ್ನು ತರ್ಕಬದ್ಧವಾಗಿ ವಿಶ್ಲೇಷಣೆ ಮಾಡುತ್ತ ಬಂದಿರುವ ಶ್ರೀ ಸದಾಶಿವ ಯೋಗಿಗಳು ಮೂಢನಂಬಿಕೆಗಳ ವಿರುದ್ಧ ಅವಿರತ ಹೋರಾಟದಲ್ಲಿ ತೊಡಗಿದ್ದಾರೆ. ತಮ್ಮ ವಿಚಾರಗಳನ್ನು 'ಸದಾಶಿವ ಸೂತ್ರಗಳು' ಎಂಬ ಹೆಸರಲ್ಲಿ ಜನಪ್ರಿಯಗೊಳಿಸಿರುವ ಯೋಗಿಗಳು ಹಲವಾರು ವೈಚಾರಿಕ ಗ್ರಂಥಗಳನ್ನು ಕೂಡ ರಚಿಸಿದ್ದಾರೆ. ಓರ್ವ ಸಾಧಾರಣ ಯತಿಯಾಗಿ ಹಂಪಿಯಲ್ಲಿ ನೆಲೆಸಿರುವ ಶ್ರೀಯುತರು ಹೋಮಿಯೋ ವೈದ್ಯರಾಗಿಯೂ ಜನಸಾಮಾನ್ಯರ ಕಷ್ಟಕಾರ್ಪಣ್ಯಗಳಲ್ಲಿ ನೆರವಾಗುತ್ತಿದ್ದಾರೆ.

## ಮುಖ್ಯ ಸದಾಶಿವ ಸೂತ್ರಗಳು

1. ಮನುಜ ಜೀವಿಯ ಬದುಕು ಉಚ್ಛ್ವಾಸ - ನಿಶ್ವಾಸಗಳೆಂಬ ಎರಡು ವಿಧ ಉಸಿರಾಟಗಳಿಂದ ಕೂಡಿದೆ. ಈ ಎರಡು ಕ್ರಿಯೆಗಳಿಗೆ ಅಂತರಂಗದ ಪ್ರಾಣವೇ ಮೂಲಾಧಾರವಾಗಿರುತ್ತದೆ. ಇವುಗಳಲ್ಲಿ ಮನೋ ಒತ್ತಡದಿಂದ 'ಹಂ' ಎಂದು ಅಪಾನವಾಯುವಾಗಿ ಹೊರಮುಖಗೊಳ್ಳುತ್ತಿದ್ದರೆ 'ಸೋ' ಎಂದು ಅಂತರ್ಮುಖಗೊಂಡು ಪ್ರಾಣನಲ್ಲಿ ಸೇರುತ್ತದೆ. ಇಲ್ಲಿ 'ಹಂ'ನಲ್ಲಿ 'ಸೋ', 'ಸೋ'ನಲ್ಲಿ 'ಹಂ', ಇವೆರಡು ಒಂದನ್ನೊಂದು ಆಕರ್ಷಿಸುತ್ತಾ ಯಂತ್ರದಂತೆ ಸಮಸ್ತ ಜೀವಿಗಳಲ್ಲಿ ನಡೆಯುತ್ತಿರುತ್ತದೆ.
'ಹಂ' ಎಂಬುದು ಮನಸ್ ತತ್ತ್ವದಿಂದ ಕೂಡಿ ಬಹಿರ್ಗತವಾಗುತ್ತಿದ್ದರೆ, 'ಸೋ' ಎಂಬುದು ಅಂತರ್ಗತ ಪ್ರಾಣತತ್ತ್ವವಾಗಿರುತ್ತದೆ.

2. ಸಂಕಲ್ಪ - ವಿಕಲ್ಪಗಳೇ ಜನನ - ಮರಣಗಳು; ಸಂಕಲ್ಪ- ವಿಕಲ್ಪ ನಾಶವೇ ಜನನ-ಮರಣ ನಾಶ. ಈ ವಿಧ ಜನನ-ಮರಣ ನಾಶವೇ ಆತನ ಕೈವಲ್ಯವಲ್ಲದೆ ಸತ್ತು ಹೋದವನೇ ಮತ್ತೆ ಹುಟ್ಟಿ ಬರುತ್ತಾನೆಂದು ಕಲ್ಪಿಸಿ ಕುಣಿದಾಡುತ್ತಿರುವುದು ಮೂರ್ಖ ಸಿದ್ಧಾಂತವಾಗಿರುತ್ತದೆ.

3. ಜೀವನದಲ್ಲಿ ಎಲ್ಲರ ಸರ್ವವಿಧ ಹುಡುಕಾಟ - ತಡಕಾಟಗಳೆಲ್ಲಾ ತಾನು ಸುಖ-ಶಾಂತಿಯನ್ನು ಹೊಂದುವ ಉದ್ದೇಶವೇ ಹೊರತು ಮತ್ತೇನು ಅಲ್ಲವೇ ಅಲ್ಲ. ಈ ಸುಖ - ಶಾಂತಿಗಾಗಿಯೇ ಮನುಜನು ಸಹಸ್ರಾರು ಕಿಲೋಮೀಟರ್ ತಿರುಗುತ್ತಾ ಅನೇಕ ತೆರನಾದ ಕಾರ್ಯಕಲಾಪಗಳಲ್ಲಿ ತೊಡಗುತ್ತಿದ್ದರೂ ಈ ಎಲ್ಲವುಗಳ ಫಲ ಅನುಭವಕ್ಕೆ ಬರುತ್ತಿರುವುದು ತನ್ನ ಅಂತರಂಗದಲ್ಲಿಯೇ ವಿನಃ ಬಹಿರಂಗದಲ್ಲಿ ಅಲ್ಲವೇ ಅಲ್ಲ.
ಸುಖವು ಸ್ವರ್ಗದಲ್ಲಿದೆ ಎನ್ನುವುದರ ಅರ್ಥ - ಮನಸ್ಸು ಸ್ವಸ್ಥಾನಾಭಿಮುಖವಾಗಿ ಗಮನಿಸುವುದರಿಂದ ಉಂಟಾಗುವ ತನ್ಮಯಾನಂದವೇ ಸ್ವರ್ಗ.

## ಶ್ರೀ ಸದಾಶಿವ ಯೋಗಿಯವರು ರಚಿಸಿರುವ ಗ್ರಂಥಗಳು




ರೂ 95




ರೂ 80




ರೂ 70




ರೂ 120

**ಪುಸ್ತಕಗಳು ದೊರೆಯುವ ಸ್ಥಳ**

ಶ್ರೀ ಶಿವಾನಂದ ಯೋಗಾಶ್ರಮ, ಹಂಪಿ - 583239, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

**ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ) ಸಂಸ್ಥೆಗೆ ನೀಡುವ ದೇಣಿಗೆಗೆ 'ಸೆಕ್ಷನ್ 80ಜಿ' ಅನ್ವಯ ಆದಾಯ ತೆರಿಗೆ ವಿನಾಯಿತಿ ಇದೆ.**



ಮೆರವಣಿಗೆ



ಪಿ. ಜಿ. ಎಸ್. ಆಚಾರ್ಯ

# ಪ್ರಶಸ್ತಿಗಳಿಗೆ ಹಂಬಲಿಸದ ಕೀರ್ತಿ ಕಲಾವಿದ

## ಪಿ. ಜಿ. ಎಸ್. ಆಚಾರ್ಯ

ಶ್ರೀ ಗಣಪತಿ ಆಚಾರ್ಯ, ಶ್ರೀಮತಿ ಭಾಗೀರಥಮ್ಮನವರ ಪುತ್ರರು. ಮೈಸೂರಿನ ಪ್ರತಿಷ್ಠಿತ ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಕಲಾಶಾಲೆಯಲ್ಲಿ ೧೯೪೯ರಿಂದ ೧೯೫೪ರವರೆಗೆ ಓದಿ, ಚಿತ್ರಕಲಾ ಮದರಾಸು ಸರ್ಕಾರದ ಮಾಡಲ್ ಡ್ರಾಯಿಂಗ್‌ನಲ್ಲಿ ಉತ್ತೀರ್ಣರಾದ ಇವರು ೮೦ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳನ್ನು ಮಾಡಿದ್ದಾರೆ.

ಹಳೇ ತಲೆಮಾರಿನ ಖ್ಯಾತಿವೆತ್ತ ಕಲಾವಿದರ ಶೈಲಿಯ ಸ್ಮರಣೆಯನ್ನು ಇವರ ಚಿತ್ರಗಳಲ್ಲಿ ಕಾಣುವುದೇ ಒಂದು ವಿಶೇಷ. ಯಾವ ಪ್ರಶಸ್ತಿಗಳಿಗೂ ಹಂಬಲಿಸದ ವಿಶಿಷ್ಟ ಕಲಾವಿದ ಶ್ರೀ ಪಿ. ಜಿ. ಎಸ್. ಆಚಾರ್ಯ ಅವರು.

ಪಿ. ಎಂ. ರಾಜನ್
ಕಲಾ ವಿಮರ್ಶಕ, ಪತ್ರಕರ್ತ, ನಂ. ೯೩ (೪೩), ಫಯಾಜ್ ಬಾಲ್ಕನಿ ರಸ್ತೆ,
ನಜರ್ ಬಾದ್, ಮೈಸೂರು - ೫೭೦ ೦೧೦



ಗುಲ್ಮೋಹರ್ ವೈಭವ



ಮಕ್ಕಳ ಆಟವನ್ನು ವೀಕ್ಷಿಸುತ್ತಿರುವ ರಾಜಪರಿವಾರ



ಅಡಿಗೆ

# ದಲಿತರು: ಪರಿಸ್ಥಿತಿ ಮತ್ತು ಪರ್ಯಾಯ

**ಕ**ರ್ನಾಟಕದಲ್ಲಿ ದಲಿತರು ದಲಿತರಿಗಾಗಿ ಹೋರಾಡುತ್ತಿದ್ದ ಕಾಲವಿತ್ತು. ಆಗ ಎಲ್ಲ ದಲಿತರ ಸಮಸ್ಯೆಗಳು ಒಂದೇ ಆಗಿದ್ದವು. ಆಗಿನ ಹೋರಾಟದ ಘೋಷಣೆಗಳನ್ನು ಗಮನಿಸಬೇಕು : 'ಕೊಟ್ಟಿದ್ದು ಸಾಕು ಸೀರೆ ತಾಳಿ : ದಲಿತರು ನಿಂತಿದ್ದಾರೆ ಭೂಮಿ ಕೇಳಿ'. 'ವಿಷದ ಹೆಂಡ ಬೇಡ : ಹೋಬಳಿಗೊಂದು ವಸತಿ ಶಾಲೆ ಕೊಡಿ' ಇತ್ಯಾದಿ. ಆಗ ಕೊಡಗಿನಲ್ಲಿ ದಲಿತರಿಗೆ ಅನ್ಯಾಯವಾದರೆ ಬೀದರಿನಿಂದ ಪ್ರತಿಭಟಿಸಲು ದಲಿತರು ಬರುತ್ತಿದ್ದರು. ಬೀದರಿನಲ್ಲಿ ದಲಿತರಿಗೆ ಅನ್ಯಾಯವಾದರೆ ಕೊಡಗಿನಿಂದ ಬರುತ್ತಿದ್ದರು. ಇಂದು ಪರಿಸ್ಥಿತಿ ಹಾಗಿಲ್ಲ. ಇಂದಿನ ಹೋರಾಟದ ಘೋಷಣೆಗಳೇ ಬೇರೆ. 'ದೇವನಹಳ್ಳಿಯಲ್ಲಿ ನಿರ್ಮಾಣವಾಗಲಿರುವ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಅಂಬೇಡ್ಕರ್ ಹೆಸರಿಡಿ', 'ದಲಿತರು ಬೌದ್ಧ ಧರ್ಮಕ್ಕೆ ಮತಾಂತರವಾಗಬೇಕು', 'ದಲಿತರ ಮಕ್ಕಳಿಗೆ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಕಲಿಸಬೇಕು' ಇತ್ಯಾದಿ. ಕೇವಲ ಇಪ್ಪತ್ತೈದು ವರುಷಗಳಲ್ಲಿ ದಲಿತರ ಹೋರಾಟದ ದಾರಿ ತಿರುವುಮುರುವಾಗಿರುವುದು ವ್ಯಂಗ್ಯ. ರಾಮಕೃಷ್ಣ ಹೆಗಡೆ ಸರಕಾರ, ದಲಿತರ ಮದುವೆಗೆಂದು ೨೫ ರೂಪಾಯಿಗಳಿಗೆ ಒಂದು ಜೊತೆ ಬಟ್ಟೆ ತಾಳಿ ಕೊಡುತ್ತಿತ್ತು. ಇದು ದಲಿತರ ಮೂಲಭೂತ ಸಮಸ್ಯೆಯನ್ನು ಮುಚ್ಚಿಡುವ ಕುತಂತ್ರ ಎಂದು ದಲಿತ ಚಿಂತಕರು, ಹೋರಾಟಗಾರರು ಅರಿತಿದ್ದರು. ಅದಕ್ಕಾಗಿ ಅವರು 'ಭೂಮಿ ಕೊಡಿ' ಎಂದು ಕೇಳಿದ್ದರು. ಸರಕಾರಿ ಹೆಂಡ ದಲಿತರನ್ನು ನೇರವಾಗಿ ಬಲಿತೆಗೆದುಕೊಳ್ಳುತ್ತಿತ್ತು. ಆಗ ದಲಿತರು ಹೆಂಡದ ಬದಲು 'ಹೋಬಳಿಗೊಂದು ವಸತಿ ಶಾಲೆ' ಕೇಳಿದ್ದರು. ಆದರೆ ಇತ್ತೀಚಿನ ೧೦-೧೫ ವರುಷಗಳಲ್ಲಿ ಭೂಮಿ, ಶಿಕ್ಷಣ ಮತ್ತು ಹಾಸ್ಟೆಲ್‌ಗಳ ಬಗ್ಗೆ ಪ್ರಸ್ತಾಪವೇ ಆಗುತ್ತಿಲ್ಲ.

ಸರಕಾರ ತಾನೇ ಮುಂದಾಗಿ ಏನನ್ನು ಜಾರಿಗೊಳಿಸುತ್ತದೋ ಅದು ತಮಗೆ ಮಾಡುತ್ತಿರುವ ಮೋಸವೆಂದು ಅಂದು ದಲಿತರು ತಿಳಿದಿದ್ದರು. ಆದರೆ ಇಂದು ಸರಕಾರದ ಕುತಂತ್ರದ ಯೋಜನೆಗಳನ್ನು ದಲಿತರು ತಮ್ಮ ಉದ್ಧಾರಕ್ಕಾಗಿಯೇ ಮಾಡುತ್ತಿದೆ ಎಂದು ಖುಷಿಪಟ್ಟು ಕುಣಿದಾಡುತ್ತಿದ್ದಾರೆ. ಇಂಗ್ಲಿಷ್ ಕಲಿಸುವ ವಿಷಯದಲ್ಲಿ ಕರ್ನಾಟಕದ ಚರಿತ್ರೆಯಲ್ಲಿ ಮೊಟ್ಟಮೊದಲ ಬಾರಿಗೆ ಆಳುವ ಸರಕಾರ + ಎನ್. ಟಿ. ನಾರಾಯಣಮೂರ್ತಿ + ದಲಿತ ಚಿಂತಕರು, ಹೋರಾಟಗಾರರು+ ದಲಿತಪರ ಚಿಂತಕರು = ೦ ಒಂದೇ ತೀರ್ಮಾನಕ್ಕೆ ಬಂದಿದ್ದಾರೆ. ಇದು ಚಾರಿತ್ರಿಕ ತಮಾಷೆಯ ಸಂಗತಿ. ನಾರಾಯಣಮೂರ್ತಿ ಮತ್ತು ದಲಿತರ ಹಿತಾಸಕ್ತಿ ಒಂದೇ ಆಗಬೇಕಿದ್ದರೆ ಒಂದೋ ನಾರಾಯಣಮೂರ್ತಿ ದಲಿತರ ಹಂತಕ್ಕೆ ಇಳಿದಿರಬೇಕು ಇಲ್ಲವೇ ದಲಿತರು ನಾರಾಯಣಮೂರ್ತಿ ಹಂತಕ್ಕೆ ಏರಿರಬೇಕು. ಇಲ್ಲಿ ಎರಡೂ ನಡೆದಿಲ್ಲ. ಆದರೆ ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಸುವ ವಿಷಯದಲ್ಲಿ ಈ ಇಬ್ಬರೂ ಒಂದೇ ಅಭಿಪ್ರಾಯ ತಾಳಿರುವುದು ಚರಿತ್ರೆಯ ವ್ಯಂಗ್ಯ.

ಕೂಲಿಕೆಲಸಕ್ಕೆ ಹೋಗಲು ದಲಿತರು ಬಸ್ಸೊ, ವ್ಯಾನೊ ಹತ್ತಿದಾಗ ಜೇಬಿನಲ್ಲಿ ಬಿಡಿಗಾಸಿಲ್ಲದೆ ಒದ್ದಾಡುತ್ತಿದ್ದಾರೆ. ಈ ಕಡೆ 'ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಅಂಬೇಡ್ಕರ್ ಹೆಸರಿಡಿ' ಎಂಬ ಬೇಡಿಕೆ; ಕೂಲಿ, ಜೀತ, ನಿರುದ್ಯೋಗ, ತುತ್ತು ಅನ್ನಕ್ಕಾಗಿ ವಲಸೆ, ದೇವದಾಸಿ ಪದ್ಧತಿ ಇತ್ಯಾದಿ ಪರಿಸ್ಥಿತಿ ದಲಿತರದು. ಈ ಕಡೆ 'ದಲಿತ ಮಕ್ಕಳಿಗೆ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಕಲಿಸಿ, ಇವರಿಗೆ ಸ್ವರ್ಗವೇ ಭೂಮಿಗೆ ಇಳಿಯುತ್ತದೆ' ಎಂಬ ಬೇಡಿಕೆ; 'ಹಿಂದೂ ಧರ್ಮ ಬೇಡ; ಬೌದ್ಧ ಧರ್ಮಕ್ಕೆ ಮರಳಿ ಹೋಗೋಣ' ಎಂಬ ಪ್ರಯತ್ನ. ದಲಿತರಿಗೆ ಭೂಮಿಯೇ ಇಲ್ಲ. ಇಂದಿಗೂ ಭೂಮಾಲಿಕರ ಜಮೀನಿನಲ್ಲಿ ದಲಿತರು ಕೂಲಿ ಮತ್ತು ಜೀತ ಮಾಡುತ್ತಿದ್ದಾರೆ. ಇಂತಹ ಕ್ರೂರ ಸ್ಥಿತಿಯ ನಡುವೆ 'ಸಹಜ ಕೃಷಿ ಮಾಡಿ', 'ಶೂನ್ಯ ಬಂಡವಾಳದಿಂದ ಕೃಷಿ ಮಾಡಿ' ಎಂಬ ಭೂಮಾಲಿಕಪರ ಆಂದೋಲನಕ್ಕೆ ದಲಿತರ ಮುಂದಾಳತ್ವ.

ಇವೆಲ್ಲ ಬರೀ ಟೀಕೆಗಳ ಥರ ಕಾಣಬಹುದು. ಕ್ರೂರ ವಾಸ್ತವ ಯಾವಾಗಲೂ ಹೀಗೇ. ನನ್ನ ಮುಖ್ಯ ವಿಚಾರ ಇಷ್ಟು: ನಿಜ ದಲಿತರ ವಾಸ್ತವದ ಕ್ರೂರ ಬದುಕು ದಲಿತ ಚಿಂತಕರು, ಹೋರಾಟಗಾರರು ಮತ್ತು ಕೆಲವು ಸಾಹಿತ್ಯಾರಾಧಕ ವಿಮರ್ಶಕರಿಗೆ ತಿಳಿಯುವುದಿಲ್ಲ. ಅವರೆಲ್ಲ ಮಹಾನಗರದಲ್ಲಿ ಕುಳಿತು ದಲಿತರ ಭವಿಷ್ಯದ ಬಗ್ಗೆ ಹಗಲುಗನಸು ಕಾಣುತ್ತಿದ್ದಾರೆ. ಹೊಟ್ಟೆ ತುಂಬಿದ ದಲಿತರ ಸಮಸ್ಯೆಗಳನ್ನು ಸಮಸ್ತ ದಲಿತರ ಸಮಸ್ಯೆಗಳೆಂದು ಜನರಲೈಸ್ ಮಾಡುತ್ತಿದ್ದಾರೆ. ಅವರ ಕಣ್ಣಿಗೆ ದಲಿತ ಅಧಿಕಾರಿ, ನೌಕರ, ರಾಜಕಾರಣಿ ಮತ್ತು ಸಾಹಿತಿಗಳು ಹಾಗೂ ಅವರ ಮಕ್ಕಳು ಮಾತ್ರ ಕಾಣುತ್ತಾರೆ. ತುತ್ತು ಅನ್ನಕ್ಕಾಗಿ ಆರೇಳು ವರುಷದ ಹಸುಗೂಸುಗಳು, ಮೈಯಲ್ಲಿ ಚರ್ಮ ನೇತಾಡುವ ಮುದುಕ ಮುದುಕಿಯರು ಕೂಲಿ ಮಾಡುವ ಕ್ರೂರ ಸ್ಥಿತಿ ಅವರಿಗೆ ಗೊತ್ತಿಲ್ಲ ಅಥವಾ ಅದನ್ನವರು ಮುಚ್ಚಿಡುತ್ತಿದ್ದಾರೆ. ಅನೇಕ ಕಡೆ ಬಿ.ಎ., ಎಂ.ಎ. ಮಾಡಿಕೊಂಡ ನಿರುದ್ಯೋಗಿ ದಲಿತರು, **ಇವರಿಗಿಂತ ಕಡಿಮೆ ಶಿಕ್ಷಣ ಮಾಡಿರುವ** ಭೂಮಾಲಿಕರ ಜಮೀನಿನಲ್ಲಿ ಕೂಲಿ ಮಾಡುತ್ತಿದ್ದಾರೆ. ಇವತ್ತಿನ ಮಕ್ಕಳು ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿತರೆ ಮುಂದೆ ಇವರು ಅದೇ ಕೂಲಿಯನ್ನು ಮುಂದುವರಿಸಬೇಕಾಗುತ್ತದೆ. ದಲಿತರು ಇಂಗ್ಲಿಷ್ ಕಲಿತರೆ, ಬೌದ್ಧಧರ್ಮಕ್ಕೆ ಪರಿವರ್ತನೆಯಾದರೆ ಸಾಮ್ರಾಜ್ಯಶಾಹಿ ಮತ್ತು ಊಳಿಗಮಾನ್ಯಶಾಹಿ ಶೋಷಣೆಗಳಿಂದ ಬಿಡುಗಡೆಯಾಗುವುದಿಲ್ಲ.

ದಲಿತರಿಗೆ ಹುಸಿ ಪರಿಹಾರ ಸೂಚಿಸುತ್ತಿರುವುದು ಕೂಲಿ, ಜೀತ ಮಾಡುವ ನಿಜ ದಲಿತರಿಗೆ ಮಹಾನ್ ಕಂಟಕವಾಗಿದೆ. ಇದು ದಲಿತ ಸಮಸ್ಯೆಯ ಹೊಸ ವಿಕೃತ ಆಯಾಮವಾಗಿದೆ. ಭೂಮಾಲಿಕ ಶೋಷಣೆಯನ್ನು ಮುಚ್ಚಿಟ್ಟು – ಬ್ರಾಹ್ಮಣಶಾಹಿ ಶೋಷಣೆ ಎಂದು ಹೇಳುವುದು, ವರ್ತಮಾನದ ಸಂಕಟಗಳನ್ನು ಮುಚ್ಚಿಟ್ಟು – ಹುಸಿ ಭವಿಷ್ಯವನ್ನು (ಇಂಗ್ಲಿಷ್ ಕಲಿಕೆ) ತೋರಿಸುವುದು, ಸಾಮ್ರಾಜ್ಯಶಾಹಿ ಶೋಷಣೆಯನ್ನು ಮುಚ್ಚಿಟ್ಟು – ದಲಿತರು ಆಧುನಿಕರಾಗಿರಿ ಎಂದು ಭ್ರಮೆ ಹುಟ್ಟಿಸುವುದು, ಆರ್ಥಿಕ ಸಮಸ್ಯೆಯನ್ನು ಮುಚ್ಚಿಟ್ಟು – ಧಾರ್ಮಿಕ ಪರಿಹಾರ ಸೂಚಿಸುವುದು (ಬೌದ್ಧಧರ್ಮಕ್ಕೆ ಪರಿವರ್ತನೆ), ದಲಿತರು ವಿಶಾಲ ಶೋಷಿತರೊಂದಿಗೆ ಸೇರದಂತೆ, ವ್ಯವಸ್ಥೆಯ ಸಮಗ್ರ ಬದಲಾವಣೆಗೆ ಆಲೋಚಿಸದಂತೆ ಮಾಡುವುದು – ಇವಿಷ್ಟು ವಿಕೃತ ಆಯಾಮದ ಸ್ವರೂಪ. ದಲಿತರಿಗೆ ಈಗ ಸೂಚಿಸುತ್ತಿರುವ ಹುಸಿ ಪರಿಹಾರಗಳು ಅವರನ್ನು ದಿಕ್ಕು ತಪ್ಪಿಸುತ್ತಿವೆ ಮತ್ತು ಅವು ಹೊಸ ಶೋಷಣೆಯ ಭಾಗವಾಗಿವೆ. ಆದರಿಂದ ದಲಿತರು ನಗರದ ಕೊಳೆಗೇರಿ ಮತ್ತು ಹಳ್ಳಿಯ ಹೊಲಗೇರಿಗಳಿಂದ ಜಾಗತೀಕರಣ ವಿರೋಧಿ ಭೂಹೋರಾಟಕ್ಕೆ ಮುಂದಾಗಬೇಕಾಗಿದೆ.

ಡಾ|| ಬಿ. ಎಂ. ಪುಟ್ಟಯ್ಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ



# ದ್ರೌಪದಿಯ ಕಿಡಿನುಡಿ

■ ಭಾರತಿ ಕಾಸರಗೋಡು

ಅಶ್ವಮೇಧಯಾಗ ಆಗಷ್ಟೇ ಮುಗಿದಿತ್ತು. ಆ ವೈಭವ ವರ್ಣನಾತೀತ. ದಾನ-ಧರ್ಮಗಳಿಗೆ, ಔತಣ-ಉಪಚಾರಗಳಿಗೆ ಹೋಲಿಕೆ ಇರಲಿಲ್ಲ. ಎಲ್ಲೆಲ್ಲೂ ಅನ್ನದ ಬೆಟ್ಟ, ತುಪ್ಪದ ಮಡು, ಪಾಯಸದ ನದಿ, ರತ್ನಾಭರಣ ರಾಶಿ, ಪೀತಾಂಬರ ಪರ್ವತ, ಮಲ್ಲಿಗೆ-ಜಾಜಿ-ಸೇವಂತಿಗಳ ಹೊಸ ಹೂ ದಿಬ್ಬ !

ಧರ್ಮರಾಜನಿಗಂತೂ ತುಂಬ ಸಂತೋಷವಾಗಿತ್ತು. ಒಂದು ದಿನ ಆತ ಉತ್ಸವದ ಸಡಗರಗಳನ್ನೆಲ್ಲ ಮನೆಯವರೊಂದಿಗೆ ಮುಕ್ತವಾಗಿ ಹಂಚಿಕೊಳ್ಳುತ್ತಾ ಸಂತೋಷವಾಗಿ ಕುಳಿತುಕೊಂಡಿದ್ದ. ಆಗ ಒಂದು ವಿಚಿತ್ರ ವೇಷದ ಮುಂಗುಸಿ ಅಲ್ಲಿ ಧುತ್ತನೆ ಪ್ರತ್ಯಕ್ಷವಾಯಿತು. ಸ್ವಾರಸ್ಯದ ಮಾತೆಂದರೆ ಅದು ಮನುಷ್ಯರಂತೆ ಮಾತಾಡುತ್ತಿತ್ತು. ಪ್ರಾಜ್ಞರಂತೆ ಕಣ್ಣು ಹೊರಳಿಸುತ್ತಿತ್ತು. ಅದರ ಶರೀರ ಸ್ವರೂಪ ಕೂಡ ಅಷ್ಟೇ ವಿಚಿತ್ರವಾಗಿತ್ತು. ದೇಹದ ಒಂದು ಪಕ್ಕ ಅಪ್ಪಟ ಬಂಗಾರವಾಗಿ – ಚಂದ್ರ ಕಿರಣ ತಾಗಿದ ಹೊನ್ನ ಸರೋವರದಂತೆ – ಥಳಥಳನೆ ಹೊಳೆಯುತ್ತಿದ್ದರೆ, ಉಳಿದರ್ಧ ಭಾಗ ಒಣಗಿ ಬಿರುಕುಬಿಟ್ಟ ಬರಗಾಲದ ಕೆರೆಯನ್ನು ನೆನಪಿಗೆ ತರುತ್ತಿತ್ತು. ಇನ್ನದರ ಧ್ವನಿಯೋ !... ಮುಂಗಾರಿನ ಸಿಡಿಲು !

''ಅಯ್ಯಾ ಪಾಂಡವರಿರಾ ! ಮಹಾಯಾಗವನ್ನು ನಡೆಸಿಬಿಟ್ಟೆವೆಂದು ಬಲು ಬೀಗುತ್ತಾ ಇದ್ದೀರಲ್ಲ, ಕಟ್ಟಿ ಬಿಸುಡಿ ನಿಮ್ಮ ಹೆಮ್ಮೆಯನ್ನು! ನಿಮ್ಮ ಈ ಯಾಗ ಹಿಂದೆ ಒಬ್ಬ ಬಡಬ್ರಾಹ್ಮಣ ಮಾಡಿದ ಸೇರು ಗೋಧಿಹಿಟ್ಟಿನ ದಾನಕ್ಕೆ ಸಮನಲ್ಲ'' ಅಬ್ಬರಿಸಿತು ಆ ವಿಚಿತ್ರ ಮುಂಗುಸಿ.

ಮುಂಗುಸಿಯನ್ನು ಚಚ್ಚಿಹಾಕಲು ಅವುಡುಗಚ್ಚುತ್ತಾ ಮೇಲೆದ್ದ ಭೀಮ. ಅವನನ್ನು ಬೆರಳ ಸನ್ನೆಯಿಂದ ನಿವಾರಿಸಿ ಯುಧಿಷ್ಠಿರ, ''ಎಲೆ ಪುಟ್ಟ ಪ್ರಾಣಿಯೇ, ಯಾರು ಆ ಬ್ರಾಹ್ಮಣ ? ಏನಾತನ ವೃತ್ತಾಂತ ? ದಯವಿಟ್ಟು ವಿವರವಾಗಿ ಹೇಳು'' ಎಂದು ಪ್ರಾರ್ಥಿಸಿಕೊಂಡ. ಧರ್ಮರಾಜನ ವಿನಯಕ್ಕೆ ಮುಂಗುಸಿ ಶಾಂತವಾಯಿತು. ''ಸರಿ, ಕೇಳಿ !'' ಎಂದು ಆ ಕತೆಯನ್ನು ಸಂಕ್ಷಿಪ್ತವಾಗಿ ವಿವರಿಸಿತು.

''ಹಿಂದೆ ಕುರುಕ್ಷೇತ್ರದಲ್ಲಿ ಕಾಳುಕಡ್ಡಿ ಆರಿಸಿಕೊಂಡು ಬದುಕುತ್ತಿದ್ದ ಒಬ್ಬ ಬ್ರಾಹ್ಮಣ ಇದ್ದ. ಅವನಿಗೆ ಹೆಂಡತಿ, ಮಗ-ಸೊಸೆ ಇದ್ದರು. ಅವರೆಲ್ಲ ತುಂಬ ಕಷ್ಟದಲ್ಲೇ ಬದುಕುತ್ತಿರುವಾಗ ಭೀಕರ ಬರಗಾಲ ಬೇರೆ ಬಂತು. ಒಂದು ದಿನ ಬ್ರಾಹ್ಮಣನಿಗೆ ಕಾಳೇ ಸಿಗಲಿಲ್ಲ. ಇಡೀ ದಿನ ಅವನ ಸಂಸಾರಕ್ಕೆ ಉಪವಾಸವೇ ಗತಿಯಾಯಿತು. ಮಾರನೇ ದಿನ ಆ ಬ್ರಾಹ್ಮಣ ಮಧ್ಯಾಹ್ನದ ಹೊತ್ತಿಗೆ ಅಲೆದಲೆದು ದಣಿದು, ಹೇಗೋ ಒಂದು ಸೇರಿನಷ್ಟು ಜವೆಗೋಧಿಯನ್ನು ಆರಿಸಿ ತಂದ. ಅದನ್ನು ಹಿಟ್ಟುಮಾಡಿ ದೇವರಿಗೆ ನೈವೇದ್ಯ ಮಾಡಿ ಎಲ್ಲರೂ ಹಂಚಿಕೊಂಡು ಊಟಕ್ಕೆ ಕುಳಿತರು. ಅಷ್ಟುಹೊತ್ತಿಗೆ ಸರಿಯಾಗಿ ಹಸಿದಿದ್ದ ಒಬ್ಬ ಅತಿಥಿ ಅವರ ಮನೆಗೆ ಬಂದ. ಅವನನ್ನು ಉಪಚರಿಸಿ ಕೂರಿಸಿ ಬ್ರಾಹ್ಮಣ ತನ್ನ ಪಾಲಿನ ಹಿಟ್ಟನ್ನು ಆತನಿಗೆ ಬಡಿಸಿದ. ತುಂಬ ಹಸಿದಿದ್ದರಿಂದ ಅಷ್ಟರಿಂದ ಅತಿಥಿಯ ಹೊಟ್ಟೆ ತುಂಬಲಿಲ್ಲ. ಹೆಂಡತಿಯ ಪಾಲನ್ನು ಬಡಿಸಿದ. ಅದು ಕೂಡ ಆತನ ಹಸಿವನ್ನು ತಣಿಸಲಿಲ್ಲ. ಆಮೇಲೆ ಮಗನ ಪಾಲನ್ನು ಸೊಸೆಯ ಪಾಲನ್ನು ಬಡಿಸಿದ. ಆಗ ಆತನಿಗೆ ತೃಪ್ತಿಯಾಯಿತು. ಬ್ರಾಹ್ಮಣನ ಕುಟುಂಬದವರಿಗೆಲ್ಲ ತುಂಬ ಸಂತೋಷವೂ ಆಯಿತು. ಅತಿಥಿ ನಗುನಗುತ್ತ, 'ಅಯ್ಯಾ ಬ್ರಾಹ್ಮಣ, ಈಗ ನಿನ್ನ ದಾನ ತುಂಬ ಪರಿಶುದ್ಧವಾದದ್ದು. ಸಾಮಾನ್ಯವಾಗಿ ಹಸಿವಿನಿಂದ ಬುದ್ಧಿ ಕೆಡುತ್ತದೆ. ಧರ್ಮಪ್ರಜ್ಞೆ ಲೋಪವಾಗುತ್ತದೆ. ನಿನಗೆ ಅದ್ಯಾವುದೂ ಆಗಲಿಲ್ಲ. ದಾನದಲ್ಲಿ ಸಂಖ್ಯೆ ಮುಖ್ಯವಲ್ಲ;

''ನಿನ್ನಿಂದ ಅಧರ್ಮ ನಡೆದಿದೆ ಯುಧಿಷ್ಠಿರ !'' ದ್ರೌಪದಿ ಸ್ಪಷ್ಟವಾಗಿ ಹೇಳಿದಳು. ''ಮೊದಲನೆಯದು, ಅರ್ಜುನ ಮತ್ಸ್ಯ ಯಂತ್ರವನ್ನು ಭೇದಿಸಿ ನನ್ನ ವರಿಸಿ ತಂದ ಸಂದರ್ಭ. ಹೊಸ ಕನಸುಗಳೊಡನೆ ಕಾಲಿಟ್ಟ ನನ್ನನ್ನು ಮನೆಬಾಗಿಲಲ್ಲಿ ನಿಲ್ಲಿಸಿ ಫಲ್ಗುಣ ಏನಂದ ? 'ಅಮ್ಮಾ, ಇಗೋ ಭಿಕ್ಷೆ ತಂದಿದ್ದೇನೆ' ಅಂದ ! ಆಕೆಗೋ ಪ್ರತಿದಿನ ಐದು ದೊಡ್ಡ ಹೊಟ್ಟೆಗಳನ್ನು ಪೋಷಿಸಿ ಸಾಕಾಗಿದ್ದಿರಬೇಕು. ತಂಪುನೆಲಕ್ಕೆ ತಲೆಕೊಟ್ಟು ಮಲಗಿದ್ದಾಕೆ ಮೇಲೇಳಲಾಗದೆ ಅಲ್ಲಿಂದಲೇ, ''ಸರಿ. ಐದು ಜನರೂ ಸಮವಾಗಿ ಹಂಚಿಕೊಳ್ಳಿ'' ಅಂದುಬಿಟ್ಟಳು. ಅರ್ಜುನನ ಅಸ್ಥಾನ ಹಾಸ್ಯಪ್ರಜ್ಞೆಯಿಂದ ಉಂಟಾದ ಪ್ರಮಾದ ಇದು. ಹೊಸ ಮದುಮಗಳನ್ನು ಭಿಕ್ಷೆ ಅಂದುಬಿಟ್ಟ! ಈ ಕಲ್ಪನೆಯೇ ಎಷ್ಟು ಅನಾಗರಿಕವಾದದ್ದು!



ಶ್ರದ್ಧೆ ಮುಖ್ಯ. ನಿನ್ನ ಔದಾರ್ಯದಿಂದ ನೀನು ಬ್ರಹ್ಮಲೋಕವನ್ನೇ ಪಡೆದಿದ್ದೀಯೆ. ಇಗೋ, ವಿಮಾನ ಬಂದಿದೆ. ಎಲ್ಲರೂ ಹೊರಡಿ. ನಾನು ಧರ್ಮ' ಎಂದು ಅವರನ್ನು ಆಶೀರ್ವದಿಸಿದ. ಅವರೆಲ್ಲ ಹೊರಟುಹೋದ ಮೇಲೆ ನಾನು ಅಲ್ಲಿ ಬಿದ್ದಿದ್ದ ಹಿಟ್ಟಿನ ಕಣಗಳ ಮೇಲೆ ಹೊರಳಾಡಿದೆ. ಅರ್ಧದೇಹ ಮಾತ್ರ ಚಿನ್ನವಾಯಿತು. ಉಳಿದರ್ಧವನ್ನು ಚಿನ್ನ ಮಾಡಿಕೊಳ್ಳಬೇಕೆಂದು ಎಷ್ಟೋ ಯಜ್ಞಗಳಿಗೆ ಹೋಗುತ್ತಲೇ ಇದ್ದೇನೆ. ನನ್ನ ಶರೀರವಂತು ಪೂರ್ತಿ ಬಂಗಾರ ಆಗಲಿಲ್ಲ. ಧರ್ಮನೆಂದೇ ಹೆಸರಾದ ಯುಧಿಷ್ಠಿರ ಅಶ್ವಮೇಧಯಾಗ ಮಾಡುತ್ತಾನೆಂದು ಕೇಳಿ ಇಲ್ಲಿ ಬಂದೆ. ಇಲ್ಲಿಯೂ ನನಗೆ ಘೋರ ನಿರಾಶೆಯೇ ಉಂಟಾಗಿದೆ. ನಾನಿನ್ನು ಹೊರಟೆ'' ಮುಂಗುಸಿ ಹೊರಡಲು ಸಿದ್ಧವಾಯಿತು.

ಭೀಮಸೇನ ಅದನ್ನು ತಡೆದ. ''ಎಲೆ ಅಲ್ಪಪ್ರಾಣಿ, ಸ್ವಲ್ಪ ತಾಳು. ಮಹಾವೀರರಾದ ಪಾಂಡವರನ್ನು ಅಷ್ಟೊಂದು ಕೀಳು ಮಾಡಬೇಡ. ಬಾ ಇಲ್ಲಿ, ನನ್ನ ಒನಕೆಯಂತಹ ಈ ತೋಳುಗಳನ್ನು ಒಂದು ಸಾರಿ ಮುಟ್ಟು. ದುಶ್ಶಾಸನನನ್ನು ಮಟ್ಟ ಹಾಕಿದ ತೋಳುಗಳು ಇವು! ದ್ರೌಪದಿಯ ಸಿರಿಮುಡಿಯನ್ನು ಆ ದುಷ್ಟ ರಕ್ತದಿಂದ ಅಲಂಕರಿಸಿದ ತೋಳುಗಳಿವು. ಇವುಗಳ ಸ್ಪರ್ಶದಿಂದ ನಿನ್ನ ಮೈ ಚಿನ್ನವಾಗಲೇಬೇಕು... ಬಾ!'' ಎಂದು ಗರ್ಜಿಸಿದ. ಮುಂಗುಸಿ ಒಂದಿಷ್ಟೂ ಅಳುಕಲಿಲ್ಲ ''ಇಲ್ಲಪ್ಪ! ನಾನು ನಿನ್ನನ್ನು ಮುಟ್ಟಿಕೊಳ್ಳುವುದಿಲ್ಲ'' ಎದೆ ಸೆಟೆಸಿ ಹೇಳಿತು – ...'ದುಶ್ಶಾಸನನ ರಕ್ತವನ್ನು ಮೊಗೆದೆ' ಎಂದು ಕೊಚ್ಚಿಕೊಳ್ಳುತ್ತೀಯಲ್ಲ, ಆ ಕಾರಣಕ್ಕಾಗೇ ನಿನ್ನನ್ನು ಕಂಡರೆ ನನಗೆ ಅಸಹ್ಯ! ಮನುಷ್ಯತ್ವ ಇರುವವನಿಗೆ ಶತ್ರು ಸತ್ತಮೇಲೆ ಆತನಲ್ಲಿ ಹಗೆ ಇರುವುದಿಲ್ಲ. ನೀನು ಹಾಗಲ್ಲ. ದುಶ್ಶಾಸನನ ಹೆಣದ ಮೇಲೂ ರಾಕ್ಷಸನಂತೆ ವಿಜೃಂಭಿಸಿದೆ. ಅವನ ಬಿಸಿರಕ್ತವನ್ನು ಏನೆಂದು ಚಪ್ಪರಿಸಿದೆ ನೀನು? 'ಹಾಲು ಮೊಸರು ಕಬ್ಬಿನ ಹಾಲು ಜೇನುತುಪ್ಪ ತಾಯಿಯ ಮೊಲೆಹಾಲು ಇವೆಲ್ಲಕ್ಕಿಂತಲೂ ರುಚಿಯಾಗಿದೆ ಈ ದುಷ್ಟನ ರಕ್ತ!' ಎಂದೆಲ್ಲ ಅಮಾನುಷವಾಗಿ ವಿಲಪಿಸಿದೆಯಲ್ಲ! ನೀನು ಮನುಷ್ಯನಲ್ಲ: ಗರ್ವದೊಂದು ಮಹಾಮುದ್ದೆ. ದುಶ್ಶಾಸನನ ರಕ್ತದಿಂದ ಬೇರೆ ನಿನ್ನ ಮೈ ಕಲುಷಿತವಾಗಿದೆ. ಆದ್ದರಿಂದ ನೀನು ನನಗೆ ಅಸ್ಪೃಶ್ಯ'' ಅಂದುಬಿಟ್ಟಿತು. ಉತ್ತರಿಸಲು ಭೀಮನಿಗೆ ಮಾತೇ ಇರಲಿಲ್ಲ.

ಇದೀಗ ಅರ್ಜುನ ಮುಂಗುಸಿಯ ಬಳಿ ಬಂದ. ''ಮುದ್ದು ಮುಂಗುಸಿ, ನನ್ನನ್ನು ಬೇಡ: ನನ್ನ ಈ ಗಾಂಡೀವವನ್ನಾದರೂ ಸ್ಪರ್ಶಿಸು. ತ್ರೈಲೋಕ್ಯ ಚೂಡಾಮಣಿಗಳನ್ನು ಮಣಿಸಿದ ಧನುಸ್ಸು ಇದು. ಇದರ ಪವಿತ್ರಸ್ಪರ್ಶದಿಂದಲಾದರೂ ನಿನ್ನ ಮೈ ಹೊನ್ನಾಗಿ ಮಿರುಗಬಹುದು.'' ವಿನಯವಾಗಿ ಬಿನ್ನವಿಸಿಕೊಂಡ. ಮುಂಗುಸಿ ನಿರ್ಲಿಪ್ತ ಭಾವದಿಂದ ಮೆಲ್ಲಗೆ ಹೇಳಿತು: ''ಇಂದ್ರಪುತ್ರ, ನನಗೆ ನೀನಾದರೂ ಅಷ್ಟೇ... ನಿನ್ನ ದೇಹದ್ದೇ ಭಾಗದಂತಿರುವ ಈ ನಿನ್ನ ಬಿಲ್ಲಾದರೂ ಅಷ್ಟೇ. ಬೃಹನ್ನಳೆಯಾಗಿ ಕೆಲಕಾಲ ಪೌರುಷವನ್ನೇ ಮರೆತವನು ನೀನು. ಚಿತ್ರಾಂಗದೆಯನ್ನೂ ಅವಳಂಥ ಎಷ್ಟೋ ಮುಗ್ಧೆಯರನ್ನೂ ಅವಮಾನಿಸಿದವನು ನೀನು. ನಿನ್ನ ರೋಮ-ರೋಮದಲ್ಲೂ ಪಾಪದ ಕಣಗಳು ತುಂಬಿಹೋಗಿವೆ. ನಿಮ್ಮಂಥವರನ್ನು ಮುಟ್ಟುವುದರಿಂದ ನನ್ನ ಮೈ ಚಿನ್ನವಾಗುವುದು ಹಾಗಿರಲಿ, ನಾನು ಪೂರ್ತಿಯಾಗಿ ಮಣ್ಣಿನ ಗೊಂಬೆಯೇ ಆಗಿಹೋದೇನು. ನಿಮ್ಮಗಳ ಸಹವಾಸವೇ ಬೇಡಪ್ಪ'' ಎಂದು ಮತ್ತಲ್ಲಿ ನಿಲ್ಲದೆ ಓಡಿಹೋಯಿತು.

ಯುಧಿಷ್ಠಿರ ತನ್ನ ಎಂದಿನ ಅಮಾಯಕ ಭಂಗಿಯಲ್ಲಿ ಅಸಹಾಯಕನಾಗಿ ಕುಳಿತುಬಿಟ್ಟ. ಯಾಗ ಮಾಡಿದ ಹೆಮ್ಮೆಯೆಲ್ಲ ಒಂದೇ ಸಾರಿಗೆ ಹಾರಿಹೋಯಿತು. ''ಏನಿದು ಚೋದ್ಯ? ವೇದವ್ಯಾಸರ ದಕ್ಷ ಮಾರ್ಗದರ್ಶನದಲ್ಲಿ ನಡೆದ ಯಾಗ ಇದು. ಲೋಪ ಅನ್ನುವುದು ನುಳಿಯುವುದಾದರೂ ಹೇಗೆ?'' ತಲೆಮೇಲೆ ಕೈಹೊತ್ತು ಹಲುಬತೊಡಗಿದ.

ನಡೆಯುತ್ತಿದ್ದ ವಿದ್ಯಮಾನಗಳನ್ನೆಲ್ಲ ಅರಳುಗಣ್ಣಳಿಂದ ವೀಕ್ಷಿಸುತ್ತಿದ್ದ ದ್ರೌಪದಿ ಗಂಡನ ಬಳಿ ಬಂದು ಮೆಲ್ಲಗೆ ಅಂದಳು – ''ನಾನು ಹೇಳುತ್ತೇನೆ ಯುಧಿಷ್ಠಿರ. ಆ ಸಮಾಚಾರ ನನಗೆ ಗೊತ್ತು.'' ಬೆಚ್ಚಿಬಿದ್ದ ಧರ್ಮನಂದನ...! ''ಏನಂದೆ ಮಂಗಳೆ? ನೀನು ಹೇಳಬಲ್ಲೆಯಾ?'' ಗಲಿಬಿಲಿಯಿಂದ ಕೇಳಿದ.

''ಖಚಿತವಾಗಿ ಹೇಳಬಲ್ಲೆ.'' ದ್ರೌಪದಿಯ ದನಿಯಲ್ಲಿ ದೃಢತೆ ಇತ್ತು. ''ಕಿವಿಗೊಟ್ಟು ಕೇಳು ಮಹಾರಾಜ! ಯಾಗಫಲ ದೊರೆಯುವುದು ಅದನ್ನು ನಡೆಸುವವನ ಪುಣ್ಯ ಸಂಸ್ಕಾರದಿಂದ. ಆದರೆ ಈ ಸಂದರ್ಭದಲ್ಲಿ ಯಾಗದ ಯಜಮಾನನಾದ ನಿನ್ನಿಂದಲೇ ಧರ್ಮಲೋಪ ಉಂಟಾಗಿದೆ. ಮೊದಲಿಗೆ ನಿನ್ನ ವ್ಯಕ್ತಿತ್ವದಲ್ಲೇ ಧರ್ಮ ಮುರಿದು ಬಿದ್ದಿರುವುದರಿಂದ ನೀನು ನಡೆಸಿದ ಯಾಗ ಪರಿಪೂರ್ಣವಲ್ಲ. ನೀತಿಯ ಮಾತಂತು ದೂರವೇ ಉಳಿಯಿತು. ಮುಂಗುಸಿಯ ಮಾತು ಸರಿ.''

ದ್ರೌಪದಿಯ ಕಡ್ಡಿ ಮುರಿದಂತಹ ಮಾತುಗಳನ್ನು ಕೇಳಿ ಅರ್ಜುನನಿಗೆ ಸಿಟ್ಟು ಬಂತು. ''ಏನು ಮಾತಿದು ದ್ರೌಪದಿ? ನಮ್ಮ ಧರ್ಮಣ್ಣನಲ್ಲಿ ಧರ್ಮಲೋಪವಾಗುವುದೇ? ಅಸಂಭವ! ಧರ್ಮಪುತ್ರ ಅವನು: ಧರ್ಮವನ್ನೇ ಉಸಿರಾಡಿದವನು. ಈ ಮಾತನ್ನು ಲೋಕವೇ ಹೇಳುತ್ತದೆ. ಅಂಥದ್ದರಲ್ಲಿ ನೀನು ವಿಚಿತ್ರವಾಗಿ ಮಾತನಾಡುತ್ತಿದ್ದೀಯಲ್ಲ?'' ಅಂದ.

''ಅರ್ಜುನ, ಕೇಳಿಲ್ಲಿ: ಧರ್ಮಿಷ್ಠನಾದವನು ಲೋಕ ತನ್ನಲ್ಲಿಟ್ಟ ಗೌರವವನ್ನು ಎಂದೂ ದುರುಪಯೋಗ ಮಾಡಿಕೊಳ್ಳುವುದಿಲ್ಲ. ಆದರೆ ನಿನ್ನ ಅಣ್ಣ ಒಂದಲ್ಲ ಎರಡು ಬಾರಿ ಘೋರವಾಗಿ ಧರ್ಮಲೋಪ ಮಾಡಿದ್ದಾನೆ. ಇದು ಧರ್ಮವಂಚನೆ ಮಾತ್ರವಲ್ಲ: ಆತ್ಮವಂಚನೆಯೂ ಹೌದು.'' ಅರ್ಜುನನಿಗೆ ಸಮಾಧಾನದಿಂದಲೇ ಉತ್ತರಿಸಿದಳು ದ್ರೌಪದಿ.

ಈಗ ಅಚ್ಚರಿಗೊಳ್ಳುವ ಸರದಿ ಭೀಮಸೇನನದು. ಉದ್ರಿಕ್ತ ಮುಖಕ್ಕೆ ಶಲ್ಯದಿಂದ ಗಾಳಿ ಹಾಕಿಕೊಳ್ಳುತ್ತಾ ಅವ ಉದ್ಗರಿಸಿದ – ''ಎಚ್ಚರ ಇರಲಿ ದ್ರೌಪದಿ! ನ್ಯಾಯಮೂರ್ತಿಯ ಮೇಲೆ ಅನ್ಯಾಯದ ಆರೋಪ ಹೊರಿಸುತ್ತಿದ್ದೀಯೆ. ಇದು ಪರಮಾಶ್ಚರ್ಯ! ನೀನು ಹೇಳುವಂಥ ಅಕೃತ್ಯ ನಿಜವಾಗಿ ನಡೆದಿದೆಯೇ?''

ಆ ಘಟನೆಯ ನೆನಪಿಂದಲೇ ನೊಂದಳೋ ಎಂಬಂತೆ ತುಟಿಕಚ್ಚಿ ಕಣ್ಮುಚ್ಚಿ ಸುಮ್ಮನೆ ನಿಂತುಬಿಟ್ಟಳು ಕೃಷ್ಣೆ. ಕ್ಷಣಕಾಲದ ನೀರವತೆಯ ನಂತರ ಧರ್ಮರಾಯ ಅವಳನ್ನು ಉದ್ದೇಶಿಸಿ, ''ದ್ರೌಪದೀ, ನೀನು ಕೋಪಿಷ್ಠೆ: ಆದರೆ ಸುಳ್ಳಾಡುವವಳಲ್ಲ. ನಿನ್ನ ಆಲೋಚನೆಗಳಲ್ಲಿ ನನಗೆ ಭರವಸೆ ಇದೆ. ಆದರೆ, ನನ್ನಿಂದ ಧರ್ಮಲೋಪ ವುಂಟಾಗಿದೆ ಅನ್ನುತ್ತೀಯಲ್ಲ, ಅದೂ ಎರಡು ಬಾರಿ? ಕುತೂಹಲದಿಂದ ಕೇಳುತ್ತೇನೆ: ಹೇಳು ಕೃಷ್ಣೆ, ಯಾವಾಗ ನನ್ನಿಂದ ಈ ರೀತಿಯ ಅನೀತಿ ನಡೆದಿದೆ?'' ಎಂದು ಅನುನಯದಿಂದ ಪ್ರಶ್ನಿಸಿದ.

''ನಿನ್ನಿಂದ ಅಧರ್ಮ ನಡೆದಿದೆ ಯುಧಿಷ್ಠಿರ!'' ದ್ರೌಪದಿ ಸ್ಪಷ್ಟವಾಗಿ ಹೇಳಿದಳು, ''ಮೊದಲನೆಯದು, ಅರ್ಜುನ ಮತ್ಸ್ಯಯಂತ್ರವನ್ನು ಭೇದಿಸಿ ನನ್ನ ವರಿಸಿ ತಂದ ಸಂದರ್ಭ. ಹೊಸ ಕನಸುಗಳೊಡನೆ ಕಾಲಿಟ್ಟ ನನ್ನನ್ನು ಮನೆಬಾಗಿಲಲ್ಲಿ ನಿಲ್ಲಿಸಿ ಫಲ್ಗುಣ ಏನಂದ? 'ಅಮ್ಮಾ, ಇಗೋ ಭಿಕ್ಷೆ ತಂದಿದ್ದೇನೆ' ಅಂದ! ಆಕೆಗೋ ಪ್ರತಿದಿನ ಐದು ದೊಡ್ಡ ಹೊಟ್ಟೆಗಳನ್ನು ಪೋಷಿಸಿ ಸಾಕಾಗಿದ್ದಿರಬೇಕು. ತಂಪುನೆಲಕ್ಕೆ ತಲೆಕೊಟ್ಟು ಮಲಗಿದ್ದಾಕೆ ಮೇಲೇಳಲಾಗದೆ ಅಲ್ಲಿಂದಲೇ, ''ಸರಿ. ಐದು ಜನರೂ ಸಮವಾಗಿ



ಹಂಚಿಕೊಳ್ಳಿ'' ಅಂದುಬಿಟ್ಟಳು. ಅರ್ಜುನನ ಅಸ್ಥಾನ ಹಾಸ್ಯಪ್ರಜ್ಞೆಯಿಂದ ಉಂಟಾದ ಪ್ರಮಾದ ಇದು. ಹೊಸ ಮದುಮಗಳನ್ನು ಭಿಕ್ಷೆ ಅಂದುಬಿಟ್ಟ! ಈ ಕಲ್ಪನೆಯೇ ಎಷ್ಟು ಅನಾಗರಿಕವಾದದ್ದು! ಅವನೇನೋ ವಿದೂಷಕನಂತೆ ನನ್ನನ್ನು ಭಿಕ್ಷೆ ಎಂದು ಕರೆದುಬಿಟ್ಟ. ಆದರೆ ಅವನು ಹೇಳಿದ್ದು ನನ್ನನ್ನು ಕುರಿತು ಎಂದು ತಿಳಿದಾಗ ಕುಂತಿಮಾತೆ ಕಂಗೆಟ್ಟಳು. ಧರ್ಮದ ಪ್ರತಿರೂಪ ಎಂದು ಭಾವಿಸಲಾದ ನಿನ್ನನ್ನು ತುರ್ತುಸಲಹೆ ಕೇಳಿದಳು. ಬಹುಶಃ ನೀನು ನನ್ನ ಸೌಂದರ್ಯದಿಂದ ಮಂಕಾಗಿದ್ದೆ. ಅರ್ಜುನನಿಗಿಂತ ಹೆಚ್ಚಾದ ರತಿಭಾವ ನಿನ್ನಲ್ಲೇ ಸ್ಫುರಿಸಿರಬೇಕು. ಲೋಲುಪನಂತೆ 'ಅಮ್ಮನ ಮಾತನ್ನು ಕಡೆಗಣಿಸಲಾಗದು. ದ್ರೌಪದಿ ನಮ್ಮೆಲ್ಲರಿಗೂ ಹೆಂಡತಿಯಾಗಲಿ' ಅಪ್ಪಣೆ ಕೊಡಿಸಿಬಿಟ್ಟೆ! ನನ್ನ ಮನಸ್ಸಿನ ಮಾತುಗಳನ್ನಾಗಲೀ, ಐದೈದು ಯುದ್ಧವೀರರನ್ನು ಕಟ್ಟಿಕೊಂಡು ಏಗುವ ಕಷ್ಟವನ್ನಾಗಲೀ ನೀನು ಯೋಚಿಸಲೇ ಇಲ್ಲ. ಇದು ನೀನು ಮಾಡಿದ ಮೊದಲ ಅಧರ್ಮ ಕಾರ್ಯ.''

ದ್ರೌಪದಿ ಆಯಾಸದಿಂದ ಸ್ವಲ್ಪ ಹೊತ್ತು ಮಾತು ನಿಲ್ಲಿಸಿದಳು. ಮಾತನಾಡಿ ಆಯಾಸಗೊಳ್ಳುವುದೆಂಬುದು ಆಕೆಯ ಸ್ವಭಾವದಲ್ಲೇ ಇಲ್ಲ. ಮನೆಯ ಸಣ್ಣಪುಟ್ಟ ಸಂಗತಿಗಳ ಹಿಂದೆ ಕೂಡ ಆಕೆಯ ಮಹತ್ವಪೂರ್ಣ ಭಾಷಣಗಳೇ ಇರುತ್ತವೆ. ಇಂದಿನ ಆಯಾಸವೂ ದೈಹಿಕವಾದುದೇನಲ್ಲ. ಪಾಂಡವರಿಗುಂಟಾದ ತೇಜೋವಧೆ ಅವಳನ್ನೂ ಬಳಲಿಸಿತ್ತು. ಗಲ್ಲದ ಮೇಲಿನ ಬೆವರ ಬಿಂದುಗಳನ್ನು ಮೆಲ್ಲಗೆ ಸೆರಗಿನಿಂದ ಒತ್ತಿಕೊಳ್ಳುತ್ತ ಸುತ್ತ ಕಣ್ಣಾಡಿಸಿದಳು. ನಕುಲ-ಸಹದೇವರು ಮಡದಿಯ ಮೌನ ಸಂಗಾತಿಗಳೋ ಎಂಬಂತೆ ಇಕ್ಕೆಲಗಳಲ್ಲಿ ಬಿಮ್ಮಗೆ ನಿಂತಿದ್ದರು. ಭೀಮಾರ್ಜುನರ ಗಲ್ಲ-ಮೂಗು ಕೆಂಪೇರಿದ್ದರೂ ಏನೂ ಮಾತನಾಡಲಿಲ್ಲ. ಅವರಿನ್ನೂ ದ್ರೌಪದಿಯ ಮಾತುಗಳನ್ನು ಅರಗಿಸಿಕೊಳ್ಳುವ ಪ್ರಯತ್ನದಲ್ಲೇ ನಿರತರಾದಂತಿತ್ತು. ಇನ್ನು ಧರ್ಮಣ್ಣನ ಮುಖದಲ್ಲಿ ಭಾವನೆಗಳನ್ನು ಕಂಡುಕೊಳ್ಳುವುದೇ ಕಷ್ಟ. ವನವಾಸದಲ್ಲಿ ಅಥವಾ ಅಜ್ಞಾತವಾಸದಲ್ಲಿ, ಸಿಂಹಾಸನದಲ್ಲಿ ಅಥವಾ ಶಯ್ಯಾಗೃಹದಲ್ಲಿ ಅವನದು ಅದೇ ನಿರ್ಭಾವುಕ ನಿಶ್ಚಿಂತ ಮುಖಭಾವ! ಯಾರದೇ ಮುಖದ ಯಾವುದೇ ಭಾವನೆಯನ್ನು ಓದುವುದು ದ್ರೌಪದಿಗೂ ಬೇಕಾಗಿರಲಿಲ್ಲ. ತನ್ನ ಪಾಡಿಗೆ ಮುಂದುವರಿಸಿದಳು –

''ಇನ್ನು ಯುಧಿಷ್ಠಿರ, ನೀನು ಮಾಡಿದ ಎರಡನೇ (ಅಧಮ) ಅಧರ್ಮ ಕಾರ್ಯವನ್ನು ಹೇಳುತ್ತೇನೆ ಕೇಳು : ಅದು, ತುಂಬಿದ ರಾಜಸಭೆಯಲ್ಲಿ ದುಶ್ಶಾಸನ ನನ್ನನ್ನು ಎಳೆದಾಡಿದ ಸಂದರ್ಭ.

''ಪಾಂಡವರ ವೀರ್ಯವನ್ನೇ ಪರಾಭವಗೊಳಿಸುವವನಂತೆ ದುಶ್ಶಾಸನ ನನ್ನ ಬಟ್ಟೆ ಹಿಡಿದು ಎಳೆತಂದು ಸಭೆಯ ಮಧ್ಯದಲ್ಲಿ ಸೆಳೆದಾಡಿಬಿಟ್ಟ. ನೀನು ಸುಮ್ಮನೆ ಕೂತಿದ್ದೆ. ದುರ್ಯೋಧನ ತೊಡೆತಟ್ಟಿ ನನ್ನನ್ನು ಆಹ್ವಾನಿಸಿದ. ಕದಲಲಿಲ್ಲ ನೀನು! 'ಐದು ಜನ ಭೋಗಿಸಿದ ಶರೀರ ಇದು! ಹೇಗಿದೆಯೋ ನೋಡಿಯೇ ಬಿಡೋಣ! ಸೆಳೆ, ಅವಳ ಸೀರೆಯನ್ನು!' ದುರ್ಮಾರ್ಗಿ ಕರ್ಣ ವಿಜೃಂಭಿಸಿದ. ಆಗಲೂ ನಿನ್ನ ಪೌರುಷ ಕೆರಳಲಿಲ್ಲ. ಇತ್ತ ನನ್ನನ್ನು ಬೆತ್ತಲೆಗೊಳಿಸಲು ದುಶ್ಶಾಸನ ಪ್ರಯತ್ನಿಸುತ್ತಲೇ ಇದ್ದ. ಯಾವ ಪುಣ್ಯವೋ, ನನ್ನಣ್ಣ ನೆರವಿಗೆ ಬಂದು ನಾನು ವಿಪತ್ತಿನಿಂದ ಪಾರಾದೆ. ಒಂದು ವೇಳೆ ಕೃಷ್ಣ ಕರುಣೆ ನನಗೆ ಒದಗದೆ ಹೋಗಿದ್ದಿದ್ದರೆ ನನ್ನ ಅವಸ್ಥೆ ಏನಾಗುತ್ತಿತ್ತೊ ಕಲ್ಪಿಸಿಕೋ ಧರ್ಮನಂದನ! ಇವತ್ತು ನಿನ್ನನ್ನು ಕಲ್ಪಿಸಿಕೋ ಅಂದ ಮಾತು ಅಂದು ನಿಜವೇ ಆಗಿಬಿಡುತ್ತಿತ್ತು. ಪಾಂಚಾಲಿಯ ಶೋಚನೀಯ ಪರಿಸ್ಥಿತಿಯನ್ನು ನಿನ್ನ ದುಷ್ಟ ದಾಯಾದಿಗಳು, 'ಪತಿಗಳೈವರಿದ್ದರೇನು ಸತಿಯ ಭಂಗಕೊದಗಲಿಲ್ಲ' ಎಂದು ವಿಕಟಾಟ್ಟಹಾಸ ಮಾಡಿಬಿಡುತ್ತಿದ್ದರು. ಇದಕ್ಕೆಲ್ಲ ಕಾರಣಕರ್ತನಾದ ನೀನು ನಿಜವಾಗಿ ಧರ್ಮನೇ ಎಂಬುದು ನನ್ನ ಸಂಶಯ.''

ಧರ್ಮರಾಯ ತಲೆತಗ್ಗಿಸಿಬಿಟ್ಟ. ಅದನ್ನು ಕಂಡರೂ ಕಾಣದವಳಂತೆ ದ್ರೌಪದಿ ಆವೇಶದಿಂದ ಮಾತನ್ನು ಮುಂದುವರಿಸಿದಳು –

''ಧರ್ಮನೆಂದು ಹೆಸರಿಟ್ಟುಕೊಂಡು ಮೆರೆಯುವ ನೀನು, ದುಶ್ಶಾಸನ ನನಗೆ ಅವಮಾನ ಮಾಡುತ್ತಿದ್ದಾಗ ಮೂಲಧರ್ಮಗಳನ್ನೇ ಪಾಲಿಸಲಿಲ್ಲವಲ್ಲ ಯುಧಿಷ್ಠಿರ! ತನ್ನ ಧರ್ಮಪತ್ನಿಗೆ ಮಾನಭಂಗದಂಥ ವಿಪತ್ತು ಸಂಭವಿಸಿದಾಗ ಅದನ್ನು ತಡೆಯಲು ಗಂಡನಾದವನಿಗೆ ಯಾವುದೇ ಕಾಯಿದೆ, ಯಾವುದೇ ಧರ್ಮಸೂಕ್ಷ್ಮ ಅಡ್ಡ ಬರುವುದಿಲ್ಲ, ಬರಬಾರದು. ಹೆಂಡತಿಯನ್ನು ಅತ್ಯಾಚಾರದಿಂದ ರಕ್ಷಿಸುವುದಕ್ಕಿಂತ ಹೆಚ್ಚಿನ ಧರ್ಮವಾದರೂ ಗಂಡನಿಗೆ ಬೇರೇನಿದೆ? ಆದರೂ ನೀನು ನನ್ನನ್ನು ರಕ್ಷಿಸಲಿಲ್ಲ, ಕನಿಷ್ಠ ಪತಿಧರ್ಮವನ್ನೂ ಪಾಲಿಸಲಿಲ್ಲ! ಇನ್ನೊಂದು ಮಾತು ಹೇಳುತ್ತೇನೆ ಕೇಳು. ಜಗತ್ತಿನಲ್ಲಿ ಎಲ್ಲ ಧರ್ಮಕ್ಕಿಂತ ದೊಡ್ಡದು ಮನುಷ್ಯ ಧರ್ಮ. ಯಾವುದೇ ಮಹಿಳೆಯ ಅಪಮಾನ ಹೀನಾಯವಾಗಿ ನಡೆಯುತ್ತಿರುವಾಗ ಅದನ್ನು ತಡೆದು ಆ ಮಹಿಳೆಯ ರಕ್ಷಣೆ ಮಾಡುವುದು ಮೊತ್ತಮೊದಲು ಮನುಷ್ಯಧರ್ಮ. ಇಂಥದೊಂದು ಮಾನವಧರ್ಮವನ್ನು ಕೂಡ ನೀನು ನನ್ನ ವಿಷಯದಲ್ಲಿ ತೋರಲಿಲ್ಲ. ನೀನೆಂಥ ಧರ್ಮನಯ್ಯಾ? ಪಾಂಡವಪತ್ನಿ, ಧೃಷ್ಟದ್ಯುಮ್ನನ ತಂಗಿ, ವಾಸುದೇವನ ವಿಶ್ವಾಸಿ, ನನ್ನನ್ನು, ಇದೇ ಈ ಭೀಮಸೇನ ಅನೇಕಬಾರಿ 'ಏನಿದ್ದರೇನು? ನೀನೊಂದು ಹೆಂಗಸು!' ಎಂದು ಹೀಯಾಳಿಸಿದ್ದಾನೆ. ಹೆಣ್ಣಾದ ನನಗೆ ಹೊಳೆದ ಈ ಮನುಷ್ಯತ್ವದ ಹೊಳಹುಗಳು ಮೀಸೆ ಹೊತ್ತಣ್ಣಗಳಿಗೇಕೆ ಹೊಳೆಯಲಿಲ್ಲ?

''ಜಗತ್ತಿನ ಇತಿಹಾಸದಲ್ಲೇ ಇನ್ನಿಂಥ ದುಷ್ಟ ಜೂಜುಕೋರನೂ ಕಟ್ಟಿಕೊಂಡ ಹೆಂಡತಿಯನ್ನು ಪಗಡೆಯಲ್ಲಿ ಪಣಕ್ಕಿಟ್ಟ ದುಷ್ಕೃತ್ಯ ನಡೆದಿಲ್ಲ. ನೀನು ಆ ಕೆಲಸ ಮಾಡಿದ್ದೀಯೆ. ಸಮಸ್ತ ಸ್ತ್ರೀ ಸಂಕುಲದ ಆಕ್ರೋಶಕ್ಕೆ ಕಾರಣನಾಗಿದ್ದೀಯೆ. ನೀನು ಧರ್ಮಿಷ್ಠನೇ? ನಿನ್ನಂಥವನು ಮಾಡುವ ಯಾಗ-ಯಜ್ಞಗಳಿಂದ ಪುಣ್ಯಫಲ ದೊರೆಯುವುದುಂಟೇ? ಹೇಳು ಯುಧಿಷ್ಠಿರ! ನನ್ನ ಪ್ರಶ್ನೆಗಳಿಗೆ ಉತ್ತರ ಹೇಳು.''

ಯುಧಿಷ್ಠಿರನಿರಲಿ, ದ್ರೌಪದಿಯ ತರ್ಕಗಳ ವಿರುದ್ಧ ಚಕಾರ ಎತ್ತುವುದು ಕೂಡ ಯಾರೊಬ್ಬರಿಗೂ ಸಾಧ್ಯವಾಗಲಿಲ್ಲ. ಜತೆಗೆ ಆ ತರ್ಕಗಳ ಹಿಂದಿನ ನೋವು ಎಲ್ಲರ ಬಾಯಿಗಳನ್ನು ಕಟ್ಟಿಹಾಕಿತ್ತು. ಹಾಗೆ ನೋಡಿದರೆ ಗಂಡಂದಿರ ಬಾಯಿಮುಚ್ಚಿಸುವ ಆಶಯ ದ್ರೌಪದಿಯದಲ್ಲ. ತನ್ನ ಬಚ್ಚಿಟ್ಟ ಅಳಲುಗಳನ್ನು ಎಂದಾದರೊಮ್ಮೆ ಬಿಚ್ಚಿಕೊಳ್ಳುವ ಹವಣಿಕೆಯಷ್ಟೇ ಅವಳದು. ಇಂದು ಸಂದರ್ಭ ತಾನಾಗಿ ಒದಗಿತ್ತು. ಮಾತನಾಡಿದ್ದಳು. ಹೀಗವಳ ಅಂತರಾಳದಿಂದ ಹೊರಟ ಮಾತಿನ ಸರಣಿ ಒಂದು ಅವಿರೋಧ ಚರ್ಚೆ ಎಂದೇ ಅಲ್ಲಿದ್ದವರಿಗೆ ಭಾಸವಾಗಿ, ವಿಷಾದ ತುಂಬಿದ ನೀರವತೆ ಅಲ್ಲಿ ಆವರಿಸಿಬಿಟ್ಟಿತು. ಆದರೇನು? ಇಡೀ ಘಟನೆಯ ತೀರ್ಮಾನವನ್ನು ಕೊಟ್ಟದ್ದು ಮಾತ್ರ ದ್ರುಪದ ನಂದನೆಯ ಕಣ್ಣಂಚಿನಲ್ಲಿ ಉರುಳಿದ ಪುಟ್ಟದೊಂದು ನೋವಿನ ಬಿಂದು! ತಂಗಿಯ ಆತ್ಮಗೌರವದ ಕಾವಲುಬಂಟನೋ ಎಂಬಂತೆ ಸ್ವಲ್ಪ ದೂರದಲ್ಲೇ ಸದ್ದಿಲ್ಲದೆ ಕೂತು ಆಕೆಯನ್ನು ಕರುಣೆಯಿಂದ ಗಮನಿಸುತ್ತಿದ್ದ ಮಾಧವನ ಕಣ್ಣ ತುದಿಯಲ್ಲೂ ಅಂಥದ್ದೇ ಒಂದು ಸಣ್ಣ ಹನಿ ಮಾರ್ದವವಾಗಿ ತುಳುಕಿತ್ತು.

ಭಾರತೀ ಕಾಸರಗೋಡು
ಮ. ಸಂ. ೭೩೬, ೧೪ನೇ ಅಡ್ಡರಸ್ತೆ, ಭಾರತ್ ನಗರ, ೧ನೇ ಹಂತ
ಬಿ.ಇ.ಎಲ್. ಲೇಔಟ್, ಮಾಗಡಿ ರಸ್ತೆ, ಬೆಂಗಳೂರು - ೫೬೦ ೦೯೧

'ಪುಸ್ತಕ ಪ್ರಕಾಶನ' ಕನ್ನಡ ಪ್ರಕಾಶನ ಕ್ಷೇತ್ರದಲ್ಲಿ ಒಂದು ಅಸದೃಶ ಸಾಹಸ. ವಸ್ತು, ವಿಷಯ, ಪುಸ್ತಕದ ಕಾಗದ, ರಕ್ಷಾಪುಟ ವಿನ್ಯಾಸ, ಶ್ರೇಷ್ಠ ಮುದ್ರಣ, ಓದುಗರಿಗೆ ವಿಚಾರ ತಲುಪಿಸುವ ಗದ್ಯಶೈಲಿ, ಪ್ರತಿಯೊಂದರಲ್ಲೂ ಜಗತ್ತಿನ ಅತ್ಯುತ್ತಮ ಪ್ರಕಾಶನಗಳಿಗೆ ಸರಿಗಟ್ಟುವ ಸಾಧನೆ ಮಾಡಬೇಕೆಂಬ ನಿರ್ಧಾರದಿಂದ ನಾಡಿನ ಅಗ್ರಮಾನ್ಯ ಲೇಖಕರ, ಕಲಾವಿದರ, ತಂತ್ರಜ್ಞರ, ಮುದ್ರಕರ ಅವಿರತ ಶ್ರಮ, ಸಾಧನೆ, ಸಹಕಾರಗಳೊಂದಿಗೆ ಹೊರಟಿರುವ ಸಾಹಸ. ನೆನಪಿರಲಿ 'ಪುಸ್ತಕ ಪ್ರಕಾಶನ' ಕೇವಲ ಪುಸ್ತಕಗಳನ್ನು ಬಿಕರಿ ಮಾಡುವ ವ್ಯಾಪಾರಿ ಸಂಸ್ಥೆಯಲ್ಲ. ಅದೊಂದು ಗುರಿ ಮತ್ತು ಆದರ್ಶಗಳನ್ನುಳ್ಳ ಉದ್ದೇಶಪೂರ್ವಕ ಸಾಹಸ.

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ**

1. ಕಿರಗೂರಿನ ಗಯ್ಯಾಳಿಗಳು — 60-00
2. ಕರ್ವಾಲೋ — 72-00
3. ಚಿದಂಬರ ರಹಸ್ಯ — 117-00
4. ಸಹಜ ಕೃಷಿ — 36-00
5. ಪರಿಸರದ ಕತೆ — 66-00
6. ಮಿಸ್ಸಿಂಗ್ ಲಿಂಕ್ — 60-00
7. ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ — 72-00
8. ಜುಗಾರಿ ಕ್ರಾಸ್ — 117-00
9. ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು — 57-00
10. ಫ್ಲೈಯಿಂಗ್ ಸಾಸರ್ಸ್ ಭಾಗ ೧,೨ — ತಲಾ 57-00
11. ಕಾಡಿನ ಕತೆಗಳು ೧, ೨, ೩, ೪ — ತಲಾ 51-00
12. ರುದ್ರಪ್ರಯಾಗದ ಭಯಾನಕ ನರಭಕ್ಷಕ — 72-00
13. ಕನ್ನಡನಾಡಿನ ಹಕ್ಕಿಗಳು ೧ - ಮಿಂಚುಳ್ಳಿ — 69-00
14. ಕನ್ನಡನಾಡಿನ ಹಕ್ಕಿಗಳು ೨ - ಹೆಜ್ಜೆ ಮೂಡದ ಹಾದಿ — 57-00
15. ಹಕ್ಕಿ ಪುಕ್ಕ (ಕನ್ನಡನಾಡಿನ ಹಕ್ಕಿಗಳ ಪುಸ್ತಕ, ಪಕ್ಷಿವೀಕ್ಷಕರ ಕೈಪಿಡಿ) — 300-00
16. ಅಣ್ಣನ ನೆನಪು — 132-00
17. ಅಬಚೂರಿನ ಪೋಸ್ಟಾಫೀಸು (ಕಥಾ ಸಂಕಲನ) — 63-00
18. ಹುಲಿಯೂರಿನ ಸರಹದ್ದು ಮತ್ತು ನಿಗೂಢ ಮನುಷ್ಯರು — 66-00
19. ಮಾಯಾಲೋಕ - ೧ — 222-00

**ಶ್ರೀ ತೇಜಸ್ವಿಯವರ ಮಿಲನಿಯಂ ಸರಣಿಯ ಪುಸ್ತಕಗಳು**

20. ಹುಡುಕಾಟ - ಮಿಲನಿಯಮ್ ೧ — 51-00
21. ಜೀವನ ಸಂಗ್ರಾಮ - ಮಿಲನಿಯಮ್ ೨ — 45-00
22. ಪೆಸಿಫಿಕ್ ದ್ವೀಪಗಳು - ಮಿಲನಿಯಮ್ ೩ — 45-00
23. ಚಂದ್ರನ ಚೂರು - ಮಿಲನಿಯಮ್ ೪ — 45-00
24. ನೆರೆಹೊರೆಯ ಗೆಳೆಯರು - ಮಿಲನಿಯಮ್ ೫ — 45-00
25. ಮಹಾಯುದ್ಧ-೧,೨,೩ - ಮಿಲನಿಯಮ್ ೬,೭,೮ — ತಲಾ 45-00
26. ದೇಶವಿದೇಶ-೧,೨,೩,೪-ಮಿಲನಿಯಮ್ ೯,೧೦,೧೧,೧೨ — ತಲಾ 51-00
27. ವಿಸ್ಮಯ ವಿಶ್ವ -೧ - ಮಿಲನಿಯಮ್ ೧೩ — 45-00
28. ಮಹಾ ಪಲಾಯನ - ಮಿಲನಿಯಮ್ ೧೪ — 45-00
29. ವಿಸ್ಮಯ ವಿಶ್ವ -೨ - ಮಿಲನಿಯಮ್ ೧೫ — 45-00
30. ಅಡ್ವೆಂಚರ್ - ಮಿಲನಿಯಮ್ ೧೬ — 45-00

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಹಾಗೂ ಶ್ರೀ ಪ್ರದೀಪ ಕೆಂಜಿಗೆ**

31. ವಿಸ್ಮಯ ೧, ೨, ೩ — ತಲಾ 57-00
32. ಪ್ಯಾಪಿಲಾನ್ ೧, ೨ — ತಲಾ 132-00

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಹಾಗೂ ಶ್ರೀ ಬೆಳವಾಡಿ**

33. ಕೀಟಗಳ ವಿಶ್ವಕೋಶ (೧) ನಡೆಯುವ ಕಡ್ಡಿ! ಹಾರುವ ಎಲೆ! — 45-00

**ಶ್ರೀ ಪ್ರದೀಪ ಕೆಂಜಿಗೆ**

34. ಬರ್ಮುಡಾ ಟ್ರ್ಯಾಂಗಲ್ — 45-00
35. ಅದ್ಭುತಯಾನ — 60-00

**ಶ್ರೀ ಜಿ. ಪಿ. ಬಸವರಾಜು**

36. ಭೂಕಂಪದ ಅಂತರಂಗ — 40-00

**ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು**

37. ಅಚ್ಚಗನ್ನಡ ನುಡಿಕೋಶ — 360-00

**ಶ್ರೀ ಎಂ. ಶಿವಕುಮಾರ್**

38. ಸೈಕಲ್ ವಾಲ — 40-00
39. ಯೋಗಿ ಮತ್ತು ಅಪ್ಸರೆ — 66-00
40. ಕಂಪ್ಯೂಟರ್ ಕಲಿಯಿರಿ — 120-00

**ಶ್ರೀ ನರೇಂದ್ರ ರೈ ದೇರ್ಲ**

41. ಸಾವಯವ ಕೃಷಿ — 45-00

**ಲಾರಾ ಇಂಗಲ್ಸ್ ವೈಲ್ಡರ್, ಅನು : ಶ್ರೀ ಎಸ್. ಅನಂತನಾರಾಯಣ**

42. ದೊಡ್ಡ ಕಾಡಿನಲ್ಲಿ ಪುಟ್ಟ ಮನೆ ಭಾಗ -೧ — 60-00
43. ರೈತರ ಹುಡುಗ ಭಾಗ-೩ — 75-00
44. ಪ್ಲಮ್ ನದಿಯ ತೀರದಲ್ಲಿ - ಭಾಗ ೪ — 75-00
45. ಸಿಲ್ವರ್ ಲೇಕ್ ದಡದಲ್ಲಿ - ಭಾಗ ೫ — 75-00
46. ಚಳಿಯ ಸುಳಿಯಲ್ಲಿ - ಭಾಗ ೬ — 75-00
47. ಹುಲ್ಲುಗಾವಲಿನಲ್ಲಿ ಪುಟ್ಟ ಪಟ್ಟಣ - ಭಾಗ ೭ — 75-00
48. ಆ ಸೊಗಸಿನ ಬಂಗಾರದ ದಿನಗಳು - ಭಾಗ ೮ — 75-00

**ಲಾರಾ ಇಂಗಲ್ಸ್ ವೈಲ್ಡರ್, ಅನು : ಶ್ರೀಮತಿ ಕೆ. ಪಿ. ಈಶಾನ್ಯೆ**

49. ಮೊದಲ ನಾಲ್ಕು ವರ್ಷಗಳು - ಭಾಗ ೯ — 51-00

**ಶ್ರೀ ಆಲನಹಳ್ಳಿ ಶ್ರೀಕೃಷ್ಣ**

50. ಗೋಡೆ (ನೀಳ್ಗತೆಗಳ ಸಂಕಲನ) — 66-00

**ಶ್ರೀ ಕೃಪಾಕರ ಹಾಗೂ ಶ್ರೀ ಸೇನಾನಿ**

51. ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು — 93-00

**ಶ್ರೀ ದೇವನೂರ ಮಹಾದೇವ**

52. ಕುಸುಮ ಬಾಲೆ — 60-00

**ಡಾ. ಎಸ್. ಎಂ. ವೃಷಭೇಂದ್ರ ಸ್ವಾಮಿ**

53. ತರಗತಿಗಳಲ್ಲಿ ಕುವೆಂಪು : ತೌಲನಿಕ ಕಾವ್ಯ ಮೀಮಾಂಸೆ — 180-00

ವಿ. ಸೂ : ಕಚ್ಚಾ ಸಾಮಗ್ರಿಗಳ ಬೆಲೆ ವ್ಯತ್ಯಾಸವಾಗುವುದರಿಂದ ಹೊಸ ಆವೃತ್ತಿ ಬಿಡುಗಡೆಗೊಂಡಾಗ ಪುಸ್ತಕದ ಬೆಲೆಯಲ್ಲಿ ವ್ಯತ್ಯಾಸವಾಗುತ್ತದೆ.

ವಿವರಗಳಿಗೆ

**ಪುಸ್ತಕ ಪ್ರಕಾಶನ**

91, 9ನೇ ಮೇನ್, ಸರಸ್ವತಿಪುರಂ, ಮೈಸೂರು - 570 009

ಫೋನ್ : 0821-2545774 bnsrama@sancharnet.in

*ಪೋಸ್ಟ್ ಮುಖಾಂತರ ವ್ಯವಹರಿಸುವವರಿಗೆ*

**ಪುಸ್ತಕ ಪ್ರಕಾಶನ**

ಫೋನ್ : 08263 - 228353
08263 - 240202

ಪೋಸ್ಟ್ ಬಾಕ್ಸ್ 58, ಮೂಡಿಗೆರೆ - 577 132 ptejaswi@sancharnet.in



**ನೆನಪು ತೆರೆವ ಕವಿಮನ** (ಆತ್ಮಕಥೆ ಸಂಗ್ರಹ)
ನಯನಾ ಕಾಶ್ಯಪ್
**ಪುಟ :** xxi+೧೭೬ **ಬೆಲೆ :** ರೂ. ೯೫
**ಮೌಲ್ಯ ಪ್ರಕಾಶನ,** ನಲ್ಲೂರು - ೫೭೪ ೫೦೨, ಕಾರ್ಕಳ, ಉಡುಪಿ ಜಿಲ್ಲೆ

ಚಿಲಿ ದೇಶದ ಮಹತ್ವದ ಕವಿ ಪಾಬ್ಲೊ ನೆರೂಡ ಕನ್ನಡದ ಓದುಗರಿಗೆ ಪರಿಚಿತನಾದ ಕವಿ. ಕೆ. ಎಸ್. ನಿಸಾರ್ ಅಹಮದ್ ನೆರೂಡನ ಕೆಲವು ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿ ಆತನ ಕಾವ್ಯ ಜೀವನದ ಬಗ್ಗೆ ಬರೆದಿದ್ದಾರೆ. ತೇಜಸ್ವಿನಿ ನಿರಂಜನ ಕೂಡ ನೆರೂಡಾನ ಕೆಲವು ಕವಿತೆಗಳನ್ನು ಅನುವಾದಿಸಿದ್ದಾರೆ. ಪ್ರಸ್ತುತ ಈ ಕೃತಿ ನೆರೂಡಾನ ಆತ್ಮಕಥೆ 'ಮೆಮ್ವಾ'ದ ಸಂಗ್ರಹ ರೂಪ. 'ಮೆಮ್ವಾ'ದ ಆಯ್ದ ಭಾಗಗಳನ್ನು ಕನ್ನಡಕ್ಕೆ ನಯನಾ ಕಾಶ್ಯಪ್ ಸೊಗಸಾಗಿ ಭಾಷಾಂತರಿಸಿದ್ದಾರೆ. ಕವಿಯ ಕಾವ್ಯಜೀವನ, ಸಂಘಟನೆ, ಹೋರಾಟ, ಎದುರಿಸಿದ ಏಳುಬೀಳುಗಳು ಪ್ರತಿಯೊಂದೂ ಚೆನ್ನಾಗಿ ಚಿತ್ರಣಗೊಂಡಿದೆ. ರಮ್ಯ ಕಲ್ಪನೆಗಳಲ್ಲೇ ವಿಹರಿಸುತ್ತ ಭಾವುಕತೆಯ ಗುಂಗಿನಲ್ಲೇ ಕವಿತೆ ಬರೆಯುವ ಕವಿಗಳಿಗೆ ನೆರೂಡನ ಸಮಾಜಮುಖಿ ಚಿಂತನೆಗಳಿಂದ ಒಡಮೂಡಿದ ಕಾವ್ಯದ ಜೀವನ ಕಥನ ಹೊಸ ಬಗೆಯಲ್ಲಿ ಚಿಂತಿಸಲಿಕ್ಕೆ ಸಹಕಾರಿಯಾಗಬಲ್ಲದು.



**ಬೆಟ್ಟಸಾಲಿನ ಮೋಡಿ** ಪರಂಜ್ಯೋತಿ
**ಪುಟ :** ೧೦೪ **ಬೆಲೆ :** ರೂ. ೬೦
**ಇಂಚರ ಪ್ರಕಾಶನ,** ನಂ. ೧೬೭, ೧೧ನೇ [illegible] ರಸ್ತೆ, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂ - [illegible]



'ಶೂದ್ರದೀಕ್ಷೆ', 'ಅವತಾರ', 'ಕಳೆದುಹೋದವನು' ಕಥಾ ಸಂಕಲನಗಳು, 'ನದೀ ನೀರಿನ ಸ್ಪೆಷಲ್', 'ಚೆನ್ನದ ಚೆನ್ನೇರಿ' ಪ್ರಬಂಧ ಸಂಕಲನಗಳಿಂದ ಗಮನ ಸೆಳೆದಿದ್ದ ಪರಂಜ್ಯೋತಿಯವರದು ತಿರುಗಾಟದಲ್ಲಿ ಸಂಭ್ರಮಿಸುವ ಮನಸು. ಇದು ಪ್ರವಾಸ ಲೇಖನಗಳ ಸಂಕಲನವಾಗಿದೆ. ಇಲ್ಲಿನ ಒಂದೆರಡು ಲೇಖನಗಳು ಅವರ ಬಾಲ್ಯದ ನೆನಪುಗಳನ್ನು ತೆರೆದಿಡುತ್ತವೆ. ಬೆಟ್ಟ, ಗುಡ್ಡ, ಕಾಡುಗಳು ಪರಂಜ್ಯೋತಿಯವರಿಗೆ ಕೇವಲ ಆಕರ್ಷಣೆಯಾಗದೆ, ಅವು 'ಸೆಳೆತ' ಮತ್ತು 'ವ್ಯಾಮೋಹ'ವಾಗಿವೆ. ಹಾಗಾಗಿ ಈ ಭಾವದ ಸ್ಫುರಣೆ ಇಲ್ಲಿನ ಪ್ರವಾಸ ಲೇಖನಗಳಲ್ಲಿ ಕಂಡಿದೆ. 'ನಾಡಿಯಲ್ಲಿ ಕಂಡದ್ದು', 'ನೀಲಗಿರಿ ಕಂಪು', 'ದೊಡ್ಡ ಬೆಟ್ಟದ ದಾರಿಯಲ್ಲಿ' ಓದುಗರಲ್ಲಿ ಪರಿಸರದ ಬಗೆಗೆ ಪ್ರೀತಿ ಹುಟ್ಟಿಸಲು ಕಾರಣವಾಗುವ ಬರಹಗಳು. ಪೂರ್ಣಚಂದ್ರ ತೇಜಸ್ವಿಯವರ ಬರಹಗಳನ್ನು ನೆನಪಿಗೆ ತಂದರೂ ತೇಜಸ್ವಿಯವರ ಹಾಸ್ಯಮಿಶ್ರಿತ ಶೈಲಿ ಇಲ್ಲಿ [illegible] ಬರಹಗಳು ಆಪ್ತ ಅನಿಸುತ್ತವೆ.

**ಜಾತಿವಂತ ಮತ್ತು ವಿನಾಶನ** (ಮರಾಠಿ ಕಾದಂಬರಿಗಳು)
ಮೂಲ : ರಾಜನ್ ಖಾನ ಅನು : ಚಂದ್ರಕಾಂತ ಪೋಕಳೆ
**ಪುಟ :** ೧೨೪ **ಬೆಲೆ :** ರೂ. ೭೫
**ಭಾಗ್ಯಲಕ್ಷ್ಮೀ ಪ್ರಕಾಶನ,** ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂ - ೮೫



'ಜಾತಿವಂತ' ಮತ್ತು 'ವಿನಾಶನ' – ರಾಜನ್ ಖಾನರ ಎರಡು ಕಿರು ಕಾದಂಬರಿಗಳು. ಮರಾಠಿಯ ಪ್ರಮುಖ ಕಥಾಲೇಖಕರಾಗಿ, ರೈತ ಚಳುವಳಿ, ಅಲೆಮಾರಿ ಚಳುವಳಿ, ಆದಿವಾಸಿ ಚಳುವಳಿಯಲ್ಲಿ ಸಕ್ರಿಯ ಕಾರ್ಯಕರ್ತರು. ಈವರೆಗೆ ಹತ್ತು ಕಾದಂಬರಿಗಳು, ಹತ್ತು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. 'ಜಾತಿವಂತ' ಕಾದಂಬರಿ ಮತಾಂತರದ ಸಮಸ್ಯೆಗೆ ಸಂಬಂಧಿಸಿದ್ದಾಗಿದೆ; 'ವಿನಾಶನ' ಅಂತರ್ಜಾತಿ ವಿವಾಹಕ್ಕೆ ಸಂಬಂಧಿಸಿದ್ದು. 'ಎಲ್ಲರ ರಕ್ತ ಒಂದೇ ಬಗೆಯಾಗಿದೆ' ಎಂದು ಸಮಾನತೆಯನ್ನು ಪ್ರತಿಪಾದಿಸುತ್ತಲೇ 'ಆದರೂ ಮನುಷ್ಯನಿಗೆ ಜಾತಿ-ಧರ್ಮವಿದೆಯಲ್ಲ, ಇದೇತಕ್ಕೆ ?' ಎಂಬುದು ಅವರನ್ನು ಕಾಡಿರುವ ಪ್ರಶ್ನೆ. 'ಮನುಷ್ಯ ಕೇವಲ ಮನುಷ್ಯನೆಂದೇ ಬದುಕಬಲ್ಲ, ಬದುಕಲೇಬೇಕು; ಇದಕ್ಕೆ ಮತ್ತೆ ಬೇರೆ ಬೇರೆ ವ್ಯಾಖ್ಯಾನ ಬೇಕೆ ?' ಎನ್ನುವ ನಿರ್ಣಯಕ್ಕೆ ಬರುತ್ತಾರೆ. ಈ ಆಶಯಗಳು ಇಲ್ಲಿನ ಕಿರು ಕಾದಂಬರಿಗಳಲ್ಲಿ ವ್ಯಕ್ತವಾಗಿವೆ. ಚಂದ್ರಕಾಂತ ಪೋಕಳೆ ಕನ್ನಡಕ್ಕೆ ಚೆನ್ನಾಗಿ ಅನುವಾದಿಸಿದ್ದಾರೆ.



**ಕಣ್ಣಾಚೆಗೆ** (ಸಣ್ಣಕಥೆಗಳ ಸಂಕಲನ)
ಪ್ರೊ|| ಕಾಳೇಗೌಡ ನಾಗವಾರ
**ಪುಟ :** xxxvi+೨೪೪=೨೮೦ **ಬೆಲೆ :** ರೂ. ೧೯೫
**ರೂಪ ಪ್ರಕಾಶನ,** ೨೦, ಮಹಡಿ, ಲ್ಯಾನ್ಸ್‌ಡೌನ್ ಬಿಲ್ಡಿಂಗ್, ಮೈಸೂರು - ೫೭೦ ೦೨೪

ಕವಿಯಾಗಿ, ಕತೆಗಾರರಾಗಿ, ಜಾನಪದ ತಜ್ಞರಾಗಿ ಹೆಸರುಗಳಿಸಿರುವ ಕಾಳೇಗೌಡ ನಾಗವಾರರವರ ಕಥಾಸಂಕಲನ ಇದು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿರುವ ಕಾಳೇಗೌಡ ನಾಗವಾರರದು ಸಮಾಜಮುಖಿ ಚಿಂತನೆ ಮತ್ತು ಹೋರಾಟದ ಬದುಕು. ಗ್ರಾಮೀಣ ಪರಿಸರದಿಂದ ಬಂದ ಕಾಳೇಗೌಡರು ತಮ್ಮ ಕಥೆಗಳ ಕೇಂದ್ರ ಸ್ಥಾನಗಳನ್ನಾಗಿ ಮಾಡಿಕೊಂಡಿರುವುದು ಹಳ್ಳಿಗಳನ್ನೇ. ಹಾಗಾಗಿ ಇಲ್ಲಿನ ಕಥೆಗಳಲ್ಲಿ ಹಳ್ಳಿಯ ಬದುಕಿನ ರಮ್ಯತೆ, ದಾರುಣತೆ ಕಂಡುಬರುತ್ತದೆ. ಡಿ. ಆರ್. ನಾಗರಾಜರು ಹೇಳುವಂತೆ, 'ಇವರ ಕಥೆಗಳಲ್ಲಿಯ ಎಲ್ಲ ಜನಸಾಮಾನ್ಯರೂ ಜೀವನದ ರಾಗರಂಗುಗಳಿಗೆ ಸಹಜವಾಗಿ ಸ್ಪಂದಿಸುವ ಹೃದಯವಂತಿಕೆಯನ್ನು ಪಡೆದ ಚೈತನ್ಯಶೀಲರಾಗಿದ್ದಾರೆ'. 'ಸಾಮಾಜಿಕ ಸ್ಥಿತ್ಯಂತರಗಳನ್ನು ಅನಾಯಾಸವಾಗಿ ಹಿಡಿಯುವ ಶಕ್ತಿ'ಯುಳ್ಳವರೆಂದು ಶಾಂತಿನಾಥ ದೇಸಾಯಿ ಗುರುತಿಸಿದ್ದಾರೆ.



**ನಡೆದ ದಾರಿಯ ನೆನಪುಗಳು**
ನಿರೂಪಕ : 'ಕಿರಣ'
**ಪುಟ :** vii+೧೦೬ **ಬೆಲೆ :** ರೂ. ೫೦
**ಶ್ರೀ ಎಸ್. ಸುಬ್ಬಯ್ಯ ನಾಯ್ಕ್,** ಅಭಿನಂದನಾ ಸಮಿತಿ, ಸುಳ್ಯ - ೫೭೪ ೨೩೯

ಶಿಕ್ಷಕರಾಗಿ, ಸುಳ್ಯ ವಿಧಾನಸಭಾ ಕ್ಷೇತ್ರವನ್ನು ೧೯೫೭ರಿಂದ ೧೯೬೭ರ ತನಕ ಪ್ರತಿನಿಧಿಸಿ ಜನಪ್ರಿಯ ನಾಯಕರಾಗಿ ಹೊರಹೊಮ್ಮಿದವರು ಶ್ರೀ ಎಸ್. ಸುಬ್ಬಯ್ಯ ನಾಯ್ಕರವರು. ಸುಳ್ಯದ ಅಭಿವೃದ್ಧಿಗೆ ಸುಬ್ಬಯ್ಯ ನಾಯ್ಕರವರ ಕೊಡುಗೆ ಗಮನಾರ್ಹವಾದುದಾಗಿದೆ. ಈ ಕೃತಿ ಅವರ ಭೂಸುಧಾರಣೆ, ದಲಿತೋದ್ಧಾರ, ವಿದ್ಯುದೀಕರಣ, ರಬ್ಬರು ಮುಂತಾದ ವಿಷಯಗಳನ್ನು ಒಳಗೊಂಡ ಭಾಷಣಗಳು ಇಲ್ಲಿವೆ. ಇವತ್ತಿನ 'ಅಕ್ಷರ ದಾಸೋಹ' ೧೯೫೮ರಲ್ಲೇ ಸುಬ್ಬಯ್ಯ ನಾಯ್ಕರವರು ಬಡಮಕ್ಕಳ ಮಧ್ಯಾಹ್ನದ ಬಿಸಿಯೂಟದ ಕುರಿತು ಮಾಡಿದ ಪ್ರಸ್ತಾಪದ ಫಲ. ಹಾಗೆಯೆ 'ಉಳುವವನೇ ಹೊಲದೊಡೆಯನಾಗಬೇಕೆಂದು' ಅವರು ಪ್ರತಿಪಾದಿಸಿದ್ದರ ಪರಿಣಾಮ ಇವತ್ತು ಕರ್ನಾಟಕದಲ್ಲಿ ಗೇಣಿದಾರರಿಲ್ಲ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನ ಸಮಾನವಾಗಿ ಬದುಕಬೇಕು, ಎಂದೆಲ್ಲಾ ಪ್ರತಿಪಾದಿಸಿ ಯಶಸ್ವಿಯಾದರೂ 'ಬೇಡಿಕೆಗಳು ಫಲ ನೀಡಿವೆ. ಇವೆಲ್ಲವೂ ನನ್ನಿಂದಾದವೆಂದು ನಾನು ಹೇಳುವುದಿಲ್ಲ, ಜನರ ಆಶೋತ್ತರಗಳಿಗೆ ನಾನು ಧ್ವನಿಯಾದೆ' ಎನ್ನುವ ವಿನಯವೂ ಇದೆ.

**ಮಾತಿನ ಚಪ್ಪರ** (ಪ್ರಬಂಧ ಸಂಕಲನ)
ಶಿಕಾರಿಪುರ ಕೆ. ಹರಿಹರೇಶ್ವರ
**ಪುಟ :** xvi+೨೨೪ **ಬೆಲೆ :** ರೂ. ೧೫೦
**ಸಂವಹನ,** ನಂ. ೧೨/೧ಎ, ಈಶ್ವಿಂಗ್ ಬಜಾರ್ ಹಿಂಭಾಗ, ಶಿವರಾಮಪೇಟೆ, ಮೈಸೂರು - ೫೭೦ ೦೦೧



'ಅಮೆರಿಕನ್ನಡಿಗ' ಎಂದೇ ಖ್ಯಾತರಾಗಿರುವ ಇವರು ಅಮೆರಿಕಾದಲ್ಲಿ ಸುಮಾರು ಮೂವತ್ತು ವರ್ಷಗಳ ಕಾಲವಿದ್ದೂ ಕನ್ನಡದ ಬಗ್ಗೆ ತೀವ್ರ ಒಲವು ಬೆಳೆಸಿಕೊಂಡವರು. ಅಲ್ಲಿದ್ದುಕೊಂಡೇ ಅನೇಕ ಕನ್ನಡ ಕಾರ್ಯಕ್ರಮಗಳನ್ನು ಆಯೋಜಿಸಿ ಯಶಸ್ವಿಯಾದವರು. 'ವಿದೇಶಕ್ಕೆ ಬಂದವರು' ಕವನ ಸಂಕಲನದಿಂದ ಗಮನ ಸೆಳೆದವರು. 'ಮಾತಿನ ಚಪ್ಪರ' ಅವರ ವೈಚಾರಿಕ ಪ್ರಬಂಧಗಳ ಸಂಕಲನ. ಕೆಲವು ಪ್ರಬಂಧಗಳು ಅವರು ಅಮೆರಿಕಾದಲ್ಲಿದ್ದಾಗ, ಉಳಿದವು ಭಾರತಕ್ಕೆ ಬಂದ ಮೇಲೆ ಬರೆದವು. ತಾವು ಓದಿದ್ದರ ಬಗ್ಗೆ ಮೂಡಿದ ಅನಿಸಿಕೆ, ಅಭಿಪ್ರಾಯಗಳನ್ನು ಒಂದೆಡೆ ದಾಖಲಿಸಿ, ಅವನ್ನೇ ಪ್ರಬಂಧಗಳಾಗಿಸಿರುವುದಾಗಿ ಲೇಖಕರು ಹೇಳಿಕೊಂಡಿದ್ದಾರೆ. ಸಂಸ್ಕೃತದ ಅಧ್ಯಯನ ಇಲ್ಲಿ ನಿಚ್ಚಳವಾಗಿ ಕಾಣುತ್ತದೆ. ಪ್ರತಿ ಪ್ರಬಂಧದ ನಂತರವೂ ತಾವು ಪರಾಮರ್ಶಿಸಿದ ಗ್ರಂಥಗಳೆಲ್ಲವನ್ನು ದಾಖಲಿಸಿದ್ದಾರೆ.

– [illegible]
[illegible]



# ಈ ವರ್ಷದ ಖಗೋಳ ಕೌತುಕಗಳು

ನಭಾವಲೋಕನವನ್ನು ಓದುವವರಲ್ಲಿ ಹೆಚ್ಚಿನವರು ಶಿಕ್ಷಕರು, ಖಗೋಳ ವೀಕ್ಷಕರು. ''ಏನಾದರೂ ವಿಶೇಷ ಇದ್ದರೆ ಮೊದಲೇ ತಿಳಿಸಿ, ಏರ್ಪಾಟು ಮಾಡಿ ಕೊಳ್ಳಬೇಕು'' ಎಂದವರ ಬೇಡಿಕೆ. ಆದ್ದರಿಂದ ಈ ವಿಶೇಷಗಳ ಪಟ್ಟಿ ಇಲ್ಲಿದೆ.

ಎಲ್ಲರನ್ನೂ ಆಕರ್ಷಿಸುವ ಕೌತುಕಮಯ ಘಟನೆಗಳೆಂದರೆ ಗ್ರಹಣಗಳು. ಮಾರ್ಚ್ ೧೯ರ ಸೂರ್ಯಗ್ರಹಣ ಈ ದಿಸೆಯಲ್ಲಿ ಅತ್ಯುಪಯೋಗಿ. ಶಾಲಾ ಮಕ್ಕಳನ್ನು ಬೆಳಗಿನ ಆರು ಗಂಟೆಗೇ ಒಟ್ಟುಗೂಡಿಸಿ, ಸೂರ್ಯೋದಯ ಕಾಣುವಂತಹ ಸ್ಥಳಕ್ಕೆ ಕರೆದೊಯ್ದು ತೋರಿಸಲು ಒಳ್ಳೆಯ ಅವಕಾಶ. ದೂರದರ್ಶಕ ಇರುವವರು ತೆರೆಯ ಮೇಲೆ ಬಿಂಬ ಮೂಡಿಸಿ ತೋರಿಸುವುದೂ ಸಾಧ್ಯ. ಉಳಿದ ಗ್ರಹಣಗಳೆಂದರೆ ಸೆಪ್ಟೆಂಬರ್ ೧೧ರ ಸೂರ್ಯಗ್ರಹಣ. ಇದು ನಮಗೆ ಅನುಕೂಲಕರವಾಗಿಲ್ಲ.

ಎರಡು ಚಂದ್ರಗ್ರಹಣಗಳೂ ಇವೆ. ಕ್ಯಾಮರಾ, ದೂರ ದರ್ಶಕ ಸಜ್ಜುಮಾಡಿಟ್ಟುಕೊಂಡರೆ ಒಳ್ಳೆಯದು. ಮಾರ್ಚ್ ೩-೪ರ ರಾತ್ರಿಯ ಗ್ರಹಣ ವಾಸ್ತವವಾಗಿ ೪ರ ಬೆಳಗಿನ ಜಾವ ಆರಂಭವಾಗುವುದು. ಅಂದಿನ ಚಂದ್ರಾಸ್ತ ನೋಡಲು ಬಹಳ ಸುಂದರವಾಗಿರುವುದು. ಆಗಸ್ಟ್ ತಿಂಗಳ ಗ್ರಹಣ ನಮಗೆ ಕಾಣುವುದಿಲ್ಲ.

ಚಂದ್ರ ಸೂರ್ಯನಲ್ಲದೆ ಇತರ ಕಾಯ ಗಳನ್ನು ಮರೆಮಾಡುವ ಆಚ್ಛಾದನೆಗಳು ಅನೇಕವಿವೆ. ಶನಿಗ್ರಹವನ್ನು ಪ್ರತಿತಿಂಗಳೂ ಪೂ ಮರೆಮಾಡುತ್ತದೆ. ಯುರೇನಸ್ ಮತ್ತು ಶುಕ್ರ ಗ್ರಹಗಳ ಆಚ್ಛಾದನೆಗಳು ಪ್ರತಿ ತಿಂಗಳೂ ಇವೆ. ಏಪ್ರಿಲ್ ಮತ್ತು ಡಿಸೆಂಬರ್ ನಲ್ಲಿಮಂಗಳಗ್ರಹವನ್ನು ಮರೆಮಾಡಲಿದೆ.

ಇದೇ ರೀತಿ ಮಘ, ಚಿತ್ರಾ ಮತ್ತು ಜ್ಯೇಷ್ಠಾ ನಕ್ಷತ್ರಗಳ ಆಚ್ಛಾದನೆಗಳು ವರ್ಷದುದ್ದಕ್ಕೂ ಇವೆ. ಕ್ಯಾಮರಾಗಂತೂ ಕೈತುಂಬ ಕೆಲಸ.

ವರ್ಷದ ಆರಂಭದಲ್ಲಿ ಸಂಜೆಯ ಹೊತ್ತು ಪಶ್ಚಿಮ ಆಕಾಶದಲ್ಲಿ ಥಳಗುಟ್ಟುವ ಶುಕ್ರ ಅದ್ಭುತ ನೋಟ ಒದಗಿಸುತ್ತದೆ. ದಿನೇ ದಿನೇ ಮೇಲೇರಿ ದಂತೆ ಕಾಣುವ ಇದು ಮೇ ತಿಂಗಳಲ್ಲಿ ಗರಿಷ್ಠ ಎತ್ತರದಲ್ಲಿ ಕಾಣುತ್ತದೆ. ತಿಂಗಳಿಗೊಮ್ಮೆ ಚಂದ್ರನ ಜೊತೆಗೂಡುವ ದೃಶ್ಯ ಕಣ್ಣಿಗೆ ಹಬ್ಬ. ಆದಾದ ಎರಡೇ ತಿಂಗಳಲ್ಲಿ ದಿನೇ ದಿನೇ ಕೆಳಗೆ ಸರಿದು ಸೆಪ್ಟೆಂಬರ್‌ನಲ್ಲಿ ಬೆಳಗಿನ ಜಾವ ಕಾಣತೊಡಗುತ್ತದೆ. ನವೆಂಬರ್‌ನಲ್ಲಿ ಶನಿ, ಶುಕ್ರ ಬುಧಗಳ ಸಮಾಗಮವಿದೆ.

ಬೆಳಗಿನ ಆಕಾಶದಿಂದ ಸಂಜೆಯ, ಸಂಜೆಯಿಂದ ಬೆಳಗಿಗೆ ಪುಟಿದೋಡುವ ಬುಧವನ್ನು ಮೇ ತಿಂಗಳಲ್ಲಿ ಗುರುತಿಸಲು ಒಳ್ಳೆಯ ಅವಕಾಶವಿದೆ.

ಏಪ್ರಿಲ್ ಹೊತ್ತಿಗೆ ಸಂಜೆ ತಡವಾಗಿ ಉದಯಿಸುವ ಗುರುಗ್ರಹ ಆ ಮುಂದಿನ ತಿಂಗಳು ಗಳಲ್ಲಿ ಸಂಜೆ ಕಾಣುತ್ತದೆ. ವೃಶ್ಚಿಕರಾಶಿಯ ಜ್ಯೇಷ್ಠಾ ಎಂಬ ಕೆಂಪುನಕ್ಷತ್ರದ ಸಮೀಪವೇ ಕಾಣುತ್ತದೆ. ಸಿಂಹರಾಶಿಯಲ್ಲಿ ಕಾಣುವ ಶನಿಗ್ರಹ ಮಘನಕ್ಷತ್ರದ ಸಮೀಪ ಕಾಣುತ್ತದೆ. ಮಂಗಳಗ್ರಹ ನಿಧಾನವಾಗಿ ವೃಶ್ಚಿಕದಿಂದ, ಓಫಿಯೂಕಸ್, ಧನು, ಮಕರ, ಕುಂಭ, ಮೀನ, ಮೇಷಗಳನ್ನು ಕ್ರಮಿಸಿ ವೃಷಭಕ್ಕೆ ಬರುವಾಗ ವರ್ಷಾಂತ್ಯವಾಗುತ್ತದೆ. ಈ ಅವಧಿ ಯಲ್ಲಿ ಅದರ ಪ್ರಕಾಶ ಕ್ರಮೇಣ ಹೆಚ್ಚುವುದನ್ನು ಗಮನಿಸಬಹುದು. ಕೆಂಪು ರೋಹಿಣಿಯು ಹಾದು ಹೋಗುವಾಗ ಎರಡು ರೋಹಿಣಿಗಳೋ ಎನ್ನಿಸಬಹುದು. ಡಿಸೆಂಬರ್ ಕೊನೆಯ ವಾರಕ್ಕೆ ಗರಿಷ್ಠ ಪ್ರಕಾಶ ಮುಟ್ಟಿದಾಗ ಗಮನಿಸದೇ ಇರುವುದು ಸಾಧ್ಯವೇ ಇಲ್ಲ.

ಉಲ್ಕಾವೃಷ್ಟಿಗಳು ಪ್ರತಿವರ್ಷ ನಿಗದಿಯಾದ ದಿನಾಂಕದಲ್ಲಿ ಕಾಣುವ ಘಟನೆಗಳು. ಆದರೆ ಎಷ್ಟು ಉಲ್ಕೆಗಳನ್ನು ನೋಡಬಲ್ಲೆವು ಎಂಬುದು ಚಂದ್ರನ ಬೆಳಕಿನಿಂದ ನಿರ್ಧಾರವಾಗುತ್ತದೆ. ಉದಾಹರಣೆಗೆ ಜನವರಿಯ ಕ್ವಾಡ್ರಾಂಟಿಡ್ಸ್ ಎಂಬ ಉಲ್ಕೆಗಳಿಗೆ ಹುಣ್ಣಿಮೆಯ ಚಂದ್ರನ ಕಾಟ. ಆದ್ದರಿಂದ ಕ್ಷೀಣವಾದ ಉಲ್ಕೆಗಳು ಕಾಣುವುದೇ ಇಲ್ಲ. ಆದರೆ ಏಪ್ರಿಲ್ ೨೨ರ ಲಿರಿಡ್ಸ್, ಡಿಸೆಂಬರ್ ೧೪ರ ಜೆಮಿನಿಡ್ಸ್ – ಇವುಗಳ ವೀಕ್ಷಣೆಗೆ ಬಾಲಚಂದ್ರ ಅಡ್ಡಿ ಉಂಟುಮಾಡು ವುದಿಲ್ಲ. ಆಗಸ್ಟ್ ೧೩ರ ಪರ್ಸಿಯ್ಯೆಡ್ಸ್ ಅಮಾವಾಸ್ಯೆಯ ಆಸುಪಾಸಿನಲ್ಲಿ ಗರಿಷ್ಠ ಮುಟ್ಟುವು ದರಿಂದ ತೊಂದರೆಯೇ ಇಲ್ಲ. ಆದರೆ ಮೇ ತಿಂಗಳ ಈಟಾ ಅಕ್ವಾರಿಡ್ಸ್, ಅಕ್ಟೋಬರ್ ನಲ್ಲಿಯ ಒರಿಯನಿಡ್ಸ್ – ಇವುಗಳಿಗೆ ಅರ್ಧಾಧಿಕ ಚಂದ್ರನ ಬೆಳಕು ಅಡ್ಡಿಮಾಡಲಿದೆ.

ಧೂಮಕೇತುಗಳ ಬಗ್ಗೆ ಮುಂಚಿತವಾಗಿ ಬರೆಯುವುದು ಕಷ್ಟ. ಏಕೆಂದರೆ ಇವನ್ನು ಕಂಡು ಹಿಡಿದ ಒಂದೆರಡು ತಿಂಗಳುಗಳಲ್ಲಿಯೇ ಪ್ರಕಾಶ ಗರಿಷ್ಠವಾಗಿ ಆ ಬಳಿಕ ಅಡಗಿಯೂ ಹೋಗುವುದು. ಆದರೆ ನಿಯತಕಾಲಿಕವಾಗಿ ಬಂದು ಹೋಗುವ ಧೂಮಕೇತುಗಳ ಬಗ್ಗೆ ಮಾತ್ರ ತಿಳಿಯಬಹುದು. ಉದಾಹರಣೆಗೆ, ಸುಮಾರು ೧೪ ವರ್ಷಗಳಿಗೊಮ್ಮೆ ಬಂದು ಹೋಗುವ ೮ ಪಿ ಟಟಲ್ ಎಂಬ ಧೂಮಕೇತು ಡಿಸೆಂಬರ್‌ನಲ್ಲಿ ಮೀನ ರಾಶಿಯ ಮೂಲಕ ಹಾದುಹೋಗುವುದು. ಶುಭ್ರ ಆಕಾಶದಲ್ಲಿ ಬರಿ ಗಣ್ಣಿಗೆ ಕಾಣಬಹುದಾದರೂ ಖಚಿತವಾಗಿ ಹೇಳುವಂತಿಲ್ಲ. ಡಿಸೆಂಬರ್ ಕೊನೆಯ ದಿನಗಳಲ್ಲಿ ೩೦, ೩೧ ಹೀಗೆ ಎಮ್ ೩೩ ಎಂಬ ಹೆಸರಿನ ಗೆಲಾಕ್ಸಿಯನ್ನು ಗಮನಿಸಿ ಅಥವಾ ದೂರದರ್ಶಕದಿಂದ ಚಿತ್ರೀಕರಿಸಲು ಪ್ರಯತ್ನಿಸಿ. ಧೂಮಕೇತು ಕೂಡ ಚಿತ್ರದಲ್ಲಿ ಮೂಡುವುದು.




ಇದು ಬಹಳ ಮುಂದಾಗಿ ಕೊಟ್ಟ ಸೂಚನೆಯಾಯಿತು. ಚಿಂತೆಯಿಲ್ಲ, ವಿಶೇಷ ಸಂಚಿಕೆ ಅಲ್ಲಿಯವರೆಗೂ ನಿಮ್ಮಲ್ಲಿ ಉಳಿದಿರ ಬಹುದು. ಇಲ್ಲದಿದ್ದರೆ ಆಯಾ ತಿಂಗಳಲ್ಲಂತೂ ಮಾಹಿತಿ ಇದ್ದೇ ಇರುತ್ತದೆ. ದೂರದರ್ಶಕದ ಧೂಳು ಒರೆಸಿ ಸಜ್ಜುಮಾಡಿಕೊಳ್ಳಲು ಅಥವಾ ಊರಾಚೆ ಪ್ರವಾಸದ ತಾರೀಖು ಹಾಕಿಕೊಳ್ಳಲಾದರೂ ಸಹಾಯವಾದೀತು.

### ಜನವರಿ ತಿಂಗಳ ಖಗೋಳ ದಿನಚರಿ

ಜನವರಿ ೩ ಹುಣ್ಣಿಮೆ ೧೯:೨೭ಕ್ಕೆ
ಕ್ವಾಂಡ್ರಾಟಿಡ್ಸ್ ಉಲ್ಕಾವೃಷ್ಟಿ, ಭೂಮಿ-ಸೂರ್ಯರ ಅಂತರ ಕನಿಷ್ಠ

| | |
|---|---|
| ೫ | ಗುರು-ಜ್ಯೇಷ್ಠಾ ಜೋಡಿ |
| ೬ | ಶನಿ-ಚಂದ್ರ ಜೋಡಿ |
| ೭ | ಶನಿ-ಮಘ ಜೋಡಿ |
| ೧೦ | ಚಂದ್ರ-ಭೂಮಿ ಅಂತರ ಗರಿಷ್ಠ |
| ೧೧ | ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ) ಚಂದ್ರ-ಚಿತ್ರಾ ಜೋಡಿ |
| ೧೫ | ಚಂದ್ರ-ಜ್ಯೇಷ್ಠಾ ಜೋಡಿ, ಚಂದ್ರ-ಗುರು ಜೋಡಿ |
| ೧೭ | ಚಂದ್ರ-ಮಂಗಳ ಜೋಡಿ |
| ೧೯ | ಅಮಾವಾಸ್ಯೆ ೯:೩೧ಕ್ಕೆ |
| ೨೦ | ಚಂದ್ರ-ಶುಕ್ರ ಜೋಡಿ |
| ೨೨ | ಚಂದ್ರ-ಯುರೇನಸ್ ಜೋಡಿ, ಚಂದ್ರ-ಭೂಮಿ ಅಂತರ ಕನಿಷ್ಠ |
| ೨೫ | ಚಾಂದ್ರಮಾಸದ ಪ್ರಥಮಪಾದ |
| ಫೆಬ್ರವರಿ ೨ | ಚಂದ್ರ-ಶನಿ ಜೋಡಿ : ಹುಣ್ಣಿಮೆ ೧೧:೧೫ಕ್ಕೆ |
| ೩ | ಚಂದ್ರ-ಮಘ ಜೋಡಿ |


ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

## ದೃಶ್ಯ-೧

ಪ್ರೇಕ್ಷಕರ ಮಧ್ಯದಿಂದ ಮಕ್ಕಳು ಪಲಪಲನೆ ರಂಗಕ್ಕೆ ನುಗ್ಗುತ್ತಾರೆ. ವೇದಿಕ ಬೆಟ್ಟದ ಆಕಾರದಲ್ಲಿದ್ದರೆ ಚೆನ್ನ. ಬೆಟ್ಟವನ್ನು ಏರುವುದನ್ನು ಅಭಿನಯಿಸಿಕೊಂಡು ಏದುಸಿರು ಬಿಡುತ್ತಾ ಬೆಟ್ಟ ಹತ್ತುವುದನ್ನು ಅನುಕರಿಸುತ್ತಾರೆ. ಬೆಟ್ಟದ ತುದಿಯಲ್ಲಿ ಗೊಮಟೇಶ್ವರನ ಪ್ರತಿಮೆ ನಿಶ್ಚಲವಾಗಿ ನಿಂತಿರುತ್ತದೆ.

**ಮಗು ೧ :** ಅಯ್ಯಯ್ಯ... ಶೇಮ್ ಶೇಮ್ ....

**ಮಗು ೨ :** ಬತ್ತಲೆ ಬರಿ ಬತ್ತಲೆ (ಚಪ್ಪಾಳೆ) ನೇಕೆಡ್ ಆ ?

**ಮಗು ೩ :** ಪ್ಯಾಂಟಮ್ ತರ ಕಾಣ್ತದಲ್ಲ!

**ಮಗು ೪ :** ಹುಶ್ ! ಪನಿಶ್ಮೆಂಟ್ ಕೊಟ್ಟವ್ರಾ !

**ಮಗು ೫ :** ಮ್ಯಾಮ್ ಎಲ್ಲಿ?

**ಮಗು ೬ :** ಮ್ಯಾಮ್ ಟೈರ್ಡ್ ಆಗಿ ಅಪ್‌ವೇನಲ್ಲೇ ಕೂತುಬಿಟ್ರು.

**ಮಗು ೧ :** ಷಿ ವಿಲ್ ಬಿ ಕಮಿಂಗ್ ಲೇಟ್ !

**ಮಗು ೨ :** ಇದು ರಾಕ್ಷಸಾನಾ !

**ಮಗು ೩ :** ಅಲ್ಲ ಇದು ದೇವರು ! (ಸ್ಟ್ಯಾಚ್ಯು ನೋಡಿ)

**ಮಗು ೪ :** ಮತ್ತೆ ಮೈಸೂರ ಬೆಟ್ಟದ ಮೇಲೆ ಮ್ಯಾಮ್ ಸೆಡ್ ಇಟ್ ವಾಸ್ ಎ ಡೆಮನ್...

**ಮಗು ೫ :** ಅದಕ್ಕೆ ಕತ್ತಿ ಇದೆ ಅಲ್ವ ಅದಕ್ಕೇ ಅದು ರಾಕ್ಷಸ !

**ಮಗು ೨ :** ಸ್ಟಾಪ್ ! ದ ಇಂಪಾರ್ಟೆಂಟ್ ಕ್ವಶ್ಚನ್ ಈಸ್ ಈ ಸ್ಟ್ಯಾಚ್ಯು ತೂಕ ಎಷ್ಟಿರಬಹುದು.

**ಮಗು ೬ :** ಹೇ... ತೂಕ ಕಟ್ಟಿಕೊಂಡು ಏನ್ ಮಾಡ್ಬೇಕು, ಇದು ಯಾಕೆ ಬತ್ತಲೆ ಇದೆ. ದಟ್ ಈಸ್ ಇಂಪಾರ್ಟೆಂಟ್.

**ಮಗು ೧ :** ನನಗ್ಗೊತ್ತು ! ನನಗ್ಗೊತ್ತು ! ಅವರಪ್ಪ ಅಮ್ಮ ಪೂರ್ ಉ...

**ಮಗು ೨ :** ಇದನ್ನು ಯಾರು ಕೆತ್ತಿದ್ದು... ಇದನ್ನ ಹೆಂಗ್ ಕೆತ್ತಿದ್ರು, ವಾಟ್ ಈಸ್ ದಿ ಹೈಟ್ ಆಫ್ ದ ಸ್ಟ್ಯಾಚು ! (ವಿಂಗಿನಿಂದ ಮುಖವೊಂದು ಕಾಣಿಸಿಕೊಂಡು ವಿಷಿಲ್ ಹಾಕ್ತಾನೆ. ಮಕ್ಕಳು ಅಚ್ಚರಿ ಭಯಗಳಿಂದ ಅತ್ತ ನೋಡುತ್ತಾರೆ. ಒಬ್ಬ ಜಂಟಲ್‌ಮನ್ ತರ ವೇಷಭೂಷಣ ತೊಟ್ಟಿರುವ ವ್ಯಕ್ತಿಯೊಬ್ಬ ಸ್ಕೇಟಿಂಗ್ ಮ್ಯಾಲೆ ಸೊಯ್ಯನೆ ಬಂದು

# ಬಾಹುಬಲಿ

ಡಾ|| ಕೆ. ವೈ. ನಾರಾಯಣಸ್ವಾಮಿ



ಮಕ್ಕಳನ್ನು ಸುತ್ತು ಹಾಕಿ ನಿಲ್ಲುತ್ತಾನೆ. ಮಕ್ಕಳು ಭಯಾಚ್ಚರಿಗಳಿಂದ ಆತನನ್ನೇ ದಿಟ್ಟಿಸುತ್ತಿರುವಾಗ ಒಂದು ಹುಡುಗ ಧೈರ್ಯಮಾಡಿ)

**ಮಗು ೩ :** ನೀನು ಯಾರು ?

**ಇನ್ನೊಂದು :** ಹೂ ಆರ್ ಯು ?

**ವ್ಯಕ್ತಿ :** ನಾನಾ... ಐಯಾಮ್ ದಿ ಪಾಸ್ಟ್, ಐಯಾಮ್ ದಿ ಪ್ರೆಸೆಂಟ್, ಐಯಾಮ್ ದಿ ಫ್ಯೂಚರ್.

**ಮಕ್ಕಳೆಲ್ಲ :** ವಾಟ್ ಏನು ! ಪಾಸ್ಟ್, ಪ್ರೆಸೆಂಟ್, ಫ್ಯೂಚರ್...

**ವ್ಯಕ್ತಿ :** ಯೆಸ್, ಭೂತ ವರ್ತಮಾನ ಭವಿಷ್ಯತ್‌ಗಳೆಂದರೆ ನಾನೇ ? ಮೈ ಡಿಯರ್ ಚಿಲ್ಡ್ರನ್.

**ಮಕ್ಕಳು :** ಓ... ನೀನು ಗ್ರಾಮರ್ ಅ !

**ವ್ಯಕ್ತಿ :** ನೋ ನೋ ನಾನು ಗೈಡ್.

**ಮಕ್ಕಳು :** ಓ ಟೆಕ್ಸ್ಟ್ ಬುಕ್ಕು ಗೈಡು...

**ವ್ಯಕ್ತಿ :** ಅಲ್ಲ ಮಕ್ಕಳೇ ಅಲ್ಲ, ನಾನು ಹಿಂದೆ ಏನು ನಡೀತು ಈಗೇನು ನಡೀತಿದೆ, ಮುಂದೇನು ನಡೆಯುತ್ತೆ ಅಂತ ಹೇಳತೀನಿ. ಕಾಲಜ್ಞಾನ.

**ಮಕ್ಕಳು :** ಇವರು ಚಡ್ಡಿ ಯಾಕೆ ಹಾಕಿಲ್ಲ?

**ಇನ್ನೊಬ್ಬ :** ಇದ್ಯಾಕೆ ನಿಂತ್ಕೊಂಡೇ ಇದೆ ? ಲವ್ ಫೇಲ್ಯೂರ್ !

**ಗೈಡ್ :** ಐ ನೋ ಎವರಿಥಿಂಗ್, ಹೇಳ್ತೀನಿ, ಹೇಳ್ತೀನಿ.

**ಮತ್ತೊಬ್ಬ :** ಮ್ಯಾಮ್ ಕೈಲಿ ಬೆಟ್ಟ ಹತ್ತೋಕೆ ಆಗುತ್ತಾ !

**ಗೈಡ್ :** ಮಕ್ಕಳೇ ಈ ಸ್ಥಳ ಸ್ಟ್ಯಾಚ್ಯು ಬೆಟ್ಟ ಶಾಸನದ ಬಗ್ಗೆ, ಇಫ್ ಯು ಹ್ಯಾವ್ ಕೊಶ್ಚನ್ಸ್ ಐ ಹ್ಯಾವ್ ಆನ್ಸರ್ಸ್ ಯು ನೋ...

**ಮಗು :** ಹೆಸರೇನು?

**ಗೈಡ್ :** ಯು ಮೀನ್ ನೇಮ್... ಗೊಮಟೇಶ್ವರ !

**ಮಗು :** ಗೊಮಟೇಶ್ವರ ಅಂತ ಯಾಕೆ ಹೆಸರಿಟ್ಟರು ?

**ಮಗು :** ಇವರ್ದು ಬರ್ತ್‌ಡೇ ಯಾವಾಗ ?

**ಗೈಡ್ :** ಒನ್ ಮಿನಿಟ್ (ಜೇಬಿನಿಂದ ಪೇಪರ್ ರೋಲ್ ತೆಗೆಯುತ್ತಾನೆ) ಇವರ್ದು ಡೇ ಆಫ್ ಬರ್ತ್ ಉ...? ಮಕ್ಕಳೇ ಇವರ ನಿಜವಾದ ಒರಿಜಿನಲ್ ನೇಮ್ ಏನು ಗೊತ್ತಾ, ಬಾಹುಬಲಿ !

**ಮಕ್ಕಳು :** ಬಾಹು ಬಲಿ... ಬಾಹುಬಲಿ...

**ಮಗು :** ಇವರ ಫಾದರ್ ಹೆಸರೇನು ?

**ಗೈಡ್ :** (ನೆನಪು ಮಾಡಿ) ಪಾರ್ಶ್ವ ಗೀರ್ಶ್ವ ಯಾವ ನಾಥ್ ಅದು ಬೈದ್ಯನಾಥ್, ಬೈದ್ಯನಾಥ್.

**ಮಕ್ಕಳು :** ಬೈದ್ಯನಾಥ್ ಅ...

**ಗೈಡ್ :** ಊಂ.... Once upon a time there was a King who was living in the Forest, then... then... (ರೋಲ್ ಓಪನ್ ಮಾಡಿ ಮಾಹಿತಿಗಳನ್ನ ಹುಡುಕುತ್ತಾನೆ)

**ಮಕ್ಕಳು :** ಅಂಕಲ್ ನೀವು ಫೇಲ್ ಆಗಿದ್ರಾ !

**ಗೈಡ್ :** ನೋ ನೋ ಐಯಾಮ್ ಫಸ್ಟ್ ರ್‍ಯಾಂಕ್ ಥ್ರೂ ಔಟ್ ಮೈ ಕೆರಿಯರ್. ಓ.ಕೆ. ಓಕೆ. ಇವ್ರಪ್ಪ ರಾಜ. ಮಗನ್ನ ಯುದ್ಧಕ್ಕೆ ಕಳಿಸ್ತಾನೆ. ಡಿಷುಮ ಡಿಷುಂ ಫೈಟ್ ಬ್ಲೆಡ್ ಬ್ಲೆಡ್... ಯು ನೋ ಬ್ಲಡ್ ಈಸ್ ರೆಡ್ ಎಲ್ಲಿ ನೋಡಿದ್ರೂ ರಕ್ತ. ಅದನ್ನ ನೋಡಿ ಇವ್ನಿಗೆ, ಡಿಸ್‌ಗಸ್ಟೆಡ್ – (ಅಷ್ಟರಲ್ಲಿ 'ಶಟಪ್' ಎಂಬ ಶಬ್ದ ಕೇಳಿ ಬಂದು ಮಕ್ಕಳು ಮ್ಯಾಮ್ ಅಂತ ಅಂಜಿದರೆ ಗೈಡ್ ಹುಡುಗರನ್ನ ಅನುಮಾನದ ದೃಷ್ಟಿಯಿಂದ ನೋಡುತ್ತಾನೆ.)

**ಗೈಡ್ :** ಹೂ ಈಸ್ ದಟ್... ಯು... ನೀನಾ ! ಯು... (ಮಕ್ಕಳನ್ನು ಪರೀಕ್ಷಿಸುತ್ತಾ ಹೋಗುತ್ತಾನೆ)

**ಮಕ್ಕಳು** : ನಾನಲ್ಲ. ನೋ, ವಾಟ್ ಮೀ... (ಗೈಡ್ ಹೀಗೆ ಹುಡುಗರನ್ನೆಳಕೊಂಡು ಬರೋವಷ್ಟರಲ್ಲಿ ಬಾಹುಬಲಿಯ ತದ್ರೂಪಿ ಹುಡುಗನೊಬ್ಬ ಕಂಡುಬರುತ್ತಾನೆ. ಗೈಡ್ ಚಕಿತಗೊಂಡು)

**ಗೈಡ್** : ನೀನು ಯಾರು, who are you ?

**ಬಾಹುಬಲಿ** : ನಾನಾ... ಹಾಯ್ ಫ್ರೆಂಡ್ಸ್ ಅಯಾಮ್ ಬಾಹುಬಲಿ... ಹೇ ಕತ್ತೆ ಸುಳ್ಳು ಸುಳ್ಳೇ ಹೇಳ್ತೀಯ.

**ಗೈಡ್** : ಓ ಮೈ ಗಾಡ್... (ಅಲ್ಲಿಯವರಿಗೆ ಇದ್ದ ಬೃಹತ್ ಶಿಲ್ಪವಿರುವುದಿಲ್ಲ) ಭೂತ, ದೆವ್ವ, ಕಾಪಾಡಿ... ಕಾಪಾಡಿ... (ಓಡಿ ಹೋಗುತ್ತಾನೆ) (ಮಕ್ಕಳು ಕುತೂಹಲ, ಭಯದಿಂದ ದೂರ ನಿಂತು ನಡುಗುತ್ತಿರುತ್ತಾರೆ.)

**ಬಾಹುಬಲಿ** : ಯಾಕೆ ದೂರ ನಿಂತುಬಿಟ್ರಿ! ಭಯಾನಾ! ಬನ್ನಿ.. ನಾನು ಏನು ಮಾಡಲ್ಲ, ಬನ್ನಿ (ಮಕ್ಕಳು ನಿದ ನಿಧಾನವಾಗಿ... ಅನುಮಾನಿಸುತ್ತಾ)

**ಮಕ್ಕಳು** : ನಿಜವಾಗ್ಲೂ ನೀನು ಬಾಹುಬಲಿನಾ!

**ಬಾಹುಬಲಿ** : ಹೌದು ಕಣ್ರೋ, ನಾನೇ... I am not duplicate. Original. ನಾನೇ. Original.

**ಮಕ್ಕಳು** : ನಿಂಗೆ ಇಂಗ್ಲೀಷ್ ಬರುತ್ತಾ!

**ಬಾಹುಬಲಿ** : ಓ ಯೆಸ್, ಐ ಸ್ಪೀಕ್ ನಾಟ್ ಓನ್ಲಿ ಇಂಗ್ಲೀಷ್, ಅದರ್ ಲ್ಯಾಂಗ್ವೇಜಸ್ ಟೂ. ಯು ನೋ! ತೆಲುಗು, ತುಳು, ಹಿಂದಿ, ಮಲಯಾಳಂ ಎಲ್ಲಾ ಬರುತ್ತೆ!

**ಮಕ್ಕಳು** : ನೀನು ಸ್ಕೂಲ್‌ಗೆ ಹೋಗಿದ್ಯಾ!

**ಮಗು ೧** : ಇಂಗ್ಲೀಷ್ ಮೀಡಿಯಂ ಆ...

**ಬಾಹುಬಲಿ** : ಇಲ್ಲ ಕಣ್ರಪ್ಪ, ಸ್ಕೂಲ್‌ನಲ್ಲಿ ಕಲಿತದ್ದು ಕನ್ನಡ ಮಾತ್ರ. ಆದ್ರೆ, ಇಲ್ಲಿಗೆ ನನ್ ನೋಡೋಕೆ ನೂರಾರು ವರ್ಷಗಳಿಂದ ಎಷ್ಟೋ ರಾಜ್ಯ, ದೇಶಗಳಿಂದ ಬರ್ತಾರಲ್ವ! ಅವರಾಡೋ ಮಾತು ಕೇಳಿ, ಕೇಳಿ ನನಗೆ ಎಲ್ಲಾ ಭಾಷೆಗಳು ಬಂದ್ ಬಿಟ್ಟವೆ.

**ಮಕ್ಕಳು** : ಓ ಮಾರ್ವಲೆಸ್, ಫೆಂಟಾಸ್ಟಿಕ್... ಹೌ ನೈಸ್...!

**ಬಾಹುಬಲಿ** : ತಿಂತ ತಿಂತಾ ರೋಗ, ಹಾಡ್ತಾ ಹಾಡ್ತಾ ರಾಗ, ಕೇಳಿಲ್ವ ಗಾದೆ!

**ಮಕ್ಕಳು** : ನಿಮ್ಮನ್ನ ಕೆಲವು ಕ್ವಶ್ಚನ್ಸ್ ಕೇಳಬಹುದಾ ?

**ಬಾಹುಬಲಿ** : ಖಂಡಿತ ಕೇಳಿ... ಮಕ್ಕಳು ಕ್ವಶ್ಚನ್ ಕೇಳಿದ್ರೇನೆ ಚೆಂದ ?

**ಮಕ್ಕಳು** : ಮತ್ತೆ ಮೇಡಂ ಕ್ಲಾಸಲ್ಲಿ ಕ್ವಶ್ಚನ್ ಕೇಳಿದ್ರೆ ಬೈಯ್ತಾರೆ!

**ಬಾಹುಬಲಿ** : ನೋ... ನೋ... ನಾನ್ ಬೈಯಲ್ಲ, ಹಿಸ್ಟರಿ ಈಸ್ ಫುಲ್ ಆಫ್ ಕ್ವಶ್ಚನ್ಸ್! ಓ.ಕೆ. ಕೇಳಿ ನಿಮ್ ಕ್ವಶ್ಚನ್ಸ್ ಏನು ?

**ಮಕ್ಕಳು** : ೧. ನೀವು ಯಾಕೆ ಕಲ್ಲಾಗಿ ನಿಂತ್ಕಂಡ್ರಿ!
೨. ನಿಮ್ಗೆ ಕಾಲು ನೋಯ್ತಾ ಇದಾ!
೩. ಚಾಕ್ಲೇಟ್ ಬೇಕಾ!
೪. Why don't you wear ?

**ಬಾಹುಬಲಿ** : ಮಕ್ಕಳೇ ಅದೊಂದು ದೊಡ್ಡ ಕತೆ. ನಾನೊಂದು ಬ್ಲಂಡರ್ ಮಾಡಿಬಿಟ್ಟು, ಆ ತಪ್ಪಿಗೆ ಶಿಕ್ಷೆಯಾಗಿ ಹೀಗೆ ಧ್ಯಾನ ಮಾಡ್ಕೊಂಡು ನಿಂತಿದ್ದೀನಿ.

**ಮಕ್ಕಳು** : What mistake, ಏನದು ? Tell us please.

**ಬಾಹುಬಲಿ** : ಓ.ಕೆ. ಹೇಳ್ತೀನಿ... ನಾನು ನನ್ನ ಅಣ್ಣ ಭರತ ನನ್ನ ನೂರೊಂದು ತಮ್ಮಂದಿರು.

**ಮಕ್ಕಳು** : ಹಂಡ್ರೆಡ್ ಒನ್ ಬ್ರದರ್ಸ್... ಓ ಮೈಗಾಡ್.. ಅಷ್ಟು ಜನಾನಾ!

**ಬಾಹುಬಲಿ** : ಅಫ್‌ಕೋರ್ಸ್, ನಾವು ಇನ್ನು ಹುಡುಗರಾಗಿದ್ದಾಗಲೇ ಒಂದು ದಿನ ನಮ್ಮ ಅಪ್ಪ ಆದಿನಾಥ ನಮ್ಮನ್ನೆಲ್ಲ ತನ್ನ ಆಸ್ಥಾನಕ್ಕೆ ಕರೆಸ್ದ (ದೃಶ್ಯ ಬದಲಾಗುತ್ತದೆ. ಆದಿನಾಥನ ಆಸ್ಥಾನ. ರಾಜ, ಮಂತ್ರಿ, ಸೇವಕರು ಇದ್ದಾರೆ. ಅಲ್ಲಿ ನೆಲದ ಮೇಲೆ ನೂರಾರು ತರಹದ ಆಟಿಕೆಗಳು, ಯುದ್ಧ ಸಾಮಗ್ರಿಗಳು, ಕಿರೀಟ, ಕತ್ತಿಗಳು ಹರಡಲ್ಪಟ್ಟಿದ್ದವು).

**ದೃಶ್ಯ- ೨**

(ಮೇಳ ರಂಗದೊಳಗಿಂದ ಪರಾಕಿನ ಧ್ವನಿ ಕೇಳುತ್ತಿದೆ. ಇಬ್ಬರು ಪಹರೆಯವರು, ರಂಗದ ಒಂದೊಂದು ಮೂಲೆಯಲ್ಲಿ ಈಟಿಯನ್ನು ಹಿಡಿದುಕೊಂಡು ನಿಂತಿರುತ್ತಾರೆ.)

ರಾಜಾಧಿರಾಜ, ರಾಜ ಮಾರ್ತಾಂಡ
ತ್ರಿಭುವನ ಮಲ್ಲ, ರಣ ಪ್ರಚಂಡ




ಪ್ರಜಾಪಾಲನ ಪಿತೃ
ಶ್ರೀಶ್ರೀಶ್ರೀ ಆದಿನಾಥ ಚಕ್ರವರ್ತಿಗಳು ಆಗಮಿಸುತ್ತಿದ್ದಾರೋ...

**ದೊರೆ** : (ಆಗಮನ) ಎಲ್ಲವೂ ಸಿದ್ಧವಾಗಿದೆಯೇ ಅಮಾತ್ಯರೇ ?

**ಮಂತ್ರಿ** : ಮಹಾಪ್ರಭು, ತಮ್ಮ ಇಚ್ಛೆಯಂತೆ ಅದೋ, ಆ ಪ್ರಾಂಗಣದಲ್ಲಿ ಮಕ್ಕಳಿಗೆ ಇಷ್ಟವಾಗುವ ಆಟಿಕೆ, ಬೊಂಬೆ, ಸಿಹಿ, ಹಣ್ಣುಗಳ ಮಧ್ಯೆ ರಾಜಲಾಂಛನಗಳಾದ ಕಿರೀಟ ಮತ್ತು ಖಡ್ಗವನ್ನು ಇಟ್ಟಿದ್ದೇನೆ ಪ್ರಭು.

**ದೊರೆ** : ಮಂತ್ರಿಗಳೇ, ಈ ರಾಜ್ಯಭಾರ ಭಾರವನ್ನು ಹೆಗಲು ಹೊರಲು ಈಕರಿಸುತ್ತಿದೆ. ಅದಕ್ಕೆ ನನ್ನ ಮಕ್ಕಳಲ್ಲಿ ಸಿಂಹಾಸನಕ್ಕೆ ಸೂಕ್ತನಾದವನನ್ನು ಆರಿಸಲು ಈ ಆಟವನ್ನು ಏರ್ಪಡಿಸಿದ್ದೇನೆ.

**ಮಂತ್ರಿ** : ಪ್ರಭು ಅಪ್ಪಣೆಯಾದರೆ ರಾಜಕುಮಾರರನ್ನು ಕರೆಸಿಬಿಡುತ್ತೇನೆ.

**ದೊರೆ** : ಈ ಉಪಾಯದ ಬಗ್ಗೆ ತಮ್ಮ ಒಪ್ಪಿಗೆ ಇದೆ ತಾನೆ ?

**ಮಂತ್ರಿ** : ತಮ್ಮನ್ನು ಈ ಆಟದ ಮೂಲಕವೇ ತಮ್ಮ ತಂದೆಯವರು ಸಿಂಹಾಸನಕ್ಕೆ ಆರಿಸಿದ್ದನ್ನು ನಾನು ಮರೆತಿಲ್ಲ ಪ್ರಭು.

**ದೊರೆ** : ಶುರುವಾಗಲಿ.

**ಮಂತ್ರಿ** : ಯಾರಲ್ಲಿ! ರಾಜಕುಮಾರರನ್ನು ಕರೆತನ್ನಿ.

**ಸೇವಕರು** : ಅಪ್ಪಣೆ ಪ್ರಭು (ಹೋಗುವನು).

(ನೇಪಥ್ಯದಲ್ಲಿ ಸದ್ದಾಗುವುದು, ಹತ್ತಾರು ಜನ ಹುಡುಗರು, ದುಡುದುಡನೆ ಬಂದು ರಾಜನಿಗೆ ನಮಸ್ಕರಿಸುತ್ತಾರೆ. ಅವರನ್ನು ಕಂಡು ಮಂತ್ರಿ)

**ಮಂತ್ರಿ** : ರಾಜಕುಮಾರರೇ ತಮಗೆ ಇಷ್ಟವಾದ ವಸ್ತುಗಳನ್ನು ತಾವು ತೆಗೆದುಕೊಳ್ಳಬಹುದು. ತಮಗಾಗಿ ಪ್ರಭುಗಳು ಇವುಗಳನ್ನು ಇಲ್ಲಿ ಇರಿಸಿದ್ದಾರೆ.

**ರಾಜಪುತ್ರರು** : ಹೌದಾ! ಎಯ್ ನಡೀರೋ (ಓಡಿ ತಮಗೆ ಬೇಕಾದ ವಸ್ತುಗಳನ್ನು ತೆಗೆದುಕೊಳ್ಳುತ್ತಾರೆ. ಒಬ್ಬ ಹುಡುಗ ಕಿರೀಟವನ್ನು ತೆಗೆದುಕೊಂಡು ತಲೆಗೇರಿಸಿಕೊಳ್ಳುತ್ತಾನೆ. ಮತ್ತೊಬ್ಬ ಖಡ್ಗ ತೆಗೆದುಕೊಂಡು ಝಳಿಸುತ್ತಾನೆ. ಇತರರು ತಮಗೆ ಬೇಕಾದ ವಸ್ತು ಹಣ್ಣುಗಳನ್ನು ತೆಗೆದುಕೊಂಡು ಮತ್ತೊಂದು ದಿಕ್ಕಿನಲ್ಲಿ ಓಡಿ ಹೋಗುತ್ತಾರೆ. ಕಿರೀಟ ತೆಗೆದುಕೊಂಡವನು, ಕತ್ತಿ ಬೇಕೆಂದು – ಕತ್ತಿ ತೆಗೆದುಕೊಂಡವನು ಕಿರೀಟ ಬೇಕೆಂದು ಪರಸ್ಪರ ಬೇಡಿಕೆ ಮಂಡಿಸುತ್ತಾರೆ.)

**ಭರತ** : ಏಯ್ ಆ ಕತ್ತಿ ಕೊಡೋ!

**ಬಾಹುಬಲಿ** : ಏಯ್ ನೀ ಆ ಕಿರೀಟ ಕೊಡೋ!

**ಭರತ** : ಕಿರೀಟ ಇದ್ದವರ ಹತ್ತಿರ ಕತ್ತಿ ಇರಬೇಕು ಗೊತ್ತ.

**ಬಾಹುಬಲಿ** : ಕತ್ತಿ ಇದ್ದರೆ ಕಿರೀಟ ತಾನಾಗೇ ಬರ್ತದೆ ಗೊತ್ತ (ಕತ್ತಿ ತಿರುಗಿಸುತ್ತಾನೆ) (ಬಾಹುಬಲಿ, ಭರತ ಕತ್ತಿ ಕಿರೀಟಕ್ಕಾಗಿ ಕಚ್ಚಾಡುವುದನ್ನು ಕಂಡು ರಾಜ ಖಿನ್ನನಾದವನಾಗಿ)

**ದೊರೆ** : ಮಂತ್ರಿಗಳೇ, ಈ ಹಿಂದೆ ಹೀಗಾಗಿರಲೇ ಇಲ್ಲ ಮತ್ತು ಕತ್ತಿಯನ್ನು ವಂಶಪಾರಂಪರ್ಯವಾಗಿ ಒಬ್ಬನೇ ತೆಗೆದುಕೊಂಡ ಉದಾಹರಣೆಗಳುಂಟು.

**ಮಂತ್ರಿ** : ಪ್ರಭು, ಇದು ಉಭಯ ಸಂಕಟದ ಪ್ರಶ್ನೆ ! ಬಹುಶಃ ಕುಲದ ಗುರುಗಳಾದ ಯತಿಗಳು ಈ ಧರ್ಮದ್ರೋಹವನ್ನು ಬಿಡಿಸಬಲ್ಲರು !

**ದೊರೆ** : ಬೇಗ ಅವರಿಗೆ ಪತ್ರ ಕಳುಹಿಸಿ. ನನ್ನ ಮಕ್ಕಳಿಬ್ಬರು ಸಿಂಹಾಸನಕ್ಕೆ ಕತ್ತಿ ಹಿಡಿದು ಒಬ್ಬರು ಇನ್ನೊಬ್ಬರಿಗೆ ಶತ್ರುವಾಗುವುದನ್ನು ನೆನೆದರೆ ಸಾಕು, ಹೃದಯ ಹಿಂಡಿದ ಹಾಗಾಗುತ್ತದೆ.

**ಮಂತ್ರಿ** : ಪ್ರಭು, ಯತಿಗಳು ಅಭಿಪ್ರಾಯ ಕಳುಹಿಸಿದ್ದಾರೆ. ಕತ್ತಿ ಕಿರೀಟಕ್ಕೆ ಅಧೀನವಾಗಿರಬೇಕು, ಹಾಗೆಯೇ ಕಿರೀಟ ಕತ್ತಿಗೆ ಒಡೆಯನಾಗಿರುವುದು ಧರ್ಮ, ಅದೇ ನಡೆಯಬೇಕು ಎಂದು ಅಪ್ಪಣೆಯಾಗಿದೆ ಪ್ರಭು!

**ದೊರೆ** : ನನ್ನನ್ನು ನನ್ನ ರಾಜ್ಯವನ್ನು ಪಾರು ಮಾಡಿದರು. ಮಗು ಬಾಹುಬಲಿ ಬಾ ಇಲ್ಲಿ. ಅವ ನಿನ್ನಣ್ಣ ಭರತ ಅಲ್ವ! ಕತ್ತಿ ಅವನಿಗೆ ಕೊಟ್ಟುಬಿಡು ಮಗು. (ಕತ್ತಿ ನೀಡುವನು. ಭರತ ಖುಷಿಗೊಳ್ಳುತ್ತಾನೆ. ಬಾಹುಬಲಿ ನಿರಾಶೆಯಿಂದ ರಾಜ ಕರೆಯುತ್ತಿದ್ದರೂ ಹೊರಟೇಹೋಗುತ್ತಾನೆ. ಭರತ ಕಿರೀಟ ತೊಟ್ಟು ಕತ್ತಿ ವರಸೆ ಪ್ರದರ್ಶಿಸುತ್ತಾನೆ) ಮಗ... ಬಾಹುಬಲಿ... ಈ ಆಟಿಕೆಯನ್ನು ತೆಗೆದುಕೋ... (ತೆರೆ ಹಿಂದೆ ಡಂಗೂರ ಸಾರುತ್ತಾರೆ. ರಾಜ್ಯದ ಯುವರಾಜನನ್ನಾಗಿ ಕುಮಾರ ಭರತನನ್ನು ಆರಿಸಲಾಗಿದೆ ಎಂದು ಪ್ರಭುಗಳು

ತಿಳಿಸಿದ್ದಾರೆ. ಕೇಳ್ರಪ್ಪೋ ಕೇಳ್ರಿ) – (ವಿಜಯ ದುಂದುಭಿ ಸದ್ದು ಮೊಳಗುತ್ತದೆ).

ದೃಶ್ಯ – ೩

(ಮಕ್ಕಳು ಬಾಹುಬಲಿಯ ಸುತ್ತ ಕುಳಿತಿದ್ದಾರೆ. ಬಾಹುಬಲಿಯನ್ನು ಕುರಿತು)

**ಮಗು ೨ :** ಡ್ಯಾಮಿಟ್ ದಿಸ್ ಈಸ್ ರಾಂಗ್.

**ಮಗು ೩ :** ಪಾಪ ಅಲ್ವ...

**ಮಗು ೪ :** ನಿಂಗೆ ಅಳು ಬಂತಾ...!

**ಮಗು ೫ :** ಅಯ್ಯೋ ಪಾಪ ಅಲ್ವ...

**ಮಗು ೨ :** ಭರತ ಈಸ್ ಬ್ಯಾಡ್ ಬಾಯ್!

**ಮಗು ೩ :** ಕತ್ತೀನೆ ಶ್ರೇಷ್ಠ ಅಲ್ವ! ನೀನು ಕೊಡ ಬಾರದಿತ್ತು.

**ಮಗು ೨ :** I don't like your father.

**ಬಾಹುಬಲಿ :** ಹೌದು ನನಗೂ ಬೇಸರವಾಗಿತ್ತು. ಅಂದಿನಿಂದಲೇ ನನಗೆ ಭರತನ ಮೇಲೆ ಅಸೂಯೆ ಬೆಳೀತು ಅಂತ ಕಾಣುತ್ತೆ. ಅದೇ ತಪ್ಪಾಗಿದ್ದು.

**ಮಕ್ಕಳು :** ತಪ್ಪು ಮಾಡಿದ್ದು ಭರತ ಅಲ್ವ... ಮತ್ತೇ ನೀನು ತಪ್ಪು ಅಂತೀಯ!

**ಬಾಹುಬಲಿ :** ನಂತರ ಕೆಲ ವರ್ಷಗಳಲ್ಲಿ ನಮ್ಮ ತಂದೆ ಭರತನಿಗೆ ಪಟ್ಟ ಕಟ್ಟಿ ನಮಗೂ ಒಂದೊಂದು ರಾಜ್ಯ ಕೊಟ್ಟು ತಪಸ್ಸು ಮಾಡಲು ಕಾಡಿಗೆ ಹೊರಟೇಹೋದ್ರು.

**ಮಕ್ಕಳು :** ಆಗ ನೀನು ಭರತನನ್ನು ಬಾಕ್ಸಿಂಗ್ ಮಾಡಿ ಕತ್ತಿ ಕಿರೀಟ ಕಿತ್ಕೊಬೇಕಿತ್ತು. (ಅಷ್ಟರಲ್ಲಿ ಒಂದು ಹುಡುಗ ಎದ್ದು ನಿಂತು ಊಂ ಊಂ ನನ್ನ ಚಾಕಲೇಟು ಕಿತ್ಕೊಂಡ ಅಂತ ಕಂಪ್ಲೇನ್ ಮಾಡ್ತಾನೆ)

**ಬಾಹುಬಲಿ :** ಮಗು ಅವನ್ಯಾಕೆ ನಿನ್ನ ಹತ್ರ ಕಿತ್ಕೊಂಡ.

**ಮಗು :** ಅವನ ಹತ್ತಿರ ಎರಡಿದ್ರೂ ನನಗೆ ಕೊಡಲ್ಲ ಅಂದ. ಅದಕ್ಕೆ ಕಿತ್ಕೊಂಡೆ... ಸಾರಿ.

**ಬಾಹುಬಲಿ :** ನೀನು ಅವನು ಕಿತ್ತುಕೊಳ್ಳೊ ಮೊದಲೇ ಕೊಟ್ಟಿದ್ದರೆ, ಅವನು ಕಿತ್ತುಕೊಳ್ತಾನೆ ಇರಲಿಲ್ಲ, ಅಲ್ವ.

**ಮಗು :** ಹೌದೌದು. ಐ ಟೂ ಸಾರಿ.

**ಬಾಹುಬಲಿ :** ನಾನು ನಿನ್ನ ಹಾಗೇ ಮಾಡಿದ್ರೆ ಈ ಒಂದು ಸಾವಿರ ವರ್ಷಗಳ ಕಾಲ ಹೀಗೆ ಬೆತ್ತಲಾಗಿ ನಿಂತು ನನ್ನ ನಾನೇ ಶಿಕ್ಷಿಸಿಕೊಳ್ಳಬೇಕಿರಲಿಲ್ಲ.

**ಮಕ್ಕಳು :** ಏಕೆ? ಏನಾಯ್ತು?

**ಬಾಹುಬಲಿ :** ಭರತನಿಗೆ ಪಟ್ಟವಾದ ಮೇಲೆ ಅವನ ನಾಡಿಗೆ ಅವನು, ನನ್ನ ನಾಡಿಗೆ ನಾನು ನಮ್ಮ ನಮ್ಮ ಪಾಲಿನ ರಾಜ್ಯಗಳನ್ನ ಪಾಲನೆ ಮಾಡ್ತಾ ಇರ್ಬೇಕಾದ್ರೆ ಒಂದು ದಿನ. (ದೃಶ್ಯ ಬದಲಾಗುವುದು)

ದೃಶ್ಯ–೪

(ರಾಜನ ಆಸ್ಥಾನ ಸಂಭ್ರಮ ಸಂತೋಷಗಳಿಂದ ತುಂಬಿಹೋಗಿದೆ. ಎಲ್ಲಾ ಕಡೆ ಉತ್ಸಾಹ-ಕೇಕೆ-ಖುಷಿಯ ವಾತಾವರಣ...)

**ಡಂಗುರದವ :** ಕೇಳ್ರಪ್ಪೋ ಕೇಳ್ರಿ... ನಿನ್ನೆ ರಾತ್ರಿ ಕಲ್ಲು ಕರಗುವ ಹೊತ್ತಿನಲ್ಲಿ ನಕ್ಷತ್ರವೊಂದು ಸರ್ರೆಂದು ಜಾರಿ ಭರತ ಮಹಾರಾಜರ ಆಯುಧಾಗಾರದಲ್ಲಿ ಚಕ್ರರತ್ನವಾಗಿ ಕಾಣಿಸಿಕೊಂಡಿದೆ... ಚಕ್ರರತ್ನವನ್ನು ಸಕಲ ರಾಜ ಗೌರವಗಳೊಂದಿಗೆ ಮಹಾಪ್ರಭುಗಳು ಕರೆ ತರುತ್ತಿದ್ದಾರೆ... ಮೆರವಣಿಗೆ ಈಗಾಗಲೇ ಹೊರಟಿದೆ... ಕೇಳ್ರಪ್ಪೋ ಕೇಳ್ರಿ... ಮಹಾಪ್ರಭುಗಳು ಭೂಖಂಡದ ಮೇಲೆ ಯುದ್ಧವನ್ನ ಸಾರಿದ್ದಾರೆ... (ಅಷ್ಟರಲ್ಲಿ ಒಂದು ದೊಡ್ಡನೆ ಚಕ್ರಕ್ಕೆ ಒಬ್ಬ ವ್ಯಕ್ತಿ (ಹುಡುಗ)ಯನ್ನು ಕಟ್ಟಿರುತ್ತಾರೆ, ಆತ ದೇವತೆಯಂತೆ ಅಲಂಕೃತ ವಾಗಿರುತ್ತಾನೆ. ಚಕ್ರವನ್ನು ಉರುಳಿಸಿಕೊಂಡು – ಚಕ್ರರತ್ನಕ್ಕೆ ಜೈ – ಭರತ ಮಹಾರಾಜರಿಗೆ ಜೈ ಎಂದು ಘೋಷಣೆಗಳೊಂದಿಗೆ ಕರಗದ ಗುಡುಗಿಸಿಕೊಂಡು ಕರೆದೊಯ್ಯುತ್ತಾರೆ)

**ದಾರಿಹೋಕ :** ಇದೇನ್ಲಾ ಇಂಗೈತೆ... ಚಕ್ರದಂಗವನೆ ಮನುಷ್ಯ.

**ಇನ್ನೊಬ್ಬ :** ಮನುಷ್ಯನಲ್ಲೋ ಲೇ ಪೆಕರ ಅವರೇ ಯುದ್ಧ ದೇವತೆಯಂತೆ!

**ದಾರಿಹೋಕ :** (ಅವಸರದಲ್ಲಿ ಹೋಗುವ ಸೈನ್ಯಾಧಿ ಕಾರಿಯನ್ನ ತಡೆಗಟ್ಟಿ) ಸ್ವಾಮಿ, ಸ್ವಾಮಿ ಚಕ್ರರತ್ನ ವೆಂದರೇನು?

**ಸೈನ್ಯಾಧಿಕಾರಿ :** ಅದು ದೇವರ ದೂತ. ಮಹಾಪ್ರಭು ಗಳು ಇಡೀ ಭೂಮಂಡಳಕ್ಕೆ ಚಕ್ರಾಧಿಪತಿ ಆಗ್ಬೇಕು ಅಂತ ದೇವರ ಆಜ್ಞೆ ಆಗಿದೆ. ಅದಕ್ಕೆ ಚಕ್ರರತ್ನ ಅವತರಿಸಿದೆ (ಹೊರಡುತ್ತಾನೆ).

**ದಾರಿಹೋಕ :** ಅಂಗಾದ್ರೆ ಇನ್ನು ಮುಂದೆ ಯುದ್ಧ ನಡದೇ ತೀರುತ್ತಾ... ಅಯ್ಯೋ ನನ್ನ ಸ್ವಂತ ತಮ್ಮ ಸೈನ್ಯದಲ್ಲಿ ಅವನಲ್ಲಪ್ಪೋ... (ಅಳುತ್ತಾನೆ)

(ಅಷ್ಟರಲ್ಲಿ ವಿಜಯದುಂದುಭಿಗಳು ಮೊಳಗುತ್ತವೆ. ಕುದುರೆ-ಆನೆ-ಕಾಲಾಳುಗಳುಳ್ಳ ಸೈನ್ಯ ಮಾರ್ಚ್ ಫಾಸ್ಟ್ ಮಾಡುತ್ತಾ ಬರುತ್ತವೆ. ಚಕ್ರರತ್ನ ಸೈನ್ಯದ ಮಧ್ಯ ನಡೆದು ಬರುತ್ತಿರುತ್ತಾನೆ.)

ಹಾಡು

ನುಗ್ಗಿ ನಡೆ ಮುಂದೆ ನುಗ್ಗಿ ನಡೆ ಮುಂದೆ
ಚಕ್ರರತ್ನ ಉದಿಸಿದೆ! ಕಣ್ಣ ಮುಂದೆ ಕನಸಿದೆ
।ನುಗ್ಗಿ।

ನುಗ್ಗಿದವು ಕಾಲಾಳು ಕೆನೆದವು ಕುದುರೆಗಳು
ಘೀಳಿಟ್ಟವು ಆನೆಗಳು ಕಡಿದು ಬಿದ್ದವೊ ರಥಗಳು
ತರಗೆಲೆಗಳೋ ಶಿರಗಳು ಯುದ್ಧದ
ಬಿರುಗಾಳಿಯಲ್ಲಿ

ಮಗಧರಾಜರು ಮಡಿದರು
ಕಾಳಿಂಗದವರು ಕಾಲು ಕಿತ್ತರು
ಪಲ್ಲವರೋ ಪರಾರಿ ಗೋಳಿಟ್ಟರು ಗಂಗರು

## ಒರಗೆಯವರು

ಒಂದು ಸಂಪಿಗೆಯ ಮರವೂ
ಒಂದು ಮಹಾಗನಿ ಮರವೂ
ಒಂದರ ಪಕ್ಕ ಒಂದು ಬೆಳೆದು
ನಿಂತಿದ್ದವು, ಎರಡೂ ಒಂದೇ ಎತ್ತರ

ಬೆಳಗಿನಲ್ಲಿ ಸಂಪಿಗೆಯ ಮರವು ತನ್ನ
ದಟ್ಟ ನೆರಳನ್ನು ಮಹಾಗನಿ ಮರಕ್ಕೆ
ಕವಿದು ಮೇಲೆ ಒಂದಾಳೆತ್ತರದ
ನೆರಳನ್ನು ನಿರ್ಮಿಸುತ್ತಿತ್ತು

ಸಂಜೆಯಲ್ಲಿ ಮಹಾಗನಿ ಮರವು ತನ್ನ
ಕಡುದಟ್ಟ ನೆರಳನ್ನು ಸಂಪಿಗೆ ಮರಕ್ಕೆ
ಕವಿದು ಮೇಲೆ ಒಂದಾಳೆತ್ತರದ
ನೆರಳನ್ನು ನಿರ್ಮಿಸುತ್ತಿತ್ತು

ಮಧ್ಯಾಹ್ನ ಸಂಪಿಗೆಯ ಮರವು ತನ್ನ
ನೆರಳನ್ನು ತನ್ನಡಿ ನಿರ್ಮಿಸಿಕೊಳ್ಳುತ್ತಿತ್ತು
ಮಹಾಗನಿ ಮರವು ತನ್ನ ನೆರಳನ್ನು
ತನ್ನಡಿ ನಿರ್ಮಿಸಿಕೊಳ್ಳುತ್ತಿತ್ತು

ಅವೆರಡರ ಒಂದರೊಳಗೊಂದು ಬೆರೆತ
ಕೊಂಬೆಗಳ ನಡುಹಗಲ ನೆರಳು ಅವುಗಳ ಮಧ್ಯೆ
ಸ್ನೇಹದ ಸೇತುವೆಯೊಂದನ್ನು ನಿರ್ಮಿಸುತ್ತಿತ್ತು
ಸಂಜೆಗೂ ಮುಂಜಾವಿಗೂ ಅದರ ಅರಿವಿರಲಿಲ್ಲ

ಆರ್. ವಿಜಯರಾಘವನ್
ಪ್ರಗತಿ ಗ್ರಾಮೀಣ ಬ್ಯಾಂಕ್, ಗೀತಾ ರಸ್ತೆ, ರಾಬರ್ಟ್‌ಸನ್ ರಸ್ತೆ
ಕೆ.ಜಿ.ಎಫ್ - ೫೬೩ ೧೨೨, ಕೋಲಾರ ಜಿಲ್ಲೆ



*ಚೋಳರೆಲ್ಲರು ಛಿದ್ರವಾದರು*
*ಅಮೇರಿಕೆ ಅಂಗಾತ ಯುರೋಪು ಬರಿ ತೋಪು*
*ಹಾರಿದವು ರಾಕೇಟ್ ಸಿಡಿದವೆಷ್ಟೋ ಅಣುಬಾಂಬು*
*ನೀಲ ಜಲಗಾಳಿ ಪೂರ*
*ಚಕ್ರದ, ಸಿಡಿಮದ್ದಿನ ಗಾಳಿಯಲ್ಲಿ ಅಲ್ಲೋಲಕಲ್ಲೋಲ*
*ಆಕಾಶದಿ ಹಾರಾಡಿಸಿ ಜಯ ಧ್ವಜದ ಬಾವುಟ*
*ಭೂಖಂಡಕ್ಕೆ ಭರನಾದ ಭೂಪತಿ*
*ಚಕ್ರರತ್ನ ಸುತ್ತಿ ಬಂತು ಭೂಮಂಡಲವನ್ನ!*
*ಚಕ್ರರತ್ನ ಸುತ್ತಿ ಬಂತು ಭೂಮಂಡಲವನ್ನ!*
*ಗಡಿಯೊಳಗೆ ಇಡದ ಕಾಲು ನಿಂತೇಬಿಟ್ಟಿತ್ತು*
*ಚಕ್ರರತ್ನ! ಚಕ್ರವರ್ತಿಯೇ ಚಿಂತಾಮಗ್ನ!*

**ಭರತ** : ಎಲೈ ಚಕ್ರರತ್ನ! ನಿನ್ನ ಸಹಾಯದಿಂದ ಭೂಮಂಡಲದ ಎಲ್ಲಾ ದೇಶ ಕೋಶಗಳು ಜಯಿಸಿದವು ವಿಜಯ! ಬಿರುದಾಂಕಿತನಾಗುವ ವೇಳೆಯಲ್ಲಿ ಯಾಕಿ ಅಪಶಕುನ ?

**ಸೇನಾಧಿಪತಿ** : ಮಹಾಪ್ರಭು! ಭೂತಳವನ್ನು ಗೆದ್ದು ದಾಯಿತು. ಅತಲ ಸುತಲ ಪಾತಾಳ ತಳಾತಳಗಳನ್ನು ಗೆಲ್ಲಬೇಕೆಂದು ಚಕ್ರರತ್ನ ಸೂಚಿಸುತ್ತಿದೆಯೇ ?

**ಚಕ್ರರತ್ನ** : ಎಲೈ ಮೂರ್ಖ, ಇಡೀ ಭೂಮಂಡಲ ವನ್ನು ಗೆದ್ದಿದ್ದೇನೆ ಎಂದು ಅಹಂಕಾರ ಪಡಬೇಡ. ಬೇರೆ ಲೋಕದ ಮಾತಿರಲಿ – ಈ ಭೂತಳದಲ್ಲಿ ನೀನು ಜಯಿಸಬೇಕಿರುವ ರಾಜರು ಇನ್ನೂ ಉಳಿದಿದ್ದಾರೆ.

**ಭರತ** : ಯಾರು ನನ್ನ ಅಧಿಕಾರವನ್ನು ತಿರಸ್ಕರಿಸುವಂಥ ವೀರರು ?

**ಚಕ್ರರತ್ನ** : ನಿನ್ನ ತಮ್ಮಂದಿರು.

**ಭರತ** : ಅವರು ನನ್ನ ತಮ್ಮಂದಿರು.

**ಚಕ್ರರತ್ನ** : ಅವರು ನಿನ್ನ ತಮ್ಮಂದಿರೂ ಹೌದು ಸ್ವತಂತ್ರ ರಾಜರೂ ಹೌದು.

**ಭರತ** : ಮಹಾಮಂತ್ರಿಗಳೇ ಚಕ್ರರತ್ನ ಹೇಳಿದ್ದು ಕೇಳಿಸಿಕೊಂಡಿರಲ್ಲ. ಕೂಡಲೇ ಆ ತಮ್ಮಂದಿರಾದ ರಾಜರುಗಳಿಗೆ ಓಲೆಗಳನ್ನು ಕಳುಹಿಸಿ ಶರಣಾಗತಿ ಪ್ರಕಟಿಸಲು ತಿಳಿಸಿ – ಇಲ್ಲವೇ ಯುದ್ಧ ಅನಿವಾರ್ಯ ಎಂಬುದನ್ನು ಎಚ್ಚರಿಸಿ.

**ಮಹಾಮಂತ್ರಿ** : ಕ್ಷಮಿಸಿ ಪ್ರಭು. ತಮ್ಮ ಆಜ್ಞೆಯಂತೇ ಆಗ್ಲಿ...

(ದೃಶ್ಯ ಬದಲಾಗುವುದು)

**ದೃಶ್ಯ -೫**

**ಮಕ್ಕಳು** : ನನಗೆ ಮೊದಲೇ ಗೊತ್ತಿತ್ತು! ಅವನಿಗೆ ಕೊಬ್ಬು ಜಾಸ್ತಿ

**ಇನ್ನೊಂದು** : ನನಗೆ ಯುದ್ಧ ಅಂದ್ರೆ ಭಯನಪ್ಪ.

**ಮತ್ತೊಂದು** : ಟೀವಿ...ನಲ್ಲಿ ಇರಾಕ್ ಯುದ್ಧ ನೋಡಿ ನಾನು ಒಂದಿನ ಅತ್ತೇ ಗೊತ್ತ.

**ಮಕ್ಕಳು** : ನಿನಗೂ ಅಳು ಬಂದಿತ್ತಾ!

**ಬಾಹುಬಲಿ** : ಆ ಪತ್ರ ಬಾರದೆ ಇದ್ದರೆ ಚೆನ್ನಾಗಿತ್ತು!

**ಮಗು** : ನೀನು ಏನಂತ ಉತ್ತರ ಕೊಟ್ಟೆ?

**ಬಾಹುಬಲಿ** : ನಾನು ಕೂಡ ಅಹಂಕಾರಿಯಾಗಿದ್ದೆ. ಅಣ್ಣಾ ಅಂತ ತಲೆಬಾಗೊದಿಕ್ಕೆ ಸಿದ್ಧ. ರಾಜನಂಗೆ ಆಜ್ಞೆ ಮಾಡಿದ್ರೆ ಕೇರ್ ಮಾಡಲ್ಲ ಅಂತ ಜವಾಬ್ ಕೊಟ್ಟೆ.

**ಮಕ್ಕಳು** : ಮುಂದೆ ಏನಾಯ್ತು... ಯುದ್ಧ ಆಯ್ತಾ ... ನಿಮ್ ಹತ್ತಿರ ಬಾಂಬು ರಾಕೆಟ್ಟ ಇದ್ವಾ!

**ಬಾಹುಬಲಿ** : ಇಲ್ಲ ಕಣ್ರಪ್ಪ. Our war was old style you see!

**ಮಗು** : ಅದೇ ಕಣ್ರೋ AXN ಟೀವಿ ಸೀರಿಯಲ್ ನಲ್ಲಿ ಇರ್ತದಲ್ಲ ಅಂಗೆ!

**ಬಾಹುಬಲಿ** : ನಾನ್ಯಾಕೆ ಯುದ್ಧಕ್ಕೆ ಸಿದ್ಧನಾದೆ ಅಂತ ಯೋಚಿಸಿದಾಗಲೆಲ್ಲಾ ನಾಚಿಕೆ ಆಯ್ತದೆ. ಯುದ್ಧದ ದಿನ ಬಂತು. ಅತ್ತ ಅಕ್ಷೋಣಿ ಸೈನ್ಯ. ಇತ್ತ ಅಕ್ಷೋಣಿ ಸೈನ್ಯ. ನಾನು ಮತ್ತು ನಮ್ಮಣ್ಣ ಎದುರು ಬದುರಾದೆವು.

(ದೃಶ್ಯ ಬದಲಾಗುವುದು)

**ದೃಶ್ಯ-೬**

(ಶಂಖಧ್ವನಿ ರಂಗವನ್ನು ತುಂಬಿಕೊಳ್ಳುತ್ತದೆ. ರಂಗದ ಒಂದು ಬದಿಯಲ್ಲಿ ನಾಲ್ಕು ಕುದುರೆಗಳು, ಒಂದು ಆನೆ, ರಥ, ಛತ್ರಿ ಮತ್ತೊಂದು ತುದಿಯಲ್ಲಿ ಅಷ್ಟೇ ಕಾಲಾಳುಗಳು ನಿಂತಿರುತ್ತವೆ. ಭರತ ಮತ್ತು ಬಾಹುಬಲಿ ಯುದ್ಧ ಕವಚ ಗಳನ್ನು ತೊಟ್ಟು ಕತ್ತಿ ಹಿಡಿದು ನಿಂತಿದ್ದಾರೆ. ಅವರ ಬಳಿ ಪಕ್ಕದಲ್ಲೇ ಮಹಾಮಂತ್ರಿ – ಸೇನಾಧಿಕಾರಿ ನಿಂತಿದ್ದಾರೆ. ಭರತನ ಹಿಂದೆ ಚಕ್ರರತ್ನ ಬೆಂಗಾವಲಿಗೆ ಇದೆ.)

– ಅತ್ತ –

**ಮಂತ್ರಿ** : ಮಹಾಪ್ರಭು ಈಗಲೂ ಕಾಲ ಮಿಂಚಿಲ್ಲ, ಅಣ್ಣ ತಮ್ಮರ ನಡುವೆ ಯುದ್ಧವನ್ನು ತಡೆಯಲು ಸಾಧ್ಯವಿಲ್ಲವೇ ?

**ಭರತ** : ಮಂತ್ರಿಗಳೇ ಜಯದ ಉನ್ಮಾದದಲ್ಲಿ ನಾನು ಸಂಬಂಧ ಮರೆತಿಲ್ಲ. ಅವನಿಗೆ ನಾನು ಅಣ್ಣ ಅನ್ನುವುದನ್ನು ಯುದ್ಧದಲ್ಲಿ ನೆನಪು ಮಾಡಿಕೊಡಬೇಕು.

**ಮಂತ್ರಿ** : ಪ್ರಭು, ಸಂಧಾನಕ್ಕೆ ಪ್ರಯತ್ನಿಸಲೆ!

**ಭರತ** : ಮಂತ್ರಿಗಳೇ ಯುದ್ಧಭೂಮಿಯಲ್ಲಿ ಸಂಧಾನ ಯೋಚಿಸುವುದು ಹೇಡಿಯ ಲಕ್ಷಣ. ಜಗದೇಕವೀರನಾದ ನನ್ನನ್ನು ಹೇಡಿಯಾಗಿಸುವುದಕ್ಕೆ ನಿಮಗೆ ಮನಸ್ಸಾದರೂ ಹೇಗೆ ಬರುವುದು ? ಕದನ ಘೋಷಿಸಿ. ನೋಡಿ ಅವನ ಕಣ್ಣಲ್ಲಿ ಎಂಥ ರೋಷ ಕಾರುತ್ತಿದೆ.

– ಇತ್ತ –

**ಮಂತ್ರಿ** : ಮಹಾಪ್ರಭು, ಈಗಲೂ ಕಾಲ ಮಿಂಚಿಲ್ಲ, ಅಣ್ಣ ತಮ್ಮರ ನಡುವೆ ಈ ರಕ್ತಪಾತ ಅನಿವಾರ್ಯವೇ ? ಪ್ರಭು.

**ಬಾಹುಬಲಿ** : ಮಂತ್ರಿಗಳೇ, ಅವನು ನನ್ನ ಅಣ್ಣ ಭರತನಲ್ಲ. ಭೂಮಂಡಲ ಜಯಿಸಿದ ಚಕ್ರವರ್ತಿ. ಇರಲಿ ಅವನಿಗೆ ಕತ್ತಿಯಿಂದ ನನ್ನ ಗುರುತು ತೋರಿಸಿ ಕೊಡುತ್ತೇನೆ.

**ಮಂತ್ರಿ** : ಪ್ರಭು, ಸಂಧಾನಕ್ಕೆ ಪ್ರಯತ್ನಿಸಲೇನು ?

**ಬಾಹುಬಲಿ** : ಯುದ್ಧಕ್ಕೆ ಮೊದಲು ಸಂಧಾನ ಪ್ರಯತ್ನ ಧರ್ಮ ಬದ್ಧ – ಯುದ್ಧ ಸಮ್ಮುಖದಲ್ಲಿ ಸಂಧಾನ ಆತ್ಮವಂಚನೆಯಾಗುವುದು. ನಾನು ಸತ್ತರೂ ಚಿಂತೆಯಿಲ್ಲ, ನಾನು ವಚನಭ್ರಷ್ಟನಾಗಲಾರೆ. ಯುದ್ಧ ಆರಂಭಿಸಿ.

**ಮಂತ್ರಿ** : ಹಾಗೆಯೇ ಆಗಲಿ ಪ್ರಭು...



(ಇಬ್ಬರು ಮಂತ್ರಿಗಳು ರಂಗ ಮಧ್ಯಕ್ಕೆ ಬಂದು ಆಟಗಾರ ಕ್ಯಾಪ್ಟನ್‌ಗಳು ಪಂದ್ಯದ ಮುನ್ನ ಕೈ ಕುಲುಕುವ ಹಾಗೆ ನಟಿಸಿ... ಹಿಂತಿರುಗುತ್ತಾರೆ. ಬಾವುಟಗಳು ಹಾರುತ್ತಿವೆ, ಮದ್ದು ಗುಂಡುಗಳು ಸಿಡಿಯುತ್ತಿವೆ...

ಎರಡು ಸೈನ್ಯಗಳು ಇನ್ನೇನು ನುಗ್ಗಬೇಕು ಅನ್ನುವಷ್ಟರಲ್ಲಿ ಏಕಕಾಲಕ್ಕೆ ಸೈನ್ಯಗಳು ಶಸ್ತ್ರಾಸ್ತ್ರಗಳನ್ನು ದೊಪದೊಪ ನೆಲಕ್ಕೆ ಹಾಕುತ್ತವೆ. ಈ ಘಟನೆಯಿಂದ ಭರತ – ಬಾಹುಬಲಿ ವಿಚಲಿತರಾಗುತ್ತಾರೆ)

**ಮಂತ್ರಿಗಳು :** ಕ್ಷಮಿಸಬೇಕು ಪ್ರಭು. ಒಡಹುಟ್ಟುಗಳ ನಡುವಿನ ಯುದ್ಧದಲ್ಲಿ ಭಾಗಿಯಾಗಲಾರೆವು ! ನಮ್ಮನ್ನು ಕ್ಷಮಿಸಿ. ಇಲ್ಲ ಶಿಕ್ಷಿಸಿ. ತಮ್ಮ ಆಜ್ಞೆ.

**ಭರತ :** ಮಂತ್ರಿಗಳೇ ನಿಮಗೆ ಹುಚ್ಚೇ... ಯುದ್ಧ ಮುನ್ನಡೆಯಲಿ...

**ಮಂತ್ರಿ :** ಕ್ಷಮಿಸಬೇಕು... ಅದು ನಮ್ಮಿಂದ ಸಾಧ್ಯವಿಲ್ಲ.

**ಬಾಹುಬಲಿ :** ಮಂತ್ರಿಗಳೇ ಏನಾಗುತ್ತಿದೆ. ರಾಜಾಜ್ಞೆಯನ್ನು ಉಲ್ಲಂಘಿಸುವಿರೇನು ? ಯುದ್ಧ ಮುನ್ನಡೆಯಲಿ... ಇದು ರಾಜಾಜ್ಞೆ.

**ಮಂತ್ರಿ :** ಕ್ಷಮಿಸಬೇಕು ತಾವು ಬಯಸಿದರೆ ನಾವು ನಮ್ಮ ಪದವಿ-ಪ್ರಾಣಗಳನ್ನು ತೊರೆಯುತ್ತೇವೆಯೆ ಹೊರತು ಒಬ್ಬರನ್ನೊಬ್ಬರು ಕೊಲ್ಲುವುದಿಲ್ಲ. ಕ್ಷಮಿಸಿ.

**ಬಾಹುಬಲಿ :** ಮುಂದೇನು ?

**ಮಂತ್ರಿ :** ಈ ಪ್ರಶ್ನೆ ಎರಡು ರಾಜ್ಯಗಳ ಪ್ರಶ್ನೆ ಅಲ್ಲ ಪ್ರಭು... ಇಬ್ಬರು ಅಣ್ಣ-ತಮ್ಮಂದಿರ ಪ್ರಶ್ನೆ. ನಿಮ್ಮ ನಡುವಿನ ಕಲಹಕ್ಕೆ ಎರಡು ಕಡೆಯ ಅಮಾಯಕರನ್ನು ಬಲಿ ನೀಡುವುದು ಉಚಿತವಲ್ಲ ಎಂದು ನಮ್ಮ ಆಲೋಚನೆ. ಆದ್ದರಿಂದಲೇ ನೀವಿಬ್ಬರೇ ಹೋರಾಡಿ ವಿಜಯವನ್ನು ನಿರ್ಧರಿಸಿಕೊಳ್ಳಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

(ದೃಶ್ಯ ಬದಲಾಗುತ್ತದೆ)

**ದೃಶ್ಯ-೭**

**ಮಗು :** ನೀನು ಒಪ್ಪಿದೆಯಾ! What a wonderful idea !

**ಬಾಹುಬಲಿ :** ನಾನೊಪ್ಪಿದ್ದು ನನಗೆ ಅಚ್ಚರಿ ಅನ್ನಿಸಲಿಲ್ಲ, ನಮ್ಮಣ್ಣನೊಪ್ಪಿದನಲ್ಲ. ಆ ಗುಣಕ್ಕೆ ಬಹುಶಃ ನಾನು ಸೋತುಹೋದೆ.

**ಮಕ್ಕಳು :** ವಾಟ್, ಏನು ನೀನು ಸೋತು ಹೋದೆಯಾ...

**ಮಗು ೧ :** ಇದು ನಿಜ ಏನು ?

**ಮಗು ೨ :** ನೀನೆಂಗೆ ಸೋತು ಹೋದೆ ?

**ಮಗು ೩ :** ನೀನು ಗೆಲ್ಲಬೇಕಿತ್ತು.

**ಬಾಹುಬಲಿ :** ಇಲ್ಲ ಇಲ್ಲ ನಾನು ಸೋಲಲಿಲ್ಲ, ಅವನು ಗೆದ್ದ.

**ಮಗು :** ಅದು ಹೇಗೆ ಸಾಧ್ಯ ? How is it possible ?

**ಮಗು ೨ :** ನೀನು ಹೇಗೆ ಯುದ್ಧ ಮಾಡಿದೆ... WWF ತರಹ ಫೈಟ್ ಮಾಡಿದ್ಯಾ...

**ಬಾಹುಬಲಿ :** ಮಂತ್ರಿಗಳ ವಿವೇಕದ ಮಾತನ್ನು ನಾವು ಅಂಗೀಕರಿಸಿದೆವು. ಮೂರು ರೀತಿಯ ಪೈಪೋಟಿ ಏರ್ಪಡಿಸಲಾಯಿತು.




**ಮಕ್ಕಳು :** ಹೌದಾ ! ...

**ಬಾಹುಬಲಿ :** ಮೊದಲನೆಯದು. ದೃಷ್ಟಿ ಯುದ್ಧ.

**ಮಗು :** ದೃಷ್ಟಿಯುದ್ಧನಾ ! (ಅರ್ಥವಾಗದೆ ಚಕಿತರಾಗುತ್ತಾರೆ)

**ಬಾಹುಬಲಿ :** (ಇಬ್ಬರು ಮಗುವನ್ನು ಕರೆದು) ನೀನು ನನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡಬೇಕು. ಯಾರು ರೆಪ್ಪೆ ಬೇಗ ಆಡಿಸುತ್ತಾರೋ ಅವ್ರು ಸೋತ ಹಾಗೆ...

(ಬಾಹುಬಲಿ ಮತ್ತು ಮಗು ದೃಷ್ಟಿಯುದ್ಧ ನಡೆಸುತ್ತಾರೆ. ಬಾಹುಬಲಿ ಸೋಲುತ್ತಾನೆ.)

**ಮಗು :** ನಾನೇ ಗೆದ್ದೆ. ನಾನೇ ಗೆದ್ದೆ...

**ಬಾಹುಬಲಿ :** ಆ ಯುದ್ಧದಲ್ಲಿ ನಾನೇ ಗೆದ್ದೆ.

**ಮಕ್ಕಳು :** ವೆರಿ ಗುಡ್.

**ಬಾಹುಬಲಿ :** ಎರಡನೇ ಯುದ್ಧ ಜಲಯುದ್ಧ.

**ಮಗು :** Water Fight ?

**ಮಗು :** ಸಬ್ ಮೆರಿನ್‌ಗಳು ಆ ಕಾಲದಲ್ಲೇ ಇದ್ವ ?

**ಮಗು :** ನೀರನ್ನ ಕಂಡ್ರ ನಂಗೆ ಇಷ್ಟ.

**ಬಾಹುಬಲಿ :** (ಇನ್ನೊಬ್ಬನನ್ನು ಕರೆದು ಜಲಯುದ್ಧವನ್ನು ವಿವರಿಸಿ ಅನುಕರಣೆ ನಡೆಯುತ್ತದೆ. ಆಗಲೂ ಬಾಹುಬಲಿ ಸೋತೆನೆಂದು ಒಪ್ಪಿಕೊಳ್ಳುತ್ತಾನೆ.)

**ಮಗು :** ನಾನೇ ಗೆದ್ದೆ.

**ಬಾಹುಬಲಿ :** ಆ ಯುದ್ಧದಲ್ಲಿ ನಾನೇ ಗೆದ್ದೆ. ಭರತ ಬರ್ತಾ ಬರ್ತಾ ಮತ್ತಷ್ಟು ಕ್ರೋಧಗೊಳ್ಳುತ್ತಾ ಹೋದ.

**ಮಗು :** What was the last one ?

**ಮಗು :** ಕತ್ತಿ ವರಸೇನಾ !

**ಮಗು :** ಮಗು ಬಾಣ ಬಿಡಲಿಲ್ವ ! ರಾಮಾಯಣ, ಮಹಾಭಾರತ ಸೀರಿಯಲ್‌ಗಳಲ್ಲಿ ಬರೀ ಮಾತು ಮಾತಿಗೂ ಒಂದೊಂದು ಬಾಣ... ಅಲ್ವ ಅದೆಂಗಿರುತ್ತದೆ ಗೊತ್ತ ದೀಪಾವಳಿ ಪಟಾಕಿ ತರ ! ಈಗಲ್‌ಗಳಂತೆ ಫೈಟಿಂಗ್.

**ಬಾಹುಬಲಿ :** ಕೊನೆಯದಾಗಿ ಮಲ್ಲಯುದ್ಧ... ಕುಸ್ತಿ...

**ಮಕ್ಕಳು :** ಕುಸ್ತಿನಾ !

**ಬಾಹುಬಲಿ :** ಯಸ್, ಕುಸ್ತೀನೇ. ರಣರಂಗದ ಮಧ್ಯೆ ಅಖಾಡ ಮಾಡಿದ್ರು. ಎರಡು ಕಡೆ ಸೈನ್ಯ, ಮಂತ್ರಿಗಳು ಆತಂಕದಿಂದ ನೋಟದಿಂದ [illegible] ಹಿಂಡ್ತಾ ಇದ್ದಿದ್ದನ್ನು ನಾನು ನೋಡಿದೆ.

**ಮಕ್ಕಳು :** ಯುದ್ಧ ನಡೀತಾ ! Always watch WWF.

**ಮಗು :** ಹೌ ! disgusted.

**ಬಾಹುಬಲಿ :** ಭರತ ಗೆಲ್ಲಲೇಬೇಕು ಅಂತ ಹೋರಾಡುತ್ತಿದ್ದ (ಇಬ್ಬರು ಮಕ್ಕಳು ರಂಗದ ಮಧ್ಯೆ ಕುಸ್ತಿ ಮಾಡುತ್ತಾರೆ) ಹತಾಶೆಯಿಂದ ಅವನ ಪಟ್ಟು ಸಡಲುತ್ತಾ ಬಂದವು. ಮಲ್ಲಯುದ್ಧದಲ್ಲಿ ಶಕ್ತಿ ಜೊತೆಗೆ ಯುಕ್ತಿನೂ ಮುಖ್ಯ. ಮನಸ್ಸು ಅದಕ್ಕಿಂತಲೂ ಮುಖ್ಯ. ಅವನ ಅಹಂಕಾರ ಅವನ ಮನಸ್ಸನ್ನು ಅವನ ದ್ವೇಷ ಅವನ ಶಕ್ತಿಯನ್ನು ಅಪಹರಿಸಿಬಿಟ್ಟಿದ್ದವು...

**ಮಕ್ಕಳು :** ಮುಂದೆ ಏನಾಯ್ತು ?

**ಬಾಹುಬಲಿ :** ಈಗಲೂ ನಾನು ಮಾಡಿದ ಕೃತ್ಯದ ಬಗ್ಗೆ ನನಗೆ ನಾಚಿಕೆ. (ಅಷ್ಟರಲ್ಲಿ ಇಬ್ಬರು ಮಕ್ಕಳು ಕುಸ್ತಿ ಮಾಡುತ್ತಿದ್ದು ಒಬ್ಬನನ್ನು ಒಬ್ಬ ಅಲಕ್ಕೆ ಮೇಲಕ್ಕೆ ತೂಗಿ ಹಿಡಿಯುತ್ತಾನೆ) ಹೀಗೆ ನಾನು ನನ್ನ ಅಣ್ಣನನ್ನು ಕೊಲ್ಲಬೇಕು ಅಂತ... ಸಂಬಂಧ - ಒಡನಾಟ, ನೆನಪುಗಳನ್ನು ಮರೆತು ಕೊಲ್ಲಲು ಹೊರಬಿದ್ದೆ... ಅವನನ್ನು ಮೇಲೆತ್ತಿ ಹಿಡಿದ ಕ್ಷಣ – ಅಯ್ಯೋ ! ಅನ್ನೋ ನೋವಿನ ಸ್ವರ ಯುದ್ಧ ಭೂಮಿನ ತುಂಬಿಕೊಂಡಿತ್ತು. ಒಂದು ಕ್ಷಣ ಭರತನ ಕಣ್ಣಲ್ಲಿ ಅಹಂಗೆ ಬದಲಾಗಿ ಭಯ ಕಾಣಿಸ್ತು. ನನ್ನ ಅಪ್ಪನನ್ನು ಕಂಡಂಗಾಯಿತು. ಸೈನಿಕರು ನಾನೇ ಗೆದ್ದೆ ಅಂದುಕೊಂಡರು. ಆದ್ರೆ ನಾನು ಗೆದ್ದು ಸೋತು ಹೋಗಿದ್ದೆ. ಈ ರಾಜ್ಯ-ಭೂಮಿ-ಅಹಂಕಾರ ನಶ್ವರ ಅನ್ನಿಸ್ತು. ಅವನು ಕೇಳಿದಾಗ್ಲೆ ನಾನು ಬಿಟ್ಟು ಕೊಡಬೇಕಿತ್ತು. ಮೇಲೆತ್ತಿ ಹಿಡಿದವನನ್ನ ಹಾಗೇ ಭೂಮಿಯ ಮೇಲೆ ಇಳಿಸಿ ನನ್ನ ತಪ್ಪನ್ನು ಅರಿಕೆ ಮಾಡಿಕೊಂಡು ಸೋಲನ್ನೊಪ್ಪಿಕೊಂಡೆ. ಭರತನಿಗೂ ಅಚ್ಚರಿ ಆಗಿರಬೌದು... ಅವನು ಬೆಪ್ಪ ಎಂದು ಹೋಗಿದ್ದ... ನನಗೆ ಎಂಥ ಖುಷಿ ಆಯ್ತು ಗೊತ್ತ. ಬಿಟ್ಟುಕೊಡದ್ರಲ್ಲಿ, ಇನ್ನೊಬ್ಬರಿಗೆ ಹಂಚಿಕೊಳ್ಳುವುದರಲ್ಲಿ ಎಂಥ ಸುಖ ಇದೆ ಅನ್ನೋದು ಗೊತ್ತಾದದ್ದೇ ಅವತ್ತು.

**ಮಕ್ಕಳು ೧ :** ಭರತ ಏನು ಮಾಡಿದ !

**೨ :** ಅವನಿಗೆ ಏನು ಅನ್ನಿಸ್ತು ? What were his feelings ?

**ಬಾಹುಬಲಿ :** ಅವನಿಗೂ ಒಳಗೊಳಗೆ ನಾಚಿಕೆ ಆಗಿರಬೇಕು !

(ಇದ್ದಕ್ಕಿದ್ದಂತೆ ಶಬ್ದವಾಗುತ್ತೆ. ಇಲ್ಲ ದಯಮಾಡಿ ನನ್ನ ಮಾತನ್ನು ಕೇಳಿ ಎನ್ನುತ್ತಾ ಚಕ್ರರತ್ನ ರಂಗಪ್ರವೇಶ ಮಾಡುತ್ತೆ) (ಮಕ್ಕಳು ಬೆದರುತ್ತಾರೆ.)

**ಮಕ್ಕಳು :** ಯಾರು ನೀನು ?

**ಚಕ್ರರತ್ನ :** ನಾನು ಚಕ್ರರತ್ನ! ಮಕ್ಕಳೇ ಈ ಮಹಾನುಭಾವನ ಹಾಗೆ ಜಗತ್ತಿನಲ್ಲಿ ಈ ಹಿಂದೆ ಯಾವ ದೊರೆ ಮಗನು ಗೆದ್ದರೂ ಸೋಲನ್ನ ಸ್ವೀಕರಿಸಿರಲಿಲ್ಲ... ಯುಗಯುಗಾಂತರಗಳಲ್ಲಿ ನಾನು ಕೈಹಿಡಿದ ರಾಜನನ್ನೇ ಚಕ್ರಾಧೀಶನಾಗಿ ಮಾಡುತ್ತಾ ಬಂದಿದ್ದೆ. ಆದರೆ ಬಾಹುಬಲಿ ನನ್ನನ್ನು ನನ್ನ ಅಹಂಕಾರವನ್ನು ಗೆದ್ದುಬಿಟ್ಟ. For the first time in the whole of human history.

**ಮಕ್ಕಳು** : (ಚಪ್ಪಾಳೆ ತಟ್ಟಿಕುಣಿಯುತ್ತಾರೆ)

**ಬಾಹುಬಲಿ** : ಚಕ್ರರತ್ನ ನೀನು ಇಲ್ಲೇನು ಮಾಡುತ್ತಿದ್ದೀಯ !

**ಚಕ್ರರತ್ನ** : ಛಿಂದುಗೊಂಡಿದ್ದೇನೆ. ಅವೊತ್ತು ನೀವು ಬಿಟ್ಟುಕೊಡೋದು ಗೆಲ್ಲೋದಕ್ಕಿಂತ ದೊಡ್ಡದ್ದು ಅಂತೇಳಿ ನಗರಕ್ಕೆ, ಅಧಿಕಾರಕ್ಕೆ, ಆಸೆಗೆ ಬೆನ್ನು ಮಾಡಿ ನಡೆದಾಗ ಭರತ ಯಾಕೆ ಸ್ವಾರ್ಥಿಯಾಗೆ ನಿನ್ನನ್ನ ಕೊಲ್ಲೋದಕ್ಕೆ ಹೇಳ್ದ. ಆದರೆ ನಾನು ಬದಲಾಗಿದ್ದೆ. ಅದಕ್ಕೆ ನಿನ್ನ ಕೊಲ್ಲಲಾಗದೆ ಹೋದೆ. ನನ್ನನ್ನ ಗೆಲ್ಲಬೇಕು ಅಂತ ನಿನ್ನ ಜೊತೆ ಬಂದುಬಿಟ್ಟೆ. ಅವೊತ್ತಿನಿಂದ ಈ ಬೆಟ್ಟ ಗುಡ್ಡಗಳಲ್ಲೇ ಬಾಳ್ತಾ ಯುಗಯುಗಗಳಲ್ಲಿ ನಾನು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾ ಇದ್ದೀನಿ...

**ಮಕ್ಕಳು** : ಮತ್ಯಾಕೆ ಇರಾಕಿನಲ್ಲಿ ಯುದ್ಧ ಆಗ್ತದೆ ...

**ಚಕ್ರರತ್ನ** : ನನ್ನ ಹಾಗೆ ಇನ್ನೂ ಹಲವು ಚಕ್ರರತ್ನಗಳಿವೆ. ಅವು ಆಗಾಗ ಬೇರೆಬೇರೆ ಕಾಲ ದೇಶಗಳಲ್ಲಿ ಕಾಣಿಸಿಕೊಂಡು ಯುದ್ಧಕ್ಕೆ ಕಾರಣ ಆಗ್ತಾ ಅವೆ. ಆದರೆ ಬಾಹುಬಲಿ ಮಾತ್ರ ಇತಿಹಾಸಕ್ಕೊಬ್ಬರೆ. (ನಿಷ್ಕ್ರಮಣ)

**ಮಕ್ಕಳು** : O ! that is really a problem ? ಅಲ್ವ...

**ಮಗು** : ತಗಳ್ರೋ ನನ್ನ ಹತ್ತಿರ ಹತ್ತು ಚಾಕಲೇಟ್ ಇವೆ. ಯಾರಿಗೂ ಕೊಡ್ದೆ ಬಚ್ಚಿಟ್ಟುಕೊಂಡಿದ್ದೆ... ಹಾಗೆ ಮಾಡಿದ್ದಕ್ಕೆ ನನಗೆ guilty ಆಗಿದೆ. I am sorry.

**ಮಗು** : ನನ್ನ ಹತ್ತಿರ ಒಂದೇ ಒಂದು ಇದೆ. ಏನು ಮಾಡೋದು ?

**ಬಾಹುಬಲಿ** : ಹಾಗೆ ಎಂಜಲು ಮಾಡೋದು ಗೊತ್ತಲ್ವ ? ಅದರ ಅರ್ಧ ಹಂಚಿಕೊಬೇಕು... that's like a good boy.

**ಮಕ್ಕಳು** : ನಮಗೆ ಇದೆಲ್ಲ ಗೊತ್ತೇ ಇರಲಿಲ್ಲ.

**ಮಗು** : ನನಗೊಂದು ಡೌಟ್.

**ಬಾಹುಬಲಿ** : ಏನದು ಕೇಳು ಪರವಾಗಿಲ್ಲ !

**ಮಗು** : ನೀನು ಯಾಕೆ ಬೆತ್ತಲಾಗಿದ್ದೀಯ !

**ಬಾಹುಬಲಿ** : ಬತ್ತಲು ಎಂದರೆ ಆಸೆ ಬಿಡೋದು ಅಂತ. ಒಂದೊಂದೆ ಬಿಡ್ತಾ ಹೋದ್ರೆ, ಕೊನೆಗೆ ನೋಡಿದ್ರೆ ಬತ್ತಲಾಗಿದ್ದೆ. ನೀನು ಹೇಳಿದ ಮೇಲೆ ಇನ್ನೊಂದನ್ನೂ ಬಿಡ್ಬೇಕು ಅನ್ನಿಸುತ್ತಿದೆ.

**ಮಕ್ಕಳು** : ಇನ್ನೊಂದಾ ? ಏನದು ?

**ಬಾಹುಬಲಿ** : ಈ ಬತ್ತಲನ್ನು I mean naked ಆಗಿರೋದನ್ನ ಬಿಡಬೇಕು ಅನ್ನಿಸುತ್ತದೆ.

**ಮಕ್ಕಳು** : ಊಂ, ನಮಗೆ ಅರ್ಥ ಆಗ್ಲಿಲ್ಲ.

**ಬಾಹುಬಲಿ** : ನಿಧಾನಕ್ಕೆ ಆಗುತ್ತೆ... ಬೆಳಕು ಹರೀತಾ ಬಂದ್ರೆ ಕತ್ತಲು ಕಳೀತಾ ಹೋಗುತ್ತೆ ಅಲ್ವ !

(ಅಷ್ಟರಲ್ಲಿ ನೇಪಥ್ಯದಿಂದ Children what are you doing here, you are aware of time... get ready)

**ಮಕ್ಕಳು** : ಓ ಮ್ಯಾಮ್ ಬಂದ್ರು ...

**ಮಗು** : ಟೈಮ್ ಹೋಗಿದ್ದೇ ಗೊತ್ತಾಗ್ಲಿಲ್ಲ.

**ಮಗು** : ಹಿಂಸೇನೆ ಇಲ್ಲದ ಯುದ್ದದ ಕಥೆ very nice ಅಲ್ವಾ.

**ಮಗು** : ನಾನು ನನ್ನ ಫ್ರೆಂಡ್ಸ್‌ಗೆ ಹೇಳ್ತಾ...

**ಮಗು** : I will tell my sister.

**ಬಾಹುಬಲಿ** : ಸರಿ, ಮೇಡಂ ನನ್ನ ಕಂಡು ನಾಚ್ಕೊತಾರೆ. ಹೀಗೆ ನಾಚ್ಕೊಂಡೋರನ್ನ ಕಂಡ್ರೆ ನನಗೆ ನಾಚಿಕೆ ಆಗುತ್ತೆ. ಮಕ್ಕಳೇ ನಾನು ಇನ್ನು ಬರ್ಲಾ ಗುಡ್ ಬೈ.

**ಮಕ್ಕಳು** : ನಿನ್ನ ಬಿಟ್ಟು ಹೋಗೊದಕ್ಕೆ ಮನಸ್ಸೇ ಬರ್ತಾ ಇಲ್ಲ.

(Children get down... sunset time... come on... ಇನ್ನೂ ಬೆಟ್ಟ ಇಳೀಬೇಕು. ದಡದಡನೇ ಮೇಡಂ ರಂಗಕ್ಕೆ ಬರುತ್ತಾರೆ, ಮಕ್ಕಳು ದಡಬಡನೆ ಆತಂಕ ಭಯಗಳಿಂದ ಎದ್ದು ನಿಲ್ಲುತ್ತಾರೆ.)

**ಮೇಡಂ** : Mark the time, ಏನು ಮಾಡುತ್ತಿದ್ದೀರಿ. OK discipline is important... more...

(ಮೇಡಂ ಮುಂದೆರೆ ಹೋಗುತ್ತಾರೆ. ಮಕ್ಕಳು ಹಿಂತಿರುಗಿ ನೋಡ್ಕೊಂಡು ನೋಡ್ಕೊಂಡು ಹೋಗುತ್ತಾರೆ. Statue ಹಿಂದಿನಿಂದ ಬಾಹುಬಲಿ ಕೈ ಕಾಣಿಸಿಕೊಂಡು ಟಾಟಾ ಮಾಡುತ್ತಿದೆ)

(ತೆರೆ ಬೀಳುತ್ತದೆ)

**ಡಾ॥ ಕೆ. ವೈ. ನಾರಾಯಣಸ್ವಾಮಿ**
ಕನ್ನಡ ಉಪನ್ಯಾಸಕರು, ಸರ್ಕಾರಿ ವಿಜ್ಞಾನ ಕಾಲೇಜು, ಬೆಂಗಳೂರು-೧

ಮಂಗಳಾ. ಎಸ್



# ಒಬೆರಮೆಗೊ ಎಂಬ ಆ ಹಳ್ಳಿ

ರಂಗಾಯಣದ ರಂಗಪ್ರವಾಸಗಳಲ್ಲಿ ನನಗೆ ಅತ್ಯಂತ ಗಾಢ ಅನುಭವವನ್ನು ನೀಡಿದ ಪ್ರವಾಸ ಜರ್ಮನಿಯ ಪ್ರವಾಸ. ೧೯೯೫ರಲ್ಲಿ ಷೇಕ್ಸ್‌ಪಿಯರ್‌ನ ಮಿಡ್ ಸಮ್ಮರ್ ನೈಟ್ಸ್ ಡ್ರೀಂ ನಾಟಕದೊಂದಿಗೆ ೩೫ ಜನರ ನಮ್ಮ ತಂಡ ಜರ್ಮನಿಗೆ ತೆರಳಿದಾಗ ನಮ್ಮ ಪ್ರವಾಸ ಪ್ರಾರಂಭವಾದದ್ದೇ ನಮ್ಮ ನಾಟಕದ ನಿರ್ದೇಶಕ ಕ್ರಿಶ್ಚಿಯನ್ ಸ್ಟುಕಲ್‌ನ ಹುಟ್ಟೂರಾದ ಒಬೆರಮೆಗೊ ಎಂಬ ಹಳ್ಳಿಯಿಂದ. ಜರ್ಮನಿಯ ಎಲ್ಲ ನಗರಗಳಲ್ಲಿ ಪ್ರದರ್ಶನಗಳು ನಿಯೋಜಿಸಲ್ಪಟ್ಟಿದ್ದು, ಪ್ರದರ್ಶನದ ತಯಾರಿಯ ಧಾವಂತಕ್ಕೆ ಸಿಲುಕುವ ಮುನ್ನ ಪ್ರಶಾಂತವಾಗಿ ಮೂರು ದಿನ ಆ ಹಳ್ಳಿಯಲ್ಲಿ ಇರುವುದು ಯೋಜಿತವಾಗಿತ್ತು. ಹಾಗಾಗಿ ಬೆಂಗಳೂರಿನಿಂದ ಫ್ರಾಂಕ್‌ಫರ್ಟ್‌ಗೆ ಹಾರಿದ ನಾವು ಅಲ್ಲಿಂದ ಬಸ್ ಮಾರ್ಗವಾಗಿ ಒಬೆರಮೆಗೋ ಹಳ್ಳಿಗೆ ಬಂದಿಳಿದೆವು. ಆ ಹಳ್ಳಿಯೊಂದು ಕನಸಿನ ಲೋಕ! ನಾವು ಸಣ್ಣವರಿದ್ದಾಗ ಆಸೆಯಿಂದ ನೋಡುತ್ತಿದ್ದ Sweet home, happy home ಎಂಬ ನುಡಿಗಟ್ಟುಗಳನ್ನು ಹೊತ್ತಂತ ಪೋಸ್ಟರ್‌ಗಳಲ್ಲಿ ಕಾಣಿಸುತ್ತಿದ್ದಂತಹ ಮನೆಗಳು ಆ ಹಳ್ಳಿಯಲ್ಲಿ ಸಾಲು ಸಾಲಾಗಿದ್ದವು. ಪ್ರತಿ ಮನೆಯೂ ಸ್ವಚ್ಛ, ಸುಂದರ, ಅಚ್ಚುಕಟ್ಟು. ಕಲಾತ್ಮಕವಾಗಿ ನಿರ್ಮಿತವಾಗಿದ್ದ ಮನೆಗಳ ಮೇಲೆಲ್ಲ ಚಿತ್ರಗಳು. ಕಿಟಕಿಗಳು, ಬಾಗಿಲುಗಳು, ಮೆಟ್ಟಿಲುಗಳು ಎಲ್ಲವೂ, ಆಲಂಕಾರಿಕವಾದ ವಾಸ್ತು ಹೊಂದಿದ್ದವು. ಎಲ್ಲ ಮನೆಯ ಕಿಟಕಿಗಳಿಗೂ ಸುಂದರವಾದ ಪರದೆಗಳ ಅಲಂಕಾರ. ಕಿಟಕಿಗೆ ಚಾಚಿಕೊಂಡಂತೆ ಹೂ ಗಿಡಗಳನ್ನು ಬೆಳೆಸುವುದಕ್ಕಾಗಿಯೇ ನಿರ್ಮಿಸಿದ ಜಾಗ. ಪ್ರತಿ ಮನೆಯಲ್ಲೂ ಹೂ, ಹಸಿರು ಕಡ್ಡಾಯ. ರಸ್ತೆಯಲ್ಲಿ ಹೋಗುತ್ತಿದ್ದರೆ ಕಿಟಕಿಯಲ್ಲಿ ನಿಂತು ಗಿಡಗಳಿಗೆ ನೀರು ಹಾಕುವ ಕೈಗಳು ಊರಿಗೆ ಬಂದ ಹೊಸಮುಖಗಳತ್ತ ಕೈ ಬೀಸುತ್ತಿದ್ದವು. ನಮ್ಮ ಹಳ್ಳಿಗಳಲ್ಲಿ 'ಏನ್ರಪ್ಪಾ, ಯಾರ ಮನೆಗೇ?' ಎಂದು ವಿಚಾರಿಸುವ ಮಾದರಿಯಲ್ಲೇ ಅವರ ಮುಗುಳ್ನಗು, ಪ್ರಶ್ನಾರ್ಥಕ ನೋಟ ಮತ್ತು ನಮಗರ್ಥವಾಗದ ಜರ್ಮನ್ ಭಾಷೆಯ ನಾಲ್ಕು ಮಾತು. ನಮ್ಮನ್ನು ಸ್ವಾಗತಿಸಿದ್ದು ಒಬೆರಮೆಗೊ ಹೀಗೆ. ನಾವು ಬಸ್ಸಿನಿಂದಿಳಿದದ್ದೇ ತಡ ನಮ್ಮ luggageಗಳು ಸಾಲಾಗಿ ಫುಟ್‌ಪಾತ್ ಮೇಲೆ ಮೆರವಣಿಗೆಗೆ ನಿಂತುಬಿಟ್ಟವು. ಇಡೀ ರಸ್ತೆ ನಮ್ಮಿಂದ, ನಮ್ಮ ಸಾಮಾನುಗಳಿಂದ ತುಂಬಿಹೋಯಿತು. ನಮಗೆ ಬೇರೊಂದು ಲೋಕಕ್ಕೆ ಇಳಿದಂತೆ ಭಾಸವಾಯಿತು. ಸುತ್ತಲೂ ಎತ್ತರದ ಹಸಿರು ಗುಡ್ಡಗಳು, ಕಲಾತ್ಮಕವಾದ ಸುಂದರ ಮನೆಗಳು, ಅಂಗಡಿಗಳು, ಬೀದಿಗಳು! ಎಲ್ಲರಿಂದಲೂ ಉದ್ಗಾರ, ಸಂತೋಷದ ಕೇಕೆ. ಇದರ



ಹಳ್ಳಿಯ ಒಂದು ದೃಶ್ಯ



ಮಧ್ಯೆ ಜರ್ಮನ್ ಭಾಷೆ ನಮಗೆ ಚೆನ್ನಾಗಿ ಅರ್ಥವಾಗುತ್ತದೆನೋ ಎಂಬಂತೆ ಆ ಹಳ್ಳಿಯ ಜನ ಅವರ ಭಾಷೆಯಲ್ಲೇ ನಮ್ಮನ್ನು ಮಾತಾಡಿಸುತ್ತಾ ಗುಂಪು ಗುಂಪಾಗಿ ಬಂದವರೇ, ನಮ್ಮನ್ನು ಆಲಂಗಿಸಿ, ವಿಚಾರಿಸಿಕೊಳ್ಳುತ್ತಲೇ ನಮ್ಮನ್ನು ಗುಂಪು ಗುಂಪುಗಳಾಗಿ ವಿಂಗಡಿಸುತ್ತ ಅವರವರ ಮನೆಗಳಿಗೆ ಕರೆದುಕೊಂಡು ಹೋದರು. ಕೆಲವೇ ಕ್ಷಣಗಳಲ್ಲಿ ಇಡೀ ರಸ್ತೆ ಖಾಲಿ. ನಮ್ಮೆಲ್ಲರನ್ನೂ ಇಡೀ ಹಳ್ಳಿ ಹಂಚಿಕೊಂಡುಬಿಟ್ಟಿತ್ತು. ನಾವು ನಮ್ಮ ಭಾಷೆಯಲ್ಲಿ, ಅವರು ಅವರ ಭಾಷೆಯಲ್ಲಿ ಕೈ ಬಾಯಿ ತಿರುಗಿಸಿಕೊಂಡು ಮಾತಾಡಿದ್ದೇ ಮಾತಾಡಿದ್ದು. ಅರ್ಥವಾಯಿತೋ, ಅರ್ಥವಾಗಲಿಲ್ಲವೋ, ಅಂತೂ ಅವರು ಹೀಗೆ ಮಾತಾಡಿದ್ದಿರಬಹುದು, ಹಾಗೆ ಮಾತಾಡಿದ್ದಿರಬಹುದು ಎಂಬ ಊಹೆಗಳಲ್ಲೇ ನಮ್ಮ ಸಂವಹನ ಸಮರ್ಥವಾಗಿ ನಡೆದಿತ್ತು. ಆ ಹಳ್ಳಿಯ ಸುಮಾರು ಮನೆಗಳು ನಮ್ಮ ಆತಿಥ್ಯದ ಜವಾಬ್ದಾರಿಯನ್ನು ತೆಗೆದುಕೊಂಡಿದ್ದವು. ನಮ್ಮ ಹಳ್ಳಿಗಳಂತೆಯೇ ಊರಿಗೆ ಬಂದ ನೆಂಟರಿಷ್ಟರನ್ನು ನೋಡಿಕೊಳ್ಳುವ, ಉಪಚರಿಸುವ ಸಂಸ್ಕೃತಿ ಅಲ್ಲೂ ಅಷ್ಟೇ ತೀವ್ರವಾಗಿ ಕಂಡುಬಂದದ್ದು ನಮಗೆ ಆಶ್ಚರ್ಯದ ಜೊತೆ ಸಂತಸವನ್ನು ತಂದಿತ್ತು.

ವಿಶೇಷವೆಂದರೆ ಆ ಹಳ್ಳಿಯ ಯಾವ ಮನೆಯಲ್ಲೂ ಚಿಲಕವನ್ನೇ ಹಾಕುತ್ತಿರಲಿಲ್ಲ. ಬೀಗದ ಕೈ ಇಟ್ಟುಕೊಳ್ಳುವ, ತೆಗೆದುಕೊಳ್ಳುವ, ಕೊಡುವ ಯಾವ ತಲೆನೋವೂ ಇಲ್ಲದೆ ಯಾರು ಎಲ್ಲಿಗೆ ಯಾವಾಗ ಬೇಕಾದರೂ ಹೋಗಿ, ಬಂದು ಮಾಡುವ ವ್ಯವಸ್ಥೆಯಿತ್ತು. ಆ ಹಳ್ಳಿಯಲ್ಲಿ ಪೊಲೀಸ್ ಸ್ಟೇಷನ್ ಕೂಡ ಇಲ್ಲ. ಅವರವರೇ ಜಗಳಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಊರಿನ ಮುಖ್ಯಸ್ಥ ಪಂಚಾಯತಿ ಮಾಡುತ್ತಾನೆ. ಕೆಲವೊಮ್ಮೆ ತೀವ್ರಮಟ್ಟದ ಜಗಳಗಳಾದಾಗ ಹೇಗೆ ನಿಭಾಯಿಸಿಕೊಳ್ಳುತ್ತಾರೋ ಏನೋ, ಆದರೆ ಸಣ್ಣಪುಟ್ಟ ಜಗಳಗಳಂತೂ ಸಮಾಧಾನವಾಗಿ ಮುಕ್ತಾಯ ಹಾಡುತ್ತವೆಂದು ಕಾಣುತ್ತದೆ.

ನಾವಲ್ಲಿದ್ದ ಮೂರು ದಿನಗಳಲ್ಲಿ ನಮ್ಮ ಅದೃಷ್ಟಕ್ಕೆ ಒಂದು ದಿನ ಸಂತೆ ಇತ್ತು. ಬೇರೆ ದೇಶದ ಹಳ್ಳಿಯೊಂದರ ಸಂತೆ ನೋಡುವ ಅವಕಾಶ ನಮಗೊದಗಿಬಂದಿತ್ತು. ಕೆಲವು ಇಂಗ್ಲಿಷ್ ಸಿನಿಮಾಗಳಲ್ಲಿ ಹಳ್ಳಿಗಳ ಸಂತೆಗಳು ಇರುವ ಹಾಗೆ ಹೆಚ್ಚು ಕಡಿಮೆ ಈ ಸಂತೆಯೂ ಇತ್ತು. ಮಾರಾಟ, ಮನರಂಜನೆ, ಹಾಡು, ಕುಣಿತ, ಬ್ಯಾಂಡ್ ಸಂಗೀತ, ಆಟಗಳು, ಚಿತ್ರವಿಚಿತ್ರ ಫ್ಯಾನ್ಸಿ ಉಡುಪುಗಳ ಮೆರವಣಿಗೆ, ಹೀಗೇ ಇನ್ನೂ ಹಲವು. ಹಳ್ಳಿಯ ಜನರೆಲ್ಲ ಅಲ್ಲಿ ಸೇರುತ್ತಾರೆ. ಸಂತೋಷದಿಂದ ಕಾಲ ಕಳೆಯುತ್ತಾರೆ. ಅಲ್ಲಿಯ ಜನರ ಈ ಸಂಭ್ರಮ ಸಡಗರಕ್ಕೆ ಮುಖ್ಯ ಕಾರಣ ಅದು ಅವರ ಬೇಸಿಗೆಯ ದಿನಗಳು. ವರ್ಷದಲ್ಲಿ ಕೇವಲ ಮೂರು ತಿಂಗಳು ಮಾತ್ರ ಬಿಸಿಲನ್ನು ಅನುಭವಿಸುವ ಅವರಿಗೆ ಬಿಸಿಲಿನ ದಿನಗಳೆಲ್ಲ ಹಬ್ಬ. ಬೆಳಗಿನ ಜಾವ ನಾಲ್ಕು ಗಂಟೆಗೆಲ್ಲ ಸೂರ್ಯ ಎದ್ದು ಬರುತ್ತಿದ್ದವನು ರಾತ್ರಿ ಸುಮಾರು ಒಂಬತ್ತು ಗಂಟೆಗೆ ಮುಳುಗುವ ಮನಸ್ಸು ಮಾಡುತ್ತಿದ್ದ. ನಮ್ಮ ಅದೃಷ್ಟ. ನಮಗೆ ದೀರ್ಘವಾದ ದಿನಗಳು ಸಿಕ್ಕಿದ್ದವು. ಹಾಗಾಗಿ ಬೆಳಗಿನಿಂದ ರಾತ್ರಿಯವರೆಗೆ ಊರು ಸುತ್ತುವುದೇ ನಮ್ಮ ಕೆಲಸವಾಗಿಬಿಟ್ಟಿತ್ತು. ರಸ್ತೆಗಳಲ್ಲಿ ನಿರ್ಭಿಡೆಯಿಂದ ಓಡಾಡಬಹುದಾಗಿತ್ತು. ವಾಹನಗಳ ಗಲಾಟೆ ಎಂಬುದೇ ಇಲ್ಲ. ಎಲ್ಲರೂ ಪಾದಚಾರಿಗಳೇ. ಕೆಲವರು ಮಾತ್ರ ಸೈಕಲ್ ಸವಾರರಾಗಿದ್ದರು. ತೀರ ಅಪರೂಪಕ್ಕೊಮ್ಮೆ ಬೈಕು, ಕಾರು ಕಾಣಿಸಿಕೊಳ್ಳುತ್ತಿದ್ದವೇ ಹೊರತು ನಾವು ಉರುಳಾಡುತ್ತಾ ಸಾಗಿದರೂ ಕೇಳುವವರಿಲ್ಲದಂತಹ ಪ್ರಶಾಂತ ಊರು.

ಈ ಹಳ್ಳಿ, ಮೇಲೆ ಹೇಳಿದ ಎಲ್ಲ ಗುಣವಿಶೇಷಗಳಿಗಿಂತ ಮುಖ್ಯವಾಗಿ ವಿಶೇಷವೆನಿಸುವುದು ಮತ್ತೊಂದು ಕಾರಣಕ್ಕೆ. ಈ ಹಳ್ಳಿಯ ಜನ ಹತ್ತು ವರ್ಷಕ್ಕೊಮ್ಮೆ ಸುಮಾರು ಮೇ ತಿಂಗಳ ಹೊತ್ತಿಗೆ ನಾಟಕವೊಂದನ್ನು ಕಟ್ಟುತ್ತಾರೆ. ಇವರ ಈ ನಾಟಕವನ್ನು ನೋಡಲು ಪ್ರಪಂಚದಾದ್ಯಂತ ಜನ ಈ ಹಳ್ಳಿಗೆ ಬರುತ್ತಾರೆ. ಅದೇ passion play. ಇದಕ್ಕೆ ೩೬೦ಕ್ಕೂ ಹೆಚ್ಚು ವರ್ಷಗಳ ಇತಿಹಾಸವಿದೆ. ಕಳೆದ ೨೦೦೦ ಇಸವಿಯಲ್ಲಿ ಪ್ರದರ್ಶನಗೊಂಡ ನಾಟಕ ೪೦ನೇ ಪ್ರಯೋಗ. ೧೬೩೩ನೇ ಇಸವಿಯಲ್ಲಿ ಪ್ಲೇಗ್ ರೋಗಕ್ಕೆ ಬಲಿಯಾದ ಈ ಊರು ವಿನಾಶದ ಹಾದಿಯಲ್ಲಿದ್ದಾಗ ಊರಿನ ಮುಖ್ಯಸ್ಥರು ಸೇರಿ passion play ಅನ್ನು ಪ್ರಯೋಗಿಸುವ ನಿರ್ಧಾರ ತೆಗೆದುಕೊಂಡರು. ಮೊಟ್ಟಮೊದಲ ಬಾರಿಗೆ ೧೬೩೪ರಲ್ಲಿ ಸ್ಮಶಾನದಲ್ಲಿ ಈ ನಾಟಕ ನಡೆಯಿತು. ನಮ್ಮಲ್ಲಿ ಮಳೆ ಬಾರದಿದ್ದಾಗ ಕರಿಬಂಟನ ಕಾಳಗ ನಾಟಕ ಮಾಡುವ ಹಾಗೆ, ಸುಗ್ಗಿಯ ನಂತರ ರಾಮಾಯಣ, ಮಹಾಭಾರತ ನಾಟಕಗಳನ್ನು ಮಾಡುವ ಹಾಗೆಯೇ ಇಲ್ಲಿ ಈ ನಾಟಕದ ಪ್ರಯೋಗಕ್ಕೆ ಆ ಊರಿಗೆ ಬಡಿದ ಪ್ಲೇಗ್ ರೋಗವೇ ನೆಪವಾಯಿತು. ಯೇಸುಕ್ರಿಸ್ತನ ಜೀವನ ಚರಿತ್ರೆಯೇ ನಾಟಕದ ವಸ್ತುವಾಯಿತು. ವಿನಾಶದತ್ತ ಸಾಗುತ್ತಿರುವ ಬದುಕಿಗೆ ಯೇಸುಕ್ರಿಸ್ತನ ಜೀವನ ಚರಿತ್ರೆಯ ಕತೆ ನೀತಿಯಾಯಿತು. ವಿನಾಶದ ನಂತರ ಆಸೆಯೊಂದು, ಬೆಳಕೊಂದು ಆಶಾದಾಯಕವಾಗಿ ಕಾಣಿಸಿತು. ಅಂದಿನಿಂದಲೂ ಪ್ರತಿ ಹತ್ತು ವರ್ಷಕ್ಕೊಮ್ಮೆ ಈ ನಾಟಕವನ್ನು ಪ್ರಯೋಗಿಸುತ್ತಾರೆ. ಈ ಪ್ರಯೋಗ ಇಡೀ



ಪ್ರಪಂಚದಲ್ಲೇ ವಿಶೇಷವಾದ ಪ್ರಯೋಗ. ಈ ಪ್ರಯೋಗವನ್ನು ವೀಕ್ಷಿಸಲು ಜನ ಸಾಗರೋಪಾದಿಯಾಗಿ ಬರುತ್ತಾರೆ. ಹತ್ತು ವರ್ಷಕ್ಕೊಮ್ಮೆ ಸಿದ್ಧಗೊಳ್ಳುವ ಈ ನಾಟಕದ ಕೃತಿ ಒಂದೇ ಆದರೂ ಪ್ರತಿ ಸಲವೂ ಹೊಸದಾಗೇ ಸಿದ್ಧಗೊಳ್ಳುತ್ತದೆ. ಸುಮಾರು ಒಂದೂವರೆ ಸಾವಿರ ಜನ ದೊಡ್ಡವರು, ಐನೂರು ಮಂದಿ ಮಕ್ಕಳು ಈ ನಾಟಕದೊಳಗೆ ಭಾಗವಹಿಸುತ್ತಾರೆ. ಅಲ್ಲದೆ ರಂಗಪ್ರಯೋಗದ ಬೇರೆ ಬೇರೆ ವಿಭಾಗಗಳಲ್ಲಿ ಬಹಳಷ್ಟು ಜನ ದುಡಿಯುತ್ತಾರೆ. ರಂಗಸಜ್ಜಿಕೆ, ಪರಿಕರ, ಉಡುಪು, ಸಂಗೀತ, ಪ್ರಚಾರದ ಹಲವು ಹತ್ತು ಕೆಲಸಗಳಿಗೆ ಕೆಲಸ ಮಾಡುತ್ತಾರೆ. ಎಲ್ಲ ವರ್ಗದ, ಎಲ್ಲ ವಯಸ್ಸಿನ ಜನರೂ ಈ ಪ್ರಯೋಗದಲ್ಲಿ ಭಾಗಿಯಾಗುತ್ತಾರೆ. ಇಷ್ಟು ಜನರನ್ನು ಗುಂಪು ಗುಂಪುಗಳಾಗಿ ಮಾಡಿ ಬೇರೆ ಬೇರೆ ಹಂತಗಳಲ್ಲಿ ತಾಲೀಮು ನೀಡಲಾಗುತ್ತದೆ. ಹೀಗೆ ಎಲ್ಲರೂ ಪಾಲ್ಗೊಳ್ಳುವ ಈ ನಾಟಕ ಪ್ರಯೋಗ ಒಬೆರಮೆಗೋ ಹಳ್ಳಿಯ ಜನರ ಸಾಮಾಜಿಕ ಕಳಕಳಿ, ನಿಷ್ಠೆ ಮತ್ತು ಪ್ರೀತಿಯಿಂದಾಗಿ ಇಡೀ ಹಳ್ಳಿಯ ಉತ್ಸವವಾಗುತ್ತದೆ. ಎರಡು ಸಾವಿರ ಜನ ರಂಗದ ಮೇಲಿದ್ದರೆ ಐದು ಸಾವಿರ ಜನ ಪ್ರೇಕ್ಷಕರಾಗಿರುತ್ತಾರೆ. ಕೆಲವೊಮ್ಮೆ ಎಲ್ಲರೂ ಪ್ರಯೋಗದ ಅಂಗವೇ ಆಗಿಬಿಡುತ್ತಾರೆ. ಈ ನಾಟಕ ಪ್ರಯೋಗಕ್ಕಾಗಿಯೇ ಅದ್ಭುತವಾದ ಅತಿ ದೊಡ್ಡ ಥಿಯೇಟರ್ ಒಂದನ್ನು ಕಟ್ಟಿಕೊಂಡಿದ್ದಾರೆ. ಜೊತೆಗೆ ನಟನಟಿಯರು ಗುಂಪು ಗುಂಪಾಗಿ ಓಡಾಡುವ ಎಲ್ಲ ಜಾಗಗಳೂ ಸ್ಟೇಜ್ ಆಗಿರುತ್ತದೆ. ಅಲ್ಲಿ ನೆರೆದಿರುವ ಎಲ್ಲರೂ ನಾಟಕದ ಪಾತ್ರಧಾರಿಗಳೇ ಆಗಿಬಿಡುತ್ತಾರೆ.

ಇಂಥ ದೊಡ್ಡ ಪ್ರಯೋಗದ ಪ್ರದರ್ಶನವನ್ನು ನಿಭಾಯಿಸುವುದು ಸಣ್ಣ ಕೆಲಸವಲ್ಲ. ಇದಕ್ಕಾಗಿಯೇ ಒಂದು ಕಮಿಟಿ ಇರುತ್ತದೆ. ಊರಿನ ಮುಖ್ಯಸ್ಥ, ಮೇಯರ್, ಕ್ಯಾಥೋಲಿಕ್ ಮತ್ತು ಪ್ರೊಟೆಸ್ಟೆಂಟ್ ಪ್ರತಿನಿಧಿಗಳು, ನಾಟಕ ನಿರ್ದೇಶಕ ಮತ್ತು ಹಳ್ಳಿಯ ಜನರಿಂದ ಚುನಾಯಿತರಾದ ಐದು ಜನ ಹಳ್ಳಿಯ ಪ್ರಜೆಗಳ ಕಮಿಟಿ ಪ್ರತಿಯೊಂದನ್ನೂ ನಿರ್ಧರಿಸುತ್ತದೆ. ಮುಖ್ಯ ಪಾತ್ರಗಳ ಆಯ್ಕೆ, ಅವುಗಳು ಆಚರಿಸಬೇಕಾದ ಕೆಲವು ಕಟ್ಟುಪಾಡುಗಳು, ನೀತಿ

ಸಿಂಧುಮಗಳು ಮತ್ತು ಮಾತನಾಡುವ ಪಾತ್ರಗಳು, ಗುಂಪಿನಲ್ಲಿ ಚಲಿಸುವ ಪಾತ್ರಗಳು – ಹೀಗೆ ಪ್ರತಿಯೊಂದೂ ಪೂರ್ವನಿಯೋಜಿತವಾಗಿರುತ್ತದೆ. ಬಹಳಷ್ಟು ಸವಾಲುಗಳನ್ನು ಎದುರಿಸುತ್ತಲೇ ಇಂತಹ ಕೆಲಸಗಳನ್ನು ಮಾಡಬೇಕಾಗುತ್ತದೆ. ಬಹಳಷ್ಟು ಜನ ಇದನ್ನೊಂದು ಧಾರ್ಮಿಕ ಆಚರಣೆಯೆಂಬಂತೆ ಪರಿಗಣಿಸುತ್ತಾರೆ. ಇನ್ನೂ ಕೆಲವರು ಆಧ್ಯಾತ್ಮದ ದಾರಿಯೆಂಬಂತೆ ನಂಬುತ್ತಾರೆ. ಕೆಲವರಿಗಿದು ಸಾಂಸ್ಕೃತಿಕ ಹಬ್ಬವಾದರೆ ಇನ್ನೂ ಕೆಲವರಿಗೆ ಸಂಪ್ರದಾಯದ ನೆನಪು. ಹೀಗೆ ಅವರವರಿಗೆ ಅವರವರದೇ ಆದ ನಂಬಿಕೆಗಳು, ಕಾರಣಗಳು, ಉದ್ದೇಶಗಳು ಇದ್ದು ಎಲ್ಲರೂ ಸಕಾರಾತ್ಮಕವಾಗಿ ಈ ಪ್ರಯೋಗಕ್ಕೆ ಪ್ರತಿಕ್ರಿಯಿಸುವುದರಿಂದ ಬಹುಶಃ ಇವತ್ತಿಗೂ passion play ಇನ್ನೂ ಜೀವಂತವಾಗಿ ಅಷ್ಟೇ ವೈಭವಯುತವಾಗಿ ನಡೆಯುತ್ತಿದೆ. ಪ್ರತಿಯೊಬ್ಬರೂ ತಮ್ಮನ್ನು ಈ ಪ್ರಯೋಗದೊಂದಿಗೆ ಅವರವರ ನಂಬಿಕೆಗಳ ನೆಲೆಯಲ್ಲಿಯೇ ಗುರುತಿಸಿ ಕೊಳ್ಳುತ್ತಿರುವುದರಿಂದ ಇದೊಂದು ಊರಹಬ್ಬವಾಗಿ ಪರಿಣಮಿಸಿದೆ. ಇದೇ passion play ಯೂರೋಪಿನ ಬಹಳಷ್ಟು ಕಡೆ ಮತ್ತು ಬವೇರಿಯಾ, ಆಸ್ಟ್ರಿಯಾ ಮುಂತಾದ ಕಡೆಗಳಲ್ಲೆಲ್ಲಾ ಪ್ರಚಲಿತವಿದ್ದರೂ ಒಬೆರಮೆಗೊ ಹಳ್ಳಿಯ passion play ಪ್ರಪಂಚದಲ್ಲೇ ವಿಶೇಷ ಎನಿಸಿದೆ.

೧೯೯೦ ಮತ್ತು ೨೦೦೦ ಇಸವಿಯಲ್ಲಿ ನಮ್ಮ ಮಿಡ್ ಸಮ್ಮರ್ ನೈಟ್ಸ್ ಡ್ರೀಂ ನಾಟಕದ ನಿರ್ದೇಶಕರಾದ ಕ್ರಿಶ್ಚಿಯನ್ ಸ್ಟುಕಲ್ ಈ ಪ್ರಯೋಗವನ್ನು ನಿರ್ದೇಶಿಸಿದ್ದರು. ೧೯೯೦ರಲ್ಲಿ ಇವರು ನಿರ್ದೇಶಿಸುವಾಗ ಒಂದು ಮಹತ್ತರವಾದ ತಿದ್ದುಪಡಿಯನ್ನು ಮಾಡಿ ಚರಿತ್ರಾರ್ಹರಾಗಿದ್ದಾರೆ. ಯೇಸುಕ್ರಿಸ್ತನ ತಾಯಿ ವರ್ಜಿನ್ ಮೇರಿ ಪಾತ್ರ ಅಭಿನಯಿಸುವ ಪಾತ್ರಧಾರಿ ಕನ್ಯೆಯೇ ಆಗಿರಬೇಕೆಂಬುದು ನಿಯಮವಾಗಿತ್ತು. ಆ ನಿಯಮವನ್ನು ಮೊದಲ ಬಾರಿಗೆ ಮುರಿದು ಆ ಪಾತ್ರಕ್ಕೆ ವಿವಾಹಿತಳಾದ ಒಂದು ಮಗುವಿನ ತಾಯಿಯನ್ನು ಆಯ್ಕೆ ಮಾಡಿ, ಆಕೆ ಅಭಿನಯಿಸುವಂತೆ ಸಮಸ್ತ ಜನರನ್ನು ಒಪ್ಪಿಸುವ ಮೂಲಕ ಬದಲಾವಣೆಯ ಗಾಳಿಯೊಂದನ್ನು ಬೀಸಿದ್ದಾರೆ. ಹೀಗೆ ಕತೆ



ಹಳೆಯದೇ ಆಗಿದ್ದರೂ, ಸಂಪ್ರದಾಯದ ಚೌಕಟ್ಟಿನಲ್ಲಿಯೇ ಪ್ರಯೋಗ ನಡೆದರೂ ಅದನ್ನು ಇವತ್ತಿನ ಜನಾಂಗಕ್ಕೆ ನೀಡುವಾಗ ಮಾರ್ಪಾಡಾಗಬಹುದಾದ ಹೊಸ ಹೊಸ ವಿಚಾರಗಳಿಗೆ, ಪ್ರಯೋಗಗಳಿಗೆ ತೆರೆದುಕೊಳ್ಳುತ್ತಲೇ passion play ೨೦೧೦ನೇ ಇಸವಿಯ ಮೇ ೧೬ಕ್ಕೆ ತನ್ನ ಮತ್ತೊಂದು ಪ್ರಯೋಗದ ಪ್ರದರ್ಶನಕ್ಕೆ ಯೋಜಿತವಾಗಿ ನಿಂತಿದೆ.

**ಮಂಗಳಾ ಎಸ್.**
೯೦/೨, ೨ನೇ ಮುಖ್ಯ ರಸ್ತೆ, ೨ನೇ ಕ್ರಾಸ್, ಮಾರೇನಹಳ್ಳಿ, ಮಾರುತಿ ಲೇಔಟ್
ವಿಜಯನಗರ, ಬೆಂಗಳೂರು - ೫೬೦ ೦೪೦



■ ಎಂ. ಜಿ. ರಾಘವೇಂದ್ರ

# ಹಿಂಸಾಚಾರ ಹಾಗೂ ಕನ್ನಡ ಚಲಚ್ಚಿತ್ರ ಇಂದು

**ಕ**ನ್ನಡ ಚಲಚ್ಚಿತ್ರದ ಹಿರಿಯನಟ ಡಾ|| ರಾಜಕುಮಾರ್ ೨೦೦೬ರ ಪ್ರಿಲ್ ೧೨ರಂದು ನಿಧನರಾದರು. ಅವರಿಗೆ ೭೮ ವರ್ಷ ವಯಸ್ಸಾಗಿತ್ತು. ದೊಂದು ಸಹಜ ಮರಣ. ಆದರೆ ಅವರ ದುಃಖತಪ್ತ ಆರಾಧಕರು ಂದು ನಗರದಲ್ಲಿ ದೊಂಬಿ, ಹಿಂಸಾಕೃತ್ಯ ನಡೆಸಿದುದೂ ಅಷ್ಟೇ ಸಹಜ ಾಗಿದ್ದಿತು. ಪೊಲೀಸು ಪೇದೆಯೊಬ್ಬನನ್ನು ಸಾಯುವವರೆಗೂ ಹೊಡೆದು ಾಲ್ಲಲಾಯಿತು. ಅನಂತರ ನಡೆದ ಪೊಲೀಸು ಗೋಲಿಬಾರಿನಲ್ಲಿ ಅನೇಕರು ತ್ತರು. ಕನ್ನಡ ಸಿನಿಮಾಕ್ಕೆ ಸಂಬಂಧಿಸಿದ ಯಾವುದೇ ಸಾರ್ವಜನಿಕ ರವಣಿಗೆ ಪ್ರದರ್ಶನವೂ ಗಲಭೆ ದರೋಡೆಗಳಿಗೆ ಪ್ರೇರಕವಾಗುತ್ತಿದೆ. ೦೦೦ನೆಯ ವರ್ಷದಲ್ಲಿ ವೀರಪ್ಪನ್ ಡಾ|| ರಾಜಕುಮಾರ್ ಅವರನ್ನು ಪಹರಿಸಿದ ಘಟನೆ ಅಗ್ನಿಕಾಂಡ ಲೂಟಿಗಳಿಗೆ ದಾರಿ ಮಾಡಿಕೊಟ್ಟಿತು. ದು ಹಲವಾರು ತಿಂಗಳುಗಳವರೆಗೆ ನಡೆಯಿತು. ೨೦೦೪ರಲ್ಲಿ ಕನ್ನಡ ಲಚ್ಚಿತ್ರ ಕೈಗಾರಿಕೆಯು ಕನ್ನಡೇತರ ಚಲಚ್ಚಿತ್ರಗಳನ್ನು ನಿಷೇಧಿಸಬೇಕೆಂದು ರೆ ನೀಡಿದಾಗಲೂ ಹಿಂಸಾಚಾರ ವ್ಯಾಪಕವಾಗಿ ನಡೆಯಿತು. ಹೆಚ್ಚಿನ ಪ್ರಸಂಗ ಳಲ್ಲಿ ಈ ಹಿಂಸಾಚರಣೆ ಬೆಂಗಳೂರಿಗಷ್ಟೇ ಸೀಮಿತ. ಕರ್ನಾಟಕದ ಇತರ ಗರಗಳು ಶಾಂತಿಯುತವಾಗಿಯೇ ಇರುತ್ತವೆ. ಪ್ರತಿಬಾರಿಯೂ ಹಿಂಸಾಚಾರ ಮೀರಿ ಹೋಗುತ್ತಿದೆ. ಇದಕ್ಕೆ ನಾನಾ ಸಂಸ್ಥೆಗಳನ್ನು ದೂಷಿಸಲಾಗುತ್ತಿದೆ. ದರೆ ಈ ಹಿಂಸಾಚಾರಗಳಿಗೆ ನಿಜವಾದ ಕಾರಣ ಹುಡುಕಲು ಯತ್ನಿಸಿಲ್ಲ. ಗಲಭೆಗಳು ಬಹುಶಃ 'ಪ್ರಚೋದಿತ'ವಲ್ಲ. ಆದರೆ ಸಾಮಾಜಿಕ ೂಲವುಳ್ಳವು ಎನ್ನಬಹುದೇನೋ.

ಮಾಧ್ಯಮಗಳ ವ್ಯಾಖ್ಯಾನ ಪಠ್ಯಗಳ ನಿರ್ಮಾಣದಲ್ಲಿ ವಾಚಕರೂ ಹಕರ್ತೃ'ಗಳು ಎಂಬುದನ್ನೀಗ ಮನ್ನಿಸಲಾಗಿದೆ. ಅಂತೆಯೇ ಚಲಚ್ಚಿತ್ರಗಳ ಥೆ-ಸಂಭಾಷಣೆಗಳ ನಿರ್ಮಾಣದಲ್ಲೂ ಚಿತ್ರ ವೀಕ್ಷಕರ ಪಾತ್ರವೂ ರುತ್ತದೆಂದು ಗ್ರಹಿಸಬಹುದು. ಚಲಚ್ಚಿತ್ರವೊಂದು ಯಶಸ್ವಿಯಾದಾಗ ದನ್ನನುಸರಿಸಿ ಚಿತ್ರ ನಿರ್ಮಾಪಕರು ಒಂದು ಸೂತ್ರ ತಯಾರಿಸುತ್ತಾರೆ. ಈ ೂತ್ರವು ಚಿತ್ರದ ಅಭಿಮಾನಿಗಳ ಸಾಮೂಹಿಕ ಮನೋಸ್ವರೂಪದ ೕಲೂ ಪ್ರಭಾವ ಬೀರುತ್ತದೆ. ಕನ್ನಡ ಚಲಚ್ಚಿತ್ರ ಕೈಗಾರಿಕೆಯೊಂದಿಗೆ ಕಟ ಸಂಪರ್ಕವಿರುವ ಬೆಂಗಳೂರು ನಗರದಲ್ಲಿ ಚಲಚ್ಚಿತ್ರ-ಸಂಬಂಧಿತ ಂಸಾಕೃತ್ಯಗಳು ಜರುಗುತ್ತಿರುವುದಕ್ಕೆ ಚಿತ್ರಾಭಿಮಾನಿಗಳ ಈ ರಾಜಕೀಯ ನೋಸ್ವರೂಪವೂ ಕಾರಣವೆನ್ನಬಹುದು.

## ಚಲಚ್ಚಿತ್ರ ಹಿಂಸಾಚಾರ

ವಿಚಿತ್ರವೆನ್ನುವಂತೆ ಕಳೆದ ಕೆಲವು ವರ್ಷಗಳಲ್ಲಿ ಕನ್ನಡ ಚಲಚ್ಚಿತ್ರಗಳಲ್ಲಿ ಕ್ರೌರ್ಯ ಹಿಂಸಾಚರಣೆಗಳ ಅಂಶ ಹೆಚ್ಚಿದೆ. ಇದನ್ನು ಜಾಹೀರಾತಿನ ಪೋಸ್ಟರುಗಳಲ್ಲೇ ಕಾಣಬಹುದು - ಜಾಹೀರಾತಿನ ನಟನ ಕೈಯಲ್ಲಿ ಕತ್ತಿ, ಚಾಕು, ಸರಪಳಿಗಳು ಝುಗಝುಗಿಸುತ್ತಿರುತ್ತವೆ. ಅಂದರೆ ಚಲಚ್ಚಿತ್ರಗಳು ಬೀದಿ ಗಲಭೆಗಳಿಗೆ ಪ್ರೋತ್ಸಾಹಕ ಎಂದೇನೂ ಅಲ್ಲ. ಆದರೆ ಅವು ಸಮಾಜದ ಉದ್ವಿಗ್ನತೆಗಳ ಪ್ರತಿಬಿಂಬಕ ಎನ್ನಬಹುದೇನೋ. ಇದರ ಪರಿಶೀಲನೆಗಾಗಿ ನಾನು ನಾಲ್ಕು ಚಲಚ್ಚಿತ್ರ ಗಳನ್ನು ಆಯ್ದುಕೊಳ್ಳುತ್ತೇನೆ – 'ಮೆಜೆಸ್ಟಿಕ್' (೨೦೦೨), 'ದುರ್ಗಿ' (೨೦೦೪), 'ಕಿಟ್ಟಿ' (೨೦೦೪) ಹಾಗೂ 'ಜೋಗಿ' (೨೦೦೫). ಇವೆಲ್ಲ ತುಂಬ ಯಶಸ್ಸು ಕಂಡ ಚಿತ್ರಗಳು. ಅದರಲ್ಲೂ 'ಜೋಗಿ' ಚಿತ್ರ ಕಳೆದ ವರ್ಷ ಅತ್ಯಂತ ಯಶಸ್ವಿಯಾದ ಚಿತ್ರ. ನಾನು 'ಮೆಜೆಸ್ಟಿಕ್' ಚಿತ್ರದ ಕಥೆಯನ್ನು ಹೆಚ್ಚು ವಿವರವಾಗಿ ಪರಿಶೀಲಿಸಿ ಇತರವುಗಳನ್ನು ಇದರ ವಿವಿಧ ರೂಪಗಳೆಂದು ಚಿತ್ರಿಸಿದ್ದೇನೆ.

'ಮೆಜೆಸ್ಟಿಕ್' ಚಿತ್ರದಲ್ಲಿ ಒಬ್ಬ ಹುಡುಗನದು ಮುಖ್ಯಪಾತ್ರ. ಗ್ರಾಮೀಣ ಬಾಲಕ. ಅವನ ತಂದೆ ಕುಡುಕ. ತಾಯಿ ಸಂಕಷ್ಟದಿಂದ ಪರಿತಪ್ತ ಮಹಿಳೆ. ತಂಗಿ ರೋಗಿಷ್ಠೆ. ತಂದೆಯ ಸಂಪಾದನೆಯೆಲ್ಲ ಕುಡಿತಕ್ಕೆ ಮೀಸಲು. ತಾಯಿಯು ಮಗಳ ಆರೋಗ್ಯ ಪಾಲನೆಗಾಗಿ ತನ್ನನ್ನೇ 'ಮಾರಿಕೊಳ್ಳುತ್ತಾಳೆ'. ಆದರೂ ಮಗಳನ್ನು ಉಳಿಸಿಕೊಳ್ಳಲು ವಿಫಲಳಾಗುತ್ತಾಳೆ. ಕುಡಿತದ ಅಮಲಿನಲ್ಲಿರುವ ತಂದೆಯ ಮೇಲೆ ಮಗಳ ಸಾವು ಯಾವ ಪರಿಣಾಮವನ್ನೂ ಬೀರದು. ಬದಲು ಅವನು ತನ್ನ ಕುಡಿತಕ್ಕೆ ಮತ್ತೆ ತಾಯಿಯ ಸಂಪಾದನೆಯತ್ತ ಕೈ ಚಾಚುತ್ತಾನೆ. ಇದನ್ನು ಕಂಡ ಮಗ ಕೋಪೋದ್ರಿಕ್ತನಾಗಿ ತಂದೆಯನ್ನು ಇರಿದು ಕೊಂದು ಬೆಂಗಳೂರಿಗೆ ಓಡಿಹೋಗುತ್ತಾನೆ. ಬೆಂಗಳೂರಿನಲ್ಲಿ ಅವನು [illegible] ಭ್ರಷ್ಟ ಪೊಲೀಸು ಪೇದೆಯ ಅಡಿಯಾಳಾಗುತ್ತಾನೆ. ಅವನಿಗೆ ದಾಸ ಎಂಬ ಹೆಸರು ನೀಡಲಾಗುತ್ತೆ. ದಾಸ ಬೇಗನೆಯೇ ಭ್ರಷ್ಟಾಚಾರದ ಅಂತರಂಗವನ್ನೆಲ್ಲ ಅರಿತು ಒಬ್ಬ ಭಯಂಕರ ದರೋಡೆಕೋರನಾಗಿ ಬೆಳೆಯುತ್ತಾನೆ. ಅವನಿಗೆ ಅವನದೇ ಒಂದು ಗ್ಯಾಂಗ್ ಇದೆ. ಭೂಗತ ಜಗತ್ತಿನ ಅವನ ಪ್ರತಿಸ್ಪರ್ಧಿಗಳೆಲ್ಲ ಅವನಿಗೆ ಅಂಜುತ್ತಾರೆ. ದುಡ್ಡು ಕೊಟ್ಟವರ ಪರವಾಗಿ [illegible]



ದರ್ಶನ್

ಕೊಲೆ ಮುಂತಾದ ಯಾವುದೇ ಕಾನೂನುಬಾಹಿರ ನೀಚಕೃತ್ಯ ಎಸಗಲೂ ಅವನು ಸಿದ್ಧ. ಒಮ್ಮೆ ಒಬ್ಬ ಶ್ರೀಮಂತ ಯುವಕ ಮತ್ತು ಒಬ್ಬ ಕೊಳಗೇರಿ ಯುವತಿಯ ನಡುವಿನ ಪ್ರಣಯ ಪ್ರಸಂಗವನ್ನು ಅವನು ನಿಲ್ಲಿಸಬೇಕಾಗಿ ಬಂದಿತು. ಇದು ಅವನಲ್ಲಿ ಒಂದು ಭಾರೀ ತಿರುವು ತಂದಿತು. ಆ ಯುವತಿಗೆ ಕಿರಣ್ ಎಂಬ ಒಬ್ಬ ಧೈರ್ಯಶಾಲಿ ಶಾಲಾ ಸಹಪಾಠಿ ಇರುತ್ತಾಳೆ. ಆ ಧೈರ್ಯಶಾಲಿ ಯುವತಿ ಕಿರಣ್‌ಳು ದಾಸನ ಹಿಂಬಾಲಕರನ್ನೆಲ್ಲ ಹೊಡೆದಟ್ಟುತ್ತಾಳೆ. ಆಗ ದಾಸನೇ ವೇಷ ಮರೆಸಿಕೊಂಡು ಅವಳಲ್ಲಿ ಅನುರಕ್ತನಾದವನಂತೆ ನಟಿಸುತ್ತಾ ಅವಳ ಬಳಿಗೆ ಹೋಗುತ್ತಾನೆ. ಕೊನೆಯಲ್ಲಿ ಅವರಿಬ್ಬರು ಪರಸ್ಪರ ಪ್ರೀತಿಸತೊಡಗುತ್ತಾರೆ. ಹುಡುಗಿಗೆ ದಾಸನ ಪೂರ್ವಾಪರ ಏನೂ ತಿಳಿಯದು. ದಾಸನೂ (ಈಗ ಪ್ರಜ್ವಲ್) ನೈತಿಕ ಪರಿವರ್ತನೆ ಹೊಂದುತ್ತಾನೆ. ಆ ಯುವತಿ ಕಿರಣ್ ಮತ್ತಾರೂ ಆಗಿರದೆ ದಾಸನ ಗುರು ಪೊಲೀಸ್‌ಮನ್ (ಈಗ ಡಿಎಸ್‌ಪಿ) ರಣಧೀರ್‌ನ ಮಗಳೇ ಆಗಿರುತ್ತಾಳೆ. ತನ್ನ ಮಗಳು ದಾಸನಲ್ಲಿ ಸ್ನೇಹ ಬೆಳೆಸಿಕೊಂಡಿದ್ದಾಳೆಂದು ತಿಳಿದ ರಣಧೀರ್ ತನ್ನ ಮಗಳಿಗೆ ತನ್ನ ಹಿಂದಿನ ಅನುಯಾಯಿ ದಾಸನ ವಿಷಯವನ್ನೆಲ್ಲ ತಿಳಿಸುತ್ತಾನೆ. ಆಕೆ ದಾಸನನ್ನು ಪ್ರಶ್ನಿಸಿದಾಗ ಅವನು ತಾನು ಈಗ ಬದಲಾಗಿರುವುದಾಗಿ ತಿಳಿಸುತ್ತಾನೆ. ಆಕೆ ಅವನ ಮಾತನ್ನು ಒಪ್ಪಳು. ಚಿತ್ರದ ಕೊನೆಯ ಭಾಗದಲ್ಲಿ ರಣಧೀರನ ಸಹೃದಯಿ ಪತ್ನಿಯೇ ಕಿರಣ್‌ಳಿಗೆ ಅವಳ ತಂದೆಯೇ ಎಂತಹ ಮನುಷ್ಯ ಎಂಬುದನ್ನು ತಿಳಿಸುತ್ತಾಳೆ. ದಾಸನ ಬಗೆಗೆ ಅವಳ ಮನೋಭಾವ ಬದಲುತ್ತದೆ. ಆದರೆ ಆ ಹೊತ್ತಿಗಾಗಲೇ ದಾಸ ಆ ಯುವತಿಯನ್ನು ಕೊಂದು ತಾನೂ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ನಿರ್ಧರಿಸುತ್ತಾನೆ. ಅವನು ಅವಳನ್ನು ಇರಿದು ಕೊಲ್ಲುತ್ತಾನೆ. ಅವಳು ಅವನಲ್ಲಿ ಅನುರಕ್ತಳಾಗಿದ್ದಳೆಂದು ಅವನಿಗೆ ಅನಂತರವಷ್ಟೇ ತಿಳಿಯುತ್ತದೆ. ಡಿಸಿಪಿ ರಣಧೀರನೇ ದಾಸನನ್ನು ಕೊಲ್ಲುವುದರೊಂದಿಗೆ ಚಿತ್ರ ಮುಕ್ತಾಯಗೊಳ್ಳುತ್ತದೆ.

**ಉದ್ದೇಶ, ಗುರಿ ಎಲ್ಲ ಒಂದೇ !**

ಇತರ ಚಿತ್ರಗಳ ಬಗೆಗೆ ವಿವೇಚಿಸುವ ಮುನ್ನ ಈ ಎಲ್ಲ ಚಿತ್ರಗಳ ಗುರಿ, ಉದ್ದೇಶ ಏನು ಎಂಬುದನ್ನು ಪರಿಶೀಲಿಸುವುದು ಉಚಿತ. ಈ ಎಲ್ಲ ಚಿತ್ರಗಳಲ್ಲೂ ಬೆಂಗಳೂರು ಅರಾಜಕತೆಯ ಆಕರವಾಗಿ ಕಾಣಿಸಿಕೊಳ್ಳುತ್ತದೆ. ಈ ನಾಲ್ಕು ಚಿತ್ರಗಳಲ್ಲಿ ಮೂರರಲ್ಲಿ ಕಾಲೇಜು ವಿದ್ಯಾರ್ಥಿಗಳು ರಾರಾಜಿಸುತ್ತಾರೆ. ದರೋಡೆಕೋರರಲ್ಲದೆ ಕಾಲೇಜು ವಿದ್ಯಾರ್ಥಿಗಳೂ ಬೆಂಗಳೂರಿನ ಅವಿಭಾಜ್ಯ ಅಂಗವಾಗಿರುತ್ತಾರೆ. ಮೂರು ಚಿತ್ರಗಳಲ್ಲಿ ಪೊಲೀಸರದು ಪ್ರಮುಖ ಪಾತ್ರ. ಅವರನ್ನೆಲ್ಲ ಸಾಮಾನ್ಯವಾಗಿ ನೀತಿಭ್ರಷ್ಟರನ್ನಾಗಿ ಚಿತ್ರಿಸಲಾಗಿದೆ. 'ದುರ್ಗಿ' ಚಿತ್ರದ ಪೊಲೀಸು ಕಮೀಷನರಷ್ಟೇ ಇದಕ್ಕೆ ಅಪವಾದ. ಅದೂ ಅವನು ಕೇಂದ್ರ ಸರ್ಕಾರದಿಂದ ನೇಮಿತನಾದವನಾದ್ದರಿಂದ ಹಾಗೆ ನೀತಿವಂತನಾಗಿದ್ದಾನೆ. 'ಕಿಟ್ಟಿ' ಚಿತ್ರದಲ್ಲಿ ಪೊಲೀಸರಿಲ್ಲ. ಅದರಲ್ಲಿನ ಅರಾಜಕ ಪರಿಸ್ಥಿತಿಯಲ್ಲಿ ಅವರು ಅಪ್ರಸ್ತುತವೇನೋ. 'ಮೆಜೆಸ್ಟಿಕ್' ಹಾಗೂ 'ದುರ್ಗಿ' ಚಿತ್ರಗಳೆರಡರಲ್ಲೂ ರಾಜಕಾರಣಿಗಳು ಬರುತ್ತಾರೆ. ಆದರೆ ಅವರು ಸಣ್ಣ ಜನ-ಮಧ್ಯವರ್ತಿಗಳಾಗಿ ಮೇಲಕ್ಕೆ ಏರಲು ಯತ್ನಿಸುತ್ತಿರುವವರು. ಸ್ವಾರಸ್ಯಕರವೆನ್ನುವಂತೆ ರಾಜಕಾರಣಿಯು ಒಬ್ಬ ಶಾಸನಸಭಾ ಸದಸ್ಯನಾಗಿದ್ದರೂ ಅವನು ಕಥೆಯಲ್ಲಿ ಪೊಲೀಸು ಅಧಿಕಾರಿಗೆ ಗೌರವದಿಂದಿರುತ್ತಾನೆ. ಎರಡು ಚಿತ್ರಗಳಲ್ಲಿ ಪ್ರೇಮ ಪ್ರಸಂಗಗಳು ಬರುತ್ತವೆ. ಒಂದರಲ್ಲಷ್ಟೇ – 'ಕಿಟ್ಟಿ' ಚಿತ್ರದಲ್ಲಿ – ಅದು ಸುಖಾಂತ್ಯ ಕಾಣುತ್ತದೆ. ಎಲ್ಲ ಚಿತ್ರಗಳಿಗೂ ಒಂದು ಪೂರ್ವ ಪೀಠಿಕೆ ಇದ್ದು (ಉದಾಹರಣೆಗೆ: ದಾಸನಿಂದ ತಂದೆಯ ಕೊಲೆ) ಅದು ಉಳಿದ ಘಟನೆಗಳಿಗೆ ಮೂಲಾಧಾರ. ಪ್ರತಿಯೊಂದು ಚಿತ್ರವೂ ಯಾವತ್ತೂ ಈ 'ಮೊದಲ ಘಟನೆ'ಯಿಂದಲೇ ಪ್ರಾರಂಭವಾಗುವುದಿಲ್ಲ. ಕೆಲವೊಮ್ಮೆ ಅದನ್ನು ಮರುಕಳಿಕೆಯಾಗಿ (ಫ್ಲ್ಯಾಷ್ ಬ್ಯಾಕ್) ನಿವೇದಿಸಲಾಗುತ್ತದೆ.

'ದುರ್ಗಿ' ಚಿತ್ರ ಒಬ್ಬ ದಿಟ್ಟ ಹಳ್ಳಿ ಹುಡುಗಿ ಕುರಿತಾದುದು. ಅವಳ ತಂಗಿಯನ್ನು ಬೆಂಗಳೂರಿನ ವರ್ತಕನೊಬ್ಬ ಸ್ಥಳೀಯ ಶಾಸಕ, ಪೊಲೀಸು ಇನ್‌ಸ್ಪೆಕ್ಟರ್ ಹಾಗೂ ಶವಪರೀಕ್ಷೆಗೆ ನೇಮಿತವಾದ ವೈದ್ಯನ ಸಹಕಾರದೊಂದಿಗೆ ಬಲಾತ್ಕಾರವಾಗಿ ಸಂಭೋಗಿಸಿ ಅನಂತರ ಅವಳನ್ನು ಕೊಲ್ಲುತ್ತಾನೆ. ಚಿತ್ರದ ಉಳಿದ ಭಾಗವೆಲ್ಲ 'ದುರ್ಗಿ' ಕೈಗೊಂಡ ಪ್ರತೀಕಾರ ಚರ್ಯೆಗಳಿಗೆ ಮತ್ತು ಕೊನೆಯಲ್ಲಿ ಹಳ್ಳಿಗೆ ಹಿಂದಿರುಗುವುದಕ್ಕೆ ಮೀಸಲು. 'ಕಿಟ್ಟಿ' ಚಿತ್ರವು ಒಬ್ಬ ಯುವಕನ ಕಥೆ. ಅವನು ಹಳ್ಳಿಯ ಜಮೀನುದಾರ ಜನರೊಂದಿಗೆ ಘರ್ಷಣೆಗೆ ಇಳಿಯುತ್ತಾನೆ. ಅವನ ಕುಟುಂಬದ ಕೆಲವರನ್ನು ಕೊಲ್ಲಲಾಗುತ್ತದೆ. ಯುವಕನು ಆ ಕೊಲೆಗಾರರಲ್ಲಿ ಕೆಲವರನ್ನು ಕೊಂದು ಸೇಡು ತೀರಿಸಿಕೊಳ್ಳುತ್ತಾನೆ. ಅವನ ತಂದೆ ಅದರ ಹೊಣೆ ಹೊತ್ತು ಜೈಲಿಗೆ ಹೋಗುತ್ತಾನೆ. ಇದರಿಂದ ಕಿಟ್ಟಿ ಪರಿವರ್ತನೆಗೊಂಡು ಬೆಂಗಳೂರಿಗೆ ವಿದ್ಯಾರ್ಥಿಯಾಗಿ ಬಂದು ಶಾಂತ ಜೀವನ ನಡೆಸಲು ಹೋಗುತ್ತಾನೆ. ಅಲ್ಲೂ ಅವನು ಗೂಂಡಾಗಳನ್ನು ಎದುರಿಸಬೇಕಾಗಿಬರುತ್ತದೆ. ಅವನ ಹಳ್ಳಿಯ ಶತ್ರುಗಳೂ ಸೇಡು ತೀರಿಸಿಕೊಳ್ಳಲು ಬರುತ್ತಾರೆ. ಆದರೆ ಅವರನ್ನು ಸಮಾಧಾನಗೊಳಿಸುವುದರೊಂದಿಗೆ ಚಿತ್ರ ಸುಖಾಂತ್ಯಗೊಳ್ಳುತ್ತದೆ. 'ಜೋಗಿ' ಚಿತ್ರದಲ್ಲಿ

> ಮಾಧ್ಯಮಗಳ ವ್ಯಾಖ್ಯಾನ ಪಠ್ಯಗಳ ನಿರ್ಮಾಣದಲ್ಲಿ ವಾಚಕರೂ 'ಸಹಕರ್ತೃ'ಗಳು ಎಂಬುದನ್ನೀಗ ಮನ್ನಿಸಲಾಗಿದೆ. ಅಂತೆಯೇ ಚಲಚ್ಚಿತ್ರಗಳ ಕಥೆ–ಸಂಭಾಷಣೆಗಳ ನಿರ್ಮಾಣದಲ್ಲೂ ಚಿತ್ರ ವೀಕ್ಷಕರ ಪಾತ್ರವೂ ಇರುತ್ತದೆಂದು ಗ್ರಹಿಸಬಹುದು. ಚಲಚ್ಚಿತ್ರವೊಂದು ಯಶಸ್ವಿಯಾದಾಗ ಅದನ್ನನುಸರಿಸಿ ಚಿತ್ರ ನಿರ್ಮಾಪಕರು ಒಂದು ಸೂತ್ರ ತಯಾರಿಸುತ್ತಾರೆ. ಈ ಸೂತ್ರವು ಚಿತ್ರದ ಅಭಿಮಾನಿಗಳ ಸಾಮೂಹಿಕ ಮನೋಸ್ವರೂಪದ ಮೇಲೂ ಪ್ರಭಾವ ಬೀರುತ್ತದೆ. ಕನ್ನಡ ಚಲಚ್ಚಿತ್ರ ಕೈಗಾರಿಕೆಯೊಂದಿಗೆ ನಿಕಟ ಸಂಪರ್ಕವಿರುವ ಬೆಂಗಳೂರು ನಗರದಲ್ಲಿ ಚಲಚ್ಚಿತ್ರ–ಸಂಬಂಧಿತ ಹಿಂಸಾಕೃತ್ಯಗಳು ಜರುಗುತ್ತಿರುವುದಕ್ಕೆ ಚಿತ್ರಾಭಿಮಾನಿಗಳ ಈ ರಾಜಕೀಯ ಮನೋಸ್ವರೂಪವೂ ಕಾರಣವೆನ್ನಬಹುದು.

ಮಾದೇಶ ತನ್ನ ತಂದೆಯ ಸಾವಿನ ನಂತರ ಅದೃಷ್ಟವನ್ನು ಅರಸಿಕೊಂಡು ಬೆಂಗಳೂರಿಗೆ ಬರುತ್ತಾನೆ. ಅಲ್ಲಿ ಅವನು ಒಂದು ಕಳ್ಳಕಾಕರ ಜಗಳದಲ್ಲಿ ಸಿಕ್ಕಿಹಾಕಿಕೊಂಡು ಜೈಲಿಗೆ ಹೋಗುತ್ತಾನೆ. ಸ್ವಲ್ಪ ಕಾಲದ ನಂತರ ಬಿಡುಗಡೆಗೊಳ್ಳುತ್ತಾನೆ. ಅವನ ಮೊಂಡು ಒರಟುತನದಿಂದ ಎಲ್ಲರೂ ಅವನನ್ನು 'ಜೋಗಿ' ಎಂದು ಕರೆದು ಅವನಿಗೆ ಅಂಜತೊಡಗುತ್ತಾರೆ. ಆದರೆ ಅವನಿಗೆ ಯಾವತ್ತೂ ತನ್ನ ತಾಯಿಯದೇ ಚಿಂತೆ. ಆಕೆಯೂ ಅವನಿಗರಿವಿಲ್ಲದೆಯೇ ಕೇವಲ ಕೆಲವೇ ಬೀದಿಗಳ ಆಚೆ ವಾಸಿಸುತ್ತಿದ್ದ ಅವನಿಗಾಗಿ ಹುಡುಕುತ್ತಿರುತ್ತಾಳೆ. ಈ ಮಧ್ಯೆ ಮಾದೇಶ ಒಂದು ಅದ್ಭುತ ಹಳ್ಳಿ ನೃತ್ಯ ಕಾರ್ಯಕ್ರಮ ನೀಡುತ್ತಾನೆ. ಅವನು ಅಂತಹ ಒಂದು ನೃತ್ಯವನ್ನು ಹೆಸರಿಲ್ಲದ ಬಡ ಹೆಂಗಸೊಬ್ಬಳ ಶವಸಂಸ್ಕಾರದಲ್ಲಿ ನೀಡುವುದರೊಂದಿಗೆ ಚಿತ್ರ ಕೊನೆಗೊಳ್ಳುತ್ತದೆ. ಆ ಹೆಂಗಸು ಬೇರಾರೂ ಅಲ್ಲದೆ ತನ್ನ ತಾಯಿಯೇ ಎಂದು ಅವನು ಅನಂತರ ಕಂಡುಕೊಳ್ಳುತ್ತಾನೆ.

**ರಾಜ್ಯದ ಅಧಿಕಾರ**

ಹಿಂದಿ ಭಾಷೆಯ ಜನಪ್ರಿಯ ಚಿತ್ರಗಳಲ್ಲೆಲ್ಲ ಪೊಲೀಸರದು ಪ್ರಮುಖ ಪಾತ್ರ. ಪೊಲೀಸರನ್ನೂ ನ್ಯಾಯಾಂಗವನ್ನೂ ಆರಂಭದಲ್ಲಿ ಗೇಲಿ ಮಾಡಲಾಗುತ್ತಿತ್ತು ('ತಖದೀರ್' ೧೯೪೩). ಸ್ವಾತಂತ್ರ್ಯಾನಂತರ, ೧೯೫೦ರ ದಶಕದಲ್ಲಿ ಪೊಲೀಸರನ್ನು ರಾಜ್ಯದ ನೈತಿಕ ಶಕ್ತಿಯ ಪ್ರತಿನಿಧಿಗಳನ್ನಾಗಿ ಬಿಂಬಿಸಲಾಯಿತು. 'ಭಾಝೀ' (೧೯೫೧)ಯಂಥ ಚಿತ್ರಗಳಲ್ಲಿ

ಪೊಲೀಸ್‌ರನ್ನು ಖಾಸಗಿ ಹಿತಗಳಿಗೂ ಮೀರಿ ನೈತಿಕ ಹೊಣೆ ಹೊತ್ತವರನ್ನಾಗಿ ಬಿಂಬಿಸಲಾಗಿದೆ. ಹೀಗೆ ರಾಜ್ಯದ 'ಅಧಿಕಾರದ' ಬಗೆಗೆ ಗೌರವ ಎಪ್ಪತ್ತರ ದಶಕದವರೆಗೂ ಮುಂದುವರೆಯುತ್ತದೆ. 'ದೀವಾರ್' (೧೯೭೫)ನಲ್ಲಿ ಬರುವ ಪೊಲೀಸನೊಬ್ಬನ ಕಿರಿಯ ಸೋದರನ ನೈತಿಕ ಘನತೆ ಗಾಂಭೀರ್ಯ ಇದಕ್ಕೊಂದು ಉದಾಹರಣೆ. ಆದರೆ ೧೯೮೦ರ ದಶಕದ ಆರಂಭದಲ್ಲಿ ಏನಾಯಿತೋ ಏನೋ ಹಿಂದಿ ಚಲಚ್ಚಿತ್ರದಲ್ಲಿ ಪೊಲೀಸರೂ (ಮತ್ತು ನ್ಯಾಯಾಂಗ ಕಾರ್ಯಕರ್ತರು) ದಗಾಕೋರ ಒಡೆಯರುಗಳ ಕೃಪಾಕಟಾಕ್ಷಕ್ಕೊಳಗಾದ ದುರ್ಬಲ ಭ್ರಷ್ಟ ವ್ಯಕ್ತಿಗಳಾಗಿ ಇದ್ದಕ್ಕಿದ್ದಂತೆ ಬದಲಾಗುತ್ತಾರೆ (ಅಗ್ನಿಪಥ, ೧೯೮೯). ಇಂಥವರ ಜೊತೆ ಜೊತೆಗೇ ನಿಷ್ಠಾವಂತ ಪೊಲೀಸು/ನ್ಯಾಯಾಂಗ ಕಾರ್ಯಕರ್ತರೂ ಕಾಣಬರುತ್ತಾರೆ ('ಇನ್ಸಾಫ್ ಕಾ ತರಜು' ೧೯೮೦). ಎಂಬತ್ತರ ದಶಕದಲ್ಲಿ ಭಾರತೀಯ ರಾಜಕಾರಣದಲ್ಲಿ ಕೇಂದ್ರ ಸರಕಾರದ ವಿರುದ್ಧ ಸ್ಥಳೀಯ ಗುಂಪುಗಳ ಪ್ರತಿರೋಧದ ಫಲವಾಗಿ 'ವಿಭಜಕ ಶಕ್ತಿಗಳು' ಮೇಲುಗೈ ಪಡೆಯುತ್ತವೆ. ಪ್ರಾದೇಶಿಕ ರಾಜಕಾರಣ ಉಗ್ರರೂಪ ತಳೆಯುತ್ತದೆ. ರಾಜ್ಯಾಧಿಕಾರ ದುರ್ಬಲಗೊಂಡ ಈ ಹಿನ್ನೆಲೆಯಲ್ಲಿ ಪೊಲೀಸರ ಚಿತ್ರಣವನ್ನು ಕಾಣಬೇಕು. ಅದೇ ವೇಳೆ ಗ್ಯಾಂಗುಗಳು ಬಲಗೊಂಡುದನ್ನು ('ಅಂಕುಶ್', ೧೯೮೫, 'ತೇಜಾಬ್', ೧೯೮೭), ಜಾತಿಮತಗಳ ಪ್ರಭಾವ ಹೆಚ್ಚಿದುದನ್ನು ('ಘುಲಾಮಿ' ೧೯೮೫) ಮತ್ತು ಪ್ರಾದೇಶಿಕ ಶಕ್ತಿಗಳು ಬಲವರ್ಧಿಸಿಕೊಂಡುದನ್ನು ('ಏಕ್ ದೂಜೇ ಕೇಲಿಯೆ', ೧೯೮೧) ಹಿಂದಿ ಚಿತ್ರಗಳು ಬಿಂಬಿಸಿವೆ.

೧೯೯೧-೯೨ರಲ್ಲಿ ಕೈಗೊಂಡ ಉದಾರೀಕರಣ ಕ್ರಮಗಳು ಹಿಂದಿ ಚಿತ್ರಗಳಲ್ಲಿ ರಾಜ್ಯ ತನ್ನ ಸಂಸ್ಥೆಗಳಿಂದಲೇ ಹಿಂದೆ ಸರಿದಂತೆ, ಪೊಲೀಸರು ಖಾಸಗಿ ಸಂಸ್ಥೆಗಳ ಹಾಗೆ ವರ್ತಿಸುವಂತೆ ಬಿಂಬಿತವಾಗಿವೆ ('ಸತ್ಯ', ೧೯೯೯). ೧೯೮೦ರ ದಶಕದಲ್ಲಿ ಪೊಲೀಸರು ತಮ್ಮ ಎದುರಾಳಿಗಳಿಗಿಂತ ದುರ್ಬಲರಾಗಿದ್ದಲ್ಲಿ ಈಗ ಅವರು ಶಕ್ತಿಯುತರಾಗಿ ಕಾಣಬರುತ್ತಾರೆ. ಆದರೂ ಅವರು ರಾಜ್ಯಾಧಿಕಾರದ ಪ್ರತಿನಿಧಿಗಳಾಗಿಯೇ ಉಳಿಯುತ್ತಾರೆ – ಹಿಂದಿ ಚಿತ್ರಗಳಲ್ಲಷ್ಟೇ ಅಲ್ಲ, ಕನ್ನಡ ಚಿತ್ರಗಳಲ್ಲೂ 'ಮೆಜೆಸ್ಟಿಕ್' ಹಾಗೂ 'ದುರ್ಗಿ' ಚಿತ್ರಗಳಲ್ಲಿ ಶಾಸಕರುಗಳು ಪೊಲೀಸು ಅಧಿಕಾರಿಗಳನ್ನು ಅತ್ಯಂತ ಗೌರವದಿಂದ ಕಾಣುವುದು ಇದಕ್ಕೆ ನಿದರ್ಶನ. 'ದುರ್ಗಿ' ಚಿತ್ರದ ಆರಂಭವೇ ಅಶೋಕ ಸಿಂಹದ ರಾಜ್ಯ ಸಂಕೇತದೊಂದಿಗೆ ಪೊಲೀಸರು ಮೆರವಣಿಗೆ ಹೋಗುತ್ತಿರುವುದನ್ನು ತೋರಿಸುತ್ತದೆ. ಅದೂ 'ಪೇಜ್ ೩' (೨೦೦೫)ರಂಥ ಈಚೆಗಿನ ಹಿಂದಿ ಚಿತ್ರಗಳಲ್ಲಿ ಪೊಲೀಸರ ನ್ಯಾಯಹೀನ ವಿಧಾನಗಳಿಗೆ ಅನುಮೋದನೆ ನೀಡಿರುವುದನ್ನು ನಾವು ಕನ್ನಡ ಚಿತ್ರಗಳಲ್ಲಿ ಕಾಣುವುದಿಲ್ಲ. ಇದಕ್ಕೆ ಕಾರಣ, ಬಹುಶಃ ಹಿಂದಿ ಚಿತ್ರಗಳು ಇಡೀ ರಾಷ್ಟ್ರವನ್ನು ದೃಷ್ಟಿಯಲ್ಲಿಟ್ಟುಕೊಂಡು ನಿರ್ಮಿತವಾಗಿ ರಾಷ್ಟ್ರೀಯತೆಯ ಬೆಳವಣಿಗೆಯಲ್ಲಿ ಕ್ರಿಯಾಶೀಲ ಪಾತ್ರ ನಿರ್ವಹಿಸುತ್ತಿರುವುದಾಗಿ ಕಂಡುಕೊಂಡಲ್ಲಿ ಪ್ರಾದೇಶಿಕ ಚಿತ್ರಗಳು ಹಾಗೆ ಮಾಡದೆ ಇರುವುದಾಗಿದೆ. ಮೇಲೆ ನಮೂದಿಸಿದ ನಾಲ್ಕು ಕನ್ನಡ ಚಲಚ್ಚಿತ್ರಗಳಲ್ಲಿ ಕಂಡುಬರುವ ಯೋಗ್ಯ ಪೊಲೀಸು ಅಧಿಕಾರಿಯು ಕೇಂದ್ರ ಸರಕಾರದಿಂದ ನೇಮಿತನಾದವನಂತೆ ತೋರಿಸಲ್ಪಟ್ಟಿರುವುದು ('ದುರ್ಗಿ' ಚಿತ್ರದಲ್ಲಿ) ಗಮನಾರ್ಹ ಅಂಶ.

ಗಮನಿಸಬೇಕಾದ ಮತ್ತೊಂದು ಅಂಶವೆಂದರೆ – ಕಾನೂನು ವ್ಯವಸ್ಥೆ ಬೆಂಗಳೂರಿನಲ್ಲಷ್ಟೇ ಕಂಡುಬರುವುದು ಎಂಬುದು. 'ದುರ್ಗಿ' ಚಿತ್ರದಲ್ಲಿ ಬರುವ ಗ್ರಾಮೀಣ ಪೊಲೀಸು ಇನ್ಸ್‌ಪೆಕ್ಟರ್‌ನು ಬೆಂಗಳೂರು ಹಿತಗಳ ಏಜೆಂಟ್ ಆಗಿ ವರ್ತಿಸುತ್ತಾನೆ. ಅಂದರೆ ಸ್ಥಳೀಯ ಅಧಿಕಾರವೂ ತನ್ನ ಕೇಂದ್ರ ಕಛೇರಿಯನ್ನು ಬೆಂಗಳೂರಿನಲ್ಲಿ ಕಂಡುಕೊಳ್ಳುತ್ತದೆಯಷ್ಟೇ ಅಲ್ಲ, ಆ ನಗರದ ಹಿತಕ್ಕೆ ಅನುಗುಣವಾಗಿಯೇ ವರ್ತಿಸುತ್ತದೆ ಎಂಬುದು ಇದರ ಇಂಗಿತ. ಆದರೆ ಬೆಂಗಳೂರಿನೊಳಗೇ ಪೊಲೀಸರು ನಿಷ್ಕ್ರಿಯರು, ಆದರೂ ಸ್ವಯಂತೃಪ್ತರು. ಅಧಿಕಾರವಿದ್ದರೂ ನಿಯಂತ್ರಣ ಏರ್ಪಡಿಸುವ ಬಯಕೆಯನ್ನೂ ತೋರರು. 'ಮೆಜೆಸ್ಟಿಕ್' ಹಾಗೂ 'ಜೋಗಿ' ಚಿತ್ರಗಳೆರಡರಲ್ಲೂ ಅವರೇ ಕಾನೂನುಬಾಹಿರ ಪಾತಕ ಕೃತ್ಯಗಳ ಪ್ರೇರಕರು. ಆದರೆ ಇಲ್ಲಿ ಕಾನೂನುಬಾಹಿರ ಸ್ಥಿತಿಯನ್ನು ಅತಿಯಾಗಿ ಉತ್ಪ್ರೇಕ್ಷಿಸಲಾಗಿದೆ. ಅದು ಪ್ರಾತಿನಿಧಿಕವಲ್ಲ, ಎಂದೇ ನನ್ನ ಭಾವನೆ. ಇದೊಂದು 'ಸಾಮಾಜಿಕ ಡಾರ್ವಿನ್‌ವಾದ' – ನಿಯಂತ್ರಣರಹಿತ ಪೈಪೋಟಿ. ಚಿತ್ರಗಳಲ್ಲಿ ಕಾಣಬರುವ ಅರಾಜಕತೆ ರಾಜ್ಯ ಪ್ರೇರಿತ. ರಾಜ್ಯವು ಉದ್ದೇಶಪೂರ್ವಕವಾಗಿಯೇ ಹಿಂದಕ್ಕೆ ಸರಿದುದರಿಂದ ಉಂಟಾದುದು. ಕನ್ನಡ ಚಿತ್ರಗಳು 'ಸಾಮಾಜಿಕ ಡಾರ್ವಿನ್ ವಾದ'ವನ್ನು 'ಸತ್ಯ' ಹಾಗೂ 'ಕಂಪನಿ' (೨೦೦೧)ಗಳಂಥ ಹಿಂದಿ ಚಿತ್ರಗಳಿಗಿಂತ ಹೆಚ್ಚು ಗಾಬರಿಯಿಂದ ಪರಿವೀಕ್ಷಿಸಿದಲ್ಲಿ ಅದಕ್ಕೆ ಕಾರಣ ಬಹುಶಃ ಬೆಂಗಳೂರಿನ ಆರ್ಥಿಕ ಪರಿವರ್ತನೆಯು ಮುಂಬಯಿಯ ಆರ್ಥಿಕ ಪರಿವರ್ತನೆಗಿಂತ ಹೆಚ್ಚು ಹಠಾತ್ತಾಗಿ ಆಗಿರುವುದಾಗಿದೆ. ಇದು ಬಹುಶಃ ಮೇಲು ನೋಟಕ್ಕೆ ಸುಲಭವಾಗಿ ತಿಳಿದುಬರುವಂತಹುದಲ್ಲ.

**ಹೊರಗಿನವ/ವಲಸೆ ಬಂದವ**

ಈ ಚಿತ್ರಗಳ ನಾಯಕ ನಗರದ ಹೊರಗಿನಿಂದ ಬಂದವ, ಇಲ್ಲವೇ ಹಾಗೆ ವಲಸೆ ಬಂದವರ ಮೊದಲನೆಯ ಪೀಳಿಗೆಯವ. ಇಂಥವನು ನಗರದೊಂದಿಗೆ ಸಂಪೂರ್ಣವಾಗಿ ಹೊಂದಿಕೊಂಡು ಹೋಗಲಾರ ಎಂಬುದು ಸಾಮಾನ್ಯ ಭಾವನೆ. 'ದುರ್ಗಿ' ಚಿತ್ರದ ಪಾತ್ರಗಳು ಬೆಂಗಳೂರಿನಲ್ಲಿ ಪುಟ್ಟ ಊರೊಂದರ ಹೆಂಗಸಿನ ಹೆಸರುಳ್ಳ (ಮಂಡ್ಯ ಮಂಗಮ್ಮ) ಕಾಲೋನಿಯಲ್ಲಿ ವಾಸಿಸುತ್ತ ಅಲ್ಲಿನ ಜನ ಸಮುದಾಯದ ಒಂದು ಭಾಗವಾಗುತ್ತಾರೆ. ತಾತ್ಕಾಲಿಕ ವಸತಿಗಳಲ್ಲಿ ಬೀಡುಬಿಟ್ಟ ವಲಸೆಗಾರರು ಜೋಗಿಗೆ ಒಂದು ವಿಶೇಷ ಸಮುದಾಯವಾಗಿ ಕಾಣಬರುತ್ತಾರೆ – ಅವನು ದರೋಡೆಕೋರರ ಗುಂಪಿನ ಒಡೆಯನಾಗಿದ್ದಾಗಲೂ. ನಗರದ ಹೊರಗಿನಿಂದ ಬಂದ ನಾಯಕನಿಗೂ ನಗರದೊಳಗಿನ ಯುವತಿಗೂ ನಡುವೆ ಪ್ರೇಮ ಪ್ರಸಂಗ ಅಸಾಧ್ಯ ಎಂಬ ಭಾವನೆ ಮಹತ್ವದ್ದೆಂದೇ ನನಗೂ ಅನಿಸುತ್ತದೆ. ನಗರ ಯುವತಿಯರು ಕಾಲೇಜು ವಿದ್ಯಾರ್ಥಿನಿಯರು ('ಯುವ ಜನಾಂಗ' ಅಲ್ಲ). ಹೀಗೆ ನಗರವನ್ನು 'ಘನ ಕೈಗಾರಿಕೆ'ಯೊಂದಿಗೆ ಸಂಬಂಧಿಸುವುದು ಮುಗ್ಧತನದ್ದಾಗಿರಬಹುದು. ಇದಕ್ಕೂ ಹೆಚ್ಚು ಮುಖ್ಯವಾಗಿ, 'ಕಿಟ್ಟಿ' ಚಿತ್ರದಲ್ಲಷ್ಟೇ ಪ್ರಣಯ ಪ್ರಸಂಗ ಸಂತಸದ ಅಂತ್ಯ ಕಾಣುತ್ತದೆ. ಇದರಲ್ಲಿ ಯುವತಿಯೂ ನಾಯಕನೂ ನಗರದ ಹೊರಗಿನಿಂದ ಬಂದವರೇ.

ಬೆಂಗಳೂರು ಒಂದು ಬಹುಭಾಷಾ ನಗರ. ಆದರೆ ಈ ಚಿತ್ರಗಳಲ್ಲಿನ ಘಟನೆಗಳು ಬೆಂಗಳೂರಿನ ಕನ್ನಡ ಭಾಷಾ ಪ್ರಧಾನ 'ಸಿಟಿ' ಭಾಗಗಳಿಗೆ ಸೀಮಿತ. ಇವುಗಳಲ್ಲಿ 'ಮೆಜೆಸ್ಟಿಕ್' ಪ್ರದೇಶವು ನಗರದ ಕೇಂದ್ರಭಾಗ (ಬೆಡಗಿನ ಕಂಟೋನ್ಮೆಂಟ್ ಪ್ರದೇಶಕ್ಕೆ ವಿರೋಧವಾಗಿ). ಇದೇ ರೀತಿ ಈ ಚಿತ್ರಗಳಲ್ಲಿ ಕಲಾಸಿಪಾಳ್ಯಂ ಹಾಗೂ ಮಾವಳ್ಳಿಗಳೂ ಮುಖ್ಯ ಭಾಗಗಳು. (ಈ ಹೆಸರುಗಳು ಕೆಲವು ಕನ್ನಡ ಚಿತ್ರಗಳ ಹೆಸರುಗಳಲ್ಲಿ ಸೇರ್ಪಡೆಯಾಗಿವೆ.) ಬೆಂಗಳೂರಿನಲ್ಲಿ ನಾನಾ ಭಾಷೆಗಳನ್ನಾಡುವ ಜನರಿದ್ದರೂ, ಭಾಷಾ ವೈಪರೀತ್ಯಗಳನ್ನು ಕನ್ನಡ ಚಿತ್ರಗಳಲ್ಲಿ ಒಂದು ಸಮಸ್ಯೆಯನ್ನಾಗಿ ಕಂಡಿಲ್ಲ. ಬೆಂಗಳೂರಿನೊಳಗಿನ ಕನ್ನಡಿಗರ ಹಾಗೂ ಕನ್ನಡೇತರರ ನಡುವಿನ ಘರ್ಷಣೆಯನ್ನು ಮುಖ್ಯ ವಸ್ತುವನ್ನಾಗಿ ಮಾಡುವುದಕ್ಕಿಂತ ಹೆಚ್ಚಾಗಿ, ನಗರದ ಮೂಲ ನಿವಾಸಿಗಳ ಹಾಗೂ ನಗರದ ಹೊರಗಿನಿಂದ ಬಂದವರ ನಡುವಿನ ಘರ್ಷಣೆಯೇ ಇಲ್ಲಿ ಮೂಲ ವಸ್ತುವಾಗಿದೆ. ನಗರದ ಹೊರಗಿನಿಂದ ಬಂದವರು ಸ್ಥಳೀಯರೊಂದಿಗೆ ಒಂದುಗೂಡುವ ಸಾಧ್ಯತೆಯನ್ನು ಸತತವಾಗಿ ಕಡೆಗಣಿಸಲಾಗಿದೆ. ಹೀಗೆ 'ಬೆಂಗಳೂರ'ನ್ನು ಪರಿಣಾಮದಲ್ಲಿ ಹೊರಗಿನವರಿಗೆ 'ಅಲಭ್ಯ'ವೆಂದು ಕನ್ನಡ ಚಲಚ್ಚಿತ್ರದಲ್ಲಿ ತೋರಿಸಲಾಗಿದೆ. ಆದರೆ ನಗರದ ಹೊಸ ಚಲಚ್ಚಿತ್ರಗಳು ಬೆಂಗಳೂರಿನ ವೈಭವಪೂರ್ಣ ಜೀವನ ಶೈಲಿಗೆ ಒತ್ತುನೀಡಿವೆ (ಫಜನಿ, ತಮಿಳು ೨೦೦೬). ಕನ್ನಡ ಚಲಚ್ಚಿತ್ರಗಳು ಬಳಕೆಗಾರ ಜೀವನ ಶೈಲಿಗೆ ಅಷ್ಟು ಒತ್ತು ನೀಡಹೋಗಿಲ್ಲ. ಹಾಗೆ ಮಾಡುವುದು





ದರ್ಶನ್ 'ಕಿಟ್ಟಿ' ಚಿತ್ರದಲ್ಲಿ

ಅಂತಹ ಜೀವನಶೈಲಿ ಪಡೆಯಲು ಅಸಮರ್ಥರಾದವರಿಗೆ ಇಷ್ಟವಾಗದೆ ಹೋಗಬಹುದೇನೋ ಎನ್ನುವಂತೆ.

**ಸಮಾರೋಪ**

ಕನ್ನಡ ಚಲಚ್ಚಿತ್ರಗಳಲ್ಲಿ ಬೆಂಗಳೂರನ್ನು ನಾನಾ ರೀತಿಗಳಲ್ಲಿ ಬಿಂಬಿಸಲಾಗಿದೆ. 'ಸ್ಕೂಲ್ ಮಾಸ್ಟರ್' (೧೯೫೮) ಚಿತ್ರದಲ್ಲಿ ಮೊದಲು ಬೆಂಗಳೂರು ಬಳಕೆಗೆ ಬಂದಿದೆ. ಇಲ್ಲಿ ಬೆಂಗಳೂರು ಕನ್ನಡ ಮಾತನಾಡುವವರ ಜನರ ನಡುವಿನ ಪ್ರಣಯ ಪ್ರಸಂಗಕ್ಕೆ ಸೌಲಭ್ಯ ಒದಗಿಸುವ ಪ್ರದೇಶವಾಗಿ ಚಿತ್ರಿತವಾಗಿದೆ. 'ರಾಜಾ ನನ್ನ ರಾಜಾ' (೧೯೭೬)ದಂಥ ಚಿತ್ರಗಳಲ್ಲಿ ಹೊರಗಿನವ ನಗರದ ಯುವತಿಯೊಂದಿಗೆ ಸುಲಭವಾಗಿ ಪ್ರಣ... ಸಾಧಿಸುತ್ತಾನೆ. ಆದರೆ ಅವರ ಸಂಪತ್ತುಗಳ ನಡುವಿನ ವ್ಯತ್ಯಾಸ ಸಮಸ್ಯೆ ಯಾಗುತ್ತದೆ. 'ಮೇಯರ್ ಮುತ್ತಣ್ಣ' (೧೯೬೯)ನಲ್ಲಿ ಹೊರ ಊರಿನಿಂದ ಬಂದವ ಮೇಯರ್ ಆಗುತ್ತಾನೆ. ಆದರೆ, ಈಚೆಗಿನ ಮೇಲೆ ನಮೂದಿಸಿದ ನಾಲ್ಕು ಕನ್ನಡ ಚಿತ್ರಗಳ... ಬೆಂಗಳೂರಿನ ಚಿತ್ರಣ ಕುತೂಹಲಕರವಾಗಿದೆ. ಬೆಂಗಳೂರು ಕೈಗಾರಿಕೆಗಳಿಗೆ ಒದಗಿ... ಕೊಡುತ್ತಿರುವ ಅಧಿಕಾನುಕೂಲತೆಗಳು ಉಳಿಯುವಂತೆ ಮಾಡಲೋಸುಗ ಈ ನಗರದ ಆಡಳಿತವನ್ನು ದೆಹಲಿಯಿಂದ ನಡೆಸಬೇಕು. ಅದು ಒಂದು 'ಯೂನಿಯನ್ ಟೆರಿಟರಿ'ಯಾಗಬೇಕು ಎಂದು ಕೆಲ ತಿಂಗಳ ಹಿಂದೆ ಐಟಿ ದಿಗ್ಗಜರೊಬ್ಬರು ಸಲಹೆ ಮಾಡಿ ಭಾರಿ ಕ್ಷೋಭೆಯನ್ನೇ ಉಂಟುಮಾಡಿದರು. ಕನ್ನಡ ಸಿನಿಮಾ ರಂಗಕ್ಕೆ ಬೆಂಗಳೂರಿನಿಂದ ಏನು ಅನುಕೂಲಗಳಿವೆ ಎಂಬುದು ಅವರ ದೃಷ್ಟಿಯಲ್ಲಿರಲಿಲ್ಲ. ಆದರೆ ಕನ್ನಡ ಸಿನಿಮಾ ರಂಗವೂ ಬೆಂಗಳೂರನ್ನು ಒಂದು 'ಕಳೆದುಹೋದ' ನಗರವನ್ನಾಗಿಯೇ ಭಾವಿಸುತ್ತದೆ. ನಗರದ ಹಿನ್ನಾಡಿನವರಿಗೆ ಈ ಊರು ಅಲಭ್ಯ, ಅವರು ಎಂದೂ ಅದರೊಂದಿಗೆ ಒಂದು ಗೂಡಲಾಗದಂಥ ಪ್ರದೇಶ. ರಾಜ್ಯ ಅಧಿಕಾರವೂ – ಇದಂತೂ ಬೆಂಗಳೂರು ಬಿಟ್ಟು ಬಹುಮಟ್ಟಿಗೆ ಉಳಿದ ಎಲ್ಲೆಡೆಗಳಲ್ಲೂ ಅದೃಶ್ಯ – ಈ ಊರಿಗೆ ಸಂಬಂಧಿಸಿ ತನ್ನ ಜವಾಬ್ದಾರಿಗಳನ್ನು ಬಿಟ್ಟುಕೊಟ್ಟಿದೆ. ಹೀಗೆ ಮೇಲುನೋಟಕ್ಕೆ ಕಾಣಬರುವಂಥ ಈ ದೃಶ್ಯ- ಕಲ್ಪನೆಗಳ ಹಿನ್ನೆಲೆಯಲ್ಲಿ ಬೆಂಗಳೂರಿನಲ್ಲಿ ಚಲಚ್ಚಿತ್ರಕ್ಕೆ ಸಂಬಂಧಿಸಿದ ಪ್ರದರ್ಶನ ಮೆರವಣಿಗೆಗಳು ಜರುಗಿದಾಗಲೆಲ್ಲ ಹಿಂಸಾಚಾರಕ್ಕೆ ಎಷ್ಟು ಮಾತ್ರವೂ ಸಮರ್ಥರಲ್ಲ ಎನ್ನುವಂಥವರೂ – ಸೊರಗಿದ ವೃದ್ಧ ಮಹಿಳೆಯರೂ – ಅತ್ಯಾವೇಶದಿಂದ ಆಸ್ತಿಪಾಸ್ತಿ ನಾಶಗೊಳಿಸುವುದನ್ನು ಬೆಂಗಳೂರು ನಿವಾಸಿಗಳು ಕಾಣುವುದರಲ್ಲಿ ಆಶ್ಚರ್ಯವೇನುಂಟು ?

---

ಮೂಲ : ಎಂ. ಕೆ. ರಾಘವೇಂದ್ರ
ಸಂ. ೧೧, ೨೪ನೇ ಮುಖ್ಯರಸ್ತೆ, ಜೆ.ಪಿ.ನಗರ ೧ನೇ ಹಂತ, ಬೆಂಗಳೂರು - ೫೬೦ ೦೭೮
ಕನ್ನಡಕ್ಕೆ : ಕೆ. ಎಲ್. ಗೋಪಾಲಕೃಷ್ಣ ರಾವ್

# ಖೋಕಾ ಬಾಬು ಮರಳಿ ಬಂದದ್ದು



**ತ**ನ್ನ ಒಡೆಯನ ಮನೆಯಲ್ಲಿ ಕೆಲಸಕ್ಕೆ ಸೇರಿದಾಗ ರಾಯ್‌ಚರಣ್‌ಗೆ ಹನ್ನೆರಡು ವರ್ಷ. ಅವನು ಜೆಸ್ಸೂರ್ ಜಿಲ್ಲೆಯವನು. ಕಪ್ಪುವರ್ಣದ, ನೀಳಕಾಯದ ಹುಡುಗ. ಉದ್ದನೆಯ ಕೂದಲು ಹಾಗೂ ವಿಶಾಲ ಕಣ್ಣುಗಳು. ಕಾಯಸ್ಥ ಜಾತಿಯ ಹುಡುಗ. ಅವನ ಒಡೆಯನ ಮನೆಯವರೂ ಕಾಯಸ್ಥ ಬ್ರಾಹ್ಮಣರು. ತನ್ನ ಒಡೆಯನ ಒಂದು ವರ್ಷದ ಮಗುವನ್ನು ನೋಡಿಕೊಳ್ಳುವುದು ಅವನ ಮುಖ್ಯ ಕೆಲಸವಾಗಿತ್ತು.

ಮಗುವಿನ ಹೆಸರು ಅನುಕೂಲ್. ಸಕಾಲದಲ್ಲಿ ಅನುಕೂಲನು ಶಾಲೆಗೆ ಸೇರಿದ, ನಂತರ ಕಾಲೇಜಿಗೆ. ಕಾಲೇಜು ಶಿಕ್ಷಣ ಮುಗಿಸಿ ನ್ಯಾಯಾಧೀಶನಾದ. ಆಗ ಸಹಿತ ರಾಯಚರಣನು ಅವನ ಸೇವಕನಾಗಿದ್ದ.

ಅನುಕೂಲನ ಮದುವೆಯಾದಾಗ ರಾಯಚರಣನು ಅವನ ಮೇಲೆ ಹೊಂದಿದ್ದ ಅಧಿಕಾರವು ಸಹಜವಾಗಿ ಹೊಸ ಒಡತಿಯ ಕೈಗೆ ಬಂತು.

ರಾಯಚರಣನ ಅಧಿಕಾರವು ಕೊಂಚ ಕಡಿಮೆಯಾದರೂ, ಅದಕ್ಕೆ ಪರಿಹಾರವೆಂಬಂತೆ, ಅನುಕೂಲನಿಗೆ ಗಂಡು ಮಗುವಾದಾಗ ಮನೆಯೊಡತಿಯು ಅವನಿಗೆ ಒಂದು ಹೊಸ ಜವಾಬ್ದಾರಿಯನ್ನು ಕೊಟ್ಟಳು. ಅಂದರೆ, ಮಗುವನ್ನು ನೋಡಿಕೊಳ್ಳುವ ಕೆಲಸ. ರಾಯಚರಣ್ ಈ ಕೆಲಸವನ್ನು ಚೆನ್ನಾಗಿ ನಿಭಾಯಿಸಬಲ್ಲವನಾಗಿದ್ದ. ಅವನಿಗೆ ತುಂಬ ಖುಷಿಯಾಯಿತು.

ಅವನು ಮಗುವನ್ನು ತೊಟ್ಟಿಲಲ್ಲಿ ಹಾಕಿ ಜೋರಾಗಿ ತೂಗುವನು, ತೋಳಲ್ಲಿ ಮಗುವನ್ನೆತ್ತಿಕೊಂಡು ಅದನ್ನು ಮೇಲಕ್ಕೆ ಚಿಮ್ಮಿ ಅದ್ಭುತವಾಗಿ ಮತ್ತೆ ಕೈಯಲ್ಲಿ ಹಿಡಿಯುವನು, ಆ ಹುಡುಗನ ಮುಂದೆ ಜೋರಾಗಿ ತಲೆ ಅಲ್ಲಾಡಿಸುತ್ತಾ ನಿಲ್ಲುವನು, ಹುಚ್ಚುಹುಚ್ಚು ಪ್ರಶ್ನೆಗಳನ್ನು ಕೇಳುವನು (ಉತ್ತರ ಬರುವುದಿಲ್ಲವೆಂದು ಗೊತ್ತಿದ್ದರೂ ಕೂಡ). ಅವನು ಪ್ರಶ್ನೆಗಳನ್ನು ಎಷ್ಟು ತಮಾಷೆಯಾಗಿ ಮತ್ತು ಹಾಡು ಹೇಳುವಂತೆ ರಾಗಬದ್ಧವಾಗಿ ಕೇಳುತ್ತಿದ್ದನೆಂದರೆ, ಅನುಕೂಲನ ಈ ತದ್ರೂಪಿ ಮಗುವಿಗೆ ರಾಯಚರಣನನ್ನು ಕಂಡರೆ ತುಂಬ ಖುಷಿಯಾಗುವುದು.

ಮಗು ಹೊಸಿಲನ್ನು ದಾಟಲು ಕಲಿತೊಡನೆ, ಅದು ನಗುತ್ತಾ ಅಂಬೆಗಾಲಿಟ್ಟು ಮುನ್ನಡೆಯುತ್ತಿರುವಾಗ ಯಾರಾದರೂ ಅದನ್ನೆತ್ತಿಕೊಳ್ಳಲು ಬಂದರೆ, ಎಲ್ಲಾದರೂ ಬಚ್ಚಿಟ್ಟುಕೊಳ್ಳಲೆಂಬಂತೆ ಸರಸರನೆ ನಡೆಯುವುದು.

---

ಮೂಲ : ರವೀಂದ್ರನಾಥ ಠಾಕೂರ್

**ಕನ್ನಡಕ್ಕೆ : ಪ್ರೊ॥ ಶ್ರೀನಿವಾಸ್ ವಿ. ಸುತ್ರಾವೆ**

---

ಇಂಥ ತೀರ್ಮಾನ ತೆಗೆದುಕೊಳ್ಳುವಂಥ ಅಸಾಧಾರಣ ಜಾಣ್ಮೆಯನ್ನು ಕಂಡು ರಾಯಚರಣನಿಗೆ ಆಶ್ಚರ್ಯವಾಗುವುದು. ಅವನು ಮಗುವಿನ ತಾಯಿಯ ಬಳಿ ಹೋಗಿ ಬಹು ಹೆಮ್ಮೆಯಿಂದ, ''ಅಮ್ಮಾವ್ರೆ, ನಿಮ್ಮ ಮಗ ದೊಡ್ಡವನಾದಾಗ ಜಡ್ಜ್ ಆಗಿ ತಿಂಗಳಿಗೆ ಐದುಸಾವಿರ ಸಂಪಾದಿಸ್ತಾನೆ ನೋಡಿ ಬೇಕಾದರೆ'' ಎನ್ನುವನು.

ಆ ವಯಸ್ಸಿನ ಬೇರೆ ಯಾವ ಮಗುವೂ ಆ ಥರ ಅಷ್ಟು ಬೇಗ ಹೊಸಿಲು ದಾಟಿ ಆ ಥರ ಆಡಲಿಕ್ಕೆ ಸಾಧ್ಯವೇ ಇಲ್ಲ ಎಂಬುದು ರಾಯಚರಣನ ದೃಢ ನಂಬಿಕೆಯಾಗಿತ್ತು, ಆದರೆ ಮುಂದೆ ಜಡ್ಜ್ ಆಗುವಂಥ ಹುಡುಗನಿಗೆ ಯಾವುದೂ ಅಸಾಧ್ಯವಲ್ಲವಲ್ಲ!

ಬಹುಬೇಗ ಆ ಮಗು ದಟ್ಟಗಾಲು ಹಾಕಿ ನಡೆಯಲಿಕ್ಕೂ ಶುರುಮಾಡಿತು. ಆಶ್ಚರ್ಯ! ಅದು ತನ್ನ ತಾಯಿಯನ್ನು 'ಅಮ್ಮ' ಎಂದೂ, ಸೋದರತ್ತೆಯನ್ನು 'ನಾನಾ' ಎಂದೂ ಕರೆದರೆ, ರಾಯಚರಣ್‌ಗೆ ಮಾತ್ರ 'ಚನ್ನಾ' ಅನ್ನುತ್ತಿತ್ತು. ರಾಯ್‌ಚರಣ್ ತನಗೆ ಸಿಕ್ಕವರೆಲ್ಲರ ಹತ್ತಿರ ಹೇಳುತ್ತಾನೆ: ''ಏನು ಗೊತ್ತಾ, ಈ ಮಗು ತಾಯಿಗೆ 'ಅಮ್ಮ' ಅನ್ನುತ್ತೆ, ಅತ್ತೆಗೆ 'ನಾನಾ' ಅನ್ನುತ್ತೆ, ಆದರೆ ನನಗೆ ಮಾತ್ರ 'ಚನ್ನಾ' ಅನ್ನುತ್ತೆ, ಎಷ್ಟು ಆಶ್ಚರ್ಯ, ಅಲ್ವಾ?'' ಈ ಮಗೂಗೆ ಇಂಥ ಜ್ಞಾನ ಅಷ್ಟು ಬೇಗ ಹ್ಯಾಗೆ ಬಂತು? ಆಶ್ಚರ್ಯ! ಎಂದುಕೊಳ್ಳುವನು ರಾಯಚರಣ್.

ಹುಡುಗನ ಜೊತೆ ಆಟದಲ್ಲಿ ಅವನು ಒಮ್ಮೆ ಕುದುರೆ ಪಾತ್ರ ಮಾಡಬೇಕಾಗಿ ಬರುತ್ತೆ, ಇನ್ನೊಮ್ಮೆ ಪೈಲ್ವಾನನದು. ಕುಸ್ತಿ ಆಡಿ ರಾಯ್‌ಚರಣ್ ನೆಲಕ್ಕೆ ಬಿದ್ದು ಸೋಲು ಒಪ್ಪಿಕೊಳ್ಳಲಿಲ್ಲವೆಂದರೆ ಬಂಡಾಯವಾಗುತ್ತಿತ್ತು.

ಈ ಹೊತ್ತಿಗೆ ಅನುಕೂಲನಿಗೆ ಪದ್ಮಾನದೀ ತೀರದ ಜಿಲ್ಲೆಯೊಂದಕ್ಕೆ ವರ್ಗವಾಯಿತು. ಅನುಕೂಲನು ಮಗನಿಗಾಗಿ ಕಲ್ಕತ್ತೆಯಿಂದ ಒಂದು ವಾಯುವಿಹಾರದ ಗಾಡಿಯನ್ನು ತರಿಸಿದನು. ರಾಯಚರಣನು ಮಗುವಿಗೆ ಸ್ಯಾಟಿನ್‌ಸೂಟ್, ಗೋಲ್ಡ್‌ಲೇಸಿನ ಕ್ಯಾಪ್, ಬಂಗಾರದ ಕೈಕಡಗ ಮತ್ತು ಕಾಲ್ಕಡಗಗಳನ್ನು ಹಾಕಿ ಸಿಂಗರಿಸಿ ಮಗುವನ್ನು ದಿನಕ್ಕೆರಡು ಸಲ ವಾಯುಸೇವನೆಗೆಂದು ಕರೆದುಕೊಂಡು ಹೋಗುವನು.

ಮಳೆಗಾಲ ಬಂತು. ಉಕ್ಕೇರಿದ ಪದ್ಮಾನದಿಯು ಹಳ್ಳಿಗಳನ್ನು, ತೋಟಗಳನ್ನು, ಭತ್ತದ ಗದ್ದೆಗಳನ್ನು ಒಂದೊಂದಾಗಿ ಮುಳುಗಿಸತೊಡಗಿತು. ದಂಡೆಗಳು ಉದುರಿಬೀಳುವ ಝುಪ್-ಝುಪ್ ಶಬ್ದ ಮತ್ತು ನೀರಿನ ಭೋರ್ಗರೆವ ಶಬ್ದ ಎಲ್ಲೆಡೆಯೂ ಅನುರಣಿಸುತ್ತಿತ್ತು. ನುಗ್ಗುವ ನದಿ ಎದೆ ನಡುಗಿಸುತ್ತಿತ್ತು.

ಅವತ್ತು ಮಧ್ಯಾಹ್ನ ಸ್ವಲ್ಪ ಮೋಡ ಕವಿದಿತ್ತಾದರೂ ಮಳೆಯೇನೂ ಬರಲಿಕ್ಕಿಲ್ಲ ಎನ್ನುವಹಾಗಿತ್ತು. ರಾಯಚರಣನ ಚಂಚಲ ಸ್ವಭಾವದ ಪುಟ್ಟ ಯಜಮಾನ ಮನೆಯೊಳಗಡೆ ಇರಲು ನಿರಾಕರಿಸಿದ. ಅವನು ತನ್ನ ಗಾಡಿಯನ್ನು ಹತ್ತಿಕುಳಿತ. ಅದನ್ನು ರಾಯಚರಣನು ನಿಧಾನವಾಗಿ ತಳ್ಳುತ್ತಾ ನದಿಯ ಬದಿಯ ಭತ್ತದ ಗದ್ದೆಯ ತನಕ ಬಂದನು. ನದಿಯಲ್ಲಿ ಯಾವ ದೋಣಿಯೂ ಇರಲಿಲ್ಲ, ಹೊಲದಲ್ಲೂ ಯಾರೂ ಇರಲಿಲ್ಲ. ಎದುರುಬದಿಯ ನಿರ್ಜನ ದಡದ ಮೇಲೆ, ಮೋಡಗಳ ಮಧ್ಯೆ ನೋಡಿದಾಗ, ಸೂರ್ಯನು ಮನೋಹರವಾಗಿ ಅಸ್ತಂಗತನಾಗುವ ಸಮಯವಾಯಿತು ಎಂದು ತಿಳಿಯಿತು. ಆ ನೀರವತೆಯಲ್ಲಿ ಆ ಪುಟ್ಟ ಹುಡುಗನು ಒಮ್ಮೆಲೆ ಮೇಲೆ ಕೈಮಾಡಿ ತೋರಿಸುತ್ತಾ, ''ಚನ್ನಾ, ಹೂ–'' ಎಂದ. ಅನತಿದೂರದಲ್ಲಿ ಒಂದು

ಕದಂಬ ವೃಕ್ಷವಿತ್ತು. ಅದರ ತುದಿಯ ಟೊಂಗೆಗಳ ಮೇಲೆ ಕೆಲವು ಹೂವುಗಳು ಅರಳಿದ್ದವು. ಆ ಹೂಗಳು ಮಗುವಿನ ಕಣ್ಸೆಳೆದಿದ್ದವು. ಕೆಲವು ದಿನಗಳ ಹಿಂದಷ್ಟೆ ರಾಯಚರಣನು ಕದಂಬ ಹೂಗಳನ್ನು ಪೋಣಿಸಿ ಒಂದು ಕೋಲಿಗೆ ಹಾಕಿ ಅದನ್ನೊಂದು ರಥವನ್ನಾಗಿ ಮಾಡಿದ್ದ. ಆ ಹುಡುಗನು ಆ ರಥವನ್ನು ಹೇಗೆ ಎಳೆದಿದ್ದನೆಂದರೆ, ಅವತ್ತಿನ ದಿನ ರಾಯಚರಣನು ಲಗಾಮನ್ನು ಧರಿಸಬೇಕಾಗಿರಲಿಲ್ಲ. ಅವನಿಗೆ ಒಮ್ಮೆಲೆ ಕುದುರೆಯಿಂದ ಕುದುರೆಯ ಉಸ್ತುವಾರಿಯನ್ನು ನೋಡಿಕೊಳ್ಳುವವನ ಸ್ಥಾನಕ್ಕೆ ಬಡ್ತಿ ಸಿಕ್ಕಿತ್ತು.

ಚನ್ನನು ಅಷ್ಟುದೂರ ಕೊಚ್ಚೆಯಲ್ಲಿ ಯಾಕೆ ಹೋಗಿ ಹೂವು ತರುವುದೆಂದು ಕೊಂಡು, ತಕ್ಷಣವೇ ಅವನ ಗಮನವನ್ನು ಬೇರೆಡೆ ಸೆಳೆದು, ''ಅಲ್ನೋಡು ! – ಆ ಹಕ್ಕಿ ನೋಡು – ಅರೆ, ಹಾರಿಹೋಯ್ತು ! ಓ, ಹಕ್ಕಿಮರಿ, ಬಾ, ಬಾ, ಬಾ !'' ಎಂದ. ನಂತರ ಅದು ಇದು ಮಾತಾಡುತ್ತಾ ಅವನು ವಿಹಾರದ ಗಾಡಿಯನ್ನು ಜೋರಾಗಿ ತಳ್ಳತೊಡಗಿದ.

ಆದರೆ ಜಡ್ಜ್ ಆಗುವಂಥ ಚತುರ ಹುಡುಗನಿಗೆ ಇಂಥ ಪೆದ್ದುಪೆದ್ದಾದ ರೀತಿಯಲ್ಲಿ ಮೋಸ ಮಾಡುವ ಹಾಗಿರಲಿಲ್ಲ. ಅದರಲ್ಲೂ ಮುಖ್ಯವಾಗಿ ಆ ಹೂಗಳ ಹಾಗೆ ಕಣ್ಸೆಳೆಯುವಂಥದ್ದು ಹತ್ತಿರದಲ್ಲಿ ಬೇರೆ ಯಾವುದೂ ಇದ್ದಿಲ್ಲ. ಇಲ್ಲದ ಹಕ್ಕಿಯ ಬಗ್ಗೆ ನಿಮ್ಮ ಉಪಾಯವೇನೂ ಸಫಲವಾಗಲಾರದು.

''ಹಾಗಾದ್ರೆ ತಾಳು, ನೀನು ಇಲ್ಲೇ ಕೂತಿರು, ಕಣ್ಣುಮುಚ್ಚಿ ತೆರೆಯೋದರೊಳಗೆ ನಾನು ಆ ಹೂಗಳನ್ನು ಕಿತ್ತು ತರ್ತೇನೆ. ಆದರೆ ಹುಷಾರು, ನೀರ ಹತ್ರ ಹೋಗ್ಬೇಡ'' ಎಂದ ರಾಯಚರಣ್. ಅವನು ತನ್ನ ಧೋತಿಯನ್ನು ಮೊಣಕಾಲವರೆಗೆ ಎತ್ತಿಕೊಂಡು, ಕದಂಬ ಮರದತ್ತ ನಡೆದ.



ನೀರ ಹತ್ರ ಹೋಗ್ಬೇಡ ಅಂತ ಹೇಳಿದ್ದೇ ತಪ್ಪಾಯ್ತು, ಯಾಕೆಂದರೆ ಆ ಮಗುವಿನ ಗಮನ ಈಗ ನೀರ ಕಡೆಯೇ ಹೋಯಿತು. ಆ ನದಿ ಎಷ್ಟು ರಭಸವಾಗಿ ಹರಿಯುತ್ತಿತ್ತು ಎಂಬುದನ್ನು ನೋಡಿದ. ಹರಿಯುವ ನೀರಿನ ಶಬ್ದ, ಅದರ ಹೊಡೆತ ಹೇಗಿತ್ತೆಂದರೆ ಅಲ್ಲಿ ದೈತ್ಯಾಕಾರದ ರಾಯಚರಣ್ ನಿಂತಿದ್ದಾನೆ, ಆದರೆ ಸಾವಿರಾರು ಹುಡುಗರು ತಮಾಷೆ ಮಾಡುತ್ತಾ, ಅವನ ಚಾಚಿದ ಕೈಗೆ ಸಿಗದಂತೆ ನಗುನಗುತ್ತಾ ಆ ನಿಷಿದ್ಧ ಜಾಗದತ್ತ ಓಡಿ ಹೋಗುತ್ತಿದ್ದರೇನೋ ಎಂಬಂತಿತ್ತು ಆ ಹುಡುಗನಿಗೆ.

ಅದನ್ನು ಕಂಡು ಆ ಹುಡುಗನಿಗೂ ಅಲ್ಲಿಗೆ ಹೋಗುವ ಆಸೆಯಾಯಿತು. ಅವನು ನಿಧಾನವಾಗಿ ಗಾಡಿಯಿಂದ ಕೆಳಗಿಳಿದು, ನೀರಿನ ಅಂಚಿನತ್ತ ಬಂದ. ಒಂದು ಉದ್ದನೆಯ ಜೊಂಡನ್ನೆತ್ತಿಕೊಂಡು, ಅದನ್ನು ಮೀನುಗಾಳದಂತೆ ಭಾವಿಸಿ, ಮೀನು ಹಿಡಿಯಲು ಮುಂದೆ ಬಗ್ಗಿದ. ಆ ತುಂಟ ನದಿ ಆ ಮಗುವನ್ನು ಪುಸಲಾಯಿಸಿ ತನ್ನ ಆಟದ ಕೋಣೆಗೆ ಕರೆಯಿತು.

ಧೊಪ್ ಎಂಬ ಶಬ್ದವಾಯಿತು. ಆದರೆ ಮಳೆಗಾಲದಲ್ಲಿ ಪದ್ಮಾ ನದಿಯ ದಂಡೆಯ ಮೇಲೆ ಅಂಥ ಶಬ್ದಗಳು ಬೇಕಾದಷ್ಟು ಕೇಳಿಸಿತು. ರಾಯಚರಣ್ ತನ್ನ ಧೋತಿಯ ಅಂಚಿನಲ್ಲಿ ಕದಂಬದ ಹೂವುಗಳನ್ನು ಹಾಕಿಕೊಂಡು ಮರದಿಂದ ಕೆಳಗಿಳಿದು, ಪ್ರಸನ್ನವದನನಾಗಿ ಗಾಡಿಯತ್ತ ಬಂದ. ಆದರೆ ಅಲ್ಲಿ ಮಗು ಇದ್ದಿಲ್ಲ! ಸುತ್ತಲೂ ನೋಡಿದ, ಆದರೆ ಎಲ್ಲೂ ಯಾರೂ ಕಾಣಿಸಲಿಲ್ಲ.

ರಾಯಚರಣನ ಮೈ ತಣ್ಣಗಾಯಿತು. ಇಡೀ ಜಗತ್ತೇ ಅವನಿಗೆ ಮಬ್ಬುಮಬ್ಬಾಗಿ ಕಾಣಿಸಿತು. ಹೃದಯವು ಬಾಯಿಗೆ ಬಂದಂತಾಯಿತು. ಗದ್ಗದಿತನಾಗಿ, ತನ್ನ ಎಲ್ಲ ಶಕ್ತಿಯನ್ನು ಉಪಯೋಗಿಸಿ, ''ಬಾಬು, ಖೋಕಾ ಬಾಬು, ನನ್ನ ಅಣ್ಣಯ್ಯ !'' ಎಂದು ಕೂಗಿದ.

ಆದರೆ ಯಾರೂ ಉತ್ತರ ಕೊಡಲಿಲ್ಲ. ಉತ್ತರದ ರೂಪದಲ್ಲಿ ಮಗುವಿನ ಯಾವ ಚೇಷ್ಟೆಯ ದನಿಯೂ ಕೇಳಿಬರಲಿಲ್ಲ. ಕೇಳಿಬರುತ್ತಿದ್ದ ಶಬ್ದವೆಂದರೆ ಪದ್ಮಾ ನದಿಯ ಶಬ್ದ ಮಾತ್ರ. ಬುಸ್ಸೆನ್ನುವ, ಛಟಾರನೆ ಬಾರಿಸುವಂಥ ಶಬ್ದ. ತನಗೆ ಏನೂ ಗೊತ್ತಿಲ್ಲ ಮತ್ತು ಜಗತ್ತಿನ ಸಣ್ಣಪುಟ್ಟ ವಿಷಯಗಳಿಗೆ ಗಮನ ಕೊಡಲು ತನಗೆ ಒಂದು ಕ್ಷಣದ ಬಿಡುವೂ ಇಲ್ಲವೆಂದು ಹೇಳುವಂತೆ ಅದು ಹರಿಯುತ್ತಿತ್ತು.

ಕತ್ತಲಾದಾಗ, ಕಳವಳಗೊಂಡಿದ್ದ ತಾಯಿ ತನ್ನ ಮಗನನ್ನು ಹುಡುಕಲು ಎಲ್ಲಾ ಕಡೆಯೂ ಜನರನ್ನು ಕಳಿಸಿದಳು. ಕೈಯಲ್ಲಿ ಲಾಟೀನು ಹಿಡಿದುಕೊಂಡು ಅವರು ನದಿಯ ದಂಡೆಗೆ ಬಂದರು. ರಾಯಚರಣನು ನಟ್ಟಿರುಳ ಬಿರುಗಾಳಿಯಂತೆ ಹೊಲದಲ್ಲಿ ಅಲ್ಲಿಂದಿಲ್ಲಿಗೆ ಓಡುತ್ತಾ, ''ಬಾಬು, ಖೋಕಾ ಬಾಬು'', ಎಂದು ದುಗುಡ ತುಂಬಿದ ದನಿಯಲ್ಲಿ ಕೂಗುತ್ತಿದ್ದುದನ್ನು ಕಂಡರು. ಕೊನೆಗೆ ರಾಯಚರಣನು ಮನೆಗೆ ಬಂದು ಮನೆಯೊಡತಿಯ ಕಾಲಿಗೆ ಧೊಪ್ಪಂತ ಬಿದ್ದನು. ಪ್ರಶ್ನೆ ಮಾಡಿದಷ್ಟೂ ಅವನು ಜೋರಾಗಿ ಅಳುತ್ತಾ, ''ಅಮ್ಮ, ನನಗೆ ಗೊತ್ತಿಲ್ಲ'', ಎಂದು ಹೇಳಿದ.

ಪ್ರತಿಯೊಬ್ಬರೂ ಇದಕ್ಕೆ ಪದ್ಮಾ ನದಿಯೇ ಕಾರಣವೆಂದು ತಿಳಿದಿದ್ದರು. ಆದರೂ ಹಳ್ಳಿಯ ಹೊರವಲಯದಲ್ಲಿ ಬೀಡುಬಿಟ್ಟಿದ್ದ ಲಂಬಾಣಿಗಳ ಬಗ್ಗೆ ಅನುಮಾನಪಟ್ಟರು. ಯಜಮಾನಿಯು ರಾಯಚರಣನೇ ಮಗುವನ್ನು ಕದ್ದೊಯ್ದಿರಬಹುದು ಎಂದು ಅನುಮಾನಪಟ್ಟಳು. ''ನನ್ನ ಮಗೂನ ನನಗೆ ವಾಪಸ್ ಕೊಡಪ್ಪ; ನೀನು ಕೇಳಿದಷ್ಟು ಹಣ ಕೊಡ್ತೇನೆ'', ಎಂದು ಅವನಲ್ಲಿ ಬೇಡಿದಳು. ಈ ಮಾತನ್ನು ಕೇಳಿ ರಾಯಚರಣನು ದುಃಖಿತನಾಗಿ ತಲೆ ಚಚ್ಚಿಕೊಂಡ. ಅವಳು ಅವನನ್ನು ಮನೆಯಿಂದ ಹೊರಹಾಕಿದಳು.

ರಾಯಚರಣ್ ಬಗ್ಗೆ ಇಂತಹ ಸಲ್ಲದ ಆಪಾದನೆ ಮಾಡಿದ್ದಕ್ಕೆ ಅವಳ ಬಗ್ಗೆ ಅನುಕೂಲ್ ಸಿಟ್ಟಾದ. ''ರಾಯಚರಣ್ ಯಾಕೆ ಅಂಥ ಹೀನ ಕೆಲಸ ಮಾಡ್ತಾನೆ ?'' ಎಂದ. ''ಯಾಕೆ ಅಂದಿರಾ ? ಯಾಕೆಂದರೆ ಮಗೂನ ಮೈಮೇಲೆ ಬಂಗಾರದ ಒಡವೆಗಳಿದ್ದವು.''

- ೨ -

ರಾಯಚರಣನು ತನ್ನ ಹಳ್ಳಿಗೆ ವಾಪಸ್ಸು ಹೋದ. ಇದುವರೆಗೆ ಅವನಿಗೆ ಮಕ್ಕಳು ಆಗಿರಲಿಲ್ಲ, ಆಗುವುದೆಂಬ ಭರವಸೆಯೂ ಇದ್ದಿಲ್ಲ. ಆದರೆ ವಿಚಿತ್ರವೆಂದರೆ ಅವನ ಮಧ್ಯವಯಸ್ಕ ಹೆಂಡತಿ ಒಂದು ಗಂಡುಮಗುವನ್ನು ಹೆತ್ತು, ಕೂಡಲೇ ಸತ್ತಳು. ರಾಯಚರಣನು ಈ ಮಗುವಿನ ಜನನವನ್ನು ಸ್ವಲ್ಪವೂ ಇಷ್ಟಪಡಲಿಲ್ಲ. ಈ ಹುಡುಗ ತನಗೆ ಮೋಸ ಮಾಡಲಿಕ್ಕೆ ಮತ್ತು ಖೋಕಾ ಬಾಬುವಿನ ಸ್ಥಾನ ಆಕ್ರಮಿಸಲಿಕ್ಕೆ ಹುಟ್ಟಿದ್ದಾನೆ ಎಂದುಕೊಂಡ. ತನ್ನ ಒಡೆಯನ ಒಬ್ಬನೇ ಮಗನನ್ನು ನದಿಯಲ್ಲಿ ಮುಳುಗಲು ಬಿಟ್ಟು ಈ ಮಗುವಿನ ಬಗ್ಗೆ ಸಂತೋಷ ಪಡುವುದು ಪಾಪ ಎಂದುಕೊಂಡ. ರಾಯಚರಣನ ಮನೆಯಲ್ಲಿ ಅವನ ವಿಧವೆ ತಂಗಿ ಇಲ್ಲದೇ ಹೋಗಿದ್ದಿದ್ದರೆ ಈ ಮಗು ಬಹಳ ದಿನವೇನೂ ಬದುಕುತ್ತಿರಲಿಲ್ಲ.

ವಿಚಿತ್ರವೆಂದರೆ, ಈ ಮಗು ಕೂಡ ಬಹುಬೇಗ ಹೊಸಿಲು ದಾಟುವುದನ್ನು ಕಲಿತ ಮತ್ತು ಅಸಾಧಾರಣ ಜಾಣತನವನ್ನು ತೋರತೊಡಗಿದ. ಅವನು ನಕ್ಕಾಗ ಅಥವಾ ಅತ್ತಾಗ ಅವನ ದನಿಯೂ ಖೋಕಾ ಬಾಬೂನ ದನಿಯಂತೆಯೇ ಇತ್ತು. ಕೆಲವೊಮ್ಮೆ ಅವನ ಅಳು ಕೇಳಿಸಿದಾಗ ಅವನ ಹೃದಯ ಹಿಂಡಿದಂತಾಗುವುದು. ತನ್ನನ್ನು ಕಳೆದುಕೊಂಡಿದ್ದಕ್ಕಾಗಿ ಖೋಕಾ ಬಾಬುವೇ ಎಲ್ಲೋ ಅಳುತ್ತಿದ್ದಾನೆ ಅನ್ನಿಸುತ್ತಿತ್ತು ಅವನಿಗೆ.

ಫಲ್ನಾ (ರಾಯಚರಣನ ತಂಗಿಯು ಮಗುವಿಗೆ ಈ ಹೆಸರಿಟ್ಟಿದ್ದಳು) ಮಾತಾಡಲು ಕಲಿತೊಡನೆ ಅವನು ತನ್ನ ಅತ್ತೆಯನ್ನು 'ನಾನಾ' ಎಂದು ಕರೆಯುತ್ತಿದ್ದ. ಒಂದು ದಿನ ರಾಯಚರಣನು ಈ ಸುಪರಿಚಿತ ಪದವನ್ನು ಕೇಳಿದಾಗ ಅವನಿಗೆ ತಕ್ಷಣ ಅನ್ನಿಸಿತು – ತನ್ನನ್ನು ಬಿಟ್ಟಿರಲಾರದ್ದಕ್ಕಾಗಿ ಖೋಕಾ ಬಾಬು ಈ ಮನೆಯಲ್ಲಿ ಹುಟ್ಟಿದ್ದಾನೆ ಅಂತ.

ಈ ನಂಬಿಕೆಯನ್ನು ಸಮರ್ಥಿಸಿಕೊಳ್ಳಲು ಹಲವಾರು ಕಾರಣಗಳಿದ್ದವು. ಮೊದಲನೆಯದಾಗಿ, ಆ ಮಗು ಸತ್ತಾಕ್ಷಣ ಈ ಮಗು ಹುಟ್ಟಿದೆ. ಎರಡನೆಯದಾಗಿ, ತನ್ನ ಹೆಂಡತಿಗೆ ಅಷ್ಟು ವರ್ಷ ಮಗುವಾಗದಿದ್ದು, ಒಮ್ಮೆಲೆ ಅವಳು ಗರ್ಭವತಿಯಾದದ್ದು ಅವಳು ಈ ಜನ್ಮದಲ್ಲಿ ಮಾಡಿದ ಪುಣ್ಯಕಾರ್ಯಗಳಿಗಂತೂ ಅಲ್ಲ. ಮೂರನೆಯದಾಗಿ, ಈ ಹುಡುಗನೂ ಅಂಬೆಗಾಲು ಹಾಕುತ್ತಾ, ದಟ್ಟಡಿಯಿಡುತ್ತಾ ನಡೆಯುವಾಗ ಅತ್ತೆಯನ್ನು 'ನಾನಾ' ಅಂತ ಕರೆಯುತ್ತಾನೆ. ದೊಡ್ಡವನಾದಾಗ ಇವನು ಜಡ್ಜ್ ಆಗುವ ಎಲ್ಲ ಲಕ್ಷಣಗಳೂ ಇವನಲ್ಲಿವೆ.

ತನ್ನ ಒಡತಿ ತನ್ನ ಬಗ್ಗೆ ಅನುಮಾನಪಟ್ಟಿದ್ದು ರಾಯಚರಣ್‌ಗೆ ನೆನಪಾಯಿತು. ಅವನು, 'ಓಹೋ, ಮಗೂನ ಯಾರು ಕದ್ದಿದ್ದಾರೆ ಅನ್ನೋದು ತಾಯಿಗೆ ಗೊತ್ತಾಗಿ

ಬಿಡುತ್ತೆ!' ಅಂದುಕೊಂಡ. ಈಗ ಅವನಿಗೆ ತನ್ನ ಮಗುವನ್ನು ಬಹಳ ದಿನ ನಿರ್ಲಕ್ಷಿಸಿದ್ದಕ್ಕಾಗಿ ಪಶ್ಚಾತ್ತಾಪವಾಯಿತು. ಹಾಗಾಗಿ ಈ ಹುಡುಗನನ್ನು ಚೆನ್ನಾಗಿ ನೋಡಿಕೊಳ್ಳಲು ಪ್ರಾರಂಭಿಸಿದ.

ರಾಯಚರಣನು ಫಳ್ನಾನನ್ನು ಒಬ್ಬ ಶ್ರೀಮಂತ ಮನುಷ್ಯನ ಮಗನಂತೆ ಬೆಳೆಸಲು ಪ್ರಾರಂಭಿಸಿದನು. ಅವನಿಗಾಗಿ ಒಂದು ಸ್ಯಾಟಿನ್ ಸೂಟ್ ಹೊಲಿಸಿದ; ಗೋಲ್ಡ್ ಲೇಸಿನ ಕ್ಯಾಪ್ ತಂದ; ತನ್ನ ಹೆಂಡತಿಯ ಬಂಗಾರದ ಒಡವೆಗಳನ್ನು ಕರಗಿಸಿ ಕಡಗಗಳನ್ನು ಮಾಡಿಸಿದ. ಅವನು ಮಗನನ್ನು ನೆರೆಹೊರೆಯವರ ಹುಡುಗರ ಜೊತೆ ಆಡಲು ಬಿಡಲಿಲ್ಲ, ತಾನೇ ಸ್ವತಃ ಹುಡುಗನ ಆಟದ ಸಂಗಾತಿಯಾಗಿದ್ದ. ಹುಡುಗರು ಅವನನ್ನು ತಮಾಷೆ ಮಾಡುತ್ತಿದ್ದರು. ''ಇವನು ನವಾಬನ ಮಗ ಕಣಪ್ಪ'', ಎಂದು ಗೇಲಿ ಮಾಡುವರು. ಮತ್ತು ರಾಯಚರಣನ ಈ ಅಸಂಬದ್ಧ ವರ್ತನೆಯನ್ನು ಕಂಡು ಹಳ್ಳಿಯ ಜನ ಆಶ್ಚರ್ಯಪಡುತ್ತಿದ್ದರು.

ಫಳ್ನಾ ಶಾಲೆಗೆ ಹೋಗುವಷ್ಟು ದೊಡ್ಡವನಾದಾಗ, ರಾಯಚರಣ್ ತನ್ನ ಜಮೀನನ್ನು ಮಾರಿ ಮಗನನ್ನು ಕಲ್ಕತ್ತೆಗೆ ಕರೆದುಕೊಂಡು ಹೋದನು. ಸಾಕಷ್ಟು ಕಷ್ಟಪಟ್ಟು ಅಲ್ಲಿ ಅವನೊಂದು ಕೆಲಸಕ್ಕೆ ಸೇರಿಕೊಂಡ; ಫಳ್ನಾಗೆ ಸ್ಕೂಲಿಗೆ ಸೇರಿಸಿದ. ತಾನು ಸ್ವತಃ ಎಂದಿನಂತೆ ಸಾಮಾನ್ಯ ಜೀವನ ನಡೆಸಿದ, ಆದರೆ ಹುಡುಗನಿಗೆ ಮಾತ್ರ ಒಳ್ಳೆಯ ಊಟ, ಬಟ್ಟೆ ಮತ್ತು ಶಿಕ್ಷಣದ ವ್ಯವಸ್ಥೆ ಮಾಡಿದ. ಅವನು ತನ್ನಷ್ಟಕ್ಕೆ ಹೇಳಿಕೊಳ್ಳುತ್ತಿದ್ದ: ''ಮಗ, ನೀನು ನನ್ನನ್ನ ಪ್ರೀತಿಸ್ತೀಯಲ್ಲ, ಅದಕ್ಕೋಸ್ಕರ ನೀನು ನಮ್ಮ ಮನೆಗೆ ಬಂದೆ. ನಾನು ನಿನ್ನನ್ನು ಯಾವತ್ತೂ ಕಡೆಗಣಿಸಲ್ಲ ಅದು ಮಾತ್ರ ಖಾತ್ರಿ.''

ಹೀಗೆ ಹನ್ನೆರಡು ವರ್ಷ ಕಳೆಯಿತು. ಹುಡುಗ ಚೆನ್ನಾಗಿ ಓದುತ್ತಿದ್ದ, ನೋಡಲಿಕ್ಕೆ ಲಕ್ಷಣವಾಗಿದ್ದ. ಒಳ್ಳೆಯ ಮೈಕಟ್ಟು. ಕಂದುಬಣ್ಣ. ಅವನಿಗೆ ತನ್ನ ಕೇಶಶೈಲಿಯ ಬಗ್ಗೆ ವಿಶೇಷ ಕಾಳಜಿ. ಒಳ್ಳೆಯ ಸ್ವಭಾವದವನು. ಒಳ್ಳೆಯ ಅಭಿರುಚಿ ಇತ್ತು. ಅವನು ತನ್ನ ತಂದೆಯನ್ನು ನಿಜವಾಗಿಯೂ ತಂದೆ ಎಂದು ಭಾವಿಸಲಾರದವನಾಗಿದ್ದ, ಯಾಕೆಂದರೆ ರಾಯಚರಣನು ಅವನನ್ನು ಮಗನಂತೇನೋ ಪ್ರೀತಿಸುತ್ತಿದ್ದ, ಆದರೆ ಅವನ ಜೊತೆ ಆಳಿನಂತೆ ವರ್ತಿಸುತ್ತಿದ್ದ. ರಾಯಚರಣನದು ಇನ್ನೊಂದು ತಾಪತ್ರಯವೂ ಇತ್ತು.



ಏನೆಂದರೆ, ತಾನು ಫಳ್ನಾನ ತಂದೆ ಎಂದು ಯಾರಿಗೂ ಹೇಳಿರಲಿಲ್ಲ. ಫಳ್ನಾನ ಹಾಸ್ಟೆಲಿನ ಬಂಗಾಳಿ ಹುಡುಗರು ಯಾವಾಗಲೂ ರಾಯಚರಣನನ್ನು ಹಳ್ಳಿಗಮಾರ ಎಂದು ತಮಾಷೆ ಮಾಡುತ್ತಿದ್ದರು. ಫಳ್ನಾ ಕೂಡ ತನ್ನ ತಂದೆಯ ಬೆನ್ನಹಿಂದೆ ಅವನನ್ನು ತಮಾಷೆ ಮಾಡುತ್ತಿದ್ದ. ಆದರೂ ಕೂಡ, ವಾಸ್ತವವಾಗಿ ಎಲ್ಲಾ ಹುಡುಗರೂ ಆ ಮುಗ್ಧ, ವಾತ್ಸಲ್ಯಮಯಿ ರಾಯಚರಣನನ್ನು ಪ್ರೀತಿಸುತ್ತಿದ್ದರು. ಫಳ್ನಾ ಕೂಡ ಅವನನ್ನು ಪ್ರೀತಿಸುತ್ತಿದ್ದ, ಆದರೆ ತಂದೆಯನ್ನು ಪ್ರೀತಿಸುವಂತೆ ಅಲ್ಲ. ಫಳ್ನಾನ ಪ್ರೀತಿಯಲ್ಲಿ ಸ್ವಲ್ಪ ಬಿಗುಮಾನವಿತ್ತು.

ರಾಯಚರಣನಿಗೆ ವಯಸ್ಸಾಯಿತು. ಅವನ ಧಣಿ ಯಾವಾಗಲೂ ಅವನ ಕೆಲಸದಲ್ಲಿ ತಪ್ಪು ಹುಡುಕುತ್ತಿದ್ದ. ನಿಜ ಹೇಳಬೇಕೆಂದರೆ, ಅವನು ನಿಶ್ಶಕ್ತನಾಗಿದ್ದ. ಅವನಿಗೆ ಮರೆವು ಜಾಸ್ತಿಯಾಯಿತು. ಆದರೆ ಪೂರ್ತಿ ಸಂಬಳ ಕೊಡುವ ಯಾರೇ ಆಗಲಿ, ವಯಸ್ಸಿನ ನೆಪ ಹೇಳಿದರೆ ಒಪ್ಪುವುದಿಲ್ಲವಲ್ಲ. ರಾಯಚರಣನಲ್ಲಿದ್ದ ಹಣವೆಲ್ಲ ಈಗ ಖಾಲಿಯಾಗ್ತಾ ಬಂತು. ಈಗ ಫಳ್ನಾ ತನಗೆ ಸಾಕಷ್ಟು ಬಟ್ಟೆಗಳಿಲ್ಲ ಎಂದು ಪದೇ ಪದೇ ದೂರಲಿಕ್ಕೆ ಪ್ರಾರಂಭಿಸಿದ.

- ೩ -

ಒಂದು ದಿನ ರಾಯಚರಣ್ ಇದ್ದಕ್ಕಿದ್ದಹಾಗೆ ತನ್ನ ಕೆಲಸ ಬಿಟ್ಟು, ಫಳ್ನಾಗೆ ಸ್ವಲ್ಪ ಹಣ ಕೊಟ್ಟು ಹೇಳಿದ : ''ನಾನು ಒಂದು ಸ್ವಲ್ಪ ದಿವಸ ನಮ್ಮೂರಿಗೆ ಹೋಗಿಬರ್ತೀನಿ.'' ಅವನು ಬಾರಾಶಾತ್‌ಗೆ – ಅನುಕೂಲನು ಮ್ಯಾಜಿಸ್ಟ್ರೇಟನಾಗಿದ್ದ ಊರಿಗೆ – ಹೋದ.

ಅನುಕೂಲ್ ಮತ್ತು ಅವನ ಹೆಂಡತಿಗೆ ಇನ್ನೊಂದು ಮಗುವೇನೂ ಹುಟ್ಟಿರಲಿಲ್ಲ. ಅವಳು ಇನ್ನೂ ತನ್ನ ಮಗನನ್ನು ಕಳೆದುಕೊಂಡಿದ್ದ ಯೋಚನೆಯಲ್ಲೇ ಇದ್ದಳು.

ಒಂದು ದಿನ ಸಾಯಂಕಾಲ, ಅನುಕೂಲನು ಕೋರ್ಟಿನಿಂದ ಬಂದು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ಮತ್ತು ಅವನ ಹೆಂಡತಿಯು ತನಗೆ ಇನ್ನೊಂದು ಮಗು ಆಗಬಹುದೆಂಬ ಭರವಸೆಯಿಂದ ಒಬ್ಬ ಸನ್ಯಾಸಿಯಿಂದ ಒಂದು ದುಬಾರಿಯ ಮೂಲಿಕೆಯನ್ನು ಹಾಗೂ ಅವನ ಆಶೀರ್ವಾದವನ್ನು ಪಡೆಯುತ್ತಿದ್ದಾಗ, ಅಂಗಳದಲ್ಲಿ ಒಂದು ಧ್ವನಿ ಕೇಳಿಸಿತು :

''ಅಮ್ಮಾವ್ರು ನೂರ್ಕಾಲ ಬಾಳಲಿ !''

ಅನುಕೂಲ್ ಕೇಳಿದ : ''ಯಾರದು ?''

ರಾಯಚರಣ್ ಬಂದು, ಅನುಕೂಲನ ಕಾಲುಮುಟ್ಟಿ ನಮಸ್ಕರಿಸಿ ಹೇಳಿದ : ''ನಾನು, ರಾಯಚರಣ್.''

ಆ ಮುದುಕನನ್ನು ಕಂಡಾಗ ಅನುಕೂಲನ ಮನಸ್ಸು ಕರಗಿತು. ಹ್ಯಾಗಿದ್ದೀಯ, ಏನು, ಏನ್ಮಾಡ್ತಾ ಇದ್ದೀಯ ಎಂದು ಸಾವಿರ ಪ್ರಶ್ನೆಗಳನ್ನು ಕೇಳಿದ. ಮತ್ತು ತಾನು ಅವನನ್ನು ಪುನಃ ಕೆಲಸಕ್ಕೆ ಸೇರಿಸಿಕೊಳ್ಳುವುದಾಗಿಯೂ ಹೇಳಿದ. ರಾಯಚರಣ್ ದುಃಖದಿಂದ ಮುಗುಳ್ನಕ್ಕು ಹೇಳಿದ: ''ಅಮ್ಮಾವ್ರಿಗೆ ನನ್ನ ನಮಸ್ಕಾರ ತಿಳಿಸಿ ಹೋಗೋಣ ಅಂತ ಬಂದಿದ್ದೆ, ಅಷ್ಟೆ.''

ಅನುಕೂಲನು ಅವನನ್ನು ಒಳಗೆ ಕರೆದುಕೊಂಡು ಹೋದನು. ಆದರೆ ಮನೆಯೊಡತಿಯು ಅವನನ್ನು ಅಷ್ಟೇನೂ ಉತ್ಸಾಹದಿಂದ ಬರಮಾಡಿಕೊಳ್ಳಲಿಲ್ಲ. ರಾಯಚರಣನು ಅದನ್ನು ಗಮನಿಸದಂತಿದ್ದ. ಅವಳಿಗೆ ಕೈಮುಗಿದು ಹೇಳಿದ : ''ತಾಯಿ, ನಾನು ನಿಮ್ಮ ಮಗೂನ ಕದ್ದು ಒಯ್ದೆ. ಪದ್ಮಾನೂ ಅಲ್ಲ, ಬೇರೆ ಯಾರೂ ಅಲ್ಲ, ನಾನೇ ಅದನ್ನು ಮಾಡಿದ್ದು. ಈ ನೀಚ, ಕೃತಘ್ನ –''

ತಕ್ಷಣವೇ, ''ನೀನು ಏನು ಹೇಳ್ತಾ ಇರೋದು ? ಅವನೆಲ್ಲಿದ್ದಾನೆ ?'' ಎಂದ ಅನುಕೂಲ್.

''ಯಜಮಾನ್ರೆ, ಅವನು ನನ್ನ ಜೊತೇನೇ ಇದಾನೆ. ನಾನು ಅವನನ್ನು ನಾಡಿದ್ದು ಕರ್ಕೊಂಡು ಬರ್ತೀನಿ'', ಎಂದ ರಾಯಚರಣ್.

ನಾಡಿದ್ದು ಭಾನುವಾರ. ಅವತ್ತು ಕೋರ್ಟಿಗೆ ರಜೆ. ಬೆಳಿಗ್ಗೆಯಿಂದಲೇ ಗಂಡ-ಹೆಂಡತಿ ತುಂಬ ಕುತೂಹಲ ಹಾಗೂ ಆತಂಕದಿಂದ ದಾರಿ ನೋಡುತ್ತಿದ್ದರು. ಹತ್ತು ಗಂಟೆಗೆ ರಾಯಚರಣ್ ಬಂದ.

ಯಾವ ಪ್ರಶ್ನೆಯನ್ನೂ ಕೇಳದೆ ತಾಯಿ ಹುಡುಗನನ್ನು ತೊಡೆಮೇಲೆ ಕೂರಿಸಿಕೊಂಡಳು, ಮುದ್ದುಮಾಡಿದಳು. ಎಷ್ಟು ನೋಡಿದರೂ ತೃಪ್ತಿಯಿಲ್ಲವೆಂಬಂತೆ ಅವನ ಮುಖವನ್ನೇ ನೋಡುತ್ತಾ ಕುಳಿತಳು. ಅತ್ತಳು, ನಕ್ಕಳು. ನಿಜವಾಗಿಯೂ ಹುಡುಗ ತುಂಬ ಸುಂದರನಾಗಿದ್ದ. ಅವನ ಉಡುಪಿನಲ್ಲಾಗಲೀ, ನಡವಳಿಕೆಯಲ್ಲಾಗಲೀ ಬಡತನದ ಸೂಚನೆಯೇನೂ ಇರಲಿಲ್ಲ. ಅವನ ಸಂಕೋಚ ಸ್ವಭಾವ ಅವನಿಗೆ



# ಆ ನಗೆಯ ಪಾಲು...

**ಆ**ಕೆ ನಕ್ಕ ಗಳಿಗೆ
ಹಾಲಾಹಲದ ಹೊಗೆ
ಓಣಿ ತುಂಬಿ
ಊರಿಗಾಗಿ
ಉಳಿಯಿತು !

ಜಿತ್ತು
ಬೆಂಕಿ ಮಳೆ.

ಮಲ್ಲಿಗೆ ಸಂಪಿಗೆ ಎಲ್ಲ
ಕಂಪಕಟ್ಟ ಸಂಪು
ಹೂಡಿದವು
ಇಬ್ಬನಿ ಹನಿ ಒಡೆಯಲಿಲ್ಲ
ತಾರೆ ತೂಗಾಡಲಿಲ್ಲ
ಹಾಲು ಚೆಲ್ಲಲಿಲ್ಲ
ಸೋಮ.

ಆಕೆ ನಕ್ಕ ಹೊತ್ತು
ಮುತ್ತಿನ ಮಳೆ ಇಲ್ಲ;
ಮತ್ತೇರಿ ಹೊಳೆ
ತೇಲಿಹೋದ ಸಾಲುಸಾಲಲ್ಲು
ಆ ನಗೆಯದ್ದೇ
ಪಾಲು.

ವಿಜಯಕಾಂತ ಪಾಟೀಲ
ಚಿಕ್ಕಾಂಶಿ, ಹೊಸೂರು - ೫೮೧೧೦೪, ಹಾನಗಲ್ಲ, ಹಾವೇರಿ

ತಕ್ಕಂತೆಯೇ ಇತ್ತು. ಹುಡುಗನನ್ನು ನೋಡಿ ಅನುಕೂಲನಿಗೂ ಅವನ ಬಗ್ಗೆ ಪ್ರೀತಿ ಹುಟ್ಟಿತು. ಆದರೂ ಅದನ್ನು ಮುಖದಲ್ಲಿ ತೋರಗೊಡದೆ ರಾಯಚರಣ್‌ಗೆ ಕೇಳಿದ: "ಇವನು ನಮ್ಮ ಮಗಾನೇ ಅನ್ನಲಿಕ್ಕೆ ಸಾಕ್ಷಿ ಇದೆಯಾ ?" ಅದಕ್ಕೆ ರಾಯಚರಣ್ ಹೇಳಿದ: "ಇಂಥದಕ್ಕೆ ಸಾಕ್ಷಿ ಎಲ್ಲಿಂದ ತರೋದು? ನಾನು ನಿಮ್ಮ ಮಗನನ್ನ ಕದ್ದೊಯ್ದಿದ್ದೆ ಅನ್ನೋದು ದೇವರಿಗೆ ಮಾತ್ರ ಗೊತ್ತು, ಬೇರೆ ಯಾರಿಗೂ ಗೊತ್ತಿಲ್ಲ."

ಅನುಕೂಲ್ ಸ್ವಲ್ಪ ಹೊತ್ತು ಯೋಚಿಸಿದ. ಹೆಂಡತಿ ಅಷ್ಟು ಉತ್ಸಾಹದಿಂದ ಹುಡುಗನನ್ನು ಒಪ್ಪಿಕೊಂಡಿರುವಾಗ ಈಗ ಸಾಕ್ಷ್ಯಾಧಾರಕ್ಕೆಲ್ಲ ಪ್ರಯತ್ನ ಮಾಡುವುದು ಜಾಣತನವೇನೂ ಅಲ್ಲ ಎಂದುಕೊಂಡ. ಏನೇ ನಡೆದಿರಲಿ, ನಂಬುವುದೇ ಉತ್ತಮ. ಅದೂ ಅಲ್ಲದೆ, ಅಂಥ ಹುಡುಗನ್ನ ರಾಯಚರಣ್ ಎಲ್ಲಿಂದ ತರ್‍ತಾನೆ? ಮೇಲಾಗಿ, ನನ್ನ ಹಳೆಯ ಸೇವಕ ಯಾವ ಕಾರಣಾನೂ ಇಲ್ಲದೆ ನನಗೆ ಮೋಸ ಮಾಡಲಿಕ್ಕಾಗುತ್ತಾ ಎಂದು ಯೋಚಿಸಿದ.

ಅನುಕೂಲನು ಹುಡುಗನ ಜೊತೆ ಮಾತಾಡಿದಾಗ ಹುಡುಗನು ತಾನು ಬಾಲ್ಯದಿಂದಲೂ ರಾಯಚರಣನ ಜೊತೆ ಇದ್ದರೂ ಮತ್ತು ಅವನನ್ನು ತನ್ನ ತಂದೆ ಎಂದು ತಿಳಿದಿದ್ದರೂ, ರಾಯಚರಣನು ತಂದೆಗಿಂತ ಹೆಚ್ಚಾಗಿ ಸೇವಕನಂತೆ ವರ್ತಿಸುತ್ತಿದ್ದ ಎಂದು ತಿಳಿಸಿದನು.

ಅನುಕೂಲ್ ಈಗ ಅನುಮಾನ ತೊರೆದ. "ಆದರೆ, ರಾಯಚರಣ್, ನಾನು ನಿನ್ನನ್ನ ನಮ್ಮ ನೆರಳು ನೋಡಲಿಕ್ಕೂ ಆಸ್ಪದ ಕೊಡಲ್ಲ", ಎಂದ.

ರಾಯಚರಣ್ ಕೈಜೋಡಿಸಿ, ಗದ್ಗದಿತನಾಗಿ, "ಯಜಮಾನ್ರೆ, ನಾನು ಈ ವಯಸ್ಸಿನಲ್ಲಿ ಎಲ್ಲಿಗೆ ಹೋಗಲಿ ?" ಎಂದ.

"ಪಾಪ, ಅವನು ಇಲ್ಲೇ ಇರ್‍ಲಿ ಬಿಡಿ", ಎಂದಳು ಯಜಮಾನಿ. "ದೇವರು ನನ್ನ ಮಗನಿಗೆ ಒಳ್ಳೇದು ಮಾಡಲಿ. ನಾನು ರಾಯಚರಣನನ್ನು ಕ್ಷಮಿಸಿದೀನಿ."

"ಅವನು ಮಾಡಿರೋ ಕೆಲ್ಸಕ್ಕೆ ಕ್ಷಮೆ ಎಲ್ಲಿ?" ಎಂದ ಸತ್ಯವಂತನಾದ ಅನುಕೂಲ್.

ರಾಯಚರಣನು ಅನುಕೂಲನ ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡು, "ಅದನ್ನ ನಾನಲ್ಲ ಮಾಡಿದ್ದು, ದೇವರು ಮಾಡಿದ್ದು", ಎಂದ.

ರಾಯಚರಣ್ ತನ್ನ ತಪ್ಪನ್ನು ದೇವರ ಮೇಲೆ ಹೊರಿಸಿದ್ದನ್ನು ನೋಡಿ ಅನುಕೂಲ್‌ಗೆ ಇನ್ನೂ ಹೆಚ್ಚು ಸಿಟ್ಟು ಬಂತು. "ಹೀಗೆ ಮೋಸ ಮಾಡಿರೋ ಮನುಷ್ಯನನ್ನ ನಂಬೋಹಾಗಿಲ್ಲ", ಎಂದ.

ರಾಯಚರಣ್ ಒಡೆಯನ ಕಾಲನ್ನು ಬಿಟ್ಟು ಹೇಳಿದ: "ಅದು ನಾನಲ್ಲ, ಒಡೆಯ."

"ಹಾಗಾದ್ರೆ ಯಾರು ?"

"ನನ್ನ ವಿಧಿ."

ಆದರೆ ಇಂಥ ವಿವರಣೆ ಒಬ್ಬ ಸುಶಿಕ್ಷಿತ ಮನುಷ್ಯನನ್ನು ತೃಪ್ತಿಪಡಿಸಲು ಸಾಧ್ಯವಿದ್ದಿಲ್ಲ.

"ನನಗೆ ಈ ಜಗತ್ತಿನಲ್ಲಿ ಬೇರೆ ಯಾರೂ ಇಲ್ಲ", ಎಂದ ರಾಯಚರಣ್.

ತನ್ನನ್ನು – ಒಬ್ಬ ಮ್ಯಾಜಿಸ್ಟ್ರೇಟನ ಮಗನನ್ನು – ಬಹು ಹಿಂದೆ ರಾಯಚರಣ್ ಕದ್ದದ್ದು ಮತ್ತು ತನ್ನನ್ನು ಮಗನೆಂದು ಕರೆಯುವುದರ ಮೂಲಕ ತನಗೆ ಅವಮಾನ ಮಾಡಿರುವುದನ್ನು ಕಂಡು ಫಳ್ಳಾಗೆ ಮನಸ್ಸಿನಲ್ಲೇ ಸಿಟ್ಟು ಬಂತು. ಆದರೂ, ಅವನು ದೊಡ್ಡ ಮನಸ್ಸಿನಿಂದಲೇ ಅನುಕೂಲನಿಗೆ ಹೇಳಿದ: "ಅಪ್ಪಾಜಿ, ಅವನನ್ನು ಕ್ಷಮಿಸಿ. ನೀವು ಅವನನ್ನು ನಮ್ಮ ಮನೆಯಲ್ಲಿ ಇಟ್ಟುಕೊಳ್ಳುವುದಿಲ್ಲ ಅನ್ನೋದಾದರೆ, ಅವನಿಗೆ ತಿಂಗಳಿಗಿಷ್ಟು ಅಂತ ಸ್ವಲ್ಪ ಪೆನ್ಷನ್ ಕೊಡಿ."

ರಾಯಚರಣ್ ಮತ್ತೇನೂ ಮಾತಾಡಲಿಲ್ಲ. ಒಂದು ಸಲ ಮಗನ ಮುಖವನ್ನು ನೋಡಿದ, ನಂತರ ಎಲ್ಲರಿಗೂ ಬಾಗಿ ನಮಸ್ಕಾರ ಮಾಡಿದ; ಹೊರ ನಡೆದು ಈ ಜಗದ ಅಸಂಖ್ಯಾತ ಜನರಲ್ಲಿ ಲೀನನಾದ. ತಿಂಗಳ ಕೊನೆಯಲ್ಲಿ ಅನುಕೂಲನು ರಾಯಚರಣನ ಊರಿನ ವಿಳಾಸಕ್ಕೆ ಸ್ವಲ್ಪ ಪೆನ್ಷನ್ ಕಳಿಸಿದ. ಹಣ ವಾಪಸ್ಸು ಬಂತು. ಆ ವಿಳಾಸದಲ್ಲಿ ಈಗ ಯಾರೂ ಇರಲಿಲ್ಲ.

ಮೂಲ : ರವೀಂದ್ರನಾಥ ಠಾಕೂರ್
ಕನ್ನಡಕ್ಕೆ : ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ
೧೬೪೬/೧೮, ಮಹಡಿ, ವಿದ್ಯಾನಗರ, ದಾವಣಗೆರೆ - ೫೭೭ ೦೦೫



# ಬದಲಾಗುತ್ತಿರುವ ನ್ಯಾಯಾಂಗದ ದೃಷ್ಟಿಕೋಣ

ಸರ್ವೋಚ್ಚ ನ್ಯಾಯಾಲಯದ ಮಾಜಿ ನ್ಯಾಯಮೂರ್ತಿ ವಿ. ಎಸ್. ಕೃಷ್ಣ ಅಯ್ಯರ್ ಹೇಳುವಂತೆ, "ಈ ದೇಶಕ್ಕೆ ಅಗತ್ಯವಾಗಿರುವುದು ಒಂದು ಚಲನಶೀಲ, ಪ್ರಗತಿಶೀಲ, ಸ್ವರಾಜ್ಯದ ಪರಿಕಲ್ಪನೆ ಹೊಂದಿದ ನ್ಯಾಯಾಂಗ. ನ್ಯಾಯಾಧೀಶರು ಕಾನೂನನ್ನು ಅರ್ಥೈಸುವ ಮತ್ತು ಅನ್ವಯಿಸುವ ಅಧಿಕಾರ ಹೊಂದಿದ್ದರೂ, ಕಾನೂನನ್ನು ರಚಿಸುವ ಅಧಿಕಾರ ಹೊಂದಿರುವ ಶಾಸಕಾಂಗದ ಸದಸ್ಯರಂತೆ ಜನರಿಂದ ಚುನಾಯಿತರಾದವರಲ್ಲ, ರಾಷ್ಟ್ರಪತಿಯವರಿಂದ ನೇಮಕಾತಿಗೊಳ್ಳುವ ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಧೀಶರ ಬಗ್ಗೆ ಜನತೆಯ ಪಾತ್ರ ಕಿಂಚಿತ್ತೂ ಇರುವುದಿಲ್ಲ".

**ಮುರಳಿಧರ್**

ಇತ್ತೀಚೆಗೆ ಭಾರತದ ಸರ್ವೋಚ್ಚ ನ್ಯಾಯಾಲಯವು ಇತರ ಹಿಂದುಳಿದ ವರ್ಗಕ್ಕೆ ಮೀಸಲಾತಿಯ ಪ್ರಕರಣದ ಬಗ್ಗೆ ಕೇಂದ್ರ ಸರ್ಕಾರಕ್ಕೆ ಒಂದು ಮಧ್ಯಂತರ ಆಜ್ಞೆ ನೀಡುತ್ತಾ ಲೋಕಸಭೆಯು ಈ ಬಗ್ಗೆ ಸೂಕ್ತ ಚರ್ಚೆಗೋಸ್ಕರ ರಚಿಸಿದ ಪಾರ್ಲಿಮೆಂಟ್ ಉಪಸಮಿತಿಯ ವರದಿಯನ್ನು ನ್ಯಾಯಾಲಯದ ಮುಂದೆ ಹಾಜರು ಪಡಿಸಬೇಕೆಂದು ತಿಳಿಸಿ, ಅನಂತರ ಅದನ್ನು ಸ್ವಲ್ಪ ಮಾರ್ಪಾಟುಮಾಡಿ ವರದಿಯನ್ನು ಮುಚ್ಚಿದ ಲಕೋಟೆಯಲ್ಲಿಟ್ಟು, ಅದರ ಬಗ್ಗೆ ಚರ್ಚಿಸಕೂಡದೆಂದು ಆದೇಶ ನೀಡಿತು. ಸೂಕ್ತ ಕಾನೂನಿನ ರಚನೆಗೆ ಪೂರಕವಾಗಿ ಶಾಸಕಾಂಗ ನೇಮಿಸಿದ ಉಪ ಸಮಿತಿಯು ನೀಡಿದ ವರದಿಯನ್ನು ಸದನದಲ್ಲಿ ಚರ್ಚಿಸಬಾರದೆಂಬ ಆದೇಶ ಶಾಸಕಾಂಗ ಮತ್ತು ನ್ಯಾಯಾಂಗಗಳ ನಡುವಿನ ಘರ್ಷಣೆಗೆ ಹೊಸ ಚರ್ಚಾವಸ್ತುವಾಗಿದೆ. ಸಂವಿಧಾನದ ಚೌಕಟ್ಟಿನಲ್ಲಿ ಕಾನೂನುಗಳನ್ನು ರಚಿಸುವ ಅಧಿಕಾರ ಶಾಸಕಾಂಗಕ್ಕೆ ಸಂವಿಧಾನದತ್ತವಾಗಿರುವ ಅಧಿಕಾರಗಳಲ್ಲೊಂದು. ಅಂದರೆ ಶಾಸನ ರಚನೆಗೊಂಡು ಅದು ಜಾರಿಗೊಳಿಸಿದ ನಂತರ ಆ ಶಾಸನ ಅಥವಾ ಅದರಲ್ಲಿರುವ ವಿಧಿಗಳು ಸಂವಿಧಾನಬದ್ಧವಾಗಿಲ್ಲವೆಂದು ಯಾವ ಪ್ರಜೆಯಾದರೂ ನ್ಯಾಯಾಲಯಕ್ಕೆ ಹೋದಲ್ಲಿ ಅದನ್ನು ಸಂವಿಧಾನದ ಒರೆಗೆ ಹಚ್ಚಿ ಅದು ಸಂವಿಧಾನಾತ್ಮಕವಾಗಿದೆಯೇ ಅಥವಾ ಇಲ್ಲವೇ ಎಂದು ತೀರ್ಮಾನಿಸುವ ಅಧಿಕಾರ ಸಂವಿಧಾನದತ್ತವಾಗಿ ರಾಜ್ಯಗಳ ಉಚ್ಚ ನ್ಯಾಯಾಲಯಗಳಿಗೆ ಮತ್ತು ಸರ್ವೋಚ್ಚ ನ್ಯಾಯಾಲಯಕ್ಕೆ ಇರುವ ಅಧಿಕಾರ. ಅಂದರೆ, ಉಚ್ಚ ನ್ಯಾಯಾಲಯಗಳಿಗಾಗಲೀ ಅಥವಾ ಸರ್ವೋಚ್ಚ ನ್ಯಾಯಾಲಯಕ್ಕಾಗಲೀ ಶಾಸನ ರಚಿಸುವ ಪ್ರಕ್ರಿಯೆಗಳಲ್ಲಿ ಮಧ್ಯಪ್ರವೇಶಿಸುವ ಅಧಿಕಾರವಿಲ್ಲ. ಹಿಂದೊಮ್ಮೆ ರಾಷ್ಟ್ರಪತಿಯವರು ತಮ್ಮ ಮುಂದೆ ಬಂದ ಒಂದು ವಿಷಯದ ಬಗ್ಗೆ ಸರ್ವೋಚ್ಚ ನ್ಯಾಯಾಲಯದ ಸಲಹೆ ಕೇಳಿದಾಗ ಅಂತಹ ಉಲ್ಲೇಖಕ್ಕೆ ಅವಕಾಶವಿಲ್ಲವೆಂದು ತಿಳಿಸಿದ ಸರ್ವೋಚ್ಚ ನ್ಯಾಯಾಲಯ, ಜನಪ್ರತಿನಿಧಿಗಳು ಅವರಿಂದಲೇ ರಚಿಸಲ್ಪಟ್ಟ ಉಪಸಮಿತಿಯ ವರದಿಯನ್ನು ಮುಚ್ಚಿದ ಲಕೋಟೆಯಲ್ಲಿಡಬೇಕೆಂಬ ಮಧ್ಯಂತರ ಆಜ್ಞೆ ನೀಡಿರುವುದು ಎಷ್ಟು ಸಮಂಜಸ ಮತ್ತು ಸಂವಿಧಾನಬದ್ಧ ಎಂಬ ಪ್ರಶ್ನೆ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಶ್ರದ್ಧೆಯಿರುವ ಎಲ್ಲರನ್ನೂ ಕಾಡಬೇಕಾದ್ದು ಅನಿವಾರ್ಯ ಮತ್ತು ಅಗತ್ಯವೂ ಕೂಡ.

ಭಾರತದ ಸಂವಿಧಾನ ರಚಿಸುವ ಸಂದರ್ಭದಲ್ಲಿ ಸಂಯುಕ್ತ ಸಭೆಯಲ್ಲಿ ನಡೆದ ಚರ್ಚೆಗಳು ಅಂದಿನ ರಾಜಕೀಯ ನಾಯಕರ ಕಾಳಜಿಗೆ ಹಿಡಿದ ಕನ್ನಡಿಯೆನ್ನಬಹುದು. ಅನೇಕ ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯ ಹಾಗೂ ಉಚ್ಚ ನ್ಯಾಯಾಲಯಗಳು ತಮ್ಮ ತೀರ್ಪುಗಳನ್ನು ಕೊಡುವ ಸಂದರ್ಭದಲ್ಲಿ ಸಂಯುಕ್ತ ಸಭೆಯಲ್ಲಿನ ಚರ್ಚೆಯ ಭಾಗಗಳನ್ನು ಆಧಾರವಾಗಿಟ್ಟುಕೊಂಡದ್ದನ್ನು ಕಾಣಬಹುದು. ಭಾರತದಂತಹ ದೇಶಕ್ಕೆ ಒಂದು ಲಿಖಿತ ಸಂವಿಧಾನ ರಚಿಸಿದ ಪ್ರಯತ್ನವೇ ಶ್ಲಾಘನೀಯ. ಅಮೇರಿಕಾ, ಕೆನಡಾ, ಆಸ್ಟ್ರೇಲಿಯಾ, ಫ್ರಾನ್ಸ್ ಇತ್ಯಾದಿ ರಾಷ್ಟ್ರಗಳ ಸಂವಿಧಾನಗಳಿಂದ ಉತ್ತಮ ಅಂಶಗಳನ್ನು ಸ್ವೀಕರಿಸಿ ನಮ್ಮ ಸಂವಿಧಾನದಲ್ಲಿ ಅಳವಡಿಸಿರುವುದು ವಸಾಹತುಶಾಹಿ ಸಂಕೋಲೆ ಕಿತ್ತು ಬಿಡುಗಡೆ ಹೊಂದಿ ಸಂಪೂರ್ಣ ಪ್ರಭುತ್ವ ಸಾರ್ವಭೌಮ ಸಂಪನ್ನ ಲೋಕತಂತ್ರಾತ್ಮಕ ಗಣರಾಜ್ಯದ ಹಾದಿಹಿಡಿದಿದ್ದು ಭಾರತದ ಚರಿತ್ರೆಯಲ್ಲಿನ ಒಂದು ಪ್ರಶಂಸನೀಯ ಬೆಳವಣಿಗೆಯೆನ್ನಬಹುದು.

ಈ ಹಿನ್ನೆಲೆಯಲ್ಲಿ ರಚನೆಗೊಂಡ ಸಂವಿಧಾನವನ್ನು ತಿದ್ದುಪಡಿ ಮಾಡುವ ಅಧಿಕಾರ ಪಾರ್ಲಿಮೆಂಟ್‌ಗಿದೆಯೋ ಇಲ್ಲವೋ ಎಂಬ ಪ್ರಶ್ನೆ ಕಾಲಕಾಲಕ್ಕೆ ತಲೆಯೆತ್ತುತ್ತಿದೆ. ೧೯೫೧ರಲ್ಲಿ ಶಂಕರೀ ಪ್ರಸಾದ್ ಸಿಂಗ್ ಪ್ರಕರಣದಲ್ಲಿ (ಎ.ಐ.ಆರ್. ೧೯೫೧, ೪೫೮), ಸಂವಿಧಾನಕ್ಕೆ ತಂದ ಮೊದಲನೇ ತಿದ್ದುಪಡಿಯನ್ನು ಸಂವಿಧಾನಾತ್ಮಕವಾಗಿದೆಯೆಂದು ಸರ್ವೋಚ್ಚ ನ್ಯಾಯಾಲಯ ತೀರ್ಪಿತ್ತಿತು. ಮತ್ತೆ ಪ್ರಜ್ಜನ್ ಸಿಂಗ್ ಎಂಬ ಪ್ರಕರಣದಲ್ಲಿ (ಎ.ಐ.ಆರ್. ೧೯೬೫, ೮೪೫) ಪಾರ್ಲಿಮೆಂಟ್‌ಗೆ ಸಂವಿಧಾನವನ್ನು ತಿದ್ದುಪಡಿ ಮಾಡುವ ಅಧಿಕಾರವಿದೆಯೆಂದು ತೀರ್ಮಾನಿಸಲಾಯಿತು. ಆದರೂ ಈ ಪ್ರಶ್ನೆ ಗೋಲಕನಾಥ್ ಪ್ರಕರಣದಲ್ಲಿ ಮತ್ತೆ ಬಂದು ಸರ್ವೋಚ್ಚ ನ್ಯಾಯಾಲಯದ ಹನ್ನೊಂದು ನ್ಯಾಯಾಧೀಶರ ಪೀಠ ಮೂಲಭೂತ ಹಕ್ಕುಗಳನ್ನು ತಿದ್ದುಪಡಿ ಮಾಡುವ ಅಧಿಕಾರ ಪಾರ್ಲಿಮೆಂಟ್‌ಗಿಲ್ಲ ಎಂಬ ತೀರ್ಮಾನವನ್ನಿತ್ತಿತು. ೧೯೭೩ರಲ್ಲಿ ಕೇಶವಾನಂದ ಭಾರತಿ ಪ್ರಕರಣದಲ್ಲಿ (ಎ.ಐ.ಆರ್. ೧೯೭೩, ೧೪೬೧) ೧೩ ನ್ಯಾಯಾಧೀಶರ ನ್ಯಾಯಪೀಠ ಸಂವಿಧಾನವನ್ನು ತಿದ್ದುಪಡಿ ಮಾಡುವ ಅಧಿಕಾರ ಪಾರ್ಲಿಮೆಂಟ್‌ಗಿದೆಯೆಂದು ತೀರ್ಮಾನಿಸಿದರೂ, ಅದರ ಮೂಲ

ಲಕ್ಷಣಗಳನ್ನು ತಿದ್ದುಪಡಿಮಾಡುವ ಅಧಿಕಾರವಿಲ್ಲವೆಂದು ತೀರ್ಮಾನಿಸಿತು. ಸಂವಿಧಾನದ ಪ್ರಾಧಾನ್ಯತೆ, ಪ್ರಜಾಪ್ರಭುತ್ವವಾದಿ ಗಣರಾಜ್ಯ, ಜಾತ್ಯತೀತತೆ, ಶಾಸಕಾಂಗ- ಕಾರ್ಯಾಂಗ- ನ್ಯಾಯಾಂಗಗಳ ಅಧಿಕಾರ ವಿಂಗಡನೆ, ಸಂಯುಕ್ತ ರಾಜ್ಯ ವ್ಯವಸ್ಥೆ, ಉಚ್ಚ ಹಾಗೂ ಸರ್ವೋಚ್ಚ ನ್ಯಾಯಾಲಯಗಳಿಗಿರುವ ನ್ಯಾಯಿಕ ಪುನರ್ವಿಮರ್ಶೆಯ ಅಧಿಕಾರ ಇತ್ಯಾದಿಗಳು ಸಂವಿಧಾನದ ಮೂಲಭೂತ ಲಕ್ಷಣಗಳೆಂದು ತೀರ್ಮಾನಿಸಲ್ಪಟ್ಟಿವೆ.

**ನ್ಯಾಯಾಂಗದ ಕಾರ್ಯವ್ಯಾಪ್ತಿ – ಅದರ ಇತಿಮಿತಿಗಳು**

ನಮ್ಮ ಸಂವಿಧಾನ ವ್ಯವಸ್ಥೆಯಲ್ಲಿ ಶಾಸಕಾಂಗ ಮತ್ತು ಕಾರ್ಯಾಂಗ ಸಂವಿಧಾನಾತೀತವಾಗಿ ಶಾಸನ ರಚಿಸಿದಲ್ಲಿ ಅಥವಾ ಕಾರ್ಯ ನಿರ್ವಹಿಸಿದಲ್ಲಿ ಅದನ್ನು ಪರಾಮರ್ಶಿಸುವ ಮತ್ತು ಅದಕ್ಕೆ ಕಡಿವಾಣ ಹಾಕುವ ಅಧಿಕಾರ ನ್ಯಾಯಾಂಗಕ್ಕೆ ಸಂವಿಧಾನದತ್ತವಾಗಿದೆ. ಅಂದರೆ ನ್ಯಾಯಾಂಗ ಪ್ರಜಾಪ್ರಭುತ್ವ ವ್ಯವಸ್ಥೆಯ ಸ್ಥಿತಿ-ಗತಿಗಳ ನಿರ್ಣಯದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆಂಬುದು ವಿದಿತವಾಗುತ್ತದೆ. ಆದರೆ, ನ್ಯಾಯಾಂಗ, ತನ್ನ ಚೌಕಟ್ಟನ್ನು ಮೀರಿ ವರ್ತಿಸಿದರೆ, ಸಂವಿಧಾನದ ಸೂಕ್ಷ್ಮ ಸಮತೋಲನ ಏನಾಗಬಹುದು ಎಂಬುದನ್ನು ಮನಗಾಣುವ ಪರಿಸ್ಥಿತಿ ಈಗ ಬಂದಿದೆ. ಮತ್ತು ಅದನ್ನು ಸಂವಿಧಾನದ ಹಿನ್ನೆಲೆಯಲ್ಲಿ ಚರ್ಚಿಸಬೇಕಾದ್ದು ಚಾರಿತ್ರಿಕ ಅಗತ್ಯ ಮಾತ್ರವಲ್ಲ, ಅದು ಪ್ರಜಾಪ್ರಭುತ್ವದ ಮೌಲ್ಯಗಳಲ್ಲಿ ನಂಬಿಕೆಯಿರುವವರ ಎಲ್ಲರ ಕರ್ತವ್ಯವೂ ಆಗಿದೆ. ಈ ಕಾರಣದಿಂದಲೇ ಶಾಸಕಾಂಗ ಮತ್ತು ಕಾರ್ಯಾಂಗಗಳ ಬಗ್ಗೆ ಪುಂಖಾನುಪುಂಖವಾಗಿ ಚರ್ಚಿಸುವವರು ನ್ಯಾಯಾಂಗದ ಕಾರ್ಯವೈಖರಿಯ ಬಗ್ಗೆ ವಸ್ತುನಿಷ್ಠವಾಗಿ ಚರ್ಚಿಸಿದಲ್ಲಿ ಅದು ಪ್ರಜಾಪ್ರಭುತ್ವದ ಉಳಿವು ಮತ್ತು ಬೆಳವಣಿಗೆಗೆ ಕೊಡಬಹುದಾದ ಕಾಣಿಕೆಯಾಗುತ್ತದೆ. ಸಮಾಜದಲ್ಲಿ ನ್ಯಾಯಾಂಗದ ಕಾರ್ಯವ್ಯಾಪ್ತಿ ಮತ್ತು ವೈಖರಿ ಎರಡೂ ಚರ್ಚೆಗೊಳಪಡುತ್ತಿದ್ದಲ್ಲಿ ನ್ಯಾಯಾಂಗಕ್ಕೂ ಸಂವಿಧಾನದಲ್ಲಿ ಅದಕ್ಕಿರುವ ಇತಿ-ಮಿತಿಗಳ ಬಗ್ಗೆ ಜ್ಞಾಪಿಸಿದಂತಾಗುತ್ತದೆ. ಇಲ್ಲದಿದ್ದಲ್ಲಿ ಶಾಸಕಾಂಗ ಮತ್ತು ಕಾರ್ಯಾಂಗ ಮಾಡುವ ಅತಿರೇಕಗಳನ್ನು ನ್ಯಾಯಾಂಗ ಕೂಡ ಮಾಡುತ್ತದೆ ಎಂಬುದು ಇತ್ತೀಚಿನ ಅನೇಕ ತೀರ್ಪುಗಳಿಂದ ವ್ಯಕ್ತವಾಗುತ್ತದೆ.

ಇಸ್ರೇಲ್‌ನ ಸರ್ವೋಚ್ಚ ನ್ಯಾಯಾಲಯದ ಅಧ್ಯಕ್ಷರು ಹಾಗೂ ಮುಖ್ಯ ನ್ಯಾಯಮೂರ್ತಿಗಳಾದ ಅಹರಾನ್ ಬ್ಯಾರಕ್ ಅವರ ಅಭಿಪ್ರಾಯದಲ್ಲಿ ಸಂವಿಧಾನವನ್ನು ಅರ್ಥೈಸುವ ನ್ಯಾಯಾಧೀಶರು ಅದರ ರಚನೆಕಾರರ ಜೊತೆಗಾರರು. ಸಂವಿಧಾನದ ಶಿಲ್ಪಿಗಳು ಅದರ ಪಠ್ಯವನ್ನು ಬರೆದರೆ ನ್ಯಾಯಾಧೀಶರು ಅದನ್ನು ಅರ್ಥೈಸುವವರಾಗಿದ್ದಾರೆ. ಸಂವಿಧಾನದ ರಚನಕಾರರು ಅದರ ಗುರಿಗಳನ್ನು ಗೊತ್ತುಪಡಿಸಿ, ಅದರ ಸಾಕಾರವನ್ನು ಬಯಸಿದರೆ, ನ್ಯಾಯಾಧೀಶರು ಆ ಗುರಿಗಳನ್ನು ಆಧುನಿಕ ಜೀವನದಲ್ಲಿ ಅಳವಡಿಸುವ ಸಂವಿಧಾನದ ವ್ಯಾಪಕ ಪಾತ್ರವನ್ನು ಚಿತ್ರಿಸುವವರಾಗಿದ್ದಾರೆ. ಸಂವಿಧಾನದ ನಿರಂತರತೆಯನ್ನು ನ್ಯಾಯಾಧೀಶರು ಕಾಪಾಡಬೇಕು. ಸಂವಿಧಾನದ ಆಶಯದ ಚೌಕಟ್ಟಿನಲ್ಲಿ ಜನತೆಯ ಮೂಲಭೂತ ಮೌಲ್ಯಗಳನ್ನು ಸಮೀಕರಿಸಬೇಕೆಂದು ಬ್ಯಾರಕ್ ಅಭಿಪ್ರಾಯಪಡುತ್ತಾರೆ.

ಸರ್ವೋಚ್ಚ ನ್ಯಾಯಾಲಯದ ಮಾಜಿ ನ್ಯಾಯಮೂರ್ತಿ ವಿ. ಎಸ್. ಕೃಷ್ಣ ಅಯ್ಯರ್ ಹೇಳುವಂತೆ, ''ಈ ದೇಶಕ್ಕೆ ಅಗತ್ಯವಾಗಿರುವುದು ಒಂದು ಚಲನಶೀಲ, ಪ್ರಗತಿಶೀಲ, ಸ್ವರಾಜ್ಯದ ಪರಿಕಲ್ಪನೆ ಹೊಂದಿದ ನ್ಯಾಯಾಂಗ. ನ್ಯಾಯಾಧೀಶರು ಕಾನೂನನ್ನು ಅರ್ಥೈಸುವ ಮತ್ತು ಅನ್ವಯಿಸುವ ಅಧಿಕಾರ ಹೊಂದಿದ್ದರೂ, ಕಾನೂನನ್ನು ರಚಿಸುವ ಅಧಿಕಾರ ಹೊಂದಿರುವ ಶಾಸಕಾಂಗದ ಸದಸ್ಯರಂತೆ ಜನರಿಂದ ಚುನಾಯಿತರಾದವರಲ್ಲ. ರಾಷ್ಟ್ರಪತಿಯವರಿಂದ ನೇಮಕಾತಿಗೊಳ್ಳುವ ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಧೀಶರ ಬಗ್ಗೆ ಜನತೆಯ ಪಾತ್ರ ಕಿಂಚಿತ್ತೂ ಇರುವುದಿಲ್ಲ''

ಎಲ್ಲ ಅಧಿಕಾರಗಳೂ ದುರುಪಯೋಗವಾಗುವ ರೀತಿಯಲ್ಲಿ ನ್ಯಾಯಾಂಗಕ್ಕೆ ದತ್ತವಾದ ಅಧಿಕಾರವೂ ದುರುಪಯೋಗವಾಗಬಹುದು. ಯಾವಾಗ ನ್ಯಾಯಾಂಗ ತನ್ನದೇ ಆದ ಅತಿರೇಕಗಳಲ್ಲಿ ತೊಡಗುತ್ತದೋ, ನ್ಯಾಯಾಧೀಶರು ತಮ್ಮ ಸ್ವಂತ ಅನಿಸಿಕೆಗಳನ್ನು ಪಾರ್ಲಿಮೆಂಟ್‌ನ ಅಭಿಪ್ರಾಯಗಳ ಮೇಲೆ ಹೇರುತ್ತಾರೋ ಆಗ ಪ್ರಜಾಪ್ರಭುತ್ವದ ವ್ಯವಸ್ಥೆ ಏರು-ಪೇರಾಗುತ್ತದೆ.

ಸ್ವಾತಂತ್ರ್ಯಾನಂತರದ ಐದು ದಶಕಗಳಲ್ಲಿ ಸರ್ವೋಚ್ಚ ನ್ಯಾಯಾಲಯವು ಹಲವಾರು ಮಹತ್ವದ ತೀರ್ಮಾನಗಳನ್ನು ನೀಡಿ ಜನತೆಯ ವಿಶ್ವಾಸ ಗಳಿಸಿದ್ದನ್ನು ನಿರಾಕರಿಸಲಾಗುವುದಿಲ್ಲ. ಅದು ಸಮಾಜವಾದ, ಸಮಾನತೆ, ಮಾನವ ಹಕ್ಕುಗಳು ಇತ್ಯಾದಿ ವಿಷಯಗಳ

ಬಗ್ಗೆ ಹೆಚ್ಚು ಪ್ರಗತಿಶೀಲ ನೀತಿಯನ್ನು ಅನುಸರಿಸಿದ್ದನ್ನೂ ಕಾಣಬಹುದು. ಅಂದಿನ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಮೌಲ್ಯಗಳಿಗೆ ನ್ಯಾಯಾಂಗವು ಕೂಡ ಸ್ಪಂದಿಸಿದ ಹಾಗೆ ಕಂಡಿತು. ಬಂಡವಾಳಶಾಹಿ ವ್ಯವಸ್ಥೆಯ ಬಿಕ್ಕಟ್ಟು ಹೆಚ್ಚಿದಂತೆಲ್ಲ ಆಳುವ ವರ್ಗದ ದಮನಕಾರಿ ಪ್ರವೃತ್ತಿಯೂ ಹೆಚ್ಚುತ್ತದೆ ಎಂಬುದು ಜಗತ್ತಿನ ಅನೇಕ ರಾಷ್ಟ್ರಗಳ ಅನುಭವ. ೧೯೭೫-೭೭ರ ತುರ್ತು ಪರಿಸ್ಥಿತಿಯ ಸಮಯದಲ್ಲಿ ನಮ್ಮ ದೇಶದಲ್ಲೂ ಪ್ರಜಾಪ್ರಭುತ್ವದ ಹಕ್ಕುಗಳ ಮೇಲೆ ದಾಳಿ ನಡೆಸಿದ್ದು ಶಾಸಕಾಂಗದ ಅತಿರೇಕ. ಇಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ನ್ಯಾಯಾಂಗ ತನ್ನ ಸಂವಿಧಾನಾತ್ಮಕ ಜವಾಬ್ದಾರಿಯನ್ನು ಸಮರ್ಪಕವಾಗಿ ನಿಭಾಯಿಸಿತು ಎನ್ನುವುದು ಸಂದೇಹಾಸ್ಪದವೇ.

**ನ್ಯಾಯಾಂಗದ ಸಂವಿಧಾನಬದ್ಧತೆ ಮತ್ತು ನೈತಿಕತೆ**

ಅಂದರೆ, ನ್ಯಾಯಾಂಗ ಬಹುತೇಕ ಕಾಲಕಾಲಕ್ಕೆ ಆಳುವ ವರ್ಗದ ರೀತಿ-ನೀತಿಗಳಿಗನುಸಾರವಾಗಿ ನಡೆದುಕೊಂಡು ಬರುತ್ತಿದೆಯೆಂಬುದು ಸ್ಪಷ್ಟವಾಗುತ್ತದೆ. ಅಲ್ಲೊಂದು ಇಲ್ಲೊಂದು ಒಳ್ಳೆಯ ತೀರ್ಮಾನಗಳು ಬಂದಿರಬಹುದು, ಅಂತಹ ತೀರ್ಮಾನಗಳು ಆ ನ್ಯಾಯಾಧೀಶರ ಸಂವಿಧಾನ ಬದ್ಧತೆಯಿಂದಲೋ ಇಲ್ಲವೇ ಅವರು ನಂಬಿದ ಸಿದ್ಧಾಂತದ ಹಿನ್ನೆಲೆಯಿಂದಲೋ ಹೊರಹೊಮ್ಮಿರಬಹುದು. ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯಗಳಿಗೆ ನೇಮಕಗೊಳ್ಳುವ ನ್ಯಾಯಾಧೀಶರು ಈ ದೇಶದ ಸಾಮಾಜಿಕ ಮೌಲ್ಯಗಳೊಂದಿಗೆ ಹುಟ್ಟಿ ಬೆಳೆದವರು. ಅವರು ಎಲ್ಲ ಸಾಮಾನ್ಯ ಆಸೆ-ಆಕಾಂಕ್ಷೆಗಳಿಗೆ ಹೊರತಾದವರಲ್ಲ. ಒಂದು ಅವಧೂತ ಸ್ಥಿತಿಯ ನ್ಯಾಯಾಧೀಶರನ್ನು ಕಾಣುವುದು ಅಪರೂಪ. ಹಾಗಾಗಿಯೇ ನ್ಯಾಯಾಧೀಶರು ಸಮಾಜದ ಆಗುಹೋಗುಗಳನ್ನು ವಿಶ್ಲೇಷಿಸುವ ರೀತಿ-ನೀತಿಗಳೂ ಅವರ ಪೂರ್ವಾಶ್ರಮದ ಮೌಲ್ಯಗಳನ್ನು ಮತ್ತು ಪೂರ್ವ ಗ್ರಹಗಳನ್ನು ಪ್ರತಿಬಿಂಬಿಸುತ್ತವೆ. ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು ಕೊಡುವ ತೀರ್ಮಾನ ಅಂತಿಮವಾದ್ದರಿಂದ ಅದು ತಪ್ಪಲ್ಲವೆಂದು ಇವರ ಅಭಿಪ್ರಾಯ. ನ್ಯಾಯಮೂರ್ತಿ ಜಾಕ್ಸನ್ ಹೇಳುವಂತೆ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು ತಪ್ಪು ತೀರ್ಮಾನಗಳನ್ನು ಕೊಡುವುದಿಲ್ಲವಾದ್ದರಿಂದ ಅವರು ಅವುಗಳೇ ಅಂತಿಮವೆಂದು ಹೇಳಲಾಗುವುದಿಲ್ಲ. ಅವರ ತೀರ್ಮಾನಗಳು ತಪ್ಪೆನಿಸುವುದಿಲ್ಲ, ಏಕೆಂದರೆ ಅವರ ತೀರ್ಮಾನಗಳು ಅಂತಿಮವಾದ್ದರಿಂದ.

ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದ ಕೆ. ರಾಮಸ್ವಾಮಿಯವರು ಬೆಂಗಳೂರಿನಲ್ಲಿ ವಿಚಾರ ಸಂಕಿರಣವೊಂದರಲ್ಲಿ ಮಾತನಾಡುತ್ತಾ, ''ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರು ಎರಡು ತರಹದವರು. ಮೊದಲನೆಯವರು, ಸಂವಿಧಾನದಿಂದ ಪ್ರೇರೇಪಿತರಾದವರು. ಎರಡನೆಯವರು, ಸಿವಿಲ್ ಸಂಹಿತೆಯನ್ನು ಮೀರದವರು, ಸಂವಿಧಾನದ ಗುರಿಗಿಂತ ಕಾನೂನಿನ ಕಟ್ಟುಪಾಡುಗಳೇ ಮುಖ್ಯ ಎಂದು ತಿಳಿದವರು'' ಎಂದು ಹೇಳಿದ ಅವರ ಮಾತುಗಳು ಎಷ್ಟು ಅರ್ಥಪೂರ್ಣವೆಂದು ಇತ್ತೀಚಿನ ಹಲವಾರು ತೀರ್ಮಾನಗಳಿಂದ ವ್ಯಕ್ತವಾಗುತ್ತದೆ.

೧೯೯೧ರಲ್ಲಿ ಕೇಂದ್ರ ಸರ್ಕಾರ ಪಾರ್ಲಿಮೆಂಟ್‌ನಲ್ಲಿ ಯಾವ ಚರ್ಚೆಗೂ ಅವಕಾಶ ಕೊಡದೆ ಹೊಸ ಆರ್ಥಿಕ ನೀತಿಯ ಹೆಸರಿನಲ್ಲಿ ಜಾಗತೀಕರಣದ ಪ್ರಕ್ರಿಯೆಗಳಿಗೆ ಮತ್ತು ಅದಕ್ಕೆ ಪೂರಕವಾದ ಉದಾರೀಕರಣ ಮತ್ತು ಖಾಸಗೀಕರಣದ ನೀತಿಗಳಿಗೆ ಈ ದೇಶವನ್ನು ಒಡ್ಡಿದ ನಂತರ ಅಂತರರಾಷ್ಟ್ರೀಯ ಸಂಸ್ಥೆಗಳಿಗೆ ಇಲ್ಲಿ ವ್ಯಾಪಾರ ನಡೆಸುವುದು ಸುಸೂತ್ರವಾಗುವಂತೆ ಅನೇಕ ಕಾನೂನುಗಳನ್ನು ತಿದ್ದುಪಡಿ ಮಾಡಲಾಗಿದೆ ಮತ್ತು ಹೊಸ ಕಾನೂನುಗಳನ್ನು ತರಲಾಗುತ್ತಿದೆ. ಕಾರ್ಮಿಕರಿಗೆ ಸಂಬಂಧಪಟ್ಟ ಕಾನೂನುಗಳನ್ನು ಬಂಡವಾಳದ ಹಿತಕ್ಕಾಗಿ ಮಾರ್ಪಾಟು ಮಾಡುವ ಸಲುವಾಗಿಯೇ ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗವನ್ನು ರಚಿಸಲಾಯಿತು. ಶಾಸಕಾಂಗ ಮತ್ತು ಕಾರ್ಯಾಂಗ ಎರಡೂ ಬಂಡವಾಳದಾರರ ಬೇಡಿಕೆಯನ್ನು ಪೂರೈಸಲು ತುದಿಗಾಲಮೇಲೆ ನಿಂತಿವೆ. ಸಾವಿರಾರು ಎಕರೆ ಭೂಮಿಯನ್ನು ಉದ್ಯೋಗಪತಿಗಳಿಗೆ ಹಂಚಲಾಗುತ್ತಿದೆ. ಈ ನೀತಿಗಳ ವಿರುದ್ಧ ಜನತೆಯ ಹೋರಾಟಗಳು ಹುಟ್ಟುತ್ತಿದ್ದರೂ, ನ್ಯಾಯಾಂಗ ಸದ್ದಿಲ್ಲದೇ ಜಾಗತೀಕರಣದ ನೀತಿಗಳಿಗೆ ತಲೆದೂಗುತ್ತಿದೆ. ಸಂವಿಧಾನವನ್ನು ಎತ್ತಿಹಿಡಿಯುತ್ತೇವೆಂದು




ಪ್ರಮಾಣ ಮಾಡುವ ನ್ಯಾಯಾಧೀಶರು ಅದರ ಆಶಯಗಳಿಂದ ದೂರ ಸರಿಯುತ್ತಿರುವುದು ಈಗೀಗ ಬಹಳವಾಗಿ ವೇದ್ಯವಾಗುತ್ತಿದೆ.

ಪ್ರಜಾಪ್ರಭುತ್ವದ ಪ್ರಮುಖ ಸತ್ವಗಳಲ್ಲೊಂದೆಂದರೆ ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ಪ್ರತಿಭಟನೆಯ ಹಕ್ಕು. ಇಂತಹ ಮೂಲಭೂತ ಹಕ್ಕುಗಳನ್ನು ಮೊಟಕುಗೊಳಿಸುವ ಪ್ರಯತ್ನ ಆಳುವ ವರ್ಗದಿಂದ ನಡೆಯುತ್ತಿದೆ. ಅಂತಹ ಪ್ರಯತ್ನಗಳ ಸಂವಿಧಾನಿಕತೆಯನ್ನು ನ್ಯಾಯಾಂಗ ನಿರ್ಧರಿಸಬೇಕು. ಆದರೆ ನ್ಯಾಯಾಂಗವೇ ಆಳುವ ವರ್ಗದ ಸ್ಥಾನಕ್ಕೇರಿದರೆ, ಅದು ಪ್ರಜಾಪ್ರಭುತ್ವದ ಬುನಾದಿಗೆ ಕೊಟ್ಟ ಪೆಟ್ಟಾಗುತ್ತದೆ. ಸರ್ವೋಚ್ಚ ನ್ಯಾಯಾಲಯವು ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ (ಮಾರ್ಕ್ಸಿಸ್ಟ್) ಮತ್ತು ಭಾರತ್ ಎಂಬ ಪ್ರಕರಣದಲ್ಲಿ ಬಂದ್ ಮತ್ತು ಹರತಾಳಗಳ ಬಗ್ಗೆ ಕೊಟ್ಟ ತೀರ್ಪು ಈ ಸಾಲಿಗೆ ಸೇರುತ್ತದೆ. ಬಂದ್ ಮತ್ತು ಹರತಾಳಗಳ ಅರ್ಥವೇನೆಂದು ಹೇಳುವ ಯಾವ ಕಾನೂನು ಇಲ್ಲದಿದ್ದರೂ, ಬಂದ್ ಮತ್ತು ಹರತಾಳಗಳು ಬೇರೆಯವರ ಮೂಲಭೂತ ಹಕ್ಕನ್ನು ಅತಿಕ್ರಮಿಸುತ್ತವೆಂದು ಅಭಿಪ್ರಾಯ ಪಟ್ಟು ಅದನ್ನು ಕಾನೂನು ವಿರೋಧಿ ಕ್ರಮವೆಂದು ತೀರ್ಮಾನಿಸಿದ್ದು ಪ್ರಜಾಪ್ರಭುತ್ವದ ವ್ಯವಸ್ಥೆಗೆ ಕೊಟ್ಟ ದೊಡ್ಡ ಪೆಟ್ಟು. ಈ ತೀರ್ಪು ಬಂದನಂತರ ದೇಶದ ಎಲ್ಲ ರಾಜಕೀಯ ಪಕ್ಷಗಳು, ಸಾಮೂಹಿಕ ಸಂಘಟನೆಗಳು ಒಂದಲ್ಲ ಒಂದು ಕಡೆ ಬಂದ್ ಆಚರಿಸಿದ್ದು ಸರ್ವೋಚ್ಚ ನ್ಯಾಯಾಲಯದ ತೀರ್ಪು ಎಷ್ಟು ಅಸಮರ್ಥನೀಯವೆನ್ನುವುದಕ್ಕೆ ನಿದರ್ಶನ. ನ್ಯಾಯಾಲಯದ ತೀರ್ಪಿನ ಹಿನ್ನೆಲೆಯಲ್ಲೇ ಕೋಲ್ಕತ್ತಾದ ಉಚ್ಚ ನ್ಯಾಯಾಧೀಶರು ಆ ನಗರದಲ್ಲಿ ನಡೆದ ಒಂದು ಪ್ರತಿಭಟನಾ ಮೆರವಣಿಗೆಯಿಂದಾಗಿ ತಮ್ಮನ್ನು ಕರೆದೊಯ್ಯುತ್ತಿದ್ದ ಕಾರು ಸ್ವಲ್ಪ ಸಮಯ ನಿಲ್ಲಬೇಕಾಯಿತೆಂಬ ಕಾರಣದಿಂದ ಪ್ರತಿಭಟನಾ ಮೆರವಣಿಗೆಗಳು ಸಾಯಂಕಾಲದ ನಂತರ ಮಾತ್ರ ನಡೆಸಲು ಅನುಮತಿ ನೀಡಬೇಕೆಂದು ಆದೇಶವಿತ್ತರು!

ಈ ಮೇಲ್ಕಂಡ ತೀರ್ಮಾನಗಳು ಕೇವಲ ಆಕಸ್ಮಿಕವಲ್ಲ. ಸರ್ವೋಚ್ಚ ನ್ಯಾಯಾಲಯವು ವಕೀಲರಿಗೆ ಮುಷ್ಕರದ ಹಕ್ಕು ಇಲ್ಲವೆಂದು ಕ್ಯಾಪ್ಟನ್ ಹರೀಶ್ ಉಪ್ಪಲ್ ಪ್ರಕರಣದಲ್ಲಿ (ಎ.ಐ.ಆರ್.) ತೀರ್ಪಿತ್ತಿತು. ತಮಿಳುನಾಡಿನ ಜಯಲಲಿತ ಸರ್ಕಾರ ಮುಷ್ಕರ ಕೈಗೊಂಡಿದ್ದ ಕಾರಣವೊಡ್ಡಿ ಸುಮಾರು ಎರಡು ಲಕ್ಷ ಸರ್ಕಾರಿ ನೌಕರರನ್ನು ಕೆಲಸದಿಂದ ವಜಾ ಮಾಡಿದಾಗ ಸರ್ವೋಚ್ಚ ನ್ಯಾಯಾಲಯವು ಈ ಪ್ರಕರಣದಲ್ಲಿ ಸರ್ಕಾರಿ ನೌಕರರಿಗೆ ಮುಷ್ಕರ ನಡೆಸುವ ಸಂವಿಧಾನಾತ್ಮಕ, ಶಾಸನಾತ್ಮಕ ಮತ್ತು ನೈತಿಕ ಹಕ್ಕಿಲ್ಲವೆಂದು ತೀರ್ಮಾನಿಸಿತು (ಎ.ಐ.ಆರ್. ೨೦೦೩-೩೦೩೨). ಅಂದರೆ, ಯಾವುದೇ ರೀತಿಯ ಪ್ರತಿಭಟನೆಗಳನ್ನು ಹತ್ತಿಕ್ಕುವ ಒಂದು ವ್ಯವಸ್ಥೆಯ ಸೃಷ್ಟಿಗೆ ಇವು ನ್ಯಾಯಾಂಗದ ಕೊಡುಗೆ. ನ್ಯಾಯಾಂಗದ ತೀರ್ಪನ್ನು ಟೀಕಿಸಿ, ನ್ಯಾಯಾಂಗಕ್ಕೆ ಅಪಮಾನ ಮಾಡಿದರೆಂದು ಆರೋಪಿಸಿ, ತಾನೇ ಅದನ್ನು ತೀರ್ಮಾನಿಸಿ, ತಾನೇ ಶಿಕ್ಷೆ ಕೊಡುವ ಅಧಿಕಾರವನ್ನು ಉಪಯೋಗಿಸಿಕೊಂಡು ಅರುಂಧತಿ ರಾಯ್ ಪ್ರಕರಣದಲ್ಲಿ (ಎ.ಐ.ಆರ್. ೨೦೦೨-೧೩೬೯) ಸರ್ವೋಚ್ಚ ನ್ಯಾಯಾಲಯ ಅವರಿಗೆ ಕೊಟ್ಟ ಶಿಕ್ಷೆಯನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು.

ಸಂವಿಧಾನದ ಮುನ್ನುಡಿಯಲ್ಲಿ ಸಮಾಜವಾದಿ ವ್ಯವಸ್ಥೆಯ ಆಶಯವಿದ್ದು ಮತ್ತು ದೇಶದ ಸಂಪತ್ತು ಕೆಲವೇ ಜನರ ಕೈಸೇರಕೂಡದೆಂದು ಹಾಗೂ ಸಮಾನ ಅವಕಾಶ ಎಲ್ಲರಿಗೂ ಇರಬೇಕೆಂಬ ಗುರಿ ಸಂವಿಧಾನದ ಭಾಗ-೪ - ರಾಜ್ಯ ನಿರ್ದೇಶನ ತತ್ವಗಳಲ್ಲಿದ್ದರೂ, ಸ್ಟೆರ್ಲೈಟ್ ಎಂಬ ವಿದೇಶಿ ಕಂಪನಿಗೆ ಬಹುಪಾಲು ಅಲ್ಯುಮಿನಿಯಂ ತಯಾರಿಸುತ್ತಿದ್ದ ಸಾರ್ವಜನಿಕ ಕ್ಷೇತ್ರದ ಭಾರತ್ ಅಲ್ಯುಮಿನಿಯಂ ಕಂಪನಿ (ಬಾಲ್ಕೊ)ಯನ್ನು ಮಾರಿ ಅದನ್ನು ಖಾಸಗಿಯವರ ಕೈಗೆ ಕೊಟ್ಟ ಕೇಂದ್ರ ಸರಕಾರದ ಕ್ರಮವನ್ನು ಸರ್ವೋಚ್ಚ ನ್ಯಾಯಾಲಯ ಎತ್ತಿಹಿಡಿದದ್ದು ಮತ್ತು ಅದಕ್ಕೆ ಕೊಟ್ಟ ಕಾರಣಗಳು ಎಲ್ಲರನ್ನೂ ದಿಗ್ಭ್ರಮೆಗೊಳಿಸಿತು. ಅದನ್ನು ಮಾರಾಟಮಾಡುವುದು ಕೇಂದ್ರ ಸರ್ಕಾರದ ನೀತಿಗೆ ಸಂಬಂಧಿಸಿದ್ದರಿಂದ ಮತ್ತು ಷೇರುದಾರ ಕೇಂದ್ರ ಸರ್ಕಾರ ಕಂಪನಿ ಕಾನೂನಿನ ಪ್ರಕಾರ ಯಾರಿಗಾದರೂ ಮಾರುವ ಅಧಿಕಾರವಿದೆಯೆಂದು ಮತ್ತು ಅದನ್ನು ಪ್ರಶ್ನಿಸುವ ಅಧಿಕಾರ ಕಾರ್ಮಿಕರಿಗಿಲ್ಲವೆಂದು ಸರ್ವೋಚ್ಚ ನ್ಯಾಯಾಲಯ ಸಾರಿತು (ಎ.ಐ.ಆರ್.

೨೦೦೨-೩೫೦). ಸಂವಿಧಾನದ ಆಧಾರದ ಮೇಲೆ ಈ ಪ್ರಕರಣವನ್ನು ತೀರ್ಮಾನಿಸುವ ಗೋಜಿಗೆ ಹೋಗಲಿಲ್ಲ. ಸರ್ಕಾರದ ನೀತಿಗಳಲ್ಲಿ ನ್ಯಾಯಾಂಗ ಹಸ್ತಕ್ಷೇಪ ಮಾಡುವುದು ಉಚಿತವಲ್ಲವೆಂದು ತಿಳಿಸುತ್ತಾ, ಬಾಲ್ಕೊ ಕಂಪನಿಯ ಖಾಸಗೀಕರಣವನ್ನು ಅನುಮೋದಿಸಿತು. ಸರ್ವೋಚ್ಚ ನ್ಯಾಯಾಲಯದ ಮೇಲ್ಕಂಡ ನಿಲುವು ಸರಿಯಲ್ಲವೆಂದು ಹಿಂದಿನ ತೀರ್ಪುಗಳಿಂದ ಮತ್ತು ನಂತರ ಈ ಸಂಬಂಧ ಬಂದ ತೀರ್ಪುಗಳಿಂದ ವ್ಯಕ್ತವಾಗುತ್ತದೆ.

ಎನ್.ಸಿ.ಇ.ಆರ್.ಟಿ. ಪಠ್ಯಕ್ರಮದ ಪ್ರಕರಣದಲ್ಲಿ ತೀರ್ಮಾನ ನೀಡುವ ಸಂದರ್ಭದಲ್ಲಿ ರಾಜ್ಯವ್ಯವಸ್ಥೆ ಎಲ್ಲ ಧರ್ಮಗಳಿಂದ ಹೊರತಾದ ಧರ್ಮನಿರಪೇಕ್ಷತೆಯ ಸಂವಿಧಾನದ ಪ್ರಮುಖ ಮೌಲ್ಯವನ್ನು ಸರ್ವೋಚ್ಚ ನ್ಯಾಯಾಲಯ ಸಂದೇಹಿಸಿತು. ಈ ನಿಟ್ಟಿನಿಂದಾಗಿ ಕೋಮುಗಲಭೆಗಳು ಕಡಿಮೆಯಾಗಿಲ್ಲವೆಂದು ವ್ಯಾಖ್ಯಾನಿಸಿ ಎಲ್ಲ ಧರ್ಮಗಳಿಗೂ ರಾಜ್ಯವ್ಯವಸ್ಥೆ ಹತ್ತಿರವಾಗಬೇಕಾದ ಬಗ್ಗೆ ಮರುವಿಮರ್ಶೆಯ ಅಗತ್ಯವಿದೆಯೆಂದು ಅಭಿಪ್ರಾಯಪಟ್ಟಿತು. ಅದೃಷ್ಟವಶಾತ್ ಈ ಬಗ್ಗೆ ಯಾವ ಆದೇಶವನ್ನೂ ಕೊಡಲಿಲ್ಲ. ಟಿ.ಎಂ.ಎ.ಪೈ ಪ್ರಕರಣದಲ್ಲಿ (೨೦೦೨ (೮), ಎಸ್.ಸಿ.ಸಿ. ೪೮೧) ಹನ್ನೊಂದು ನ್ಯಾಯಾಧೀಶರ ಸರ್ವೋಚ್ಚ ನ್ಯಾಯಾಲಯದ ನ್ಯಾಯಪೀಠ ಉನ್ನತ ಶಿಕ್ಷಣದ ಖಾಸಗೀಕರಣವನ್ನು ಎತ್ತಿಹಿಡಿಯಿತು. ವಿದ್ಯಾದಾನ ಹೋಗಿ ವಿದ್ಯಾಧನವಾಯಿತು. ಖಾಸಗಿ ವಿದ್ಯಾಲಯಗಳಿಗೆ ಪ್ರವೇಶವನ್ನು ನಿಯಂತ್ರಿಸುವ ಅಧಿಕಾರ ಸರ್ಕಾರಕ್ಕಿಲ್ಲವೆಂದು ತೀರ್ಮಾನಿಸಿತು. ಸರ್ಕಾರದ ಖಾಸಗೀಕರಣದ ನೀತಿಗೆ ಕಾನೂನಿನ ನೆಲೆ ಒದಗಿಸಿತು. ಓದಿದಷ್ಟೂ ಗೊಂದಲವುಂಟುಮಾಡುವ ಈ ತೀರ್ಮಾನವು ಉನ್ನತ ಶಿಕ್ಷಣವನ್ನು ಮಾರಾಟದ ವಸ್ತುವನ್ನಾಗಿ ಪರಿವರ್ತಿಸಿತು. ಈ ರೀತಿಯ ಗೊಂದಲವನ್ನು ನಂತರ ನಡೆದ ಇಸ್ಲಾಮಿಯ ಅಕೆಡೆಮಿ ಪ್ರಕರಣದಲ್ಲಿ (ಎ.ಐ.ಆರ್. ೨೦೦೩-೩೭೨೪) ಐದು ಜನರ ನ್ಯಾಯಪೀಠ ಚರ್ಚಿಸಿದ್ದು ಶಿಕ್ಷಣರಂಗದಲ್ಲಿ ಉಂಟಾಗಿರುವ ಅಲ್ಲೋಲಕಲ್ಲೋಲಕ್ಕೆ ಸಾಕ್ಷಿಯಾಗಿದೆ.

ಜಾಗತೀಕರಣದ ಪ್ರಕ್ರಿಯೆಯಲ್ಲೂ ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯಗಳು ಸಂವಿಧಾನ ಬದ್ಧತೆಯನ್ನು ಎಲ್ಲ ತೀರ್ಮಾನಗಳಲ್ಲೂ ಆಧಾರವಾಗಿಟ್ಟುಕೊಳ್ಳಬೇಕಾದ್ದು ಅಗತ್ಯ. ಆದರೆ ಜಾಗತೀಕರಣದ ಪ್ರಭಾವ ನ್ಯಾಯಾಂಗದ ಮೇಲೆ ಬಿದ್ದಿದೆ ಎಂಬುದಕ್ಕೆ ಅನೇಕ ತೀರ್ಪುಗಳು ನಿದರ್ಶನವಾಗಿವೆ. ಹೊಸ ಆರ್ಥಿಕ ನೀತಿಯ ಬಗ್ಗೆ ಸರ್ವೋಚ್ಚ ನ್ಯಾಯಾಲಯ ಬಾಲ್ಕೋ ಪ್ರಕರಣದಲ್ಲಿ ಉದ್ಧರಿಸಿದರೆ, ಜಾಗತೀಕರಣ, ಮುಕ್ತ ಮಾರುಕಟ್ಟೆ, ವಿಶ್ವವ್ಯಾಪಾರೀ ಸಂಸ್ಥೆಯ ವ್ಯವಸ್ಥೆಯಲ್ಲಿ ಬೇರೂರಿರುವ ಮಾನವ ಅಭಿವೃದ್ಧಿಯ ಬಗ್ಗೆ ಇಸ್ಲಾಮಿಯ ಅಕೆಡೆಮಿಯ ತೀರ್ಮಾನದಲ್ಲಿ ಮತ್ತೊಮ್ಮೆ ಉದ್ಧೃತವಾಗಿದೆ.

**ನ್ಯಾಯಾಂಗದ ಕಾರ್ಮಿಕ ವಿರೋಧಿ ನಿಲುವು**

ಈ ದೇಶದಲ್ಲಿ ಬಂಡವಾಳ ಹೂಡಿಕೆಗೆ ವಿದೇಶಿ ಸಂಸ್ಥೆಗಳು ಹಲವಾರು ಷರತ್ತುಗಳನ್ನು ಹಾಕಿವೆ ಮತ್ತು ಹಾಕುತ್ತಿವೆ. ಅವುಗಳಲ್ಲಿ ಪ್ರಮುಖವಾಗಿರುವುದು ಕಾರ್ಮಿಕ ಕಾಯ್ದೆಗಳು ಅವರ ಹಿತಾಸಕ್ತಿಗೆ ಪೂರಕವಾಗಿ ಮಾರ್ಪಾಡಾಗಬೇಕು ಎಂಬುದು. ಬಂಡವಾಳ ಹೂಡುವ ಸ್ವಾತಂತ್ರ್ಯದಷ್ಟೆ ಬಂಡವಾಳ ಹಿಂತೆಗೆಯುವ ಮುಕ್ತ ಸ್ವಾತಂತ್ರ್ಯವೂ ಇರಬೇಕೆಂದು ಇವರ ಬೇಡಿಕೆ. ಸರ್ಕಾರಕ್ಕೆ ವಿದೇಶಿ ಮತ್ತು ದೇಶೀ ಕಂಪನಿಗಳ ಬೇಡಿಕೆಗಳನ್ನು ಈಡೇರಿಸುವ ತುಂಬು ಮನಸ್ಸಿದ್ದರೂ ಎಡ ಪಕ್ಷಗಳ ಮತ್ತು ಕಾರ್ಮಿಕ ಸಂಘಟನೆಗಳ ತೀವ್ರ ಪ್ರತಿಭಟನೆಯಿಂದಾಗಿ ಈ ದಿಸೆಯಲ್ಲಿ ಕ್ರಮ ಜರುಗಿಸಲು ಸಾಧ್ಯವಾಗುತ್ತಿಲ್ಲ. ಆದರೆ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಇತ್ತೀಚಿನ ತೀರ್ಮಾನಗಳಿಂದ ಮಾಲೀಕರು ಹರ್ಷಿತರಾಗಿದ್ದಾರೆ.

೧೯೭೮ರಲ್ಲಿ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ (ಎ.ಐ.ಆರ್. ೧೯೭೮-೫೪೮) ಪ್ರಕರಣದಲ್ಲಿ ಏಳು ನ್ಯಾಯಾಧೀಶರ ನ್ಯಾಯಪೀಠ ''ಉದ್ದಿಮೆ'' ಎಂಬುದರ ಅರ್ಥವ್ಯಾಪ್ತಿಯನ್ನು ತೀರ್ಮಾನಿಸಿತು. ಇದು ನ್ಯಾಯಪೀಠದ ನ್ಯಾಯಮೂರ್ತಿಗಳಲ್ಲೊಬ್ಬರಾಗಿದ್ದ ನ್ಯಾಯಮೂರ್ತಿ ವಿ. ಎಸ್. ಕೃಷ್ಣ ಅಯ್ಯರ್ ಅವರು ತಮ್ಮ ಅಸಾಧಾರಣ ಕಾನೂನಿನ ಪ್ರಜ್ಞೆ, ಸಂವಿಧಾನದ ಬದ್ಧತೆ ಮತ್ತು ಪಾಂಡಿತ್ಯವನ್ನು ಬೆಳಗಿಸಿದ ಪ್ರಕರಣ. ಸುಮಾರು ಮೂರು ದಶಕಗಳಿಂದಲೂ ಜಾರಿಯಲ್ಲಿರುವ ಈ ತೀರ್ಪನ್ನು ಪುನರ್ ವಿಮರ್ಶಿಸುವ ಕಾಲ ಬಂದಿದೆ ಎಂದು ಐದು ಜನರ ನ್ಯಾಯಪೀಠ ಅಭಿಪ್ರಾಯಪಟ್ಟು, ಮುಖ್ಯ ನ್ಯಾಯಮೂರ್ತಿಗಳಿಗೆ ಮುಂದಿನ ಕ್ರಮಕ್ಕಾಗಿ ಕಳುಹಿಸಿ ಕೊಟ್ಟಿದೆ. (ಎ.ಐ.ಆರ್. ಎಸ್.ಸಿ.ಡಬ್ಲ್ಯು ೨೭೭೩) ಅಂದರೆ ನ್ಯಾಯಪೀಠವು ''ಉದ್ದಿಮೆ''ಯ

# ಕಾಯಕ



ಹಳ್ಳಿ ಬರಗಾಲಕ್ಕೆ ತುತ್ತಾಗಿ ಆಳಿದುಳಿದ ಜನ ಜಾನುವಾರು
ಹಿಟ್ಟು ಸೊಪ್ಪು ನೀರು ನೆರಳನರಸಿ ಗುಳೇ ಹೊರಟರು
ಹಾಗೆ ಬಂದವರಲ್ಲಿ ಪುಟ್ಟತಾಯಿ ಕಾಳಪ್ಪನೂ ಇದ್ರು.

ಕೂಲಿನಾಲಿ ಮಾಡ್ತಾ ಪ್ರಾಯ ಒತ್ತರಿಸಿ ಬರಲು ಕಾಲಿಪೋಲಿ
ಬೀಳದೆ ಮೇಸ್ತ್ರಿ ಕಾಳಣ್ಣನ ಜತೆ ಪುಟ್ಟತಾಯಿಯ
ಮದುವೆ ಆಯ್ತು, ಖುಷಿಕೊಟ್ಟು ಖುಷಿ ಪಡೆದು
ಕೂಡಿ ಬಾಳಿದರು ಜಗಳಕಲೆ ಇಲ್ಲದೆ ಪ್ರೀತಿಯಿಂದ.

ದಿನಾದನ ದುಡಿದಂಗೆ ದುಡಿದು ಹಿಟ್ಟೇ ತಿಂದ್ರು, ಸೊಪ್ಪೇ ತಿಂದ್ರು,
ಗಳಿಸಿದ್ರಲ್ಲಿ ಒಸಿಮಿಗ್ಸಿ ಗಂಟು ಕಟ್ತಾ ಇದ್ರು, ನಗ್ತಾ ಇದ್ರು,
ಎಲ್ರ ದಬಾಯ್ಸಿ ಪೇರಿ ಕೀಳ್ತಾ ಇತ್ತು ಕಾಲ.

ಗುಡ್ಸಿಲು ತೂರಿ ಹೆಂಚು ಹೆಂಚ್ ಎಗರಿ ತಾರ್ಸಿ
ತಾರ್ಸಿಗೆ ತಾರ್ಸಿ ಕೂತು ಬೆಳೀತಿತ್ತು ಬಹು ಅಂತಸ್ತಿನ ಮಹಲು
ಕಾರು ಬಂಗಲೆ ಆಳುಕಾಳು ಮಕ್ಕಳು ಮರಿಮಕ್ಕಳು.

ಏನ್ ಕಮಾಲು ಪುಟ್ಟತಾಯಿ ಕಾಳಣ್ಣನ ನಸೀಬು ಬರಕಾಯ್ತಸ್ತಾ
ಹೋಯ್ತು, ಮೋಸ ದಗಾ ಪವಾಡ ಏನಿಲ್ಲ ಎಲ್ಲ ಕಾಯಕದ ಫಲ.

ಹದ್ದು ಮೀರಲಿಲ್ಲ ಬಡಬಗ್ಗರ ತುಳೀಲಿಲ್ಲ ದುಡಿತ ಮರೀಲಿಲ್ಲ
ದುಡಿಯದ ಡೌಲು ತಿಪ್ಪೆ ಹಂದಿಗಿಂತ ಕೀಳು,
ಅತ್ತೋಂಗಿಲ್ಲ ಪುರಾರತ್ತು ಬರೀ ಗೋಳು ಹಾಳು.

ಪುಟ್ಟತಾಯಿ ಕಾಳಣ್ಣ ಈಗಿಲ್ಲ ಗತಿಸಿದ್ದಾರೆ
ಪ್ರಗತಿಯತ್ತ ಸಾಗುತಿರುವ ನಗರ ವಿಸ್ತಾರ.
ನಗರ ದುಡಿವವರ ತಿಂಗಳ ಬೆಳಕಿನ ನಾಕ
ದುಡಿದು ಮಡಿದವರಿಗೆ ಇಡೀ ಲೋಕವೆ ಸ್ಮಾರಕ.

ಕೆ. ನ. ಶಿವತೀರ್ಥನ್
ಮಾಂದಳಿರು, ೪೩, ಎಂ. ಬ್ಲಾಕ್, ಎರಡನೇ ಹಂತ,
ಕುವೆಂಪುನಗರ, ಮೈಸೂರು - ೨೩

ಅರ್ಥವ್ಯಾಪ್ತಿಯನ್ನು ಸಂಕುಚಿತಗೊಳಿಸಬೇಕೆಂಬ ಅಭಿಪ್ರಾಯ ಹೊಂದಿದಂತೆ ಕಾಣುತ್ತದೆ. ಇತ್ತೀಚಿನ ಹೊಂಬೇಗೌಡ ಎಜುಕೇಷನ್ ಟ್ರಸ್ಟ್ ಪ್ರಕರಣದಲ್ಲಿ (ಎ.ಐ.ಆರ್. ೨೦೦೬) ತನ್ನ ಅಭಿಪ್ರಾಯ ವ್ಯಕ್ತಪಡಿಸುತ್ತಾ ನ್ಯಾಯಾಲಯಗಳು ಹಿಂದಿನ ದೃಷ್ಟಿಕೋಣಗಳಿಂದ ಬಹಳ ದೂರ ಸರಿದಿವೆ; ಇತ್ತೀಚಿನ ನ್ಯಾಯಾಲಯದ ದೃಷ್ಟಿಕೋಣ ಹಿಂದಿನ ಕಾರ್ಮಿಕರ ಹಿತಾಸಕ್ತಿಯನ್ನೇ ಕಾಪಾಡುವ ದೃಷ್ಟಿಯಿಂದ ಭಿನ್ನವಾಗಿವೆ; ಹೊಸ ಆರ್ಥಿಕ ನೀತಿಯ ಆಯಾಮದಲ್ಲಿ ಕಾರ್ಮಿಕರ ಶಿಸ್ತುಭಂಗ ಪ್ರಕರಣಗಳನ್ನು ಸಹಿಸಲು ಸಾಧ್ಯವಿಲ್ಲವೆಂದು ಸರ್ವೋಚ್ಚ ನ್ಯಾಯಾಲಯ ತೀರ್ಪಿತ್ತಿದೆ. ಈ ಹಿಂದೆ ನ್ಯಾಯಾಲಯದ ಕಾರ್ಮಿಕ ಪರ ತೀರ್ಪುಗಳಿಂದಾಗಿಯೇ ಔದ್ಯೋಗಿಕ ರಂಗದಲ್ಲಿ ಅಶಿಸ್ತು ಹೆಚ್ಚಿದೆ ಎಂದು ಅಭಿಪ್ರಾಯಪಟ್ಟಿರುವ ಸರ್ವೋಚ್ಚ ನ್ಯಾಯಾಲಯ ಹಿಂದಿನ ನ್ಯಾಯಾಧೀಶರುಗಳನ್ನು ಅಪಮಾನಿಸುವ ಹಂತ ತಲುಪಿದೆ. ಇಂತಹ ಪ್ರವೃತ್ತಿ ನ್ಯಾಯಾಂಗದ ಘನತೆಗೆ ಕುಂದು ತರುವಂತಹದು ಮತ್ತು ನ್ಯಾಯಾಂಗದ ಅನುಚಿತ ವರ್ತನೆಯೂ ಹೌದು.

ಇತ್ತೀಚಿನ ಉಮಾದೇವಿ ಪ್ರಕರಣದಲ್ಲಿಯೂ ಕೂಡ (ಎ.ಐ.ಆರ್. ೨೦೦೬-೨೮೦೬) ಸರ್ವೋಚ್ಚ ನ್ಯಾಯಾಲಯ ಸಂವಿಧಾನಾತ್ಮಕತೆಯನ್ನೂ ಮೀರಿ ಕೇವಲ ಸಿವಿಲ್ ಸಂಹಿತೆಗೆ ಆತುಕೊಂಡದ್ದು ಕಂಡುಬರುತ್ತದೆ. ಈ ದೇಶದಲ್ಲಿ ಲಕ್ಷಾಂತರ ದಿನಗೂಲಿ ನೌಕರರನ್ನು ಅನೇಕ ಕಾರ್ಯಗಳಲ್ಲಿ ತೊಡಗಿಸಿಕೊಂಡು, ಹಲವಾರು ವರ್ಷಗಳು ದುಡಿಸಿಕೊಂಡು ಅವರಿಗೆ ಯಾವುದೇ ಸೌಲಭ್ಯಗಳನ್ನು ಒದಗಿಸದ ಸರ್ಕಾರದ ಮೇಲೆ ದಾವೆ ಹಾಕಿದಲ್ಲಿ, ಅವರು ಯಾವ ಪರಿಹಾರಕ್ಕೂ ಅನರ್ಹರು; ಏಕೆಂದರೆ, ಅವರ ನೇಮಕಾತಿ ಕಾನೂನಿನ ಪ್ರಕಾರವಾಗಿಲ್ಲ ಎಂದು ತೀರ್ಪಿತ್ತಿದೆ. ಅಲ್ಲದೆ ಈ ಹಿಂದಿನ ಎಲ್ಲ ನ್ಯಾಯತೀರ್ಪುಗಳು ತಪ್ಪೆಂದೂ ಅಭಿಪ್ರಾಯಪಟ್ಟಿದೆ.

ಸರ್ವೋಚ್ಚ ನ್ಯಾಯಾಲಯದ ಇತ್ತೀಚಿನ ವರ್ಷಗಳ ಹಲವಾರು ತೀರ್ಪುಗಳು ಹೊಸ ಆತಂಕವನ್ನು ಹುಟ್ಟಿಸಿದೆ. ನ್ಯಾಯಿಕ ಪುನರ್‌ವಿಮರ್ಶೆಯ ಅಧಿಕಾರದ ನೆಪದಲ್ಲಿ ಅಥವಾ ನ್ಯಾಯಿಕ ತೀವ್ರತನದ ಹೆಸರಿನಲ್ಲಿ ನ್ಯಾಯಿಕ ಅತಿರೇಕದಲ್ಲಿ ತೊಡಗಿದೆ ಎಂದೆನಿಸುವ ಹಂತ ತಲುಪಿದೆ.

ಈ ಲೇಖನದಲ್ಲಿ ಅಂತಹ ಎಲ್ಲ ತೀರ್ಪುಗಳನ್ನು ಚರ್ಚಿಸಿಲ್ಲ. ಈ ಲೇಖನದ ಮುಖ್ಯ ಗುರಿಯೆಂದರೆ, ನ್ಯಾಯಾಂಗ ತುಳಿಯುತ್ತಿರುವ ಹಾದಿ ಪ್ರಜಾಪ್ರಭುತ್ವ ವ್ಯವಸ್ಥೆಗೆ ಪೂರಕವಾಗಿದೆಯೋ ಅಥವಾ ಮಾರಕವಾಗಿದೆಯೋ ಎಂಬುದರ ಬಗ್ಗೆ ಚರ್ಚೆಯಾಗಬೇಕೆಂಬುದು. ನ್ಯಾಯಾಂಗ ಪ್ರಜಾಪ್ರಭುತ್ವ ವ್ಯವಸ್ಥೆಯ ಒಂದು ಅಂಗ ಮಾತ್ರ. ವ್ಯವಸ್ಥೆಯ ಸಮತೋಲನ ಕಳೆಯದಂತೆ ಅದು ನಡೆದುಕೊಳ್ಳಬೇಕಾದುದು ಅತ್ಯವಶ್ಯಕ.

ಮುರಳೀಧರ್
[illegible]

# ಗಾಂಧಿ... ಒಂದು ಅನುಭವ

ಡಿ. ಎಸ್. ಚೌಗಲೆ

'ಗಾಂಧಿ ವಿರುದ್ಧ ಗಾಂಧಿ' ಇಷ್ಟೊಂದು ಅಪಾರವಾಗಿ ಯಶಸ್ವಿಯಾಗುತ್ತದೆ ಮತ್ತು ಆ ಕಾಲದ ಸಂದರ್ಭದಲ್ಲಿ ಕನ್ನಡ ರಂಗಭೂಮಿಗೆ ನವಸಂಚಲನ ನೀಡುತ್ತದೆಯೆಂದು ನಾನಂತೂ ಖಂಡಿತ ಎಣಿಸಿರಲಿಲ್ಲ. ಅದು ಯಶಸ್ಸು ಪಡೆಯುವುದಕ್ಕಿಂತ ಒಂದು ವೇಳೆ ಸೋತರೆ ಎಂಬ ಭಯವೇ ನನ್ನನ್ನು ಇಡೀಯಾಗಿ ಆವರಿಸಿತ್ತು. ನಾಟಕದ ಅನುವಾದ ಕ್ರಿಯೆಯ ಸಂದರ್ಭದಲ್ಲಿ ಈ ಎಲ್ಲ ಅಳುಕು - ಅಂಜಿಕೆಗಳ ಜೊತೆಗೆ ಆತ್ಮವಿಶ್ವಾಸದ ಸಣ್ಣ ಕುಡಿಬೆಳಕು ಮನಸ್ಸಿನ ಮೂಲೆಯಲ್ಲಿ ಎಲ್ಲೋ ಒಂದೆಡೆ ಮನೆಮಾಡಿತ್ತು. ಮೊಟ್ಟಮೊದಲನೇ 'ರಂಗಪ್ರಯೋಗ'ದ ಬಳಿಕ ಆ ಕುಡಿಬೆಳಕೇ ದಿಗ್ಗನೆ ಬೆಳಗಿ ಕನ್ನಡ ರಂಗಭೂಮಿಯಲ್ಲಿ ಹುದುಗಿದ್ದ ನಿರ್ವಾತವೆಂಬ ಕತ್ತಲನ್ನು ಅಳಿಸಿಹಾಕಿತು. ನನ್ನ ಬದುಕಿಗೆ ಹೊಸತಿರುವು ಸಿಕ್ಕಿತು. ಹೌದು! ಈ ಮಾತು ಸೂರ್ಯನ ಬೆಳಕಿನಷ್ಟೇ 'ಖರೆ' ಅದ.

ನಾನು ರಂಗಭೂಮಿಗೆ ಬಂದದ್ದೇ ತೀರ ಆಕಸ್ಮಿಕ! ಜೀವನದ ಹಾದಿಯಲ್ಲಿ 'ಹಿಂಗS' ಎಲ್ಲವೂ ಆಕಸ್ಮಿಕವಾಗಿಯೇ ಘಟನೆಗಳು ಜರುಗುತ್ತವೆ. ೯೦ರ ನಂತರದಲ್ಲಿ ಚಿತ್ರಕಲೆ, ಚಿತ್ರಕಲೆ ಕುರಿತ ಬರೆಹ, ಸಣ್ಣಕತೆ, ಅನುವಾದ ಮುಂತಾದ ರಚನೆಗಳಲ್ಲಿ ತೊಡಗಿಕೊಂಡು 'ಪ್ರಜಾವಾಣಿ' ಪತ್ರಿಕೆಗೆ ಕಾಯಂ ಆಗಿ ಬರೆಯುತ್ತಿದ್ದೆ. ಮರಾಠಿ ದಲಿತ ಲೇಖಕರು ಮತ್ತು ಸಾಹಿತ್ಯ ಕುರಿತ ಚರ್ಚೆಗಳು, ಚಿತ್ರಕಲಾವಿದರ ಹಾಗೂ ಈ ಭಾಗದ ಕಲಾಪ್ರದರ್ಶನ ವಿಮರ್ಶೆಗಳು ಎಲ್ಲವೂ ಹೇರಳವಾಗಿ ಪ್ರಕಟಗೊಳ್ಳುತ್ತಿದ್ದವು. ಅವು ಎಷ್ಟರಮಟ್ಟಿಗೆ ನನ್ನನ್ನು ಈ ನಾಡಿಗೆ ಪರಿಚಯಿಸಿದ್ದವು ಎಂದರೆ, ಒಮ್ಮೆ 'ಕನ್ನಡಪ್ರಭ' ಪತ್ರಿಕೆ ವರದಿಗಾರ ಗಿರೀಶ್‌ಬಾಬು ಅವರು – 'ಸಾರ್, ನಮ್ಮ ಕಾಲೇಜಿನ ಕನ್ನಡ ಅಧ್ಯಾಪಕರಿಗೆ ನೀವೂ ಕನ್ನಡ ಅಧ್ಯಾಪಕರಂತ ನಾನೇ ಹೇಳಿದ್ದು. ನಿಮ್ಮನ್ನು ಅವರು ಪ್ರಜಾವಾಣಿ ಪತ್ರಿಕೆ ವರದಿಗಾರರೆಂದೇ ಭಾವಿಸಿದ್ದರು!'... ಎಂದು ಹೇಳಿ ನನ್ನನ್ನು ಚಕಿತಗೊಳಿಸಿದ್ದರು. ಹೀಗೆ ಇಡೀ ನಾಡಿಗೆ ಚಿತ್ರಕಲೆ ಬರೆಹಗಾರ, ಕಲಾವಿದನಾಗಿ



ಪರಿಚಿತಗೊಂಡ ನನ್ನ ಕಣ್ಣಿಗೊಮ್ಮೆ ಮರಾಠಿ 'ಚಿತ್ರಲೇಖಾ' ಎಂಬ ಮ್ಯಾಗಝಿನ್ ಕಣ್ಣಿಗೆ ಬಿತ್ತು. ೧೯೯೬ರ ನವೆಂಬರ್-ಡಿಸೆಂಬರ್ ತಿಂಗಳಿರಬಹುದು. ಅದರಲ್ಲಿ ಮರಾಠಿಯಲ್ಲಿ ಬಿಸಿಬಿಸಿಯಾದ ಚರ್ಚೆಗೊಳಗಾದ ನಾಟಕ 'ಗಾಂಧಿ ವಿರುದ್ಧ ಗಾಂಧಿ' ಕುರಿತ ಸಚಿತ್ರ ಲೇಖನ ಪ್ರಕಟಗೊಂಡಿತ್ತು. ಓದಿ ದಂಗಾದೆ. ಗಾಂಧೀಜಿ ಮತ್ತು ಅವರ ಹಿರಿಯ ಮಗ ಹರಿಲಾಲನ ಸಂಘರ್ಷ ಮುಖ್ಯಧಾತುವೆನಿಸಿದ ಅದರಲ್ಲಿ ಹಲವಾರು ಚಿಂತನೆಗಳು ಚರ್ಚೆಯ ವಿಷಯವಾಗಿದ್ದವು. ಆ ನಾಟಕವನ್ನು ನಾನು ಅದೇ ಸಮಯದಲ್ಲಿ ನೋಡಿದೆ. ಅತುಲ ಕುಲಕರ್ಣಿ ಗಾಂಧಿ ಪಾತ್ರ ನಿರ್ವಹಿಸಿದ್ದರು. ಕಸ್ತೂರಬಾ ಪಾತ್ರವನ್ನು ಅತ್ಯಂತ ಲೀಲಾಜಾಲವಾಗಿ ಭಕ್ತಿ ಬರ್ವೆ ಇನಾಮದಾರ ಅವರು ಅಭಿನಯಿಸಿದ್ದರೆ, ಹರಿಲಾಲನಾಗಿ ಕಿಶೋರ ಕದಮನೆಂಬ ಅದ್ಭುತ ನಟ ಪಾತ್ರಕ್ಕೆ ನ್ಯಾಯ ಒದಗಿಸಿದ್ದರು. ನೇಪಥ್ಯ ಮಾತ್ರ ವಾಸ್ತವಿಕ ನೆಲೆಯಲ್ಲಿತ್ತು.

ನಾನು ಪ್ರಜಾವಾಣಿ 'ಸಾಪ್ತಾಹಿಕ ಪುರವಣಿ'ಗಾಗಿ 'ಗಾಂಧಿ ವಿರುದ್ಧ ಗಾಂಧಿ – ತಂದೆ ಮಕ್ಕಳ ಘರ್ಷಣೆ' ಎಂಬ ಲೇಖನ (ವಿಮರ್ಶೆ) ಬರೆದು ಕಳಿಸಿದೆ. ಆಗ ಜಿ. ಎನ್. ರಂಗನಾಥರಾವ್ ಅವರು ಸಂಪಾದಕರಾಗಿದ್ದರು. ನನ್ನ ಮನೆಗೆ ಫೋನಿರಲಿಲ್ಲ. ಅವರು ಇಲ್ಲಿಯ ಪ್ರಜಾವಾಣಿಯ ವರದಿಗಾರ ಮಿತ್ರ ಪದ್ಮರಾಜ ದಂಡಾವತಿಯವರಿಗೆ ಫೋನು ಮಾಡಿ – 'ವಿಮರ್ಶೆ ಬೇಡ, ನಾಟಕದ ಕಥಾವಸ್ತು ಕುರಿತು' ಬರೆದು ಕಳಿಸಲು ಕೇಳಿಕೊಂಡರು. ಪಾಪ! ದಂಡಾವತಿ ಅವರು ಫೋನಿಲ್ಲದ ನನ್ನನ್ನು ಹುಡುಕಾಡಿ ವಿಷಯ ತಲುಪಿಸಿದರು. 'ಅದೇನ್ರೀ ಬರಿಯಬೇಕಾದ್ದನ್ನು ಬರೆದು ಸರಿಯಾಗಿ ಕಳಿಸಬಾರದೇನ್ರೀ...' ಅಂತ ತಮ್ಮ ಎಂದಿನ ಶೈಲಿಯ ಹುಸಿಗೋಪ ತೋರಿಸಿ ನಗುತ್ತ ದಬಾಯಿಸಿ ಹೋದರು. ನಾನು ಮತ್ತೆ 'ಗಾಂಧಿ ವಿರುದ್ಧ ಗಾಂಧಿ' ನಾಟಕದ ಕಥಾಹಂದರ ರೂಪದ ಲೇಖನ ಬರೆದು ಕಳಿಸಿದೆ. 'ಸಾಪ್ತಾಹಿಕ ಪುರವಣಿ'ಯಲ್ಲಿ ಅರ್ಧಪುಟ ಪ್ರಕಟವಾಯಿತು. ಅದಕ್ಕೆ ಬಂದ ಪ್ರತಿಕ್ರಿಯೆಗಳು ಅದ್ಭುತವಾಗಿದ್ದವು. ಗಾಂಧೀಜಿ ಬದುಕನ್ನು ಮತ್ತು ಚಿಂತನೆಗಳನ್ನು ಮರು ಆಲೋಚನೆಗೆ ಒಡ್ಡುವ ಕುರಿತು ಅಭಿಪ್ರಾಯಗಳು ಕೇಳಿಬಂದವು. ನಮ್ಮ ಪ್ರೀತಿಯ ನಾಟಕಕಾರ ಡಾ|| ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಆ ಲೇಖನವನ್ನು ಓದಿ, 'ಅದರೊಳಗಿನ ವಾರ್ಧಾ ರೈಲು ನಿಲ್ದಾಣದ ಪ್ರಸಂಗವನ್ನು ನನ್ನ ಮಕ್ಕಳಿಗೆ ಹೇಳುವಾಗ ಕಣ್ಣುಗಳಲ್ಲಿ ನೀರು ತುಂಬಿದವು' ಎಂದು ಸಿಕ್ಕಾಗ ಪ್ರತಿಕ್ರಿಯಿಸಿದರು.

ಒಂದು ಸಲ ಯಾವುದೋ ಸಾಹಿತ್ಯ ಕುರಿತ ಕಾರ್ಯಕ್ರಮಕ್ಕೆ ನಮ್ಮ ನಡುವಿನ ಅಪರೂಪದ ಪ್ರತಿಭೆ ಸಿ. ಬಸವಲಿಂಗಯ್ಯ ಬೆಳಗಾವಿಗೆ ಬಂದಿದ್ದರು. ಸರ್ಕೀಟ್ ಹೌಸ್‌ನಲ್ಲಿ ಮಧ್ಯಾಹ್ನ ಊಟ ಮಾಡುತ್ತಿರುವಾಗ ಅವರು "ಅದೇನು, 'ಗಾಂಧಿ ವಿರುದ್ಧ ಗಾಂಧಿ' ನಾಟಕ. ರಂಗಾಯಣಕ್ಕೆ ಅನುವಾದ ಮಾಡಿ ಕೊಡ್ರಿ ಮಾಡೋಣ" ಅಂದರು. ಅಷ್ಟೊತ್ತಿಗೆ ಆ ನಾಟಕದ ಅನುವಾದ ಹಕ್ಕನ್ನು ಪಡೆದಿದ್ದೆ. ಆ ನಾಟಕದ ಮೂಲ ಕಾದಂಬರಿ ದಿನಕರ ಜೋಶಿಯವರ 'ಪ್ರಕಾಶನೋ ಪಡಛಾಂಯೋ' ಎಂಬುದು ಗುಜರಾತಿಯದ್ದು. ಅದನ್ನು ಸ್ಮಿತಾ ಭಾಗವತ 'ಪ್ರಕಾಶಾಚಿ ಸಾವಲಿ' ಎಂದು ಮರಾಠಿಗೆ ಅನುವಾದಿಸಿದ್ದರು. ಈ ಕಾದಂಬರಿ ಆಧರಿಸಿ ಅಜಿತ ದಳವಿ ನಾಟಕ ರಚಿಸಿದ್ದರು. 'ಪ್ರಕಾಶಾನೋ ಪಡಛಾಂಯೋ' ೧೯೮೦ಕ್ಕೂ ಹಿಂದೆ ಪ್ರಕಟಗೊಂಡಿತ್ತೆಂದು ಹೇಳುತ್ತಾರೆ. ಬಹುಶಃ ಆಗ ಈ ಕಾದಂಬರಿ ಇಷ್ಟೊಂದು ಚರ್ಚೆಗೆ ಒಳಗಾಗಿರಲಿಕ್ಕಿಲ್ಲ. ಹರಿಲಾಲನ ಬದುಕಿನ ಸುತ್ತ ಇರುವ ವಿವರಗಳನ್ನೆಲ್ಲ ಜೋಶಿ ಕ್ರೋಡೀಕರಿಸಿ ಕಾದಂಬರಿ ರಚಿಸಿದ್ದರು. ಗಾಂಧಿ ಹಾಗೂ ಹರಿಲಾಲನ ಕುಟುಂಬದವರನ್ನೂ ಕಂಡು ಮಾಹಿತಿ ಸಂಗ್ರಹಿಸಿದ್ದರು.

ಸಿ. ಬಸವಲಿಂಗಯ್ಯ ಆಗ ರಂಗಾಯಣದ ನಿರ್ದೇಶಕರಾಗಿದ್ದರು. ಅವರು ನಾಟಕ ಕೇಳಿದಾಗ ಆಶ್ಚರ್ಯ ಮತ್ತು ಸಂತೋಷಗಳು ನನ್ನಲ್ಲುಂಟಾದವು. ಒಬ್ಬ ಶ್ರೇಷ್ಠ ನಿರ್ದೇಶಕ ನನ್ನಲ್ಲಿಟ್ಟ ಭರವಸೆ ನನಗೆ ಹಲವು ಅನುಮಾನಗಳಿಗೆ ಎಡೆಮಾಡಿತು. ಕಾರಣವಿಷ್ಟೆ: ಅನುವಾದ ಕಾರ್ಯವನ್ನು ನಾನು ಸಮರ್ಥವಾಗಿ ನಿಭಾಯಿಸಬಲ್ಲೆನೆ? ನಾಟಕ ರಚಿಸಬಲ್ಲೆನೆ, ಎಂಬ ಆತಂಕವಿತ್ತು. ಬಸೂ ಅಷ್ಟು ಹೇಳಿ ಹೊರಟುಹೋದರು. ನಿಧಾನವಾಗಿ ಅನುವಾದ ಕೆಲಸ ಶುರುಮಾಡಿದ್ದೆ. ಮನೆಗೆ ಫೋನು ಬಂದಿತ್ತು. ಈಗಿನಂತೆ ಮೊಬೈಲ್ ಇರಲಿಲ್ಲ. ಅಕ್ಟೋಬರ್ ತಿಂಗಳಿರಬಹುದು. ನನ್ನೆಲ್ಲ ಸೃಜನಶೀಲ ಕ್ರಿಯೆಗಳ ಮಧ್ಯೆ 'ಗಾಂಧಿ ವಿರುದ್ಧ ಗಾಂಧಿ' ಕಾರ್ಯ ನಿರಂತರತೆ ಪಡೆದಿತ್ತು. ಬೂನ್ ಪಬ್ಲಿಕೇಷನ್‌ನ ಖೋಜಾ ಅವರು ಡಿಟಿಪಿ ಕೆಲಸ ಶುರು ಮಾಡಿದ್ದರು. ನನಗೆ ನಾಟಕದ ಫಾರ್ಮು ಹೊಸದು. ಆದರೂ ನನ್ನೆಲ್ಲ ಶಕ್ತಿ ಸತ್ವಗಳನ್ನು ಪಣಕ್ಕಿಟ್ಟೆ. ಪ್ರತಿ ಪಾತ್ರಗಳ ಆತ್ಮಗಳನ್ನು ಸ್ಪರ್ಶಿಸಿ-ಸ್ಪಂದಿಸಿ ಅವುಗಳನ್ನು ಕನ್ನಡದಲ್ಲಿ ಕಟ್ಟತೊಡಗಿದೆ. ಶಿಷ್ಟ ಭಾಷೆಯಲ್ಲೂ ಅಲ್ಲಲ್ಲಿ ದೇಸಿತನ ಬೆರಸುತ್ತ ಅದಕ್ಕೊಂದು ಕಾವು, ವೇಗಗಳು ಬರುವಂತೆ ನಮ್ಮ ಜಾಯಮಾನಕ್ಕೆ ತರುತ್ತಿದ್ದೆ. ಏತನ್ಮಧ್ಯೆ ಬಸೂ ರಾತ್ರಿ ಫೋನ್ ಮಾಡುತ್ತಿದ್ದರು ಮತ್ತು ಅನುವಾದ ಕಾರ್ಯದ ತಪಶೀಲು ಪಡೆದು ಬೇಗ 'ಸ್ಕ್ರಿಪ್ಟ್' ಕಳಿಸಿಕೊಡಲು ಹೇಳುತ್ತಿದ್ದರು.

ಹೀಗೆಯೆ ಒಮ್ಮೆ ಮಾತನಾಡುವಾಗ ಬಸೂ ೧೯೯೮ರ ಮಾರ್ಚ್ ತಿಂಗಳಲ್ಲಿ ನಾಟಕ ಪ್ರಯೋಗಿಸುವುದಾಗಿದ್ದದ್ದರಿಂದ ಇಡೀ ಸ್ಕ್ರಿಪ್ಟ್‌ನ್ನು ಡಿಸೆಂಬರ್ (೧೯೯೭) ಒಳಗೆ ಕೊಡಬೇಕೆಂದು ಹೇಳಿದರು. ಆಗ ತಕ್ಷಣ ನನಗೆ ಹೊಳೆದದ್ದು ಭಾರತ ಸ್ವಾತಂತ್ರ್ಯದ ಐವತ್ತನೆಯ ಉತ್ಸವ ಮತ್ತು ಗಾಂಧೀಜಿಯವರ ಹತ್ಯೆಯ ಐವತ್ತೊಂದನೆಯ ವಾರ್ಷಿಕ ದಿನ ಎಂಬುದು. ಇದನ್ನು ಬಸೂ ಅವರಲ್ಲಿ ಚರ್ಚಿಸಿದೆ. ಗಾಂಧೀಜಿಯವರ ಪುಣ್ಯತಿಥಿಯ ದಿನದಂದು ಅದರ ಮೊದಲ ಪ್ರಯೋಗವಾಗುವುದು ಅರ್ಥಪೂರ್ಣ ಎಂಬ ಅಭಿಪ್ರಾಯಕ್ಕೆ ಬಂದೆವು. ೧೯೯೮ರ ಜನವರಿ ೩೦-೩೧ ಹಾಗೂ ಫೆಬ್ರವರಿ ೧ ಮತ್ತು ೨ ದಿನಾಂಕಗಳು ನಿಗದಿಯಾದವು. ನನ್ನ ಕೆಲಸ ಇನ್ನೂ ಚುರುಕುಗೊಂಡಿತು. ಹಸ್ತಪ್ರತಿ ಡಿಟಿಪಿಯಾಗಿ ಬಸೂ ಅವರ ಕೈ ಸೇರುತ್ತಿತ್ತು. ಇವೆಲ್ಲದರ ನಡುವೆ ಕಾಲೇಜು, ಮನೆ, ಚಿತ್ರಕಲೆ, ಪತ್ರಿಕೆಗೆ ಬರೆಹ ಇವುಗಳಾವವು ನಿಂತಿರಲಿಲ್ಲ – ನಿಲ್ಲಿಸುವ

ಹಾಗಿರಲಿಲ್ಲ. ಬಸೂ ದಿನಾಂಕ ಮತ್ತು ನಾಟಕದ ಪ್ರಕಟಣೆಯನ್ನು ಪತ್ರಿಕೆಗಳಿಗೆ ನೀಡಿಯಾಗಿತ್ತು. ಡಿಸೆಂಬರ್ ಕೊನೆವಾರದ ತನಕವೂ ಕೊನೆಯ ದೃಶ್ಯಗಳು ಅವರ ಕೈ ಸೇರಿರಲಿಲ್ಲ. ಅಂಬಾರಕೊಡ್ಲದ ವಿಷ್ಣು ನಾಯಕ ಅವರು ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಬಂದಿದ್ದರು. ನನ್ನ ಬೆಳಗಾವಿಯ ಪೊಲೀಸ್ ಅಧಿಕಾರಿ ಮಿತ್ರ ಹಾಗೂ ಕವಿ ಪಿ. ಬಿ. ಯಲಿಗಾರ ವಿಷ್ಣು ನಾಯಕರ ಗೆಳೆಯರೂ ಹೌದು. ಆ ಕಾರ್ಯಕ್ರಮದಲ್ಲಿ ಅವರು ಭಾಗಿ. ಆಗ ಬಸವಲಿಂಗಯ್ಯನವರು ನಮ್ಮ ಯಲಿಗಾರರಿಂದ ಸಂದೇಶ ಕಳಿಸಿದರು. ನಾಟಕದ ದಿನಾಂಕ ಖಚಿತವಾಗಿದೆ. ಸ್ಕ್ರಿಪ್ಟ್ ಕಳಿಸಿರಿ ಎಂದು. ನಾನು ಬಸವಲಿಂಗಯ್ಯನವರಿಗೆ ಡಿಸೆಂಬರ್ ೩೧ರೊಳಗೆ ನಿಮ್ಮ ಕೈಯಲ್ಲಿ ಕೊನೆಯ ಎಲ್ಲ ಹಸ್ತಪ್ರತಿಗಳಿರುತ್ತವೆ ಎಂದು ಪತ್ರ ಬರೆದೆ. ಹಗಲು ರಾತ್ರಿ ಇಡೀ 'ಗಾಂಧಿ'ಯಲ್ಲಿ ಮುಳುಗಿಹೋದೆ. ನಿಗದಿತ ತಾರೀಖಿಗೆ ಅವರ ಕೈಯಲ್ಲಿ ಇಡೀ ನಾಟಕದ ಸ್ಕ್ರಿಪ್ಟ್‌ಯಿತ್ತು.

ಸಾಮಾನ್ಯವಾಗಿ ಹೊಸ ರಂಗಕೃತಿಯ 'ರೀಡಿಂಗ್'ಅನ್ನು ಇಟ್ಟುಕೊಳ್ಳುತ್ತಾರೆ. ಆದರೆ ನಾನು ಅದ್ಯಾವುದನ್ನೂ ಮಾಡಿರಲಿಲ್ಲ. ಏನೋ ಭರವಸೆ, ಜತೆಗೆ ಬೆದರಿಕೆ. ಒಮ್ಮೆ ಕವಿ ಗೆಳೆಯ ಡಾ॥ ಸರಜೂ ಕಾಟ್ಕರ್ ನನ್ನ ಮನೆಗೆ ಬಂದಿದ್ದರು. ನಾವಿಬ್ಬರೂ ಅಂದಿನ ದಿನಗಳಲ್ಲಿ 'ಸಾಹಿತ್ಯ-ಸಂವಾದ' ಸಂಘಟನೆಯ ರೂವಾರಿಗಳು. ಆ ಸರಜೂ ಅವರು ಆ ಕೆಲಸಕ್ಕೆ ಬಂದಿದ್ದರೇನೋ. ನನ್ನ ನಾಟಕದ ದೃಶ್ಯಗಳನ್ನು (ಆಯಾ ಪಾತ್ರಗಳಾಗಿ) ನನ್ನ ಮಡದಿ ಅನುಪಮಳ ಎದುರು ಮಾತ್ರ ಓದಿದ್ದೆ. ಆಕೆ 'ಛಲೋ ಅದ' ಅನ್ನುತ್ತಿದ್ದಳು. ನಾನು ಸರಜೂ ಅವರಿಗೆ ಒಂದು ದೃಶ್ಯದ ಕೆಲವು ಪುಟಗಳನ್ನು ಓದಿ ತೋರಿಸಿದೆ. ಅವರಿಗೆ ಅದೇನನ್ನಿಸಿತೋ ಗೊತ್ತಿಲ್ಲ. ಏಕದಂ ಹೇಳಿಬಿಟ್ಟರು – ''ಪ್ರೊಫೆಸರ್... ಈ ನಾಟಕ ನಕ್ಕಿ ಹಿಟ್ ಆಗತದ'' ಅಂತ.

*　　　*　　　*

**ಮೊದಲ ಪ್ರಯೋಗದ ಪುಳಕ :** ಕೊನೆಗೂ ಪ್ರಸವದ ಕಾಲ ಕೂಡಿಬಂತು. 'ಗಾಂಧಿ ವಿರುದ್ಧ ಗಾಂಧಿ' ನಾಟಕದ ಮೊದಲ ಪ್ರಯೋಗ. ಬಸವಲಿಂಗಯ್ಯ ನಾಟಕದ ಹೆಸರು 'ಕ್ಯಾಚಿ' ಆಗಿರಲೆಂದು 'ಗಾಂಧಿ v/s ಗಾಂಧಿ' ಎಂದು ಮರುನಾಮಕರಣ ಮಾಡಿಕೊಂಡರು. ಆ ಪ್ರಯೋಗಕ್ಕೆ ನಾನು ನನ್ನ ಪುಟ್ಟ ಮಗಳು ವಿನೂತ ಮತ್ತು ಮಡದಿ ಅನುಪಮಳ ಸಂಗಡ ಮೈಸೂರಿಗೆ ಬಂದಿದ್ದೆ. ಕ್ವಾರ್ಟರ್ಸ್‌ನಲ್ಲಿ ವಾಸವಾಗಿದ್ದೆವು. ಅಲ್ಲೇ ಪಕ್ಕದಲ್ಲಿ ಬಸವಲಿಂಗಯ್ಯನವರ ಮನೆ. ಬಸೂ ಕುಟುಂಬದವರು ಪ್ರೀತಿಯಿಂದ ನೋಡಿಕೊಂಡರು. ಅವರ ಮಗಳು 'ಸಿರಿ' ಮತ್ತು ನನ್ನ ಮಗಳು 'ವಿನೂತ' ಓಡಾಡಿಕೊಂಡಿದ್ದರು. ರಂಗಾಯಣದ ಪ್ರಾಂಗಣವೆಲ್ಲ 'ಗಾಂಧಿ'ಯ ಹೊಸ ಅವತಾರಕ್ಕಾಗಿ ಸಜ್ಜಾಗಿತ್ತು. ಉದ್ಘಾಟನೆಗೆಂದು ಕೆ. ಪಿ. ಪೂರ್ಣಚಂದ್ರ ತೇಜಸ್ವಿ, ಗುರು ಬರುವವರಿದ್ದರು. ಪೂರ್ಣಚಂದ್ರ ತೇಜಸ್ವಿಯವರ ಕಂಪ್ಯೂಟರ್ ಬಳಸಿ ಬರೆದ ಚಿತ್ರಕೃತಿಗಳ ಪ್ರದರ್ಶನವೂ ಇತ್ತು. ನನ್ನ ಫೋಟೋ ಸೆಷನ್ ಆಯಿತು. ನನ್ನ ನಾಟಕಕ್ಕೆ ಬಿ. ವಿ. ಕಾರಂತರು ಸಂಗೀತ ನೀಡಿದುದು ನನಗೆ ವಿಲಕ್ಷಣ ಆನಂದ ತಂದಿತು. ನಾಟಕ ನೋಡಲು ಮಂಗಳೂರಿನಿಂದ ನಾ. ದಾಮೋದರ ಶೆಟ್ಟಿ, ಡಾ॥ ರಾಮಚಂದ್ರ ದೇವ, ಬೆಂಗಳೂರಿನಿಂದ ಡಾ॥ ವಿಜಯಾ, ಗುಂಡಣ್ಣ ಮತ್ತಿತರರು ಬಂದಿದ್ದರು. ಅವರೆಲ್ಲರ ಜತೆ ನನ್ನ ಮೊದಲ ಭೇಟಿ. ಸಮಯ ಸರಿದಂತೆಲ್ಲ ವಿಚಿತ್ರ ಒತ್ತಡ, ತಳಮಳಗಳೂ ಶುರುವಾಗಿದ್ದವು. ಒಂದು ಪಕ್ಷ ನಾಟಕ ಸೋತರೆ ಏನು ಗತಿ ? ಈ ರೀತಿ ತರತರದ ಚಿಂತೆಗಳು ಕಾಡತೊಡಗಿದ್ದವು.

ಸಂಜೆಗೆ ಬಸವಲಿಂಗಯ್ಯ ಪುಟ್ಟ ಉದ್ಘಾಟನಾ ಕಾರ್ಯಕ್ರಮವನ್ನು ಮುಗಿಸಿದರು. 'ಭೂಮಿಗೀತ' ರಂಗಮಂಚದ ಮೇಲೆ ಹಿಮಾಚ್ಛಾದಿತ ಹಿನ್ನೆಲೆಯಲ್ಲಿ ಗಾಂಧಿ ಮತ್ತು ಹರಿಲಾಲನ ಆತ್ಮಗಳು ಮಾತನಾಡುವ ದೃಶ್ಯದ ಮೂಲಕ ನಾಟಕ ಆರಂಭವಾಯಿತು. ಮೊದಲ ಸಾಲಲ್ಲಿ ನಾವು ಕುಳಿತಿದ್ದೆವು. ದೃಶ್ಯಗಳು ಕಾವೇರುತ್ತಿದ್ದಂತೆ, ಬ್ಲ್ಯಾಕ್‌ಔಟ್‌ನಲ್ಲಿ ಚಪ್ಪಾಳೆಯ ಕರತಾಡನ ಬೀಳುತ್ತಿದ್ದಂತೆ ಜರ್‍ರನೆ ನನ್ನ ತಳಮಳ, ಒತ್ತಡ, ಚಿಂತೆ ಎಲ್ಲವೂ ಕರಗಿ ಕಣ್ಣಾಲಿಗಳು ತುಂಬಿಬಂದವು. ನನ್ನ ಕಣ್ಣಂಚಿನಲ್ಲಿ ಮಿನುಗುವ ಆನಂದಬಾಷ್ಪಗಳನ್ನು ಮಡದಿ ನೋಡಿ ಖುಷಿಪಟ್ಟಳು. ವಿರಾಮದಲ್ಲಿ ಎಲ್ಲರಿಂದ ಬಸೂ ಹಾಗೂ ನನಗೆ ಅಭಿನಂದನೆಗಳ ಸುರಿಮಳೆ. ನಾಟಕದಲ್ಲಿ ಪೂರ್ವಾರ್ಧದ ಗಾಂಧಿಯಾಗಿ ಹುಲಿಗೆಪ್ಪ ಕಟ್ಟೀಮನಿ, ಕಸ್ತೂರಬಾ ಪಾತ್ರದಲ್ಲಿ ಎನ್. ಮಂಗಳಾ ಮತ್ತು ಹರಿಲಾಲನಾಗಿ ಕೃಷ್ಣಕುಮಾರ ನಾರ್ಣಕಜೆ ಹಾಗೂ ಉತ್ತರಾರ್ಧದಲ್ಲಿ ಕ್ರಮವಾಗಿ ಜಗದೀಶ ಮನೆವಾರ್ತೆ, ಪ್ರಮೀಳಾ ಬೇಂಗ್ರೆ ಮತ್ತು ರಾಮು ಅದ್ಭುತ ಅಭಿನಯ ನೀಡಿದರು. ಉಳಿದವರು ತಮ್ಮ ಪಾತ್ರಗಳಿಗೆ ನ್ಯಾಯ ನೀಡಿದರು. ಮರಾಠಿಯಲ್ಲಿ



ನಾಟಕದ ಒಂದು ದೃಶ್ಯ

ವಾಸ್ತವಿಕ ನೇಪಥ್ಯವಿದ್ದರೆ ಬಸೂ ನೇಪಥ್ಯವನ್ನು ಅತ್ಯಂತ ಕಲಾತ್ಮಕವಾಗಿ ನಿರೂಪಿಸಿದ್ದರು. ಚಾಪೆ ಹಿನ್ನೆಲೆಯ ಆಶ್ರಮದ ಅಮೂರ್ತ ರೂಪದಲ್ಲಿ ಪಾತ್ರಗಳು ಅರಳುತ್ತಿದ್ದವು. ಇಡೀ ಮೂರು ಗಂಟೆಯ ಅವಧಿಯ ನಾಟಕ ಮುಗಿದಾಗ ಅದರ ಯಶಸ್ಸಿನ ರಸವೆಲ್ಲ ನಮ್ಮಗಳ ಮೈಮನಗಳಲ್ಲಿ ತುಂಬಿಹೋಗಿತ್ತು. ನನಗೆ ಆ ಪಾತ್ರಗಳು ಚಕಚಕನೆ ಅಡ್ಡಾಡಿ, ಅಭಿನಯಿಸುತ್ತ ಸಂಭಾಷಣೆ ಒಪ್ಪಿಸುತ್ತಿರುವಾಗ ಮೈ ಜುಮ್ಮೆನ್ನುತ್ತಿತ್ತು. ನನ್ನದೇ ಮಾತುಗಳಿಗೆ ಆ ಪಾತ್ರಧಾರಿಗಳು ಜೀವತುಂಬಿದ್ದು ಕಂಡು ಸಂಭ್ರಮವೆನಿಸಿತು. ನಾಟಕ ನನಗೆ ನಿರುಮ್ಮಳತನ ತಂದಿತು. ನಾನು ಎರಡು ದಿನವಿದ್ದು ಮೈಸೂರು ಬಿಟ್ಟ ನಂತರ ಪ್ರಸಿದ್ಧ ನಾಟಕಕಾರ ಗಿರೀಶ ಕಾರ್ನಾಡ ಬಂದು ನಾಟಕ ನೋಡಿ ಮೆಚ್ಚಿದ್ದನ್ನು ಬಸೂ ದೂರವಾಣಿಯಲ್ಲಿ ಹೇಳಿದರು. ಅನುವಾದ ಲೇಖಕನ ಕುರಿತು ವಿಚಾರಿಸಿದರೆಂಬ ಮಾತು ಬಸೂ ಹೇಳಿದಾಗ ನನಗಾದ ಸಂತೋಷ ಅಪಾರ. ಆನಂತರ ಗಿರೀಶ ಕಾರ್ನಾಡ ನನಗೆ ಪತ್ರ ಬರೆದು 'ಕನ್ನಡಕ್ಕೊಂದು ಉತ್ತಮ ನಾಟಕ' ಕೊಟ್ಟಿದ್ದಕ್ಕೆ ಅಭಿನಂದಿಸಿದರು. ಅದು ನನ್ನಲ್ಲಿರುವ ಆತ್ಮವಿಶ್ವಾಸವನ್ನು ಹೆಚ್ಚಿಸಿತು.

**ಗಾಂಧಿ... ನಾಟಕದ ಯಶಸ್ಸಿನ ಸಂಚಾರ :** ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಹಾಗೂ ಎಡಿಎ ರಂಗಮಂದಿರದಲ್ಲಿ 'ಗಾಂಧಿ v/s ಗಾಂಧಿ'ಯ ಹಲವಾರು ಪ್ರಯೋಗಗಳಾದವು. ಒಂದೆರಡು ಪ್ರಯೋಗಕ್ಕೆ ನಾನು ಸ್ನೇಹಿತರ ಜತೆ ಹೋಗಿದ್ದೆ. ಬೆಳಗಾವಿಯ 'ಸಾಹಿತ್ಯ ಸಂವಾದ'ದ ಗೆಳೆಯರು ಕಲಾಕ್ಷೇತ್ರದಲ್ಲಿ 'ಗಾಂಧಿ...' ನಾಟಕ ನೋಡಲು ಆಗಮಿಸಿದ್ದರು. ಮುಂದೆ ಬೆಳಗಾವಿಯಲ್ಲಿ ನಾಟಕ ಏರ್ಪಡಿಸುವ ಆಲೋಚನೆಯಿತ್ತು. ಕಲಾಕ್ಷೇತ್ರದಲ್ಲಿ ಸಂಜೆಯ ನಾಟಕಕ್ಕೆ ಬಿ. ಎಸ್. ಕೇಶವರಾವ್, ಪ್ರೊ॥ ಜಿ. ಕೆ. ಗೋವಿಂದ ರಾವ್, ಕೇಸರಿ ಹರವೂ ತರಹದ ಹಿರಿಯ-ಕಿರಿಯ ಸಾಹಿತಿಗಳು, ಕಲಾವಿದರು, ರಂಗಪ್ರೇಮಿಗಳು ಬಂದಿದ್ದರು. ಆಗಿನ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ॥ ಚಂದ್ರಶೇಖರ ಪಾಟೀಲ, ಬೆಟಗೇರಿ ಅವರುಗಳೂ ಬಂದಿದ್ದರು. ನನಗೆ 'ಚಂಪಾ' ಅವರನ್ನು ಬಿಟ್ಟರೆ ಎಲ್ಲರ ಪರಿಚಯವೂ ಮೊದಲನೇ ಬಾರಿಗೆ ಇಲ್ಲಿಯೇ ಆಯಿತು. ಎಲ್ಲರೂ ಒಳ್ಳೆಯ ಮಾತುಗಳನ್ನು ಹೇಳಿ ಬೆನ್ನು ತಟ್ಟಿದರು. ಹಿರಿಯ ರಂಗಕರ್ಮಿಯೊಬ್ಬರು ನನ್ನ ಅನುವಾದ ಸಾಹಿತ್ಯ ಕುರಿತು ಪ್ರಶಂಸೆ ಮಾತುಗಳನ್ನು ಆಡಿ, 'ನಿಮ್ಮ ಮಾತುಗಳಿಂದ ಅದಕ್ಕೊಂದು ಶಕ್ತಿ ಬಂದಿದೆ' – ಎಂದರು.

ಬೆಂಗಳೂರಿನಲ್ಲಿ ನಡೆದ ಹೆಚ್ಚಿನ ನಾಟಕಗಳನ್ನು ಆಯೋಜಿಸಿದವರು ಉದಯ ಕುಲಕರ್ಣಿಯವರು. ಇವರು ದೂರದ ಬೀದರದಿಂದ ಮುಂಬೈನಲ್ಲಿ ಕೆಲಕಾಲ ನೆಲೆಸಿ ಬೆಂಗಳೂರಿನಲ್ಲಿ ರಂಗಸಂಘಟಕರಾಗಿ ಈ ನಾಟಕವನ್ನು ಸಂಘಟಿಸಿದವರು. ಅವರೊಮ್ಮೆ ಹೇಳಿದರು – ''ಸರ್... ಬೆಂಗಳೂರಿನೊಳಗ ಇಲ್ಲಿತನಕ ಅಡ್ವಾನ್ಸ್ ಬುಕ್ಕಿಂಗ್ ಆಗಿರಲಿಲ್ಲ. ನಿಮ್ಮ ಈ ನಾಟಕದಿಂದ ಶುರುವಾತ ನೋಡ್ರಿ... ಅಷ್ಟ ಅಲ್ಲ, ಎಂಥೆಂಥ ದೊಡ್ಡವರೂ ಸಹ ಕ್ಯೂನ್ಯಾಗ ನಿಂತ... ಟಿಕೆಟ್ಟು ತೊಗೊಂಡಾರ್ರಿ'' ಅಂದರು. ಪತ್ರಿಕೆಗಳಲ್ಲಿ ಅದ್ಭುತವಾದ ವಿಮರ್ಶೆಗಳು ಬಂದವು. 'ಡೆಕ್ಕನ್ ಹೆರಾಲ್ಡ್' ಒಮ್ಮೆ ನಾಟಕದ ವಿಮರ್ಶೆ ಬರೆದು, ಮತ್ತೊಮ್ಮೆ ರಂಗಪ್ರಯೋಗವಾಗುವಾಗ ಅರ್ಧಪುಟ ರಂಗಾಯಣದ ಯಶಸ್ವಿ ಪ್ರಯೋಗಗಳ ಬಗ್ಗೆ ಕುರಿತು ಲೇಖನ ಪ್ರಕಟಿಸಿತು.



ರಂಗಾಯಣದ ಇತಿಹಾಸದಲ್ಲಿ ಹತ್ತು ಅತ್ಯುತ್ತಮ ನಾಟಕಗಳಲ್ಲಿ 'ಗಾಂಧಿ v/s ಗಾಂಧಿ' ಮೊದಲನೇ ಸಾಲಿನದ್ದು ಎಂದು 'ಡೆಕ್ಕನ್ ಹೆರಾಲ್ಡ್' ಪ್ರಶಂಸಿಸಿತು. 'ಟೈಮ್ಸ್ ಆಫ್ ಇಂಡಿಯಾ' ಯಾವಾಗ್ಲೂ ಬಣ್ಣದ ಕ್ಲಿಪ್ಪಿಂಗ್ಸ್ ನೀಡಿ ವಿಮರ್ಶೆ ಬರೆದು ಪ್ರಚಾರವನ್ನು ಅದ್ಭುತವಾಗಿ ನೀಡಿತು. ಜಿ. ಕೆ. ಗೋವಿಂದ ರಾವ್ ಅವರು ಪ್ರಜಾವಾಣಿಯಲ್ಲಿ 'ಈ ನಾಟಕ ನಿಸ್ಸಂದೇಹವಾಗಿ ರಂಗಭೂಮಿಯ ಅತ್ಯಂತ ಪ್ರಮುಖ ಮೈಲುಗಲ್ಲುಗಳಲ್ಲಿ ಒಂದು' ಎಂದು ಬರೆದರು. ನಾ. ದಾಮೋದರ ಶೆಟ್ಟಿ ಈ ಮೊದಲೇ ಪ್ರಜಾವಾಣಿಯ ಅಂಕಣದಲ್ಲಿ ರಂಗವಿಮರ್ಶೆ ಲೇಖನ ನೀಡಿದ್ದರು. ದೇಶ ಕುಲಕರ್ಣಿ – ಕೃತಿಯ ಕುರಿತು 'ಹೊತ್ತಿ ಉರಿಯುವ ಭಾಷೆ' ಎಂದರು. 'ದಿ ಹಿಂದೂ'ವಿನಲ್ಲಿ ಜಿ. ಟಿ. ನಾರಾಯಣರಾವ್ 'ಎ ವೆರಿ ಪವರ್‌ಫುಲ್ ಥೀಮ್'... ಎಂದು ಹೊಗಳಿದರು.

'ಗಾಂಧಿ v/s ಗಾಂಧಿ' ಕರ್ನಾಟಕದಾದ್ಯಂತ ಪ್ರಯೋಗ ಕಂಡಿತು. ನನಗೆ ಗೊತ್ತಿರುವಂತೆ ತುಮಕೂರು, ದಾವಣಗೆರೆ, ಉಡುಪಿ, ಹುನಗುಂದ, ಧಾರವಾಡ, ಬೆಳಗಾವಿಗಳಲ್ಲಿ ಗಾಂಧಿ ಜಯಭೇರಿ ಮೊಳಗಿಸಿತು. ಬೆಳಗಾವಿಯಲ್ಲಿ ೧೯೯೫ರಲ್ಲಿ 'ಸಾಹಿತ್ಯ ಸಂವಾದ' ಸಂಘಟನೆ ನಾಟಕ ಪ್ರಯೋಗವನ್ನು ಆಯೋಜಿಸಿತ್ತು. ಜೆ.ಎನ್.ಎಂ.ಸಿ.ಯ ಆವರಣದ ಡಾ|| ಬಿ. ಎಸ್. ಜೀರಗೆ ರಂಗಮಂದಿರದಲ್ಲಿ 'ಗಾಂಧಿ v/s ಗಾಂಧಿ' ತುಂಬಿದ ಗೃಹಕ್ಕೆ ಪ್ರದರ್ಶನ ನಡೆಸಿತು. ಡಾ|| ಯು. ಆರ್. ಅನಂತಮೂರ್ತಿ, ಡಾ|| ಸ. ಜ. ನಾಗಲೋಟಿಮಠ, ಸಿ. ಬಸವಲಿಂಗಯ್ಯ ಉದ್ಘಾಟನೆಯಲ್ಲಿ ಪಾಲ್ಗೊಂಡರು. ಅನಂತಮೂರ್ತಿಯವರು ತಮ್ಮ ಶ್ರೀಮತಿಯವರ ಜತೆಗೆ ನಾಟಕ ವೀಕ್ಷಿಸಿದರು. ಇದು ಎರಡನೇ ಬಾರಿ ಅವರು ನೋಡಿದ್ದು. ಉದ್ಘಾಟನೆಯನ್ನು ನಾಟಕದ ಡೈಲಾಗ್ ಹೇಳುವ ಮೂಲಕ ಡಾ|| ಯು. ಆರ್. ಅನಂತಮೂರ್ತಿ ನೆರವೇರಿಸಿದರು. ನನಗೆ ಅವರು ವೈಯಕ್ತಿಕವಾಗಿ ಸಿಕ್ಕಾಗ ನನ್ನ ರಂಗಭಾಷೆಯ ಬಳಕೆ ಬಗ್ಗೆ ಮೆಚ್ಚುಗೆ ಹೇಳಿದರು.

ದೆಹಲಿಯ ಎನ್.ಎಸ್.ಡಿ.ಯು ಮೊದಲ ಸಲ ಹಮ್ಮಿದ ರಾಷ್ಟ್ರೀಯ ನಾಟಕೋತ್ಸವದಲ್ಲಿ 'ಗಾಂಧಿ v/s ಗಾಂಧಿ' ಪ್ರಯೋಗಗೊಂಡಿತು. ಕಾರಣಾಂತರಗಳಿಂದ ವಿಷಯ ನನಗೆ ತಡವಾಗಿ ತಿಳಿಯಿತು. ಹೀಗಾಗಿ ನನಗೆ ದೆಹಲಿಗೆ ಹೋಗಲಾಗಲಿಲ್ಲ. ನಾಟಕದ ದೃಶ್ಯಗಳ 'ಕ್ಲಿಪ್ಪಿಂಗ್ಸ್'ಅನ್ನು ದೂರದರ್ಶನದ ರಾಷ್ಟ್ರೀಯ ವಾರ್ತೆಯಲ್ಲಿ ತೋರಿಸಿದರು. ಅದನ್ನು ನೋಡಿದ ಅಧಿಕಾರಿ ಮಿತ್ರರಾದ ಜಿ. ಎ. ಅಡಗಟ್ಟಿಯವರು – ''ನಿಮ್ಮ ನಾಟಕ ದಿಲ್ಲ್ಯಾಗ ನಡೆದೇತಿ ನೋಡ್ರಿ...'' ಎಂದು ಹೇಳಿ ತಾವು ನೋಡಿದುದರ ಬಗ್ಗೆ ಸಂತೋಷ ಹಂಚಿಕೊಂಡರು.

**ಎಂ. ಪಿ. ಪ್ರಕಾಶರ ಮೆಚ್ಚಿಗೆ ಮಾತು :** ನಮ್ಮ ನಡುವಿನ ಚಿಂತಕರು ಮತ್ತು ರಂಗಕರ್ಮಿಗಳಾದ ಎಂ. ಪಿ. ಪ್ರಕಾಶ ಅವರಿಗೆ 'ಗಾಂಧಿ v/s ಗಾಂಧಿ' ನಾಟಕ ಪ್ರಯೋಗ ಬಹಳ ಹಿಡಿಸಿತು. ಅವರದು ಬಹಳ ದೊಡ್ಡ ಮನಸ್ಸು. ಹಲವಾರು ವೇದಿಕೆಗಳಲ್ಲಿ ಈ ನಾಟಕ ಕುರಿತು ಪ್ರಸ್ತಾಪಿಸಿದ್ದಾರೆ. ಇತ್ತೀಚಿನ ಉದಯ ಟಿ.ವಿ.ಯಲ್ಲಿ ಪತ್ರಕರ್ತ ದೀಪಕ ತಿಮ್ಮಯ್ಯ ನಡೆಸುವ ಸಂದರ್ಶನದಲ್ಲೂ 'ಗಾಂಧಿ v/s ಗಾಂಧಿ' ನಾಟಕದೊಳಗಿನ ಗಾಂಧೀಜಿಯವರ ಆಲೋಚನೆ ಕುರಿತು ಮಾತನಾಡಿದ್ದಾರೆ. ರಂಗಭೂಮಿ ವಿಷಯ ಬಂದಾಗಲೆಲ್ಲ ಪ್ರಕಾಶ ಸಾಹೇಬರು ಗಾಂಧಿ... ಪ್ರಸ್ತಾಪ ಮಾಡುವುದನ್ನು ಮರೆಯೋದಿಲ್ಲ.

ಒಮ್ಮೆ ಹುಕ್ಕೇರಿಯ ಪತ್ರಕರ್ತ ಗೆಳೆಯ ಪ್ರಕಾಶ ದೇಶಪಾಂಡೆ ಫೋನ್ ಮಾಡಿದರು. ಆಗ ಜೆ. ಎಚ್. ಪಟೇಲ ಅವರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು. ಅವರು ಮತ್ತು ಎಂ. ಪಿ. ಪ್ರಕಾಶ್ ಇತರೆ ಗಣ್ಯವ್ಯಕ್ತಿಗಳು ಧೂಪದಾಳ ಐಬಿಯಲ್ಲಿ ತಂಗಿದ್ದರು. ಅಲ್ಲಿ ಪ್ರಕಾಶ ದೇಶಪಾಂಡೆ ಕೂಡ ಇದ್ದರು. ಅದು ಇದು ಚರ್ಚೆಯಲ್ಲಿ ರಂಗಭೂಮಿ ಮಾತುಗಳು ತೇಲಿಬಂದವಂತೆ. ಆಗ ಎಂ. ಪಿ. ಪ್ರಕಾಶ್ ಅವರು ಜೆ. ಎಚ್. ಪಟೇಲರಿಗೆ, ''ಸರ್, 'ಗಾಂಧಿ v/s ಗಾಂಧಿ' ಅನ್ನೋ ನಾಟಕ ಕನ್ನಡಕ್ಕ ಖಂಡಿತದ, ರಂಗಾಯಣದವರು ಪ್ರಯೋಗಿಸಿರತಾರ... ತಾವು ಖಂಡಿತ ಒಂದಸಲ ನೋಡಬೇಕು'' ಎಂದು ಪ್ರೀತಿಯ ಆಗ್ರಹ ಮಾಡಿದರಂತೆ. ಈ ಪ್ರಸಂಗಕ್ಕೆ ಸಾಕ್ಷಿಯಾದ ಪ್ರಕಾಶ ದೇಶಪಾಂಡೆ ಈ ಮಾತನ್ನು ಹೇಳಿದಾಗ ಎಂ. ಪಿ. ಪ್ರಕಾಶರ ಬಗ್ಗೆ ನನ್ನಲ್ಲಿ ಅಪಾರವಾದ ಗೌರವ-ಅಭಿಮಾನ-ಪ್ರೀತಿ ಮೂಡಿತು. ಹೂವಿನಹಡಗಲಿಯಲ್ಲಿ ನಡೆವ ಅಭೂತಪೂರ್ವ ರಂಗೋತ್ಸವಕ್ಕೆ ಪ್ರಕಾಶ ಸಾಹೇಬರು ನನ್ನನ್ನು ಕರೆಯಿಸಿ ಹತ್ತಾರು ಸಾವಿರ ಜನರ ಸಮ್ಮುಖದಲ್ಲಿ ಶಾಲು, ಫಲ-ಪುಷ್ಪ ನೀಡಿ ಸನ್ಮಾನಿಸಿದರು. ಅವರ ಪ್ರೋತ್ಸಾಹ ನನಗೆ ಅತೀವ ಶಕ್ತಿಯನ್ನು ತಂದೊಡ್ಡಿತು. ರಂಗಕ್ರಿಯೆಗೆ ಸಜ್ಜುಗೊಳಿಸಿತು.

ಇದಾದ ಬಳಿಕ ನನಗೆ ರಾಜ್ಯದ ಬೇರೆ ಬೇರೆ ಕಡೆಗೆಲ್ಲ ಆಹ್ವಾನಗಳು ಬರಹತ್ತಿದವು. ಗಾಂಧಿ... ನಾಟಕದ ಕುರಿತು ಮಾತನಾಡುವುದು, ಅಲ್ಲಿಯ ನನಗಿಷ್ಟವಾದ ದೃಶ್ಯಗಳ ಸಂಭಾಷಣೆ ಒಪ್ಪಿಸುವುದು ಶುರುವಾಯಿತು. ನನ್ನೊಳಗೊಬ್ಬ ಕವಿ, ಕತೆಗಾರ, ಕಲಾವಿದ ಇರುವುದರ ಜತೆಗೆ ಒಬ್ಬ ನಾಟಕಕಾರನೂ ಇದ್ದಾನೆ ಎಂಬ ಪುಟ್ಟ ಎಚ್ಚರವನ್ನು ಈ ನಾಟಕ ನನಗೆ ನೀಡಿತು. ಹಲವಾರು ಪುರಸ್ಕಾರಗಳು ಬಂದವು. ಮೈಸೂರಿನಲ್ಲಿ 'ವೀಕ್‌ಎಂಡ್' ಶೋನಲ್ಲಿ ಗಾಂಧಿ... ರಂಗಾಯಣದ ಟ್ರಂಪ್ ಕಾರ್ಡ್ ಎನಿಸಿತು. ಅದೇ ಸಂದರ್ಭದಲ್ಲಿ ನೀನಾಸಂ ತಿರುಗಾಟದ ಕೆ. ವಿ. ಸುಬ್ಬಣ್ಣ ಅವರ 'ಮಹಾತ್ಮಾ' ಎಂಬ ಗಾಂಧೀಜಿ ಬದುಕಿನ ಕುರಿತಾದ ನಾಟಕದ ರಂಗಪ್ರಯೋಗಗಳು ರಾಜ್ಯಾದ್ಯಂತ ನಡೆಯುತ್ತಿದ್ದವು. ಹಿರಿಯ ರಂಗಚೇತನ ಕೆ. ವಿ. ಸುಬ್ಬಣ್ಣ ಅವರಿಗೆ 'ಗಾಂಧಿ v/s ಗಾಂಧಿ' ಪುಸ್ತಕ ಕಳಿಸಿದ್ದೆ. ಅವರು ಅಷ್ಟೇ ಪ್ರೀತಿಯಿಂದ ಪತ್ರ ಬರೆದು, 'ನೀವು ಸಿಕ್ಕಾಗ ಕೆಲವು ಅನುಮಾನಗಳಿವೆ ಚರ್ಚಿಸೋಣ' – ಎಂದಿದ್ದರು. ಆದರೆ ಅದು ಕೈಗೂಡಲಿಲ್ಲ. ನಾನವರನ್ನು ಭೇಟಿ ಮಾಡಲು ಆಗಲೇ ಇಲ್ಲ. 'ಗಾಂಧಿ v/s ಗಾಂಧಿ' ಯಶಸ್ಸಿನ ಹಿಂದೆ ಅದನ್ನು ದೃಶ್ಯರೂಪಕ್ಕೆ ತಂದ ಸಿ. ಬಸವಲಿಂಗಯ್ಯನವರ ಶ್ರಮ, ನೇಪಥ್ಯದಲ್ಲಿ ಕಾರ್ಯ ನಿರ್ವಹಿಸಿದವರ ಪ್ರತಿಭೆ, ಎಲ್ಲ ನಟರ ಅಭಿನಯ, ಕಾರಂತರ ಸಂಗೀತ ಹೀಗೆಲ್ಲ ನೂರೆಂಟು ಕಾರಣಗಳಿಂದ ನಾಟಕ ಕನ್ನಡ ರಂಗಭೂಮಿಯಲ್ಲಿ ಇತಿಹಾಸ ನಿರ್ಮಿಸಿತು. ಈ ನಾಟಕ ಪ್ರಯೋಗ ಹಾಗೂ ಪುಸ್ತಕಕ್ಕೆ ದೊರೆತ ಅಪಾರ ಪ್ರಶಂಸೆಯಿಂದ ಮೂಲ ಲೇಖಕ, ಅಜಿತ ದಳವಿ ಮತ್ತು ದಿನಕರ ಜೋಶಿ ತುಂಬು ಸಂತಸ ವ್ಯಕ್ತಪಡಿಸಿದ್ದಷ್ಟೇ ಅಲ್ಲ ದಳವಿಯವರು ಖುಷಿಯಿಂದ ತಮಗೆ ದೊರಕಬೇಕಾದ ಗೌರವಧನವನ್ನು ನನಗೆ ವಾಪಸು ಕಳಿಸಿ ಸ್ವೀಕರಿಸಲು ಹೇಳಿದರು.

ಅಂದಿನ ದಿನಗಳಲ್ಲಿ 'ಗಾಂಧಿ v/s ಗಾಂಧಿ'ಯ ಹಿಂದಿ, ಗುಜರಾತಿ ಹಾಗೂ ಇಂಗ್ಲಿಷ್ ಭಾಷೆಯ ನಾಟಕಗಳೂ ಪ್ರಯೋಗವಾಗುತ್ತಿದ್ದವು. ಆದರೆ ಬಸವಲಿಂಗಯ್ಯನವರ ಅಭಿವ್ಯಕ್ತಿ ಅದ್ಭುತ ಮತ್ತು ಕಲಾತ್ಮಕ ರೂಪದಲ್ಲಿ ದೇಶದ ಗಮನ ಸೆಳೆಯಿತು. ಇವತ್ತಿಗೂ ನಾನು ರಾಜ್ಯದ ಯಾವುದೇ ಮೂಲೆಗೆ ಹೋದರೂ 'ಗಾಂಧಿ v/s ಗಾಂಧಿ' ನಿಮ್ದೇ ಅಲ್ವ ಸಾರ್ ! ಎಂದು ಆಸಕ್ತರು ಗುರುತಿಸುತ್ತಾರೆ. ಅಷ್ಟರಮಟ್ಟಿಗೆ ನಾನು 'ಗಾಂಧಿಕಾರ'ನಾಗಿದ್ದೇನೆ.



ಡಿ. ಎಸ್. ಚೌಗಲೆ
೭೬, ರಾಮತೀರ್ಥನಗರ, ಬೆಳಗಾವಿ - [illegible]

“ತುಂಬಾ ಟೆನ್ಷನ್ನಾಗಿಬಿಟ್ಟಿದೆ ಸಾರ್. ಮುಂದಿನ ಸೋಮವಾರ ಪರೀಕ್ಷೆ ಶುರುವಾಗುತ್ತೆ. ನಾನು ಓದಿರೋದು ಸಾಲದು. ಎಲ್ಲವನ್ನೂ ರಿವೈಸ್ ಮಾಡೋದಿಕ್ಕೆ ಆಗಿಲ್ಲ. ಪರೀಕ್ಷೆಯಲ್ಲಿ ನಾನು ಚೆನ್ನಾಗಿ ಮಾಡೋದಿಕ್ಕೆ ಆಗುತ್ತೋ ಇಲ್ಲವೋ. ಎಲ್ಲಿ ನಾನು ಫೇಲಾಗಿ ಬಿಡ್ತೇನೇನೋ ಎಂಬ ಭಯ ಪ್ರಾರಂಭವಾಗಿಬಿಟ್ಟಿದೆ. ಟೆನ್ಷನ್‌ನಿಂದಾಗಿ ನಿದ್ರೆ ಬರ್ತಿಲ್ಲ, ಊಟ ಸೇರ್ತಿಲ್ಲ. ಮನಸ್ಸಿನ ಏಕಾಗ್ರತೆ ಇಲ್ಲ. ಓದಿದ್ದು ಏನೂ ಅರ್ಥವಾಗ್ತಾ ಇಲ್ಲ. ಹೀಗಾದರೆ ನಾನು ಫೇಲಾಗೋದು ಗ್ಯಾರಂಟಿ. ಎಷ್ಟು ಅವಮಾನ. ನೆನೆಸಿಕೊಂಡ್ರೆ ಸಾಕು ಕೈಕಾಲು ನಡುಗುತ್ತೆ. ಈ ಟೆನ್ಷನ್ ಕಡಿಮೆ ಮಾಡಲು ಏನು ಮಾಡಬೇಕು ?” ಎಂದ ಸುದರ್ಶನ್.

“ಈ ಆಫೀಸ್ ಕೆಲಸ ತುಂಬಾ ಟೆನ್ಷನ್ ಡಾಕ್ಟ್ರೆ. ನಮ್ಮ ಸುಪರ್‌ವೈಸರ್ ತುಂಬಾ ಮೂಡಿ. ಒಂದು ಸಲ ಚೆನ್ನಾಗಿ ಮಾತಾಡ್ತಾನೆ. ಮತ್ತೊಂದು ಸಲ ರೇಗಾಡಿಬಿಡ್ತಾನೆ. ಕೆಲಸ ಬೇಗ ಮಾಡಿ ಬೇಗ ಮಾಡಿ ಅಂತ ಪ್ರೆಶರ್ ಹಾಕ್ತಾನೇ ಇರ್ತಾನೆ. ಕೆಲವು ಸಲ ಆತ ಏನು ಸೂಚನೆ ಕೊಡ್ತಾನೆ ಅಂತ ನಮಗೆ ಅರ್ಥವಾಗೋದಿಲ್ಲ. ಅರ್ಥವಾಗಲಿಲ್ಲ ಇನ್ನೊಂದು ಸಲ ಹೇಳಿ ಎಂದರೆ ಕೋಪದಿಂದ ಕೂಗಾಡ್ತಾನೆ. ನಮಗೆ ತಿಳಿದಷ್ಟು ಮಾಡಿದರೆ ಇಷ್ಟೂ ಅರ್ಥವಾಗೋಲ್ಲವಾ. ತಲೆಯೊಳಗೆ ಗೊಬ್ಬರ ತುಂಬಿಸಿಕೊಂಡಿದ್ದೀಯಾ ಅಂತ ಬಾಯಿಗೆ ಬಂದಂತೆ ಬಯ್ತಾನೆ. ಬೈಸಿಕೊಂಡು, ರೇಗಿಸಿಕೊಂಡು ಸಾಕಾಗಿಬಿಟ್ಟಿದೆ ಡಾಕ್ಟರೇ. ಈಗ ನನ್ನ ಬಿಪಿಯೂ ಹೆಚ್ಚಾಗಿದೆ



# ಟೆನ್ಷನ್ ಏಕೆ? ಪರಿಹಾರ ಏನು?

ಅಂತ ನಮ್ಮ ಫ್ಯಾಮಿಲಿ ಡಾಕ್ಟರು ಹೇಳಿದ್ದಾರೆ. ಟೆನ್ಷನ್ ಮಾಡಿಕೋಬೇಡಿ ಅಂತ ಅವರೇನೋ ಸುಲಭವಾಗಿ ಹೇಳಿಬಿಟ್ಟರು. ಆಫೀಸೊಳಕ್ಕೆ ಕಾಲಿಡುತ್ತಿದ್ದಂತೆ ಟೆನ್ಷನ್ ಆಗಿಬಿಡುತ್ತೆ ಏನು ಮಾಡಲಿ” ಎಂದ ಒಬ್ಬ ಮಧ್ಯವಯಸ್ಕ.

“ಬೆಳಿಗ್ಗೆ ೯ ಗಂಟೆಗೆ ಮಕ್ಕಳ ಸ್ಕೂಲ್ ವ್ಯಾನ್ ಬಂದುಬಿಡುತ್ತೆ. ನಾನು ೯-೩೦ಕ್ಕೆ ಮನೆ ಬಿಟ್ಟು ೯-೪೫ರ ಬಸ್ ಹಿಡೀಬೇಕು. ಇವರು ೮ ಗಂಟೆಗೇ ಮನೆ ಬಿಡ್ತಾರೆ. ಬೆಳಗಿನ ಹೊತ್ತು ಎಷ್ಟು ಟೆನ್ಷನ್ ಆಗಿಬಿಡುತ್ತೆ ಅಂದ್ರೆ ಅದನ್ನು ವಿವರಿಸೋದಿಕ್ಕೆ ಆಗೋಲ್ಲ. ತುಂಬಾ ದಣಿದುಹೋಗ್ತೀನಿ. ಎಲ್ಲರೂ ನನ್ನನ್ನೇ ಅವಲಂಬಿಸಿರ್ತಾರೆ. ನಿಮ್ಮ ನಿಮ್ಮ ಸಾಮಾನುಗಳನ್ನು ನೀವು ನೀವೇ ನೋಡ್ಕೊಳ್ಳಿ ಅಂತ ಹೇಳಿರ್ತೇನೆ. ಅದು ಅವರ ಕಿವಿ ಮೇಲೆ ಬೀಳೊಲ್ಲ. ಅಮ್ಮಾ ಅದೆಲ್ಲಿ ಅಮ್ಮಾ ಇದೆಲ್ಲಿ? ಸರಸ್ವತಿ ನನ್ನ ಕರ್ಚೀಫ್ ಕಾಣ್ತಾ ಇಲ್ಲ. ಪರ್ಸ್ ಅನ್ನು ಬೀರುನಲ್ಲಿಟ್ಟ ಜ್ಞಾಪಕ. ಅದು ಅಲ್ಲಿಲ್ಲ. ನೀನೇನಾದರೂ ತಂಗೊಡ್ತ್ಯಾ ಇತ್ಯಾದಿ ಪ್ರಶ್ನೆಗಳು ತಲೆಬಿಸಿಯನ್ನು ಹೆಚ್ಚಿಸುತ್ತವೆ. ಈ ಮನೆ ಈ ಮಕ್ಕಳು ಈ ಸಂಸಾರ ಎಲ್ಲವನ್ನೂ ಬಿಟ್ಟು ಎಲ್ಲಿಯಾದರೂ ಓಡಿಹೋಗಿಬಿಡೋಣ ಅನ್ಸುತ್ತೆ. ಈ ಟೆನ್ಷನ್ನನ್ನೂ ಕಡಿಮೆ ಮಾಡೋದು ಹೇಗೆ ಹೇಳಿ ಸರ್” ಎಂದಳು ಸರಸ್ವತಿ.

“ನನ್ನ ಮನೆಗೂ, ನಾನು ಕೆಲಸ ಮಾಡೋ ಫ್ಯಾಕ್ಟರಿಗೂ ೧೬ ಕಿಲೋಮೀಟರ್ ದೂರ ಡಾಕ್ಟ್ರೆ. ಸಿಟಿ ಬಸ್‌ನಲ್ಲಿ ಹೋಗಬೇಕಾದರೆ ಎರಡು ಬಸ್ ಬದಲಿಸಬೇಕು. ಒಂದು ಗಂಟೆಗೂ ಹೆಚ್ಚಿನ ಸಮಯ ಬೇಕು. ಆ ರಶ್, ಜನಗಳ ವರ್ತನೆ, ಆ ಕಂಡಕ್ಟರ್, ಡ್ರೈವರ್‌ಗಳ ಕೆಟ್ಟ ನಡೆವಳಿಕೆ ಸ್ವಲ್ಪವೂ ಇಷ್ಟವಾಗೋಲ್ಲ. ಜೊತೆಗೆ ಟ್ರಾಫಿಕ್ ಜಾಮ್, ಜಗಳಗಳು, ನಿಗದಿತ ಸಮಯಕ್ಕೆ ಸರಿಯಾಗಿ ಹೋಗೋದಿಕ್ಕೆ ಆಗೋದಿಲ್ಲ. ಬೆಳಿಗ್ಗೆ ೯-೧೫ಕ್ಕೆ ಸರಿಯಾಗಿ, ಎಂಟ್ರಿ ಗೇಟ್‌ನಲ್ಲಿ ಪಂಚ್ ಮಾಡಬೇಕು. ಇಲ್ಲದಿದ್ದರೆ, ಪೇ ಕಟ್ ಮಾಡ್ತಾರೆ. ಇದೊಂದು ಟೆನ್ಷನ್ ಆದರೆ, ನಮ್ಮ ಫ್ಯಾಕ್ಟರಿಯಲ್ಲಿ ತುಂಬಾ ಪಾರ್ಷಿಯಾಲಿಟಿ – ಒಬ್ಬರಿಗೊಂದು ಮತ್ತೊಬ್ಬರಿಗೊಂದು ಮಾಡ್ತಾರೆ. ಇನ್‌ಸೆಂಟಿವ್ಸ್ ಕೊಡುವಾಗ ಯೋಗ್ಯತೆ ಇಲ್ಲದವರಿಗೇ ಕೊಡ್ತಾರೆ. ಇದನ್ನು ಅಥಾರಿಟೀಸ್‌ಗೆ ಹೇಳೋದಕ್ಕೆ ಭಯ. ಯಾವುದೇ ಕಾರಣ ಕೊಡದೆ, ಒಂದು ತಿಂಗಳ ಅಡ್ವಾನ್ಸ್ ನೋಟೀಸ್ ಕೊಟ್ಟು ನಮ್ಮನ್ನು ಕೆಲಸದಿಂದ ತೆಗೆದುಹಾಕಬಹುದು. ಹೀಗಾಗಿ ತುಂಬಾ ಟೆನ್ಷನ್ನಲ್ಲೇ ಕೆಲಸ ಮಾಡಬೇಕಾಗುತ್ತೆ. ಕಷ್ಟ ನೋವು ನಿರಾಶೆಗಳನ್ನು ಯಾರ ಕೂಡ ಹೇಳಿಕೊಳ್ಳುವಂತಿಲ್ಲ. ಆಗಾಗ ತಲೆನೋವು, ಎದೆಯಲ್ಲಿ ಸಂಕಟ, ನಿದ್ರೆ ಬರದಿರುವುದು ಆಗುತ್ತದೆ. ನಮ್ಮ ಫ್ಯಾಕ್ಟರಿ ಡಾಕ್ಟರು ಪರೀಕ್ಷೆ ಮಾಡಿ, ದೇಹದಲ್ಲಿ ಏನೂ ಕಾಯಿಲೆ ಇಲ್ಲ. ಟೆನ್ಷನ್ ಮಾಡಿಕೊಂಡಿದ್ದೀರಿ. ಸ್ವಲ್ಪ ರಿಲ್ಯಾಕ್ಸ್ ಮಾಡಿ ಎಂದರು. ಯೋಗ ಕ್ಲಾಸ್‌ಗೆ ಹೋಗುತ್ತಿದ್ದೇನೆ. ಆದರೂ ಟೆನ್ಷನ್ ಕಡಿಮೆಯಾಗಿಲ್ಲ” ಎಂದ ಗುರುಮೂರ್ತಿ.

“ನಮ್ಮದು ಇಂಟರ್‌ನ್ಯಾಷನಲ್ ಕಂಪನಿ ಸಾರ್. ಪ್ರಪಂಚದಾದ್ಯಂತ ನೂರಕ್ಕೂ ಹೆಚ್ಚಿನ ಬ್ರಾಂಚ್‌ಗಳಿವೆ. ಒಳ್ಳೆಯ ಪೇ ಕೊಡ್ತಾರೆ. ಕೆಲಸ ಮಾಡೋದಕ್ಕೆ ತುಂಬಾ ಪ್ರೋತ್ಸಾಹ ಕೊಡ್ತಾರೆ. ಅವಧಿಗಿಂತ ಮೊದಲೇ ಪ್ರಾಜೆಕ್ಟ್ ವರ್ಕ್ ಮುಗಿಸಿ ಒಕೆಯಾದರೆ, ಹೆಚ್ಚುವರಿ ಗಿಫ್ಟ್ಸ್, ಇನ್‌ಸೆಂಟಿವ್ಸ್ ಇರುತ್ತೆ. ಆದರೆ ಸಿಕ್ಕಾಪಟ್ಟೆ ಕಾಂಪಿಟೆಶನ್ ಕ್ರಿಯೇಟ್ ಮಾಡ್ತಾರೆ. ನೋಡ್ರಿ, ನಿಮ್ಮ ಜೂನಿಯರ್, ಎರಡೇ ದಿನದಲ್ಲಿ ಪ್ರೋಗ್ರಾಂ ಬರೆದಿದ್ದಾನೆ. ಟಾರ್ಗೆಟ್ ರೀಚ್ ಮಾಡಿದ್ದಾನೆ.

ಎಲ್ಲೆಲ್ಲಿ ಯಾವಯಾವಾಗ ಅನಿಶ್ಚಿತತೆ ಇರುತ್ತದೋ, ಸ್ಪಷ್ಟತೆ ಇಲ್ಲದೆ ಗೊಂದಲ ಇರುತ್ತದೋ, ಒಳ್ಳೆಯದಾಗುತ್ತದೋ, ಕೆಟ್ಟದಾಗುತ್ತದೋ, ಯಶಸ್ಸೋ, ಸೋಲೋ ಎಂಬ ಜಿಜ್ಞಾಸೆ ಇರುತ್ತದೋ, ನಮ್ಮ ಶಕ್ತಿ ಸಾಮರ್ಥ್ಯದ ಬಗ್ಗೆ ಅನುಮಾನ ಬರುತ್ತದೋ, ಪರಿಸರ - ಸ್ನೇಹಿ ಆಗಿರದೇ ಅಪಾಯ ಇದೆ ಎಂದು ಗೊತ್ತಾದಾಗ, ನಮ್ಮ ಯೋಗ್ಯತೆಯನ್ನು ಶಕ್ತಿ ಸಾಮರ್ಥ್ಯ ಜ್ಞಾನ ಕೌಶಲಗಳನ್ನು ಇತರರು ಗಮನಿಸುತ್ತಿದ್ದಾರೆ ಎನಿಸಿದಾಗ, ನಮ್ಮ ನಿರ್ವಹಣಾ ಕೌಶಲದ ಮೇಲೆ ಭವಿಷ್ಯ ನಿಂತಿದೆ ಎನ್ನುವಾಗ ಟೆನ್ಷನ್ ಆಗೇ ಆಗುತ್ತದೆ. ಕೌರವರ ವಿರುದ್ಧ ಯುದ್ಧ ಮಾಡಲು ತವಕಿಸುತ್ತಿದ್ದ ಅರ್ಜುನನಿಗೆ, ಯುದ್ಧ ಪ್ರಾರಂಭದ ಕ್ಷಣದಲ್ಲಿ ಟೆನ್ಷನ್ ಶುರುವಾಗಿ, ‘ಕೃಷ್ಣಾ ಯುದ್ಧ ಬೇಡ, ನಾನು ಯುದ್ಧ ಮಾಡಲಾರೆ, ರಥವನ್ನು ತಿರುಗಿಸು’ ಎಂದು ಹೇಳುವಂತಾಯಿತು.

**ಡಾ|| ಸಿ. ಆರ್. ಚಂದ್ರಶೇಖರ್**

ನೀವು ಅವನಿಗಿಂತ ಬುದ್ಧಿವಂತರು : ೪೦ ಗಂಟೆಯೊಳಗೆ ಕೆಲಸ ಮುಗಿಸಬೇಕು. ಊಟ, ನಿದ್ರೆ ಮನರಂಜನೆ ಅಂತ ಟೈಂ ವೇಸ್ಟ್ ಮಾಡದೇ, ಏಕಾಗ್ರತೆಯಿಂದ ಕೆಲಸ ಮಾಡಿ, ಎಫಿಶಿಯಂಟ್ ಅಂತ ತೋರಿಸಿಕೊಳ್ಳಿ, ನಿಮಗೇನು ಅನುಕೂಲ ಮಾಡಿಕೊಡಬೇಕು ಹೇಳಿ ಕಂಪನಿ ಮಾಡಿ ಕೊಡತ್ತೆ ಅಂತ ಆಸೆ ತೋರಿಸಿ ಒಂದು ನಿಮಿಷ ಬಿಡುವು ಕೊಡದೇ ದುಡಿಸ್ತಾರೆ. ಅಷ್ಟೇ ಟೆನ್ಷನ್ನೂ ಕ್ರಿಯೇಟ್ ಮಾಡ್ತಾರೆ. ಗಡಿಯಾರದ ಕ್ಲಿಕ್ ಶಬ್ದ ಕೇಳುತ್ತಾ ಇದ್ದರೆ, ಟೈಂಬಾಂಬ್ ಕ್ಲಿಕ್ ಆಗ್ತಿದೆಯೇನೋ, ನಿಗದಿತ ಅವಧಿಯೊಳಗೆ ಕೆಲಸ ಮುಗಿಯದಿದ್ದರೆ ಎಂತಹ ಅವಮಾನ, ನಾಟ್ ಎಫಿಶಿಯಂಟ್ ಎನ್ನುವ ಬಿರುದು ಕೊಡುತ್ತಾರೆ. ಶರೀರದ ಇಡೀ ನರಮಂಡಲವನ್ನೇ ಎಳೆದು ಕಟ್ಟಿಹಾಕಿದ್ದಾರೆ ಅಂತ ಅನ್ನಿಸುತ್ತೆ. ಆಗಾಗ ತಲೆ ದಿಮ್ ಎಂದು ಹಿಡಿದುಕೊಂಡುಬಿಡುತ್ತೆ. ಆಲೋಚನೆಗಳೇ ಬರದೆ, ಮನಸ್ಸು ಬ್ಲಾಂಕ್ ಆಗಿಬಿಡುತ್ತೆ'' ಎಂದ ನವೀನ್.

''ಪ್ರತಿದಿನ ಪತ್ರಿಕೆಯಲ್ಲಿ ಟಿವಿಯಲ್ಲಿ ತೋರಿಸುವ ಆ್ಯಕ್ಸಿಡೆಂಟ್, ದರೋಡೆ, ಅಪಹರಣ, ಹಲ್ಲೆಗಳನ್ನು ನೋಡುತ್ತಾ ನೋಡುತ್ತಾ, ನನಗೆ ವಿಪರೀತ ಭಯ ಬಂದು ಬಿಟ್ಟಿದೆ ಡಾಕ್ಟರೇ. ನಮ್ಮ ಮನೆಯವರು ಆಫೀಸಿನಿಂದ ಬರುವುದು ತಡವಾಯಿತೆಂದರೆ, ಟೆನ್ಷನ್ ಶುರುವಾಗುತ್ತದೆ. ಅವರಿಗೆ ಆ್ಯಕ್ಸಿಡೆಂಟ್ ಆಗಿರಬಹುದು. ಯಾವುದೋ ಆಸ್ಪತ್ರೆಗೆ ದಾಖಲಾಗಿರಬಹುದು. ಫೋನ್ ಕಾಲ್ ಬಂದು ಅವರಿಗೆ ತುಂಬಾ ಸೀರಿಯಸ್ ಅಂತ ಮೆಸೇಜ್ ಬರಬಹುದು ಎಂಬ ಕೆಟ್ಟ ಯೋಚನೆಗಳು ಮನಸ್ಸನ್ನು ತುಂಬಿಕೊಳ್ಳುತ್ತವೆ. ಹಾಗೆಯೇ ಮಕ್ಕಳು ಬರುವುದು ತಡವಾದರೆ ಅವರನ್ನು ಯಾರೋ ಕಿಡ್ನಾಪ್ ಮಾಡಿರಬೇಕು. ಆಡುವಾಗ, ಇಲ್ಲವೇ ಬಸ್ ಹತ್ತುವಾಗ ಬಿದ್ದು ಗಾಯ ಮಾಡಿಕೊಂಡಿರಬೇಕು, ಏನನ್ನಾದರೂ ತಿಂದು ಅಸ್ವಸ್ಥರಾಗಿ ಆಸ್ಪತ್ರೆಗೆ ಸೇರಿಸಿರಬೇಕು ಎಂದು ಭಯ, ಟೆನ್ಷನ್ ಶುರುವಾಗುತ್ತದೆ. ಆಗ ದೇವರ ಧ್ಯಾನ ಮಾಡುತ್ತೇನೆ. ಹರಕೆ ಕಟ್ಟುತ್ತೇನೆ. ಗಂಡ, ಮಕ್ಕಳು ಸುರಕ್ಷಿತವಾಗಿ ಮನೆ ಸೇರಲಿ ಎಂದು ಪ್ರಾರ್ಥಿಸುತ್ತೇನೆ. ಆದರೂ ಟೆನ್ಷನ್ ಕಡಿಮೆಯಾಗುವುದಿಲ್ಲ. ಹಾಗೇನಾದರೂ ಫೋನ್ ಬಂದರೆ ಫೋನ್ ತೆಗೆದುಕೊಳ್ಳಲು ಕೈ ನಡುಗುತ್ತದೆ. ಕೆಟ್ಟ ಸುದ್ದಿಯೇ ಬಂದಿರಬೇಕು ಎನಿಸಿ, ಹೃದಯದ ಬಡಿತ ಏರುತ್ತದೆ. ಹಣೆಯಲ್ಲಿ ಬೆವರ ಸಾಲು ಮೂಡುತ್ತದೆ. ಸ್ವಲ್ಪ ಶಬ್ದವಾದರೂ ಜಗ್ಗಿ ಬೀಳುತ್ತೇನೆ. ಈ ಟೆನ್ಷನ್ನನ್ನು ಸಹಿಸಲು ನನ್ನಿಂದಾಗದು ಡಾಕ್ಟ್ರೇ. ಏನಾದರೂ ಮಾತ್ರೆ ಬರೆದುಕೊಡಿ'' ಎಂದಳು ಕ್ಯಾಥರಿನ್.



''ನಾನು ಚೆನ್ನಾಗಿ ಹಾಡುತ್ತೇನೆ ಸಾರ್. ಶಾಸ್ತ್ರೀಯ ಸಂಗೀತದ ಅಭ್ಯಾಸ ಮಾಡಿದ್ದೇನೆ. ಸ್ವರ, ತಾಳ, ಶ್ರುತಿಯ ಜ್ಞಾನವಿದೆ. ಮನೆಯೊಳಗೆ, ಗುರುಗಳ ಮುಂದೆ ಚೆನ್ನಾಗಿ ಹಾಡುತ್ತೇನೆ. ಆದರೆ ಹತ್ತು ಜನರ ಮುಂದೆ ಹಾಡಬೇಕಾದರೆ, ವೇದಿಕೆಯ ಮೇಲೆ ಹಾಡಬೇಕಾದರೆ, ರೇಡಿಯೋ ಸ್ಟೇಶನ್‌ನಲ್ಲಿ ಹಾಡಬೇಕಾದರೆ ತುಂಬಾ ಟೆನ್ಷನ್ ಆಗಿಬಿಡುತ್ತೆ. ಟೆನ್ಷನ್ ಏಕೆ ಎಂದುಕೊಳ್ಳುತ್ತೇನೆ. ಈ ಹಾಡು, ಈ ರಾಗ ನನಗೆ ಚೆನ್ನಾಗಿ ಗೊತ್ತು. ಭಯ ಏಕೆ ಎಂದು ಯೋಚಿಸುತ್ತೇನೆ. ಆದರೇನು ಆ ಕ್ಷಣ ಬಂದಿತೆಂದರೆ, ಬಾಯಿ ಒಣಗಿ ಕಾಗದದಂತಾಗುತ್ತದೆ. ಹೃದಯ ಎಲ್ಲಿ ಒಡೆದುಹೋಗುತ್ತದೆಯೋ ಎನ್ನುವಷ್ಟು ಜೋರಾಗಿ ಬಡಿದುಕೊಳ್ಳುತ್ತದೆ. ಕೈಕಾಲುಗಳು ತರಗೆಲೆ ಆಡಿದಂತೆ ನಡುಗುತ್ತವೆ. ಏನು ಹಾಡಬೇಕು, ಹೇಗೆ ಹಾಡಬೇಕು ಎಂಬುದೇ ಮರೆತು ಹೋಗುತ್ತದೆ. ಈ ಟೆನ್ಷನ್‌ನಿಂದಾಗಿ ನಾನೀಗ ವೇದಿಕೆಗೆ ಹೋಗುವುದನ್ನೇ ಬಿಟ್ಟಿದ್ದೇನೆ. ಸಭಿಕರ ಮುಂದೆ ಹಾಡುವುದನ್ನು ನಿಲ್ಲಿಸಿದ್ದೇನೆ. ಈ ಟೆನ್ಷನ್ ಕಡಿಮೆ ಮಾಡಲು ಏನು ಮಾಡಬೇಕು ಹೇಳಿ, ಔಷಧಿ ಇದ್ದರೆ ಬರೆದುಕೊಡಿ'' ಎಂದು ಶಾಂತಕುಮಾರಿ ನುಡಿದಾಗ ಆಕೆಯ ಕಣ್ಣಾಲಿಗಳು ತುಂಬಿದ್ದವು.

ಈ ರೀತಿ ನಾವೆಲ್ಲ ಒಂದಲ್ಲ ಒಂದು ಸಲ, ಅಥವಾ ಅನೇಕ ಸನ್ನಿವೇಶಗಳಲ್ಲಿ ಟೆನ್ಷನ್‌ಗೆ ಒಳಗಾಗಿದ್ದೇವೆ. ಸ್ಕೂಟರ್‌ನಲ್ಲಿ ಹೋಗುತ್ತಿರುವಾಗ ಪೊಲೀಸ್ ಕೈ ತೋರಿಸಿ ನಿಲ್ಲಿಸು ಎಂದಾಗ ಟೆನ್ಷನ್. ಯಾವುದೇ ಪರೀಕ್ಷೆ ಸಂದರ್ಶನಕ್ಕೆ ಹೋದಾಗ ಟೆನ್ಷನ್, ಮಾಲೀಕ, ಬಾಸ್‌ನಿಂದ ಕರೆ ಬಂದಾಗ ಟೆನ್ಷನ್, ಮಗಳನ್ನು ನೋಡಲು ಗಂಡಿನವರು ಬರುತ್ತಿದ್ದಾರೆ ಎಂದಾಗ ಟೆನ್ಷನ್, ಸಮಾರಂಭದಲ್ಲಿ ಸ್ವಾಗತ ಭಾಷಣವನ್ನೊ, ವಂದನಾರ್ಪಣೆಯನ್ನೋ ಮಾಡುವಾಗ ಟೆನ್ಷನ್, ಅಪರೂಪದ ಅತಿಥಿಗಳು ಬಂದಾಗ ಅವರಿಗೆ ಆತಿಥ್ಯ ನೀಡುವಾಗ ಟೆನ್ಷನ್, ಮೊದಲ ಬಾರಿಗೆ ವಿಮಾನದಲ್ಲಿ ಕುಳಿತಾಗ ಟೆನ್ಷನ್, ಅಪರಿಚಿತ ಸ್ಥಳದಲ್ಲಿ, ವಾಹನ ಕೆಟ್ಟು ನಿಂತಾಗ ಟೆನ್ಷನ್, ಅಮಾವಾಸ್ಯೆಯ ಕತ್ತಲಲ್ಲಿ ಒಬ್ಬನೇ ನಡೆದುಹೋಗಬೇಕಾದರೆ ದೆವ್ವ ಭೂತಗಳ ನೆನಪು ಬಂದು ಟೆನ್ಷನ್, ಹೆರಿಗೆಯ ದಿನ ಹತ್ತಿರ ಬರುತ್ತಿದೆ ಹೆರಿಗೆ ಸಲೀಸಾಗಿ ಆಗುವುದರ ಬಗ್ಗೆ ಟೆನ್ಷನ್. ಮನೆ ಕಟ್ಟಲು ಶುರುಮಾಡಿದಾಗ ನಿಗದಿತ ಸಮಯದಲ್ಲಿ ಇರುವಷ್ಟು ಹಣದಲ್ಲಿ ಮನೆಕಟ್ಟುವುದು ಸಾಧ್ಯವೇ ಎಂಬುದರ ಬಗ್ಗೆ ಟೆನ್ಷನ್. ಗುರಿಸಾಧನೆಯ ಪ್ರಯತ್ನ ಮಾಡುವಾಗ ಟೆನ್ಷನ್, ಶಸ್ತ್ರಕ್ರಿಯೆ ನಡೆಯಬೇಕು. ಏನಾಗುವುದೋ ಎಂಬುದರ ಬಗ್ಗೆ ಟೆನ್ಷನ್ – ಹೀಗೆ ಈ ಪಟ್ಟಿ ಬೆಳೆಯುತ್ತಲೆ ಹೋಗುತ್ತದೆ. ಈ ಟೆನ್ಷನ್ ಆಗಲು ಏನು ಕಾರಣ ಎಂಬುದು ನಿಮಗೀಗಾಗಲೇ ಗೊತ್ತಾಗಿದೆ.

ಎಲ್ಲೆಲ್ಲಿ ಯಾವಯಾವಾಗ ಅನಿಶ್ಚಿತತೆ ಇರುತ್ತದೋ, ಸ್ಪಷ್ಟತೆ ಇಲ್ಲದೆ ಗೊಂದಲ ಇರುತ್ತದೋ, ಒಳ್ಳೆಯದಾಗುತ್ತದೋ, ಕೆಟ್ಟದ್ದಾಗುತ್ತದೋ, ಯಶಸ್ಸೋ, ಸೋಲೋ ಎಂಬ ಜಿಜ್ಞಾಸೆ ಇರುತ್ತದೋ, ನಮ್ಮ ಶಕ್ತಿ ಸಾಮರ್ಥ್ಯದ ಬಗ್ಗೆ ಅನುಮಾನ ಬರುತ್ತದೋ, ಪರಿಸರ - ಸ್ನೇಹಿ ಆಗಿರದೇ ಅಪಾಯ ಇದೆ ಎಂದು ಗೊತ್ತಾದಾಗ, ನಮ್ಮ ಯೋಗ್ಯತೆಯನ್ನು ಶಕ್ತಿ ಸಾಮರ್ಥ್ಯ ಜ್ಞಾನ ಕೌಶಲಗಳನ್ನು ಇತರರು ಗಮನಿಸುತ್ತಿದ್ದಾರೆ ಎನಿಸಿದಾಗ, ನಮ್ಮ ನಿರ್ವಹಣಾ ಕೌಶಲದ ಮೇಲೆ ಭವಿಷ್ಯ ನಿಂತಿದೆ ಎನ್ನುವಾಗ ಟೆನ್ಷನ್ ಆಗೇ ಆಗುತ್ತದೆ. ಕೌರವರ ವಿರುದ್ಧ ಯುದ್ಧ ಮಾಡಲು ತವಕಿಸುತ್ತಿದ್ದ ಅರ್ಜುನನಿಗೆ, ಯುದ್ಧ ಪ್ರಾರಂಭದ ಕ್ಷಣದಲ್ಲಿ ಟೆನ್ಷನ್ ಶುರುವಾಗಿ, 'ಕೃಷ್ಣಾ ಯುದ್ಧ ಬೇಡ, ನಾನು ಯುದ್ಧ ಮಾಡಲಾರೆ, ರಥವನ್ನು ತಿರುಗಿಸು' ಎಂದು ಹೇಳುವಂತಾಯಿತು.

ಎಷ್ಟೇ ಕಷ್ಟವಾಗಲೀ, ಎಂತಹ ಅಪಾಯ ಬರಲಿ ನಿಭಾಯಿಸಿ ಸೀತೆಯನ್ನು ಹುಡುಕುತ್ತೇನೆ ಎಂದು ಹನುಮಂತನಿಗೆ ಎದುರು ಹರಡಿಕೊಂಡಿದ್ದ ವಿಶಾಲ ಸಮುದ್ರವನ್ನು ನೋಡಿ ಟೆನ್ಷನ್ ಆಗಿ 'ನನ್ನಿಂದಾಗದು, ಯಾರಿಂದಲೂ ಆಗದು' ನಾವು ಸೋತೆವು. ಆತ್ಮಹತ್ಯೆ ಮಾಡಿಕೊಳ್ಳುವುದೇ ಸರಿ, ಎಂದು ಹೇಳುವಂತಾಯಿತು.

**ಯಾರಿಗೆ ಮತ್ತು ಯಾವ ಕಾರಣದಿಂದಾಗಿ ಟೆನ್ಷನ್ ವಿಪರೀತವಾಗುತ್ತದೆ ?**

* ಕೀಳರಿಮೆ ಇರುವವರಿಗೆ, ತಮ್ಮ ಶಕ್ತಿ ಸಾಮರ್ಥ್ಯದ ಬಗ್ಗೆ ಅನುಮಾನವಿದ್ದವರಿಗೆ, ಆತ್ಮವಿಶ್ವಾಸವಿಲ್ಲದವರಿಗೆ
* ಮೇಲಿಂದ ಮೇಲೆ ಸೋಲು, ನಿರಾಶೆ, ಕಷ್ಟ- ನಷ್ಟಗಳನ್ನು ಅನುಭವಿಸುವವರಿಗೆ
* ಸಾಂತ್ವನ-ಆಸರೆ, ಪ್ರೋತ್ಸಾಹವನ್ನು ಕೊಡುವ ಜನ ಇಲ್ಲದಿರುವವರಿಗೆ ಸದಾ ಟೀಕೆ, ತಿರಸ್ಕಾರ ಮತ್ತು ಶಿಕ್ಷೆಯನ್ನು ಅನುಭವಿಸುವವರಿಗೆ
* ಬಾಲ್ಯದಲ್ಲಿ ತಂದೆ-ತಾಯಿ ಪೋಷಕರಿಂದ ಪ್ರೀತಿ ವಿಶ್ವಾಸವನ್ನು ಪಡೆಯದವರಿಗೆ, ವಿಪರೀತ ಶಿಸ್ತು / ಶಿಕ್ಷೆ / ಅಪಮಾನಕ್ಕೆ ಒಳಗಾದವರಿಗೆ
* ದೈಹಿಕ ದುರ್ಬಲತೆ/ನ್ಯೂನತೆಯುಳ್ಳವರಿಗೆ
* ಸುರಕ್ಷಿತ ಪರಿಸರದಿಂದ ಥಟ್ಟನೆ ಅಸುರಕ್ಷಿತ ಅಪಾಯಕಾರಿ ಪರಿಸರಕ್ಕೆ ವರ್ಗಾವಣೆಗೊಂಡವರಿಗೆ
* ಟೆನ್ಷನ್ ಅನ್ನು ಉಂಟುಮಾಡುವ ಕೆಲವು ವೃತ್ತಿಗಳಲ್ಲಿರುವವರು : ಉದಾಹರಣೆ, ವೃತ್ತಿನಿರತ ಭಾರೀ ವಾಹನಗಳ ಚಾಲಕರು, ಕಂಪನಿ/ಸಂಸ್ಥೆಯ ಕಾರ್ಯನಿರ್ವಾಹಕರು, ಸರ್ಜನ್‌ಗಳು, ಸೇಲ್ಸ್‌ಮನ್/ಸೇಲ್ಸ್‌ವುಮನ್‌ಗಳು, ಪೊಲೀಸರು, ಸೈನಿಕರು, ಹೈ ಸೆಕ್ಯುರಿಟಿ ಗಾರ್ಡ್‌ಗಳು, ದೊಡ್ಡ / ಕ್ಷಿಪ್ರ ನಿರ್ಧಾರಗಳನ್ನು ಕೈಗೊಳ್ಳಬೇಕಾದ ಆಡಳಿತಾಧಿಕಾರಿಗಳು, ತುಂಬಾ ಏಕಾಗ್ರತೆಯಿಂದ ಕೆಲಸ ಮಾಡಬೇಕಾಗಿರುವವರು – ಟೆಲಿಫೋನ್ ಆಪರೇಟರ್, ಕಾಲ್ ಸೆಂಟರ್ ಉದ್ಯೋಗಿಗಳು
* ಮನೆಯವರಿಂದ ದೂರವಾಗಿ, ಒಂಟಿಯಾಗಿ ಬದುಕುವವರು. ಜೈಲು, ಅನಾಥಾಶ್ರಮ, ಸುಧಾರಣಾ ಗೃಹಗಳಲ್ಲಿರುವವರು
* ಪ್ರಕೃತಿ ಜನ್ಯ ಅಥವಾ ಮಾನವ ನಿರ್ಮಿತ ದುರಂತ, ಅವಘಡಗಳಲ್ಲಿ ಬದುಕಿ ಉಳಿದವರಲ್ಲಿ (ಪ್ರವಾಹ, ಭೂಕಂಪ, ಕಾಡ್ಗಿಚ್ಚು, ಬಿರುಗಾಳಿ ಇತ್ಯಾದಿ)
* ತಮ್ಮ ನೆಲೆಯನ್ನು ಕಳೆದುಕೊಂಡು, ಹೊಸ ಜಾಗದಲ್ಲಿ ಹೊಸ ಜನರ ನಡುವೆ ಬದುಕಬೇಕಾದ ನಿರಾಶ್ರಿತರು
* ಅಂಗವೈಕಲ್ಯವನ್ನು ತರುವ, ಸಾಮಾಜಿಕ ಬಹಿಷ್ಕಾರ/ಕಳಂಕವನ್ನು ತರುವ ಅಥವಾ

ಸಾವನ್ನು ತರುವ ಕಾಯಿಲೆಗಳಿಂದ ನರಳುತ್ತಿರುವವರು. ಉದಾಹರಣೆಗೆ, ಹೃದ್ರೋಗ/ಹೃದಯಾಘಾತಕ್ಕೆ ಒಳಗಾದವರು, ಕ್ಯಾನ್ಸರ್ ಪೀಡಿತರು, ಸಿಫಿಲಿಸ್ ಅಥವಾ ಏಡ್ಸ್ ರೋಗಿಗಳು, ಪಾರ್ಶ್ವವಾಯುವಿಗೆ ತುತ್ತಾದವರು, ಮಿದುಳಿನ ಹಾನಿಗೊಳಗಾದವರು, ರುಮಟಾಯಿಡ್ ಸಂಧಿವಾತ ಅಥವಾ ಸಂಕೀರ್ಣ ಮೂಳೆಮುರಿತಕ್ಕೆ ಒಳಗಾದವರು, ದೃಷ್ಟಿ/ಶ್ರವಣ ಶಕ್ತಿಯನ್ನು ಕಳೆದುಕೊಂಡವರು, ಲೈಂಗಿಕ ದುರ್ಬಲತೆ/ಷಂಡತನಕ್ಕೆ ಒಳಗಾದವರು, ದೊಡ್ಡ ಅಪಾಯಕಾರಿ ಶಸ್ತ್ರ ಚಿಕಿತ್ಸೆಯನ್ನು ಮಾಡಿಸಿಕೊಂಡವರು, ಮೂತ್ರಪಿಂಡ ವೈಫಲ್ಯ ಉಳ್ಳವರು ಇತ್ಯಾದಿ.

### ಪರಿಹಾರ

* ನೆಗೆಟಿವ್ ಆಲೋಚನೆ ಬಿಟ್ಟು, ಪಾಸಿಟಿವ್ ಆಗಿ ಆಲೋಚಿಸುವುದು. ಉದಾಹರಣೆಗೆ, ''ಈ ಸಲವೂ ನಾನು ವಿಫಲನಾಗುತ್ತೇನೆ. ಇಲ್ಲ, ಈ ಸಲ ನಾನು ಚೆನ್ನಾಗಿ ಸಿದ್ಧತೆ ಮಾಡುತ್ತೇನೆ. ನನ್ನ ಟೀಚರ್ಸ್/ಸಹಪಾಠಿಗಳ ನೆರವನ್ನು ಪಡೆಯುತ್ತೇನೆ. ಎಲ್ಲರ ಶುಭಹಾರೈಕೆಗಳಿಂದ ನಾನು ಈ ಸಲ ವಿಫಲ ನಾಗುವುದಿಲ್ಲ. ಒಳ್ಳೆಯ ಅಂಕಗಳನ್ನು ತೆಗೆದೇ ಪಾಸಾಗುತ್ತೇನೆ.''
  ''ಈ ಬಾರಿಯೂ ನನಗೆ ಸ್ಪರ್ಧೆಯಲ್ಲಿ ಬಹುಮಾನ ಬರುವುದಿಲ್ಲ. ನಾನು ಮಾತಾಡುವ ರೀತಿಯನ್ನು ನೋಡಿ ಸಭಿಕರು ನಗಾಡುತ್ತಾರೆ'' ಖಂಡಿತಾ ಇಲ್ಲ. ಸ್ಪರ್ಧೆಯಲ್ಲಿ ಭಾಗವಹಿಸುವುದು ಮುಖ್ಯ. ಈ ಬಾರಿಯೂ ನನ್ನ ಕಾಲೇಜಿನ ಪ್ರಿನ್ಸಿಪಾಲ್ ನನ್ನನ್ನೇ ಆಯ್ಕೆ ಮಾಡಿದ್ದಾರೆ. ಚೆನ್ನಾಗಿ ಪ್ರಿಪೇರ್ ಆಗ್ತೇನೆ. ಅಂಜದೆ, ಅಳುಕದೆ ನನಗೆ ತಿಳಿದಷ್ಟನ್ನು ಹೇಳುತ್ತೇನೆ. ಪ್ರೈಜ್ ಬರಲಿ ಬರದಿರಲಿ ಚೆನ್ನಾಗಿ ಮಾತನಾಡಿದ ಎಂದು ತೀರ್ಪುಗಾರರು ಮತ್ತು ಶ್ರೋತೃಗಳು ಹೇಳಿಯೇ ಹೇಳುತ್ತಾರೆ.
* ಮನಸ್ಸಿನ ಗಮನವನ್ನು ಹಿತಕರವಾದ ವಿಷಯ/ವಸ್ತು/ಚಟುವಟಿಕೆಗಳತ್ತ ಹರಿಸಿ. ಟೆನ್ಷನ್ ಹೆಚ್ಚಾದಾಗ, ಆತ್ಮೀಯರ ಜೊತೆ ಮಾತನಾಡಿ. ನಿಮ್ಮ ಜೀವನದ ಸವಿ ನೆನಪುಗಳನ್ನು ಮೆಲುಕುಹಾಕಿ. ನಿಮಗಿಷ್ಟವಾದ ಪುಸ್ತಕ ಓದಿ. ಸಂಗೀತ ಕೇಳಿ. ಆಟವಾಡಿ. ಮಕ್ಕಳೊಂದಿಗೆ, ನಿಮ್ಮ ಸಾಕಿದ ಮುದ್ದಿನ ಪ್ರಾಣಿಯೊಂದಿಗೆ ಆಟವಾಡಿ. ಪ್ರಶಾಂತ ಸ್ಥಳದಲ್ಲಿ ವಾಕಿಂಗ್ ಮಾಡಿ. ಏನೂ ಮಾಡಲಿಕ್ಕಾಗದಿದ್ದರೆ, ಕುಳಿತಲ್ಲೇ ಕಣ್ಣುಮುಚ್ಚಿ ನಿಧಾನವಾಗಿ ಉಸಿರಾಡಿ ಓಂಕಾರ ಹೇಳಿ.
* ನಿಮ್ಮ ಬಲಾಬಲಗಳನ್ನು ನಿಮ್ಮ ಸಾಮರ್ಥ್ಯ ಕೊರತೆಗಳನ್ನು ವಿಶ್ಲೇಷಣೆ ಮಾಡಿ ಕೊಳ್ಳಿ. ಕೆಲಸ, ಕರ್ತವ್ಯ, ಸಮಸ್ಯೆಯನ್ನು, ಸನ್ನಿವೇಶ ಸಂದರ್ಭವನ್ನು ನಿಮ್ಮಿಂದ ನಿಭಾಯಿಸಲು ಆಗುತ್ತದಾ. ನಿಮ್ಮಲ್ಲಿ ಅದಕ್ಕೆ ಬೇಕಾದ ಬುದ್ಧಿ ಸಂಪನ್ಮೂಲ, ಕೌಶಲಗಳಿವೆಯಾ ನೋಡಿ. ಯಾರ ಸಹಾಯ-ಸಲಹೆ ಪಡೆಯಬಹುದು ಎಂಬುದನ್ನು ಆಲೋಚಿಸಿ. ಆ ಸಹಾಯ-ಸಲಹೆಯನ್ನು ಪಡೆಯಿರಿ. ಸಂಬಂಧ ಪಟ್ಟವರಿಗೆ ನಿಮ್ಮ ಸಾಮರ್ಥ್ಯ ಕೊರತೆ-ನ್ಯೂನತೆಗಳ ಬಗ್ಗೆ ಹೇಳಿ. ನಿಮ್ಮಿಂದ ಏನನ್ನು ಎಷ್ಟನ್ನು ನಿರೀಕ್ಷೆ ಮಾಡಬಹುದೆಂಬುದನ್ನು ಸ್ಪಷ್ಟ ಮಾತುಗಳಲ್ಲಿ ಹೇಳಿ. ನಿಮ್ಮ ಪ್ರಾಮಾಣಿಕ ಪ್ರಯತ್ನ ಮಾಡುವುದಾಗಿ ಹೇಳಿ. ನಿಮ್ಮ ಅನುಮಾನ ಸಂದೇಹಗಳನ್ನು ಅವರಿಗೆ ತಿಳಿಸಿ. ಮುಕ್ತವಾಗಿದ್ದಷ್ಟು, ಇತರರಿಗೆ ನಿಮ್ಮ ಬಲಾಬಲಗಳ ಬಗ್ಗೆ ಅರಿವು ಹೆಚ್ಚಿದಷ್ಟು ನಿಮ್ಮ ಆತಂಕ ಟೆನ್ಷನ್ ತಗ್ಗುತ್ತದೆ.
* ಸಮಯ-ಸಂಪನ್ಮೂಲಗಳ ಸರಿಯಾದ ನಿರ್ವಹಣೆ ಮಾಡುವುದನ್ನು ಕಲಿಯಿರಿ. ಎಷ್ಟು ಕೆಲಸವಿದೆ, ಏನೇನು ಮಾಡಬೇಕು, ಮಾಡಲು ಎಷ್ಟು ಸಮಯವಿದೆ, ನೀವು ಕೆಲಸ ಮಾಡುವ ವೇಗ ಎಷ್ಟು ಎಂದು ಅಂದಾಜು ಮಾಡಿ. ಬೇರೆ ಕೆಲಸಗಳನ್ನು ಇತರರಿಗೆ ವಹಿಸಿ. ನಿಮಗಿರುವ ಸಮಯವನ್ನು ನೀವು ಹೀಗೆ ಮಿತವಾಗಿ ಬಳಸಿ. ಅಗತ್ಯವಾದ ಚಟುವಟಿಕೆಗೆ ಹೇಗೆ ಹೆಚ್ಚು ಸಮಯವನ್ನು ಹೊಂದಿಸಿಕೊಳ್ಳುತ್ತೀರಿ ಲೆಕ್ಕಹಾಕಿ. ಬೆಳಿಗ್ಗೆ ಮಾಡಬೇಕಾದ ಅಡುಗೆಗೆ ಬೇಕಾದ ಎಲ್ಲ ಪದಾರ್ಥಗಳನ್ನು ರಾತ್ರಿಯೇ ಜೋಡಿಸಿಕೊಂಡರೆ, ಬೆಳಿಗ್ಗೆ ಕಡಿಮೆ ಅವಧಿಯಲ್ಲಿ ಅಡುಗೆ ಮುಗಿಸಬಹುದು. ನಿಮ್ಮ ಎಲ್ಲಾ ವಸ್ತು ಸಾಮಾನುಗಳನ್ನು ಶಿಸ್ತಿನಿಂದ ಒಂದೆಡೆ ಗೊತ್ತಾದ ಜಾಗದಲ್ಲಿ ಇಟ್ಟುಕೊಂಡರೆ ವಸ್ತುವನ್ನು ಹುಡುಕಲು ಬೇಕಾದ ಸಮಯದ ಉಳಿತಾಯವಾಗುತ್ತದೆ. ಆಫೀಸಿನಲ್ಲಿ ಒಂದು ಗಂಟೆ ಹೆಚ್ಚು ಹೊತ್ತು ಇರಬೇಕು. ಮನೆಗೆ ನೀವು ತರಬೇಕಾದ ಸಾಮಾನನ್ನು, ಅಂಗಡಿಯಾತನೇ ತನ್ನ ನೌಕರನ ಮೂಲಕ ನಿಮ್ಮ ಮನೆಗೆ ಕಳುಹಿಸಲು ಸಾಧ್ಯವೇ ಕೇಳಿ. ಸಹೋದ್ಯೋಗಿ ಗಳೊಂದಿಗೆ ಮನೆಯವರೊಂದಿಗೆ ಮಾಡಬೇಕಾದ ಕೆಲಸವನ್ನು ಹಂಚಿಕೊಳ್ಳಿ.
* ಕೆಲವು ಜವಾಬ್ದಾರಿಗಳನ್ನು ಇತರರಿಗೆ ಹಂಚಿ; ಎಲ್ಲವನ್ನೂ ನೀವೇ ಮಾಡಬೇಕಿಲ್ಲ.

* ಪರಿಪೂರ್ಣವಾಗಿ, ನೂರಕ್ಕೆ ನೂರು ಅಚ್ಚುಕಟ್ಟಾಗಿ, ಒಂದು ಚಿಕ್ಕ ತಪ್ಪು ಇಲ್ಲದೆ ನಿಮ್ಮ ಕೆಲಸ-ಜವಾಬ್ದಾರಿಯನ್ನು ನಿರ್ವಹಿಸಬೇಕು ಎಂಬ ಆದರ್ಶಮಯ ಗುರಿಯನ್ನು ಸ್ವಲ್ಪ ಸಡಿಲಿಸಿ. ಎಷ್ಟು ಸಾಧ್ಯವೋ ಅಷ್ಟು ಚೆನ್ನಾಗಿ ಮಾಡುತ್ತೇನೆ. ಎಷ್ಟು ಸಾಧ್ಯವೋ ಅಷ್ಟು ಅಂಕಗಳನ್ನು ತೆಗೆಯುತ್ತೇನೆ. ಎಷ್ಟು ಜನರನ್ನು ಮೆಚ್ಚಿಸಲು ಸಾಧ್ಯವೋ ಅಷ್ಟು ಜನರನ್ನು ಮೆಚ್ಚಿಸಲು ಪ್ರಯತ್ನಿಸುತ್ತೇನೆ. ಎಲ್ಲರನ್ನೂ ಗರಿಷ್ಠಮಟ್ಟದಲ್ಲಿ ಮೆಚ್ಚಿಸಬೇಕು ಎಂಬ ಅವಾಸ್ತವಿಕ ಗುರಿಯನ್ನು ಸಡಿಲಮಾಡಿ. Be practical. ವಸ್ತುನಿಷ್ಠವಾಗಿ, ಸತ್ಯ-ವಾಸ್ತವಿಕತೆಯನ್ನು ಸ್ಥಿತಪ್ರಜ್ಞತೆಯಿಂದ ಒಪ್ಪಿಕೊಳ್ಳಿ, ಇತರರಿಗೂ ಹಾಗೆ ಒಪ್ಪಿಕೊಳ್ಳಲು ಕೇಳಿಕೊಳ್ಳಿ. ನಿಮ್ಮ ಹಿರಿಯರು, ಮಾಲೀಕರು, ಉಸ್ತುವಾರಿ ಮಾಡುವವರು, ಶಿಕ್ಷಕರು ಹೆಚ್ಚು ಒತ್ತಡ ಹಾಕಿದರೆ, I will do my best ನನ್ನ ಕೈಲಾದದ್ದನ್ನು, ವಂಚನೆ ಇಲ್ಲದೆ ಮಾಡುತ್ತೇನೆ, ಉದ್ದೇಶಪೂರ್ವಕವಾಗಿ ನಾನು ತಪ್ಪು ಮಾಡುವುದಿಲ್ಲ. ಕೆಲಸದಲ್ಲಿ ನಿಧಾನ ತಂತ್ರವನ್ನು ಬಳಸುವುದಿಲ್ಲ. ಗೆಲ್ಲಲು, ಗುರಿಮುಟ್ಟಲು ಪ್ರಯತ್ನ ಮಾಡುತ್ತೇನೆ. ನಿಮ್ಮ ಪ್ರೋತ್ಸಾಹ ಬೇಕು. ಟೀಕೆ ಮಾಡಿ ಗದರಿಸಿ, ನನ್ನ ಭಯ ಆತಂಕವನ್ನು ಹೆಚ್ಚಿಸಬೇಡಿ ಎಂದು ಕೇಳಿಕೊಳ್ಳಿ. ಸ್ಪರ್ಧೆ ಇದ್ದಾಗ 'ಹೌದು ಸ್ಪರ್ಧೆ ಅನಿವಾರ್ಯ. ನಾನು ಸ್ಪರ್ಧಿಸುತ್ತೇನೆ. ಫಲಿತಾಂಶದ ಬಗ್ಗೆ ಚಿಂತೆ/ಆತಂಕಬೇಡ. ಪ್ರಯತ್ನ ನನ್ನದು, ಫಲಿತಾಂಶ ನನ್ನ ಕೈಯಲ್ಲಿಲ್ಲ. ಫಲಿತಾಂಶ ಚೆನ್ನಾಗಿರುತ್ತದೆ ಎಂದೇ ಹಾರೈಸುತ್ತೇನೆ' ಎಂದು ಹೇಳಿಕೊಳ್ಳಿ.



* ಆಶಾವಾದಿಯಾಗಿರಿ, ಒಳಿತನ್ನೇ ಹಾರೈಸಿ/ನಿರೀಕ್ಷಿಸಿ: ಯಾವುದೇ ಒತ್ತಡದ ಸನ್ನಿವೇಶದಲ್ಲಿ ಸ್ಪರ್ಧಾ ಸನ್ನಿವೇಶದಲ್ಲಿ ಅಥವಾ ಅನಿಶ್ಚಿತತೆ ಇರುವ ಸಂದರ್ಭದಲ್ಲಿ ಆಶಾವಾದವೇ ನಮಗೆ ಊರುಗೋಲಾಗಬೇಕು. '೫ ಗಂಟೆಗೆ ಮಕ್ಕಳು ಬರಬೇಕಿತ್ತು. ೫.೩೦ ಆಯಿತು ಬಂದಿಲ್ಲ.' ಮನಸ್ಸಿನೊಳಗೆ ಕೆಟ್ಟ ಯೋಚನೆಗಳು ನುಗ್ಗುತ್ತವೆ. ಆಗ 'ಇಲ್ಲ ಮಕ್ಕಳಿಗೆ ಏನೂ ತೊಂದರೆ ಆಗಿರಲಾರದು ಶಾಲೆಗೆ ಫೋನ್ ಮಾಡುತ್ತೇನೆ. ಮಕ್ಕಳ ಸ್ನೇಹಿತರ ಮನೆಗೆ ಫೋನ್ ಮಾಡುತ್ತೇನೆ ಅಥವಾ ಹೋಗಿ ವಿಚಾರಿಸಲು ಯಾರನ್ನಾದರೂ ಕಳುಹಿಸುತ್ತೇನೆ. ಗಂಡನಿಗೆ ವಿಷಯ ತಿಳಿಸಿ, ವಿಚಾರಿಸಲು ಹೇಳುತ್ತೇನೆ. ಮನೆದೇವರನ್ನು ನೆನೆಯುತ್ತೇನೆ. ದೇವರು ನನ್ನ ಮಕ್ಕಳಿಗೆ ಅಪಾಯವಾಗದಂತೆ ಖಂಡಿತವಾಗಿ ನೋಡಿಕೊಳ್ಳುತ್ತಾನೆ. ೮ ಗಂಟೆಗೂ ಬರದೇ ಹೋದರೆ ಪೊಲೀಸ್ ಸ್ಟೇಶನ್‌ಗೆ ಹೋಗಿ ಕಂಪ್ಲೇಂಟ್ ಕೊಡುತ್ತೇನೆ. ಈಗ ಸ್ವಲ್ಪ ರಿಲ್ಯಾಕ್ಸ್ ಆಗೋಣ.' 'ನನ್ನಿಂದ ತಪ್ಪಾಗಿದೆ. ನಾಳೆ ಇನ್ಸ್‌ಪೆಕ್ಷನ್‌ಗೆ ಬಂದವರು ಅದನ್ನು ಗಮನಿಸದೇ ಇರಬಹುದು. ಗಮನಿಸಿದರೆ, ಇರುವ ವಿಚಾರವನ್ನು ಅವರಿಗೆ ಹೇಳುತ್ತೇನೆ. ಹೇಗೆ ತಪ್ಪಾಯಿತು. ಅದು ಯಾವಾಗ ನನ್ನ ಗಮನಕ್ಕೆ ಬಂದಿತು. ಇದು ಉದ್ದೇಶಪೂರ್ವಕವಾಗಿ ಮಾಡಿದ್ದಲ್ಲ ಎಂದು ಅವರಿಗೆ ತಿಳಿಸಿಹೇಳುತ್ತೇನೆ. ಇದು ಅವಮಾನದ ಸಂಗತಿಯಾದರೂ ನಡೆದುಹೋಗಿದೆ. ತಪ್ಪು ಮಾಡುವುದು ಸಹಜ ಅದನ್ನು ಒಪ್ಪಿಕೊಂಡು, ಅದರ ದುಷ್ಪರಿಣಾಮಗಳನ್ನು ಎದುರಿಸುತ್ತೇನೆ. ಇದು ಅಪಮಾನವಲ್ಲ. ನನ್ನ ಸಂಸ್ಥೆ, ನನ್ನ ಬಾಸ್, ನನ್ನ ಮನೆಯವರು, ನನ್ನನ್ನು ಖಂಡಿತಾ ಕ್ಷಮಿಸುತ್ತಾರೆ. ನನ್ನನ್ನು ಅರ್ಥಮಾಡಿಕೊಳ್ಳುತ್ತಾರೆ.' 'ನನ್ನ ಜೂನಿಯರ್ ನನಗಿಂತ ಬೇಗ ಹಾಗೂ ಚೆನ್ನಾಗಿ ಕೆಲಸ ಮಾಡಿದ್ದಾನೆ ಭೇಷ್. ಇದರಿಂದ ನಾನು ಎಫಿಶಿಯಂಟ್ ಅಲ್ಲ, ನಾನು ಸೋಲುತ್ತಿದ್ದೇನೆ' ಎಂದು ಭಾವಿಸುವುದು ಬೇಡ. 'ಅವನಿಗೆ ಶ್ಲಾಘನೆ ಸಿಕ್ಕಿರುವುದು ಸಹಜ. ನನ್ನ ಪರಿಣತಿ ಹಾಗೂ ಕೆಲಸ ಮಾಡುವ ವೇಗವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತೇನೆ. ಆಗದಿದ್ದರೆ, ವಾಸ್ತವಿಕತೆಯನ್ನು ಒಪ್ಪಿಕೊಳ್ಳುತ್ತೇನೆ. ನನ್ನ ಇತಿಮಿತಿಯಲ್ಲಿ ಕೆಲಸ ಮಾಡುತ್ತೇನೆ' ಎಂದು ಹೇಳಿಕೊಳ್ಳಿ.
* ಮೈಮನಸ್ಸುಗಳು ವಿರಮಿಸಲು ಸಹಾಯವಾಗುವ ಹವ್ಯಾಸ-ಚಟುವಟಿಕೆಗಳನ್ನು ಹಮ್ಮಿಕೊಳ್ಳಿ. ಸದಾ ಕೆಲಸ-ಕರ್ತವ್ಯ ಎಂಬ ವರ್ತುಲದಲ್ಲಿ ಸಿಕ್ಕಿಹಾಕಿಕೊಳ್ಳಬೇಡಿ. ದಿನದಲ್ಲಿ ಸ್ವಲ್ಪ ಹೊತ್ತನ್ನು ಉಳಿಸಿಕೊಳ್ಳಿ. ನಿಮಗಿಷ್ಟವಾದ ನಿಮ್ಮ ಅಭಿರುಚಿಗೆ ಹೊಂದುವಂತಹ ನಿಮ್ಮ ಪ್ರತಿಭೆ-ಕೌಶಲಗಳನ್ನು ಹೊರಬರುವಂತೆ ಮಾಡುವ ಹವ್ಯಾಸಗಳನ್ನು ಮಾಡಿ ಸಂತೋಷಪಡಿ. ಈ ಹವ್ಯಾಸಗಳು ನಿಮಗೆ ಹೊಸ ಸ್ನೇಹಿತರನ್ನು, ಅಭಿಮಾನಿಗಳನ್ನು ಕೊಡುತ್ತವೆ. ಯೋಗಾಸನ ಪ್ರಾಣಾಯಾಮ, ಧ್ಯಾನ, ಇತ್ಯಾದಿ ಚಟುವಟಿಕೆಗಳು ಈ ನಿಟ್ಟಿನಲ್ಲಿ ಬಹು ಸಹಕಾರಿ.
* **ವೈದ್ಯರ ಸಲಹೆ, ಚಿಕಿತ್ಸೆ**: ಟೆನ್ಷನ್ ತುಂಬಾ ಜಾಸ್ತಿಯಾಗಿ ನಿಮಗೆ ಸರಿಯಾಗಿ ನಿದ್ರೆ ಬರುತ್ತಿಲ್ಲ, ಊಟ ಸೇರುತ್ತಿಲ್ಲ. ತಲೆನೋವು ಬರುತ್ತಿದೆ. ಮೈ ಕೈ ನೋವು ಆಯಾಸವಾಗುತ್ತಿದೆ. ಲೈಂಗಿಕ ಆಸಕ್ತಿ ಕಡಿಮೆಯಾಗಿ, ಲೈಂಗಿಕ ಕ್ರಿಯೆ ಮಾಡುವ ಶಕ್ತಿ ಕಡಿಮೆಯಾಗುತ್ತಿದೆ. ಏಕಾಗ್ರತೆ ಇಲ್ಲ, ಮರೆವು ಹೆಚ್ಚುತ್ತಿದೆ, ಮನಸ್ಸು ಗೊಂದಲಮಯವಾಗುತ್ತಿದೆ. ನಿಮ್ಮ ಶಕ್ತಿ ಸಾಮರ್ಥ್ಯಗಳು ಕುಗ್ಗುತ್ತಿವೆ. ಮನಸ್ಸಿನಲ್ಲಿ ಏನೋ ಕಳವಳ, ನೋವು, ಹಿಂಸೆ, ಭಯ, ಸಿಟ್ಟು ಕೋಪ, ಕೀಳರಿಮೆಗಳಂತಹ ಭಾವನೆಗಳು ಹೆಚ್ಚಾಗುತ್ತಿವೆ ಎನಿಸಿದರೆ, ರಿಲ್ಯಾಕ್ಸ್ ಮಾಡಿದರೂ ಉಪಯೋಗವಾಗುತ್ತಿಲ್ಲ ಅಥವಾ ರಿಲ್ಯಾಕ್ಸ್ ಮಾಡಲು ಆಗುತ್ತಲೇ ಇಲ್ಲ ಎನಿಸಿದರೆ, ನಿಮ್ಮ ಪರಿಚಯದ ವೈದ್ಯರನ್ನು ಕಾಣಿ. ಶಮನಕಾರಿ, ಖಿನ್ನತೆ ನಿವಾರಕಗಳನ್ನು ಬರೆಸಿಕೊಂಡು, ನಿರ್ದಿಷ್ಟ ಪ್ರಮಾಣದಲ್ಲಿ, ನಿರ್ದಿಷ್ಟ ಅವಧಿಯವರೆಗೆ ಉಪಯೋಗಿಸಿ. ವೈದ್ಯರ ಮಾರ್ಗದರ್ಶನದಲ್ಲಿ ಈ ಔಷಧಗಳ ಬಳಕೆ ಸುರಕ್ಷಿತ. ಅಡ್ಡಪರಿಣಾಮ/ವಿಷಮ ಪರಿಣಾಮಗಳು ಇರುವುದಿಲ್ಲ. ಟೆನ್ಷನ್ ಕಡಿಮೆಯಾಗಲು, ಟೆನ್ಷನ್‌ನ ದುಷ್ಪರಿಣಾಮಗಳನ್ನು ನಿವಾರಿಸಲು, ಈ ಕೆಳ ಕಾಣುವ ೧೨ ಸೂತ್ರಗಳನ್ನು ನಿಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಿ.

### ಮಾನಸಿಕ ಆರೋಗ್ಯವರ್ಧನೆಗೆ 12 ಸೂತ್ರಗಳು

* ನಿಮ್ಮ ಅಗತ್ಯಗಳನ್ನು ತಗ್ಗಿಸಿ. ಸರಳ ತೃಪ್ತ ಜೀವನ ಮಾಡಿ. ಹಣವನ್ನು ವಿವೇಚನೆಯಿಂದ ಸಂಪಾದಿಸಿ ಮತ್ತು ಬಳಸಿ. ಆದಾಯಕ್ಕಿಂತ ಖರ್ಚು ಹೆಚ್ಚುವುದು ಬೇಡ.
* ಇತರರ ಬಗ್ಗೆ ನಿರೀಕ್ಷೆಗಳನ್ನು ಕಡಿಮೆ ಮಾಡಿ. ಅವರು ನಿಮ್ಮೊಂದಿಗೆ ಹೊಂದಿಕೊಳ್ಳಲು ಅವಕಾಶ ಕೊಡಿ. ಎಲ್ಲರೊಡನೆ ಸ್ನೇಹದಿಂದಿರಿ. ಅವರನ್ನು ಅರ್ಥಮಾಡಿಕೊಳ್ಳಿ.
* ನಿರಾಶಾವಾದ ಬೇಡ. ಒಳ್ಳೆಯದಾಗುತ್ತದೆ ಎಂಬ ಭರವಸೆ ಇರಲಿ. ಎಲ್ಲರಲ್ಲಿ ಮತ್ತು ಎಲ್ಲದರಲ್ಲಿ ಒಳ್ಳೆಯದನ್ನು ನೋಡಿ.
* ವರ್ತಮಾನ ಮುಖ್ಯ. ನಿನ್ನೆ ಮತ್ತು ನಾಳೆಯ ಬಗ್ಗೆ ಚಿಂತೆ ಬೇಡ.
* ವಾಸ್ತವಿಕತೆಯನ್ನು ಒಪ್ಪಿಕೊಳ್ಳಿ ಮತ್ತು ಅದಕ್ಕೆ ಹೊಂದಿಕೊಳ್ಳಿ. ನಿಮ್ಮನ್ನು, ಇತರರನ್ನು ಶ್ಲಾಘಿಸಿ.
* ಒಂಟಿಯಾಗಿರಬೇಡಿ. ಜನರೊಂದಿಗೆ ಬೆರೆಯಿರಿ. ಸಂಘ ಸಂಸ್ಥೆಗಳ ಸದಸ್ಯರಾಗಿ, ಬಹುಮುಖೀ ಚಟುವಟಿಕೆಗಳನ್ನು ಹಮ್ಮಿಕೊಳ್ಳಿ.
* ಸೃಜನಶೀಲ ಚಟುವಟಿಕೆಗಳು, ಸಂಗೀತ, ಸಾಹಿತ್ಯ, ಯೋಗ, ಧ್ಯಾನ, ಕ್ರೀಡೆಗಳಿಗೆ ದಿನವೂ ಒಂದು ಗಂಟೆ ಮೀಸಲಿಡಿ.
* ನಿಮ್ಮ ಭಾವನೆ, ಅನಿಸಿಕೆಗಳನ್ನು ಆತ್ಮೀಯರೊಂದಿಗೆ ಹೇಳಿಕೊಳ್ಳಿ, ನಿಮ್ಮ ಪರಿಸರವನ್ನು ಚೆನ್ನಾಗಿಟ್ಟುಕೊಳ್ಳಿ.
* ಸದಾ ಚಟುವಟಿಕೆಯಿಂದಿರಿ. ನೀವು ಮಾಡುವ ಕೆಲಸಗಳಿಂದ ಸಂತೋಷಪಡಿ.
* ನಿಮ್ಮ ಜ್ಞಾನ ಕೌಶಲಗಳನ್ನು ಉತ್ತಮಪಡಿಸಿಕೊಳ್ಳಿ. ಜೀವನ ಘಟನೆಗಳಿಗೆ ಪೂರ್ವಸಿದ್ಧತೆ ಮಾಡಿ, ಸರಿಯಾಗಿ ನಿಭಾಯಿಸಿ.
* ಪಾಲಿಗೆ ಬಂದದ್ದನ್ನು ಸ್ವೀಕರಿಸಿ. ಹಲವು ಸಮಸ್ಯೆಗಳಿದ್ದಾಗ, ಒಂದೊಂದು ಸಮಸ್ಯೆಯನ್ನು ಇತರರ ನೆರವಿನೊಂದಿಗೆ ನಿಭಾಯಿಸಿ. ಸಾಧಿಸಬಹುದಾದ ಗುರಿಗಳಿರಲಿ.
* ಸೊಪ್ಪು ತರಕಾರಿ, ಹಾಲು, ಹಣ್ಣು ಇರುವ ಆಹಾರವನ್ನು ಹಿತಮಿತವಾಗಿ, ವೇಳೆ ವೇಳೆಗೆ ಸರಿಯಾಗಿ ಸೇವಿಸಿ. ಸ್ವಚ್ಛತೆ ಬಗ್ಗೆ ಗಮನ ಕೊಡಿ. ನಿತ್ಯ ವ್ಯಾಯಾಮ, ನಡಿಗೆ ಮಾಡಿ. ಒಬ್ಬ ವೈದ್ಯರ ಮಾರ್ಗದರ್ಶನದಲ್ಲಿ ಆರೋಗ್ಯವನ್ನು ಕಾಪಾಡಿಕೊಳ್ಳಿ.

ಡಾ|| ಸಿ. ಆರ್. ಚಂದ್ರಶೇಖರ್
ನಂ. ೩೮, ೨ನೇ ಕ್ರಾಸ್, ಸಿಂಡಿಕೇಟ್ ಬ್ಯಾಂಕ್ ಕಾಲೋನಿ, ಅರೆಕೆರೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-೭೬

# ಕನ್ನಡ ರಂಗಭೂಮಿಗೆ ಸಾಣೇಹಳ್ಳಿಯ ಕೊಡುಗೆ



ಎಚ್. ವಿ. ವೇಣುಗೋಪಾಲ್

ಸಾಣೆಹಳ್ಳಿಯಲ್ಲಿ ನಡೆಯುತ್ತಿರುವ ರಂಗಭೂಮಿಯ ಚಟುವಟಿಕೆಗಳು ಏಳೆಂಟು ವರ್ಷಗಳಿಂದೀಚೆಗೆ ಹೆಚ್ಚು ಬೆಳಕಿಗೆ ಬಂದಿವೆ. ಸಾಣೆಹಳ್ಳಿ ಎಂಬ ಚಿಕ್ಕ ಹಳ್ಳಿಯಲ್ಲಿ ಸಣ್ಣರೂಪದಲ್ಲಿ ಶ್ರೀ ಶಿವಕುಮಾರ ಹವ್ಯಾಸಿ ಕಲಾಸಂಘ ಎಂಬುದಾಗಿ ಅಲ್ಲಿನ ಮಠದ ಪ್ರೋತ್ಸಾಹದಿಂದ ಕೂಡಿಕೊಂಡ ಒಂದು ರಂಗಾಸಕ್ತರ ಕೂಟ ಕಳೆದ ಇಪ್ಪತ್ತು ವರ್ಷಗಳಿಂದ (೧೯೮೭ರಿಂದ) ನಿರಂತರವಾಗಿ ನಾಟಕಗಳನ್ನು ನಡೆಸಿಕೊಂಡುಬರುತ್ತಿರುವ ವಿದ್ಯಮಾನವಾಗಿದೆ. ಇದು ತಿಳಿದದ್ದು ಕೂಡ ಶಿವಸಂಚಾರ ರೆಪರ್ಟರಿ ಊರೂರು ತಿರುಗಾಟ ನಡೆಸುತ್ತ ಬೆಂಗಳೂರಿಗೂ ಬಂದಾಗ. ಅಥವಾ ಇನ್ನೂ ನಿಖರವಾಗಿ ಹೇಳಬೇಕೆಂದರೆ ಸಿ.ಜಿ.ಕೆ. ಸಾಣೇಹಳ್ಳಿಗೆ ಒಲಿದು ತನ್ನ ಕಾರ್ಯಕ್ಷೇತ್ರವನ್ನು ಅಲ್ಲಿಗೂ ವ್ಯಾಪಿಸಿ, ಶ್ರೀ ಶಿವಕುಮಾರ ಹವ್ಯಾಸಿ ಕಲಾಸಂಘಕ್ಕೆ ರೆಪರ್ಟರಿ ರೂಪ ಕೊಟ್ಟು ೧೯೯೭ರಲ್ಲಿ ಸಂಚಾರ ಹೊರಡಿಸಿ ಇಲ್ಲಿಗೆ ಕರೆತಂದಾಗ. ಅಲ್ಲಿಂದ ಈತನಕವೂ ಪ್ರತಿವರ್ಷ ಶಿವಸಂಚಾರವು ವರ್ಷಕ್ಕೆ ಮೂರು ನಾಟಕಗಳನ್ನು ಪ್ರಯೋಗಕ್ಕೆ ಸಿದ್ಧಗೊಳಿಸಿಕೊಂಡು ತಿರುಗಾಡುತ್ತಿದೆ.

ಕರ್ನಾಟಕದ ಎಲ್ಲ ಊರುಗಳಲ್ಲೂ ಬೇಕಾದಷ್ಟು ನಾಟಕ ತಂಡಗಳಿವೆ. ಎಲ್ಲರೂ ಒಂದಿಲ್ಲೊಂದು ಕಾರಣಗಳನ್ನು ಹುಡುಕಿಕೊಂಡು ಎಲ್ಲರೂ ನಾಟಕಗಳನ್ನಾಡುತ್ತಿದ್ದಾರೆ. ಹೀಗೆ ಎಲ್ಲೆಡೆಯಲ್ಲಿಯೂ ನಾಟಕವನ್ನು ಜನರಿಗೆ ತೋರಿಸುತ್ತಲೇ ಇರುವುದು, ಆ ಮೂಲಕ ರಂಗಭೂಮಿಯನ್ನು ಜೀವಂತವಾಗಿಟ್ಟಿರುವುದು ರಂಗಭೂಮಿಗೆ ಕೊಡಲಾಗುತ್ತಿರುವ ಬಹುಮುಖ್ಯ ಕೊಡುಗೆ ಎಂದೇ ನಾನು ತಿಳಿಯುತ್ತೇನೆ. ಈ ಬಗೆಯ ಅಭ್ಯಾಸಗಳಲ್ಲಿ ನಾಟಕಗಳು ಯಾವುದೇ ಇರಲಿ, ಪ್ರಯೋಗದ ಗುಣಮಟ್ಟ ಎಂತೇ ಇರಲಿ, ಇದು ಒಂದು ನಿರಂತರ ಅಭ್ಯಾಸವಾಗಿ ರಂಗಭೂಮಿಯ ಒಳಸೆಲೆಯಾಗಿ ಹರಿಯುತ್ತಿರುವುದರಿಂದಲೇ ಇದರ ಮೇಲ್ಪದರದಲ್ಲಿ ಕೆಲವು ಕಡೆಯಾದರೂ ಹೊಸ ಪ್ರಯತ್ನಗಳು, ಹೊಸ ನಾಟಕಗಳು, ಹೊಸ ಚಿಂತನೆಗಳು ಎದ್ದು ನಿಲ್ಲುತ್ತಿರುತ್ತವೆ. ಇಂಥಾದ್ದೇ ಒಂದು ಪ್ರಯತ್ನವನ್ನು ಸಾಣೇಹಳ್ಳಿಯ ರಂಗಾಸಕ್ತರೂ ಸಹ ೧೯೯೭ರವರೆಗೂ ನಡೆಸಿಕೊಂಡು ಬರುತ್ತಿರುವುದರ ಫಲಿತವಾಗಿ ಈಗ ರೆಪರ್ಟರಿ ಶುರುವಾಗಿದೆ. ನಾಟಕಕ್ಕೆ ಒಂದು ಗಂಭೀರ ಆಯಾಮವಿದೆ ಎಂದು ತಾನು ತಿಳಿದು, ಎಲ್ಲರಿಗೂ ತಿಳಿಸುವ ಕೆಲಸ ಅತ್ಯಂತ ಗಮನಾರ್ಹವಾದ ಕೆಲಸವಾಗಿರುತ್ತದೆ.

ರಂಗಭೂಮಿಯು ಜೀವನವನ್ನು ವಿಸ್ತರಿಸಿಕೊಳ್ಳಲು ಹೇಳಿದರೆ ಸನ್ಯಾಸವು ಜೀವನವನ್ನು ಸಾಕುಮಾಡಲು ಬೋಧಿಸುತ್ತದೆ. ಮಠಗಳು ಜೀವನದಿಂದ ದೂರವಾಗುವ, ಮೋಕ್ಷಸಂಪಾದನೆಯ ಮಾರ್ಗಗಳನ್ನು, ಕರ್ಮಸನ್ಯಾಸತ್ವದ ಪ್ರಚಾರವನ್ನು ಸಾಮಾನ್ಯರಿಗೆ ತಿಳಿಸಿ ಹೇಳುವುದು ಅವುಗಳ ಕರ್ತವ್ಯ ಎಂದು ಎಲ್ಲರೂ ತಿಳಿದುಕೊಂಡಿರುವ ಸಂದರ್ಭದಲ್ಲೇ ಸಾಣೇಹಳ್ಳಿ ಮಠದ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ತಮ್ಮ ರಂಗಭೂಮಿ ಪ್ರೀತಿಯಿಂದ ಜೀವನಪ್ರೀತಿಯನ್ನು ಹಂಚುತ್ತಿರುವುದು ಅಚ್ಚರಿ ಪಡುವ ವಿಷಯವೇ ಆಗಿದೆ. ಅದನ್ನು ತೋರಿಕೆಗೆ ಮಾಡಹೋಗದೆ ಬದ್ಧತೆಯಿಂದ ಪ್ರಯತ್ನಶೀಲರಾಗಿ, ಅಂತಹ ಪರಂಪರೆಯನ್ನು ಗಟ್ಟಿಗೊಳಿಸುವ ಧ್ಯೇಯವನ್ನು ಹೊತ್ತು ಅಲ್ಲಿ ಒಂದು ಭವ್ಯವಾದ ಬಯಲು ರಂಗಮಂದಿರವನ್ನು ಸಹ ಕಟ್ಟಿಸಿದ್ದಾರೆ. ಉತ್ತಮವಾದ ಸುಸಜ್ಜಿತ ಒಳಾಂಗಣ ರಂಗಮಂದಿರ ಇನ್ನೂ ಬರಬೇಕಿದೆ. ಅದಕ್ಕಾಗಿ ಎಲ್ಲ ಸಿದ್ಧತೆಗಳೂ ಆಗಿವೆ. ಇದು ಸಾಣೇಹಳ್ಳಿಯ ಬಹು ಮುಖ್ಯ ಕೊಡುಗೆ. ಇಂತಹ ಕೆಲಸ ಕಾರ್ಯಗಳೇ ಕರ್ನಾಟಕದ ಉಳಿದ ಮಠಗಳಿಗೆ ಮತ್ತು ಇನ್ನಿತರ ಸಂಸ್ಥೆಗಳಿಗೆ ಮಾದರಿಯಾಗಿ, ಒಂದು ರಂಗಬದ್ಧತೆಯ ಹಾಗೂ ಜೀವನಪ್ರೀತಿಯ ಪಾಠ ಹೇಳಿಕೊಡುತ್ತಿದೆ.

ಮಠಗಳ ಅಂಗೈ ಕೆಳಗೆ ಇರುವ ಎಂಥದೇ ಸಂಘಟನೆಯು ಮಠದ ವಾಚಿಕೆಯಾಗಿ ಬಿಡುವುದು ಸಹಜ. ಈ ಮಠ ಉಳಿದ ಮಠಗಳಂತಲ್ಲ ಎಂದು ಎಲ್ಲ ಮಠಗಳೂ ಕೂಡ ಹೇಳಿಕೊಳ್ಳುತ್ತವೆ. ಈಚೆಗಂತೂ ಎಲ್ಲ ಮಠಗಳೂ – ನಾವು ವಿಚಾರವಂತರು, ನಾವು ದಲಿತರ ಪರವಾಗಿದ್ದೇವೆ, ಮೌಢ್ಯತೆ ನಮ್ಮಲ್ಲಿಲ್ಲ, ಅಸ್ಪೃಶ್ಯತೆ ಹೋಗಲಾಡಿಸಲು ಪಣ ತೊಟ್ಟಿದ್ದೀವೆ, ಕೋಮು ಸೌಹಾರ್ದತೆ ನಮ್ಮ ಮಂತ್ರ – ಇನ್ನೂ ಏನೇನೋ ಹೇಳಿಕೊಳ್ಳುತ್ತಲೇ ಇರುತ್ತವೆ. ಹಾಗೆ ಕಾಣಿಸಿಕೊಳ್ಳುವಂತಹ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡು, ಮಾಧ್ಯಮಗಳಿಗೆ ಲಗ್ಗೆ ಇಟ್ಟು ಸಮಸ್ತರಿಗೆ ಎಲ್ಲ ಸಾಧ್ಯತೆಗಳಿಂದಲೂ ಗೊತ್ತುಮಾಡಿಸುವ ಸೋಗಲಾಡಿತನವನ್ನು ಪ್ರದರ್ಶಿಸುತ್ತವೆ.

ಮೂಲದಲ್ಲಿ ಸಾಣೇಹಳ್ಳಿ ಮಠ ಏನೇ ಆಗಿದ್ದರೂ ಅದು ನಾಟಕವನ್ನು ಬೆನ್ನು ಹತ್ತಿರುವುದು ಸ್ವಲ್ಪ ಸೋಜಿಗದ ವಿಷಯವೇ ಸರಿ. ಇದು ಬರೇ ಪ್ರಚಾರಕ್ಕಾಗಿ – ಶೋಕಿ ಎಂದೆನಿಸುವಂತೆ ನಡೆದುಕೊಂಡಿಲ್ಲ. ಅದರಲ್ಲೂ ಚೋರ ಚರಣದಾಸ, ಧರ್ಮಪುರಿಯ ಶ್ವೇತವೃತ್ತ, ದೊರೆ ಈಡಿಪಸ್, ಸಂಕ್ರಾಂತಿ ಮುಂತಾದ ನಾಟಕಗಳನ್ನು ಪ್ರಯೋಗಿಸಲು ಮುಂದಾದದ್ದೇ ಇದರ ಬಗ್ಗೆ ಒಮ್ಮೆ ಕಣ್ಣರಳಿಸಿ ನೋಡಲು ನಮ್ಮನ್ನು ಒತ್ತಾಯಿಸುತ್ತಿರುತ್ತದೆ. ಸಿ.ಬಸವಲಿಂಗಯ್ಯ, ನಟರಾಜ ಹೊನ್ನವಳ್ಳಿ, ಪ್ರಮೋದ್





ಶಿಗ್ಗಾಂವ್ ಮತ್ತು ಸ್ವತಃ ಸಿ.ಜಿ.ಕೆ.ಯವರೇ ಶಿವಸಂಚಾರಕ್ಕಾಗಿ ನಾಟಕಗಳನ್ನು ನಿರ್ದೇಶಿಸಿದ್ದಾರೆ. ವೀರಶೈವ ಧರ್ಮದ ಮಠವಾದ್ದರಿಂದ ವೀರಶೈವ ಧರ್ಮವನ್ನು ತಿಳಿಸಿಹೇಳುವ ಕಥಾನಕಗಳನ್ನು ಪ್ರದರ್ಶಿಸಿ ದೈವಭಕ್ತರ ಗಮನ ಸೆಳೆಯುವುದನ್ನು ಬಿಟ್ಟುಕೊಟ್ಟಿಲ್ಲ. ಅದರೊಂದಿಗೇ ವಿಚಾರ ಪ್ರಚೋದಕ ನಾಟಕಗಳನ್ನು ಉಣಬಡಿಸುವುದನ್ನೂ ತಪ್ಪಿಸಿಲ್ಲ. ಈ ಬದಲಾವಣೆ ಖಂಡಿತವಾಗಿ ಮೆಚ್ಚತಕ್ಕುದೇ ಆಗಿದೆ. ಬಹುಶಃ ಸಿ.ಜಿ.ಕೆ.ಯವರ ಪ್ರವೇಶ ಈ ಮಠಕ್ಕೆ ದಕ್ಕದೇ ಹೋಗಿದ್ದರೆ ಇವನ್ನೆಲ್ಲಾ ನಾವು ನೋಡುತ್ತಲೇ ಇರುತ್ತಿರಲಿಲ್ಲವೇನೋ. ಆದ್ದರಿಂದಲೇ ಏನೋ ಸಾಣೆಹಳ್ಳಿ ಮಠದ ನಾಟಕದ ವಿಷಯ ಬಂದರೆ ಅಲ್ಲಿನ ಸ್ವಾಮೀಜಿಗಳಿಗಿಂತ ಸಿ.ಜಿ.ಕೆ.ಯವರು ಹೆಚ್ಚು ಮಾತಿಗೆ ದಕ್ಕುತ್ತಾರೆ. ಅಂದಮೇಲೆ ತಾನೇ ತಾನಾಗಿ ಜನಪರ ಆಸಕ್ತಿಗಳನ್ನು ಹೊತ್ತುಕೊಂಡು, ವ್ಯವಸ್ಥೆಯ ನಿರಂತರ ಶೋಷಣೆಯನ್ನು ವಿವರಿಸುವ ನಾಟಕಗಳನ್ನು ಆಡಿಸಿಕೊಂಡು ವಿಚಾರವಂತರ ಅಥವಾ ನಾಸ್ತಿಕರ ಸಾತತ್ಯ ಹಾಗೂ ಸಾಮೀಪ್ಯವನ್ನು ಬೆಳೆಸಿಕೊಂಡು ತಿರುಗಾಡುತ್ತಿಲ್ಲ ಎಂದೇ ಅರ್ಥವಾಗುತ್ತದೆ. ಆದರೆ ಈಗ ಈ ಮಠ ವಿಚಾರಕ್ಕೆ ಹೆಚ್ಚು ಸಮೀಪದಲ್ಲಿದೆ ಅಥವಾ ಇಲ್ಲೀವರೆಗೂ ಹೀಗೆ ಬೆಳೆದಿದೆ ಎಂದು ಕಾಣುತ್ತಿದ್ದೇವೆ. ಇದಕ್ಕೆ ನಿದರ್ಶನವಾಗಿ ಮಠದ ಚಿಂತನ ವೇದಿಕೆ ಎದ್ದು ಕಾಣುತ್ತದೆ. ೨೦೦೧ರಲ್ಲಿ ಮತೀಯವಾದ - ಜಾತೀಯತೆ ಕುರಿತು ವಿಚಾರ ಸಂಕಿರಣ ನಡೆಸಿದ್ದು, ಮತೀಯವಾದ - ಭಯೋತ್ಪಾದನೆ ಮತ್ತು ಧರ್ಮ ಹಾಗೂ ಜನಸಂಸ್ಕೃತಿ ಎಂಬ ಗ್ರಂಥಗಳನ್ನು ಹೊರತಂದುದು, ಶಿವಕುಮಾರ ಪ್ರಶಸ್ತಿಯನ್ನು ರಂಗಭೂಮಿಯಲ್ಲಿ ಕೆಲಸ ಮಾಡುತ್ತಿರುವ ದಿಗ್ಗಜರುಗಳಿಗೆ ಪ್ರದಾನಮಾಡುತ್ತಿರುವುದೂ ಸಹ ಪ್ರಮುಖವಾಗಿ ಕಾಣುತ್ತದೆ.

ಧರ್ಮ-ದೇವರುಗಳು ಮುಂತಾದ ಆಸ್ತಿಕತೆಯಿಂದ ದೂರವಾದ ಜನಗಳು ಸಹ ಈ ಮಠದ ಕಡೆ ಆಕರ್ಷಿತವಾಗುವಂತೆ ಮಾಡಿರುವುದೇ ನಾಟಕ. ತನಗೂ ಈ ಒಂದು ಬಗೆಯ ದಿಕ್ಕು ಸಿಕ್ಕಿರುವುದು ಮಠವು ಸಂಭ್ರಮಿಸಬೇಕಾದ ಸಂಗತಿ. ಸಿ.ಜಿ.ಕೆ. ಈಗ ಇಲ್ಲ. ಮಠಕ್ಕೆ ಅಂತಹ ಒಂದು ಒಳನೋಟಗಳನ್ನು ಕೊಡುವವರು ಯಾರೂ ಇಲ್ಲ. ಸ್ವಾಮೀಜಿಯವರಿಗೂ ಒಂದು ಬಗೆಯ ಮಿತಿಗಳಿರುತ್ತವೆ. ಆದರೆ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿಯವರು ಸಂಕುಚಿತತೆಯನ್ನು ಮೀರಿ ಮುಂದೂ ಸಹ ಇನ್ನೂ ಹೆಚ್ಚಿನ ವಿಚಾರಪೂರ್ಣ, ಚಿಂತನಶೀಲ, ವೈಜ್ಞಾನಿಕ ತಿಳುವಳಿಕೆಗಳನ್ನು ಸಮಸ್ತರಿಗೂ ಮುಟ್ಟಿಸುವ ಕೆಲಸವನ್ನು ವಿಚಾರ ಸಂಕಿರಣ, ಚಿತ್ರಕಲೆ, ಮತ್ತು ರಂಗಭೂಮಿಯ ಪ್ರಯೋಗಗಳ ಮೂಲಕ ಮಾಡಲೆತ್ನಿಸಿದರೆ ಚಿಂತಕರು, ಸಾಹಿತಿ-ಕಲಾವಿದರುಗಳು, ರಂಗಾಸಕ್ತರುಗಳೇಕೆ, ಎಲ್ಲ ಜನತೆ ಮಠವನ್ನು ಪ್ರೀತಿಸುವತ್ತ ಹೊರಳುವುದು ಸಾಧ್ಯ. ಇಂತಹ ಸಾಧ್ಯತೆಯೇ ಸಾಣೇಹಳ್ಳಿಯನ್ನು ವಿಶೇಷವಾಗಿ ಪರಿಗಣಿಸಲು ಸಾಧ್ಯವಾಗಿಸಿರುವುದು.

**ಎಚ್. ವಿ. ವೇಣುಗೋಪಾಲ್**
ನಂ.೫೮, ಪುಟ್ಟಣ್ಣ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦ ೦೪

# ಸಿಂದಘಟ್ಟ ಗ್ರಾಮದಲ್ಲಿ ಧರ್ಮ ಸಾಮರಸ್ಯದ ಪ್ರತೀಕ



# 'ಕಲ್ಲು ಮಸೀದಿ'

**ಮ**ತ್ತೆ ಹೊಗೆಯಾಡುತ್ತಿರುವ ಹುಬ್ಬಳ್ಳಿಯ ಈದ್ಗಾ ವಿವಾದ...!

ಭಟ್ಕಳದಲ್ಲಿ ಕೋಮುಗಲಭೆ...!

ಮುಂಬೈಯಲ್ಲಿ ಸರಣಿ ಬಾಂಬ್ ಪ್ರಕರಣ...!

ಈ ಎಲ್ಲ ಪ್ರಚಲಿತ ವಿದ್ಯಮಾನಗಳನ್ನು ಗಮನಿಸಿದರೆ ಹಿಂದೂಗಳು ಮುಸಲ್ಮಾನರನ್ನು... ಮುಸಲ್ಮಾನರು ಹಿಂದೂಗಳನ್ನು ಗುಮಾನಿಯಿಂದ ನೋಡುವಂತಾಗಿದೆ; ಹಳ್ಳಿಯಲ್ಲಿ ನೆಮ್ಮದಿಯಿಂದ ಬದುಕುತ್ತಿರುವ ಅಲ್ಪಸಂಖ್ಯಾತರ ಎದೆಯಲ್ಲಿ ಆತಂಕ ಮೂಡಿದೆ. ಪರಿಸ್ಥಿತಿ ಹೀಗಿರುವಾಗ ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನ ಪುಟ್ಟಹಳ್ಳಿ ಸಿಂದಘಟ್ಟ ಗ್ರಾಮದ ಹಿಂದೂ-ಮುಸ್ಲಿಂ ನಾಗರಿಕರು ಇದ್ಯಾವುದಕ್ಕೂ ತಲೆಕೆಡಿಸಿಕೊಳ್ಳದೆ ನೂರಾರು ವರ್ಷಗಳಿಂದ ಅಣ್ಣ-ತಮ್ಮಂದಿರಂತೆ ಬದುಕು ನಡೆಸಿ ದೇಶಕ್ಕೆ ಮಾದರಿಯಾಗಿದ್ದಾರೆ.

ಸಿಂದಘಟ್ಟದ ರಂಗಸ್ವಾಮಿ ನಮ್ಮನ್ನು ಮಸೀದಿಯ ಬಳಿ ಕರೆದುಕೊಂಡು ಹೋದಾಗ ಬಿಸಿಲಿನ ಬೇಗೆ ತಳಮಳ ಗುಟ್ಟಿಸಿತ್ತು. ಮಸೀದಿಯ ಒಳಗೆ ಕೆಲವರು 'ನಮಾಜು' ಮಾಡುತ್ತಿದ್ದರು. ಅಲ್ಲೇ ಇದ್ದ ನಲ್ಲಿಯಿಂದ ನಾವು ಕೈ-ಕಾಲು ತೊಳೆದುಕೊಂಡು ಮಸೀದಿಯ ಪಡಸಾಲೆಯಲ್ಲಿ ಕುಳಿತುಕೊಂಡಾಗ ದೇಹಕ್ಕೆ ತುಸು ಸಮಾಧಾನವೆನಿಸಿದರೂ ನಮ್ಮ ಆತಂಕ ಹಾಗೆಯೇ ಇತ್ತು...!

ಇದು ಕ್ರಿ.ಶ. ೧೫೩೮ರಲ್ಲಿ ಸಂಪೂರ್ಣವಾಗಿ ಕಲ್ಲಿನಿಂದಲೇ ನಿರ್ಮಾಣವಾಗಿರುವ ರಾಜ್ಯದ ಅತ್ಯಂತ ಪ್ರಾಚೀನ ಮಸೀದಿ ಎನ್ನುವುದು ಗಮನಾರ್ಹ.

ಈ ಮಸೀದಿಯನ್ನು ಬಾಬುಸೆಟ್ಟಿ ಎಂಬುವವನು ಕಟ್ಟಿಸಿರುವ ಬಗ್ಗೆ ಸ್ಥಳೀಯ ಶಾಸನದಲ್ಲಿ ಉಲ್ಲೇಖವಿದೆ. ಈ ಮಸೀದಿಗಾಗಿ ರಂಗೈನಾಯಕನು ಶಿವಪುರ ಗ್ರಾಮದಲ್ಲಿ ಹಬೀಬನಿಗಾಗಿ ಒಂದು ಮನೆ ಮತ್ತು ಮಸೀದಿಯ ನಿರ್ವಹಣೆಗ್ಗಾಗಿ ೧೪ ಗುದ್ಯಾಣಗಳು (ಚಿನ್ನದ ನಾಣ್ಯಗಳು) ಹಾಗೂ ಅದರ ಮೇಲಣ ಕಾಣಿಕೆಯನ್ನು ಸರ್ವಮಾನ್ಯವಾಗಿ ಬಿಟ್ಟಿದ್ದಾನೆ.



ಇನ್ನೊಂದು ಸ್ವಾರಸ್ಯಕರ ಸಂಗತಿ ಎಂದರೆ ಈ ಮಸೀದಿಯು ಗ್ರಾಮದ ಮಧ್ಯಭಾಗದಲ್ಲಿದೆ. ಆದಕಾರಣ ಇದನ್ನು ಶಾಸನದಲ್ಲಿ ''ಒಳಕೆರೆಯಲ್ಲಿ ಇರುವ ಕಲ್ಲು ಮಸೀದಿ'' ಎಂದು ಕರೆಯಲಾಗಿದೆ. ಈ ಶಾಸನವು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿದೆ.

ಹಿಂದೂ ವಾಸ್ತುಶೈಲಿಯ ಮಾದರಿಯಲ್ಲಿರುವ ಈ ಮಸೀದಿ ಮತ್ತು ಒಂಭತ್ತು ಅಂಕಣದ ಪ್ರಾರ್ಥನಾ ಸ್ಥಳ 'ಮುಸಲ್ಲಾ' ಅತ್ಯಂತ ಕಲಾತ್ಮಕವಾಗಿವೆ. ಪ್ರಾರ್ಥನೆ ಮಾಡುವ ಮುಂಭಾಗದ ಗೋಡೆಯ ಮೇಲಿನ ಕಮಾನು ಕಲ್ಲಿನಿಂದಲೇ ಕಂಡರಿಸಲಾಗಿದೆ; ಇಲ್ಲಿಯ ಕಂಬಗಳು ಮತ್ತು ಬೋದಿಗೆಯನ್ನು ದೇವಳದ ವಾಸ್ತುಶೈಲಿಯಲ್ಲಿಯೇ ನಿರ್ಮಿಸಲಾಗಿದೆ.

ಮೂರು ಅಂಕಣದ ಹೊರ ಪ್ರಾಕಾರ ಕೂಡ ಕಲ್ಲು ಕಂಬಗಳಿಂದ ಕೂಡಿದೆ. ಮುಂಭಾಗದ ಗೋಪುರಗಳನ್ನು ಮಾತ್ರ ಇತ್ತೀಚೆಗೆ ನವೀಕರಿಸಿಕೊಳ್ಳಲಾಗಿದೆ. ಒಳಭಾಗದಲ್ಲಿ ಬಿಳಿಯ ಎನಾಮಲ್ ಬಣ್ಣ ಬಳಿಯಲಾಗಿದೆ.

ಈ ಮಸೀದಿಯ ಶಾಸನದ ಕೊನೆಯ ಭಾಗದ ಕೆಲವು ಸಾಲುಗಳು ಗಮನ ಸೆಳೆಯುತ್ತವೆ: ''ಯಾರಾದರೂ ಈ ಮಸೀದಿಯನ್ನು ಹಾಳು ಮಾಡಿದರೆ ಅವರು ತಮ್ಮ ತಂದೆ-ತಾಯಿಯನ್ನು ವಾರಣಾಸಿಯಲ್ಲಿ ಕೊಂದ ಪಾಪಕ್ಕೆ ಗುರಿಯಾಗುತ್ತಾರೆ...'' ಈ ಮೂಲಕ ನಮ್ಮ ಕ್ಷುಲ್ಲಕ ಮಾನವರಿಗೆ ಎಚ್ಚರಿಕೆ ನೀಡಲಾಗಿದೆ; ಇದು ನಮ್ಮ ಪೂರ್ವಿಕರ ಮನವಿಯೂ ಹೌದು...

ಈ ಶಾಸನ ಪ್ರಕಟವಾಗುವ ಕಾಲದಲ್ಲಿ ವಿಜಯನಗರ ಹಾಗೂ ಬಹಮನಿ ಸುಲ್ತಾನರ ನಡುವಿನ ವೈಷಮ್ಯ ಉತ್ಕಟಾವಸ್ಥೆಗೇರಿತ್ತು. ಆದರೂ ಈ ಗ್ರಾಮದ ಹಿಂದೂ-ಮುಸಲ್ಮಾನರ ಧರ್ಮ ಸಾಮರಸ್ಯಕ್ಕೆ ಕುಂದುಬರಲಿಲ್ಲ.

''ಪುರಾತನ ಕಾಲದಿಂದಲೂ ಇಲ್ಲಿಯ ಮುಸ್ಲಿಂ ಕುಟುಂಬಗಳ ಮುಖ್ಯ ಕಸುಬು ಕೈರಾಟೆಯಿಂದ ಉಡದಾರದ ಮಾದರಿಯಲ್ಲಿ ರೇಷ್ಮೆ ಎಳೆ ತಯಾರಿಸುವುದಾಗಿತ್ತು. ಇಲ್ಲಿಯ ಪ್ರತಿ ಮನೆಯಲ್ಲೂ ಕೈರಾಟೆಗಳಿದ್ದವು...'' ಎನ್ನುತ್ತಾರೆ ಮಸೀದಿಯ ಕಾರ್ಯದರ್ಶಿ ಮಕಬಲ್ ಅಹಮದ್.

''ಇಲ್ಲಿ ತಯಾರಾಗುತ್ತಿದ್ದ ರೇಷ್ಮೆಯ ಎಣಿಕೆದಾರಗಳನ್ನು ವಿ.ಪಿ. ಮೂಲಕ ಮಂಗಳೂರಿಗೆ ಕಳುಹಿಸಿ ಮಾರಾಟ ಮಾಡಲಾಗುತ್ತಿತ್ತು. ಟಿಪ್ಪು ಸುಲ್ತಾನನ ಕಾಲದಲ್ಲಿ ಈ ಕಸುಬು ಉತ್ಕೃಷ್ಟವಾಗಿತ್ತು..., ೧೯೬೨ರ ವರೆಗೂ ಈ ಗುಡಿ ಕೈಗಾರಿಕೆ ಚೆನ್ನಾಗಿಯೇ ಇತ್ತು...'' ಎಂದು ಇಲ್ಲಿಯ ಜನ ತಮ್ಮ ಗತಕಾಲವನ್ನು ನೆನಪಿಸಿಕೊಳ್ಳುತ್ತಾರೆ. ನಿವೃತ್ತ ಶಿಕ್ಷಕರಾದ ನಜೀರ್ ಅಹಮದ್ ಈಗ ಸ್ಥಳೀಯವಾಗಿ ಕೃಷಿ, ಸಂತೆ ವ್ಯಾಪಾರ, ಪ್ಲಾಸ್ಟಿಕ್ ವಸ್ತುಗಳ ಮಾರಾಟದಿಂದ ಬದುಕು ನಡೆಸುತ್ತಾರೆ.

ಈ ಗ್ರಾಮದ ಒಂದು ಬೀದಿಯನ್ನು 'ಸಾಬರಗೇರಿ' ಎನ್ನುತ್ತಾರೆ. ಆದರೆ ಇಲ್ಲಿಯ ಮನೆಗಳು, ಇವರ ಉಡುಪು, ಭಾಷೆ ಎಲ್ಲವೂ ಗ್ರಾಮೀಣ ಶೈಲಿಯಲ್ಲಿಯೇ ಇದೆ.

ಅಂದಿನಿಂದ ಇಂದಿನವರೆಗೆ ಎಂದೂ ಜಗಳವಾಡದೆ, ತಮ್ಮ ತಮ್ಮ ಹಬ್ಬಗಳು ಬಂದಾಗ ಎರಡು ಕೋಮಿನವರು ಅವರದೇ ಹಬ್ಬವೆಂಬಂತೆ ಪರಸ್ಪರ ಗೌರವಿಸುತ್ತ ಬದುಕುತ್ತಿದ್ದಾರೆ... ಬದುಕುತ್ತಾರೆ! ಮೊದಲು ಮಸೀದಿಯ ಬಳಿ ಹೋದಾಗ ನಮಗಿದ್ದ ಆತಂಕ ಮಾಯವಾಗಿ ಮುಗುಳುನಗುತ್ತಾ ವಿದಾಯ ಹೇಳಿದವು...



ಚಿತ್ರ - ಲೇಖನ:
**ಹರವು ದೇವೇಗೌಡ**
ಹವ್ಯಾಸಿ ಪತ್ರಕರ್ತ
ಹರವು - [illegible]
ಪಾಂಡವಪುರ ತಾಲ್ಲೂಕು
ಮಂಡ್ಯ ಜಿಲ್ಲೆ

# ಇತಿಹಾಸದ ಅಧ್ಯಯನ

**ಮ. ಶ್ರೀ. ಮುರಳಿಕೃಷ್ಣ**

‘ಇತಿಹಾಸ’ದ ಅರ್ಥದ ಬಗ್ಗೆ ಹಲವರು ತಮ್ಮದೇ ಆದ ಅಭಿಪ್ರಾಯಗಳನ್ನು ನೀಡಿದ್ದಾರೆ. ಚರಿತ್ರೆಯ ಪಿತಾಮಹನೆಂದು ಗುರುತಿಸಲ್ಪಡುವ ಗ್ರೀಕ್ ಇತಿಹಾಸಕಾರ ಹೆರೊಡೋಟಸ್‌ನ ಪ್ರಕಾರ, ''ಮುಂದಿನ ಪೀಳಿಗೆಯು ನೆನಪಿಡಬೇಕಾದ ಮಹಾನ್ ವೀರರ ಅಥವಾ ಮಹತ್ವಪೂರ್ಣ ಘಟನೆಗಳ ದಾಖಲೆಯೇ ಇತಿಹಾಸವಾಗಿದೆ.'' ಸಂತ ಅಗಸ್ಟೈನ್, ಫ್ರೀಮನ್, ಥಾಮಸ್ ಕಾರ್ಲೈಲ್, ಕಾರ್ಲ್ ಮಾರ್ಕ್ಸ್, ಅರ್ನಾಲ್ಡ್ ಟಾಯ್ನ್‌ಬಿ, ಜೆ. ಬಿ. ಬ್ಯೂರಿ, ಭಾರತದವರೇ ಆದ ಜಾದುನಾಥ್ ಸರ್ಕಾರ್, ರೊಮಿಲ ಥಾಪರ್, ಬಿಪನ್ ಚಂದ್ರ, ಜವಾಹರಲಾಲ್ ನೆಹರು ಮುಂತಾದವರು ಇತಿಹಾಸವನ್ನು ಭಿನ್ನ ರೀತಿಯಲ್ಲಿ ಅರ್ಥೈಸಿದ್ದಾರೆ.

ಇತಿಹಾಸವನ್ನು ಕರಾರುವಾಕ್ಕಾಗಿ ವಿಶ್ಲೇಷಿಸುವ ಪ್ರಕ್ರಿಯೆ ಬಹಳ ಸಂಕೀರ್ಣವಾದ್ದು. ಇದಕ್ಕಾಗಿ ಅನೇಕ ಆಕರಗಳು ಹಾಗೂ ಪರಿಕರಗಳನ್ನು ಅವಲಂಬಿಸಬೇಕು. ಲಿಖಿತ ದಾಖಲೆಗಳು ದೊರಕದಿದ್ದಾಗ, ಆಯಾಯ ಕಾಲಘಟ್ಟದ ಸಾಹಿತ್ಯಿಕ, ಜನಪದೀಯ ಅಂಶಗಳಲ್ಲಿ ಅಡಗಿರಬಹುದಾದ ಚರಿತ್ರೆಯನ್ನು ಗುರುತಿಸಿ, ಹೆಕ್ಕಿ ತೆಗೆಯಬೇಕು. ಇದು ಕ್ಲಿಷ್ಟಕರವಾದ ಕೆಲಸ. ಆದರೆ ಇತಿಹಾಸವನ್ನು ವಿಶ್ಲೇಷಿಸುವಾಗ, ಅನೇಕ ಇತಿಹಾಸಕಾರರು ವಿಭಿನ್ನ ಮಾರ್ಗಗಳನ್ನು ಅನುಸರಿಸುತ್ತಾರೆ. ಕೆಲವರು ವಾಮಮಾರ್ಗಗಳನ್ನು ಅನುಸರಿಸುತ್ತಾರೆ; ಇತಿಹಾಸವನ್ನು ತಿರುಚುತ್ತಾರೆ. ಈ ರೀತಿಯ ವಿಶ್ಲೇಷಣೆಗೆ ಹಲವು ಉದಾಹರಣೆಗಳನ್ನು ನೀಡಬಹುದು.

ನಮ್ಮ ರಾಷ್ಟ್ರದ ಇತಿಹಾಸ ಬಹುಪ್ರಾಚೀನವಾದುದು (ಪ್ರಾಚೀನ ಕಾಲದಲ್ಲಿ ಭಾರತವು ಒಂದು ರಾಷ್ಟ್ರ ಎಂಬ ಪರಿಕಲ್ಪನೆಯಿರಲಿಲ್ಲ ಎಂಬುದು ಗಮನಾರ್ಹ ವಿಚಾರ). ಬೇರೆ ಶಾಸ್ತ್ರಗಳ ಜೊತೆ ತುಲನೆ ಮಾಡಿದರೆ, ಪ್ರಾಚೀನ ಭಾರತೀಯರು ತಮ್ಮ ಚರಿತ್ರೆಯ ಬಗ್ಗೆ ಉದಾಸೀನರಾಗಿದ್ದರೆಂದು ಹೇಳಬಹುದು. ಖ್ಯಾತ ಇತಿಹಾಸಜ್ಞ ಅಲ್ಬೆರೂನಿ ಭಾರತಕ್ಕೆ ಕ್ರಿ.ಶ. ೧೧ನೇ ಶತಮಾನದಲ್ಲಿ ಭೇಟಿ ನೀಡಿದ. ಅವನಿಂದ ರಚಿತವಾದ ‘ತಾರಿಕ್-ಎ-ಹಿಂದ್’ ಎಂಬ ಗ್ರಂಥದಲ್ಲಿ ಭಾರತೀಯರ ಚಾರಿತ್ರಿಕ ಪ್ರಜ್ಞೆಯ ಬಗ್ಗೆ ತನ್ನ ಅಭಿಪ್ರಾಯಗಳನ್ನು ದಾಖಲಿಸಿದ್ದಾನೆ. ''ಪ್ರಾಚೀನ ಭಾರತೀಯರು ಅನೇಕ ವಿಷಯಗಳಲ್ಲಿ ಪಾರಂಗತರಾಗಿದ್ದರೂ, ತಮ್ಮ ಇತಿಹಾಸ ರಚನೆಯತ್ತ ಶ್ರದ್ಧೆ ತೋರಿಸಲಿಲ್ಲ, ರಾಜ್ಯಭಾರ ಮಾಡಿದ ರಾಜರ ದಾಖಲೆಗಳ ಕಾಲಾನುಕ್ರಮಣಿಕೆಯ ಬಗ್ಗೆ ಅಸಡ್ಡೆಯ ಮನೋಭಾವ ಹೊಂದಿದ್ದಾರೆ. ಯಾವುದಾದರೊಂದು ಘಟನೆಯ ಬಗ್ಗೆ ಯಾರನ್ನಾದರೂ ವಿಚಾರಿಸಿದರೆ, ಒಂದೇ ಸಮನೆ ಕಥೆ ಹೇಳಲು ತೊಡಗುತ್ತಾರೆ'' ಎಂಬ ಅವನ ಹೇಳಿಕೆಗಳಲ್ಲಿ ವಾಸ್ತವಾಂಶಗಳಿವೆ.

ನಮ್ಮಲ್ಲಿ ಅನೇಕರಿಗೆ, ಕೆಲವು ಇತಿಹಾಸಕಾರರನ್ನೂ ಒಳಗೊಂಡು, ಭಾರತವು ವಿದೇಶಿ ಆಕ್ರಮಣಕಾರರು ದಾಳಿ ಮಾಡುವ ಮುನ್ನ ಉಚ್ಛ್ರಾಯ ಸ್ಥಿತಿಯಲ್ಲಿತ್ತು, ನಂತರ ಎಲ್ಲವೂ ಏರುಪೇರಾದವು; ನಾಮಾವಶೇಷಗೊಂಡವು ಎಂಬ ಅಭಿಮತ ಜನಜನಿತವಾಗಿದೆ. ಆದರೆ ಈ ನಿಲುವಿನಲ್ಲಿ ‘ಸತ್ಯವೆಷ್ಟು, ಮಿಥ್ಯೆ ಎಷ್ಟು’ ಎಂಬುದು ಯೋಚನಾರ್ಹ ವಿಷಯ.

ಆರ್ಯರಿಂದ ಶುರುವಾದ ವಿದೇಶಿಯರ ಆಕ್ರಮಣ, ಪ್ರಬಲ ವಸಾಹತುಶಾಹಿ ಶಕ್ತಿಯಾಗಿದ್ದ ಬ್ರಿಟಿಷರ ಆಳ್ವಿಕೆ ಪತನವಾದಾಗ ಪರ್ಯವಸಾನಗೊಂಡಿತು. ಅನೇಕರು ನಮ್ಮ ಮೇಲೆ ದಾಳಿ ಮಾಡಿದ್ದಾರೆ. ಇದು ಚಾರಿತ್ರಿಕ ಸತ್ಯ. ಆಕ್ರಮಣಗಳಿಗೆ ಅನೇಕ ಆಯಾಮಗಳಿರುತ್ತವೆ. ನಮ್ಮ ರಾಷ್ಟ್ರದ ಮೇಲೆ ದಂಡೆತ್ತಿ ಬಂದ ಆಕ್ರಮಣಕಾರರು ಮತ್ತು ದೇಶೀಯರ ನಡುವಿನ ಕಾದಾಟಗಳಿಂದ ರಕ್ತಪಾತ, ಹಿಂಸಾಚಾರ ಜರುಗಿರುವುದನ್ನು ಕಾಣಬಹುದು. ಅದರಂತೆ, ಇನ್ನೂ ಅನೇಕ ಬಗೆಯ ಕೊಡುಕೊಳುಗಳು, ವಿನಿಮಯಗಳು ಜರುಗಿದ್ದೂ ಗಮನೀಯವಾದ ಅಂಶ. ವ್ಯಾಪಾರದಿಂದ ಹಿಡಿದು ಸಂಸ್ಕೃತಿಯವರೆಗೆ ವಿವಿಧ, ವಿಭಿನ್ನ, ಜಟಿಲ ಪ್ರಕ್ರಿಯೆಗಳು ತಲೆದೋರಿ ನಮ್ಮ ಸಮಾಜವನ್ನು ರೂಪಿಸಿದವು. ಆದರೆ ವಿದೇಶೀ ಆಕ್ರಮಣಕಾರರ ಬಗ್ಗೆ ವಿಶ್ಲೇಷಿಸುವಾಗ ಒಂದು ಅಂಶವನ್ನು ಮರೆಯಬಾರದು. ಅದೇಂದರೆ, ವಸಾಹತುಶಾಹಿಯನ್ನು ಪ್ರತಿನಿಧಿಸುತ್ತಿದ್ದ ಬ್ರಿಟಿಷರು, ಪೋರ್ಚುಗೀಸರು, ಫ್ರೆಂಚರು ಹಾಗೂ ಡಚ್ಚರು ಮತ್ತು ಹಿಂದಿನ ಶತಮಾನಗಳ ಆಕ್ರಮಣಕಾರರಿಗೂ ಇದ್ದ ವ್ಯತ್ಯಾಸ. ವಸಾಹತುಶಾಹಿ ಶಕ್ತಿಗಳಿಗೆ, ಅದರಲ್ಲೂ ಮುಖ್ಯವಾಗಿ ಬ್ರಿಟಿಷರಿಗೆ ನಮ್ಮ ರಾಷ್ಟ್ರವನ್ನು ಕೊಳ್ಳೆಹೊಡೆದು, ಸಂಪತ್ತನ್ನು ತಮ್ಮ ನಾಡುಗಳಿಗೆ ಕೊಂಡೊಯ್ಯುವ ಧ್ಯೇಯೋದ್ದೇಶವಿತ್ತು. ಆದರೆ ವಸಾಹತುಶಾಹಿ ಕಾಲದ ಹಿಂದಿನ ಆಕ್ರಮಣಕಾರರಲ್ಲಿ ಹಲವರು ಇಲ್ಲೇ ನೆಲಸಿ, ದೇಶೀಯ ಜನರೊಡನೆ ಬೆರೆತು ಮಣ್ಣಾದರು.

ಇತಿಹಾಸವನ್ನು ಅರ್ಥೈಸುವ ಇನ್ನೊಂದು ಬಗೆಯ ಗುಂಪಿನವರು ಇದ್ದಾರೆ. ಆ ಗುಂಪಿನಲ್ಲಿ ಕೆಲವು ಚರಿತ್ರಕಾರರೂ ಇದ್ದಾರೆ. ಅಂಥವರು ಆಕ್ರಮಣಕಾರರ ಜೊತೆ, ಧರ್ಮಗಳ ದಾಳಿಗಳ ಬಗ್ಗೆ ತಮ್ಮದೇ ಆದ ವಿಚಾರಸರಣಿಯನ್ನು ಹರಿಬಿಡುತ್ತಾರೆ. ಉದಾಹರಣೆಗೆ, ಇಸ್ಲಾಂ ಧರ್ಮದ ಬಗ್ಗೆ ಗಮನಹರಿಸೋಣ... ಅವರ ಪ್ರಕಾರ ಇಸ್ಲಾಂ ಧರ್ಮ ನಮ್ಮ ನಾಡಿಗೆ ಖಡ್ಗಗಳ ಮುಖಾಂತರ ಪ್ರವೇಶ ಮಾಡಿ, ನಂತರ ಅವುಗಳಿಂದಲೇ ಇಲ್ಲಿ ನೆಲೆವೂರಿತು. ಅವರು ಈ ಅಂಶಕ್ಕೆ ಹೆಚ್ಚಿನ ಒತ್ತುನೀಡಿ, ರಂಜಕವಾಗಿ ತಮ್ಮ ವಾದಗಳನ್ನು ಮಂಡಿಸುತ್ತಾರೆ. ಈ ಗುಂಪಿನ ಇನ್ನೂ ಕೆಲವರು ಮೊಘಲರ ಆಗಮನದ ತರುವಾಯ ಹಿಂದೂ ಧರ್ಮದ ಅಧಃಪತನ ಶುರುವಾಯಿತೆಂದು ವಾದಿಸುತ್ತಾರೆ. ಅಲ್ಲದೆ, ಮುಸಲ್ಮಾನ ದೊರೆಗಳೆಲ್ಲಾ ಕ್ರೂರಿಗಳು ಎಂಬ ಅತಿರೇಕದ ವಿಚಾರವನ್ನು ಮುಂದಿಡುತ್ತಾರೆ. ಆದರೆ, ಈ ದೃಷ್ಟಿಕೋನಗಳಲ್ಲಿ ಕಾಳೆಷ್ಟು, ಜೊಳ್ಳೆಷ್ಟು ಎಂಬುದನ್ನು ಅರಿಯಬೇಕು. ಅಂತೆಯೇ, ಅತಿ ಸರಳೀಕೃತ ಸೂತ್ರಗಳಿಂದ, ಅವೈಜ್ಞಾನಿಕ, ತಳಸ್ಪರ್ಶರಹಿತ ವಿಧಾನಗಳಿಂದ ಇತಿಹಾಸವನ್ನು ಅಧ್ಯಯನ ಮತ್ತು ವಿಮರ್ಶೆಗಳಿಗೆ ಒಡ್ಡಿದಾಗ ಕಂಡುಬರುವ ಕಾಣ್ಕೆಗಳು ವಸ್ತುನಿಷ್ಠವಾಗಿರಬೇಕಿಲ್ಲ ಎಂಬುದು ಮನನಯೋಗ್ಯ ವಿಚಾರ.

ಇಸ್ಲಾಂ ಭಾರತದಲ್ಲಿ ಹಿಂಸೆಯ ಮೂಲಕ ಅಸ್ತಿತ್ವಕ್ಕೆ ಬಂದಿತು ಎಂಬ ಸಂಗತಿ ಅರ್ಧ ಸತ್ಯ. ಅಂದಿನ ಕಾಲಘಟ್ಟದಲ್ಲಿ ನಮ್ಮ ಸಮಾಜದಲ್ಲಿ ಹಿಂದೂ ಧರ್ಮದ ಅನೇಕ ಅನಿಷ್ಟ ಪದ್ಧತಿಗಳು, ಆಚರಣೆಗಳು ಹಲವು ಕೆಳಸ್ತರದ ಸಮುದಾಯಗಳಿಗೆ ಉಸಿರುಕಟ್ಟಿಸುವಂಥ ವಾತಾವರಣವನ್ನು ಸೃಷ್ಟಿಸಿದ್ದವು. ಜಾತಿಪದ್ಧತಿ, ಅಸ್ಪೃಶ್ಯತೆಯಂಥ ಕರಾಳ, ಅಮಾನವೀಯ ಸಂಪ್ರದಾಯಗಳು ಅಂತಹ ಸಮುದಾಯದವರನ್ನು ಘಾಸಿಗೊಳಿಸಿದ್ದವು. ಅವರಲ್ಲಿ ಕೆಲವರು ಇಸ್ಲಾಂ ಧರ್ಮದಲ್ಲಿ ತಮ್ಮ ಘನತೆಯನ್ನು ಕಂಡುಕೊಂಡು ಮತಾಂತರ ಹೊಂದಿರಬಹುದಾದ ಸಾಧ್ಯತೆಗಳಿವೆ ಎಂಬುದನ್ನು ಕಡೆಗಣಿಸುವಂತಿಲ್ಲ. ಅಂದರೆ, ಅಂದಿದ್ದ ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳು ಮತಾಂತರಕ್ಕೆ ಪೂರಕವಾದ ಸನ್ನಿವೇಶಗಳನ್ನು ನಿರ್ಮಿಸಿದ್ದವು ಎಂಬುದನ್ನು ಪರಿಗಣಿಸಬೇಕು. ಈ ಗಹನವಾದ ಅಂಶಗಳನ್ನು ಕಡೆಗಣಿಸಿದ್ದೇ ಆದರೆ ನಾವು

ನಮ್ಮಲ್ಲಿ ಅನೇಕರಿಗೆ, ಕೆಲವು ಇತಿಹಾಸಕಾರರನ್ನೂ ಒಳಗೊಂಡು, ಭಾರತವು ವಿದೇಶಿ ಆಕ್ರಮಣಕಾರರು ದಾಳಿ ಮಾಡುವ ಮುನ್ನ ಉಚ್ಛ್ರಾಯ ಸ್ಥಿತಿಯಲ್ಲಿತ್ತು, ನಂತರ ಎಲ್ಲವೂ ಏರುಪೇರಾದವು; ನಾಮಾವಶೇಷಗೊಂಡವು ಎಂಬ ಅಭಿಮತ ಜನಜನಿತವಾಗಿದೆ. ಆದರೆ ಈ ನಿಲುವಿನಲ್ಲಿ ‘ಸತ್ಯವೆಷ್ಟು, ಮಿಥ್ಯೆ ಎಷ್ಟು’ ಎಂಬುದು ಯೋಚನಾರ್ಹ ವಿಷಯ.

ಇತಿಹಾಸವನ್ನು ಅಧ್ಯಯನ ಅಥವಾ ವಿಶ್ಲೇಷಣೆ ಮಾಡುತ್ತಿರುವ ವಿಧಾನ ಸರಿಯಾದುದಲ್ಲ ಎಂದೇ ಹೇಳಬೇಕಾಗುತ್ತದೆ. ಪೂರ್ವಗ್ರಹಪೀಡಿತವಲ್ಲದ ದೃಷ್ಟಿಕೋನದಿಂದ ಇತಿಹಾಸದ ಹಲವು ಮಗ್ಗಲುಗಳನ್ನು ವಿಶ್ಲೇಷಿಸಿದಾಗ ಮಾತ್ರ ನಾವು ಇತಿಹಾಸವನ್ನು ಸರಿಯಾಗಿ ಅರಿತಿದ್ದೇವೆ ಎನ್ನಬಹುದು.

ಇತಿಹಾಸದ ಬಗ್ಗೆ ಚರ್ಚಿಸುವಾಗ, ಕೆಲವರು ಇತ್ತೀಚಿನ ಕಲ್ಪನೆಗಳನ್ನು ಮಧ್ಯಯುಗದಲ್ಲಿದ್ದ ಒಬ್ಬ ಜನಪ್ರಿಯ ರಾಜನೊಡನೆಯೋ ಅಥವಾ ಸಾಮ್ರಾಟ ನೊಡನೆಯೋ ಸಮೀಕರಿಸಿ, ಒಂದು ರೀತಿಯ ಮೌಲ್ಯದ ತೀರ್ಪನ್ನು ಕೊಟ್ಟುಬಿಡುತ್ತಾರೆ. ಇತ್ತೀಚೆಗೆ ಒಬ್ಬ ವಿದ್ವಾಂಸರು ಅಕ್ಬರ್ ಧರ್ಮನಿರಪೇಕ್ಷತೆಯನ್ನು ಪಾಲಿಸಿದ ಬಾದಶಹ ಎಂದು ಬಣ್ಣಿಸಿದರು. ಈ ನಿಲುವು ಸರಿಯಾದುದಲ್ಲ. ಏಕೆಂದರೆ, ಅಕ್ಬರ್ ಜೀವಿಸಿದ್ದ ಕಾಲದಲ್ಲಿ, ಅಂದರೆ ೧೬ನೇ ಶತಮಾನದಲ್ಲಿ ಭಾರತದಲ್ಲಿ ಧರ್ಮನಿರಪೇಕ್ಷತೆ ಎಂಬ ತತ್ವವೇ ಚಾಲ್ತಿಯಲ್ಲಿರಲಿಲ್ಲ. ಅವರು ಅಕ್ಬರ್ ಒಬ್ಬ ಧರ್ಮ ಸಹಿಷ್ಣುವಾಗಿದ್ದ ಎಂದಿದ್ದರೆ ಸಮಂಜಸವೆನಿಸುತ್ತಿತ್ತು. ಆದರೆ ಅಕ್ಬರ್ ತನ್ನ ಕಾಲಕ್ಕೆ ಮೀರಿದ ಕೆಲವು ಕ್ರಮಗಳನ್ನು ತನ್ನ ಆಳ್ವಿಕೆಯ ಅವಧಿಯಲ್ಲಿ ಜಾರಿಮಾಡಿದ, ಎಲ್ಲ ಧರ್ಮಗಳನ್ನು ಸಮಾನವಾಗಿ ಕಾಣಲು ಪ್ರಯತ್ನಿಸಿದ ಎಂಬುದನ್ನು ಹಲವು ವಿಶೇಷಜ್ಞರು ಗುರುತಿಸುತ್ತಾರೆ. ಅದೇ ಇನ್ನು ಕೆಲವರು ಈ ಕ್ರಮಗಳನ್ನು ಅಕ್ಬರ್ ಅನುಷ್ಠಾನಕ್ಕೆ ತಂದದ್ದು ತನ್ನ


ಒಟ್ಟಿನಲ್ಲಿ, ಇತಿಹಾಸವನ್ನು ಅಧ್ಯಯನ, ವಿಶ್ಲೇಷಣೆ ಮಾಡುವಾಗ ಜತನದಿಂದಿರಬೇಕು. ಆದರ ಹಲವು ಆಯಾಮಗಳನ್ನು ವೈಚಾರಿಕ, ವೈಜ್ಞಾನಿಕ, ವಸ್ತುನಿಷ್ಠ ಹಾಗೂ ವಿವೇಚನಾ ದೃಷ್ಟಿಕೋನದಿಂದ ಅರಿಯಬೇಕು.


ಆಡಳಿತ ಸುಗಮವಾಗಿರಲಿ ಎಂಬ ದೂರಾಲೋಚನೆ ಯಿಂದ ಎಂದು ವಾದಿಸುತ್ತಾರೆ. ಇಂತಹ ವಾದಗಳಲ್ಲಿ ಸತ್ಯಾಂಶವಿರಲೂಬಹುದು.

ಕರ್ನಾಟಕದ ಬಗ್ಗೆ ಹೇಳುವುದಾದರೆ, ಟಿಪ್ಪು ಸುಲ್ತಾನ್ ಒಬ್ಬ ವಿಕೃತವಾಗಿ ಚಿತ್ರಿಸಲ್ಪಟ್ಟಿರುವ ಮುಸಲ್ಮಾನ ದೊರೆಯಾಗಿದ್ದಾನೆ. ಆದರೆ ಅವನನ್ನು ಸರಿಯಾಗಿ ವಿಶ್ಲೇಷಣೆ ಮಾಡಿರುವ ತಜ್ಞರೂ ಇದ್ದಾರೆ ಎಂಬುದನ್ನು ಮರೆಯಲಾಗದು. ಟಿಪ್ಪು ಸುಲ್ತಾನನನ್ನು ಹಿಂದೂ ಕೋಮುವಾದಿಗಳು ಮತಾಂಧನೆಂದು ಜರಿಯುತ್ತಾರೆ. ಇದಕ್ಕೆ ಪ್ರತಿಯಾಗಿ ಕೆಲವು ಜಾತ್ಯತೀತವಾದಿಗಳು ಆತ ಧರ್ಮನಿರಪೇಕ್ಷತೆಯ ಪರವಾಗಿದ್ದ ಎಂದು ಬಿಂಬಿಸುತ್ತಾರೆ. ಈ ಎರಡು ನಿಲುವುಗಳೂ ಅತಿರೇಕದಿಂದ ಕೂಡಿವೆ. ಏಕೆಂದರೆ, ಅವನು ತನ್ನ ರಾಜ್ಯಭಾರದಲ್ಲಿ ಕೆಲವು ಹಿಂದೂ ದೇವಾಲಯಗಳಿಗೆ ಹಾಗೂ ಮಠಗಳಿಗೆ ನೆರವು ನೀಡಿದ್ದ ಹಾಗೂ ಹಲವು ಸುಧಾರಣೆಗಳನ್ನು ಜಾರಿ ಮಾಡಿದ. ಇವುಗಳಿಗೆ ಹಲವು ದೃಷ್ಟಾಂತಗಳಿವೆ. ಆದರೆ ಆತನನ್ನು ಧರ್ಮನಿರಪೇಕ್ಷತೆಯ ಹರಿಕಾರ ನೆಂದು ವರ್ಗೀಕರಿಸುವುದು ಸರಿಯಾದುದಲ್ಲ. ಟಿಪ್ಪು ಜಾತ್ಯತೀತನೋ ಅಥವಾ ಮತಾಂಧನೋ, ದೇಶಪ್ರೇಮಿಯೋ ಅಥವಾ ದೇಶದ್ರೋಹಿಯೋ ಎನ್ನುವ ಪ್ರಶ್ನೆಗಿಂತಲೂ, ಅವನು ಒಂದು ಪ್ರಾಂತ್ಯದ ರಾಜನಾಗಿದ್ದ ಎಂಬುದನ್ನು ಗಣನೆಗೆ ತೆಗೆದುಕೊಂಡು ವಿಶ್ಲೇಷಣೆ ಮಾಡುವುದು ಸೂಕ್ತ. ಅವನು ತನ್ನ ಕಾಲದಲ್ಲಿ ಜರಗುತ್ತಿದ್ದ ಬದಲಾವಣೆಗಳಿಗೆ ಹೇಗೆ ಸ್ಪಂದಿಸಿದ, ಪ್ರಜೆಗಳಿಗಾಗಿ ಏನು ಮಾಡಿದ, ತನ್ನ ಕಾಲದಲ್ಲಿದ್ದ ಕಟ್ಟುಪಾಡುಗಳನ್ನು ಮೀರಿ ಸಮಷ್ಟಿಗಾಗಿ ಯಾವ ಕ್ರಮಗಳನ್ನು ಜಾರಿಮಾಡಿದ ಎಂಬ ವಿಷಯಗಳನ್ನು ಪರಿಗಣಿಸಬೇಕು.

ಒಟ್ಟಿನಲ್ಲಿ, ಇತಿಹಾಸವನ್ನು ಅಧ್ಯಯನ, ವಿಶ್ಲೇಷಣೆ ಮಾಡುವಾಗ ಜತನದಿಂದಿರಬೇಕು. ಆದರ ಹಲವು ಆಯಾಮಗಳನ್ನು ವೈಚಾರಿಕ, ವೈಜ್ಞಾನಿಕ, ವಸ್ತುನಿಷ್ಠ ಹಾಗೂ ವಿವೇಚನಾ ದೃಷ್ಟಿಕೋನದಿಂದ ಅರಿಯಬೇಕು.


ಮ. ಶ್ರೀ. ಮುರಳಿಕೃಷ್ಣ
ನಂ. ೮೮೩/೧೦೧೬ (ಔಟ್ ಹೌಸ್), ೧ನೇ 'ಇ' ಮುಖ್ಯರಸ್ತೆ
(ಡಾ|| ಬಾಬು ರಾಜೇಂದ್ರಪ್ರಸಾದ್ ರಸ್ತೆ), ಗಿರಿನಗರ ೨ನೇ ಹಂತ
ಬೆಂಗಳೂರು - ೫೬೦ ೦೮೫

# ಅಪ್ಪನೂ ಒಲೆಯುರಿಯೂ





– ೧ –

ಬೆಳಗ್ಗೆ ಬಚ್ಚಲೊಲೆ ಉರಿಸಿ ನೀರು ಕಾಯಿಸಲು
ದಿನವಿಡೀ ಅಪ್ಪನ ತಯಾರಿ
ಹೆರದುಬಿಟ್ಟ ಕರಟ
ತೆಂಗಿನಮೊಟ್ಟೆ ಚರಟ
ಅಂಗಳದಲಿ ಚೆಲ್ಲಾಡಿಬಿದ್ದ ಒಣ ಮಾವಿನೆಲೆ
ಗೀರಿಬಿಟ್ಟ ಬೆಂಕಿಕಡ್ಡಿ ಹಳತಾದ ಮದುವೆ ಕರೆಯೋಲೆ
ದಿನಸಿಕಟ್ಟಿದ, ಹಣ್ಣು ಸುತ್ತಿದ ಪೇಪರು
ಹಾಳುಮೂಳು ರಸೀತಿ ಪ್ಲಾಸ್ಟಿಕ್ ಕವರು
ಸೋಪಿನ ಪೇಸ್ಟಿನ ಕಾಗದದ ಡಬ್ಬಿ
ಒಂದೇ ಎರಡೇ ಸಿಕ್ಕ ಕೆಲಸಕ್ಕ ಬಾರದ್ದೆಲ್ಲಾ ಒಲೆ ಪಕ್ಕ ದಬ್ಬಿ

ರಬ್ಬರು ಪ್ಲಾಸ್ಟಿಕ್ಕು ಹಳೆಬಟ್ಟೆ
ಪೊರಕೆ ಕೂದಲು ಅಳಿದುಳಿದ ಪಟಾಕಿ ಇನ್ನೇನೇನೋ...
ಯಾರ್ಯಾರೋ ಅವನ್ನೆಲ್ಲಾ ಉರಿಸಬಾರದೆಂದರೂ
ಉರಿಯುವಂತದ್ದೆಲ್ಲಾ
ಬೆಂಕಿಯಾಗುವುದೆಲ್ಲಾ ಅಗ್ನಿಗಾಹುತಿ
ಸಿಕ್ಕಿದ್ದೆಲ್ಲಾ ದಹಿಸಿ ಬಿಸಿ ನೀರಾಗಲು ಸರತಿ
ಕಸವಾರಿಸುತ್ತಾ ದಿನಾ ಅಪ್ಪ ಹದಗೊಳ್ಳುವ ರೀತಿ !





– ೨ –

ಒಲೆ ಉರಿಸುವುದೆಂದರೆ
ಅಪ್ಪನ ಪಾಲಿಗೆ ತಪಸ್ಸೇ ಸರಿ.

ನಿತ್ಯ ಬೂದಿ ತೆಗೆದೊಲೆ ಖಾಲಿಮಾಡಿ
ಅಂಗಳ ಮರದ್ದೇ ಅವನೇ
ಕಡಿದ ಒಣರೆಂಬೆಕೊಂಬೆಗಳೊಟ್ಟಿ
ಮಧ್ಯದಲಿ ತೆಂಗಿನ ಕರಟವನಿಟ್ಟು
ತೆಂಗಿನಮೊಟ್ಟೆ ನಾರುಗಳ ಪೇರಿಸಿಟ್ಟು
ನಿಧಾನಕ್ಕೆ ಹಳಪಳೆ ತುಂಡು ಕಾಗದಕ್ಕೆ
ಬೆಂಕಿಹೊತ್ತಿಸಿ ಒಲೆಯೊಳಗಿಟ್ಟು
ಒಂದಿಷ್ಟೂ ಸೀಮೆಎಣ್ಣೆ ಹನುಕಿಸದೇ
ಬೆಂಕಿಯಾರದಂತೆ ಒಂದರ ಮೇಲೊಂದು
ಕಾಗದ ತ್ಯಾಜ್ಯವನೊಟ್ಟೆ ಒಟ್ಟಿ
ಸೌದೆ ಹೊತ್ತುವವರೆಗೂ ಘನಸಾಹಸ
ತಾಳ್ಮೆಯಲಿ ಬೆಂಕಿ ಹೊತ್ತಿಸುವ ಪ್ರಯಾಸ.
ಊದುಗೊಳವೆಯಲಿ ಊದಿ ಊದಿ
ಮತ್ತೆ ಮತ್ತೆ ಒಲೆಯುರಿಸುವ
ಅಪ್ಪನೆಂಬೋ ಪ್ರವಾದಿ.

– ೩ –

ಗಂಟೆಗಟ್ಟಲೆ ಕೂತು ಸಹನೆಯಲಿ ಅಪ್ಪ
ಒಲೆಯುರಿಸುವ ಸಾಹಸದ ಪರಿ
ನೋಡಿ ಮಗನಿಗೋ ಕಿರಿಕಿರಿ
'ಸೋಲಾರು, ಗೀಸರು, ಬಾಯ್ಲರು
ಎಲ್ಲ ಅನುಕೂಲವಿದ್ದರೂ ಈ ಇಳಿವಯಸಿನಲಿ
ಹೊಗೆ ಮಸಿಗಳ ಜೊತೆಗೆ ಗುದ್ದಾಡಿ
ಅಲ್ಲಲ್ಲಿನ ಕಸಗಳನ್ನೆಲ್ಲಾ ಒಟ್ಟುಮಾಡಿ
ಮೈ-ಕೈ ನೆಗ್ಗಿಸಿ ಜುಂಗಾಡಿ
ಗಂಟೆಗಟ್ಟಲೆ ಬಿಸಿಕಾವಿನ ಮುಂದೆ ಕೂತು
ಯಾಕಿಂಥಾ ನರಕ
ಆರಾಮದಲಿ ಕಳೆಯಬಾರದೇ ಉಳಿದ ಬದುಕ ?'
ಗೊಣಗುಗಳು ಮೊಳಗಿದಾಗಲೆಲ್ಲಾ
ಸ್ಥಿತಪ್ರಜ್ಞ ಅಪ್ಪ ನಕ್ಕು ನುಡಿಯುತ್ತಾನೆ
'ಒಲೆಯುರಿಸುವುದೆಂದರೆ
ಬಿಸಿನೀರು ಕಾಯಿಸುವುದಲ್ಲ ಮಗನೇ
ಹುಡುಕಿ ಸುಟ್ಟು ಸುತ್ತಮುತ್ತಲಿನ ಕೊಳೆ
ದಿವ್ಯವಾಗುತ್ತಾ ಹದಗೊಳ್ಳುವಾ ಕಲೆ
ಬದುಕು ಮಾಗಲು ಬೆವರು ಕಟ್ಟುವಾ ಬೆಲೆ !'

– ೪ –

ಬಚ್ಚಲೊಲೆ ಉರಿಸಲು ಕುಳಿತ ಅಪ್ಪನೆಂಬೋ ಸಂತ
ಧಗಧಗ ಉರಿಯ ಮುಂದೆಯೂ ಶಾಂತ
ಇವನ ಪಾಲಿಗೆ ಒಲೆಯುರಿಸುವ ಕಾಯಕ,
ನೀರು ಉರಿಗಳ ನಡುವೆ ಹದಗೊಳ್ಳುವ ಲೌಕಿಕ.
ಎಂಥ ಸಿದ್ಧತೆ ! ಏನು ಬದ್ಧತೆ !
ದಢಗುಡುವ ಆತುರವಿಲ್ಲ
ಹೇಗೋ ಉರಿಸಿದರಾಯ್ತೆಂಬ ಉದಾಸೀನವಿಲ್ಲ
ನಿಧಾನಕ್ಕೆ ಸೌದೆಹೊತ್ತಿಸಿ,
ಕಾವು ಮೂಡಿಸಿ ಒಲೆ ಉರಿಸುತ್ತಾನೆ.
ನೀರು ಮೆಲ್ಲಗೆ ಕಾಯುತ್ತಾ ಕಾಯುತ್ತಾ
ಬಿಸಿಯೇರಿ ಹದಗೊಳ್ಳುತ್ತದೆ.


ರೂಪ ಹಾಸನ
ಪ್ರೇರಣಾ, ಸಂತ ಜೋಸೆಫ್ ಶಾಲೆ ರಸ್ತೆ, ಉತ್ತರ ಬಡಾವಣೆ
ಹಾಸನ - ೫೭೩ ೨೦೧

# ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ, ಪುಸ್ತಕ, ಘಟನೆ, ಬುದ್ಧಿ, ಭಾವ

(ಓದುಗರ ಪ್ರತಿಕ್ರಿಯೆಗಳು)

## ೧. ನನ್ನೂರ ಹೊಲಗೇರಿ

ನನ್ನೂರು ಹಿರೇಬೆಳ್ಳಿಕಟ್ಟಿ. ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲೂಕಿನಲ್ಲಿಯ ಚಿಕ್ಕ ಹಳ್ಳಿ. ೧೯೪೨ರ ಸುಮಾರಿಗೆ ೩೦೦ ಜನಸಂಖ್ಯೆ ಇತ್ತು. ಹನುಮಂತ ದೇವರಗುಡಿಯಲ್ಲಿ ಕಿರಿಯ ಪ್ರಾಥಮಿಕ ಶಾಲೆ ಇತ್ತು. ಗುಡಿಯ ಕಟ್ಟೆಯ ಮೇಲೆ ಮೇಲುಜಾತಿಯ ವಿದ್ಯಾರ್ಥಿಗಳು ಕೂಡ್ರುತ್ತಿದ್ದರು. ಹೊಲೆಯರ ಹುಡುಗರು ಕಟ್ಟೆಯ ಕೆಳಗೆ ಕೂಡ್ರುತ್ತಿದ್ದರು. ಮೇಲುವರ್ಗದ ಹುಡುಗರನ್ನು ಹೊಲೆಯರ ಹುಡುಗರು ಮುಟ್ಟುತ್ತಿರಲಿಲ್ಲ. ನಾನು ಹೊಲೆಯರ ಹುಡುಗರನ್ನು ಮುಟ್ಟಿ ಆಟವಾಡುತ್ತಿದ್ದೆ. ಈ ಸಂಗತಿಯನ್ನು ಕೆಲವು ಹುಡುಗರು ನನ್ನ ತಾಯಿಗೆ ಚಾಡಿ ಹೇಳಿದರು. ನನ್ನ ತಾಯಿ ನನಗೆ ನೀರು ಚಿಮುಕಿಸಿ ಒಳಗೆ ಕರೆಯುತ್ತಿದ್ದಳು. ಹಾಗೆ ಮುಟ್ಟಬೇಡ ಎಂದು ತಾಕೀತು ಮಾಡುತ್ತಿದ್ದಳು. ನನಗೆ ಇದೆಲ್ಲ ಕೌತುಕ ಎನ್ನಿಸುತ್ತಿತ್ತು.

ನಾನು ಹೊಲೆಯರ ಹುಡುಗರೊಂದಿಗೆ ಹೊಲಗೇರಿಗೆ ಹೋಗುತ್ತಿದ್ದೆ. ಅಲ್ಲಿ ದುರ್ಗ್ಯಾ, ಆನ್ಯಾ, ಭೀಮ್ಯಾ, ಯಮುನ್ಯಾ, ಸಿಡ್ಲ್ಯಾ, ಕರ್‍ಯಾ ಹೀಗೆ ಭಯಂಕರ ವ್ಯಕ್ತಿತ್ವದ ಹೆಸರಿನ ವ್ಯಕ್ತಿಗಳಿದ್ದರು. ಅವರು ಆರೇಳು ಕ್ವಿಂಟಲ್ ತೂಕದ ಸತ್ತ ಎಮ್ಮೆ ಹಸುಗಳನ್ನು ಅನಾಯಾಸವಾಗಿ ಎತ್ತಿಕೊಂಡು ಹೊಲಗೇರಿಗೆ ಒಯ್ಯುತ್ತಿದ್ದರು. ಹೊಲಗೇರಿ ಹತ್ತಿರವೇ ಎತ್ತರವಾದ ಹುಣಸೇಮರಗಳಿದ್ದವು. ಅವುಗಳ ತುಂಬೆಲ್ಲ ಹದ್ದುಗಳು ಯಾವಾಗಲೂ ಬಿಡಾರ ಹೂಡುತ್ತಿದ್ದವು. ದನ ಕಡಿಯುವಾಗ ಅವೆಲ್ಲ ಕೆಳಗೆ ಇಳಿದುಬರುತ್ತಿದ್ದವು. ಅಲ್ಲಿಯೇ ಹರಿಜನರ ದೇವತೆ 'ಮನಗುಂಡೆವ್ವ' ಎಂಬ ಹೆಸರಿನ ಕಲ್ಲು ದುಂಡೆ ಇತ್ತು. ಆ ದೇವತೆಗೆ ಊರ ಜನವೆಲ್ಲ ಹೆದರುತ್ತಿದ್ದರು. ಅವಳಿಗೆ ಜಾತ್ರೆಯಲ್ಲಿ ಟಗರು, ಹೋತ ಬಲಿ ಕೊಡುತ್ತಿದ್ದರು.

ಅಲ್ಲಿಯೇ ಹೊಲಗೇರಿಯಲ್ಲಿ 'ಗರಡಿ' ಮನೆಯಿತ್ತು. ಅಲ್ಲಿ ಹೊಲೆಯರ ಹುಡುಗರು ತಾಲೀಮು ಮಾಡುತ್ತಿದ್ದರು. ಕುಸ್ತಿ ಹಿಡಿಯುತ್ತಿದ್ದರು. ಆ ಗರಡಿ ಮನೆ ನನಗೆ ಆಕರ್ಷಣೆ ನೀಡಿತು. ನಾನೂ ಅವರೊಂದಿಗೆ ತಾಲೀಮು ಮಾಡುತ್ತಿದ್ದೆ. ಕುಸ್ತಿ ಹಿಡಿಯುತ್ತಿದ್ದೆ. ಹರಿಜನರ ಗಟ್ಟಿಮುಟ್ಟ ಶರೀರ ನನ್ನನ್ನು ಆಕರ್ಷಿಸಿತ್ತು. ನಮ್ಮ ಮನೆಯವರು ಎಷ್ಟೇ ಸಿಟ್ಟಿಗೆದ್ದರೂ, ನಾನು ಹೊಲೆಯರೊಂದಿಗೆ ಬೆರೆತುಕೊಳ್ಳುತ್ತಿದ್ದೆ. ಊರ ಜನರು ಅವರನ್ನು ಕೀಳಾಗಿ ಕಾಣುವುದು ನನಗೆ ಸೇರಿಕೆಯಾಗುತ್ತಿರಲಿಲ್ಲ. ಹೊಲೆಯರು ದಿನಾಲು ನಸುಕಿನಲ್ಲಿ ಎದ್ದು ವತನದಾರ ಗೌಡರ ಮನೆ ಅಂಗಳ ಗುಡಿಸಿ ಹೋಗುತ್ತಿದ್ದರು. ಸುಗ್ಗಿಯ ಕಾಲದಲ್ಲಿ 'ಕಣ' ತಯಾರಿಸುತ್ತಿದ್ದರು. ರಾಶಿಯಾದ ಮೇಲೆ ಉತ್ತಮ 'ಕಾಲ್ಮರಿ' ತಯಾರಿಸಿ ಹೊಲದೊಡೆಯನಿಗೆ ಕೊಡುತ್ತಿದ್ದರು. ಊರ ಜಾತ್ರೆಯಲ್ಲಿ ದೇವರ ಚರ್ಮದ ಚಪ್ಪಲಿಗಳನ್ನು ಮೊರದಲ್ಲಿಟ್ಟು ಹೊತ್ತುಕೊಂಡು ದೇವರ ಗುಡಿತನಕ ಬರುತ್ತಿದ್ದರು. ಊರ ಜನರು ಸತ್ತಾಗ ಅವರೇ ಸುದ್ದಿ ಮುಟ್ಟಿಸಲು ಊರೂರು ಅಲೆಯುತ್ತಿದ್ದರು. ಅವರು ಕೊಟ್ಟ ಒಣರೊಟ್ಟಿ ತಿನ್ನುತ್ತಿದ್ದರು. ಹೊಲೆಯರಿಗಾಗಿಯೇ ಬೇರೆಯೇ ಒಂದು ಬಾವಿ ಇತ್ತು. ಅವರು ಚಹ ಕುಡಿಯಲು ಬಂದರೆ ಅವರಿಗಾಗಿ ಬೇರೆ ಸೊಟ್ಟೆಗಳು ಇರುತ್ತಿದ್ದವು. ಇವನ್ನೆಲ್ಲ ನಾನು ಸೂಕ್ಷ್ಮವಾಗಿ ಗಮನಿಸುತ್ತ ಒಳಒಳಗೆ ಸಂಕಟಪಡುತ್ತಿದ್ದೆ.

ನಾನು ನಾಲ್ಕನೆಯ ತರಗತಿ ಮುಗಿಸಿ ಐದನೇ ತರಗತಿಗಾಗಿ ಹಿರೇನಂದಿಹಳ್ಳಿ ಶಾಲೆಗೆ ಹೋದೆ. ಆಗ ಮಿರಜಕರ ಎಂಬ ಹರಿಜನ ಶಿಕ್ಷಕರ ವರ್ಗ ಆ ಶಾಲೆಗಾಯಿತು. ಬಸವಣ್ಣ ದೇವರಗುಡಿಯಲ್ಲಿ ಶಾಲೆಯಿತ್ತು. ಆ ಶಾಲೆಯ ಕಟ್ಟೆಯ ಕೆಳಗೆ ಮಿರಜಕರ ಶಿಕ್ಷಕರನ್ನು ಕೂಡ್ರಿಸಿದರು. ನಮಗೆ ಕಲಿಸುವ ಶಿಕ್ಷಕರಿಗೆ ಈ ಗತಿಯಾಯಿತು. ಅಂದಿನಿಂದ ನನ್ನ ಮನದಾಳದಲ್ಲಿ ತಳಮಳ ಹೆಚ್ಚಾಯಿತು.

ಬರಬರುತ್ತ ನಾನು ನನ್ನೂರಿನಲ್ಲಿ ಪ್ರತಿಭಟಿಸತೊಡಗಿದೆ. ಚಹದಂಗಡಿಯಲ್ಲಿ ಬೇರೆ ಕಪ್ಪು ಇಟ್ಟರೆ ನಿಮ್ಮ ವಿರುದ್ಧ ದೂರು ಸಲ್ಲಿಸುವೆ ಎಂದು ಹೆದರಿಸಿದೆ. ಹರಿಜನರಿಗೆ ಅನ್ಯಾಯವಾದಾಗ ಅವರ ಪರವಾಗಿ ನಿಂತು ವಾದಿಸುತ್ತಿದ್ದೆ. ಹರಿಜನ ಹುಡುಗ ಹುಡುಗಿಯರಿಗೆಲ್ಲ ಶಾಲೆ ಕಲಿಯಲು ಪ್ರೋತ್ಸಾಹ ನೀಡತೊಡಗಿದೆ.

ನಾನು ತರಬೇತಿ ಕಾಲೇಜು ಸೇರಿದಾಗ ಹರಿಜನ ಶಿಕ್ಷಕನನ್ನು ಯಾರೂ ತಮ್ಮ ರೂಮಿನಲ್ಲಿ ಸೇರಿಸಿಕೊಳ್ಳಲಿಲ್ಲ. ನಾನು ನನ್ನ ಬದಿಗೆ ಅವನನ್ನು ಕರೆದು ಸ್ಥಾನ ಕಲ್ಪಿಸಿದೆ. ಇದರಿಂದ ಸವರ್ಣೀಯರಿಗೆ ಇರಸುಮುರಸಾಯಿತು. ಹೀಗೆ ಅಂತ್ಯಜರ ಮೇಲೆ ಆಗುತ್ತಿರುವ ಅವಮಾನ, ನನಗೆ ಬಹು ಕಾಡತೊಡಗುತ್ತಿತ್ತು. ಅಂತ್ಯಜರ ಪರವಾಗಿಯೇ ನಾನು ಲೇಖನ-ಕವಿತೆ-ಕಥೆ ಬರೆಯತೊಡಗಿದೆ. ನಾನು ''ಊರ ಹೊರಗಿನವರ ಹಾಡು'' ಎಂಬ ಕವನ ಸಂಕಲನ ಪ್ರಕಟಿಸಿದೆ. ಹೀಗೆ ನಾನು ಅಂತ್ಯಜರ ಬಗ್ಗೆ ಬರೆದ ಬರೆಹಗಳಿಗೆ, 'ಜನಜೀವಾಳ' ವಾರಪತ್ರಿಕೆಯ ಸಂಪಾದಕರಾದ ದಿ. ಬ. ಮ. ಏಳುಕೋಟೆ ಅವರು ಇಂಬು ಕೊಡುತ್ತಿದ್ದರು. ಆಮೇಲೆ ದಲಿತ ಸಾಹಿತ್ಯವೇ ಉದಯವಾಯಿತು. ಬಂಡಾಯ ಸಾಹಿತ್ಯ ನಿರ್ಮಾಣವಾಯಿತು. ಈಗ ಅಂತ್ಯಜರು ತೃಪ್ತಿ ಜೀವನ ನಡೆಸುತ್ತಿದ್ದಾರೆ. ಆದರೂ ಬಹಿಷ್ಕಾರದಂತಹ ಘಟನೆಗಳಿಗೆ ಅಂತ್ಯಜರು ಬಲಿಯಾಗುತ್ತಿದ್ದಾರೆ. ಗ್ರಾಮೀಣ ಜೀವನದಲ್ಲಿ ಇನ್ನೂ ಅಂತ್ಯಜರು ಕಷ್ಟಕರವಾದ ಜೀವನ ಸಾಗಿಸುತ್ತಿರುವುದನ್ನು ಕಂಡು ನನ್ನ ಎದೆಯಾಳದಲ್ಲಿ ಇನ್ನೂ ತಳಮಳ ಇದ್ದೇ ಇದೆ. ಹರಿಜನರ ಮೇಲಾಗುವ ಘಟನೆಗಳು ನನ್ನ ಮೇಲೆ ತೀವ್ರವಾಗಿ ಪರಿಣಾಮ ಬೀರಿವೆ. ಬರೆಹದ ಮೂಲಕವೇ ನಾನು ಸಮಾಧಾನಪಟ್ಟುಕೊಳ್ಳುತ್ತಲಿದ್ದೇನೆ.

ಪುಂಡಲೀಕ ಪಾಟೀಲ
ಪ್ಲಾ. ನಂ. ೨೧೮, ವಿದ್ಯಾನಗರ, ಬಾಕ್ಸಾಯಿಟ ರೋಡ್, ಹಿಂಡಲಗಿ - ೫೯೧ ೧೦೮

## ೨. ನನ್ನ ಮೇಲೆ ಪ್ರಭಾವ ಬೀರಿದ ಘಟನೆ

ಒಂದು ಸುಂದರ ಸಂಜೆಯ ಸೊಬಗು. ಅದನ್ನು ಸವಿಯುತ್ತಾ ನನ್ನ ಮನೆಯ ಕಟ್ಟೆಯೊಂದರ ಮೇಲೆ ಕುಳಿತು ಆಕಾಶವನ್ನು ನೋಡತೊಡಗಿದೆ. ಆಗ ವಸಂತ ಮಾಸದ ಆಗಮನ ತಿಳಿದಿತ್ತು. ಪ್ರಕೃತಿಯಲ್ಲಿ ತಂಗಾಳಿಯ ಆಲಾಪನವಾಗುತ್ತಿತ್ತು. ಹಕ್ಕಿಗಳ ಚಿಲಿಪಿಲಿ ಗಾನದ ಶಬ್ದ ಬಿಳಿಯ ಮೋಡಕ್ಕೆ ಮಲ್ಲಿಗೆಗಳು ಹರಡಿದಂತೆ ಅವುಗಳ ಮಧ್ಯೆ ನೀಲಿ ಬಾನು ಮತ್ತು ಕಾರ್ಮೋಡಗಳು 'ತಾ ಮುಂದ್, ತಾ ಮುಂದ್' ಎಂದು ನುಗ್ಗುತ್ತಿರುವ ಹಾಗೆ ಬೆಳ್ಳಕ್ಕಿಯ ಸಾಲುಗಳು ಹೊರಟ್ಟಿದ್ದವು. ಅವುಗಳು ಮುಗಿಲಿಗೆ ತೋರಣ ಕಟ್ಟಿಸಿದಂತೆ ಕಾಣಿಸುತ್ತಿತ್ತು.

ಅಂದು ಹುಣ್ಣಿಮೆಯಾದುದರಿಂದ ದುಂಡನೆಯ ಗೋಧಿ ಬಣ್ಣದ ಆಕಾರದಲ್ಲಿ ಅಚ್ಚಳಿಯದ ಹಾಗೆ ಚಂದ್ರ ಮೂಡಿದ. ಆ ಪ್ರಕೃತಿಯ ಸೌಂದರ್ಯವನ್ನು ನೋಡಲು ಬಹಳ ಅದ್ಭುತವೆನಿಸುತ್ತಿತ್ತು. ಇಂತಹ ಒಳ್ಳೆಯ ವಾತಾವರಣದ ರಸಾನುಭವದಲ್ಲೂ ಒಂದಾದರೂ ಕವನ, ಕಥೆ, ಕವಿತೆಗಳು ಮೂಡುತ್ತಿಲ್ಲವೆಂಬುದಕ್ಕೆ ಒಳಗೊಳಗೆ ಬೇಸರಗೊಳ್ಳುತ್ತಿದ್ದೆ.

ಈ ಪ್ರಕೃತಿಯ ಚೆಲುವನ್ನು ನೋಡಿ ಆನಂದಿಸುತ್ತಾ ಕತ್ತಲಾದುದೇ ತಿಳಿಯಲಿಲ್ಲ. ಹೀಗೆ ಆ ಸಂಜೆಯ ಮಬ್ಬುಗತ್ತಲಿನಲ್ಲಿ ದೂರದಿಂದ ಒಬ್ಬ ವ್ಯಕ್ತಿ ಬರುತ್ತಿದ್ದ ಹಾಗೆ ಗೋಚರಿಸತೊಡಗಿತು. ಅವಳೊಬ್ಬಳು ಹೆಣ್ಣು ಎಂದು ಸ್ಪಷ್ಟವಾಗಿ ಗೊತ್ತಾಗುತ್ತಿತ್ತು. ನನ್ನ ಅಕ್ಕ-ಪಕ್ಕ ಎಲ್ಲೂ ಜನರಿರಲಿಲ್ಲ. ಭಯದಿಂದ ಒಳಗೆ ಹೋದೆ. ಸ್ವಲ್ಪ ಹೊತ್ತಾದ ನಂತರ ಮತ್ತೆ ಅಧೈರ್ಯದ ಕುತೂಹಲದಿಂದ ಹೊರಗೆ ಬಂದು ನೋಡುವಷ್ಟರಲ್ಲಿ ಆಕೆ ಎದುರುಗಡೆ ಇರುವ ಅಂಗಡಿಯಲ್ಲಿ ಇದ್ದಳು. ಅವಳನ್ನ ನೋಡಬೇಕೆಂಬ ಆಸೆ ನನ್ನನ್ನು ಕಾತರಿಸುತ್ತಿತ್ತು. ನನ್ನ ಕುತೂಹಲ

ತಡೆಯಲಾಗದೆ ತಕ್ಷಣ ಎದುರುಗಡೆ ಓಡಿಹೋದೆ. ಸುಮಾರು ೩೦-೩೫ ವಯಸ್ಸಿನ ಮಹಿಳೆ; ಇನ್ನೂ ಅಂತಹ ವಯಸ್ಸಾದಂತಿಲ್ಲ. ಎಷ್ಟೋ ದಿನದಿಂದ ತಲೆಗೆ ಎಣ್ಣೆಯನ್ನು ಕಾಣದೆ ಆ ಕೆದರಿದ ಗಂಟು ಕಟ್ಟಿದ ಕೆಂಚ ಕೂದಲಿನ ನಡುವೆ ಅಲ್ಲಲ್ಲಿ ಬಿಳಿಯ ಕೂದಲುಗಳು ಕಾಣಿಸುತ್ತಿದ್ದವು. ಮೈಗೆ ಸಾಬೂನು, ನೀರು ಕಾಣದೆ ಮೈಯೆಲ್ಲ ದುರ್ನಾತದಿಂದ ತುಂಬಿಕೊಂಡಿತ್ತು. ಬಿಸಿಲು, ಮಳೆ ಎನ್ನದೆ ತಿರುಗಿ, ತಿರುಗಿ ಚರ್ಮವೆಲ್ಲ ಒರಟಾಗಿತ್ತು. ಸರಿಯಾಗಿ ಅನ್ನ, ನೀರು ಕಾಣದೆ ಪಕ್ಕೆ ಎಲುಬುಗಳು ಮತ್ತು ಹೊಟ್ಟೆಯೆಲ್ಲಾ ಕುಗ್ಗಿಕೊಂಡಿತ್ತು. ಆಳ್ ಅಂತ ಎತ್ತರವೇನಲ್ಲ, ಮೈಕಟ್ಟಿನಲ್ಲಿಯೂ ಬರಿಯ ಮೂಳೆಗಳು ಕಾಣುತ್ತಿದ್ದವು. ಹಳದಿ ಬಣ್ಣದ, ಮಾಸಿದ, ಹರಿದು ಸುಕ್ಕುಗಟ್ಟಿದ ಸೀರೆಯನ್ನು ಮೊಣಕಾಲ ವರೆಗೆ ಉಟ್ಟಿದ್ದಳು. ಕತ್ತಿನಲ್ಲಿ ಒಂದು ಕರಿಮಣಿಯ ತಾಳಿಸರವು ನೇತಾಡುತ್ತಿತ್ತು. ಆಗಲೇ ಗೊತ್ತಾಯಿತು ಅವಳಿಗೆ ಮದುವೆ ಆಗಿದೆ ಎಂದು. ಮೂಗಿನಲ್ಲಿ ಒಂದು ಸುಂದರವಾದ ಹರಳಿನ ಮೂಗುತಿಯು ಶುಭ್ರವಾಗಿ ಹೊಳೆಯುತ್ತಿತ್ತು. ಅವಳ ಕಣ್ಣುಗಳು ಯಾರನ್ನೋ ಹುಡುಕುವ ತವಕದಲ್ಲಿದ್ದವು. ಅವಳ ಹಲ್ಲುಗಳು ಎಷ್ಟೋ ದಿನದಿಂದ ಬೂದಿ (paste)ನ ಕಾಣದೆ ಹಳದಿ ಬಣ್ಣದಿಂದ ಶೋಭಿಸುತ್ತಿದ್ದವು. ಕೈಯಲ್ಲಿ ಉದ್ದವಾದ ಕೋಲನ್ನು ಹಿಡಿದು ಒಂದು ಗಂಟು ಕಟ್ಟಿದ ಸೀರೆಯ ಗಂಟನ್ನು ಬಗಲಿಗೆ ನೇತುಹಾಕಿದಳು. ಅಂಗಡಿಯವನಿಗೆ ದುಡ್ಡು ಕೊಟ್ಟು ಏನಾದರೂ ಕೊಡುವಂತೆ ಕೇಳಿದಳು. ಒಂದು ಬನ್‌ನ್ನು ಕೊಟ್ಟು ಇಲ್ಲಿಂದ ಹೋಗು ಎಂದು ಹೇಳಿದ. ದುಡ್ಡನ್ನು ತೆಗೆದುಕೊಳ್ಳದೆ ವಾಪಸ್ ಕೊಟ್ಟ. ಅವಳ ನಿಯತ್ತು ಎಂದರೆ ಆ ಬನ್‌ನ್ನು ವಾಪಸ್ ಅಂಗಡಿಯವನಿಗೆ ಕೊಟ್ಟು, ಕಟ್ಟೆಯ ಮೇಲೆ ಕೂತು ಪೇಪರ್ ಒಂದನ್ನ ಹಿಡಿದು ಓದುವಂತೆ ನಟಿಸುತ್ತಿದ್ದಳು.

ಒಂದೊಮ್ಮೆ ಜೋರಾಗಿ ನಗುತ್ತಿದ್ದಳು. ಒಂದು ಸಾರಿ ಅಳುತ್ತಿದ್ದಳು. ಅವಳನ್ನ ನೋಡುತ್ತಿದ್ದ ಅವರಿಗೆಲ್ಲಾ ಕೋಲನ್ನು ಹಿಡಿದು ಹೊಡೆಯಲು ಮುಂದಾಗುತ್ತಿದ್ದಳು. ಮತ್ತೆ ಕೂತು ಬಾಯಲ್ಲಿ What is this ? What are you doing ? ಎನ್ನುವ ಇಂಗ್ಲಿಷ್ ಪದದ ಎರಡಕ್ಷರವನ್ನು ಬಾಯಲ್ಲಿ ಪಠಿಸತೊಡಗಿದಳು.



ಯಾರಾದರೂ ಏನಾದರೂ ಕೇಳಿದರೆ ಕ್ಯಾ ಹೈ ? ಎಂದು ಕೇಳುತ್ತಿದ್ದಳು. ಒಂದು ಕಡೆಯಲ್ಲಿ ನಿಂತು ಇದನ್ನೆಲ್ಲಾ ಗಮನಿಸಿದ ನಾನು ಅವಳ ಹತ್ತಿರ ಹೋಗಿ ಏನಮ್ಮಾ ನಿನ್ನ ಹೆಸರು ಎಂದು ಕೇಳಿದ್ದಕ್ಕೆ, ಅದೆಲ್ಲ ನಿನಗೆಂತಕ್ಕೆ ಎಂದು ಪಟ್ಟನೆ ಹೊಡೆದ ಹಾಗೆ ಉತ್ತರಿಸಿದಳು. ಮತ್ತೆ ಭಯದಿಂದ ದೂರ ಸರಿದು ಯಾವೂರಮ್ಮಾ ಎಂದು ಕೇಳಿದೆ. ಅದಕ್ಕೆ ನಮ್ಮೂರು ನಿಮ್ಮೂರು ಎಂದು ಹಾಡ್ ಹೇಳಲು ಪ್ರಾರಂಭಿಸಿದಳು. ಇದನ್ನ ಕೇಳಿ ಒಂದು ಕ್ಷಣ ನನ್ನ ಮುಖದಲ್ಲಿ ನಗು ಅರಳಿತಾದರೂ ಮತ್ತೆ ದುಃಖದ ಅಲೆಗಳು ಏಳಲಾರಂಭಿಸಿದವು. ಕಣ್ಣಿನಲ್ಲಿ ನೀರು ಉಕ್ಕಿ ಬಂತು.

ಅಲ್ಲಿನ ಜನ ಎಲ್ಲಾ ಸ್ವಾರ್ಥಿಗಳಾಗಿದ್ದರು. ಕಾರಣ ಅಯ್ಯೋ ! ಪಾಪ !!! ಅನ್ನುವ ಎರಡಕ್ಷರದ ಮಾತೊಂದು ಬಿಟ್ಟರೆ ಬೇರಾವುದೂ ಅವರ ಬಾಯಲ್ಲಿ ಬರುತ್ತಿರಲಿಲ್ಲ. ತಕ್ಷಣ ಓಡಿಹೋಗಿ ಮನೆಯಿಂದ ಒಂದು ಹಿಡಿ ಅನ್ನ ತಂದು ಕೊಟ್ಟೆ. ಎಷ್ಟೋ ದಿನದಿಂದ ಅನ್ನ ಕಾಣದವರ ಹಾಗೆ ಅದನ್ನು ನೋಡಿದ ತಕ್ಷಣ ಕೈಯಿಂದ ತೆಗೆದುಕೊಂಡು ಗಪಗಪನೆ ತಿನ್ನಲಾರಂಭಿಸಿದಳು. ಇದನ್ನ ನೋಡಿ ನನ್ನ ಹೊಟ್ಟೆ ಕರುಳು ಕಿತ್ತು ಬಂದಹಾಗಾಯಿತು. ಅವಳೊಬ್ಬ ವಿದ್ಯಾವಂತ ಹೆಣ್ಣುಮಗಳು ಎಂದು ಅವಳ ಭಾಷಾಚರಿಯಿಂದ ಗೊತ್ತಾಗುತ್ತಿತ್ತು. ಅವಳಿಗೆ ಸರಿಯಾಗಿ ಮಾತನಾಡಲು ಕನ್ನಡ ಬರದಿದ್ದರೂ ನಾನು ಹೇಳಿದ ಮಾತುಗಳು ಸರಿಯಾಗಿ ಅರ್ಥವಾಗುತ್ತಿತ್ತು.

ಏನಾದರೂ ಕೇಳಿದರೆ ತಮಿಳು ಮತ್ತು ಹಿಂದಿ ಶೈಲಿಯಲ್ಲಿ ಉತ್ತರಿಸುತ್ತಿದ್ದಳು. ಅಲ್ಲಿದ್ದ ಅಕ್ಕಪಕ್ಕದ ಜನರೆಲ್ಲಾ ಅವಳು ಎಲ್ಲಿಯವಳೋ ? ಯಾವ ಊರಿನವಳೋ ? ಆಕೆಗೆ ಹುಚ್ಚು ಜಾಸ್ತಿಯಾಗಿ ರೈಲು ಹತ್ತಿ ಬಂದಿರಬೇಕು, ದಿಕ್ಕುದೆಸೆಯಿಲ್ಲದೆ ತಿರುಗುತ್ತಿದ್ದಾಳೆ ಎಂದು ನಾನಾ ಪರಿಯಾಗಿ ಮಾತನಾಡಿಕೊಳ್ಳುತ್ತಿದ್ದರು. ನಾ ನೋಡಿದ ಹಾಗೆ ಅವಳು ಒಂದಿಷ್ಟು ಆಸ್ತಿಯ ಲೆಕ್ಕವನ್ನು ಮತ್ತು ಗಂಡನಿಗೆ ಬೈಯ್ಯುವ ರೀತಿಯನ್ನು ಪ್ರದರ್ಶಿಸುತ್ತಾ ಮುನ್ನುಗ್ಗುತ್ತಿದ್ದಳು. ಅವಳ ದೇಹದ ಬಣ್ಣ ಸಿರಿ ನೋಡಿದರೆ ಅವಳೊಬ್ಬಳು ತಮಿಳುನಾಡಿನವಳು ಎಂದು ತಿಳಿದುಬರುತ್ತಿತ್ತು. ಇದನ್ನು ನೋಡಿದ ನನ್ನ ಮನಸ್ಸು ನಾನಾ ರೀತಿಯ ಯೋಚನೆಯಲ್ಲಿ ತೊಡಗಿತ್ತು. ಅವಳೊಬ್ಬಳು ಮಹಿಳೆ. ರಾತ್ರಿಯೆಲ್ಲಾ ಎಲ್ಲಿರುವಳು, ಎಲ್ಲಿ ಊಟ ಮಾಡುವಳು ಎಂದು ಅನೇಕ ರೀತಿಯಲ್ಲಿ ಪ್ರಶ್ನೆಯ ಮಳೆಗರೆದವು. ಆದರೆ ನನ್ನ ಮನಸ್ಸು ಮಾತ್ರ ಅಲ್ಲೋಲಕಲ್ಲೋಲವಾಯಿತು. ನಮ್ಮ ದೇಶದಲ್ಲಿ ಇಂಥ ಪರಿ ಜನ ಎಷ್ಟು ಮಂದಿ ಇದ್ದಾರೆ ? ಯಾವ ಸಮಯದಲ್ಲಿ ಮನುಷ್ಯ ಏನಾಗಬಲ್ಲ ಎಂಬುದು ಊಹಿಸಲಾಗದು. ಹೀಗೆ ರಾತ್ರಿಯಾದುದೇ ಗೊತ್ತಾಗಲಿಲ್ಲ. ಅವಳು ತನ್ನ ಪಾಡಿಗೆ ತಾನು ಏನೋ ಕೆಲಸಕ್ಕೆ ಹೊರಟಿರುವಂತೆ ಹೊರಟಳು. ಅವಳನ್ನು ನೋಡುತ್ತಾ ಒಂದು ಕಲ್ಲು ಮೇಲೆ ಕುಳಿತುಬಿಟ್ಟೆ. ಹೀಗೆ ಅವಳು ಕತ್ತಲಿನಲ್ಲಿ ಮರೆಯಾದುದೇ ಗೊತ್ತಾಗಲಿಲ್ಲ. ಅಷ್ಟರೊಳಗೆ ನನ್ನ ತಾಯಿ ನನ್ನನ್ನು ಕೂಗಿ ಕರೆದಳು. ಎಷ್ಟೋ ದಿನದ ನಂತರವೂ ಅವಳ ನೆನಪು ಕಮರಿಸುತ್ತಿತ್ತು. ಅವಳು ಎಲ್ಲಿದ್ದಾಳೋ ? ಹೇಗಿದ್ದಾಳೋ ? ಎನ್ನುವುದು ನನ್ನ ಮನಸ್ಸಿನಲ್ಲಿ ಮೂಡುತ್ತಿತ್ತು. ಅನೇಕ ರೀತಿಯಲ್ಲಿ ಅವಳ ಬಗ್ಗೆ ಮನಸ್ಸು ಯೋಚಿಸುತ್ತಿತ್ತು. ಯಾವ ಅಸ್ಪಷ್ಟ ಕಾರಣದಿಂದಲೋ ಏನೋ ಅದಕ್ಕೆ ಅವಳ ಬಗ್ಗೆ ನನಗೆ ಕಾಳಜಿ ಅನ್ನಿಸುತ್ತದೆ. ನನ್ನ ಋಣಾನುಬಂಧ ಎನ್ನುವುದು ಅದರಲ್ಲಿಯೂ ಇರಬಹುದು ಎಂದುಕೊಂಡು ಸುಮ್ಮನಾದೆ. ಇದೊಂದು ಮಾತ್ರ ಜೀವನದಲ್ಲಿ ವಿಚಿತ್ರ ಘಟನೆ ಎನಿಸಿತು.


**ಪ್ರಿಯಾ ಕೆ. ಎಸ್.**
D/o ಕೆ. ಎಮ್. ಶಿವಪ್ರಸಾದ್ ಗೌಡ, ಗಾಂಧೀನಗರ, ಬೆಳಲ್ಲಮಕ್ಕಿ,
ಸಾಗರ ತಾಲೂಕು - ೫೭೭ ೪೦೧, ಶಿವಮೊಗ್ಗ ಜಿಲ್ಲೆ


## ೩. ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ

ನನ್ನ ಮೇಲೆ ಹಲವಾರು ಜನ – ಅಂದರೆ ನನ್ನ ತಂದೆ ತಾಯಿ, ನನ್ನ ಅಣ್ಣ, ನನ್ನ ಕೆಲವು ಶಾಲಾ ಕಾಲೇಜು ಗುರುಗಳು – ಪ್ರಭಾವ ಬೀರಿದ್ದಾರಾದರೂ, ವಿಶೇಷ ಪ್ರಭಾವ ಬೀರಿದವರೆಂದರೆ ನನ್ನ ಅಜ್ಜ. ಅಂದರೆ, ನನ್ನ ತಂದೆಯ ತಂದೆ.

ನನ್ನ ಅಜ್ಜನ ಹೆಸರು ಸುತ್ರಾವೆ ಗೋವಿಂದಪ್ಪ. ಅವರಿಗೆ ನಾಲ್ಕು ಜನ

ಗಂಡುಮಕ್ಕಳು. ಮೊದಲನೆಯ ಮಗ ವೆಂಕಟಗಿರಿ ರಾವ್. ನಮ್ಮ ಅಜ್ಜ ವೆಂಕಟೇಶ್ವರನ ಭಕ್ತರಾಗಿದ್ದರಿಂದಲೋ ಏನೋ ಅವರ ಎರಡನೆಯ ಮಗನಿಗೂ ವೆಂಕಟಗಿರಿ ರಾವ್ ಎಂದೇ ಹೆಸರಿಟ್ಟರು. ಈ ಎರಡನೆಯ ವೆಂಕಟಗಿರಿ ರಾವ್ ಅವರೇ ನನ್ನ ತಂದೆ. ನಮ್ಮ ಅಜ್ಜನ ಮೂರನೆಯ ಮಗ ರಾಮಚಂದ್ರ ರಾವ್, ನಾಲ್ಕನೆಯ ಮಗ ಲಕ್ಷ್ಮಣ ರಾವ್. ಮೊದಲನೆಯ ಇಬ್ಬರಲ್ಲಿ ಯಾರು ಯಾರೆಂದು ತಿಳಿಯಲು ಜನ ದೊಡ್ಡ ವೆಂಕಟಗಿರಿ, ಸಣ್ಣ ವೆಂಕಟಗಿರಿ ಎನ್ನುತ್ತಿದ್ದರು. ರಾಮಚಂದ್ರ ರಾವ್ ಮತ್ತು ಲಕ್ಷ್ಮಣರಾವ್ ಸುಮಾರು ಮಧ್ಯ ವಯಸ್ಕರಾಗಿದ್ದಾಗಲೇ ತೀರಿಕೊಂಡರು. ಈ ಇಬ್ಬರ ವಿಧವೆಯವರ ಸಂಸಾರವನ್ನು ತನ್ನ ಇಳಿವಯಸ್ಸಿನಲ್ಲಿ ನಮ್ಮ ಅಜ್ಜನೇ ನಡೆಸಿದ್ದನ್ನು ನೋಡಿ ನಾನು ಆಶ್ಚರ್ಯಪಟ್ಟಿದ್ದೇನೆ. ನಾಲ್ಕು ಮಕ್ಕಳನ್ನು ಹೆತ್ತಿದ್ದ ನಮ್ಮ ಅಜ್ಜಿಯೂ ಕ್ಷಯರೋಗದಿಂದ ತೀರಿಕೊಂಡಳಂತೆ.

ನಮ್ಮ ಅಜ್ಜಿ ಸಾಯುವ ಕೆಲಕಾಲ ಮುಂಚೆ ತಿರುಪತಿಯ ವೆಂಕಟೇಶ್ವರನ ದರ್ಶನ ಮಾಡಲಿಚ್ಛಿಸಿದ್ದಳಂತೆ. ಆಕೆಯ ಆಸೆಯನ್ನು ಪೂರೈಸಲೆಂದು ಕಾಯಿಲೆಯಿಂದ ನಿಶ್ಶಕ್ತಳಾಗಿದ್ದ ನನ್ನ ಅಜ್ಜಿಯನ್ನು ನನ್ನ ಅಜ್ಜ ತನ್ನ ಹೆಗಲಮೇಲೆ ಹೊತ್ತುಕೊಂಡು ಬೆಟ್ಟವನ್ನೇರಿ ದೇವಸ್ಥಾನಕ್ಕೆ ಹೋಗಿದ್ದರಂತೆ. ಮಕ್ಕಳ, ಅಶಕ್ತರ ಸೇವೆಯೇ ದೇವರ ಸೇವೆಯೆಂದು ತಿಳಿದಿದ್ದ ನಮ್ಮ ಅಜ್ಜನು ನನ್ನ ಚಿಕ್ಕಪ್ಪಂದಿರು ಸಾಯುವ ಮುನ್ನ ಕಾಯಿಲೆ ಮಲಗಿದ್ದಾಗ ಅವರ ಶೂಶ್ರೂಷೆಯನ್ನು ತಾವೇ ಮಾಡಿದ್ದರಂತೆ; ಅವರ ಮಲಮೂತ್ರಗಳನ್ನು ಕೂಡ ತಾವೇ ಸ್ವತಃ ತೆಗೆಯುತ್ತಿದ್ದರಂತೆ.

ಇನ್ನು ಚಿಕ್ಕ ಮಕ್ಕಳ ಬಗ್ಗೆ ನಮ್ಮ ಅಜ್ಜನಿಗೆ ಅಪಾರ ಪ್ರೀತಿ ಹಾಗೂ ಕರುಣೆ. ಮನೆಯಲ್ಲಿ ಹೆಂಗಸರು ಹಬ್ಬ ಹರಿದಿನಗಳಂದು ನೈವೇದ್ಯವಿಟ್ಟು ದೇವರ ಪೂಜೆ ಮಾಡುವಲ್ಲಿ ವಿಳಂಬವಾಗಿ, ಮಕ್ಕಳು ಹಸಿವಿನಿಂದ ಒದ್ದಾಡುತ್ತಿದ್ದರೆ, ನಮ್ಮ ಅಜ್ಜ ಸೊಸೆಯಂದಿರಿಗೆ, ''ಅಮ್ಮಾ, ಮೊದಲು ಹಸಿದ ಮಕ್ಕಳಿಗೆ ಬಡಿಸಿ, ಅವರೇ ದೇವರು'' ಅನ್ನುತ್ತಿದ್ದರು.

ನಮ್ಮ ಅಜ್ಜಿ ಸತ್ತಾಗ ನಮ್ಮ ಅಜ್ಜನಿಗೆ ಕೇವಲ ಮೂವತ್ತೆರಡು ವರ್ಷವಂತೆ. ''ಇನ್ನೊಂದು ಮದುವೆ ಮಾಡಿಕೋ'' ಎಂದು ಮನೆಯವರು ಮತ್ತು ಬೇರೆಯವರು ಹೇಳಿದರೂ, ನನ್ನ ಅಜ್ಜ ಅದಕ್ಕೆ ಸುತರಾಂ ಒಪ್ಪಲಿಲ್ಲವಂತೆ. ಮೂವತ್ತೆರಡನೆಯ ವಯಸ್ಸಿನಲ್ಲಿ ವಿಧುರರಾದ ಅವರು ತಮ್ಮ ಎಂಬತ್ನಾಲ್ಕನೆಯ ವಯಸ್ಸಿನಲ್ಲಿ ನಿಧನಹೊಂದುವ ತನಕ ಯಾವ ಆಸೆಗೂ ಒಳಗಾಗದೆ ಕರ್ಮಯೋಗಿಯಾಗಿ ಬಾಳಿದವರು. ಅವರು ಓದಿದ್ದು ಮಿಡ್ಲ್‌ಸ್ಕೂಲ್‌ವರೆಗೆ ಮಾತ್ರ. ಆದರೂ ಅವರಲ್ಲಿ ಅಪಾರ ಪಾಂಡಿತ್ಯವಿತ್ತು. ಅವರ ಶಾಲಾ ಮಾಸ್ತರರೊಬ್ಬರು, ''ಗೋವಿಂದ, ನೀನು ದಿನಾ ನಮ್ಮ ಮನೆಗೆ ಬಾ, ನಿನಗೆ ವಿದ್ಯೆ ಕಲಿಸ್ತೀನಿ'' ಎಂದು ಹೇಳಿದ್ದರಂತೆ. ಅದರಂತೆ, ನಮ್ಮ ಅಜ್ಜ ಆ ಸಂಸ್ಕೃತ ಪಂಡಿತರಿಂದ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ ಮುಂತಾದವುಗಳನ್ನು ಕಲಿತರಂತೆ. ಅವರಿಂದ ಮತ್ತು ತಮ್ಮ ಸ್ವಂತ ಪರಿಶ್ರಮದಿಂದ ಜ್ಞಾನಾರ್ಜನೆ ಮಾಡಿದವರು ನಮ್ಮ ಅಜ್ಜ. ನಮ್ಮ ಅಜ್ಜನಿಗೆ ಸಂಸ್ಕೃತದ ಸಾವಿರಾರು ಶ್ಲೋಕಗಳು ಬಾಯಿಪಾಠವಾಗಿದ್ದವು. ಅವರು ಪುರಾಣಗಳನ್ನು, ಶಾಸ್ತ್ರಗಳನ್ನು ಮತ್ತು ಅವುಗಳ ಟೀಕಾಕಾರರನ್ನೂ, ಚೆನ್ನಾಗಿ ಓದಿಕೊಂಡಿದ್ದರು. ಅವರ ಬಾಯಿಂದ ಭಗವದ್ಗೀತೆಯ ಮತ್ತು ವೇದ ಉಪನಿಷತ್ತಿನ ಶ್ಲೋಕಗಳನ್ನು ಮತ್ತು ಅವುಗಳ ಅರ್ಥವನ್ನು ಕೇಳಲು ಜನ ಬರುತ್ತಿದ್ದರು. ನಾನು ಮೈಸೂರಲ್ಲಿ ಓದುತ್ತಿದ್ದಾಗ ಒಮ್ಮೆ ಡಾ|| ಎಸ್. ರಾಧಾಕೃಷ್ಣನ್ ಅವರ ಒಂದು ಘಟಿಕೋತ್ಸವ ಭಾಷಣ ಕೇಳಲು ಹೋಗಿದ್ದೆ. ಅವರನ್ನು ನೋಡಿದಾಗ ಮತ್ತು ಅವರ ಭಾಷಣ ಕೇಳಿದಾಗ ನನಗೆ ನಮ್ಮ ಅಜ್ಜನ ನೆನಪಾಯಿತು. ಏಕೆಂದರೆ, ಮುಖಲಕ್ಷಣದಲ್ಲಿ ಮತ್ತು ಭಾಷಣ ಶೈಲಿಯಲ್ಲಿ ಅವರಿಬ್ಬರಲ್ಲೂ ಸಾಕಷ್ಟು ಸಾಮ್ಯವಿತ್ತು.

ನಮ್ಮಜ್ಜ ದಾವಣಗೆರೆಯಲ್ಲಿನ ತಮ್ಮ ಬಟ್ಟೆ ಅಂಗಡಿಯನ್ನು ನಮ್ಮ ತಂದೆಗೆ ನಡೆಸಿಕೊಂಡು ಹೋಗಲು ಬಿಟ್ಟು ತಾವೊಬ್ಬರೇ ಒಂಟಿಯಾಗಿ ಕತ್ತಿಗೆ ಎಂಬ ಗ್ರಾಮದಲ್ಲಿದ್ದುಕೊಂಡು ಬಟ್ಟೆ ವ್ಯಾಪಾರವನ್ನು ನಡೆಸುತ್ತಿದ್ದರು. ಆ ಹಳ್ಳಿಯ ದೇವಸ್ಥಾನದ ಕಟ್ಟಡದ ಒಂದು ಭಾಗದಲ್ಲೇ ವಾಸವಾಗಿರಲು ಹಳ್ಳಿಯವರು ಅವರಿಗೆ ಅನುಕೂಲ ಮಾಡಿಕೊಟ್ಟಿದ್ದರು. ಅಲ್ಲೇ ಅವರ ವ್ಯಾಪಾರ, ವಸತಿ. ತಾವೇ ಸ್ವತಃ ಅಡುಗೆ ಮಾಡಿಕೊಳ್ಳುತ್ತಿದ್ದರು. ಹಳ್ಳಿಯ ಜನರಿಗೆ ನಮ್ಮಜ್ಜನ ಬಗ್ಗೆ ಅಪಾರ ಗೌರವ. ದೇವಸ್ಥಾನದ ಕಟ್ಟೆಯ ಮೇಲೆ ಜನ ಸೇರಿದಾಗಲೆಲ್ಲ ನಮ್ಮ ಅಜ್ಜನ ಪ್ರವಚನ ನಡೆಯುತ್ತಿತ್ತು. ಅದರಂತೆಯೇ, ನಮ್ಮೂರಿಗೆ ಬಂದಾಗಲೂ ಕೂಡ ನಮ್ಮ ಅಂಗಡಿಯ ಒಂದು ಮೂಲೆಯಲ್ಲೋ ಅಥವ ಮನೆಯ ಜಗುಲಿಯ ಮೇಲೋ ಅವರ ಉಪನ್ಯಾಸ ಕೇಳಲು ಆಗಾಗ್ಗೆ ಜನ ಬರುತ್ತಿದ್ದುದನ್ನು ನಾನು ಕಂಡಿದ್ದೇನೆ; ಮತ್ತು ನಾನು ಕೂಡ ಹಲವಾರು ಸಲ ಕೂತು ಕೇಳಿದ್ದೇನೆ.

ನಮ್ಮ ಅಜ್ಜನಿಗೆ ಅದೇಕೋ ಏನೋ, ನನ್ನ ಮೇಲೆ ವಿಶೇಷ ಪ್ರೀತಿ. ಅವರೊಡನೆ ನಾನು ಮನೆಯಿಂದ ಅಂಗಡಿಗೆ ಅಥವಾ ಅಂಗಡಿಯಿಂದ ಮನೆಗೆ ಹೋಗುವ ಎರಡು ಮೈಲಿ ದಾರಿಯುದ್ದಕ್ಕೂ ಅವರು ಮೌಖಿಕವಾಗಿಯೇ ನನಗೆ ವ್ಯಾಕರಣ, ಪತ್ರಲೇಖನ, ಪದ್ಯ, ಪಾಠಗಳನ್ನು ಕಲಿಸುತ್ತಿದ್ದರು. ಹೀಗೆ ಅವರಿಂದ ನಾನು ಸಾಕಷ್ಟು ವಿದ್ಯೆಯನ್ನು ಕಲಿತದ್ದು ನನ್ನ ಸೌಭಾಗ್ಯವೇ ಸರಿ.

ನಮ್ಮ ಅಜ್ಜನ ಸ್ವಾತಂತ್ರ್ಯ ಪ್ರಿಯತೆ, ಸ್ವಾಭಿಮಾನ, ಕಾಯಕ ಶ್ರದ್ಧೆ, ಸರಳತೆ, ಸನ್ನಡತೆ, ಜ್ಞಾನಾರ್ಜನೆ ಮತ್ತು ವಿದ್ಯಾದಾನ – ಈ ಎಲ್ಲಾ ಗುಣಗಳು ನನ್ನ ಮೇಲೆ ಪ್ರಭಾವ ಬೀರಿವೆ.

ಅಂದಹಾಗೆ, ಇನ್ನೊಂದು ಮಾತು. ಏನೆಂದರೆ, ನನ್ನ ಅಜ್ಜ ನನಗೆ ಬಿಟ್ಟುಹೋಗಿರುವ ಆಸ್ತಿಯೆಂದರೆ ಅವರಲ್ಲಿದ್ದ ಪುಸ್ತಕಗಳು. ಆ ಪುಸ್ತಕಗಳನ್ನು ನಾನು ಇವತ್ತಿಗೂ ಬಹು ಪ್ರೀತಿಯಿಂದ ನನ್ನ ಬೀರುವಿನಲ್ಲಿಟ್ಟು ಜತನ ಮಾಡಿದ್ದೇನೆ, ಆಗಾಗ್ಗೆ ತೆಗೆದು ನೋಡುತ್ತಿರುತ್ತೇನೆ.

**ಪ್ರೊ|| ಶ್ರೀನಿವಾಸ್ ಎ. ಸುತ್ರಾವೆ**
೧೬೪೬/೧೮, ಮಹಡಿ, ವಿದ್ಯಾನಗರ, ದಾವಣಗೆರೆ - ೫೭೭ ೦೦೫

## ೪. ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ

**ಒ**ಬ್ಬನ ಒಂದು ಮಾತಿನಿಂದ, ಉಪದೇಶದಿಂದ ಅಥವಾ ಮನಸ್ಸಿನ ಮೇಲೆ ಪರಿಣಾಮ ಬೀರುವ ಒಂದು ಚಿಕ್ಕ ಘಟನೆಯಿಂದಲೂ ವ್ಯಕ್ತಿಯೊಬ್ಬನ ಜೀವನದ ದಿಕ್ಕೇ ಬದಲಾಗುವುದಿದೆ, ಬದಲಾಗಿದೆ. ಇದಕ್ಕೆ ಬುದ್ಧ, ದಯಾನಂದ ಸರಸ್ವತಿ ಮೊದಲಾದ ಮಹಾಪುರುಷರ ಜೀವನದಲ್ಲಿ ನಡೆದ ಘಟನೆಗಳೇ ಸಾಕ್ಷಿ.

ನನ್ನ ಜೀವನದಲ್ಲೂ ಬಾಲ್ಯದಲ್ಲಿ ನಡೆದ ಒಂದು ಚಿಕ್ಕ ಘಟನೆಯಿಂದ, ಒಬ್ಬ ಮಹಾನ್ ವ್ಯಕ್ತಿಯ ಉಪದೇಶದಿಂದ ಬಡತನ ಎಂಬ ಅಂಧಕಾರದಲ್ಲಿ ಮುಳುಗಿದ, ಮುಂದೆ ಬೆಳಕು ನೀಡುವ ಆಶಾಕಿರಣವೂ ಇಲ್ಲದ ಜೀವನಮಾರ್ಗ ಉಜ್ವಲವಾಯಿತು. ಹಾಗೆಂದು – ಆ ವ್ಯಕ್ತಿಯ ಹಿತವಚನದಿಂದ ನಾನೇನೂ ಮಹಾನ್ ವ್ಯಕ್ತಿಯಾಗಿ ಬಾಳದಿದ್ದರೂ ಸಾರ್ಥಕ ಜೀವನ ನಡೆಸುವಲ್ಲಿ ಸಫಲನಾದೆ.

ಕನ್ನಡದಲ್ಲಿ ಹತ್ತಾರು ಕಾದಂಬರಿಗಳನ್ನು ನೂರಾರು ಕಥೆಗಳನ್ನು – ಹಿಂದಿಯಲ್ಲಿ ಕೆಲವು ಕತೆಗಳನ್ನು, ನಾಟಕಗಳನ್ನು ಮತ್ತು ಲೇಖನಗಳನ್ನು ಸಂಸ್ಕೃತದಲ್ಲಿ ಸಂವೇದನಾತ್ಮಕ ಪ್ರಬಂಧಗಳನ್ನು ಬರೆದು ಪ್ರಕಟಪಡಿಸಿದ್ದರೂ ಸಾಹಿತ್ಯಕ್ಷೇತ್ರದಲ್ಲಿ ನನ್ನದು ದೊಡ್ಡ ಹೆಸರೇನಲ್ಲ.

ಗೆಳೆಯರ, ಪರಿಚಿತರ ಅಥವಾ ಬಂಧುಗಳ ಬಳಗದಿಂದ ಕಾಸು ಕೊಟ್ಟು ಹೊಗಳಿಸಿಕೊಂಡಿದ್ದರೆ, ಸನ್ಮಾನ-ಸಮಾರಂಭಗಳ ಮೂಲಕ ನನ್ನ ತಿಥಿಯನ್ನು ನಾನೇ ಮಾಡಿಸಿಕೊಂಡಿದ್ದರೆ ಅಥವಾ ಸಂಬಂಧಪಟ್ಟವರ ಕೈಕಾಲು ಹಿಡಿದೋ, ಹಸ್ತಪ್ರಕ್ಷಾಳನಾರ್ಥಂ ದಕ್ಷಿಣೆ ಕೊಟ್ಟೋ ಒಂದೆರಡು ಕಾದಂಬರಿಗಳಿಗೆ ಬಹುಮಾನ ದಕ್ಕಿಸಿಕೊಂಡಿದ್ದರೆ ದೊಡ್ಡ ಸಾಹಿತಿಗಳ ಸಾಲಿಗೆ ಸೇರುತ್ತಿದ್ದೆನೋ ಏನೋ! ಹೋಗಲಿ ಬಿಡಿ, ಆ ವಿಚಾರ.

ಈಗ ನನ್ನ ಜೀವನಕ್ಕೆ ಬೆಳಕು ನೀಡಿದ, ಬದುಕಲು ದಾರಿ ತೋರಿಸಿದ – ಸಮಗ್ರ ಜೀವನದ ಮೇಲೆ ಪ್ರಭಾವ ಬೀರಿದ, ಆ ವ್ಯಕ್ತಿ ಯಾರೆಂದು ತಿಳಿಯುವ ಕುತೂಹಲ ಸ್ವಾಭಾವಿಕವಾಗಿ ನಿಮ್ಮಲ್ಲಿರಬಹುದು. ಆ ಮಹಾನ್ ವ್ಯಕ್ತಿ ಬೇರೆ ಯಾರೂ ಅಲ್ಲ, ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರೂ ಕಾದಂಬರಿಕಾರರೂ ಆಡುಮುಟ್ಟದ ಗಿಡ ಇಲ್ಲವೆಂಬಂತೆ ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ಕೈ ಆಡಿಸಿದ, ಸರ್ವಸಮರ್ಥರೂ ಆಗಿದ್ದ ಡಾ|| ಕೋಟ ಶಿವರಾಮ ಕಾರಂತರು. ಅವರೇ ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ. ಆ ಮಹಾನ್

ವ್ಯಕ್ತಿಗೂ ಯಃಕಶ್ಚಿತ್ ಹುಲುಮಾನವನಾದ ನನಗೂ ಹೇಗೆ, ಎತ್ತಣ ಸಂಬಂಧವೆಂದು ನೀವು ಕೇಳಬಹುದು. ನಡೆದ ಸಂಗತಿ ಇಷ್ಟು!

ನನ್ನೂರು ಮಿತ್ತೂರು. ಪುತ್ತೂರಿಗೆ ಹತ್ತಿರ. ಬಾಲ್ಯದಲ್ಲಿ ವಾರಕ್ಕೊಮ್ಮೆಯಾದರೂ ಪುತ್ತೂರು ಪರ್ಲಡ್ಕದಲ್ಲಿದ್ದ ಕಾರಂತರ ಬಾಲವನದ ಮಾರ್ಗವಾಗಿ ಹೋಗುತ್ತಿದ್ದ ವ್ಯಕ್ತಿ ನಾನು. ಒಮ್ಮೆ ಬಾಲವನದಿಂದ ಹೊರಗೆ ಮಾರ್ಗಕ್ಕೆ ಹಾರಿಬಂದ ಕಾರಂತರ ಸಾಕಿದ ಜಿಂಕೆಮರಿಯೊಂದನ್ನು ಬೀದಿನಾಯಿ ಹಿಡಿಯಲು ಓಡಿಸಿಕೊಂಡು ಹೋದಾಗ ಕಲ್ಲೆಸೆದು, ನಾಯಿಯನ್ನು ಓಡಿಸಿ, ಮರಿಯನ್ನು ಉಳಿಸಿದ ನನ್ನ ಮೇಲೆ ಕಾರಂತರ ವಾತ್ಸಲ್ಯ ಬಿದ್ದ ಘಟನೆ ನನ್ನನ್ನು ಕಾರಂತರು ಮರೆಯದಂತೆ ಮಾಡಿತು.

ನಾನು ವೈದಿಕ ಮನೆತನದಲ್ಲಿ ಹುಟ್ಟಿದವ. ಮನೆತನದ ಎಲ್ಲರೂ ವೈದಿಕರೇ – ಆಗ. ನನ್ನ ನಾಲ್ಕನೇ ವಯಸ್ಸಿನಲ್ಲಿ ತಂದೆ ತೀರಿಹೋದರು. ಅದೇ ಕಾಲಕ್ಕೆ ಹಿರಿಯರ ಆಸ್ತಿಯೂ ಸಾಲಕ್ಕೆ ಏಲಂ ಆಗಿಹೋಯಿತು. ಹಿರಿಯರ ಮನೆಯನ್ನು ಬಿಡಬೇಕಾಗಿಬಂತು. ತಾಯಿಗೆ ಒಬ್ಬನೇ ಮಗನಾದ ನಾನು ನಿರ್ಗತಿಕನಾದೆ. ತಾಯಿಯ ಹತ್ತಿರದ ಬಂಧುಗಳೊಬ್ಬರು ನಮ್ಮ ಮೇಲೆ ದಯೆದೋರಿ ಅವರ ಮನೆಗೆ ಕರೆದುಕೊಂಡು ಹೋದರು. ಅಲ್ಲಿ ನಾನು ಅನಾಥಪಶು! ಮನೆಯ ಯಜಮಾನನ ಮಗನ ಉಪನಯನದೊಂದಿಗೆ ನನಗೂ ಚಿಕ್ಕ ವಯಸ್ಸಿನಲ್ಲೇ ಉಪನಯನ ಸಂಸ್ಕಾರ ಮಾಡಿದರು. ಅವರೂ ವೈದಿಕರೇ. ಆದುದರಿಂದ ಬಾಲ್ಯದಲ್ಲಿ ನಾನು ವೇದಾಧ್ಯಯನ ಮಾಡಿ, ಷೋಡಶ ಸಂಸ್ಕಾರ ಕ್ರಿಯೆಗಳನ್ನು ಅಲ್ಪಸ್ವಲ್ಪ ಕಲಿತು ಮೂರು ಕಾಸಿನ ದಕ್ಷಿಣೆಗಾಗಿ ಕರೆದಲ್ಲಿಗೆ ಹೋಗುತ್ತಿದ್ದೆ. ಹೆಚ್ಚು ಕಡಿಮೆ ಪ್ರತಿದಿನ ಹೀಗೆ ಗಳಿಸಿದ ಮೂರು ಕಾಸಿನಿಂದ ಪುತ್ತೂರಿನ ಶ್ರೀಧರ ಭಟ್ಟರ ಪೊಲೀಸ್ ಸ್ಟೇಶನಿನ ಹತ್ತಿರದಲ್ಲಿದ್ದ ಅಂಗಡಿಯಲ್ಲಿ ಆ ಕಾಲದಲ್ಲಿ ಸಿಗುತ್ತಿದ್ದ ಬ್ಲಾಕ್‌ಬರ್ಡ್ ಪೆನ್ ಮತ್ತು ಸ್ವೇನ್ ಪೆನ್ನುಗಳ ಸುಂದರವಾದ ಚಿಕ್ಕ ಪೆಟ್ಟಿಗೆಗಳನ್ನು ಕೊಂಡುಕೊಳ್ಳುತ್ತಿದ್ದೆ ಅಥವಾ ಬಿಸ್ಕತ್ತುಗಳನ್ನು ಖರೀದಿಸಿ ತಿನ್ನುತ್ತಿದ್ದೆ. ಮನೆಗೆ ಹೋಗಲು ಸಮಯ ತುಂಬ ಇದ್ದಾಗ ಬೊಳುವಾರಿನ ಉಪೇಂದ್ರ ಪ್ರಭುಗಳ ಅಂಗಡಿಯ ಎದುರುಗಡೆಯಲ್ಲಿದ್ದ ಸಾಬ್ರ ಅಂಗಡಿಯಿಂದ ಬಾಡಿಗೆಗೆ ಸೈಕಲ್ಲನ್ನು ತೆಗೆದುಕೊಂಡು ಬೋರ್ಡ್ ಹೈಸ್ಕೂಲಿನ ಆಟದ ಬಯಲಿಗೆ ಹೋಗಿ ಸೈಕಲ್ ಬಿಡುತ್ತಿದ್ದೆ. ಅಂತು ಮನೆಗೆ ಬರುವಾಗ ಕೈ ಖಾಲಿಯಾಗುತ್ತಿತ್ತು. ಕೇಳುವವರು, ಹೇಳುವವರು ಯಾರೂ ಇದ್ದಿಲ್ಲ. ಪಂಜರದಿಂದ ಕಳಬಿದ್ದ ಪಕ್ಷಿಯಾಗಿರುತ್ತಿದ್ದೆ.

ಆ ದಿನಗಳಲ್ಲಿ ಶಿವರಾಮ ಕಾರಂತರು – ಊರಲ್ಲಿದ್ದರೆ – ಪ್ರತಿದಿನವೆಂಬಂತೆ ಬೆಳಿಗ್ಗೆ ಸುಮಾರು ಹತ್ತು ಗಂಟೆಗೆ ಶ್ರೀಧರ ಭಟ್ಟರ ಅಂಗಡಿಗೆ ಬಂದು ಬಿಡುತ್ತಿದ್ದರು. ಅಲ್ಲಿ ಅವರಿಗೆ ಕುಳಿತುಕೊಳ್ಳಲು ಒಂದು ಕುರ್ಚಿ, ಒಂದು ಮೇಜು ಸದಾ ಸಿದ್ಧವಾಗಿರುತ್ತಿತ್ತು. ಹತ್ತಿರದಲ್ಲಿದ್ದ ಹೊಳ್ಳರ ಪಾಪ್ಯುಲರ್ ನ್ಯೂಸ್ ಏಜನ್ಸಿಯಿಂದ ಮೊದಲೇ ಬಂದು ಮೇಜಿನ ಮೇಲೆ ಪವಡಿಸುತ್ತಿದ್ದ ದಿನಪತ್ರಿಕೆಯನ್ನೊಮ್ಮೆ ಮೇಲಿಂದ ಮೇಲೆ ನೋಡಿ ಆಮೇಲೆ ಒಂದೆರಡು ತಾಸು ಕುಳಿತುಕೊಂಡು ಅಂದೇ ಕಳುಹಿಸಬೇಕಾಗಿದ್ದ ಪತ್ರಗಳನ್ನು ಸಿದ್ಧಪಡಿಸಿ ಅಂಚೆಗೆ ಹಾಕಲು ನನ್ನ ಹತ್ತಿರ ಕೊಡುತ್ತಿದ್ದರು. ನಾನು ವೈದಿಕ ಕ್ರಿಯೆಗೆ ಹೊರಟವನು ಅಥವಾ ಮುಗಿಸಿ ಬರುವವನು ಭಟ್ಟರ ಅಂಗಡಿಗೆ ಹೆಚ್ಚು ಕಡಿಮೆ ಅದೇ ಸಮಯಕ್ಕೆ ಬರುತ್ತಿದ್ದೆ. ಆಗ ಅಂಚೆಕಟ್ಟೆ ಭಟ್ಟರ ಅಂಗಡಿಯಿಂದ ಪೂರ್ವಕ್ಕೆ ಒಂದು ಮೈಲು ದೂರದಲ್ಲಿ, ಹರಿಹರ ಛಾಪಖಾನೆಯ ಹತ್ತಿರ ಇತ್ತು (ಈಗ ಅದಿಲ್ಲ). ಕಾರಂತರು ಕೆಲಸ ಮುಗಿಸಿ ಮತ್ತೆ ಮನೆಗೆ, ಬಾಲವನಕ್ಕೆ ಹೋಗುವುದು ಸಂತೆಕಟ್ಟೆಯ ಪಕ್ಕದ ಕೋರ್ಟು ರಸ್ತೆಯಲ್ಲಿ. ಅದು ಬಾಲವನಕ್ಕೆ ನೇರ ರಸ್ತೆ.

ನಮಗೆ, ಮಕ್ಕಳಿಗೆ ಆ ಕಾಲದಲ್ಲಿ ಬಿಳಿಪಂಚೆಯ ಕಚ್ಚೆ, ಜುಬ್ಬ, ಹಾಯಬಿಟ್ಟ ಕೂದಲಿನ ರಾಶಿ, ಮಾಟದ ಕಣ್ಣುಗಳ, ದೀರ್ಘದೇಹದ, ಗಂಭೀರ ವ್ಯಕ್ತಿತ್ವದ ಕಾರಂತರು ಆಕರ್ಷಕ ವ್ಯಕ್ತಿಯಾಗಿದ್ದರು. ಅವರು ದಾರಿಯಲ್ಲಿ ಹಾದು ಹೋಗುತ್ತಿದ್ದರೆ ನಾವು ಅವರನ್ನು ನಿಂತು ನೋಡುತ್ತಿದ್ದೆವು. ನನಗೆ ಆಗ ಎಂಟೋ ಹತ್ತೋ ವರ್ಷ ಆಗಿರಬಹುದು. ೧೯೩೬-೩೮ರ ಮಧ್ಯೆ. ನಾನು ಪ್ರತಿದಿನ ಈ ರೀತಿ ಕಾಸು ಕಳೆದುಕೊಳ್ಳುತ್ತಿರುವುದನ್ನು ಗಮನಿಸಿದ ಕಾರಂತರು ಒಂದು ದಿನ ಎಂದಿನಂತೆ ಅಂಚೆಗೆ ಹಾಕಲು ಪತ್ರ ಕೊಡುತ್ತಾ, ಒಂದಾಣೆಯನ್ನು ನನ್ನ ಕೈಯಲ್ಲಿತ್ತು 'ಈ ದುಡ್ಡನ್ನು ಏನು ಮಾಡುತ್ತೀ ?' ಎಂದು ಕೇಳಿದರು. ಬಿಸ್ಕೀಟು, ಬಾಯಾರಿಕೆಯಾದರೆ ಸೋಡಾ ತೆಗೆದುಕೊಳ್ಳುತ್ತೇನೆ – ಅಂದೆ. ಆಗ ಕಾರಂತರು 'ಬೇಡ, ಹಣ ಹಾಳು ಮಾಡಬೇಡ. ನೀನು ತುಂಬಾ ಚುರುಕಿನ ಮಾಣಿ. ಬಡವಾಂತ ಹೇಳುತ್ತಿ. ಸಿಕ್ಕಿದ ಹಣ ಕೂಡಿಟ್ಟು ಓದು ಬರಹ ಕಲಿ. ಇನ್ನೂ ತಡವಾಗಿಲ್ಲ. ಕಲಿತು ನನ್ನ ಹಾಗೆ ಕಾದಂಬರಿ ಬರಿ. ಈಗೀಗ ಹತ್ತು ಜನರೊಂದಿಗೆ ಬೆರೆತು ಯಾರು, ಹೇಗೆ ಎಂಬುದು ಗೊತ್ತಾಗಿದೆ. ಮುಂದೆ ಬರೆಯಲು ಅದೇ ಸಾಕು' ಅಂದರು.

ಕಾರಂತರ ಈ ಸಲಹೆ ನನ್ನ ಜೀವನದ ದಿಕ್ಕನ್ನೇ ಬದಲಾಯಿಸಿತು. ನಾನು ವೈದಿಕ ಕ್ರಿಯೆಯಿಂದ ಮೆಲ್ಲಮೆಲ್ಲನೇ ಜಾರುತ್ತಾ, ಓದು ಬರಹದತ್ತ ಗಮನ ಹರಿಸಿದೆ. ಕಾರಂತರು ಅಂದಂತೆ ಕೂಡಿಟ್ಟ ಹಣದಿಂದ ಪುಸ್ತಕಗಳನ್ನು ಕೊಂಡು ಕೊಂಡು ವಿದ್ಯಾರ್ಜನೆಯತ್ತ ಸಾಗಿದೆ. ಮುಂದೆ ಅಕ್ಕನ ಮನೆಗೆ ಹೋಗಿ ಅಲ್ಲಿದ್ದು ಖಾಸಗಿಯಾಗಿ ಹಿಂದಿ, ಕನ್ನಡ ಮತ್ತು ಸಂಸ್ಕೃತ ಕಲಿತುಕೊಂಡು ಪರೀಕ್ಷೆಗಳಿಗೆ ಕುಳಿತು ಸ್ನಾತಕೋತ್ತರ ಪದವಿ ಪಡೆದುಕೊಂಡೆ. ಕಾನ್ವೆಂಟ್ ಮತ್ತೆ ಕೇಂದ್ರೀಯ ವಿದ್ಯಾಲಯಗಳಿಗೆ ಅಧ್ಯಾಪಕನಾಗಿ ಸೇರಿ ನಿವೃತ್ತನಾದೆ. ಮಕ್ಕಳಿಗೆ ಒಳ್ಳೆಯ ಶಿಕ್ಷಣ ದೊರಕಿ ವಿದೇಶಗಳಲ್ಲಿ ಉತ್ತಮ ಹುದ್ದೆಯಲ್ಲಿದ್ದಾರೆ.

ಕಾರಂತರ ಹಿತನುಡಿ ನನಗೆ ದೊರಕದೇ ಇರುತ್ತಿದ್ದರೆ ಇಂದು ನಾನು ಏನಾಗಿರುತ್ತಿದ್ದೆನೋ ಊಹಿಸಲೂ ಸಾಧ್ಯವಾಗುವುದಿಲ್ಲ. ಕಾರಂತರೊಂದಿಗೆ ಅಂದು ಬೆಳೆದ ಸಂಬಂಧ ಅವರ ಕೊನೆಯ ದಿನಗಳವರೆಗೂ ಉಳಿಯಿತು. ಸಾಯುವ ಎರಡು ವರ್ಷಗಳ ಮೊದಲು ನನ್ನ 'ನೆನಪಿನ ಬಿಂಬಗಳು' ಎಂಬ ಆತ್ಮಕಥೆಗೆ – ಬೈಯಿಸಿಕೊಂಡಿದ್ದರೂ – ಹೆಸರನ್ನು ಅವರಿಂದಲೇ ಪಡೆದುಕೊಂಡಿದ್ದೆ.

ಸಾಮಾನ್ಯವಾಗಿ ಜನರು ತಿಳಕೊಂಡಂತೆ ಕಾರಂತರು ನಿಷ್ಠುರರು, ಕೋಪಿಷ್ಠರು. ಆದರೆ ಬಾಲ್ಯದಿಂದಲೂ ನಾನು ಅವರನ್ನು ಚೆನ್ನಾಗಿ ಬಲ್ಲವನಾಗಿರುವುದರಿಂದ ''ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ'' ಎಂಬಂತೆ ಅವರ ಹೃದಯದ ಒಂದು ಮೂಲೆಯಲ್ಲಿ ಕರುಣೆಯ, ಮಮತೆಯ ಒಸರು ಸದಾ ಜಿನುಗುತ್ತಿತ್ತು ಎಂದು ಹೇಳಬಲ್ಲೆ. ಒಮ್ಮೆ ಅವರ ಪ್ರೆಸ್ಸಿನ ಮ್ಯಾನೇಜರರಾಗಿದ್ದ ಕೃಷ್ಣಭಟ್ಟರ ಮೇಲೆ ಏನೋ ಕಾರಣಕ್ಕೆ ಕುಪಿತರಾಗಿ ಮತ್ತೆ ಸ್ವಲ್ಪ ಸಮಯದ ನಂತರ 'ಭಟ್ಟರೇ, ಬೇಸರ ಮಾಡಬೇಡಿ, ಹಾಗಲ್ಲ, ಹೀಗೆ' ಎಂದು ಹೇಳಿ ಸಮಾಧಾನಪಡಿಸಿದ್ದನ್ನು ಬಲ್ಲೆ. ಅವರ ಮಗ ಹರ್ಷ ಮುಂಬಯಿಯಲ್ಲಿ ಹೊಟ್ಟೆಯಲ್ಲಿ ಬೆಳೆದ ಗಡ್ಡೆಯ ಆಪರೇಷನ್ನಿನ ನಂತರ ತೀರಿಹೋದ ಸುದ್ದಿಯನ್ನು ಪುತ್ತೂರಿನ ಎ. ಪಿ. ಸುಬ್ಬಯ್ಯ (ಮರಿಕ್ಕೆ)ನವರ ಹತ್ತಿರ ಹೇಳುತ್ತಿದ್ದಾಗ ಅವರ ಕಣ್ಣು ಒದ್ದೆಯಾದುದನ್ನು ನಾನು ಕಂಡಿದ್ದೇನೆ. ಹೀಗಿದ್ದರು ಕಾರಂತರು. ಅವರೇ ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ.

ಎಂ. ವಿ. ಭಟ್
'ಶ್ರೀಮಿತ್ತೂರು', ಮೇದರಹಳ್ಳಿ, ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦

## ೫. ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ

''ನಂಬದಿರು ಏನನ್ನೂ ಅದು ನಿನಗೆ ಹೇಳಲ್ಪಟ್ಟಿದೆ ಎಂಬ ಒಂದೇ ಕಾರಣಕ್ಕೆ ಅಥವಾ ಅದು ಪಾರಂಪರಿಕ ಎಂಬ ಕಾರಣಕ್ಕಾಗಿ, ಅಥವಾ ನೀನೇ ನಿನ್ನಷ್ಟಕ್ಕೆ ಅದನ್ನು ಕಲ್ಪಿಸಿಕೊಂಡಿರುವೆ ಎಂಬ ಕಾರಣಕ್ಕಾಗಿ. ನಿನ್ನ ಉಪಾಧ್ಯಾಯ ನಿನಗೆ ಹೇಳುವುದನ್ನು ಆತನ ಬಗೆಗಿನ ಗೌರವ ಎಂಬ ಒಂದೇ ಕಾರಣಕ್ಕಾಗಿ ನಂಬದಿರು. ಬದಲು ತೀಕ್ಷ್ಣ ಪರೀಕ್ಷೆ ಮತ್ತು ವಿಶ್ಲೇಷಣಾ ನಂತರ ಯಾವುದು ಸಮಸ್ತ ಜೀವಿಗಳ ಶ್ರೇಯೋಭಿವೃದ್ಧಿಗೆ ಕಾರಣವೋ ಆ ತತ್ವವನ್ನು ನಂಬು ಮತ್ತು ಅದಕ್ಕೆ ಶರಣಾಗು ಮತ್ತು ಅದನ್ನು ನಿನ್ನ ಜೀವನ ಮಾರ್ಗದರ್ಶಿಯಾಗಿ ಸ್ವೀಕರಿಸು.'' ಹೊಸತುವಿನ ಲೇಖನವೊಂದರಲ್ಲಿ ಬುದ್ಧನ ಹೇಳಿಕೆಯನ್ನು ಎಷ್ಟು ಸೊಗಸಾಗಿ ನಿರೂಪಿಸಿದ್ದಾರೆ ಲೇಖಕರಾದ ಜಿ.ಟಿ.ಎನ್.ರವರು. ಇಂದಿನ ಸಮಾಜದ ಯುವ ಜನತೆಗೆ ತಮ್ಮ ಭವಿಷ್ಯವನ್ನು ನಿರ್ಧರಿಸಲು ಎಂತಹ ಅರ್ಥಗರ್ಭಿತ ಹೇಳಿಕೆಯಾಗಿದೆ ಇದು. ಆಧುನಿಕತೆಯ ಸೋಗಿನಲ್ಲಿ ಯುವ

ಜನತೆಯ ಮತ್ತು ದೇಶದ ಭವಿಷ್ಯವನ್ನೇ ಅಡ್ಡದಾರಿಗೆ ಎಳೆಯುತ್ತಿರುವ ಇಂದಿನ ಪಾಶ್ಚಿಮಾತ್ಯ ಸಂಸ್ಕೃತಿಯ ಹಾವಳಿಯ ಸಮಯದಲ್ಲಿ ಯುವ ಜನತೆಯ ಆದರ್ಶ, ತತ್ವಗಳು, ಆಚರಣೆ, ಅನುಕರಣೆಗಳು ಸ್ಪಷ್ಟ ಮತ್ತು ಸಮಯೋಚಿತವಾದವುಗಳಾಗಿರಬೇಕಾಗಿದೆ.

ಆದ್ದರಿಂದ ಯುವಕರು ತಮ್ಮ ಮೇಲೆ ಪ್ರಭಾವ ಬೀರಿದ ಪ್ರಮುಖ ವ್ಯಕ್ತಿಯ ಚಿಂತನೆಗಳು, ಮತ್ತು ನಡವಳಿಕೆಗಳನ್ನು ಅಳವಡಿಸಿಕೊಳ್ಳುವುದು ಸಹಜವಾದುದಾಗಿದೆ. ಹಾಗೆಯೇ ನನ್ನ ಮೇಲೆ ಬಹಳವಾಗಿ ಪ್ರಭಾವ ಬೀರಿದ ವ್ಯಕ್ತಿಗಳಲ್ಲಿ ನಾನು ಹಲವಾರು ವ್ಯಕ್ತಿಗಳನ್ನು, ಚಿಂತಕರನ್ನು, ಹೋರಾಟಗಾರರನ್ನು ಪಟ್ಟಿ ಮಾಡಿದಾಗ, ಆ ಪಟ್ಟಿಯಲ್ಲಿ ಮೊದಲ ಹೆಸರು ನನ್ನ ಪ್ರೌಢಶಾಲಾ ಶಿಕ್ಷಕರಾದ ಶ್ರೀಯುತ ಎಂ. ಗಣಪತಿಯಪ್ಪನವರ ಹೆಸರಾಗಿರುತ್ತದೆ. ಕಾರಣ, ಆ ಮಹಾನ್ ವ್ಯಕ್ತಿಗಳ ಪರಿಚಯಕ್ಕೆ ಕಾರಣ ಈ ನಮ್ಮ ಗಣಿತ ಮಾಸ್ತರರೇ.

ಶಾಲೆಯಲ್ಲಿ ಇವರನ್ನು ಎಂ. ಜಿ. ಎಂದು ಕರೆಯುವುದು, ಅದು ಊರಿನ ಎಲ್ಲರ ಬಾಯಲ್ಲೂ ಎಂ. ಜಿ. ಮೇಷ್ಟ್ರು ಆಗಿಬಿಟ್ಟಿದೆ. ಸರಳತೆಯ ಸಜ್ಜನರೂ, ಮಿತಭಾಷಿಕರೂ ಆದ ಇವರು ಎಲ್ಲಾ ಮಕ್ಕಳಿಗೂ ಅಚ್ಚುಮೆಚ್ಚು. ಮಕ್ಕಳಿಗೆ ರುಚಿಸುವಂತೆ ಬೋಧನೆ ಮಾಡುವುದು, ಅವರ ಆಸಕ್ತಿಕರ ವಿಷಯಗಳಲ್ಲಿ ಹೆಚ್ಚು ತೊಡಗಿಕೊಳ್ಳಲು ಪ್ರೋತ್ಸಾಹ ನೀಡುವ ಇವರಿಗೆ, ಶಾಲೆಯ ಎಲ್ಲಾ ಮಕ್ಕಳೂ ಉನ್ನತ ಶ್ರೇಣಿಯನ್ನು ಪಡೆಯುವಂತೆ ಮಾಡುವ ಹಂಬಲ.

ವಿದ್ಯಾರ್ಥಿಗಳನ್ನು ''ಭ್ರಾತೃ ಭಗಿನಿಯರೇ!'' ಎಂದು ಪ್ರೀತಿಯಿಂದ ಸಂಬೋಧಿಸುತ್ತಾರೆ. ಈ ಪದಗಳೆಲ್ಲಾ ಹೊಸದಾಗಿದ್ದ ನಮಗೆ ಅವುಗಳ ಅರ್ಥ ಸ್ವಾರಸ್ಯವನ್ನು ವಿವರಿಸಿ ಹೇಳುತ್ತಿದ್ದರು. ಹೀಗೆ ಪದಗಳಿಂದ ಆರಂಭವಾದ ಅವರ ವಿವರಣೆಗಳು ನಂತರ ಸಾಹಿತ್ಯಕೃತಿಗಳೆಡೆಗೆ, ಮಹಾನ್ ಚಿಂತಕರು ಮತ್ತು ಪುಸ್ತಕಗಳ ಪರಿಚಯ ಮಾಡಿಸುವವರೆಗೆ ಬೆಳೆಯಿತು. ನನಗೆ ಸಾಹಿತ್ಯದ ಬಗ್ಗೆ ಹುಚ್ಚು ಹಿಡಿಸಿದವರೂ ಇವರೇ. ಸಣ್ಣ ಸಣ್ಣ ಪುಸ್ತಕಗಳನ್ನು ನೀಡಿ ನಂತರ ಕನ್ನಡ ಸಾಹಿತ್ಯಲೋಕದ ಅನೇಕ ಮಹಾನ್ ಕೃತಿಗಳು, ಅನ್ಯಭಾಷೆಯ ಅನುವಾದಗಳು, ವೈಜ್ಞಾನಿಕ ಬರಹಗಳು – ಹೀಗೆ ಹಲವಾರು ವರ್ಗಗಳ ಪುಸ್ತಕಗಳನ್ನು ಅವರ ಸಂಗ್ರಹದಿಂದಲೇ ನೀಡಿ ನನಗೆ ಪುಸ್ತಕ ಪ್ರೀತಿಯನ್ನು ಬೆಳೆಸಿದರು.

ಇಂತಹ ಆದರ್ಶ ಶಿಕ್ಷಕರು ಮಾತ್ರ ಸಮಾಜದ ಬೆಳವಣಿಗೆಯ ಗತಿಯನ್ನು ಬದಲಿಸಬಲ್ಲರು, ಯುವ ಪೀಳಿಗೆಯ ಆದರ್ಶವಾಗಬಲ್ಲರು. ಒಂದು ಸಮಾಜದಲ್ಲಿನ ಸಮಸ್ಯೆಗಳಿಗೆ, ಸಾಮಾಜಿಕ ಮೌಲ್ಯಗಳು ಹಾಳಾಗದಂತೆ, ಅದನ್ನು ಸಮರ್ಥವಾಗಿ ನಿರ್ವಹಣೆ ಮಾಡುವಂತಹ ಬದಲಾವಣೆಯನ್ನು ಒಬ್ಬ ಆದರ್ಶ ಶಿಕ್ಷಕ ಮಾತ್ರ ನಿರ್ವಹಿಸಬಲ್ಲ. ಉನ್ನತ ಶಿಕ್ಷಣ ನೀಡುವುದೇ ಇಂದಿನ ಸಮಾಜದ ಗುರಿಯಾಗಿದೆ. ಅದರ ಜೊತೆಗೆ ಮೌಲ್ಯಯುತವಾದ ಶಿಕ್ಷಣವನ್ನೂ ನೀಡಬೇಕಿದೆ. ಹಾಗಾದಲ್ಲಿ ಮಾತ್ರ ದೇಶದ ಏಳ್ಗೆ ಸಾಧ್ಯ ಮತ್ತು ಸಮಾಜದ ಉನ್ನತಿಯೂ ಸಾಧಿಸಲು ಸಹಾಯಕವಾಗುತ್ತದೆ.

**ಸಂಪತ್ ಕುಮಾರ್ ಎನ್.**
ಯೋಗಿಮಳಲಿ, ದೆಮ್ಲಾಪುರ ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

## ೬. ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ

ಒಬ್ಬ ವ್ಯಕ್ತಿಯ ಮೇಲೆ ಪ್ರಭಾವ ಬೀರಬೇಕಾದರೆ ಅದು ನೇರವಾದ ಅಥವಾ ಮುಖಾಮುಖಿ ಸಂಬಂಧವೇ ಆಗಬೇಕೆಂದೇನಿಲ್ಲ. ಕೇವಲ ಸಾಹಚರ್ಯದಿಂದಾಗಿ, ಸತತವಾಗಿ ನಮ್ಮ ಗ್ರಹಿಕೆಯ ವ್ಯಾಪ್ತಿಯೊಳಗೆ ಬರುವ ಒಂದು ಪರಿಪೂರ್ಣ ವ್ಯಕ್ತಿತ್ವದಿಂದ ಪ್ರೇರಿತರಾಗುವುದು ಸಾಮಾನ್ಯ. ಆದರೆ ನಾನೆಂದೂ ನೋಡದ, ಮಾತನಾಡದ, ನನಗೆ ಸಂಬಂಧವೇ ಇರದ ಒಬ್ಬ ರಸಋಷಿ ಕೇವಲ ತನ್ನ ಬರವಣಿಗೆಯಿಂದ ನನ್ನೊಬ್ಬಳ ಮೇಲಷ್ಟೇ ಅಲ್ಲ, ಊಹೆಗೂ ನಿಲುಕದಷ್ಟು ಅಸಂಖ್ಯ ಓದುಗರ ಮೇಲೂ ಪ್ರಭಾವ ಬೀರಿರುವುದು ಆಶ್ಚರ್ಯಕರ ಸಂಗತಿಯೇ ಸರಿ. ಈ ರಸಋಷಿಯೇ ನನ್ನ ಪ್ರೀತಿಯ 'ಕಾಡಿನ ಕವಿ' ಕುವೆಂಪು ಎಂದೇನು ಬಾಯ್ಬಿಟ್ಟು ಹೇಳಬೇಕಾಗಿಲ್ಲ, ಕವಿಹೃದಯಗಳೇ ಅದನ್ನು ಅರ್ಥೈಸಿಕೊಳ್ಳಬಲ್ಲವು.

ಕುವೆಂಪುರವರನ್ನು ನಾನು ಮೊದಲು ಅರಿತಿದ್ದು ಅವರ ಮಹಾ ಕಾದಂಬರಿಗಳಾದ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ'ಗಳ ಮೂಲಕ. ನಾನು 'ಮಲೆಗಳಲ್ಲಿ ಮದುಮಗಳು' ಓದುವ ವೇಳೆಗೆ ಕುವೆಂಪುರವರು ಗತಿಸಿ ಐದೋ ಆರೋ ವರ್ಷಗಳೇ ಕಳೆದಿದ್ದವು. ಅಂದು ಹತ್ತು ವರುಷಗಳ ಪುಟ್ಟ ಹುಡುಗಿಗೂ ಬೆರಗಾಗುವಂತೆ ಕಣ್ಣ ಮುಂದೆ ನೇಯ್ದಿತ್ತು, ನೂರಿಪ್ಪತ್ತು ವರ್ಷಗಳ ಹಿಂದಿನ ಮಲೆನಾಡಿನ ಜೀವನ. ಕನ್ನಡ ಸಾರಸ್ವತ ಲೋಕದಲ್ಲಿ ಹೊಸ ಸಂಗ್ರಾಮವನ್ನೇ ಹುಟ್ಟುಹಾಕಿದ ಪ್ರಕೃತಿ ಕವಿ, ವಿಭಿನ್ನ ವರ್ಗಗಳಿಗೆ ಸೇರಿದ್ದ ಗುತ್ತಿ, ಐತ, ಚಿನ್ನಮ್ಮ ಮುಂತಾದ ಮಲೆನಾಡಿನ ಜೀವಗಳನ್ನು ಒಂದೇ ಕೊಂಡಿಯಲ್ಲಿ ಬೆಸೆದು ಅವರ ಬದುಕುಗಳನ್ನು ತೆರೆದಿಟ್ಟ ಬಗೆ ನನ್ನನ್ನು ತೀವ್ರವಾಗಿ ಸೆಳೆಯಿತು. ಕುವೆಂಪು ಕೃತಿಗಳು ಅದ್ಭುತ ರಮ್ಯ ಕಾವ್ಯಗಳ ಶೈಲಿಯಲ್ಲೇ ಇದ್ದರೂ, ಪೂರ್ತಿಯಾಗಿ ರೊಮ್ಯಾಂಟಿಸಿಸಮ್‌ನಲ್ಲಿ ಕಳೆದುಹೋಗದೇ ಇರುವ ಅದರ ವೈಶಿಷ್ಟ್ಯತೆ ನನ್ನ ಮೇಲೆ ಗಾಢವಾದ ಪರಿಣಾಮವನ್ನೇ ಬೀರಿದೆ. ಸ್ವಾತಂತ್ರ್ಯೋತ್ತರದ ಪೀಳಿಗೆಗಳು ಕಳೆದುಕೊಂಡದ್ದೆಲ್ಲವನ್ನು ಮರಳಿಸುವಂತೆ ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಅಂದಿನ ಜೀವನಶೈಲಿಯ ಸೂಕ್ಷ್ಮ ಚಿತ್ರಣವನ್ನೂ ಕೊಡುತ್ತಾ ಹೋಗುತ್ತಾರೆ. ಅವರ ಕಾದಂಬರಿಗಳ ಕಾಲಘಟ್ಟ ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಕ್ರಮಣದ ಸಮಯ ಮತ್ತು ಕೆಳವರ್ಗದವರಿಗೂ ದನಿ ಮೂಡುತ್ತಿದ್ದ ಸಂದರ್ಭ. ಬರೀ ಕಾದಂಬರಿಗಳಾಗದೆ ನಡುವೆ ಓದುಗನನ್ನು ಚಿಂತನೆಗೆ ಒಡ್ಡುವ ವಸ್ತುಗಳನ್ನೂ ನುಸುಳಿಸಿ ಕುವೆಂಪುರವರು ಇದೊಂದು ಮಾಮೂಲಿ ಸೃಜನಾತ್ಮಕ ಕೃತಿಯಾಗದಂತೆ ನೋಡಿಕೊಂಡಿದ್ದಾರೆ. ಹಲವು ವರ್ಗಗಳ ಒಳಗಿನ ಬದುಕನ್ನು ಯಥಾವತ್ತಾಗಿ ಚಿತ್ರಿಸುವ ಕುವೆಂಪುರವರಿಗೆ ಯಾವ ಹುಟ್ಟಿನ ಅಧಿಕೃತತೆಯೂ ಬೇಕಾಗಿರಲಿಲ್ಲ. ಇದರಿಂದಾಗಿಯೇ ಅವರು ನಮಗೆಲ್ಲಾ ಪ್ರೇರಣೆಯಾಗುವುದು.

ಇನ್ನು ಅವರ ಕಾವ್ಯಗಳನ್ನು ಓದಿದಂತೆಲ್ಲಾ ಪ್ರಕೃತಿ ಕವಿಯಾಗಿ ಅವರ ಯಶಸ್ಸು ಅದ್ಭುತವಾಗಿದೆ. ಭಾವಜೀವಿಯಾದ ಕವಿ, ಜೊತೆಗೆ ಕಾವ್ಯದೊಳಗಿನಿಂದ ಎದ್ದುಬರುವ ಮಲೆ, ಕಾನು, ಪರ್ವತಾರಣ್ಯಗಳು ಸಹೃದಯನನ್ನು ಬೆಚ್ಚಿಬೀಳಿಸುತ್ತವೆ. 'ರಾಮಾಯಣ ದರ್ಶನಂ'ನಲ್ಲೇ ಆಗಲಿ, ಇಲ್ಲ ಇತರ ನಾಟಕಗಳಲ್ಲೇ ಆಗಲಿ, ಅಲ್ಲಿನ ಕತೆಯಷ್ಟೇ ಮುಖ್ಯ ಹಿನ್ನೆಲೆಯಲ್ಲಿ ಬರುವ ಪರಿಸರ ಮತ್ತು ಕಾಡು. ಅವರ ಭಾಷೆ ಸಂಸ್ಕೃತಮಯವಾಗಿದೆ ಎಂದು ಹಲವರು ಹುಯಿಲಿಟ್ಟರೂ ನನ್ನನ್ನು ಮೊದಲು ಆಕರ್ಷಿಸಿದ್ದು ಅವರ ವಿನೂತನ ಭಾಷಾ ಪ್ರಯೋಗ. ನವೋದಯ ಕಾಲದ ಕವಿಗಳನ್ನೆಲ್ಲಾ ತುಲನಾತ್ಮಕವಾಗಿ ನೋಡಿದಾಗ ಕುವೆಂಪುರವರ ಕಾವ್ಯದ ತುಂಬೆಲ್ಲಾ ವಿಶಿಷ್ಟ ಕಸುವು ಹರಿಯುತ್ತಿರುವುದು ಎಲ್ಲರ ಗಮನಕ್ಕೂ ಬರುತ್ತದೆ. ಅವರನ್ನು ಪ್ರಕೃತಿಕವಿ ಎಂದರೂ ಅಡ್ಡಿ ಇಲ್ಲ, ಕುಟುಂಬ ಪ್ರೇಮದ ಕವಿ ಎಂದರೂ ತೊಂದರೆ ಇಲ್ಲ, ಆದರೆ ಕ್ರಾಂತಿ ಕವಿ ಎನ್ನಲು ಮಾತ್ರ ಮರೆಯಬಾರದು. ವೈದಿಕಶಾಹಿ ಪರಂಪರೆಯ ವಿರುದ್ಧ ಸಾಹಿತ್ಯ ಲೋಕದಲ್ಲಿ ಮೊದಲು ಸಿಡಿದೆದ್ದ ಶೂದ್ರಪ್ರಜ್ಞೆಯ ಕವಿ, ಕುವೆಂಪು. ನನ್ನಲ್ಲಿ ವೈಚಾರಿಕ ಜಾಗೃತಿ ಮೂಡಿಸಿ, ಬಂಡಾಯ ಮನೋಧರ್ಮವನ್ನು ಬೆಳೆಸುವಲ್ಲಿ ಕುವೆಂಪುರವರ ಕ್ರಾಂತಿ ಗೀತೆಗಳು, ವಿಚಾರಶೀಲ ಚಿಂತನೆಗಳು ಬಹುಪಾಲು ಕೆಲಸ ಮಾಡಿವೆ. ತರುಣರ ಪರಿಶುದ್ಧವಾಗಿರುವ ಮನಸ್ಸು, ಬುದ್ಧಿಗಳೆರಡನ್ನೂ ಪರಿಪಕ್ವಗೊಳಿಸಿ ಸರಿಯಾದ ದಿಕ್ಕಿನಲ್ಲಿ ಕೊಂಡೊಯ್ಯಲು ಅವರೇ ನೀಡಿದ್ದ, ''ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ'' ಎಂಬ ಕರೆ ನನ್ನ ಮೇಲೆ ಗಮನಾರ್ಹವಾಗಿ ಕೆಲಸ ಮಾಡಿತ್ತು ಎಂಬುದು ಇಂದಿಗೂ ನೆನಪಿದೆ. ಜೊತೆಗೆ ಅವರ ಬರಹ ಮತ್ತು ವೈಯಕ್ತಿಕ ಬದುಕಿನಲ್ಲೂ ಎದ್ದು ಕಾಣುತ್ತಿದ್ದ ಮಾನವ ಪ್ರೇಮದಿಂದಲೂ ನಾನು ಬಹಳಷ್ಟು ಸ್ಫೂರ್ತಿ ಪಡೆದಿದ್ದೇನೆ.

ಅವರ ಬರಹಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ಅವರಿಗೆ ಮಾತ್ರವೇನೋ ಎಂಬಂಥ ಒಂದು ವಿಶೇಷವಾದ ಶೈಲಿ ಕಾಣುತ್ತದೆ. ಒಂದು ಪುಟ್ಟ ವಿಚಾರವನ್ನೂ ರಸಮಯವಾಗಿ ವಿವರಿಸುತ್ತಾ ಓದುಗನನ್ನು ರಸಪ್ರಜ್ಞೆಯ ಶಿಖರಕ್ಕೊಯ್ಯುವುದು ಕುವೆಂಪುರವರಿಗೆ ಮಾತ್ರ ಸಾಧ್ಯ. ಉದಾಹರಣೆಗೆ, ಅವರ 'ಕ್ಷಮಿಸು ಕಂದ!' ಎಂಬ ಪದ್ಯದಲ್ಲಿ ಗಂಡ ಹೆಂಡಿರ ಜಗಳದ ಪರಿಣಾಮವನ್ನು ಆರೇ ವಾಕ್ಯಗಳಲ್ಲಿ ಹೇಳಿ ಮುಗಿಸುತ್ತಾರೆ :

ಮುತ್ತನೊಂದನೊತ್ತದಿಂದು ಸತ್ತೆನೊಂದು ದಿನವನು !
ಮನ್ನಿಸೆನ್ನ , ಮುದ್ದುಕಂದ,
ನಮ್ಮ ನಮ್ಮ ಮುನಿಸಿನಿಂದ
ನಿನ್ನನೆತ್ತಿಕೊಳ್ಳದಿಂದು ಕೊಂದೆನೊಂದು ದಿನವನು,
ಮತ್ತೆ ಮರಳಲಾರದೊಂದು
ಮುತ್ತಿನಂಥ ದಿನವನು !

ಕೆಲವೇ ಸಾಲುಗಳಿಂದ ಓದುಗನಿಗೆ ಜೇನನುಣಬಡಿಸುವ ಈ ಕವಿಯಿಂದ ಪ್ರಭಾವಕ್ಕೊಳಗಾದುದರಲ್ಲಿ ಆಶ್ಚರ್ಯವೇನಿಲ್ಲ ಬಿಡಿ !

ಕುವೆಂಪುರವರದ್ದು ಸಂಕೀರ್ಣ ಎನ್ನಬಹುದಾದಂಥ ವ್ಯಕ್ತಿತ್ವ. ಜೊತೆಗೆ ಹಲವು ಪ್ರತಿಭೆಗಳು ಒಂದೇ ಕಡೆ ನೋಡಸಿಗುವ ಒಂದು ಸಮುಚ್ಚಯವೂ ಆಗಬಹುದು. ಕವಿ, ಕಾದಂಬರಿಕಾರ, ನಾಟಕಕಾರ, ವಿಚಾರವಾದಿ, ಮಾನವತಾವಾದಿ ಮತ್ತು ಕುಟುಂಬಪ್ರೇಮಿಯಾಗಿದ್ದ ಕುವೆಂಪು ಬಾಲ್ಯದಿಂದಲೂ ನನ್ನ ಮೇಲೆ ಅಗಾಧವಾಗಿ ಪ್ರಭಾವ ಬೀರುತ್ತಲೇ ಇದ್ದಾರೆ. ಯಾರನ್ನಾದರೂ ತಮ್ಮೆಡೆಗೆ ಸೆಳೆಯಲು ಋಜು ವ್ಯಕ್ತಿತ್ವ ಮತ್ತು ಋಜು ಚಿಂತನೆಗಳಿದ್ದರಷ್ಟೇ ಸಾಕೆಂದು ನನಗೆ ತೋರಿಸಿಕೊಟ್ಟವರು ಕುವೆಂಪು. ಈ ನನ್ನ ಗುರುಗಳಿಗೆ ಪ್ರೀತಿಯ ನೈವೇದ್ಯದೊಂದಿಗೆ ಮನಃಪೂರ್ವಕ ನಮನಗಳು.

ಸಾಕ್ಷಿ
೨೪/೧೪, ೨೨ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

## ೭. ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ

**ಯಾ**ರಿಗಾದರೂ ಸರಿ, ನಿಮ್ಮ ಮೇಲೆ ಪ್ರಭಾವ ಬೀರಿದ ವ್ಯಕ್ತಿ ಯಾರೆಂದು ಕೇಳಿದರೆ, ಸರ್ ಎಂ. ವಿಶ್ವೇಶ್ವರಯ್ಯ, ಡಾ|| ಬಿ. ಆರ್. ಅಂಬೇಡ್ಕರ್, ಅಬ್ದುಲ್ ಕಲಾಮ್ ತಪ್ಪಿದರೆ ನಮ್ಮ ಶಾಲೆ ಮೇಷ್ಟ್ರು ಎಂಬ ಉತ್ತರಗಳು ಸಹಜವಾಗಿಯೇ ಬರುವಂತಹವುಗಳಾಗಿವೆ. ಆದರೆ ನನಗೇನಾದರೂ ಈ ಪ್ರಶ್ನೆ ಕೇಳಿದರೆ, ನಾ ಹೇಳುವ ಉತ್ತರವೇ ಬೇರೆ. ಯಾರು ಗೊತ್ತಾ? ಗೊತ್ತಾಗುವುದಕ್ಕೆ ಸಾಧ್ಯವೇ ಇಲ್ಲ. ಏಕೆಂದರೆ ಬಹಳ ಮಂದಿ ಪ್ರಭಾವ ಹೊಂದಿ ಮರೆತು ಹೋದ ತಮ್ಮ ತಮ್ಮ ಆಪ್ತ ಸಂಬಂಧಗಳಲ್ಲೊಂದು. ಬಹುಶಃ ಕೆಲವರಿಗೆ ಅರ್ಥವಾಗಿರಲಾರದು. ನೇರವಾಗಿಯೇ ನನ್ನ ಉತ್ತರಕ್ಕೆ ಬಂದೆ, ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ 'ನನ್ನ ತಾಯಿ'.

ಸಮಾಜ ಸುಧಾರಕರ ಪುಸ್ತಕಗಳನ್ನು ಓದಿದಾಗ, ಅವರ ಭಾಷಣವನ್ನು ಆಲಿಸಿದಾಗ ಅವರ ಬಗ್ಗೆ ಸ್ವಲ್ಪ ಮಟ್ಟಿಗಾದರೂ ನಾನು ಪ್ರಭಾವಿತಳಾದದ್ದು ನಿಜ. ಆದರೆ ಅವು ನನ್ನಲ್ಲೇ ಹುದುಗಿಹೋಗುವ ಸಾಧ್ಯತೆಗಳು ಬಹಳ ಕಡಿಮೆಯಾಗಿದ್ದವು. ಇದಕ್ಕೆ ಕಾರಣ ಅವರ್‍ಯಾರೂ ನಮ್ಮ ಭಾವನೆಗಳಿಗೆ ಸ್ಪಂದಿಸುವಂಥವರಾಗಿರಲಿಲ್ಲ. ಆದರೆ ಹತ್ತೊಂಬತ್ತು ವರ್ಷ ನನ್ನನ್ನು ಸಾಕಿ ಬೆಳೆಸಿದ ನನ್ನ ತಾಯಿಗೆ ನಾನು ಒಂದು ಕ್ಷಣ ಮೌನವಾಗಿದ್ದರೆ ಅದರರ್ಥದ ಅರಿವಾಗುತ್ತದೆ. ಆಕೆ ಒಂದು ಕ್ಷಣ ಮನೆಯಲ್ಲಿ ಕಾಣದೆ ಹೋದರೆ ಕೈಕಾಲುಗಳು ಆಡಿಸುವುದನ್ನೇ ನಿಲ್ಲಿಸುತ್ತವೆ. ಕಣ್ಣುಗಳು ಆಕೆಯ ಬರುವಿಕೆಯ ನಿರೀಕ್ಷೆಯಲ್ಲಿರುತ್ತವೆ. ಮನಸ್ಸು ಆಕೆಯೊಂದಿಗಿನ ಅಗಲಿಕೆಯನ್ನು ತಾಳಲಾರದೆ ಸಂಕಟವನ್ನನುಭವಿಸುತ್ತಿರುತ್ತದೆ. ನನ್ನ ಅಮ್ಮ ಅಷ್ಟರಮಟ್ಟಿಗೆ ನನ್ನ ಮೇಲೆ ಪ್ರಭಾವ ಬೀರಿದ್ದಾಳೆ.

ಒಂಬತ್ತು ತಿಂಗಳು ತನ್ನ ಗರ್ಭದಲ್ಲಿರಿಸಿಕೊಂಡು ಜೋಪಾನ ಮಾಡಿ, ಭೂಮಿಗೆ ಬಂದ ಮೇಲೂ ಕಣ್ಣಿನ ರೆಪ್ಪೆಯಂತೆ ನನ್ನನ್ನು ತನ್ನ ಸೆರಗಿನಲ್ಲಿಯೇ ಬಚ್ಚಿಟ್ಟುಕೊಂಡ ಆ ತಾಯಿಯ ಮನಸ್ಸು ಅದೆಷ್ಟು ವಿಶಾಲ. ಮಗುವಾಗಿದ್ದಾಗ ನನ್ನನ್ನು ಸಾಕುವಲ್ಲಿ ಆಕೆಗಿರುವ ತಾಳ್ಮೆ, ಸಹನೆ ಇವೆಲ್ಲಾ ಇತರರಿಗೆ ಇರಲು ಸಾಧ್ಯವೇ ? ನನ್ನ ಪುಟ್ಟ ಕಾಲ್ಗಳು ಅದೆಷ್ಟು ಬಾರಿ ಆಕೆಯನ್ನು ಒದ್ದಿವೆಯೋ ಏನೋ, ಆಕೆ ಅದರಿಂದ ಸಂತೋಷವನ್ನನುಭವಿಸಿದವಳೇ ಹೊರತು ಎಂದೂ ದುಃಖಪಡಲಿಲ್ಲ. ನಿದ್ರಾಭಂಗ ಮಾಡಿರುವ ಅನೇಕ ರಾತ್ರಿಗಳನ್ನು ಆಕೆ ಮರೆತಿದ್ದಾಳೆಯೇ ಹೊರತು ನನ್ನನೆಂದೂ ದೂಷಿಸಲಿಲ್ಲ.

ಮಾಡರ್ನ್ ಅಮ್ಮಂದಿರು ಮಕ್ಕಳನ್ನು ಸಾಕಲು ಅಸಹ್ಯಪಡುವ ರೀತಿಯನ್ನು ನನ್ನ ಅಮ್ಮ ಎಂದೂ ಪ್ರದರ್ಶಿಸಲಿಲ್ಲ. ಗಂಡುಮಕ್ಕಳಾಗಲಿ, ಹೆಣ್ಣು ಬೇಡ ಎಂದು ಕೇಳಿಕೊಳ್ಳದೆ ಯಾವುದಾದರೂ ಮಗುವಾಗಲಿ ಎಂದು ಪ್ರಾರ್ಥಿಸುತ್ತಿದ್ದವಳು ನನ್ನ ತಾಯಿ. ನನಗಾಗಿ ಅನೇಕ ಕಟ್ಟುಪಾಡುಗಳಿಗೆ ಬಾಗುವ ಪರಿಸ್ಥಿತಿಯನ್ನು ಎದುರಿಸಿದಳವಳು. ಅರಿಯದೆ ಆಡಿದ ಎಷ್ಟೋ ಮಾತುಗಳಿಗೆ ಮನ್ನಿಸಿದವಳು. ಗೊತ್ತಿದ್ದೂ ಮಾಡಿದ ತಪ್ಪುಗಳಿಗೆ ಎಚ್ಚರಿಸಿದವಳು. ಇತರರೊಂದಿಗೆ ಗೌರವದಿಂದ ನಡೆದುಕೊಳ್ಳಬೇಕೆಂಬುದನ್ನೂ ತೋರಿಸಿಕೊಟ್ಟವಳು. ತಾಯಿಯೇ ಮೊದಲ ಗುರು ಎಂಬ ವಾಕ್ಯಕ್ಕೆ ನಿದರ್ಶನಳಾದವಳಿವಳು. ಜೀವನವನ್ನು ಎದುರಿಸುವ ಶಕ್ತಿಯನ್ನು ತುಂಬಿದವಳು. ಎಡವಿದಾಗ ಮೇಲಕ್ಕೆ ಎತ್ತಿದವಳು. ನನ್ನ ಸರ್ವತೋಮುಖ ಅಭಿವೃದ್ಧಿಗೆ ಪಾತ್ರಳಾದವಳು, ನನ್ನ ತಾಯಿ.

ಗಾದೆಗಳು ವೇದಕ್ಕೆ ಸಮಾನ. ವೇದ ಸುಳ್ಳಾದರೂ ಗಾದೆಗಳು ಸುಳ್ಳಾಗುವುದಿಲ್ಲ. ನಮ್ಮ ಪೂರ್ವಜರು ಮಾಡಿರುವ ಗಾದೆಗಳ ಒಳಹೊಕ್ಕು ನೋಡಿದಾಗ ಅದರಲ್ಲಿರುವ ಅರ್ಥದ ಅರಿವಾಗುತ್ತದೆ. ಈ ರೀತಿಯಾದ ಗಾದೆಗಳಲ್ಲೊಂದು ''*ಉಪ್ಪಿಗಿಂತ ರುಚಿಯಿಲ್ಲ; ತಾಯಿಗಿಂತ ಬಂಧುವಿಲ್ಲ*'' ಇದರರ್ಥ ನನಗೆ ಅರಿವಾದದ್ದು ನನ್ನ ತಾಯಿಯಿಂದಲೇ. ಇತರರೊಂದಿಗೆ ಹಂಚಿಕೊಳ್ಳಲಾಗದ ಎಷ್ಟೋ ವಿಚಾರಗಳು ತಾಯಿಯೆದುರು ತೆರೆದುಕೊಳ್ಳುತ್ತವೆ. ಪೋಷಕಳಾಗಿ, ಸ್ನೇಹಿತಳಾಗಿ, ಸಲಹಗಾರ್ತಿಯಾಗಿ, ಗುರುವಾಗಿ ನನ್ನ ವಿಚಾರಗಳಿಗೆ ಸ್ಪಂದಿಸುವವಳು ನನ್ನ ತಾಯೇ. ಹೆಣ್ಣಿನ ಕಷ್ಟವನ್ನು ಹೆಣ್ಣಿಂದಲೇ ಅರಿಯಲು ಸಾಧ್ಯ ಎಂಬುದು ಸುಳ್ಳಲ್ಲ. ನನ್ನ ಎಷ್ಟೋ ಸಮಸ್ಯೆಗಳು ನನ್ನ ತಾಯಿಗಷ್ಟೇ ಅರ್ಥವಾಗುತ್ತವೆ. ಅವಳಿಂದಲೇ ಪರಿಹಾರವೂ ದೊರೆಯುತ್ತದೆ.

ನನ್ನಲ್ಲಿರುವ ಬೆಲೆಕಟ್ಟಲಾಗದ ಆಸ್ತಿಯೆಂದರೆ ನನ್ನ ತಾಯಿ. ಆಕೆ ತಿನಿಸುವ ಒಂದು ಅಗಳು ಅನ್ನ ಮೃಷ್ಟಾನ್ನ ಭೋಜನಗಳ ರುಚಿಯನ್ನು ಮೀರಿಸುವಂಥದ್ದು. ತಿಂದಷ್ಟೂ ತೃಪ್ತಿಯಾಗಲಾರದು, ಆಕೆಯ ಪ್ರೀತಿ, ಮಮಕಾರ ತುಂಬಿದ ಕೈತುತ್ತಲ್ಲಿ. ಕಾಯಿಲೆಯಿಂದ ಮಲಗಿರುವ ಎಷ್ಟೋ ಸಂದರ್ಭಗಳಲ್ಲಿ ನನ್ನನ್ನು ಆರೈಕೆ ಮಾಡಿರುವ ಆಕೆಯ ಕೈಗಳಿಗೆ ಅದೆಷ್ಟು ಬಾರಿ ನಮಿಸಿದರೂ ಸಾಲದು. ಬಾಲ್ಯದಲ್ಲಿ ನನ್ನನ್ನು ಹೊತ್ತು ತಿರುಗಿದ ಆಕೆಯ ಕಾಲ್ಗಳಿಗೆ ಎಷ್ಟು ಬಾರಿ ತಲೆ ಬಾಗಿದರೂ ಸಾಲದು. ಅನಾರೋಗ್ಯದ ಸಮಸ್ಯೆಗಳು ವೈದ್ಯರಿಂದ ವಾಸಿಯಾಗುತ್ತಿದ್ದಕ್ಕಿಂತ ಅಮ್ಮನ ಪ್ರೀತಿಯಿಂದ ವಾಸಿಯಾಗುತ್ತಿದ್ದುದೇ ಹೆಚ್ಚು. ಅನೇಕ ಕಹಿ ಸಂದರ್ಭಗಳಲ್ಲಿ ಪ್ರೀತಿಯ ಸಿಂಚನವನ್ನು ಎರಚಿದವಳು ನನ್ನ ತಾಯಿ. 'ಮಾತು ಬೆಳ್ಳಿ, ಮೌನ ಬಂಗಾರ' ಎಂಬುದಕ್ಕೆ ನಿದರ್ಶನ ನನ್ನ ತಾಯಿ.

''ದೇವರು ಎಲ್ಲಾ ಕಡೆ ಇದ್ದು ಎಲ್ಲರನ್ನು ನೋಡಿಕೊಳ್ಳಲಾಗದ ಕಾರಣ ತಾಯಿಯನ್ನು ಸೃಷ್ಟಿಸಿದನೆಂದು'' ಹಿರಿಯರು ಹೇಳುತ್ತಾರೆ. ತಾಯಿಯ ಬೆಲೆ ಗೊತ್ತಿದ್ದವರಿಗೆ ಮಾತ್ರ ಈ ವಾಕ್ಯ ಅರ್ಥವಾಗುತ್ತದೆ. ತಾಯಿಯನ್ನು ದೇವರಿಗೆ ಹೋಲಿಸಿದ ಮೇಲೆ ಆಕೆಯ ಮಹತ್ವ, ಹಿರಿಮೆ ಎಷ್ಟೆಂದು ವಿವರಿಸಬೇಕಾದ ಅಗತ್ಯ ಇಲ್ಲ. ಶಾಂತಮೂರ್ತಿ, ಪ್ರೇಮಸ್ವರೂಪ ಎಂಬ ಬಿರುದುಗಳು ಈಕೆಗೆ ಸಾಲದು.

ಮಕ್ಕಳಲ್ಲಿರುವ ಸುಸಂಸ್ಕೃತಿ ತಾಯಿಯಿಂದ ಬಂದ ಕೊಡುಗೆಯಾಗಿರುತ್ತದೆ. ಹೆಚ್ಚಾಗಿ ಹೆಣ್ಣುಮಕ್ಕಳು ತಮ್ಮ ತಾಯಿಯ ಗುಣಗಳನ್ನು ಪ್ರತಿಬಿಂಬಿಸುವಂತೆ, ನಾನು ಆಕೆಯ ರೂಪವನ್ನು ಹೊಂದಿರದಿದ್ದರೂ, ಆಕೆಯ ಎಲ್ಲಾ ಗುಣಗಳನ್ನು ಪ್ರತಿಬಿಂಬಿಸಬೇಕೆಂಬುದೇ ನನ್ನ ಆಸೆ. ತಾಯಿಯ ಹೃದಯ ಎಷ್ಟು ಮೃದುವೆಂದರೆ ನನಗೆ ಪೆಟ್ಟಾದರೆ ಆಕೆ ಸಂಕಟವನ್ನು ಅನುಭವಿಸುತ್ತಾಳೆ. ಆಕೆಯ ಮೃದುಮಾತುಗಳಲ್ಲಿ ಅದೇನು ಶಕ್ತಿಯಡಗಿದೆಯೋ, ನೋವೇ ಮರೆತು ಹೋಗುತ್ತದೆ. ಮಾನಸಿಕವಾಗಿ, ದೈಹಿಕವಾಗಿ ನಮ್ಮಲ್ಲಿ ಚೈತನ್ಯದ ಚಿಲುಮೆಯನ್ನು ಹರಿಸುವವಳಿವಳು. ಆಕೆ ಮನೆಯಲ್ಲಿ ಇಲ್ಲದಿದ್ದರೆ ಅಸ್ತವ್ಯಸ್ತಗೊಳ್ಳುವ ಸಜೀವ ಮತ್ತು ನಿರ್ಜೀವ ವಸ್ತುಗಳು ! ಆಕೆ ಮನೆಯಲ್ಲಿದ್ದರೆ, ಮನೆಯಲ್ಲಿನ ನಂದಾದೀಪ ಸದಾ ಇತರರಿಗಾಗಿ ಬೆಳಕನ್ನು ನೀಡುವಂತೆ ಆಕೆ ನನ್ನ ಜೀವನದ ಬೆಳಕಾಗಿದ್ದಾಳೆ.

ನನ್ನ ಕಷ್ಟ, ಸಂಕಟಗಳೆರಡರಲ್ಲೂ ನೆನಪಾಗುವುದು 'ಅಮ್ಮ'. ಇಷ್ಟರ ಮಟ್ಟಿಗೆ ನನ್ನ ತಾಯಿ ನನ್ನ ಮೇಲೆ ಪ್ರಭಾವ ಬೀರಿದ್ದಾಳೆ.

**ಸುಮಾರಾಣಿ ಹೆಚ್. ಎನ್.**
ಪ್ರಥಮ ಪತ್ರಿಕೋದ್ಯಮ ವಿದ್ಯಾರ್ಥಿನಿ, ಎಲ್. ಬಿ. ಅಂಡ್
ಎಸ್. ಬಿ. ಎಸ್. ಕಾಲೇಜು, ಸಾಗರ, ಶಿವಮೊಗ್ಗ ಜಿಲ್ಲೆ



## ನವಕರ್ನಾಟಕ ಪ್ರಕಾಶನದ ಕೆಲವು ಪ್ರಶಸ್ತಿ ಪುರಸ್ಕೃತ ಕೃತಿಗಳು

ಕಂದಾ ಓದುವೆಯಾ – ಭಾಗ 1 (ಸಚಿತ್ರ 4ನೇ ಮುದ್ರಣ) ಬಿ. ಕೆ. ತಿರುಮಲಮ್ಮ 20.00
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1995)**

ಬದುಕುವ ಬಯಕೆ (ಎನ್.ಸಿ.ಇ.ಆರ್.ಟಿ. ರಾಷ್ಟ್ರೀಯ ಪ್ರಶಸ್ತಿ 1976) ದು. ನಿಂ. ಬೆಳಗಲಿ 12.00

ಸುಖ ನೀಡದ ಸಂಪತ್ತು (2ನೇ ಮು.) **(ಕನ್ನಡ ಸಾಹಿತ್ಯ ಪರಿಷತ್ತಿನ 'ಮಕ್ಕಳ ಪುಸ್ತಕ ಪ್ರಶಸ್ತಿ' 1999)** ಪ. ರಾಮಕೃಷ್ಣ ಶಾಸ್ತ್ರಿ 15.00

ಬೆಳ್ಳಕ್ಕಿ ಮತ್ತು ಬುಲ್ ಬುಲ್ **(ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಮಕ್ಕಳ ಸಾಹಿತ್ಯ ಪ್ರಶಸ್ತಿ' 2003)** ಗಣೇಶ ಪಿ. ನಾಡೋರ 30.00

ಶಬ್ದಲೋಕ (7ನೇ ಮು.) (ಎನ್.ಸಿ.ಇ.ಆರ್.ಟಿ. ಪ್ರಶಸ್ತಿ 1996) ಗಾಯತ್ರಿ ಮೂರ್ತಿ 25.00

ಚಕ್ರ (ಜನಪ್ರಿಯ ವಿಜ್ಞಾನ ಲೇಖನಗಳು. 3ನೇ ಮು.) **(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1996)** ಜೆ. ಆರ್. ಲಕ್ಷ್ಮಣ ರಾವ್ 50.00

ಪ್ರತಿಬಿಂಬ (ಮಕ್ಕಳಿಗಾಗಿ ಮನೋರಂಜಕ ವೈಜ್ಞಾನಿಕ ಚಟುವಟಿಕೆಗಳು) ಪ್ರೊ|| ಡಿ. ಆರ್. ಬಳೂರಗಿ 35.00
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 2000)**

ಸೃಜನಶೀಲ ಸಂಶೋಧಕ ಚಿಂತಕ – ಲೂಯಿ ಪಾಶ್ಚರ್ (4ನೇ ಮುದ್ರಣ)
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)** ತುಮಕೂರು ನಾಗಭೂಷಣ 40.00

ವಿಶ್ವವಿಖ್ಯಾತ ಸಂಶೋಧಕರು – ಸಾಧನೆಗಳು (8ನೇ ಮುದ್ರಣ)
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1991-92)** ಸೂರ್ಯಕಾಂತ 40.00

ತೆಂಗು. ಸಸ್ಯ-ಸಂರಕ್ಷಣೆ (3ನೇ ಮು.) **(ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಪ್ರಶಸ್ತಿ)** ಬಿ. ಮಹಂತೇಶ್ 50.00

ಬಳ್ಳಿ ತರಕಾರಿಗಳು (6ನೇ ಮುದ್ರಣ) ಡಾ|| ಪಿ. ನಾರಾಯಣಸ್ವಾಮಿ, ಡಾ|| ಎಲ್. ವಸಂತ 25.00
**(ಧಾರವಾಡ ಕೃಷಿ ವಿ.ವಿ. ಕನ್ನಡ ಸಂಘದ ಪಂಚವಾರ್ಷಿಕ 'ಕೃಷಿ ಸಾಹಿತ್ಯ ಶ್ರೀ' ಪ್ರಶಸ್ತಿ 1994-99)**

ಕಾಯಿಲೆಯ ಕಾರಣಗಳು. ನಿಮ್ಮ ನಂಬಿಕೆ ಎಷ್ಟು ಸರಿ ? (2ನೇ ಮು.) ಡಾ|| ಸಿ. ಆರ್. ಚಂದ್ರಶೇಖರ್ 50.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ' 1998-99)**

ಗಿಡಮೂಲಿಕೆಗಳಿಂದ ಸೌಂದರ್ಯ ಸಾಧನಗಳು (7ನೇ ಮುದ್ರಣ) ಡಾ|| ಎಲ್. ವಸಂತ 25.00
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸಕ್ಕಾಗಿ ಪ್ರಶಸ್ತಿ' 1994)**

ಆಪ್ತ ಸಲಹೆ ಸಮಾಧಾನ (5ನೇ ಮುದ್ರಣ) ಡಾ|| ಸಿ. ಆರ್. ಚಂದ್ರಶೇಖರ್ 45.00
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)**

ಮಡದಿ ಮತ್ತೊಬ್ಬ ಚೆಲುವಗೆ (ಈ ವರ್ತನೆಗಳು ನಿಮ್ಮಲ್ಲಿ ಎಷ್ಟಿವೆ ? ಭಾಗ - 2, 2ನೇ ಮು.) ಡಾ|| ಮೀನಗುಂಡಿ ಸುಬ್ರಮಣ್ಯ 50.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ವಿಶೇಷ ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)**

ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ (6ನೇ ಮುದ್ರಣ) ಡಾ|| ಮೀನಗುಂಡಿ ಸುಬ್ರಮಣ್ಯ 160.00
**(ವರ್ಧಮಾನ ಪ್ರಶಸ್ತಿ 1993)**

ಲೈಂಗಿಕ ಆರೋಗ್ಯ (3ನೇ ಮುದ್ರಣ) ಡಾ|| ಪದ್ಮಿನಿ ಪ್ರಸಾದ್ 60.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2003-04)**

ನೀವು ಬಳಸುವ ಔಷಧಗಳು (4ನೇ ಮುದ್ರಣ)
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2000)** ಡಾ|| ಸಿ. ಆರ್. ಚಂದ್ರಶೇಖರ್ 80.00

ಹಿತ-ಅಹಿತ. ವೃತ್ತಿ ಜೀವನದ 25 ವರ್ಷಗಳು ಡಾ|| ಸಿ. ಆರ್. ಚಂದ್ರಶೇಖರ್ 125.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಹಾ.ಮಾ.ನಾ. ಪ್ರಶಸ್ತಿ' 2002)**

ನನಗೆ 'ಬೈ-ಪಾಸ್' ಆಯಿತು (ಸ್ವಾನುಭವದ ಕಥನ) ಡಾ|| ಎಚ್. ಡಿ. ಚಂದ್ರಪ್ಪ ಗೌಡ 65.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)**

ವೈದ್ಯಲೋಕದ ಕೌತುಕಗಳು (3ನೇ ಮುದ್ರಣ)
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ 1993)** ಡಾ|| ಎಚ್. ಡಿ. ಚಂದ್ರಪ್ಪ ಗೌಡ 50.00

ಮನೋರೋಗ ಗೆಲ್ಲಬಹುದೇ ? (2ನೇ ಮುದ್ರಣ)
**(ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ 1996; ಕರ್ನಾಟಕ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1996)** ಸ್ನೇಹಾ 75.00

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ (4 ಸಂಪುಟಗಳ ಸೆಟ್. 3ನೇ ಮುದ್ರಣ)
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1998-99)** (ಪ್ರ. ಸಂ.: ಎಂ. ಎ. ಸೇತುರಾವ್,
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998-99)** ಕೆ. ಎಲ್. ಗೋಪಾಲಕೃಷ್ಣ ರಾವ್) 1800.00

ಭಾಷೆಯ ಬೆಳಕು (2ನೇ ಮುದ್ರಣ)
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2003)** ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ 70.00

ಫಲಜ್ಯೋತಿಷ ನಂಬುವಿರಾ ? (2ನೇ ಮುದ್ರಣ)
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 2001)** ಡಾ|| ಎಸ್. ಬಾಲಚಂದ್ರರಾವ್ 40.00

ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ (6ನೇ ಮುದ್ರಣ)
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1988-89)** ಡಾ|| ಎಸ್. ಬಾಲಚಂದ್ರರಾವ್ 35.00

ಭಗವದ್ಗೀತೆ. ಒಂದು ವೈಚಾರಿಕ ಒಳನೋಟ (2ನೇ ಮುದ್ರಣ)
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1997)** ಪ್ರೊ|| ಬಿ. ವಿ. ವೀರಭದ್ರಪ್ಪ 50.00

ಮಹಿಳೆ – ಬಿಡುಗಡೆಯ ಹಾದಿಯಲ್ಲಿ (3ನೇ ಮುದ್ರಣ)
(ಬಿ.ಎಂ.ಶ್ರೀ. ಪ್ರತಿಷ್ಠಾನದ 'ಸಾವಿತ್ರಮ್ಮ ದತ್ತಿನಿಧಿ' ಪ್ರಶಸ್ತಿ 1992) — ಎನ್. ಗಾಯತ್ರಿ — 55.00

ಇದು ಮುಗಿಯದ ಕಥೆ (3ನೇ ಮುದ್ರಣ) — ದೇವಿಪ್ರಸಾದ್ ಚಟ್ಟೋಪಾಧ್ಯಾಯ
(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998) — (ಅನು : ಜಿ. ಕುಮಾರಪ್ಪ) — 60.00

ಪ್ರಾಚೀನ ಭಾರತದಲ್ಲಿ ಭೌತಿಕವಾದ (2ನೇ ಮುದ್ರಣ) — ದೇವಿಪ್ರಸಾದ್ ಚಟ್ಟೋಪಾಧ್ಯಾಯ
(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1989) — (ಅನು : ಬಿ.ವಿ.ಕಕ್ಕಿಲ್ಲಾಯ) — 80.00

ಭಾರತೀಯ ದರ್ಶನಗಳು (2ನೇ ಮುದ್ರಣ) — ದೇವಿಪ್ರಸಾದ್ ಚಟ್ಟೋಪಾಧ್ಯಾಯ
(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1994) — (ಅನು : ಬಿ.ವಿ.ಕಕ್ಕಿಲ್ಲಾಯ) — 80.00

ಜಾಗತೀಕರಣ. ದಕ್ಷಿಣದ ದೃಷ್ಟಿಯಲ್ಲಿ (ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2002) — ಮ. ಮಹೇಶನ್ — 95.00

ಕರ್ನಾಟಕ ಏಕೀಕರಣ ಇತಿಹಾಸ (2ನೇ ಮುದ್ರಣ)
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1997) — ಡಾ|| ಎಚ್. ಎಸ್. ಗೋಪಾಲ ರಾವ್ — 200.00

ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ; 4ನೇ ಮುದ್ರಣ)
(ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ 1991) — ಎನ್. ಪಿ. ಶಂಕರನಾರಾಯಣ ರಾವ್ — 180.00

ಪ್ರಾಚೀನ ಭಾರತ (4ನೇ ಮುದ್ರಣ) — ಪ್ರೊ|| ಆರ್. ಎಸ್. ಶರ್ಮ
(ಉತ್ತಮ ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998) — (ಅನು : ಎನ್. ಪಿ. ಶಂಕರನಾರಾಯಣ ರಾವ್) — 180.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998)

ಕಲಾವಿದ ಹೆಬ್ಬಾರರ ರೇಖಾಲಾವಣ್ಯ
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1999) — ವ್ಯಾಸರಾಯ ಬಲ್ಲಾಳ — 80.00

ಮಲಯಾಳದ 10 ಕಥೆಗಾರ್ತಿಯರು (ಪರಿಚಯ-ಪ್ರಾಸ್ತಾವಿಕ-ಸಂದರ್ಶನ-ಕಥೆ) ಸಂ: ಡಾ|| ಶ್ರೀದೇವಿ ಕೆ. ನಾಯರ್
(ಕನ್ನಡ ಸಾಹಿತ್ಯ ಪರಿಷತ್ತಿನ 'ಮಲ್ಲಿಕಾ ದತ್ತಿ ಬಹುಮಾನ' 2004) — (ಅನು: ಪ್ರೊ|| ಪಾರ್ವತಿ ಜಿ. ಐತಾಳ್) — 95.00

ಬೇಡಿ ಕಳಚಿತು ದೇಶ ಒಡೆಯಿತು (ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ ರೋಮಾಂಚನಕಾರಿ ಬೃಹತ್ ಕಾದಂಬರಿ)
(ಉಗ್ರಾಣ ಪ್ರಶಸ್ತಿ 2003) — ಕೋ. ಚೆನ್ನಬಸಪ್ಪ — 600.00

ಬದಿ (ಕನ್ನಡ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1997) — ಇಂದಿರಾ ಹೆಗ್ಗಡೆ — 50.00

ಮಯ್ಯಾದಾಸನ ವಾಡೆ — ಭೀಷ್ಮ ಸಾಹನಿ — 160.00
(ಕನ್ನಡ ಸಾಹಿತ್ಯ ಪರಿಷತ್ತಿನ 'ಶ್ರೀ ಆರ್. ಎನ್. ಹಬ್ಬು' ದತ್ತಿನಿಧಿ ಪ್ರಶಸ್ತಿ 2003) — (ಅನು: ದು. ನಿಂ ಬೆಳಗಲಿ)

ತಮಸ್ (3ನೇ ಮುದ್ರಣ) (ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1975) — ಭೀಷ್ಮ ಸಾಹನಿ — 110.00

ಅಲೀಮಾ ಅಕ್ಷರ ಕಲಿತದ್ದು
(ಮುಸ್ಲಿಂ ಲೇಖಕರ ಸಂಘ ಮತ್ತು ಬ್ಲಡ್ ಬಯೋಮ್ ಬ್ಯಾಂಕಿಂಗ್ ಟ್ರಸ್ಟ್ ಪ್ರಶಸ್ತಿ 2001) — ಫಕ್ರುದ್ದೀನ್ ಇರುವೈಲ್ — 55.00

ಬಹಿಷ್ಕೃತ – ಒಂದು ನೆನಪು — ಡಾ|| ನರೇಂದ್ರ ಜಾಧವ್
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 2005) — (ಅನು : ಸುಮಾ ದ್ವಾರಕಾನಾಥ್) — 150.00

ಅಕ್ರಮ ಸಂತಾನ (2ನೇ ಮುದ್ರಣ) — ಶರಣಕುಮಾರ ಲಿಂಬಾಳೆ
(ಅನುವಾದಕ್ಕಾಗಿ 'ಉಮಾಪತಿ ಚುಕ್ಕಿ ಪ್ರತಿಷ್ಠಾನದ ಪ್ರಶಸ್ತಿ' 1993) — (ಅನು : ದು. ನಿಂ ಬೆಳಗಲಿ) — 50.00

ಕುಣಿಯೇ ಘುಮಾ — ಮಾಧವಿ ದೇಸಾಯಿ — 55.00
(ದಿ. ಶ್ರೀದೇವಿ ದಾಸಪ್ಪ ಶಾನಭಾಗ ಅನುವಾದ ದತ್ತಿ ಪ್ರಶಸ್ತಿ 1999) — (ಅನು : ಚಂದ್ರಕಾಂತ ಪೋಕಳೆ)

ಉಚಲ್ಯಾ (3ನೇ ಮು.) (ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1980) — ಲಕ್ಷ್ಮಣ ಗಾಯಕವಾಡ — 23.00
(ಅನು : ಚಂದ್ರಕಾಂತ ಪೋಕಳೆ)

ಮುಂಬೈ ಡೈರಿ (ಕನ್ನಡ ಸಾಹಿತ್ಯ ಪರಿಷತ್ತಿನ 'ಅಂತರರಾಷ್ಟ್ರೀಯ ಮಹಿಳಾ ವರ್ಷ ಪ್ರಶಸ್ತಿ' 2002) — ಉಮಾ ರಾವ್ — 60.00

ಬದುಕು ಬದಲಿಸಬಹುದು (2ನೇ ಮುದ್ರಣ) — ನೇಮಿಚಂದ್ರ — 100.00
(ಕರ್ನಾಟಕ ಸಂಘ 'ಶಿವಮೊಗ್ಗದ ಡಾ|| ಹಾ.ಮಾ.ನಾ. ಪ್ರಶಸ್ತಿ 2005)

ಪೆರುವಿನ ಪವಿತ್ರ ಕಣಿವೆಯಲ್ಲಿ (2ನೇ ಮುದ್ರಣ)
(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2004) — ನೇಮಿಚಂದ್ರ — 120.00

ಅಂಡಮಾನ್ ಕನಸು (2ನೇ ಮು.)(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2002) — ಡಾ|| ರಹಮತ್ ತರೀಕೆರೆ — 60.00

ಹೊಕ್ಕಳಲ್ಲಿ ಹೂವಿದೆ (2ನೇ ಮುದ್ರಣ) — ರಂಜಾನ್ ದರ್ಗಾ — 25.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)

'ಹೊಸತು' ಮೂರು ವರ್ಷದ ಚಂದಾದಾರರಿಗೆ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. ೨೦ರ ವಿಶೇಷ ರಿಯಾಯಿತಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159, ಬೆಂಗಳೂರು - 560 001
ದೂರವಾಣಿ : 22203580,81,82, 30578020,21,22 ಫ್ಯಾಕ್ಸ್ : 30578023
e-mail: navakarnataka@vsnl.com www.navakarnatakabooks.com

—ಶಾಖೆಗಳು—

ಬೆಂಗಳೂರು ✆ 080-22251382 ○ ಮೈಸೂರು ✆ 0821-2424094
ಮಂಗಳೂರು ✆ 0824-2441016 ○ ಗುಲ್ಬರ್ಗಾ ✆ 08472-224302



# OUR ADVERTISERS




Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

